ಹಿಂದೀ ಕಾದಂಬರೀಸಾಮ್ರಾಜ್ಯ ಸಾಮ್ರಾಟ

# ಪ್ರೇಮಚಂದ ದರ್ಶನ



ಸಂಪಾದಕರು:
ಶ್ರೀ. ಬುರ್ಲಿ ಬಿಂದುಮಾಧವ

ಮಿಂಚಿನಬಳ್ಳಿ ಕಾರ್ಯಾಲಯ
ಧಾರವಾಡ

ಬೆಲೆ: ೫-೮-೦

ಹಿಂದೀ ಕಾದಂಬರೀಸಾಮ್ರಾಜ್ಯ ಸಾಮ್ರಾಟ

# ಪ್ರೇಮಚಂದರ ದರ್ಶನ

●

ಸಂಪಾದಕರು :
ಶ್ರೀ. ಬುರ್ಲಿ ಬಿಂದುಮಾಧವ

●

ಮಿಂಚಿನಬಳ್ಳಿ ಕಾರ್ಯಾಲಯ
ಧಾರವಾಡ

ಬೆಲೆ ೫-೮-೦

ಮುದ್ರಕರು :
ನಾ. ಅ. ಹೊಸಕೇರಿ
ವಿಜಯ ಮುದ್ರಣಾಲಯ
ಧಾರವಾಡ





ಪ್ರಕಾಶಕರು:
ಬುರ್ಲಿ ಬಿಂದುಮಾಧವ
ಮಿಂಚಿನಬಳ್ಳಿ ಚಾವಡಿ ಜವಳೀಪೇ
ಧಾರವಾಡ

# ಪ್ರೇಮಚಂದರ ದರ್ಶನ

ಪ್ರೇಮಚಂದರ ಸಾಹಿತ್ಯದ ದರ್ಶನವನ್ನು ಮಾಡಿಸುವ ಈ ಪುಸ್ತಕವನ್ನು ಪ್ರಕಟಿಸಲು ಆನಂದವಾಗುತ್ತದೆ. ನೆರೆನಾಡಿನ ಸಾಹಿತಿಗಳ ಹಾಗು ಸಾಹಿತ್ಯದ ಪರಿಚಯ ಮಾಡಿಕೊಡುವದ್ದೇ ಈ ಪ್ರಕಟನೆಯ ಉದ್ದೇಶವು.

ಪ್ರೇಮಚಂದರು ಧ್ಯೇಯವಾದಿಗಳು. ಮಹಾತ್ಮರ ಜೀವನದಿಂದ ಪ್ರಭಾವಿತರಾದವರು. ನಿಶ್ಚಿತವಾದ ಧೋರಣೆಯಿಂದ ನವಭಾರತವು ರೂಪಗೊಳ್ಳಬೇಕೆಂದು ಬಯಸುವವರು; ಕಲೆಗಾಗಿ ಕಲೆ ಎಂಬುದು ಇವರ ಗುರಿಯಲ್ಲ; ಜೀವನಕ್ಕಾಗಿ, ಆನಂದಕ್ಕಾಗಿ ಕಲೆ, ಎಂಬುದೇ ಇವರ ವಾದ.

ಈ ದೃಷ್ಟಿಯಿಂದ ಈ ಹೊತ್ತಿಗೆಯ ಕಡೆಗೆ ನೋಡಬೇಕು. ರಾಷ್ಟ್ರದ ಸಾಹಿತ್ಯವು ಯಾವ ಪಥದಿಂದ ಮುನ್ನಡೆಯಬೇಕೆಂಬ ನಿಶ್ಚಿತವಾದ ಕಲ್ಪನೆಗಳನ್ನು ಅವರ ಪ್ರಬಂಧದಲ್ಲಿ ಕಾಣಬಹುದು. ಕಥೆಗಳನ್ನು ಹೇಗೆ ರೂಪಿಸಬೇಕು, ಕಾದಂಬರಿಗಳನ್ನು ಹೇಗೆ ಚಿತ್ರಿಸಬೇಕು, ಅವುಗಳ ತಂತ್ರವೇನು? ಲೇಖಕರು ಯಾವ ಯಾವ ಸಂಗತಿಗಳನ್ನು ಗಮನಿಸಬೇಕು, ಜೀವನದಲ್ಲಿ ಸಾಹಿತ್ಯದ ಸ್ಥಾನವೇನು? ಇತ್ಯಾದಿ ಅವರ ವಿಚಾರಗಳು ಮನನೀಯವಿವೆ. ತಪಸ್ವಿಯು ತನ್ನ ತಪೋನಿಧಿಯನ್ನು ಜನತೆಗಾಗಿ ಕಾದಿಟ್ಟಂತಿವೆ, ಈ ವಿಚಾರಗಳು.

ಈ ಹೊತ್ತಿಗೆಯಲ್ಲಿ ಹಿಂದೀ ಸಾಹಿತ್ಯದರ್ಶನ, ಪ್ರೇಮಚಂದರ ಜೀವನ, ಅವರ ಕಥಾಸಾಹಿತ್ಯ, ಪತ್ರಲೇಖನ, ಪ್ರಬಂಧಸಾಹಿತ್ಯ, ಬಾಲಸಾಹಿತ್ಯ, ಅವರಿಗೆ ವಿಶ್ವಸಾಹಿತಿಯ ಸ್ಥಾನವನ್ನು ದೊರಕಿಸಿಕೊಟ್ಟ ಪ್ರೇಮಾಶ್ರಮ ಕಾದಂಬರಿ, ಇವೆ ಮೊದಲಾದವುಗಳನ್ನು ಕಾಣಬಹುದು.

ಈ ಹೊತ್ತಿಗೆಯನ್ನು ರೂಪಿಸಲು ನೆರವಾದ ಪ್ರಿಯಮಿತ್ರರಾದ, ಶ್ರೀ. ಗುರುನಾಥ ಜೋಶಿ, ಬಿ. ಎ. ಶ್ರೀ. ಎಸ್. ವ್ಹಿ. ಭಟ್ಟ ಎಂ. ಎ. ಶ್ರೀ. ಮೇವುಂಡಿ ಮಲ್ಹಾರಿ, ಶ್ರೀ. ವೆಂ. ಮು. ಜೋಶಿ, ಶ್ರೀ. ಕೆ. ಟಿ. ಜೋಶಿ, ಶ್ರೀ. ಅವಧಾನಿ ಬಾಳಾಚಾರ್ಯ ಇವರಿಗೆ ನನ್ನ ಧನ್ಯವಾದಗಳು.

ಧಾರವಾಡ
೧೫-೭-೫೫

ತಮ್ಮ ಸೇವಕ
**ಬುರ್ಲಿ ಬಿಂದುಮಾಧವ**

# ಪರಿವಿಡಿ



# ಹಿಂದೀ ಸಾಹಿತ್ಯ ದರ್ಶನ



ಮಹಾತ್ಮಾ ಗಾಂಧೀಜಿಯವರು ದಕ್ಷಿಣ ಆಫ್ರಿಕೆಯಿಂದ ಭಾರತಕ್ಕೆ ಬಂದು ರಾಜಕಾರಣದ ಸೂತ್ರವನ್ನು ಕೈಗೆ ತೆಗೆದುಕೊಳ್ಳುವ ಮುನ್ನ ಸಮಗ್ರ ಭಾರತವನ್ನು ಸಂಚರಿಸಿದರು. ರಾಷ್ಟ್ರವನ್ನು ಒಂದು ಸೂತ್ರದಿಂದ ಬಂಧಿಸಲು ಹಿಂದೀ ಭಾಷೆಯು ಉತ್ತಮ ಸಾಧನವಾಗಲು ಅರ್ಹವಿದೆಯೆಂಬುದನ್ನು ಮನಗಂಡರು. ದಕ್ಷಿಣ ಭಾರತದಲ್ಲಿ ಹಿಂದೀ ಪ್ರಚಾರವನ್ನು ಮಾಡುವದು ಅಗತ್ಯವಿದೆಯೆಂದು ಅವರಿಗೆ ಎನಿಸಿತು. ಮದ್ರಾಸದಲ್ಲಿ ದಕ್ಷಿಣ ಭಾರತ ಹಿಂದೀ ಪ್ರಚಾರ ಸಭೆಯನ್ನು ಪ್ರಾರಂಭಿಸಿದರು. ರಾಷ್ಟ್ರೀಯ ಮಹಾಸಭೆಯೂ ಹಿಂದೀಯನ್ನು ರಾಷ್ಟ್ರಭಾಷೆಯೆಂದು ಒಪ್ಪಿ, ಅದರ ಪ್ರಚಾರಕ್ಕೆ ನೆರವನ್ನಿತ್ತಿದೆ. ಹಿಂದೀಯು ರಾಷ್ಟ್ರಭಾಷೆಯಾಗಲು ಬೇಕಾಗುವ ಗುಣಗಳನ್ನು ಪಡೆದು-ಕೊಳ್ಳುತ್ತ ಪ್ರಗತಿಯನ್ನೈದತೊಡಗಿದೆ. ಅದು ಸ್ವತಂತ್ರ ಭಾರತದ ರಾಷ್ಟ್ರ ಭಾಷೆಯೆಂದು ಭಾರತದ ರಾಜ್ಯಘಟನೆಯಲ್ಲಿ ಮನ್ನಣೆಯನ್ನೂ ಪಡೆದಿದೆ. ಲಕ್ಷಾವಧಿ ಜನರು ಹಿಂದೀ ಭಾಷಯನ್ನು ಅಭ್ಯಸಿಸಿದ್ದಾರೆ, ಅಭ್ಯಸಿಸುತ್ತಲಿ-ದ್ದಾರೆ. ಇಂತು ಹಿಂದೀಯು ರಾಜ್ಯಭಾಷೆಯೆಂದು ಮನ್ನಣೆಯನ್ನು ಪಡೆದಿರುವಾಗ ಆ ಸಾಹಿತ್ಯದ ಪರಿಚಯ ಭಾರತೀಯರಿಗೆ ಸಾಮಾನ್ಯವಾಗಿ ಇರಬೇಕಾದುದು ಆವಶ್ಯವಿದೆ.

**ಕಾಲವಿಭಾಗ:**— ಸಾಹಿತ್ಯವು ಜನಜೀವನದ ಪ್ರತಿಬಿಂಬವಾಗಿದೆಯೆಂದು ಒಪ್ಪಿಕೊಂಡಾಗ ಜನಜೀವನವು ಪರಿವರ್ತನಗೊಂಡಂತೆ ಅದರ ಸ್ವರೂಪವೂ ಬದಲಾವಣೆಯನ್ನು ಹೊಂದುತ್ತ ಹೋಗುತ್ತದೆ. ಅರ್ಥಾತ್ ಜನಜೀವನದಲ್ಲಿ ರಾಜಕೀಯ, ಸಾಮಾಜಿಕ, ಸಾಂಪ್ರದಾಯಿಕ, ಧಾರ್ಮಿಕ ಪರಿವರ್ತನೆಯಾದಂತೆ ಸಾಹಿತ್ಯದಲ್ಲಿಯೂ ಪರಿವರ್ತನೆಯು ಆಗುತ್ತ ಹೋಗುವದು. ಈ ದೃಷ್ಟಿಯಿಂದ, ಹಿಂದೀ ಸಾಹಿತ್ಯದಲ್ಲಿ **ವೀರಗಾಥಾಕಾಲ** (ಸನ್ ೯೯೪ರಿಂದ ೧೩೧೯), **ಭಕ್ತಿಕಾಲ**(೧೩೧೯ರಿಂದ ೧೬೪೪), **ರೀತಿಕಾಲ**(೧೬೪೪

ರಿಂದ ೧೮೫೭), **ಆಧುನಿಕ ಕಾಲ** (೧೮೫೭ರಿಂದ ಇಂದಿನ ವರೆಗೆ) ಹೀಗೆ ಕಾಲ ವಿಭಾಗಗಳನ್ನು ಸ್ವಲ್ಪ ಹೆಚ್ಚುಕಡಿಮೆಯಾಗಿ ಮಾಡಲಾಗುತ್ತದೆ. ಈ ಕಾಲಗಳಲ್ಲಿ ಆದ ಸಾಹಿತ್ಯ ಕೃತಿಗಳಲ್ಲಿ ಕಂಡುಬರುವ ವಿಶೇಷ ಪ್ರವೃತ್ತಿಗೆ ಅನುಸಾರವಾಗಿ ನಾಮಕರಣವನ್ನು ಮಾಡಲಾಗಿದೆಯಲ್ಲದೆ, ಈ ಕಾಲಗಳಲ್ಲಿ ಬೇರೆ ಬಗೆಯ ಸಾಹಿತ್ಯದ ಕೃತಿಗಳೇ ಹುಟ್ಟಲಿಲ್ಲವೆಂದು ಭಾವಿಸಲಾಗದು.

**ವೀರಗಾಥಾಕಾಲ:**— ಪ್ರಾಕೃತದ ಕೊನೆಯ ಅಪಭ್ರಂಶದ ಸಮಯವೆಂದರೆ ಮುಂಜ ಮತ್ತು ಭೋಜ ರಾಜರ ಕಾಲ. ಆ ಕಾಲದಲ್ಲಿ ಪ್ರಾಚೀನ ಹಿಂದೀ ಕಾವ್ಯಗಳು ದೊರೆಯುವದರಿಂದ ಅದು ಹಿಂದೀ ಸಾಹಿತ್ಯದ ಪ್ರಾರಂಭಿಕ ಕಾಲವು (೯೯೩ ರಿಂದ ೧೩೧೮ರ ವರೆಗೆ) ಎಂದು ಮಾನ್ಯ ಮಾಡಲ್ಪಟ್ಟಿದೆ. ಆ ಕಾಲದ ಮೊದಲಿನ ಒಂದೂವರೆ ನೂರು ವರುಷಗಳಲ್ಲಿ ಶೃಂಗಾರ, ನೀತಿ, ಧರ್ಮ, ವೀರರಸ ಪ್ರಧಾನವಾದ ಕವನಗಳು ದೋಹೆ (ದ್ವಿಪದಿ) ಗಳಲ್ಲಿ ದೊರೆಯುತ್ತವೆ. ಈ ಪ್ರಾಚೀನ ಹಿಂದೀಯ ಪರಂಪರೆಯು ೧೪ನೆಯ ಶತಮಾನದ ಮಧ್ಯದ ವರೆಗೂ ಸಾಗಿ ಬಂದಿದೆ.

ವೀರಗಾಥಾಕಾಲದಲ್ಲಿ ಭಾರತದ ರಾಜಕೀಯ ಕ್ಷೇತ್ರದಲ್ಲಿ ಅಶಾಂತಿಯು ತುಂಬಿತ್ತು. ಯವನರ ಆಕ್ರಮಣದಿಂದ ದೇಶದಜನತೆಯು ಜರ್ಜರಿತವಾಗಿತ್ತು. ಆದಾಗ್ಯೂ ಅಲ್ಲಲ್ಲಿ ವೀರತನವನ್ನು ತೋರಿಸುವ ಐತಿಹಾಸಿಕ ಉದಾಹರಣೆಗಳು ಸಂಭವಿಸುತ್ತಿದ್ದವು. ಈ ಸಮಯವು ಹಿಂದೀ ಸಾಹಿತ್ಯದ ಶೈಶವಕಾಲವು. ಈ ಭೀಕರ ಮತ್ತು ಘೋರ ಅಶಾಂತಿಯ ಯುಗದಲ್ಲಿ ವೀರರಸಪ್ರಧಾನವಾದ ಸಾಹಿತ್ಯವೇ ವಿಶೇಷವಾಗಿ ಹುಟ್ಟಿತು. ಆಗಿನ ಕಾಲದಲ್ಲಿ ಕವಿಗಳು ರಾಜಾಶ್ರಯದಲ್ಲಿ ಇದ್ದುದರಿಂದ ಅವರು ತಮ್ಮ ರಾಜರನ್ನು ಸಂತೋಷಗೊಳಿಸಲು ಕಾವ್ಯಗಳನ್ನೂ ರಚಿಸುತ್ತಿದ್ದರು. ಅವರು ತಮ್ಮ ಅರಸರ ಗುಣವರ್ಣನೆಯನ್ನಷ್ಟೇ ಮಾಡದೆ ದೇಶಾನುರಾಗದಿಂದ ಪ್ರೇರಿತರಾಗಿ ಶತ್ರುಗಳನ್ನು ಎದುರಿಸಲೂ ಅವರನ್ನು ಹುರಿದುಂಬಿಸುತ್ತಿದ್ದರು. ಮತ್ತು ಪ್ರಸಂಗ ಬಂದಲ್ಲಿ ತಾವೂ ಕೈಯಲ್ಲಿ ಕರವಾಲ ಹಿಡಿದು ರಣರಂಗಕ್ಕೂ ತೆರಳುತ್ತಿದ್ದರು. ಅವರ ಕಾವ್ಯಗಳಲ್ಲಿ ಉಚ್ಚಕೋಟಿಯ ಕವಿತ್ವದ ಹೊರತಾಗಿ ಜೀವನದ ಅನೇಕ ಅಂಗಗಳ ವ್ಯಾಪಕ ಹಾಗೂ ಗಂಭೀರ, ರಮಣೀಯ ಹಾಗೂ ಕೋಮಲ ಭಾವನೆಗಳೂ ಕಲ್ಪನೆಗಳೂ ದೊರೆಯುತ್ತವೆ. ಈ ಕಾಲದ ಕಾವ್ಯಗಳು ವೀರಗಾಥೆಗಳೆಂದು

ಪ್ರಸಿದ್ಧಿಯನ್ನು ಪಡೆದಿವೆ. ಇವು ಎರಡು ಬಗೆಯಲ್ಲಿ ದೊರೆಯುತ್ತವೆ— ಪ್ರಬಂಧ ಕಾವ್ಯಗಳಲ್ಲಿ, ವೀರಗೀತಗಳಲ್ಲಿ.

ಈ ವೀರರಸಪ್ರಧಾನ ಕಾವ್ಯಗಳಲ್ಲಿ ಅಜ್ಞಾತ ಕವಿಯೊರ್ವನು ಬರೆದ 'ಖುಮಾನರಾಸೋ', **ನರಪತಿ ನಾಲ್ಹ ಕವಿಯು** ಬರೆದ 'ವೀಸಲದೇವ-ರಾಸೋ', **ಚಂದಬರದಾಯಿ** ವಿರಚಿತ 'ಪೃಥ್ವಿರಾಜ ರಾಸೊ' ಅತ್ಯಂತ ಶ್ರೇಷ್ಠವೆಂದು ಪರಿಗಣಿತವಾಗಿವೆ. ಇವರಲ್ಲದೆ **ಭಟ್ಟ ಕೇದಾರ, ಮಧುಕರ ಕವಿ, ಜಾಗನಿಕ** ಮೊದಲಾದ ಕವಿಗಳ ವೀರರಸಪ್ರಧಾನ ರಚನೆಗಳೂ ಉಲ್ಲೇಖನೀಯವಾಗಿವೆ. ಈ ಕವಿಗಳ ರಚನೆಗಳಲ್ಲಿ ವೀರರಸವು ಪ್ರಧಾನವಾಗಿದ್ದರೂ ಶೃಂಗಾರರಸವು ಸಹಾಯಕವಾಗಿ ಬಂದಿದೆ. 'ಆಲ್ಹಖಂಡ' ವೆಂಬುದೂ ಈ ಕಾಲದ ಒಂದು ಪ್ರಸಿದ್ಧ ರಚನೆಯಾಗಿದೆ. ಈ ಕವಿಗಳ ಹೊರತಾಗಿ ಇನ್ನೂ ಅನೇಕ ಕವಿಗಳು ನಾನಾ ರೀತಿಯ ಸಾಹಿತ್ಯ ನಿರ್ಮಾಣವನ್ನು ಮಾಡಿದ್ದಾರೆ. ಹಿಂದೂ ಕವಿಗಳ ರಚನೆಗಳಲ್ಲಿ ಹಿಂದೂ ಮನೋವೃತ್ತಿಯು ದೊರೆತರೆ **ಅಮೀರ ಖುಸರೋ** ಮುಂತಾದವರ ಸಾಹಿತ್ಯ ಕೃತಿಗಳಲ್ಲಿ ಮುಸಲ್ಮಾನರ ಮನೋಭಾವನೆಗಳು ವ್ಯಕ್ತವಾಗಿರುವುದು ಕಂಡು ಬರುತ್ತದೆ.

ಸುಪ್ರಸಿದ್ಧ **ವಿದ್ಯಾಪತಿ** ಇದೇ ಕಾಲದ ಕವಿ. ಈತನ ಕವಿತೆಗಳು ಭಕ್ತಿ ಶೃಂಗಾರದಿಂದ ಬೆರತವು ಆಗಿವೆ. ಇವನನ್ನು ಬಂಗಾಲಿಗಳು ತಮ್ಮವನೆಂದೂ ಬಿಹಾರಿಗಳು ತಮ್ಮವನೆಂದೂ ಅನ್ನುತ್ತಾರೆ. ಇವನು ರಚಿಸಿದ **ಪದಾವಲಿಯು** ಇವನಿಗೆ 'ಮೈಥಿಲ ಕೋಕಿಲ' ಎಂಬ ಬಿರುದನ್ನು ತಂದುಕೊಟ್ಟಿತು.

**ಭಕ್ತಿಕಾಲ:—** ಮುಸ್ಲಿಮರ ಸಾಮ್ರಾಜ್ಯ ಸ್ಥಾಪನೆಯಿಂದ ಉಂಟಾದ ರಾಜಕೀಯ ಪರಿವರ್ತನೆಯಿಂದ ಜನತೆಯು ಮನಸ್ಸು ಉದಾಸಗೊಂಡಿತ್ತು. ವಜ್ರಯಾನಿಗಳು, ಕಾಪಾಲಿಕರು, ನಾಥ ಪಂಥಿಗಳು ಮಾಡುವ ಪ್ರಚಾರದಿಂದಾಗಿಯೂ ಅರ್ಥಶೂನ್ಯ ತೋರಿಕೆಯ ವಿಧಿ-ವಿಧಾನಗಳಿಂದಾಗಿಯೂ ಸಾಮಾನ್ಯ ಜನತೆಯು ನಿಜವಾದ ಧರ್ಮಭಾವನೆಯಿಂದ ದೂರ ಸರಿಯತೊಡಗಿತ್ತು. ಆದರೆ ಪಂಡಿತರು, ದಾರ್ಶನಿಕರು, ಶಾಸ್ತ್ರಜ್ಞರು ವೇದಾಂತ ವಿಷಯಗಳನ್ನು ಚರ್ಚಿಸುತ್ತಿದ್ದರು, ಭಾಷ್ಯಗಳನ್ನು ಬರೆಯುತ್ತಿದ್ದರು. ಇದರಿಂದಾಗಿ ಪರಂಪರಾಗತ ಭಕ್ತಿಮಾರ್ಗದ ಸಿದ್ಧಾಂತಕ್ಕೆ ಪುಷ್ಟಿಯು ದೊರೆಯತೊಡಗಿತು.

ಕಾಲದರ್ಶಿಗಳಾದ ಕವಿಗಳು ಜನತೆಯ ಹೃದಯವನ್ನು ಉಲ್ಲಸಿತಗೊಳಿಸಿ ಹೊಯ್ದಾಡದಂತೆ ಮಾಡಲು ಭಕ್ತಿಯ ಮಾರ್ಗವನ್ನು ಉಪದೇಶಿಸ ತೊಡಗಿದರು. ಅವರ ಉಪದೇಶದ ಝಳಿಗೆ ಹಿಂದೂಗಳಷ್ಟೇ ಅಲ್ಲದೆ ಹಲ ವಾರು ಸಹೃದಯ ಮುಸ್ಲಿಮರೂ ಸಿಕ್ಕರು. ಪ್ರೇಮಸ್ವರೂಪ ಈಶ್ವರನ ರೂಪವನ್ನು ಮುಸ್ಲಿಮರಿಗೂ ಹಿಂದುಗಳಿಗೂ ತೋರಿಸಿ ಭೇದಭಾವವನ್ನು ದೂರ ಮಾಡುವ ಮಹತ್ಕಾರ್ಯವನ್ನು ಈ ಭಕ್ತಕವಿಗಳು ಕೈಕೊಂಡರು.

ಭಕ್ತಿಯ ಸ್ರೋತವು ದಕ್ಷಿಣದಿಂದ ಉತ್ತರದ ಕಡೆಗೆ ಹರಿಯತೊಡ ಗಿತು. ರಾಮಾನುಜಾಚಾರ್ಯರ ಸಗುಣಭಕ್ತಿ, ಮಧ್ವಾಚಾರ್ಯರ ದ್ವೈತ ವೈಷ್ಣವ ಸಂಪ್ರದಾಯಗಳು ಜನರನ್ನು ಆಕರ್ಷಿಸತೊಡಗಿದವು. ರಾಮಾನು-ಜಾಚಾರ್ಯರ ಶಿಷ್ಯಪರಂಪರೆಯಲ್ಲಿ **ರಾಮಾನಂದರು** ರಾಮಭಕ್ತಿಯನ್ನೂ **ವಲ್ಲಭಾಚಾರ್ಯರು** ಕೃಷ್ಣಭಕ್ತಿಯನ್ನೂ ಪ್ರಚುರಗೊಳಿಸತೊಡಗಿದರು. ಈ ರಾಮೋಪಾಸಕ ಮತ್ತು ಕೃಷ್ಣೋಪಾಸಕ ಭಕ್ತರ ಪರಂಪರೆಗಳು ಹಿಂದೀ ಕಾವ್ಯವನ್ನು ಪ್ರೌಢತೆಗೊಯ್ದುವು. ವ್ಯಕ್ತ ಜಗತ್ತಿನಲ್ಲಿ ಬ್ರಹ್ಮನ 'ಸತ್' ಮತ್ತು 'ಆನಂದ' ಸ್ವರೂಪವನ್ನು ಈ ಭಕ್ತಕವಿಗಳು ರಾಮ-ಕೃಷ್ಣರ ರೂಪ ದಲ್ಲಿ ಸಾಕ್ಷಾತ್ಕಾರ ಮಾಡಿಸಿದರು. ಅಂತಸ್ಸಾಧನೆಯಕಡೆಗೆ ಹೆಚ್ಚು ಗಮನ ಕೊಡುವ ಮತ್ತು ಹಿಂದೂ ಮುಸ್ಲಿಮರಿಗೆ ಸಾಮಾನ್ಯ ಭಕ್ತಿ ಮಾರ್ಗವನ್ನು ಬೋಧಿಸುವ ಕವಿಗಳ ಮಾರ್ಗವೂ ಒಂದು ಹುಟ್ಟಿತು. ಅದರಲ್ಲಿ ಮುಖ್ಯ ರಾದವರು ಮಹಾರಾಷ್ಟ್ರದ **ನಾಮದೇವ** ಮತ್ತು ಅವರ ನಂತರ **ಕಬೀರರು.** ಇವರು ನಿರ್ಗುಣ ಭಕ್ತಿಯ ಉಪಾಸನೆಗೆ ಮಹತ್ವವಿತ್ತರು. ಇವರೊಡನೆಯೇ ಇನ್ನೊಂದು ಶುದ್ಧ ಪ್ರೇಮಮಾರ್ಗೀ **ಸೂಫೀ** ಕವಿಗಳ ಭಕ್ತಿಪಂಥವೂ ಪ್ರಾರಂಭವಾಯಿತು. ಸೂಫೀ ಕವಿಗಳು ಪರಮಾತ್ಮನನ್ನು ಪ್ರೇಮ ರೂಪದಲ್ಲಿ ಕಾಣುತ್ತಾರೆ. ಕಬೀರರ ನಿರ್ಗುಣ ಭಕ್ತಿಶಾಖೆಯಲ್ಲಿ ಅಥವಾ ಜ್ಞಾನಾಶ್ರಯೀ ಶಾಖೆಯಲ್ಲಿ **ದಾದೂ, ಮಲೂಕದಾಸ, ಸುಂದರದಾಸ** ರೆಂಬವರು ಅತ್ಯಂತ ಪ್ರಸಿದ್ಧ ಕವಿಗಳಾಗಿಹೋದರು. ಪ್ರೇಮಮಾರ್ಗೀ ಶಾಖೆಯ ಕವಿಗಳಲ್ಲಿ **ಕುತುಬನ, ಮಂಝನ, ಮಲಿಕ ಮುಹಮ್ಮದ ಜಾಯಸೀ, ಉಸಮಾನ, ಶೇಖನಬೀ** ಮುಂತಾದವರು ಪ್ರಮುಖರು. ರಾಮಭಕ್ತಿ ಶಾಖೆಯ ಕವಿಗಳಲ್ಲಿ **ಗೋಸ್ವಾಮಿ ತುಲಸೀದಾಸರು** ಸುಪ್ರಸಿ

ದ್ಧರು. ಅವರ ರಾಮಚರಿತ ಮಾನಸ (ರಾಮಾಯಣ)ವು ಹಿಂದೀ ಸಾಹಿತ್ಯದ ಅದ್ವಿತೀಯ ರತ್ನವಾಗಿದೆ. ಅವರ ಪರಂಪರೆಯಲ್ಲಿ ಭಕ್ತಮಾಲವನ್ನು ರಚಿಸಿದ **ನಾಭಾದಾಸ, ಪ್ರಾಣಚಂದ, ಹೃದಯರಾಮ, ವಿಶ್ವನಾಥಸಿಂಹ, ರಘುನಾಥಸಿಂಹರು** ಉಲ್ಲೇಖನೀಯರಾಗಿದ್ದಾರೆ. ಕೃಷ್ಣಭಕ್ತಿ ಶಾಖೆಯಲ್ಲಿ **ಸೂರದಾಸರು** ಅಗ್ರಗಣ್ಯರು. ಅವರ 'ಸೂರಸಾಗರ'ವು ಕೃಷ್ಣಭಕ್ತಿ-ಯಿಂದ ಹೊರಸೂಸುತ್ತಿದೆ. ಇವರ ಪರಂಪರೆಯಲ್ಲಿ **ಕೃಷ್ಣರಾಮ, ಪರಮಾ-ನಂದ, ಕುಂಭನದಾಸ, ಚತುರ್ಭುಜದಾಸ, ಛೀತಸ್ವಾಮಿ, ಗೋವಿಂದ ಸ್ವಾಮಿ** ಮೊದಲಾದವರೂ **ಹಿತ ಹರಿವಂಶ ಮತ್ತು ಸ್ವಾಮೀ ಹರಿ ದಾಸರೂ** ಶ್ರೇಷ್ಠ ಕವಿಗಳಾಗಿಹೋಗಿದ್ದಾರೆ. ಈ ಸಮಯದಲ್ಲಿ ಹಿಂದೀ ಕಾವ್ಯ ಸಂಪತ್ತನ್ನು ಬೆಳೆಸಿದ **ರಹೀಮ, ಗಂಗ** ಮತ್ತು **ನರಹರಿ** ಮುಂತಾದವರು ಪ್ರಸಿದ್ಧಿಯನ್ನು ಪಡೆದಿದ್ದಾರೆ. ಈ ಕಾಲದ ಹಿಂದೀ ಕವಿತೆಯು ಭಾಷೆ, ಭಾವ ಗಳಿಂದ ಪ್ರೌಢಿಮೆಯನ್ನು ಪಡೆಯಿತು. ಈ ಕಾಲವು **ಹಿಂದೀ ಸಾಹಿತ್ಯದ ವಸಂತಕಾಲವು**.

**ರೀತಿಕಾಲ:**— ಭಕ್ತಿಕಾಲವು ಹಿಂದೀ ಸಾಹಿತ್ಯದ ವಸಂತಕಾಲವೆಂದು ಹೆಸರಾಗಿದ್ದರೂ ಆಗ ಕೆಲವರು ಭಾಷೆಯನ್ನೂ ಭಾವಗಳನ್ನೂ ಸಿಂಗರಿಸುವು-ದರ ಕಡೆಗೆ ಮತ್ತು ಸಂಸ್ಕೃತದ ಕಾವ್ಯ ರೀತಿಯ ಕಡೆಗೆ ಹಿಂದೀ ಕಾವ್ಯವನ್ನು ತಿರುಗಿಸುವ ಪ್ರಯತ್ನದಲ್ಲಿ ತೊಡಗಿದ್ದರು. ತುಲಸೀದಾಸ, ಸೂರದಾಸ ಮತ್ತು ಅವರ ಪೂರ್ವದ ಕವಿಗಳು ಭಾಷೆಯ ಬೆಡಗಿನ ಕಡೆಗೆ ಗಮನ ಕೊಟ್ಟಿದ್ದಿಲ್ಲ ವೆಂದು ಇದರ ಅರ್ಥವಲ್ಲ. ಆದರೆ ಅವರು ಕಾವ್ಯಕಲೆಯನ್ನು ಸಾಧನವನ್ನಾಗಿ ಮಾಡಿಕೊಂಡು ಗ್ರಂಥರಚನೆ ಮಾಡಿದ್ದರೇ ಹೊರತು ಸಾಧ್ಯವನ್ನಾಗಿ ಅಲ್ಲ. ಅವರ ನಂತರದ ಕವಿಗಳು ಕಾವ್ಯಕಲೆಗೇ ಹೆಚ್ಚು ಪ್ರಾಧಾನ್ಯವನ್ನು ಕೊಟ್ಟರು. ಅಲಂಕಾರ, ನಾಯಿಕ-ನಾಯಿಕಾ ವರ್ಣನೆ ಮತ್ತು ಋತುಗಳ ವರ್ಣನೆಗ ಳನ್ನು ಮಾಡತೊಡಗಿದರು. ಈ ಪದ್ಧತಿ ಅತ್ಯಂತ ಪ್ರಚಲಿತವಾಯಿತು, ಲಕ್ಷಣಗ್ರಂಥಗಳೇ ಹೆಚ್ಚಾಗಿ ಹುಟ್ಟಿದವು. ಆದ್ದರಿಂದ ಇದಕ್ಕೆ ರೀತಿಕಾಲ ವೆಂದು ಕರೆಯಲಾಯಿತು.

ರೀತಿಕಾಲದ ಕವಿಗಳಲ್ಲಿ ಸರ್ವಶ್ರೇಷ್ಠ ಕವಿಯೆಂದರೆ **ಕೇಶವದಾಸರು.** ಇವರ ಕೃತಿಗಳಲ್ಲಿ ಕವಿಪ್ರಿಯಾ, ರಸಿಕಪ್ರಿಯಾ, ರಾಮಚಂದ್ರಿಕಾ ಮುಖ್ಯ

ನಾದವು. ಇವರ ಪರಂಪರೆಯಲ್ಲಿ ಪ್ರಸಿದ್ಧಿಯನ್ನು ಪಡೆದವರಲ್ಲಿ **ಚಿಂತಾಮಣಿ, ಮತಿರಾಮ, ಬಿಹಾರಿಲಾಲ, ದೇವ, ಭಿಖಾರಿದಾಸ, ಪದ್ಮಾಕರ** ಮುಂತಾದವರು ಉಲ್ಲೇಖನೀಯರಾಗಿದ್ದಾರೆ. ಈ ಶೃಂಗಾರರಸದ ಪೋಷಕ ಕವಿಗಳ ಮಧ್ಯದಲ್ಲಿ ವೀರರಸ ಪ್ರಧಾನ ಕಾವ್ಯಗಳನ್ನು ಬರೆದು ಪ್ರಸಿದ್ಧಿಯನ್ನು ಪಡೆದವರಲ್ಲಿ **ಭೂಷಣ** ಮತ್ತು **ಲಾಲ** ಎಂಬವರು. ಭೂಷಣರು ಛತ್ರಪತಿ ಶಿವಾಜಿಯನ್ನು ತಮ್ಮ ಕಾವ್ಯಗಳಲ್ಲಿ ಬಣ್ಣಿಸಿದರೆ ಲಾಲರು ವೀರಛತ್ರ ಸಾಲರನ್ನೂ ವರ್ಣಿಸಿದ್ದಾರೆ.

ಹಿಂದೀ ಸಾಹಿತ್ಯದಲ್ಲಿ ಒಂದು ಗಾದೆಯು ಅತ್ಯಂತ ಪ್ರಸಿದ್ಧಿಯನ್ನು ಪಡೆದಿದೆ:— **ಸೂರ ಸೂರ ತುಲಸೀ ಶಸಿ ಉಡುಗಣ ಕೇಶವದಾಸ, ಬಾಕೀ ಕವಿ ಖದ್ಯೋತ ಸಮ ಜಹ ತಹ ಕರತ ಪ್ರಕಾಸ** (ಸೂರದಾಸರು ಸೂರ್ಯನಂತೆ, ತುಳಸೀದಾಸರು ಚಂದ್ರನಂತೆ, ಕೇಶವದಾಸರು ನಕ್ಷತ್ರದಂತೆ, ಇತರ ಕವಿಗಳು ಮಿಣುಕುವ ಮಿಂಚುಹುಳಗಳಂತೆ ಪ್ರಕಾಶಿಸುತ್ತಾರೆ.) ಇದರಿಂದ ಈ ಮೂವರೂ ಕವಿಗಳ ಪ್ರತಿಭೆ ಹಿಂದೀ ಸಾಹಿತ್ಯದಲ್ಲಿ ಎಷ್ಟಿರಬಹುದೆಂಬುದು ವ್ಯಕ್ತವಾಗುತ್ತದೆ.

**ಆಧುನಿಕ ಕಾಲ:**— ಹಿಂದೀ ಸಾಹಿತ್ಯದಲ್ಲಿ ಶೃಂಗಾರ ರಸದ ಕವಿತೆಯು ಹೆಚ್ಚಾಗತೊಡಗಿದ್ದರಿಂದ ಅದರ ಹ್ರಾಸವು ಆಗತೊಡಗಿತ್ತು. ಅದನ್ನು ತಡೆಗಟ್ಟುವ ಕಾರ್ಯವನ್ನು ಮಾಡುವದು ಅವಶ್ಯವಿದ್ದಿತು. ಅದಕ್ಕಾಗಿ **ಭಾರತೇಂದು ಹರಿಶ್ಚಂದ್ರ** ಅವರು 'ಭಾರತ-ದುರ್ದಶಾ' ಎಂಬ ನಾಟಕವನ್ನು ಬರೆದು ರೀತಿಕಾಲದ ಚಿತ್ತವೃತ್ತಿಯ ವಿರುದ್ಧ ಕಹಳೆಯನ್ನು ಊದಿದರು. ರಾಜಾರಾಮ ಮೋಹನರಾಯ, ದಯಾನಂದ ಸರಸ್ವತಿ, ಭಾರತೇಂದು ಹರಿಶ್ಚಂದ್ರರ ಉದ್ಯೋಗದಿಂದ ಭಾರತದ ಸಾಮಾಜಿಕ, ರಾಜಕೀಯ, ಸಾಂಪ್ರದಾಯಿಕ ಕ್ಷೇತ್ರದಲ್ಲಿ ಒಂದು ಪ್ರಚಂಡ ಅಲೆಯೆದ್ದಿತು. ಅದರ ಪರಿಣಾಮವಾಗಿ ಹಿಂದೀ ಸಾಹಿತ್ಯವು ಹೊಸ ಬೆಳಕಿನ ಕಡೆಗೆ ಹೊರಟಿತು. ಹಿಂದೀ ಕವಿತೆಯೂ ಜಾಗೃತವಾಯಿತು. ಸಮಯಕ್ಕೆ ಸರಿಯಾಗಿ ತನ್ನ ರೂಪವನ್ನು ಬದಲಿಸಿಕೊಂಡು ಜನತೆಯ ಜೊತೆಯಲ್ಲಿ ಮುನ್ನಡೆಯತೊಡಗಿತು. ಹಿಂದೀಕವಿತೆ ದೇಶಪ್ರೇಮ, ಜನಾಂಗಪ್ರೇಮದಿಂದ ಹೊರಸೂಸತೊಡಗಿತು. **ಭಾರತೇಂದು**

**ಹರಿಶ್ಚಂದ್ರ**ರ ಕವಿತೆಯು ಪ್ರಗತಿಯ ಪತಾಕೆಯನ್ನು ಹಿಡಿದು ಹೊರಟಿತು. ಆ ಸಮಯದ ಕವಿಗಳು ಅವರನ್ನು ಅನುಸರಿಸಿದರು. ಅವರ ತರುವಾಯ ಇಂಗ್ಲೀಷದ 'ಲೀರಿಕ್' ಧಾಟಿಯ ಕವಿತೆಗಳು ಬರತೊಡಗಿದವು. ಕವಿತೆಗೆ ಉತ್ತಮ ಸಾಧನವೆನಿಸಿದ ಹಳೆ ಹಿಂದೀ—ವ್ರಜ ಭಾಷೆಯು ಹೋಗಿ ಆಧುನಿಕ ಹಿಂದೀಯಲ್ಲಿ ಖಡೀಬೋಲಿಯಲ್ಲಿ-ಕವಿತೆಗಳ ರಚನೆಯು ಪ್ರಾರಂಭವಾಯಿತು. ಇದರ ಆಚಾರ್ಯಪದವು **ಶ್ರೀಧರ ಪಾಠಕ** ಮತ್ತು **ಮಹಾವೀರ ಪ್ರಸಾದ ದ್ವಿವೇದಿಯವರಿಗೆ** ಸಲ್ಲುತ್ತದೆ. ಇವರ ಪರಂಪರೆಯಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಪಡೆದವರು **ಅಯೋಧ್ಯಾಸಿಂಹ ಉಪಾಧ್ಯಾಯ, ನಾಥೂರಾಮ ಶಂಕರ ಶರ್ಮಾ, ಮೈಥಿಲಿ ಶರಣಗುಪ್ತರು.** ಅವರ ತರುವಾಯ **ಸನೇಹೀ, ದೀನ, ರಾಮನರೇಶ ತ್ರಿಪಾಠಿ** ಮುಂತಾದವರು ಪ್ರಸಿದ್ಧಿಯನ್ನು ಪಡೆದಿದ್ದಾರೆ. ರಹಸ್ಯವಾದಿಗಳಲ್ಲಿ **ಜಯಶಂಕರ ಪ್ರಸಾದ, ಸುಮಿತ್ರಾನಂದನ ಪಂತ, ಮಹಾದೇವಿ ವರ್ಮಾ** ಮುಂತಾದವರು ಪ್ರಮುಖರಾಗಿದ್ದಾರೆ. ಹಿಂದೀ ಕವಿತಾ-ಕಾಮಿನಿಯು ಸರ್ವತೋಮುಖಿಯಾಗಿ ಬೆಳೆಯುತ್ತಿದ್ದಾಳೆ.

ಆಧುನಿಕ ಯುಗದಲ್ಲಿ ಗದ್ಯದ ವಿಕಾಸವು ವಿಶೇಷವಾಗಿ ಆಗತೊಡಗಿತು. ಹಿಂದೀ ಸಾಹಿತ್ಯದಲ್ಲಿ ಸರ್ವಪ್ರಥಮವಾಗಿ ಗದ್ಯವನ್ನು ಬರೆಯತೊಡಗಿದವರು ಅಕಬರ ಬಾದಶಹನ ದರ್ಬಾರದಲ್ಲಿದ್ದ **ಗಂಗ ಭಾಟ** ಎಂಬವರು. ಅವರ ತರುವಾಯ **ಜಾಟಮಲ್ಲ**ರ ಹೆಸರನ್ನು ಹೇಳಬಹುದು. **ಇನ್ಶಾ ಉಲ್ಲಾಖಾನ, ಲಲ್ಲೂಜಿ ಲಾಲ, ಸದಲ ಮಿಶ್ರರು** ಒಳ್ಳೆಯ ಗದ್ಯ ನಿರ್ಮಾಣಮಾಡಿದರು. ಇವರ ತರುವಾಯ ಮಿಶನರಿಗಳು ಸಹ ಗದ್ಯ ಸಾಹಿತ್ಯವನ್ನು ಬೆಳೆಸತೊಡಗಿದರು. ಆದರೆ **ಭಾರತೇಂದು ಹರಿಶ್ಚಂದ್ರ, ಪಂಡಿತ ಬಾಳಕೃಷ್ಣ ಭಟ್ಟ** ಮುಂತಾದವರು ಗದ್ಯ ನಿರ್ಮಾಣದ ಕ್ಷೇತ್ರಕ್ಕೆ ಬಂದೊಡನೆ, **ಮಹಾವೀರ ಪ್ರಸಾದ ದ್ವಿವೇದಿ**ಯವರು ಭಾಷೆಯ ಪರಿಮಾರ್ಜನೆಯನ್ನು ಮಾಡತೊಡಗಿದೊಡನೆ ಅನೇಕ ಲೇಖಕರು ಅವರನ್ನು ಅನುಸರಿಸತೊಡಗಿದರು. ಹಿಂದೀ ಸಾಹಿತ್ಯದ ಪ್ರಗತಿಯು ಭರದಿಂದ ಸಾಗತೊಡಗಿತು. ನಾಟಕಗಳು, ಕಥೆಗಳು, ವಿಮರ್ಶೆಗಳು, ಕಾದಂಬರಿಗಳು, ನಿಬಂಧಗಳು, ಪತ್ರಿಕೆಗಳು ಹಿಂದೀ ಸಾಹಿತ್ಯವನ್ನು ಅಲಂಕರಿಸತೊಡಗಿದವು. ಪ್ರಾರಂಭದಲ್ಲಿ ಸಂಸ್ಕೃತ, ಅರಬಿ, ಫಾರಸಿ, ಬಂಗಲೀ ಭಾಷೆಗಳಿಂದ ಪುಸ್ತಕಗಳು ಹಿಂದೀಯಲ್ಲಿ ಅನುವಾದಿತವಾದರೂ

ಬರಬರುತ್ತ ಸ್ವತಂತ್ರ ಕೃತಿಗಳು ಸಾವಕಾಶವಾಗಿ ಮುನ್ನಡೆಯಿಡುತ್ತ ಬಂದವು; ಅವು ಈಗ ಸರ್ವತೋಮುಖಿಯಾಗಿ ಬೆಳೆಯತೊಡಗಿವೆ. ವಿಮರ್ಶೆ ಗಾರರಲ್ಲಿ **ಮಹಾವೀರ ಪ್ರಸಾದ ದ್ವಿವೇದಿ, ಶ್ಯಾಮಸುಂದರದಾಸ, ರಾಮಚಂದ್ರ ಶುಕ್ಲ, ಜೈನೇಂದ್ರ ಕುಮಾರ** ಮುಂತಾದವರೂ, ನಾಟಕ ಕಾರರಲ್ಲಿ **ಜಯಶಂಕರ ಪ್ರಸಾದ, ಬದರೀನಾಥ ಭಟ್ಟ, ಗೋವಿಂದ ವಲ್ಲಭ ಪಂತ, ಹರಿಕೃಷ್ಣ ಪ್ರೇಮೀ** ಮುಂತಾದವರೂ ಕಥಾಪ್ರಪಂಚ ದಲ್ಲಿಯೂ ಕಾದಂಬರೀ ಪ್ರಪಂಚದಲ್ಲಿಯೂ ಕೀರ್ತಿವೆತ್ತವರಲ್ಲಿ **ಜ್ವಾಲಾದತ್ತ ಶರ್ಮಾ, ಜಯಶಂಕರ ಪ್ರಸಾದ, ಪ್ರೇಮಚಂದ, ಸುದರ್ಶನ, ಹೃದಯೇಶ, ಜೈನೇಂದ್ರ** ಮುಂತಾದವರು ಅಗ್ರಗಣ್ಯರಾಗಿದ್ದಾರೆ.

ಕಾದಂಬರಿ ಪ್ರಪಂಚದಲ್ಲಿಯಂತೂ **ಪ್ರೇಮಚಂದರು** ಯುಗಾಂತರ ವನ್ನೇ ಸ್ಥಾಪಿಸಿಬಿಟ್ಟರು. ಅವರ 'ಸೇವಾಸದನ'ವು ಹೊರಟ ತರುವಾಯ 'ಪ್ರೇಮಾಶ್ರಮ'ವು ಹೊರಡುತ್ತಲೇ ಅವರು ಹಿಂದೀಯ ಸರ್ವಶ್ರೇಷ್ಠ ಕಾದಂಬರಿ ಕಾರರೆಂದು ಎನ್ನಿಸಿಕೊಳ್ಳತೊಡಗಿದರು. ಪ್ರೇಮಚಂದರ ಕೆಲವು ಕೃತಿಗಳು ವಿದೇಶೀ ಮತ್ತು ಭಾರತೀಯ ಭಾಷೆಗಳಲ್ಲಿ ಪರಿವರ್ತನೆಯನ್ನು ಹೊಂದಿವೆ. ಅವರನ್ನು ಗೋರ್ಕಿ, ಹಾಥಾರ್ನ, ಹಾರ್ಡಿ, ಮೋಪಾಸಾ, ಡಿಕೆನ್ಸ, ಟಾಲ-ಸ್ಟಾಯ, ದೋಸ್ತಾಯವಸ್ಕೀ ಮುಂತಾದ ಪಾಶ್ಚಾತ್ಯ ಕಥಾ-ಕಾದಂಬರೀಕಾರ ರೊಡನೆಯೂ ಚೀನೀ ಲೇಖಕರಾದ ಲು-ಹೂನ ಅವರೊಡನೆಯೂ ಹೋಲಿಸ ಲಾಗಿದೆ. ಇದೂ ಅಲ್ಲದೆ ಪ್ರೇಮಚಂದರನ್ನು ಕುರಿತು ಕೆಲವರು ಬರೆಯುವಾಗ 'ರಾಜನೀತಿಯಲ್ಲಿ ಗಾಂಧೀಜಿಯವರಿಗೆ ಯಾವ ಸ್ಥಾನವಿದೆಯೋ ಭಾರತೀಯ ಸಾಹಿತ್ಯದಲ್ಲಿ ಪ್ರೇಮಚಂದರಿಗೆ ಅದೇ ಸ್ಥಾನವಿದೆ. ದೇಶದಲ್ಲಿ ಮಹಾತ್ಮಾ ಗಾಂಧೀಯವರ ನಂತರ ಎಲ್ಲಕ್ಕೂ ದೊಡ್ಡ ಮಹಾಪುರುಷರು ಪ್ರೇಮಚಂದರೇ ಆಗಿಹೋದರು ಎಂದು ಬರೆದಿದ್ದಾರೆ. ಕಾರಣ ಇಷ್ಟೇ— ಗಾಂಧೀಜಿಯ ಸಮಗ್ರ ಕಾರ್ಯ, ದೃಷ್ಟಿ, ವಿಚಾರ ಮುಂತಾದವು ಪ್ರೇಮಚಂದರ ಕೃತಿಗಳಲ್ಲಿ ಮಿಡಿಯುತ್ತಿರುತ್ತವೆ. ಹಿಂದೀ ಸಾಹಿತ್ಯದ ಉಂಗುರದಲ್ಲಿ ಪ್ರೇಮಚಂದರು ಒಂದು ರತ್ನದಂತೆ ಹೊಳೆಯುತ್ತಿದ್ದಾರೆ.

**—ಗುರುನಾಥ ಜೋಶಿ.**

# ಪ್ರೇಮಚಂದರ ಜೀವನ



भारतवर्ष में रविबाबू को छोडकर, प्रेमचन्द के समान कथा साहित्य पर किसी का ऐसा एक-छत्र अधिकार नहीं है।

—— शरच्चंद्र चट्टोपाध्याय

ಭಾರತವರ್ಷದಲ್ಲಿ ರವಿ ಬಾಬುಗಳನ್ನು ಬಿಟ್ಟರೆ, ಕಥಾ ಸಾಹಿತ್ಯದ ಮೇಲೆ ಪ್ರೇಮಚಂದರಿಗೆ ಸಮಾನವಾದ ಏಕಛತ್ರಾಧಿಕಾರವು ಯಾರದೂ ಇಲ್ಲ.

—ಶರತ್ ಚಂದ್ರ ಚಟ್ಟೋಪಾಧ್ಯಾಯ



ಪ್ರೇಮಚಂದರು

ಉತ್ತರ ಭಾರತದಲ್ಲಿಯೇ ಏಕೆ, ದಕ್ಷಿಣ ಭಾರತದಲ್ಲಿಯೂ ಪ್ರೇಮಚಂದರ ಹೆಸರು ಮನೆ ಮನೆಯಲ್ಲಿಯೂ ಕೇಳುತ್ತಿದೆ, ಅಂತರ್ ರಾಷ್ಟ್ರೀಯ ಸಾಹಿತ್ಯದಲ್ಲಿ ಕೂಡ ಇವರ ಹೆಸರು ಗಣನೀಯವಾಗಿದೆ. ಭಾರತೀಯ ಭಾಷೆಗಳ ಪ್ರತಿನಿಧಿಗಳೆಂದು ಪ್ರೇಮಚಂದರು ವಿದೇಶಿ ಲೇಖಕರ ಸನ್ಮಾನಕ್ಕೆ ಪಾತ್ರರಾಗಿರುವರು. ಕೆಲವರು ಅವರನ್ನು ಡಿಕೆನ್ಸರೆಂದು ತಿಳಿದರೆ, ಕೆಲವರು ಅವರನ್ನು ತಮ್ಮ ಟಾಲಸ್ಟಾಯರೆಂದು ಗೌರವಿಸುತ್ತಾರೆ. ಅವರನ್ನು ಮೆಕ್ಸಿಮ್ ಗೋರ್ಕಿಯ

ಭಾರತೀಯ ಅಪಕಾರವೆಂದು ತಿಳಿಯುವವರೂ ಇದ್ದಾರೆ. ನೈಜವಾಗಿ ಅವರು ಭಾರತೀಯ ಜನತೆಯ ಪ್ರಾತಿನಿಧಿಕ ಕಲಾಕಾರರಿರುವರು. **ಫಿರಾಕ ಗೋರಖಪುರಿ** ಅವರ ಶಬ್ದಗಳಲ್ಲಿ ಹೇಳುವದಾದರೆ—

"ಪ್ರೇಮಚಂದರ ಪುಸ್ತಕಗಳನ್ನು ಓದುವಾಗ ಭಾರತಮಾತೆಯು ನಮ್ಮನ್ನು ಉಡಿಯಲ್ಲಿ ಇಟ್ಟುಕೊಂಡು ಲಲ್ಲೆಗೈಯುತ್ತಿರುವಂತೆ ಅನಿಸುತ್ತದೆ. ಅವರ ಕೃತಿಗಳಲ್ಲಿ— ನಮ್ಮ ಅಂತಃಕರಣದ ಕೋಲಾಹಲವನ್ನು ಕೇಳುತ್ತೇವೆ. ಭಾರತಮಾತೆಯ ಅಸ್ತಿತ್ವ, ಆಕೆಯ ಸುಖದುಃಖ, ಆಕೆಯ ಭಾಗ್ಯ, ಹಾಗೂ ಮಾಂಗಲ್ಯಗಳು ಅಲ್ಲಿ ಸಜೀವವಾಗಿ ಸಿಕ್ಕುತ್ತಿವೆ. ಆದುದರಿಂದಲೇ ಅವರು ಕೇವಲ ರಾಷ್ಟ್ರೀಯರಲ್ಲ, ಅಂತರ್ ರಾಷ್ಟ್ರೀಯರೂ ಆಗಿರುವರು."

ಸಾಹಿತ್ಯಾಕಾಶದಲ್ಲಿ **ಟಾಗೋರ, ಶರತ್‌ಚಂದ್ರ, ಇಕಬಾಲ** ರಂಥವರು ಬೆಳಗುತ್ತಿದ್ದ ಕಾಲದಲ್ಲಿಯೇ ಪ್ರೇಮಚಂದರು ಚಂದ್ರನಂತ ತಮ್ಮ ತಂಪು ಕಿರಣಗಳ ಸುಧೆಯನ್ನು ಉಣಿಸಬಂದರು. ತಮ್ಮ ಸರಲ ಜೀವನ, ಸಾಧು ಸ್ವಭಾವಗಳ ಮೂಲಕವಾಗಿ ಎಲ್ಲರ ಮನಸ್ಸನ್ನು ಆಕರ್ಷಿಸಿದರು. ಜನತೆಯು ಈತನಿಗೆ **"ಕಾದಂಬರೀ ಸಾಮ್ರಾಜ್ಯದ ಸಮ್ರಾಟ"** ನೆಂದು ಪದವಿ ಕೊಟ್ಟಿತು. ಪ್ರತಿಭಾಶ್ರೀಮಂತರಾದ ಪ್ರೇಮಚಂದರನ್ನು ಅರಿಯುವದು, ಅವರ ವ್ಯಕ್ತಿತ್ವವನ್ನು ಅಭ್ಯಾಸಿಸುವದು, ಅವರ ಸಾಹಿತ್ಯದ ಅಧ್ಯಯನಕ್ಕಿಂತ ಕಡಿಮೆ ಮಹತ್ವದ ವಿಷಯವಲ್ಲ. ಅಂತಹದೊಂದು ಸಣ್ಣ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

**ಅವರ ಮೊದಲು:—** ಅದು ಕಲ್ಪನೆಯ ಕಾಲ. ಅಂದಿನ ಮಾನವನು ಸಂಭವ-ಅಸಂಭವ ಕಲ್ಪನೆಯಲ್ಲಿಯೇ ಮನಸ್ಸಿನ ಮಂಡಿಗೆಗಳನ್ನು ತಿನ್ನುವ ಕಾದಂಬರಿಗಳ ಕಾಲವು ಅದು. 'ಚಂದ್ರಕಾಂತ ಸಂತತಿ', 'ಅಂಗೂಠೀ ಕಾ ನಗೀನಾ' ಆ ಬಗೆಯ ಕಾದಂಬರಿಗಳು. ಎಲ್ಲಿಯದೋ ಸ್ವರ್ಗಲೋಕದ ಚಿತ್ರ- ಎಲ್ಲಿಯವನೋ ಒಬ್ಬ ರಾಜಕುಮಾರ, ಎಲ್ಲಿಯವಳೋ ಕುಮಾರಿ- ಪರಸ್ಪರ ಪ್ರೇಮ-ಅಸಾಧ್ಯಕೋಟಿಯದು-ಪಾತಾಳ ಲೋಕವನ್ನು ಹೇಗೋ ಹೇಗೋ ಸೇರುವರು- ಸಪ್ತ ಸಮುದ್ರವನ್ನು ದಾಟುವರು- ಅಗಲುವರು, ಕೂಡುವರು- ಈ ಬಗೆಯ ಅಸಂಭವ ಅಗಾಧ ಕಲ್ಪನೆಗಳೇ ಜನಮನವನ್ನು ತಣಿಸುತ್ತಿದ್ದವು.

ಈ ಕಾದಂಬರಿಗಳಲ್ಲಿ ಜೀವನ ವಿಕಾಸಕ್ಕೆ ಎಡೆಯೇ ಇರಲಿಲ್ಲ. ಪ್ರೇಮಚಂದರ ಮೊದಲು ಮೂರು ವಿಭಿನ್ನ ಕಾದಂಬರೀ ಪ್ರವಾಹಗಳು ಮೂರು ವಿಭಿನ್ನ ದಿಶೆಗಳಲ್ಲಿ ಹರಿಯುತ್ತಿದ್ದವು.

(೧) ದೇವಕೀನಂದನ ಖತ್ರೀಯವರ ಐಂದ್ರಜಾಲಿಕ ಹಾಗೂ ವಿಲಾಸದ ಕಲ್ಪನೆಗಳಿಂದ ಕೂಡಿದ ಕಾದಂಬರಿಗಳು. (೨) ಶೃಂಗಾರ ರಸದಿಂದ ತುಂಬಿ ತುಳುಕುತ್ತಿರುವ ಐತಿಹಾಸಿಕ ಹಾಗೂ ಸಾಮಾಜಿಕ ಕಾದಂಬರಿಗಳು. ಕಿಶೋರಿ ಲಾಲ ಗೋಸ್ವಾಮಿ ಅವರು ಈ ಪ್ರವಾಹದ ನಾಯಕರು. (೩) ಗೋಪಾಲ ರಾಮ ಗಹಮರಿ ಅವರ ಪತ್ತೆದಾರಿ ಹಾಗೂ ಅದ್ಭುತ ಸಾಹಸ ಕೃತ್ಯಗಳನ್ನು ಚಿತ್ರಿಸುವ ರೋಮಾಂಚಕಾರಿ ಕಾದಂಬರಿಗಳು ಇನ್ನೊಂದು ಬಗೆಯವು.

ಈ ಮೂರು ಪ್ರವಾಹಗಳನ್ನುಳಿದು ಮರಾಠೀ, ಬಂಗಲೀ, ಹಾಗೂ ಇಂಗ್ಲಿಷ್ ಉಪನ್ಯಾಸಗಳ ಅನುವಾದಿತ ಪ್ರವಾಹವೂ ಬಲು ಸೆಳವಿನಿಂದ ಸಾಗಿತ್ತು. ಈ ಹೊಸ ಪ್ರವಾಹವು ಮಾತ್ರ ಜನಮನವನ್ನು ನಿಧಾನವಾಗಿ ಸೆಳೆಯುತ್ತಲಿತ್ತು.

ಹಿಂದೀ ಜನತೆಗೆ ಈ ಜಗತ್ತನ್ನು ಮರೆಸುವ ಕಲ್ಪನಾ ಪ್ರಧಾನವಾದ ಉಪನ್ಯಾಸಗಳೂ, ರೀತಿಕಾಲೀನ ಶೃಂಗಾರ ರಸ ಪ್ರಧಾನ ಉಪನ್ಯಾಸಗಳೂ ಸೇರುತ್ತಿದ್ದವಲ್ಲದೆ, ಜನಜೀವನವನ್ನು ಪ್ರತಿಬಿಂಬಿಸುವ ಉಪನ್ಯಾಸಗಳು ಸೇರುತ್ತಿರಲಿಲ್ಲವೆಂದರೂ ತಪ್ಪಲ್ಲ. ಖತ್ರಿ, ಗೋಸ್ವಾಮಿ ಹಾಗೂ ಗಹಮರೀ ಅವರ ಕಾದಂಬರಿಗಳನ್ನು ಮೆಚ್ಚದ ಜನರು ಅನುವಾದಿತ ಉಪನ್ಯಾಸಗಳನ್ನು ಓದಿ ತೃಪ್ತಿಪಡುತ್ತಿದ್ದರು. ಆದರೆ, ಅನುವಾದಿತ ಕಾದಂಬರಿಗಳು ತಮ್ಮವಲ್ಲ ಎಂದು ಕ್ಷೋಭೆಯಿಂದ ನಿಟ್ಟುಸಿರು ಬಿಡುವ ಪರಿಸ್ಥಿತಿಯು ಆಗಿನದಾಗಿತ್ತು. ಇಂಥ ಕಾಲದಲ್ಲಿ ಪ್ರೇಮಚಂದರು ಸಾಹಿತ್ಯ ಕ್ಷೇತ್ರಕ್ಕೆ ಬಂದರು. ಜನರ ಅಂತರಂಗವನ್ನರಿತರು.

ಅದು ರಾಷ್ಟ್ರೀಯ ಮಹಾಸಭೆಯ (ಕಾಂಗ್ರೆಸ್) ಜನ್ಮಕಾಲ. ಸ್ವಾತಂತ್ರ್ಯದ ಭಾವನೆಯು ವಾತಾವರಣವನ್ನೆಲ್ಲ ಆವರಿಸಿತ್ತು. ಪ್ರೌಢ ಸಾಹಿತ್ಯ ರಚನೆಯ ಕಾಲವೂ ಅದೇ ಆಗಿತ್ತು. ದೇಶದ ಸ್ವಾತಂತ್ರ್ಯ ಚೇತನವು ಅಭಿವ್ಯಕ್ತವಾಗುವ ಮಾರ್ಗವನ್ನು ನೋಡುತ್ತಲಿತ್ತು. ಈ

ಸಾಮಾಜಿಕ, ರಾಜನೈತಿಕ ಜಾಗ್ರತಿಯು ಪ್ರೇಮಚಂದರನ್ನು ಸಾಂಸ್ಕೃತಿಕ ಚೇತನದತ್ತ ವಿಧಿವತ್ತಾಗಿ ಪ್ರಚೋದಿಸಿತು. "ಕಾದಂಬರಿಗಳಲ್ಲಿ ಜೀವನ ದಾಯಿನೀ ಪ್ರತಿಭೆ ಇರಬೇಕು. ಸಂಸ್ಕೃತಿಯ ತಳಹದಿಯ ಮೇಲೆ ಸದ್ಯದ ಜೀವನವನ್ನು ಅವು ಚಿತ್ರಿಸುತ್ತಿರಬೇಕು. ಆ ಚಿತ್ರಣದಲ್ಲಿ ವರ್ತಮಾನಯುಗದ ಜನತೆಯ ಸಹಸ್ರ ಮುಖಗಳು ಪ್ರತಿಬಿಂಬಿತವಾಗಿ ಕಂಗೊಳಿಸಬೇಕು" ಎಂಬ ಸ್ವಪ್ನಗಳನ್ನು ಪ್ರೇಮಚಂದರು ಕಂಡರು.

ಇಂಥ ಆವಶ್ಯಕತೆಯ ಸಮಯದಲ್ಲಿ ಪ್ರೇಮಚಂದರು ಅವತರಿಸಿದರೆಂದು ಹೇಳಬಹುದು. ಶುದ್ಧ ಸಾಹಿತ್ಯಿಕ ತಳಹದಿಯಮೇಲೆ, ಆದರೆ ನೈತಿಕ ಮಟ್ಟವನ್ನು ತಗ್ಗಿಸದೆ ಅವರು ಭಾರತೀಯ ಜೀವನದ ಸಾಮಾಜಿಕ ಹಾಗೂ ರಾಜನೈತಿಕ ಸಂಘರ್ಷಗಳನ್ನು ಬಹು ಕುಶಲತೆಯಿಂದ ಸಜೀವವಾಗಿ ಚಿತ್ರಿಸಹತ್ತಿದರು. ಹಿಂದೀ ಜನತೆ ಹಾಗೂ ಸಾಹಿತ್ಯವು ಅಭಿಮಾನ ಪಡುವಂತಾಯಿತು. ತಮ್ಮ ಸಾಮಾಜಿಕ ಸಮಸ್ಯೆಗಳಿಗೆ ಉತ್ತರ ಪಡೆಯಲಪೇಕ್ಷಿಸುವ ಜನತೆಯು ಬಂಗಾಲೀ ಇಂಗ್ರೇಜೀ ಕಾದಂಬರಿಗಳಿಗೆ ಶರಣು ಹೋಗುವಂತಹ ಕಾಲವು ತೊಲಗಿತು. ಪ್ರೇಮಚಂದರು ಹಿಂದೀ ಜನತೆಯ ಎಲ್ಲ ಇಚ್ಛೆಗಳನ್ನು ಪೂರ್ತಿಗೊಳಿಸತೊಡಗಿದರು.

**ಜನ್ಮ ಹಾಗೂ ಬಾಲ್ಯ:**— ಸಾಹಿತ್ಯ ಸಂಸಾರವು ಯಾರನ್ನು "ಪ್ರೇಮಚಂದ" ಎಂಬ ಹೆಸರಿನಿಂದ ಆದರಿಸುವದೋ ಅವರ ನಿಜವಾದ ಹೆಸರು ಧನಪತರಾಯ. ಧನಪತರಾಯರ ತಂದೆ ಮುಂಶೀ ಅಜಾಯಬ-ಲಾಲರು. ಅವರು ಅಂಚೆ ಖಾತೆಯಲ್ಲಿ ಕಾರಕೂನರಾಗಿದ್ದರು. ಅವರ ಮಾಸಿಕ ವೇತನ ೧೫ ರೂಪಾಯಿಗಳಿಂದ ಪ್ರಾರಂಭವಾಗಿ ಕೊನೆಗೆ ೪೦ ರೂ. ಗಳಿಗೆ ಮುಟ್ಟಿತ್ತು. ಅಲ್ಪಸ್ವಲ್ಪ ಪಿತ್ರಾರ್ಜಿತ ಭೂಮಿಯೂ ಇದ್ದಿತು. ಈ ಭೂಮಿಯಿಂದ ಅವರಿಗೆ ಒಕ್ಕಲಿಗರೊಡನೆ ಸಂಪರ್ಕ ಬರುತ್ತಲಿತ್ತು.

ಬನಾರಸದ ಸಮೀಪ "ಲಮಹೀ" ಎಂಬದೊಂದು ಹಳ್ಳಿಯಲ್ಲಿ ಧನಪತರಾಯರು ೧೮೮೦ರಲ್ಲಿ ಜನ್ಮತಾಳಿದರು. ಜಾತಿಯಿಂದ ಕಾಯಸ್ಥರು. ಹಳ್ಳಿಯ ಸಾದಾ ಜೀವನವು ಪ್ರೇಮಚಂದರನ್ನು ಬಾಲ್ಯದಿಂದಲೇ ಆಕರ್ಷಿ-ಸಿತ್ತು. ತಂದೆಯ ಪೋಸ್ಟ ಆಫೀಸಿನ ಜೀವನದ ಪರಿಣಾಮವೂ ಪ್ರೇಮಚಂದರ

ಜೀವನದ ಮೇಲಾಗದಿರಲಿಲ್ಲ. ಅವರ ಎಷ್ಟೋ ಕತೆಗಳಲ್ಲಿ ಅವರ ಪ್ರತಿಬಿಂಬವನ್ನು ಕಾಣಬಹುದು. "ಕಜ್ಜಾಕೀ" ಕಥೆ ಇದಕ್ಕೆ ಸಾಕ್ಷಿಯಾಗಿದೆ.

ಇವರ ಪ್ರಾರಂಭಿಕ ಶಿಕ್ಷಣವು ಉರ್ದುವಿನಲ್ಲಿಯೇ ಆಯಿತು. ವಿನೋದಪ್ರಿಯ ಸ್ವಭಾವವು ಬಾಲ್ಯದಲ್ಲಿಯೇ ರೂಪಗೊಳ್ಳುತ್ತಿತ್ತು. ಒಂದು ದಿನ ಕೆಲವು ಹುಡುಗರು ಕೂದಲು ಕತ್ತರಿಸುವ ಆಟ ನಡೆಸಿದ್ದರು. ಧನಪತರಾಯನು ಒಬ್ಬ ಹುಡುಗನ ಕಿವಿಯನ್ನೇ ಕತ್ತರಿಸಿದನು. ಆ ಹುಡುಗನ ತಾಯಿ ದೂರು ತಂದಳು. ಆನಂದೀದೇವಿ "ನೀನು ಆ ಹುಡುಗನ ಕಿವಿಯನ್ನು ಏಕೆ ಕೊಯ್ದಿಟ್ಟ?" ಎಂದು ಕೇಳಿದರು. "ಕಿವಿ ಕತ್ತರಿಸಿಲ್ಲ; ಕೂದಲು ಕತ್ತರಿಸಿದೆ." ಎಂದನು ಧನಪತರಾಯನು. "ರಕ್ತ ಹರಿಯುತ್ತಿದೆ; ಕೂದಲು ಕತ್ತರಿಸಿದೆ ಎಂದು ಹೇಳುತ್ತಿರುವೆಯಾ?" ಎಂದರು ತಾಯಿ.

"ಇನ್ನು ಮುಂದೆ ಹೀಗೆಂದೂ ಮಾಡುವದಿಲ್ಲ" ಎಂದು ಅವನು ಉತ್ತರವಿತ್ತ.

ಪ್ರೇಮಚಂದರ ಬಾಲ್ಯದ ಇನ್ನೊಂದು ಘಟನೆ. ಅವರ ಕಕ್ಕನು ಒಮ್ಮೆ ಸಣಬನ್ನು ಮಾರಿ ರೂಪಾಯಿಗಳನ್ನು ತಂದಿಟ್ಟಿದ್ದನು. ಪ್ರೇಮಚಂದರು ಅದರೊಳಗಿನ ಸ್ವಲ್ಪ ಹಣವನ್ನು ಕದ್ದುಕೊಂಡರು. ಕಕ್ಕನ ಮಗನೂ ತಾನೂ ಕೂಡಿ ಮೌಲವೀಸಾಹೇಬರ ಶುಲ್ಕವನ್ನೆಲ್ಲ ಕೊಟ್ಟರು. ಉಳಿದ ಹಣದಿಂದ ಮಿಠಾಯಿ ಕೊಂಡು ಇಬ್ಬರೂ ತಿಂದರು. ಸಂಜೆಗೆ ಈ ಘಟನೆಯ ವಿಚಾರಣೆ ನಡೆಯಿತು. ಕಕ್ಕನು ತನ್ನ ಮಗನನ್ನು ಮಾತ್ರ ಶಿಕ್ಷಿಸಿದನು. ಆದರೆ ತೀಕ್ಷ್ಣ ಬುದ್ಧಿಯ ಧನಪತರಾಯನಿಗೂ ಅದು ಪೆಟ್ಟು ಕೊಟ್ಟಿತು.

ಧನಪತರಾಯನು ೮ವರ್ಷದವನಿದ್ದಾಗ ತಾಯಿಗೆ ಬಹಳ ಜಡ್ಡಾಯಿತು. ೬ ತಿಂಗಳ ವರೆಗೆ ಹಾಸಿಗೆ ಹಿಡಿದರು. ಧನಪತರಾಯನು ಸತತವಾಗಿ ಅವರ ಸೇವೆ ಮಾಡಿದನು. ಈ ಜಡ್ಡಿನಲ್ಲಿಯೇ ಆನಂದೀದೇವಿ ಸ್ವರ್ಗಸ್ಥರಾದಳು. ಈತನು ಚಿಕ್ಕಂದಿನಲ್ಲಿಯೇ ಮಾತೃಪ್ರೇಮದಿಂದ ವಂಚಿತನಾದನು. ತಾಯಿಯ ಈ ಅಕಾಲ ಮೃತ್ಯುವು ಅಬೋಧ ಬಾಲಕನ ಮನಸ್ಸಿನ ಮೇಲೆ ಕಠೋರ ವೇದನೆ ಉಂಟುಮಾಡಿತು. ತಂದೆ, ಎರಡನೆಯ ಮದುವೆಯಾದ ಬಳಿಕ ಇವರ ಕಷ್ಟ ಇನ್ನೂ ಹೆಚ್ಚಿರಬೇಕು. ಈ ವೇದನೆಯು ಅವರ ಸಾಹಿತ್ಯದ ಜೀವಾಳ

ಪೆನ್ನಬಹುದು. ಅವರ ಅನೇಕ ಕಥೆ ಕಾದಂಬರಿಗಳಲ್ಲಿ ಈ ಮಾತೃಪ್ರೇಮವು ಮೂರ್ತಿಮತ್ತಾಗಿ ಚಿತ್ರಿತವಾಗಿದೆ. "ಅಲಗ್ಯೋಝಾ" ಎಂಬ ಕತೆಯಲ್ಲಿ ಚಿತ್ರಿತವಾದ ಸನ್ನಿವೇಶವು ಅವರ ಜೀವನದ್ದೇ ಎಂದು ಹೇಳಬಹುದು. ಸವತಿ ಮತ್ಸರದ ಪರಿಣಾಮವನ್ನು ವಿಶದವಾಗಿ ತೋರಿಸುವ ಈ ಕಥೆಯು ಪ್ರೇಮ ಚಂದರ ಸಂಪೂರ್ಣ ಕರುಣಕಥೆಯನ್ನೇ ಜೀರ್ಣಿಸಿಕೊಂಡು ಪಡಿಮೂಡಿದೆ. ಮಾತೃಸ್ನೇಹಕ್ಕೆ ಎರವಾದ ಈ ಮನೋವ್ಯಥೆಯು ಸೌತೇಲೀಮಾ, (ಮಲ ತಾಯಿ) ಎಂಬ ಕಥೆಯುಲ್ಲಿ ಇನ್ನೂ ಹೃದಯ ವಿದಾರಕವಾಗಿ ವ್ಯಕ್ತವಾಗಿದೆ.

ಮಾತೆಯ ಸ್ನೇಹ, ವಾತ್ಸಲ್ಯಗಳ ಅಭಾವಗಳನ್ನು ಪ್ರೇಮಚಂದರು ತಮ್ಮ ಸಾಹಿತ್ಯದಲ್ಲಿ ಪೂರ್ತಿಗೊಳಿಸಿಕೊಂಡಿದ್ದಾರೆ. "ಘರ ಜಮಾಈ" (ಮನೆ-ಅಳಿಯ) ಎಂಬ ಕತೆಯೂ ಕರ್ಮಭೂಮಿ ಕಾದಂಬರಿಯ ಅಮರಕಾಂತನೂ ಇದಕ್ಕೆ ಸಾಕ್ಷಿ. ಈ ತಮ್ಮ ದಾರುಣವ್ಯಥೆಯ ಅನುಭವವನ್ನು "ಮನೆ ಅಳಿಯ" ನಲ್ಲಿ "ತಂದೆ-ತಾಯಿಗಳ ತೀವ್ರ ತಿರಸ್ಕಾರ ಪಡೆದ ವ್ಯಥಿತ ಹೃದಯಕ್ಕೆ ಗಿಡ-ಮರಗಳ ತಂಪು ನೆಳಲಲ್ಲಿ ಸಾಂತ್ವನೆ ಸಿಗುತ್ತಿತ್ತು" ಎಂಬ ಮಾತಿನಲ್ಲಿ ವ್ಯಕ್ತಪಡಿಸಿದ್ದಾರೆ.

ದಾರಿದ್ರ್ಯ, ವಿಮಾತೆಯ ನಿಷ್ಠುರತೆ, ತಂದೆಯ ತಿರಸ್ಕಾರ, ಹಾಗೂ ಉದಾಸೀನತೆಗಳಲ್ಲಿ ತಮ್ಮ ಬಾಲ್ಯ ಕಳೆದರೂ ಅವರು ನಿರಾಶರಾಗಲಿಲ್ಲ.

**ಶಿಕ್ಷಣ:—** ಅವರು ಚಿಕ್ಕಂದು ಕಲಿತದ್ದು ಒಬ್ಬ ಮೌಲವಿಯ ಪಾಠ ಶಾಲೆಯಲ್ಲಿ. ಅದು ಬೇರೆ ಹಳ್ಳಿಯಲ್ಲಿತ್ತು. ಅವರೂ ಕಕ್ಕನ ಮಗನೂ ಜೊತೆಯಾಗಿ ಹೋಗುತ್ತಿದ್ದರು. ಆದರೆ ಸರಿಯಾಗಿ ಸಾಲೆಗೆ ಹೋದದ್ದೇ ಇಲ್ಲ. ಮಂಗನನ್ನಾಡಿಸುವವರ ಬೆನ್ನು ಹತ್ತಿ ತಿರುಗುವುದೋ, ಶಿಪಾಯಿಗಳ ಕವಾಯಿತು ನೋಡುತ್ತ ನಿಂತುಬಿಡುವುದೋ, ಸ್ಟೇಶನ್ನಿನತ್ತ ಹೋಗಿಬಿಡುವುದೋ-ಹೀಗೆ ಒಮ್ಮೊಮ್ಮೆಯಂತೂ ವಾರಗಟ್ಟಲೆ ಶಾಲೆಗೆ ಚಕ್ಕರ ಕೊಡುತ್ತಿದ್ದರು.

ಹೀಗೆ ಉಂಡಾಡಿಯಾಗಿ ತಿರುಗುತ್ತಿರುವದೇ ಪ್ರೇಮಚಂದರಿಗೆ ಮೆಚ್ಚಿಕೆಯಾಗಿತ್ತು. ಇದೇನು ಅಸ್ವಾಭಾವಿಕವಲ್ಲ. ಮಾತೃಪ್ರೇಮ ವಿರಹಿತ-ವಾದ ಮಲತಾಯಿಯಿದ್ದ ಬಾಲಕರಿಗೆ ಮನೆಯು ಸೆರೆಮನೆಯಾಗಿ ಕಾಣಿಸು-ವದು ಸೋಜಿಗವಲ್ಲ. ಅಂತೂ ಮುಂದೆ ಸಾಹಿತಿಯಾಗಲಿದ್ದ ಬಾಲಕನಿಗೆ

ಮುಕ್ತ ಪ್ರಕೃತಿಯಲ್ಲಿಯೇ ಮುಕ್ತತೆಯ ಪಾಠಗಳು ನಿರ್ಬಂಧ ದಂಡನೆಗಳಿಲ್ಲದೆ ದೊರೆತವೆಂದು ಹೇಳಬಹುದು. ಈ ಅನುಭವದ ಫಲವಾಗಿಯೇ ಇವರ 'ಪ್ರೇರಣಾ' ಎಂಬ ಕತೆಯಲ್ಲಿ ಶಿಕ್ಷಣವು ಜೀವನದೊಡನೆ-ಜೀವನದ ವೈವಿಧ್ಯದೊಡನೆ- ಹಾಸುಹೊಕ್ಕಾಗಿ ನಡೆಯಬೇಕೆಂಬ ಭಾವನೆ ಬಹುಸುಂದರವಾಗಿ ವ್ಯಕ್ತವಾಗಿದೆ.

ತಂದೆಗೆ ಗೋರಖಪುರಕ್ಕೆ ವರ್ಗವಾದಾಗ ಧನಪತರಾಯನ ವಯಸ್ಸು ೧೩. ಉಪನ್ಯಾಸಗಳನ್ನು ಓದುವ ಚಟ ಈ ಕಾಲದಲ್ಲಿಯೇ ಪ್ರಾರಂಭವಾಯಿತು. ಉರ್ದೂ ಭಾಷೆಯ ಸ್ವತಂತ್ರ ಹಾಗೂ ಅನುವಾದಿತ ಕಾದಂಬರಿಗಳನ್ನೆಲ್ಲ ಬಹು ಆಸ್ಥೆಯಿಂದ ಓದಿದನು. ಪಂ. ರತನನಾಥ ಸರಶಾರರ ಎಲ್ಲ ಕಾದಂಬರಿಗಳನ್ನು ಓದಿಮುಗಿಸಿದನು. ಆದರೂ ತೃಪ್ತಿಯಿಲ್ಲ. ಶಾಲೆಯ ಸಮೀಪವೇ ಇದ್ದ ಒಬ್ಬ ಪುಸ್ತಕ ವ್ಯಾಪಾರಿಯಿಂದ ಪುಸ್ತಕಗಳನ್ನು ಕೊಂಡು ಸಹಪಾಠಿಗಳಿಗೆ ಮಾರುತ್ತಿದ್ದ; ಅದರ ಫಲಸ್ವರೂಪವಾಗಿ ಆತನಿಂದ ಕಾದಂಬರಿಗಳನ್ನು. ತಂದು ಓದಿ ತಿರುಗಿ ಕೊಡಹತ್ತಿದನು. ನೂರಾರು ಪುಸ್ತಕಗಳನ್ನು ಓದಿದನು. "ತಿಲಸ್ಮೇ ಹೋಶರುಬಾದ"ದ ೧೭-೧೮ ಭಾಗಗಳನ್ನು ಓದಿ ಮುಗಿಸಿದನು; ಅತ್ಯುದಾತ್ತ ಕಲ್ಪನೆಯ ಆಗರವೇ ಆಗಿದ್ದ ೩೫-೩೬ ಸಾವಿರ ಪುಟಗಳ ಈ ಗ್ರಂಥವನ್ನು ಓದಿಮುಗಿಸಿದ ಬಾಲಕ ಧನಪತರಾಯನು ನಿಜವಾಗಿಯೂ ಕಲ್ಪನಾ-ಧನಪತಿಯೇ ಆದನು. ಇವನ್ನು ಓದುವಾಗಲೇ ತಾನೂ ಇಂತಹ ಶ್ರೇಷ್ಠ ಕಲ್ಪನಾ ಶಕ್ತಿಯ ಸಂಗ್ರಾಹಕನಾಗಬೇಕೆಂಬ ಬಯಕೆ-ಹಂಬಲ ಬಾಲಕನಲ್ಲಿ ಉಂಟಾಗಿರಬಹುದು.

ಪ್ರೇಮಚಂದರ ಮ್ಯಾಟ್ರಿಕ್ ಪರೀಕ್ಷೆಯಾಗುವ ಮೊದಲೇ ತಂದೆ ಸ್ವರ್ಗಸ್ಥರಾದರು. ಅಂದಿನಿಂದ ಇವರ ಸಂಘರ್ಷಮಯ ಜೀವನದ ಎರಡನೆಯ ಅಧ್ಯಾಯ ಆರಂಭವಾಯಿತು. 'ಆತ್ಮವಿಕಾಸಕ್ಕೆ ಬೇಕಾಗುವ ಶಕ್ತಿ ಸಂಘರ್ಷದಿಂದಲೇ ಲಭಿಸುವದು; ಸಂಘರ್ಷವೇ ಸಾಹಿತ್ಯವನ್ನು ನಿರ್ಮಿಸುವದು' ಎಂದು ಅವರ ನಂಬುಗೆ. ಹಾಗೆ ಆವರ ಜೀವನವೇ ಆವರ ಸಾಹಿತ್ಯದ ಸ್ಫೂರ್ತಿ ಎನ್ನಬೇಕು. 'ಜೀವನಸಾರ' ಎಂಬ ಅವರ ಲೇಖದಲ್ಲಿ ಅವರ ಜೀವನದ ಸಂಘರ್ಷದ ಚಿತ್ರಗಳನ್ನು ನಾವು ಕಾಣುತ್ತೇವೆ. "ಜೀವನಪಥದಲ್ಲಿ ಬಹಳ ವಿಚಾರದಿಂದ ಹೆಜ್ಜೆಯನ್ನು ಇಡುವದು ನನ್ನ ತಂದೆಯ ಸ್ವಭಾವ

ವಾಗಿತ್ತು. ಆದರೆ ಕೊನೆಯ ಕಾಲದಲ್ಲಿ ಅವರು ಎಡವಿಯೇ ಎಡವಿದರು. ತಮ್ಮ ಪತನವಂತೂ ಆಗಿತ್ತು; ಅದರೊಡನೆ ನನ್ನನ್ನೂ ಕೆಡಹಿದರು. ವಿಮಾತೆಯ ಮಾತನ್ನು ಕೇಳಿ, ನನ್ನ ಹದಿನೈದನೆಯ ವಯಸ್ಸಿನಲ್ಲಿಯೇ ವಿವಾಹವನ್ನು ಮಾಡಿ ಮುಗಿಸಿದರು. ಅನಂತರ ಒಂದೇ ವರ್ಷದಲ್ಲಿ ಪರಂಧಾಮವನ್ನು ಸೇರಿದರು. ಆಗ ನಾನು ೯ನೇ ವರ್ಗದಲ್ಲಿ ಓದುತ್ತಿದ್ದೆ. ಮನೆಯಲ್ಲಿ ನನ್ನ ಹೆಂಡತಿ, ವಿಮಾತೆ ಹಾಗೂ ಆಕೆಯ ಇಬ್ಬರು ಬಾಲಕರು. ಉತ್ಪನ್ನ ಒಂದು ದುಡ್ಡು ದುಗ್ಗಾಣಿಯೂ ಇಲ್ಲ. ಮೇಲೆ ಇಂಥ ದೊಡ್ಡ ಕುಟುಂಬದ ಹೊಣೆಗಾರಿಕೆ. ಇದ್ದ ಅಲ್ಪಸ್ವಲ್ಪ ಬಂಡವಾಳ ತಂದೆಯ ಆರು ತಿಂಗಳ ಜಡ್ಡಿಗೂ ಕ್ರಿಯಾಕರ್ಮಕ್ಕೂ ಹೋಗಿತ್ತು. ನನ್ನದಂತೂ ಎಮ್. ಎ. ಪಾಸಾಗಿ ವಕೀಲನಾಗುವ ಮಹತ್ವಾಕಾಂಕ್ಷೆ ಇತ್ತು. ನೌಕರಿ ಸಿಗುವದಂತೂ ಅತಿ ದುಸ್ತರವಾಗಿತ್ತು.......... ಕಬ್ಬಿಣದ– ಅಲ್ಲ ಅಷ್ಟಧಾತುವಿನ ಸಂಕೋಲೆ ಬಿಗಿದ ಕಾಲುಗಳಿಂದಲೇ ನಾನು ಗೌರೀಶಂಕರವನ್ನು ಏರಲು ಇಚ್ಛಿಸುತ್ತಿದ್ದೆ!"

"ಕಾಶೀಯ ಕ್ವೀನ್ಸ್ ಕಾಲೇಜಿನ ಶಾಲೆಯಲ್ಲಿ ಓದುತ್ತಿದ್ದೆ, ಪ್ರಧಾನ ಅಧ್ಯಾಪಕರು ಮಾಫೀ ಕೊಟ್ಟಿದ್ದರು. ಪರೀಕ್ಷೆ ಸಮೀಪ ಬಂದಿತ್ತು. ಶಾಲೆಗೆ ೩॥ ಘಂಟೆಗೆ ಬಿಡುವಾಗುತ್ತಿತ್ತು. ನಾನು ನಾಲ್ಕೈದು ಮೈಲು ನಡೆದು ಒಬ್ಬ ಬಾಲಕನಿಗೆ ಟ್ಯೂಶನ್ ಹೇಳಲು ಹೋಗುತ್ತಿದ್ದೆ. ಚಳಿಗಾಲ. ಮೈಮೇಲೆ ಅರಿವೆ ಇರುತ್ತಿರಲಿಲ್ಲ. ಕಾಲಲ್ಲಿಯಂತೂ ಮೆಟ್ಟು ಇರಲೇ ಇಲ್ಲ. ಸಂಜೆಗೆ ೮ ಘಂಟೆಗೆ ತಿರುಗಿ ಮನೆ ಸೇರುತ್ತಿದ್ದೆ. ಪುನಃ ಮರುದಿನ ಬೆಳಗ್ಗೆ ಎಂಟು ಘಂಟೆಗೇ ಮನೆಯಿಂದ ಹೊರಬೀಳಬೇಕಾಗುತ್ತಿತ್ತು. ಎಂದೂ ಹೊತ್ತಿಗೆ ಸರಿಯಾಗಿ ಶಾಲೆಗೆ ತಲ್ಪುತ್ತಿರಲಿಲ್ಲ. ರಾತ್ರಿ ಊಟ ಮಾಡಿ ಚಿಮಣೀ ಬುಡ್ಡಿಯ ಮುಂದೆ ಕೂತು ಓದುತ್ತಿದ್ದೆ. ನಿದ್ದೆ ಯಾವಾಗ ಬರುತ್ತಿತ್ತೊ ತಿಳಿಯುತ್ತಿರಲಿಲ್ಲ.

"ಮೆಟ್ರಿಕ್ಯುಲೇಶನ್ ಅಂತೂ ಪಾಸಾದೆ, ಆದರ ಎರಡನೇ ತರಗತಿಯಲ್ಲಿ. ಕ್ವೀನ್ಸ್ ಕಾಲೇಜಿಗೆ ಪ್ರವೇಶ ಸಿಗುವ ಆಶೆ ಇರಲಿಲ್ಲ. ೧ನೇ ತರಗತಿಯಲ್ಲಿ ಪಾಸಾದವರಿಗಷ್ಟೇ ವಿನಾಶುಲ್ಕ ಶಿಕ್ಷಣದ ವ್ಯವಸ್ಥೆ ಇತ್ತು. ಸುದೈವದಿಂದ, ಅದೇ ವರ್ಷ ಹಿಂದೂ ಕಾಲೇಜು ಪ್ರಾರಂಭವಾಯಿತು. ಈ ಕಾಲೇಜಿನಲ್ಲಿ ಓದುವ ನಿಶ್ಚಯ ಮಾಡಿ ಪ್ರಿನ್ಸಿಪಾಲರನ್ನು ಮನೆಯಲ್ಲೂ ಕಾಲೇಜಿನಲ್ಲೂ

ಭೆಟ್ಟಿಯಾದೆ. ನಿರಾಶೆಯೇ ನನ್ನ ಪಾಲಿಗೆ ಬಂತು. ಫೀ ಹಣದಲ್ಲಿ ರಿಆಯತಿ ದೊರೆಯುವಂತಿರಲಿಲ್ಲ. ಹಳ್ಳಿಯವನಾದ ನಾನು ಪ್ರತಿಷ್ಠಿತ ಜನರ ಪ್ರಶಸ್ತಿಪತ್ರಗಳನ್ನು ದೊರಕಿಸುವ ಬಗೆ ಹೇಗೆ? ಹತಾಶನಾಗದೆ ಪ್ರತಿದಿನ ಪ್ರಯತ್ನಪಟ್ಟೆ. ಠಾಕುರ ಇಂದ್ರನಾರಾಯಣ ಸಿಂಹರು ಒಂದೂ ಕಾಲೇಜಿನ ಪ್ರಬಂಧಕಾರಿಣೀ ಸಭೆಯೊಳಗಿದ್ದರು. ಅವರ ಮುಂದೆ ಹೋಗಿ ಅತ್ತೆ. ಅವರಿಗೆ ದಯೆಯುಂಟಾಯಿತು. ಪ್ರಶಸ್ತಿಪತ್ರ ಕೊಟ್ಟರು. ಆನಂದದಿಂದ ಸಲಿಯುತ್ತ ಮನೆಗೆ ಬಂದೆ. ಮರುದಿನ ಪ್ರಿನ್ಸಿಪಾಲರಿಗೆ ಭೆಟ್ಟಿಯಾಗಬೇಕು. ಅದೇ ದಿನ ಜ್ವರ ಬಂದು ಹಾಸಿಗೆ ಹಿಡಿದುಬಿಟ್ಟೆ. ಒಂದು ತಿಂಗಳನಂತರ ಭೆಟ್ಟಿಯಾದೆ. ತಡವಾದ ಕಾರಣ ವಿಚಾರಿಸಿ "ಅದೇನು ಜಡ್ಡು ?" ಎಂದು ಕೇಳಿದರು. ಈ ಪ್ರಶ್ನೆಗೆ ನಾನು ಸಿದ್ಧನಿರಲಿಲ್ಲ. "Pulpitation of the Heart, Sir" ಎಂದುಬಿಟ್ಟೆ. ಪ್ರವೇಶ ಪತ್ರವನ್ನು ತುಂಬಿಸಿಕೊಂಡು ಸಾಹೇಬರು ಅದರಮೇಲೆ ಬರೆದರು 'ಯೋಗ್ಯತೆಯನ್ನು ಪರೀಕ್ಷಿಸಬೇಕು.'

ಹೊಸ ಸಮಸ್ಯೆ ಉತ್ಪನ್ನವಾಯಿತು. ಎದೆಗುಂದಿದೆ. ಇಂಗ್ಲೀಷಿನ ಹೊರತು ಯಾವ ವಿಷಯದ ಬಗ್ಗೆಯೂ ನನಗೆ ಧೈರ್ಯವಿರಲಿಲ್ಲ. ಬೀಜ-ಗಣಿತ ರೇಖಾಗಣಿತಗಳ ಹೆಸರು ಕೇಳಿದೊಡನೆಯೇ ನನಗೆ ನಡುಗು ಹುಟ್ಟುತ್ತಿತ್ತು. ಇಂಗ್ಲೀಷಿನಲ್ಲಿ ಪಾಸಾಗಿ ಗಣಿತದಲ್ಲಿ ನಾಪಾಸಾದೆ. "ಅಸಂತೋಷ ಜನಕ"ನೆಂಬ ಶರಾ ದೊರಕಿತು. ಪ್ರಿನ್ಸಿಪಾಲರನ್ನು ಪುನಃ ಕಾಣಲಿಲ್ಲ. ಮನೆಯ ದಾರೀ ಹಿಡಿದೆ. ಗಣಿತವು ನನಗೆ ಗೌರೀಶಂಕರ ಶಿಖರವಾಗಿತ್ತು. ಎಂದೂ ಆ ಶಿಖರವನ್ನು ಏರುವದಾಗಲಿಲ್ಲ. ಹೀಗಾಗಿ ಎರಡು ಸಾರೆ ಇಂಟರ ನಾಪಾಸಾದೆ. ಮುಂದೆ ಅದು ಐಚ್ಛಿಕವಾದಾಗ ಬೇರೆ ವಿಷಯ ತೆಗೆದುಕೊಂಡು ಪಾಸಾದೆ. ಅಂತೂ ಆದಿನ ನಿರಾಶನಾಗಿ ಮನೆಗೆ ಬಂದೆ. ಗಣಿತವನ್ನು ಸುಧಾರಿಸಿಕೊಂಡು ಇಂಟರ ಪಾಸಾಗಲೇ ಬೇಕೆಂಬ ಮಹತ್ವಾಕಾಂಕ್ಷೆ ಮಾತ್ರ ಅಳಿಯಲಿಲ್ಲ. ಇದಕ್ಕಾಗಿ ಪಟ್ಟಣದಲ್ಲಿ ಉಳಿಯುವದು ಅಗತ್ಯವಿತ್ತು. ಸರಿ, ಸಂಯೋಗದಿಂದ ಒಬ್ಬ ವಕೀಲರ ಮಗನಿಗೆ ಕಲಿಸುವ ಕೆಲಸವೂ ದೊರಕಿತು. ಪ್ರತಿ ತಿಂಗಳ ಐದು ರೂಪಾಯಿ ಕೊಡುತ್ತಿದ್ದರು. ೩ ರೂಪಾಯಿಗಳಲ್ಲಿ ನನ್ನ ಜೀವನ ಸಾಗಿಸುತ್ತಿದ್ದೆ; ೩ ರೂ. ಮನೆಗೆ ಕೊಡುತ್ತಿದ್ದೆ. ಮನೆಯಿಂದ ಸಲ್ಪ ಪಾತ್ರೆ ತಂದು ವಕೀಲರ ಮನೆಯಲ್ಲೇ ಒಂದು ಕೋಣೆಯಲ್ಲಿದ್ದುಕೊಂಡು

ಒಪ್ಪೊತ್ತು ಖಿಚಡಿ ಬೇಯಿಸಿಕೊಳ್ಳುತ್ತಿದ್ದೆ. ಪಾತ್ರೆ ತಿಕ್ಕಿ ತೊಳೆದು ತಂದು ಇಟ್ಟು ಲಾಯಬ್ರರಿಗೆ ಹೋಗುತ್ತಿದ್ದೆ. ಗಣಿತವು ಬರೀ ನೆವನವಾಗಿತ್ತು. ಓದುವುದು ಕಾದಂಬರಿಗಳನ್ನೇ. "ಚಂದ್ರಕಾಂತಾ ಸಂತತಿ"ಯನ್ನು ಓದಿ ಮುಗಿಸಿದೆ. ಬಂಕಿಮಚಂದ್ರರನ್ನೂ ಸಂಪೂರ್ಣವಾಗಿ ಮುಗಿಸಿದೆ. ಗೆಳೆಯರಿಂದ ಕೈಗಡ ತಂದು ಸಾಗಿಸುತ್ತಿದ್ದೆ. ವಕೀಲ ಸಾಹೇಬರಿಂದ ವೇತನ ಸಿಗುತ್ತಲೆ ಮುಟ್ಟಿಸುತ್ತಿದ್ದೆ. ಉದ್ದರಿ ಕೈಗಡ ಕಷ್ಟಕರವಾಗಿ ೩–೪ ದಿನ ನಿರಾಹಾರವಾಗಿಯೂ ಸಾಗುತ್ತಿದ್ದವು. ಹೀಗೆ ಐದಾರು ತಿಂಗಳು ಕಳೆದವು. ಈ ಮಧ್ಯೆ ಅರಿವೆ ಅಂಗಡಿಯಲ್ಲಿ ಮಾಡಿದ ಎರಡು ಮೂರು ರೂಪಾಯಿಗಳ ಉದ್ದರಿಯನ್ನು ಮೂರು ವರ್ಷಗಳ ನಂತರ ಮುಟ್ಟಿಸಿದೆ. ಮುತ್ತೊಬ್ಬನ ಎಂಟು ಆಣೆಯ ಸಾಲವನ್ನು ೫ ವರ್ಷಗಳ ನಂತರ ತೀರಿಸಿದೆ. ಈ ಸ್ಥಿತಿಯಲ್ಲಿ ಕಂಗೆಟ್ಟು ನಾನು ನೌಕರಿ ಮಾಡಲಿಚ್ಛಿಸುತ್ತಿದ್ದೆ. ಎಲ್ಲಿಂದ ಸಿಗಬೇಕು?

"ಒಮ್ಮೆ ಕೈಯಲ್ಲಿ ದುಡ್ಡುದುಗ್ಗಾಣಿ ಇರಲಿಲ್ಲ. ಕೈಗಡ ಹುಟ್ಟುವಂತಿರಲಿಲ್ಲ,– ಕೇಳಲೂ ನಾಚಿಕೆ. ಗಣಿತವು ನನ್ನ ಕಚ್ಚಾ ವಿಷಯವಾಗಿದ್ದುದರಿಂದ ಚಕ್ರವರ್ತಿ ಗಣಿತ ಗೈಡನ್ನು ಬಹಳ ಯತ್ನದಿಂದ ಕಾದಿಟ್ಟಿದ್ದೆ. ನಿರುಪಾಯನಾಗಿ ೨ರೂ. ಬೆಲೆಯ ಅದನ್ನು ೧ರೂ. ಗೆ ಮಾರಿ ಅಂಗಡಿಯಿಂದ ಹೊರಡುತ್ತಲಿದ್ದೆ. ಅಲ್ಲಿಯೇ ಕುಳಿತಿದ್ದ ಉದ್ದ ಮೀಸೆಯ ಸೌಮ್ಯ ಪುರುಷರೊಬ್ಬರು ನನ್ನನ್ನು ಮಾತನಾಡಿಸಿದರು. ಅವರು ಒಂದು ಸಣ್ಣ ಶಾಲೆಯ ಹೆಡ್ ಮಾಸ್ತರರು. ಅವರಿಗೆ ಸಹಕಾರಿ ಅಧ್ಯಾಪಕರ ಆವಶ್ಯಕತೆ ಇತ್ತು. ನಾನು ಮ್ಯಾಟ್ರಿಕ್ಯಾದವನೆಂಬುದನ್ನು ಕೇಳಿ, ನನಗೆ ನೌಕರಿ ಕೊಟ್ಟರು. ತಿಂಗಳ ವೇತನ ೧೮ ರೂ. ಈಗ ಈ ರಕಮೇ ಕಲ್ಪನೆಗೆ ಮೀರಿ ದೊಡ್ಡದಾಗಿತ್ತು ನನಗೆ. ಆನಂದದಿಂದ ಹೊರಟೆ; ಕಾಲುಗಳು ಭೂಮಿಗೇ ಹತ್ತುತ್ತಲಿರಲಿಲ್ಲ."

ಪ್ರೇಮಚಂದರ ಶೈಕ್ಷಣಿಕ ಜೀವನದ ಅಧ್ಯಾಯವು, ಬಹು ಮಹತ್ವದ ಅಧ್ಯಾಯವೆನ್ನಬಹುದು. ೫೦೦ ಪುಟಗಳ ಅವರ ಶ್ರೇಷ್ಠ ಕಾದಂಬರಿ 'ಗೋದಾನ'ವು ಅವರ ಇಚ್ಛೆ ಮಹತ್ವಾಕಾಂಕ್ಷೆಗಳು. ಮಣ್ಣುಗೂಡುತ್ತಿರುವ ವೇದನಾಪೂರಿತವಾದ ವಿಸ್ತೃತ ಕತೆ ಎನ್ನಬಹುದು. ಗೋದಾನದಲ್ಲಿಯ ಹೋರಿ ಎಂಬ ಒಕ್ಕಲಿಗನ ಅಸಫಲ ಅಸಹಾಯ ಜೀವನದಲ್ಲಿ ಲೇಖಕನ ವೈಯಕ್ತಿಕ- ಜೀವನವೇ ಪ್ರತಿರೂಪ ತಾಳಿ ನಿಂತಿದೆ ಎಂದು ಹೇಳಲಭ್ಯಂತರ

ವಿಲ್ಲ. ಇದೇ ಕಾದಂಬರಿಯಲ್ಲಿ 'ತನ್ನ ಆತ್ಮವು ಮಾಡಲಿಚ್ಛಿಸದಿರುವ ಕೆಲಸವನ್ನೇ ಮಾಡಬೇಕಾಗುತ್ತಿರುವದೇ ಜೀವನದ ಬಹು ದೊಡ್ಡ ಟ್ರೆಜಿಡಿ (Tragedy)' ಎಂಬದಾಗಿ ಪ್ರೇಮಚಂದರು ಮರ್ಮಾಂತಿಕವಾಗಿ ಆಡಿದ್ದಾರೆ. ಅವರ ಬಾಳಿನಲ್ಲಿ ಈ ಟ್ರೇಜಿಡಿಯನ್ನೇ ಆದ್ಯಂತ ಅನುಭವಿಸಿದ್ದಾರೆ.

ಪ್ರೇಮಚಂದರ ಜೀವನದಲ್ಲಿಯ ಕಷ್ಟನಿಷ್ಠುರಗಳ ಅನುಭವ, ತಮ್ಮ ಮತ್ತು ರಾಷ್ಟ್ರದ ಸಮಸ್ಯೆಗಳು, ಅವುಗಳಿಂದ ಉಂಟಾದ ವಿಚಾರಕ್ರಾಂತಿ ಇವುಗಳೇ ಅವರ ಕಥೆಕಾದಂಬರಿಗಳ ರೂಪತಳೆದು ಬಂದಿವೆ ಎಂಬ ಮಾತು ನಿರ್ವಿವಾದ. ಇವರ ಜೀವನ ಮಣ್ಣುಪಾಲಾದದ್ದು ಹೆಚ್ಚಾಗಿ ಮುಲತಾಯಿಯಿಂದ. ಆಕೆ ತನ್ನ ಬಳಗದಲ್ಲಿಯ ಕಪ್ಪು ಕುರೂಪಿಯಾದ ಎಂದೂ ನೋಡದ ಒಂದು ಹೆಣ್ಣನ್ನು—ಹೆಣ್ಣೆಂಬ ಕುಂಟೆಯನ್ನು— ಇವರ ಹದಿನೈದನೆಯ ವಯಸ್ಸಿನಲ್ಲಿಯೇ ಇವರ ಕೊರಳಿಗೆ ಕಟ್ಟಿಬಿಟ್ಟಳು. ಇವರೂ ಹೀಗೆ ಮಣ್ಣುಪಾಲಾಗುತ್ತಿರುವಾಗ ಅತ್ತ ಆ ಯೌವನೆಯು (ಹೆಂಡತಿಯು) ಆಸೆ ಆಕಾಂಕ್ಷೆಗಳೆಲ್ಲ ಮಣ್ಣುಪಾಲಾಗುತ್ತಿದ್ದವು. "ಅಲಗ್ಯೋಝಾ" ಕಥೆಯಲ್ಲಿ ಪನೆಯು ಇವರ ವಿಮಾತೆಯೆಂದು ಕಲ್ಪಿಸುವದಾದರೆ, ಪ್ರೇಮಚಂದರ ಹೆಂಡತಿಯೇ ಮುನಿಯಾಳ ರೂಪದಲ್ಲಿ ಚಿತ್ರಿತಳಾಗಿರುವಳೆಂದರೆ ಅತಿಶಯೋಕ್ತಿ ಆಗಲಾರದು.

"ಹಾಸಿಗೆ ಇದ್ದಷ್ಟು ಕಾಲು ಚಾಚು" ಎಂಬ ಮಾತು ಪ್ರೇಮಚಂದರ ಬಾಳಿನಲ್ಲಿ ಸಾರ್ಥಕತೆ ಪಡೆದಿದೆ. ಮಾತ್ರವಲ್ಲ, ತನ್ನವರಿಗಾಗಿ ಸ್ವ-ಸುಖತ್ಯಾಗ ಕಷ್ಟಸಹಿಷ್ಣುತೆ ಇವರ ಸ್ವಭಾವ ವಿಶೇಷವೇ ಆಗಿದೆ. ಐದು ರೂಪಾಯಿಗಳಿಸುತ್ತಿದ್ದರೆ ತಾವು ಉಪವಾಸ ವನವಾಸ ಅನುಭವಿಸುತ್ತ ಮೂರು ರೂಪಾಯಿ ಮನೆಗೆ ಕಳಿಸುತ್ತಿದ್ದರು: ಮಾಸ್ತರರಾಗಿ ೧೮ ರೂ. ಸಂಪಾದಿಸುವಾಗ ಅರ್ಧಕ್ಕಿಂತ ಹೆಚ್ಚಾಗಿ ಮನೆಗೆ ಕೊಟ್ಟು ಉಳಿದಷ್ಟರಲ್ಲಿಯೇ ಹೇಗೋ ಕಾಲಯಾಪನೆ ಮಾಡುತ್ತಿದ್ದರು. ಇದೇ ಅವರ ಜೀವನ ಸಂದೇಶವನ್ನು "ಕೈಗಡದ ಕೈಗಡಿಯಾಳ" ಎಂಬ ಕತೆ ಬೀರುತ್ತಿದೆ. National Economy ಯ ಪಾಠವನ್ನು ಈ ಮಾಸ್ತರರಿಂದ ಕಲಿಯಬೇಕು.

**ಶಿಕ್ಷಕ.**— ಪ್ರೇಮಚಂದರು ಶಿಕ್ಷಕರೇನೋ ಆಗಿದ್ದರು. ಆದರೆ ಶಿಕ್ಷಕವೃತ್ತಿಯಿಂದ ಸಂತುಷ್ಟರಾಗಿದ್ದಿಲ್ಲ. ವಿರೋಧಿ ಪರಿಸ್ಥಿತಿಗಳು ಅವರನ್ನು ಶಿಕ್ಷಕ-

ರನ್ನಾಗಿ ಮಾಡಿದ್ದವು. ಈ ನೌಕರಿಯಲ್ಲಿ ಎಂತಹ ಮಾನಸಿಕ ಕಷ್ಟಗಳಿಗೆ ಒಗ್ಗಿಕೊಂಡು ಇರಬೇಕಾಗುತ್ತದೆ, ಅವನ ಜೀವ ಅಸಹಾಯ ಸ್ಥಿತಿಯಲ್ಲಿ ಹೇಗೆ ಚಡಪಡಿಸುತ್ತದೆ ಎಂಬುದನ್ನು "ಹೋಲೀಕೀ ಛುಟ್ಟೀ" (ಹೋಳಿಯ ರಜೆ) ಎಂಬ ಕತೆಯಲ್ಲಿ ಸಮರ್ಥವಾಗಿ ಮತ್ತು ಮಾರ್ಮಿಕವಾಗಿ ರೇಖಿಸಿದ್ದಾರೆ.

"ಶಾಲೆ ನನ್ನ ಮನೆಯಿಂದ ೧೧ ಮೈಲಿನಮೇಲೆ. ನಮ್ಮ ಹೆಡ್ ಮಾಸ್ತರರಿಗೆ ಬಿಡುವಿನ ದಿನಗಳಲ್ಲಿಯೂ ಹುಡುಗರಿಗೆ ಕಲಿಸುವ ಹಂಬಲ. ಎಪ್ರಿಲ್‌ದಲ್ಲಿ ವಾರ್ಷಿಕ ಪರೀಕ್ಷೆ ಇದ್ದರೂ ಈಗಿನಿಂದಲೂ 'ಹಾಯರ್ ಹಾಯರ್' ನಡೆಸಿದ್ದರು. ಸೋಮವತೀ ಅಮಾವಾಸ್ಯೆ ಬಂದು ಹೋಯಿತು, ಶಿವರಾತ್ರಿಯೂ ಬಂದು ಹಿಂದಾಯಿತು. ಈ ಸೂಟಿಯ ದಿನಗಳಲ್ಲಿ ಮನೆಗೆ ಹೋಗಲು ಬಿಡುವೇ ಸಿಕ್ಕಲಿಲ್ಲ. ಹೋಳಿಹಬ್ಬದ ರಜಾ ದಿನಗಳು ಬಂದವು. ಈಗ ಹೋಗಲೇಬೇಕೆಂದು ಮೊದಲಾಗಿಯೇ ಹೆಡ್ ಮಾಸ್ತರರಿಗೆ ಹೇಳಿಟ್ಟಿದ್ದೆ. ಹೆಡ್ ಮಾಸ್ತರರು ನನಗೆ ಬಗೆಬಗೆಯಾಗಿ ತಿಳಿಸಿಹೇಳಿದರು— "ಇನ್ನೂ ಅರಿಯದ ಹುಡುಗ ನೀನು. ನೌಕರೀ ಎಂದರೆ ಏನೆಂತ ಗೊತ್ತಿಲ್ಲ. ನೌಕರಿ ಸಿಗುವದೇ ಕಠಿಣ; ಸಿಕ್ಕರೂ ಕಾಯ್ದುಕೊಂಡುಹೋಗುವದು ಕಠಿಣ. ಎಪ್ರಿಲ್‌ದಲ್ಲಿ ಪರೀಕ್ಷೆ ಬಂದಿದೆ. ಮೂರು ನಾಲ್ಕು ದಿನ ಕಲಿಸುವದನ್ನು ನಿಲ್ಲಿಸಿದರೆ ಎಷ್ಟು ಹುಡುಗರು ಪಾಸಾಗುವರೊ! ವಿಚಾರ ಮಾಡು. ಪರೀಕ್ಷೆಯ ನಂತರದ ಸೂಟಿಯಲ್ಲಿ ಹೋಗುವೆಯಂತೆ...." ಈ ಉಪದೇಶದ ಹಾಗೂ ಅಂಜಿಕೆಯ ಪರಿಣಾಮ ನನ್ನಮೇಲೆ ಆಗಲಿಲ್ಲ, ಸೂಟಿ ಆಗುತ್ತಲೇ ಹೊರಟು ಎದ್ದುಬಿಟ್ಟೆ—ಅವರ ಭೆಟ್ಟಿಗೆ ಸಹ ಹೋಗಲಿಲ್ಲ. ಹೋದರೆ ಒಂದಿಲ್ಲ ಒಂದು ಕೆಲಸವಿದ್ದೇ ಇರುತ್ತದೆ.— 'ಹಾಜರಿಯಲ್ಲಿ ಫೀ ತುಂಬಿ, ಸರಾಸರಿ ತೆಗೆ, ಕಾಪಿಗಳನ್ನು ತಿದ್ದಿಡು, ಅವನ್ನೆಲ್ಲ ಕೂಡಿಸಿ ಸರಿಯಾಗಿ ಹೊಂದಿಸು,' ಇತ್ಯಾದಿ ಇತ್ಯಾದಿ ಇದು ನನ್ನ ಕೊನೆಯ ಯಾತ್ರೆಯೋ ಎಂಬಂತೆ ಹೊರಟೇ ಬಿಟ್ಟೆ."

ಜೀವನ ಸಂಘರ್ಷದಲ್ಲಿಯೇ ಶಿಕ್ಷಣವನ್ನು ಮುಂದುವರಿಸಿದರು. ಸಂಪನ್ನ ಜೀವನವಂತೂ ಅವರಿಗೆ ಆಯುಷ್ಯದಲ್ಲಿಯೇ ದೊರೆಯಲಿಲ್ಲ. ಆದರೆ ತನ್ನ ದೇಶಕ್ಕಾಗಿಯೂ ಜನತೆಗಾಗಿಯೂ ಸಂಪನ್ನತೆಯ ಹಾಗೂ ಸಮೃದ್ಧಿಯ ಚಿತ್ರಗಳನ್ನು ಕಾಣುತ್ತಿದ್ದರು. ಈ ಸ್ವಪ್ನಗಳನ್ನು ಯಥಾರ್ಥ ಮಾಡಲೋಸುಗ

ಜೀವನವೆಲ್ಲ ಪರಿಶ್ರಮಪಟ್ಟರು. ಪ್ರಾಥಮಿಕ ಶಾಲೆಯ ನೌಕರೀ ಮಾಡುತ್ತಲೇ ಎರಡು ಸಾರೆ ಇಂಟರ್ ಪರೀಕ್ಷೆಗೆ ಕುಳಿತು ನಪಾಸಾದರು. ಎರಡು-ಮೂರು ವರ್ಷ ಸರ್ವಿಸ ಆದ ಮೇಲೆ ೧೯೦೫ ರಲ್ಲಿ ಅಲಹಾಬಾದ ಟ್ರೇನಿಂಗಕಾಲೇಜಿಗೆ ಸೇರಿ ಟ್ರೇನಿಂಗ ಪಡೆಯುತ್ತ ಶಿಕ್ಷಣ ಮುಂದುವರಿಸಿದರು. ಅಲ್ಲಿಯ ಪ್ರಿನ್ಸಿಪಾಲರೂ ಇವರನ್ನು ಬಹುವಾಗಿ ಪ್ರೀತಿಸುತ್ತಿದ್ದರು. ಆದರಿಂದ ಇವರಿಗೆ ಟ್ರೇನಿಂಗ ಕಾಲೇಜದ ಮಾಡಲ್‌ಸ್ಕೂಲಿನ ಹೆಡ್ ಮಾಸ್ತರಿಕೆ ಲಭಿಸಿತು. ಜ್ಯೂನಿಯರ್ ಇಂಗ್ಲಿಷ್ ಟೀಚರ್ಸ ಸರ್ಟಿಫಿಕೇಟ ಪರೀಕ್ಷೆಯನ್ನು ಮೇಲು ದರ್ಜೆಯಲ್ಲಿ ಉತ್ತೀರ್ಣರಾದರೂ ಆ ಸರ್ಟಿಫಿಕೇಟಿನಲ್ಲಿ ಗಣಿತ ಕಲಿಸಲಿಕ್ಕೆ ಅನರ್ಹರೆಂಬ ಶರಾ ಇದ್ದೇ ಇತ್ತು! ಅವರಿಗೆ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದುವ ದೆಂದರೆ ಜೀವನವನ್ನು ಸಫಲ ಮಾಡಿಕೊಳ್ಳುವದೇ ಹೊರತು 'ಪರೀಕ್ಷೆಗಾಗಿ ಪರೀಕ್ಷೆ' ಎಂಬದು ಗೊತ್ತಿರಲಿಲ್ಲ. ೧೯೧೯ರಲ್ಲಿ ಗೋರಖಪುರದಲ್ಲಿ ಶಿಕ್ಷಕರಾಗುವ ಕಾಲಕ್ಕೆ ಅಲಹಾಬಾದ ವಿಶ್ವವಿದ್ಯಾಲಯದ ಬಿ. ಎ. ಪರೀಕ್ಷೆಯನ್ನು ದ್ವಿತೀಯ ಶ್ರೇಣಿಯಲ್ಲಿ ಉತ್ತೀರ್ಣರಾದರು.

ಹೀಗೆ ಮೇಲ್ಪಂಕ್ತಿಯ ಪದವೀಧರರಾದರೂ ಇವರ ಉಡಿಗೆತೊಡಿಗೆ ಹಾಗೂ ಇರುವಿಕೆ ತೀರ ಸಾದಾ. ಸ್ವಭಾವ ಹಾಗೂ ಸದಾಚರಣೆ ಅಕೃತ್ರಿಮ, ಆಡಂಬರರಹಿತ. ಸಹೃದಯತೆಯು ಇವರ ಸ್ವಭಾವ ಗುಣವಾಗಿತ್ತು. ಒಮ್ಮೆ ಹಿಂದೀ ಸಾಹಿತ್ಯದ ಪ್ರಸಿದ್ಧ ಲೇಖಕರಾದ ಜೈನೇಂದ್ರಜೀ ಅವರು ಪ್ರೇಮಚಂದರನ್ನು ಕಾಣಲು ಬಂದರು. ಧೋತರವನ್ನುಟ್ಟು ಶರ್ಟನ್ನು ಧರಿಸಿದ ಬಾಚದ ಕೂದಲಿನ ವ್ಯಕ್ತಿಯೊಂದು ಅವರನ್ನು ಆದರದಿಂದ ಕುಳ್ಳಿರಿಸಿ, ಅವರ ಸ್ನಾನದ ವ್ಯವಸ್ಥೆ ಮಾಡಲು ಮನೆಯೊಳಗೆ ಹೋಯಿತು. ಜೈನೇಂದ್ರ ಕುಮಾರರು ಪ್ರೇಮಚಂದರ ಹಿರಿಯ ಮಗ ಶ್ರೀಪತರಾಯರನ್ನು ಕೇಳಿದರು– "ಪ್ರೇಮಚಂದರೆಲ್ಲಿದ್ದಾರೆ ?" "ತಮ್ಮನ್ನು ಕೂಡ್ರಿಸಿ ಹೋದವರು ಪ್ರೇಮಚಂದರೇ" ಎಂದು ಉತ್ತರ ಬಂದಿತು. ಜೈನೇಂದ್ರ ಕುಮಾರರು ಚಕಿತರಾದರು.

ಅನ್ಯಾಯವು ಪ್ರೇಮಚಂದರಿಗೆ ಲವಲೇಶವೂ ಸಹನವಾಗುತ್ತಿರಲಿಲ್ಲ. ನೌಕರರೊಡನೆಯೂ ಅತಿ ನಮ್ರತೆಯಿಂದ ನಡಕೊಳ್ಳುತ್ತಿದ್ದರು. ನೌಕರರೆಂದರೆ ತನ್ನ ಕುಟುಂಬದ ಒಂದು ವ್ಯಕ್ತಿಯೆಂದು ಅವರ ಭಾವನೆ. ಆದರಿಂದಾಗಿ

ಆಳುಮಕ್ಕಳಿಗೆ ಕೆಲಸ ಹೇಳದೆ ತಾವೇ ಮಾಡುತ್ತಿದ್ದರು. ಆ ಬಗ್ಗೆ ಹೆಂಡತಿ ಶಿವರಾಣೀದೇವಿ ವಾದಿಸಿದರೆ, “ ನೌಕರರನ್ನು ಇಟ್ಟುಕೊಳ್ಳುವ ಕಾಲ ಎಷ್ಟು ದಿನವಿವರುವೆಂದು ಯಾರಿಗೆ ಗೊತ್ತು ? ಮುಂದೆ ನನ್ನ ಕೆಲಸವನ್ನು ನಾನೇ ಮಾಡಿಕೊಳ್ಳುವ ರೂಢಿ ಬೇಡವೇ ? ” ಎನ್ನುವರು.

ಬಹಳ ಓದುವದು ಅವರಿಗೆ ಚಟವಾಗಿಬಿಟ್ಟಿತ್ತು. ಪುರಾಣ ಕತೆಗಳೆಂದರೆ ಜೀವ. ಇತಿಹಾಸವನ್ನು ಸಹ ಒಂದು ವಿಶಿಷ್ಟ ದೃಷ್ಟಿಕೋನದಿಂದ ಬಹು ಪ್ರೀತಿಯಿಂದ ಓದುತ್ತಿದ್ದರು. ಆಲೋಚನಾಶಕ್ತಿಯೂ ಪ್ರಖರವಾಗಿತ್ತು.

ಟ್ರೇನಿಂಗ್ ಪರೀಕ್ಷೆ ಪಾಸಾದಮೇಲೆ ಮಾಧ್ಯಮಿಕ ಶಾಲೆಯ ಮುಖ್ಯಾಧ್ಯಾಪಕರಾದರು. ಈ ಹೊತ್ತಿಗೆ ಬಾಲ್ಯಕಾಲದ ಚಪಲತೆಯು ಪೂರ್ಣ ಮಾಯವಾಗಿತ್ತು. ಜೀವನ ಹಾಗೂ ಪರಿಸ್ಥಿತಿಗಳನ್ನು ಸಂಪೂರ್ಣವಾಗಿ ಅರಿತಿದ್ದರು. ಮತ್ತು ಶಿಕ್ಷಕನಾಗಿಯೇ ಜೀವನವನ್ನು ಮುಂದುವರಿಸುವದು ಸಾಧ್ಯವಿದೆ ಎಂಬುದು ಮನವರಿಕೆಯಾಗಿತ್ತು. ಅವರ ಇದೇ ವಿಚಾರವು “ ಕರ್ಮಭೂಮಿಯ ” ನಾಯಕ ಅಮರಕಾಂತನ ಬಾಯಿಂದ ಹೊರಟಿದೆ.

“ ನಾನು ಈವರೆಗೆ ಸುಮ್ಮನೆ ಶಿಕ್ಷಣದ ಹಿಂದೆ ಬಿದ್ದೆ. ಸ್ಕೂಲ-ಕಾಲೇಜಿಗಳಿಂದ ದೂರ ಉಳಿದೂ ಸಹ ಮನುಷ್ಯನು ಎಷ್ಟೋ ವಿಷಯಗಳನ್ನು ತಿಳಿಕೊಳ್ಳಬಹುದು. ”

**ಸಾಹಿತ್ಯ ಸಾಧನೆ:—** “ವೇದನೆ-ಅನುರಾಗ-ಅಭಿರುಚಿ ಉಳ್ಳವರೂ, ವಿಚಾರವಂತರೂ ಬರೆಯುತ್ತಾರೆ. ಆದರೆ ಐಶ್ವರ್ಯ-ಭೋಗ-ವಿಲಾಸದಲ್ಲಿಯೇ ಜೀವನದ ಧ್ಯೇಯವನ್ನು ಕಾಣುವವರು ಏನು ಬರೆಯಲಾರರು ?” ಎಂದು ಒಂದೆಡೆ ಪ್ರೇಮಚಂದರು ಹೇಳಿದ್ದಾರೆ.

ಉತ್ತಮ ಲೇಖಕನಲ್ಲಿ ಇರಬೇಕಾದ ಜೀವಾಳಗುಣ ಯಾವದೆಂಬದನ್ನು ಪ್ರೇಮಚಂದರ ಜೀವನದಲ್ಲಿಯ ಒಂದು ಸುಂದರ ಸಂದರ್ಭದಿಂದಲೇ ನಾವರಿಯಬಹುದು. ಅವರ ಹೆಂಡತಿ ಶಿವರಾಣೀದೇವಿ ಹೇಳಿದ್ದಾರೆ. “ ನಾನು ಕಷ್ಟಪಟ್ಟು ಕೆಲ ರೂಪಾಯಿ ಕೂಡಿಸಿಟ್ಟಿದ್ದೆ. ಅವರ ಹರಕ ಕೋಟನ್ನು ನೋಡಿ ಹೊಸದನ್ನು ಹೊಲಿಸಲು ಆ ರೂಪಾಯಿ ಕೊಟ್ಟೆ. ಆದರೆ ಅವರು ಅದನ್ನು

ಪ್ರೆಸ್ಸಿನ ಕೆಲಸಗಾರರಿಗೆ ಹಂಚಿ ಕೊಟ್ಟುಬಿಟ್ಟರು. ಕೇಳಿದರೆ 'ಸಹೃದಯ ನಲ್ಲದ ಮನುಷ್ಯ ಉತ್ತಮ ಲೇಖಕನೆಂದೂ ಆಗಲಾರ' ಎಂದು ನುಡಿದರು."

ಕಲ್ಪಿತ ಪಾತ್ರಗಳಿಂದ ತುಂಬಿದ 'ತಿಲಸ್ಮೀ ಹೋಶರುಬಾ' ಹಾಗೂ 'ಚಂದ್ರಕಾಂತಾ ಸಂತತಿ' ಇವು ಪ್ರೇಮಚಂದರನ್ನು ನಿಷ್ಠುರ ವಿರೋಧೀ ವಿಷಮ ಪರಿಸ್ಥಿತಿಗಳೊಡನೆ ಹೋರಾಡಲು ಹುರಿದುಂಬಿಸಿದವು. ಅಲ್ಲದೆ ಅವರು ತಮ್ಮ ಸಮಯದ ಪರಿಸ್ಥಿತಿಯ ಉಷ್ಣತೆಯನ್ನೂ ಅರಿತಿದ್ದರು.

ಪ್ರೇಮಚಂದರ ಸಾಹಿತ್ಯಕೃಷಿ ಆರಂಭವಾದದ್ದು ಉರ್ದುವಿನಲ್ಲಿ. ಆಗ ಪ್ರತಾಪಚಂದ್ರ ಎಂಬ ಹೆಸರಿನಿಂದ ಬರೆಯುತ್ತಿದ್ದರು. 'ಯಮಾನಾ' ಎಂಬ ಉರ್ದುಪತ್ರಿಕೆ ಅವರ ಕೃಷಿಕ್ಷೇತ್ರವಾಗಿತ್ತು. ೧೯೦೧ ರಲ್ಲಿ ಕಾದಂಬರಿ ಲೇಖಕರಾಗಿ ಬೆಳಗಿದರು. ಅನಂತರ ೧೯೦೭ರಲ್ಲಿ ಕತೆಗಾರರಾಗಿ ಪ್ರಖ್ಯಾತಿ ಪಡೆದರು. ೧೯೦೫ರಲ್ಲಿ ಅವರು ವಿಶಿಷ್ಟ ಸಾಹಿತ್ಯಿಕ ಜೀವನವು ಕಾನಪೂರದಲ್ಲಿ ಪ್ರಾರಂಭವಾಯಿತು. ಅಂದಿನಿಂದ ಅವರು ತಮ್ಮ ಕೊನೆಯ ದಿನಗಳವರೆಗೂ ಬರೆಯುತ್ತಲೇ ಇದ್ದರು. ವಿಪುಲವಾದ ಮತ್ತು ಪ್ರಭಾವಿಯಾದ ಸೇವೆ ಸಲ್ಲಿಸಿ ಹಿಂದೀ ಸಾಹಿತ್ಯ ಸಮ್ರಾಟರೆಂದು ಹೆಸರಾದರು.

ಕಾನಪೂರದಿಂದ ಅವರಿಗೆ ಮಹೋದೆಗೆ ವರ್ಗವಾಯಿತು. ಅಲ್ಲಿಯೂ ೬ ವರ್ಷಗಳವರೆಗೆ ಸಾಹಿತ್ಯದೇವಿಯ ಆರಾಧನೆಯನ್ನು ನಡೆಸಿದರು. ಎಷ್ಟೋ ಕಥೆಗಳು ಬೆಳಕಿಗೆ ಬಂದವು. ದೇಶದಲ್ಲಿ ರಾನಡೆ, ತಿಲಕ ಹಾಗೂ ಲಾಲಾ ಲಜಪತರಾಯರ ರಾಷ್ಟ್ರೀಯತ್ವದ ಬೆಳಕು ಬೀಳಲು ಪ್ರಾರಂಭವಾಗಿತ್ತು. ಪ್ರೇಮಚಂದರು ಈ ಬೆಳಕನ್ನು ಬಾಳಿನಲ್ಲಿ ಪಳಗಿಸಿಕೊಂಡರು. ಸಾಹಿತ್ಯ ದಲ್ಲಿ ಪ್ರಕಾಶಿಸಿದರು. ಸಾಹಿತಿಯು ತನ್ನ ಸಮಕಾಲೀನ ಪರಿಸ್ಥಿತಿಗಳಿಂದ ಮುಂದೆ ಹೋಗಲಾರನಾದರೂ ಪರಿಸ್ಥಿತಿಗಳೊಡನೆ ಹೋಗಲೇ ಬೇಕು. ಇದನ್ನರಿತ ಪ್ರೇಮಚಂದರು ತಮ್ಮ ಆ ಕಾಲದ ಕತೆಗಳಲ್ಲಿ ದೇಶಪ್ರೇಮದ ಭಾವನೆಗಳನ್ನು ತುಂಬಾ ತುಂಬಲು ಪ್ರಯತ್ನಿಸಿದರು. ಸಫಲರೂ ಆದರು. ದೇಶಪ್ರೇಮದಿಂದ ತುಂಬಿ ತುಳುಕುವ "ವರದಾನ" ಕಾದಂಬರಿಯು ನಿಜ ವಾಗಿಯೂ ದೇಶಕ್ಕೆ ಸಲ್ಲಿಸಿದ ವರದಾನ. ೧೯೦೫ ರಲ್ಲಿ ಪ್ರಕಾಶಿತವಾದ ಒಂದು ಕತೆಯ ಹೆಸರು "ಜಗತ್ತಿನ ಬಹುಮೂಲ್ಯರತ್ನ." ಈ ಕತೆಯಲ್ಲಿ ದೇಶಪ್ರೇಮ

ತಿಳಿಸುವದು ಅವರ ಧ್ಯೇಯವಾಗಿರಲಿಲ್ಲ. ಅಳುವು ಅಕರ್ಮಣ್ಯತೆಯ ಲಕ್ಷಣ. ಅವರ ಪಾತ್ರಗಳೂ ಕೂಡ ಇದನ್ನೇ ಪಳಗಿಸಿಕೊಂಡಿವೆ. ಹೋರಿ, ಗೋಬರ, ಧನಿಯಾ' ಝುನಿಯಾ. ಮುಂತಾದ ಪಾತ್ರಗಳು ಅನೇಕ ಕಷ್ಟಗಳನ್ನು ಭೋಗಿಸುತ್ತಿದ್ದರೂ ನಗುತ್ತಲಿವೆ. ಜೀವನ ಸಂಘರ್ಷದಲ್ಲಿಯೇ ಅದಾವದೋ ಅರಿಯದ ಲೋಕಕ್ಕೆ ಧಾವಿಸುತ್ತಿವೆ.

**ಅವರ ವ್ಯಕ್ತಿತ್ವ ಹಾಗೂ ನಿರೂಪಣ ಶಕ್ತಿ:—** ಪ್ರೇಮಚಂದರು ಅತೀ ಸಾದಾ ಜೀವಿ. ಈ ಜೀವನದ ಕಲ್ಪನೆಯೂ ಕೂಡ ಯಾರಿಗೂ ಬರಲಾರದು. ಸಾದಾ ಒಕ್ಕಲಿಗರ ಪ್ರತಿಬಿಂಬವೇ ಪ್ರೇಮಚಂದರಾಗಿದ್ದರು. ಅಹಂಕಾರವು ಸ್ವಲ್ಪವೂ ಇರಲಿಲ್ಲ, ಆದರೆ ಸ್ವಾಭಿಮಾನ ಕಳಕೊಂಡಿದ್ದಿಲ್ಲ. ಒಂದು ದಿನ ಅವರು ತಮ್ಮ ಮನೆಯಲ್ಲಿ ವರ್ತಮಾನ ಪತ್ರ ಓದುತ್ತ ಕುಳಿತಿದ್ದರು. ಶಾಲೆಯ ಇನಸ್ಪೆಕ್ಟರರು ಕಾರಿನಲ್ಲಿ ಇವರ ಮನೆಯ ಮುಂದೆಯೇ ಹಾದು ಹೋದರು. ಪ್ರೇಮಚಂದರು ಅವರನ್ನು ನೋಡಿದರೂ ಎದ್ದು ಹೋಗಿ ನಮಸ್ಕರಿಸಲಿಲ್ಲ. ಆ ಸಾಹೇಬರು ಮುಂದೆ ಹೋಗಿ ಕಾರು ನಿಲ್ಲಿಸಿ ಕರೆಕಳಿಸಿದರು.

ಸಾಹೇಬ:— ನಿನ್ನ ಸಾಹೇಬರು ನಿನ್ನ ಮನೆಯೆದುರಿಗೆ ಹಾದು ಹೋದರೂ ನಮಸ್ಕರಿಸಲಿಲ್ಲವೇಕೆ?

ಪ್ರೇಮಚಂದ:— ನಾನು ಶಾಲೆಯಲ್ಲಿ ಮಾತ್ರ ನೌಕರ. ನನ್ನ ಮನೆಯಲ್ಲಿ ನಾನು ಅರಸನಿರುವೆ. ಈ ನಿಮ್ಮ ಪ್ರಶ್ನೆಗಾಗಿ ನಿಮ್ಮ ಮೇಲೆ ಕಾಯದೆಯಂತೆ ಕ್ರಮ ಏಕೆ ಕೈಕೊಳ್ಳಬಾರದು?

ಸಾಹೇಬರು ಬೆಪ್ಪಾಗಿ ಮುಂದೆ ಸಾಗಿದರು.

ಜೀವನದ ಎಲ್ಲ ಕಟು ಅನುಭವಗಳನ್ನು ಸಹಿಸುತ್ತ ಪ್ರಸನ್ನಚಿತ್ತರಾಗಿ ಮುನ್ನಡೆಯಿಡುವದೇ ಅವರ ವೈಶಿಷ್ಟ್ಯ. ಆಡಂಬರ ಅರಿಯರು. ದೇಶಕ್ಕಾದ ಸ್ಥಿತಿಗಾಗಿ ಯಾವಾಗಲೂ ತಳಮಳಗೊಳ್ಳುತ್ತಿದ್ದರು. ಒಮ್ಮೊಮ್ಮೆ ಈ ವಿಚಾರದಲ್ಲಿಯೇ ಅವರು ಮೈಮರೆಯುತ್ತಿದ್ದರು. ಸಂಪೂರ್ಣ ದೇಶಭಕ್ತರಾಗಿದ್ದರು. ತಾವು ಮಧ್ಯವರ್ತಿ ಸಮಾಜದಲ್ಲಿ ಹುಟ್ಟಿ ಬೆಳೆದವರಾದುದರಿಂದ ಮಧ್ಯವರ್ತಿ ಸಮಾಜದ ಸುಖದುಃಖಗಳನ್ನು ಚನ್ನಾಗಿ ಅರಿತಿದ್ದರು. ಆ ಚಿತ್ರವೇ ಸಾಹಿ

ತ್ಯದಲ್ಲಿ ಅನೇಕ ತೆರನಾಗಿ ರೂಪಗೊಂಡಿದೆ. ಒಳಗೊಂದು ಹೊರಗೊಂದು ಅವರಿಗೆ ಗೊತ್ತಿರಲಿಲ್ಲ. ಸಾಹಿತ್ಯವು ಬಾಳಿನಲ್ಲಿ ಸಮರಸವಾಗಿ ಪ್ರವೇಶಿಸಿತ್ತು. ಮನುಷ್ಯತೆಯ ಉಪಾಸನೆಯೇ ಈ ಕಲಾಕಾರನ ಧ್ಯೇಯವಾಗಿತ್ತು. ಹಿಂದು ಮುಂದುಗಳನ್ನು ಕುರಿತು ಚಿಂತಿಸದೆ—ಆಶೆಗೊಳಗಾಗದೆ ಇಂದಿನ ಯುಗ ಧರ್ಮದಲ್ಲಿ ಆಳವಾದ ಶ್ರದ್ಧೆ ಇರುವ ಇಂಥ ಕಲಾಕಾರರು ಅತಿ ವಿರಳರು.

ಪ್ರೇಮಚಂದರು ಸ್ವತಃ ದೀನತೆ, ದರಿದ್ರತೆ, ದಾಸ್ಯವನ್ನು ಭೋಗಿಸಿದ್ದರು. ಹಾಗೂ ಅವರು ತಮ್ಮ ಸಮಯದ ಸಾಮಾಜಿಕ ಆರ್ಥಿಕ ಹಾಗೂ ರಾಜನೈತಿಕ ಪರಿಸ್ಥಿತಿಗಳೊಡನೆ ಹೋರಾಡಬೇಕಾಯಿತು. ಗ್ರಾಮ್ಯ ಜೀವನದ ಭೀಭತ್ಸತೆ ಹಾಗೂ ಪಟ್ಟಣದ ಜೀವನದ ವಿಡಂಬನೆಗಳನ್ನು ಅವರು ಹೃದಯದ ಕಣ್ಣುಗಳಿಂದ ನೋಡಿದ್ದರು. ಭಾರತೀಯ ಸಂಸ್ಕೃತಿಯ ಕಲ್ಯಾಣಕ್ಕಾಗಿ ಪ್ರೇಮಚಂದರು ದರಿದ್ರ ನಾರಾಯಣನನ್ನು ಪೂಜಿಸಿದರು. ಕಂಗೆಟ್ಟ, ದಾಸ್ಯದಲ್ಲಿ ಬಳಲಿದ ಸಮಾಜದ ಚೀತ್ಕಾರವೇ ಅವರ ಸಾಹಿತ್ಯದ ಜೀವಾಳ.

ಕಾದಂಬರಿ ಸಮ್ರಾಟರಾದರೂ ಸಾಹಿತ್ಯಜೀವನದ ಎಲ್ಲ ಕ್ಷೇತ್ರಗಳನ್ನು ಸ್ಪರ್ಶಿಸುವ, ಧಾರ್ಮಿಕ, ರಾಜನೈತಿಕ ಹಾಗೂ ಸಾಮಾಜಿಕ ಜೀವನ ಚಿತ್ರಿಸುವ, ಮುನ್ನೂರು ನಾನೂರು ಕಥೆಗಳನ್ನು ಬರೆದರು. "ಪ್ರೇಮಕೀ ವೇದೀ, ಕರ್ಬಲಾ, ಸಂಗ್ರಾಮ" ಈ ಮೂರು ನಾಟಕಗಳನ್ನು ಬರೆದರು. ಸೃಷ್ಟಿವಾದದ ಆರಂಭ, ಫಿಸಾನೇ ಆಝಾದ, ಸುಖದಾಸ, ಅಹಂಕಾರ, ಹಡತಾಲ, ಚಾಂದೀ ಕೀ ಡಿಬಿಯಾ ಮತ್ತು ನ್ಯಾಯ ಎಂಬ ಕೃತಿಗಳು ಅನುವಾದಗೊಂಡು ಹಿಂದೀಗೆ ಬಂದವು. ಮನಮೋದಕ, ಕುತ್ತೇಕೀ ಕಹಾನೀ, ಜಂಗಲಕೀ ಕಹಾನಿಯಾಂ, ದುರ್ಗಾದಾಸ, ರಾಮಚರ್ಚಾ ಮುಂತಾದ ಕೃತಿಗಳನ್ನು ಬಾಲಕರಿಗೋಸುಗ ರಚಿಸಿದರು. ಇವೆಲ್ಲ ರಚನೆಗಳಲ್ಲಿಯೂ ಮನೋವೈಜ್ಞಾನಿಕ ದೃಷ್ಟಿಕೋನ ಹಾಗೂ ಸಹಜ-ಸ್ವಾಭಾವಿಕ ಸರಲತೆಗಳು ಕಂಡು ಬರದಿರಲಾರವು. 'ಕುಛ ವಿಚಾರ ಭಾಗ ೧ ಹಾಗೂ ೨'– 'ಕಲಮ್ ತಲವಾ್ ಔರ ತ್ಯಾಗ' ಹಾಗೂ 'ಮೌ. ಶೇಖಸಾದೀ' ಮುಂತಾದವು ಅವರ ಭಾಷಣದ ಸಂಗ್ರಹಗಳಾಗಿವೆ. ಇವಲ್ಲದೆ ಜಾಗರಣ (ಸಾಪ್ತಾಹಿತ) ಮತ್ತು ಹಂಸ (ಮಾಸಿಕ) ಎಂಬವುಗಳ ಸಂಪಾದಕರಾಗಿ ಸಮಯಕ್ಕನುಗುಣವಾಗಿ ಮಾರ್ಗ

ದರ್ಶನ ಮಾಡಿದರು. ಜೀವನದ ಇಷ್ಟು ಅಸ್ತವ್ಯಸ್ತ ಪರಿಸ್ಥಿತಿಯಲ್ಲಿಯೂ ಸಾಹಿತ್ಯದ ಇಷ್ಟು ಸೇವೆ ಮಾಡಿದ್ದು ನಿಜವಾಗಿಯೂ ಮಹದಾಶ್ಚರ್ಯ. ಅಲ್ಲದೆ ಫಿಲ್ಮ ಜಗತ್ತನ್ನು ಅವರು ನೋಡಿ ಬಂದರು. ಮಿಲ್ ಮಜದೂರ ಎಂಬ ಅವರ ಚಿತ್ರವೂ ಸಾಕಷ್ಟು ಲೋಕಪ್ರಿಯವಾಯಿತು. ಆದರೆ ಆ ಚಿತ್ರವು ಸೆನ್ಸಾರ ಬೋರ್ಡಿನ ಅವಕೃಪೆಯಿಂದ ಮೂಲರೂಪದಲ್ಲಿ ಜನತೆಯ ಮುಂದೆ ಬರಲಿಲ್ಲ.

ಅವರನ್ನು ಕಾದಂಬರಿ ಸಾಮ್ರಾಜ್ಯದ ಸಮ್ರಾಟರೆಂದು ಏಕೆ ಕರೆಯುತ್ತಿದ್ದರು? ಎಂಬುದನ್ನು ವಿಚಾರ ಮಾಡುವಾಗ ಕಾಲಾನುಕ್ರಮದಿಂದ ಅವರ ಕಾದಂಬರಿಗಳ ಕುರಿತು ಚರ್ಚಿಸಬೇಕಾಗಿದೆ. ಅವರ ಕೃತಿಗಳು ಹೀಗಿವೆ :

ಪ್ರೇಮಾ, ವರದಾನ (೧೯೦೨), ಪ್ರತಿಜ್ಞಾ (೧೯೦೬), ಸೇವಾಸದನ (೧೯೧೬), ಪ್ರೇಮಾಶ್ರಮ (೧೯೨೨), ನಿರ್ಮಲಾ (೧೯೨೩), ರಂಗಭೂಮಿ (೧೯೨೫), ಕಾಯಕಲ್ಪ (೧೯೨೮), ಗಬನ್ (೧೯೩೧), ಕರ್ಮಭೂಮಿ (೧೯೩೨), ಗೋದಾನ ಮತ್ತು ಮಂಗಲಸೂತ್ರ (೧೯೩೬), ಕೊನೆಯದನ್ನು ಅಪೂರ್ಣ ಬಿಟ್ಟು ಹೋದರು).

ಪ್ರೇಮಚಂದರು ತಮ್ಮ ಕಾದಂಬರಿಗಳಲ್ಲಿ ಗಾಂಧಿವಾದೀ ಭಾರತವನ್ನು ಚಿತ್ರಿಸಿದ್ದಾರೆ. ಇದಕ್ಕೊಂದು ಕಾರಣವೂ ಇದೆ. ಪೂಜ್ಯ ಗಾಂಧೀಜಿಯವರ ದರ್ಶನದಿಂದ ಪ್ರೇಮಚಂದರು ಪುನೀತರಾದುದಲ್ಲದೆ, ಸಾಹಿತ್ಯದ ಬೆಳಕನ್ನೂ ಪ್ರಜ್ವಲಿಸಿಕೊಂಡರು. ಗುಲಾಮಗಿರಿಯ ಪಾಶವನ್ನು ಕಿತ್ತಿ ಬಿಸಾಡಿದರು.

"........ಸನ್ ೧೯೨೦ ರ ಘಟನೆ. ಅಸಹಕಾರ ಚಳವಳಿಯು ರಭಸದಿಂದ ಸಾಗಿತ್ತು. ಜಾಲಿಯಾನವಾಲಾಬಾಗದ ಹತ್ಯಾಕಾಂಡದಿಂದ ದೇಶವೆಲ್ಲ ಕ್ಷೋಭೆಗೊಂಡಿತ್ತು. ಆ ಕಾಲಕ್ಕೆ ಮಹಾತ್ಮಾ ಗಾಂಧಿಯವರು ಗೋರಖಪುರದಲ್ಲಿ ಸಂಚರಿಸುತ್ತಿದ್ದರು. ಗಾಜೀಮಿಯಾ ಮೈದಾನಿನಲ್ಲಿ ಅವರ ಭಾಷಣ ಏರ್ಪಡಿಸಲಾಗಿತ್ತು. ಎರಡು ಲಕ್ಷಕ್ಕಿಂತ ಹೆಚ್ಚು ಜನ ಕೂಡಿತ್ತು. ಹಳ್ಳಿ ಹಳ್ಳಿಯಿಂದ ಜನ ಒಳ್ಳೇ ಭಕ್ತಿಯಿಂದ ಬಂದು ನೆರೆದಿತ್ತು. ಇಂಥ ಸಮಾರಂಭವನ್ನು ನಾನು ಜೀವನದಲ್ಲಿ ಎಂದೂ ನೋಡಿದ್ದಿಲ್ಲ. ನನ್ನಂಥ ಮೃತನೂ

ಕೂಡ ಮಹಾತ್ಮರ ದರ್ಶನಪ್ರಭಾವದಿಂದ ಚೇತನೆ ಪಡೆದ ನಾನು ನನ್ನ ೨೦ ವರ್ಷದಿಂದ ಜತನ ಮಾಡಿಕೊಂಡು ಬಂದ ನೌಕರಿಗೆ ರಾಜೀನಾಮೆ ಕೊಟ್ಟೆ."

ಸನ್ ೧೯೩೧ ಮತ್ತು ಸನ್ ೧೯೩೦ ರ ಸ್ವಾತಂತ್ರ್ಯ ಸಂಗ್ರಾಮಗಳ ಪರಿಣಾಮ ಸ್ವರೂಪಗಳೋ ಎಂಬಂತೆ ಪ್ರೇಮಚಂದರ ಕಾದಂಬರಿಗಳು ಪಾತ್ರಗಳನ್ನು ನಿರ್ಮಿಸಿವೆ. ವಿಷಯ ಹಾಗೂ ವಸ್ತುವಿನ್ಯಾಸವೂ ಸಾಮಾಜಿಕ ಪ್ರತಿಕ್ರಿಯೆಯನ್ನು ಕಂಡಿವೆ. ಹೆಚ್ಚೇನು ಹೇಳುವದು? ಭವಿಷ್ಯದಲ್ಲಿ ಯಾವನಾದರೂ ಸ್ವಾತಂತ್ರ್ಯ ಸಂಗ್ರಾಮದ ಇತಿಹಾಸವನ್ನು ಬರೆಯಲಿಚ್ಛಿಸಿದರೆ ಪ್ರೇಮಚಂದರ ಸಂಪೂರ್ಣ ಕಾದಂಬರಿಗಳನ್ನು ಓದಿದಾಗ, ಸಂಪೂರ್ಣ ಸ್ಫೂರ್ತಿಯನ್ನು ಪಡೆಯಬಹುದು. ಅವರ ಕಾದಂಬರಿಗಳು ನಮ್ಮ ರಾಷ್ಟ್ರೀಯ ಸಂಗ್ರಾಮದ ಭಾಷ್ಯಗಳಾಗಿವೆ. ಕಾದಂಬರಿಗಳ ನಾಯಕರು ರಾಷ್ಟ್ರೀಯ ಉನ್ನಾಯಕರೇ ಎಂದು ಭಾಸವಾಗದೇ ಇರದು. ದೇಶಪ್ರೇಮದಿಂದ ಪ್ರೇರಿತರಾಗಿ ಆಂದೋಲನದಲ್ಲಿ ಧುಮುಕದಿದ್ದರೆ, ಬಡವರ ಪ್ರತಿನಿಧಿಗಳಾದ ಪ್ರೇಮಚಂದರು ಹೀಗೆ ಬರೆಯುವದು ಎಂದೂ ಶಕ್ಯವಿರಲಿಲ್ಲ. "ಕೈ ಹಿಡಿದು ನಡೆಸೆನ್ನನು" ಎಂಬ ಜನತೆಯ ಕೂಗನ್ನು ಕೇಳಿದರೋ ಎಂಬಂತೆ ಕೈಹಿಡಿದು ನಡೆಸಿದರು.

ಪ್ರೇಮಚಂದರ ಮೇಲೆ ಆರ್ಯಸಮಾಜದ ಪ್ರಭಾವವು ಬಹಳವಾಗಿದ್ದಿತು. ಪ್ರಾಚೀನ ಸಂಸ್ಕೃತಿಯ ಉದ್ಧಾರಕ್ಕಾಗಿ ಒಂದೇಸವನೆ ಪ್ರಯತ್ನಿಸುತ್ತಿದ್ದರು. ವಿಧವಾವಿವಾಹ, ವೃದ್ಧವಿವಾಹ, ಬಾಲವಿವಾಹ, ವರದಕ್ಷಿಣೆ, ವೇಶ್ಯಾಜೀವನ ಮುಂತಾದ ಜಾತೀಯ ಹಾಗೂ ರಾಷ್ಟ್ರೀಯ ಪತನವನ್ನು ಕಂಡು ರಾಷ್ಟ್ರೀಯ ಉತ್ಥಾನದ ಕಡೆಗೆ ರಾಷ್ಟ್ರವನ್ನು ಒಯ್ಯಲು ಅವರು ಹವ್ಯಾಸಪಟ್ಟರು.

ಉಪನ್ಯಾಸವನ್ನೀಯುವ ಸುಧಾರಕರಿರಲಿಲ್ಲ. ತಮಗೆ ಸತ್ಯವೆನಿಸಿದ್ದನ್ನು ಮಾಡಿಯೇಬಿಡುವವರು. ಬಾಲವಿಧವೆಯಾದ ಶಿವರಾನೀದೇವಿಯು ಕೂಡ ಮದುವೆ ಮಾಡಿಕೊಂಡು ಸಮಾಜದ ಮುಂದೆ ತಮ್ಮ ನೈಜ ಆದರ್ಶವನ್ನು ಇಟ್ಟರು. ಶಿವರಾನೀ ದೇವಿಯೇ ಅವರ ಮುಂದಿನ ಜೀವನದ ಸಂಪೂರ್ಣ

ಸ್ಫೂರ್ತಿಯೆನ್ನಬಹುದು. ಹೀಗೆ ಜೀವನ ಹಾಗೂ ಸಾಹಿತ್ಯದಲ್ಲಿ ಒಮ್ಮೆಗಿಲ್ಲೇ ಕ್ರಾಂತಿಯ ಕಹಳೆಯನ್ನು ಅವರು ಊದಿದರು. ಅವರನ್ನು ಚನ್ನಾಗಿ ತಿಳ-ಕೊಳ್ಳುವದಾದರೆ ಮನೆಯಲ್ಲಿ ಅವರ ಇರುವಿಕೆಯನ್ನು ಅರಿಯುವದು ಅವಶ್ಯ.

**ಪ್ರೇಮಚಂದ.— ಮನೆಯಲ್ಲಿ** (ವ್ಯಕ್ತಿ ಚಿತ್ರ):— **ತೆಳ್ಳಗಿನ** ಮನುಷ್ಯರು, ಎಲವುಗಳು ಅಗಲ. ಒಂದು ಕಾಲಕ್ಕೆ ಈ ಶರೀರದ ಮೇಲೆ ತುಂಬಾ ಮಾಂಸವಿತ್ತು. ತುಂಬಿದ ಪೈಕಟ್ಟಿನ ರಾಜಪುತ್ರರಾಗಿ ಕಾಣುತ್ತಿದ್ದರು. ಪಗಡಿ ಕಟ್ಟಿದ ಗಡುತರ ಮೀಸೆಯ ವ್ಯಕ್ತಿತ್ವ ಯಾರೂ ಮರೆಯುವಂತಿಲ್ಲ. ೧೪ನೇ ವರ್ಷ ಒಂದೇ ಸವನೆ ಪೀಡಿಸಿದ ಉದರ (ಆಮಾಂಶ) ರೋಗವು ಅವರನ್ನು ಸಂಪೂರ್ಣ ಒಣಗಿಸಿತು. ಎಲುವುಗಳನ್ನು ಮಾತ್ರ ಹಿಂಡಲು ಈ ಬೇನೆಗೆ ಆಗಲಿಲ್ಲ. ಅಸ್ಥಿಪಂಜರವು ಕೊನೆಯ ಗಳಿಗೆಯವರೆಗೆ ಅವರನ್ನು ಕಾಯಿತು. ಈ ಅಸ್ಥಿಪಂಜರವು ಅವರು ಸಹಿಸಿದ ಬೇನೆ, ಬಡತನ, ಚಿಂತೆ ಹಾಗೂ ತೊಂದರೆಗಳ ಪ್ರತೀಕವೆನ್ನುವಂತೆ ಉಳಿದಿತ್ತು.

ರೀತಿ-ರಿವಾಜು, ಉಡುಪು-ತೊಡುಪು, ಮಾತುಕತೆಗಳಲ್ಲಿ ಅವರು ಸಾದಾತನದ ಪ್ರತಿಮೆಯಂತೆ ಕಾಣುತ್ತಿದ್ದರು. "ತಮ್ಮ ಜೀವನವು ಸಪಾಟಾದ ಸಮತಲ ಬೈಲು" ಎಂದು ವಿಷಾದದಿಂದ ಅಂದಿದ್ದಾರೆ. ಆದರೂ ಅದರಲ್ಲಿ ವಿಶಾಲವಾದ ಭೂಮಿಯ ಸೌಂದರ್ಯವನ್ನು ಕಂಡು ಅವರು ನಲಿದಿದ್ದಾರೆ.

ಲೇಖನ ಕಾರ್ಯದ ಕೋಣೆಯೂ ಆಡಂಬರರಹಿತವಾಗಿಯೇ ಇತ್ತು. ಸ್ಫೂರ್ತಿಗಾಗಿ ಸಮಯ ಕಾಯುತ್ತಿರಲಿಲ್ಲ. ಬೇನೆ ಬಂದು ಹಾಸಿಗೆ ಹಿಡಿದಾಗಲೂ ಲೆಕ್ಕಣಿಕೆ ಹಿಡಿದೇ ಇರುವದು ಮರೆಯುವಂತಿಲ್ಲ. ಒಂದು ಡೆಸ್ಕನ್ನು ಮುಂದೆ ಇಟ್ಟುಕೊಂಡು ಕೂತ ಪ್ರೇಮಚಂದರು ಯಾವದೇ ಸ್ಥಿತಿಯಲ್ಲಿ ಬರೆಯುತ್ತಲೆ ಉಳಿಯುತ್ತಿದ್ದರು. ಬೆಳಗುಮುಂಜಾನೆಯ ನಾಲ್ಕು ಘಂಟೆಗೆ ಉಂಟಾದ ಸ್ಫೂರ್ತಿಯು ಜೀವನದ ಮರುಭೂಮಿಯಲ್ಲಿ ಬತ್ತಿಹೋಗದೆ ಹಾಗೆಯೇ ಅವಿರಲಗತಿಯಿಂದ ರಾತ್ರಿಯ ೧೦ ಘಂಟೆಯವರೆಗೂ ಉಳಿದೇ ಉಳಿಯುತ್ತಿತ್ತು. ಜಡ್ಡಿನ ಅತ್ಯಂತ ಘಾತಕ ಸ್ಥಿತಿಯಲ್ಲಿಯೂ ಬರೆಯುತ್ತಿ

ದ್ದಾಗ ಶಿವರಾಣೀದೇವಿಯು ಎಷ್ಟೋಸಾರೆ ಲೆಕ್ಕಣಿಕೆ ಹಾಗೂ ಮಸಿಕುಡಿಕೆ ಕಸಿದು ತೆಗೆದಿಟ್ಟದ್ದೂ ಉಂಟು. ಅನೇಕ ಜೀವನ ಕೋಲಾಹಲಗಳಲ್ಲಿಯೂ ಬರೆಯುತ್ತಲೇ ಅವರು ನಾದಬ್ರಹ್ಮವನ್ನು ಶಬ್ದಬ್ರಹ್ಮನಲ್ಲಿ ಲೀನಗೊಳಿಸಿ ಅನ್ಯೋನ್ಯತೆಯನ್ನು ಪಡೆದು ಮೈಮರೆಯುವದು ಅವರ ಸ್ವಭಾವ. ಇದರ ಪ್ರತಿಕ್ರಿಯೆಯೋ ಎನ್ನುವಂತೆ ಓದುಗರೂ ಅದೆಷ್ಟೋ ಸ್ಥಳಗಳಲ್ಲಿ ಸ್ವಾಭಾವಿಕ ವಾಗಿ ಮೈಮರೆಯುವರು. ಈ ಒಲವಿನ ಕಾಲಕ್ಕೂ—ನಲುಮೆಯ ಜನ ರಿಗೆ ಸಾಮಾನ್ಯರಿಗೂ ಕೂಡ ಭೆಟ್ಟಿಗೆ ಆತಂಕವಿರಲಿಲ್ಲ. ಭೆಟ್ಟಿಗೆ ಯಾರಾ ದರೂ ಬಂದರೆ ಟಾಕು ಬದಿಗಿಟ್ಟು ಮಾತಾಡಲೂ ಯಾವಾಗಲೂ ಸಿದ್ಧರೇ. ಅವರು ಹೋದೊಡನೆ ಲೆಕ್ಕಣಿಕೆಯು ಕೈಯಲ್ಲಿ ಸ್ವಾಭಾವಿಕವಾಗಿಯೇ ಬಂದು ಬಿಡುತ್ತಿತ್ತು. ವಿಚಾರಸರಣಿಯು ನಿಂತಲ್ಲಿಂದ ಮುಂದೆ ಅಬಾಧವಾಗಿ ಸಾಗು ತ್ತಿತ್ತು. ಭಾವನಾಪ್ರವಾಹವೂ ಮುಗ್ಗರಿಸುತ್ತಿರಲಿಲ್ಲ. ಅಬಾಧವಾಗಿ ಸಾಗು-ತ್ತಲೇ ಇರುತ್ತಿತ್ತು.

ನಸುಕಿನಲ್ಲಿ ಎದ್ದು ತಿರುಗಾಡಲು ಹೋಗುವದು ಅವರ ಚಟ. ಒಂದೇ ಸವನೆ ಕುಳಿತು ಬರೆಯುವ ಕೆಲಸ ಮಾಡುತ್ತಿರುವ ವ್ಯಕ್ತಿಗೆ ಇದು ಆವಶ್ಯಕ. ಒಮ್ಮೊಮ್ಮೆ ನ್ಯಾಹರಿಯನ್ನು ತೀರಿಸಿ ಕೂತರೆ ಇಡೀ ದಿನವೆಲ್ಲ ಸಾಹಿತ್ಯ ದೇವಿಯ ಆರಾಧನೆಯಲ್ಲಿ ಕಳೆಯುತ್ತಿತ್ತು. ಊಟ ಮಾಡಿ ಸ್ವಲ್ಪ ವಿಶ್ರಾಂತಿ ತೆಗೊಳ್ಳುವದೆಂದರೆ, ಅಡ್ಡಾಗಿ ಓದುತ್ತಿರುವದೇ ಆಗಿತ್ತು. ಸಂಜೆಯ ಹೊತ್ತಿಗೆ ತಮ್ಮ ಮಕ್ಕಳೊಡನೆ ಸ್ವಲ್ಪ ಹೊತ್ತು ಆಡಿ, ಅವರಿಗೆ ಹೊಸ ಆಟ ಕಲಿಸಿ ಆನಂದಪಡುತ್ತಿದ್ದರು.

ತಮ್ಮ ಮನೆಯ ಬಗ್ಗೆ ಪ್ರೇಮಚಂದರಿಗೆ ಬಹು ಪ್ರೇಮ. “ಮನೆಯು ಎಷ್ಟೋ ಪವಿತ್ರ, ಕೋಮಲ ಹಾಗೂ ಮನೋಹರ ಸ್ಮೃತಿಗಳನ್ನು ಜಾಗ್ರತ ಮಾಡುತ್ತದೆ. ಮನೆಯು ಪ್ರೇಮದ ಕ್ರೀಡೋದ್ಯಾನ. ಪ್ರೇಮವು ತಪಶ್ಚರ್ಯ ಮಾಡಿ ಈ ‘ಮನೆ’ಯೆಂಬ ವರವನ್ನು ಪಡೆಯಿತು.”

ಪ್ರೇಮಚಂದರನ್ನು ಕೈಹಿಡಿದು ಮುನ್ನಡೆಸಿದ ದೇವಿಯು ಅವರ ಪ್ರೀತಿಯ ಪತ್ನಿ ಶಿವರಾಣೀದೇವಿಯೇ. ಗಾಂಧೀಜೀಯವರ ಭೆಟ್ಟಿಯ ಪ್ರಭಾವ

ವಾಗಿ ಪ್ರೇಮಚಂದರು ನೌಕರಿಗೆ ರಾಜೀನಾಮೆ ಕೊಡುವ ಪ್ರಸಂಗ ಬಂದಾಗ ಶಿವರಾಣಿದೇವಿಯು ಕೊಟ್ಟ ಸ್ಫೂರ್ತಿ ಹೀಗಿದೆ.

"ತಾವು ಚಿಂತೆ ಮಾಡುವ ಕಾರಣವೇನು? ಜೀವನವಂತೂ ಹೇಗೋ ಹೇಗೋ ಸಾಗುತ್ತಿದೆ; ಸಾಗುವದು. ದೇಶವೇ ತಮ್ಮ ತ್ಯಾಗವನ್ನು ನಿರೀಕ್ಷಿಸು ತ್ತಿರುವಾಗ ತಾವು ಹಿಂದೆ ಮುಂದೆ ನೋಡುವದು ಸರಿಯಲ್ಲ." ಈ ರಾಜೀ-ನಾಮೆ ಕೊಟ್ಟ ಕೆಲದಿನಗಳಲ್ಲಿಯೇ ಅಲಿವರದ ರಾಜನು ಪ್ರೇಮಚಂದರಿಗೆ ಪ್ರತಿ ತಿಂಗಳಿಗೆ ೪೦೦ರೂ. ಗಳ ವೇತನ, ಇರಲು ಬಂಗಲೆ, ಹಾಗು ತಿರುಗಾಡಲು ಕಾರು ಕೊಡುವ ವಚನ ಕೊಟ್ಟು ಕರೆಸಿದ. ಅವರಿಗೆ "ನನ್ನನ್ನು ಕ್ಷಮಿಸಿರಿ. ನನ್ನ ಕಾದಂಬರಿ ಕತೆಗಳನ್ನು ಓದಿ ತಾವು ಆನಂದಪಡುತ್ತಿರುವ ಸಮಾಚಾರ ದಿಂದಲೇ ನನಗೆ ಮಹದಾನಂದವಾಗಿದೆ." ಎಂದು ಉತ್ತರ ಬರೆದರು.

ಬಡವರ ಪ್ರತಿನಿಧಿಯು ಭೋಗವಿಲಾಸಗಳ ಅರಮನೆಯನ್ನು ಪ್ರವೇಶಿಸು ವದು ಎಂತು?

ಪ್ರೇಮಚಂದರಿಗೆ ಮೂರು ಮಕ್ಕಳು. ಹುಡುಗಿಯ ಹೆಸರು ಕಮಲಾ ಗೋರಖಪುರಕ್ಕೆ ಹೋದಾಗ ಹಿರೇ ಹುಡುಗ ಶ್ರೀಪತರಾಯ ಹುಟ್ಟಿದ. ಅಲ್ಲಿರುವಾಗಲೇ ಅವರ ಮತ್ತೊಂದು ಸಂತಾನವು ಹುಟ್ಟಿ ಸತ್ತಿತು. ಇದರಿಂದ ಬಹಳ ವೇದನೆಯಾದರೂ ಹೆಂಡತಿಗೆ ತೋರ್ಪಡಿಸಲಿಲ್ಲ. ದುಃಖ ನುಂಗಿ ಕೊಂಡು ಸಮಾಧಾನ ಹೇಳುತ್ತಲೇ ಉಳಿದರು. ೪೮ ವರ್ಷಗಳ ಮೇಲೆ ಮತ್ತೊಬ್ಬ ಮಗ ಹುಟ್ಟಿದ. ಅವನೇ ಅಮೃತರಾಯ. ಮಕ್ಕಳನ್ನು ಅವರು ಬಹುವಾಗಿ ಪ್ರೀತಿಸುತ್ತಿದ್ದರು. ಅವರೊಡನೆ ಆಡಿ ಜೀವನದ ದುಃಖಗಳನ್ನು ಮರೆಯುತ್ತಿದ್ದರು.

ಸಹೃದಯತೆ ಹಾಗೂ ಶಿಷ್ಟಾಚಾರ. ಅವರ ಸಾಹಿತ್ಯದ ಜೀವಾಳ. ದೊಡ್ಡವರು, ಚಿಕ್ಕವರು, ಮುದುಕರು, ಬಾಲಕರು, ಬಡವರು, ಬಲ್ಲಿದರು ಎಲ್ಲರೂ ಅವರಿಗೆ ತನ್ನವರಾಗಿಯೇ ಕಾಣುತ್ತಿದ್ದರು. ಕೊನೆಯ ಗಳಿಗೆಯವರೆಗೆ ಅವರ ವಿಮಾತೆ ತನ್ನ ಹಟಮಾರಿ ಸ್ವಭಾವವನ್ನು ಬಿಡಲಿಲ್ಲ. ಆದರೂ ಅವಳನ್ನೂ ಅವರ ಮಗನನ್ನೂ ತಮ್ಮ ಪ್ರಾಣವನ್ನು ಪಣಕ್ಕೆ ಹಚ್ಚಿ ರಕ್ಷಿಸಿದರು.

ಕಕ್ಕನ ಮಗನೆಂತೂ ಹಳೆಯ ವಿಚಾರದವನಿದ್ದ. ಅವನು ಶಿವರಾಣೀದೇವಿ ಯನ್ನು ಬಹು ಕಠೋರವಾಗಿ ಬೆದರಿಸುತ್ತಿದ್ದ. ಆದರೂ ಅವರು ಅದನ್ನು ಸಹಿಸಿಕೊಳ್ಳುತ್ತಿದ್ದರು.

ಶಿವರಾಣೀದೇವಿಯವರು ಹೀಗೆ ಅಂದಿದ್ದಾರೆ:—

ಆವರು ಬೆಳಿಗ್ಗೆ ೫ ಗಂಟೆಗೆ ಏಳುತ್ತಿದ್ದರು. ಏನಾದರೂ ಸ್ವಲ್ಪ ತಿಂದು ಬರೆಯಲು ಕೂಡ್ರುತ್ತಿದ್ದರು. ಆವರು ತಮ್ಮನ್ನು ಲೇಖಕ ಎಂತಲ್ಲ— ಕೂಲಿಯವನೆಂತ ತಿಳಿಯುತ್ತಿದ್ದರು. ಆರಾಮ ಕೂಡ್ರುವ ಚಟ ಅವರಿಗೆ ಇರಲೇ ಇಲ್ಲ. ೯ಗಂಟೆಯ ವರೆಗೆ ಬರೆಯುತ್ತಲೇ ಇರುತ್ತಿದ್ದರು. ಆಮೇಲೆ ಎದ್ದು ನಿತ್ಯವಿಧಿ ಮುಗಿಸಿ ಶಾಲೆಗೆ ಹೋಗುತ್ತಿದ್ದರು. ೩—೪ ಗಂಟೆಗೆ ತಿರುಗಿ ಬಂದು ಸ್ವಲ್ಪ ವರ್ತಮಾನಪತ್ರ ತಿರುವಿನೋಡುವದು ಅವರ ಚಟ. ಸಂಜೆಯ ಊಟದ ನಂತರ ಎಷ್ಟೋ ರಾತ್ರಿಯವರೆಗೆ ಓದುತ್ತ ಸಮಯದ ಸದುಪ ಯೋಗವನ್ನು ಮಾಡಿಕೊಳ್ಳುತ್ತಿದ್ದರು.

"ಲೇಖಕ" ಎಂಬ ಕತೆಯಲ್ಲಿ ತಮ್ಮನ್ನೇ ಈ ರೀತಿ ಚಿತ್ರಿಸಿ ಕೊಂಡಿದ್ದಾರೆ:—

"ಪ್ರವೀಣನಿಗೆ ಬರೆಯುವ ರೋಗವು ಯೌವನದಲ್ಲಿಯೇ ಪ್ರಾರಂಭ ವಾಯಿತು. ಈ ರೋಗದಲ್ಲಿಯೇ ಶರೀರವು ಕರಗಿತು, ಆರೋಗ್ಯವೂ ಕರಗಿತು. ವಯಸ್ಸಿನ ೪೦ ರಲ್ಲಿಯೇ ಮುದಿತನ ಕಂಡನು. ಆದರೆ ರೋಗವು ಮಾತ್ರ ಅಸಾಧ್ಯ ರೋಗವಾಗಿತ್ತು. ಸೂರ್ಯೋದಯದಿಂದ ಅರ್ಧ ರಾತ್ರಿಯವರೆಗೆ ಸಾಹಿತ್ಯೋಪಾಸಕನು ಅಂತರ್ಜಗತ್ತಿನಲ್ಲಿ ಮುಳುಗಿರುತ್ತಿದ್ದ. ಜಗತ್ತನ್ನೇ ಮರೆತು ಸಾಹಿತ್ಯದೇವಿಯ ಚರಣಗಳಲ್ಲಿ ಹೃದಯದ ನೈವೇದ್ಯ-ಹೂಗಳನ್ನು ಅರ್ಪಿಸುತ್ತಿದ್ದ. ಆದರೆ ಭಾರತದಲ್ಲಿ ಸರಸ್ವತೀ ಉಪಾಸಕರಿಗೆ ಲಕ್ಷ್ಮಿಯ ತಿರಸ್ಕಾರವು ಇದ್ದೇ ಇದೆ. ಇಬ್ಬರು ದೇವಿಯರನ್ನು ಒಂದೇ ಕಾಲಕ್ಕೆ ಪ್ರಸನ್ನ ಗೊಳಿಸುವದು ಹೇಗೆ?"

ಈ ಮಾತುಗಳಲ್ಲಿ ಸ್ವಯಂ ಪ್ರೇಮಚಂದರು ಸಂಪೂರ್ಣವಾಗಿ ತಮ್ಮ ವ್ಯಕ್ತಿತ್ವವನ್ನು ಬೈಲಿಗೆ ಎಳೆದಿದ್ದಾರೆ.

## ಕಲೆ ಹಾಗೂ ಸಾಹಿತ್ಯ

“ದೀಪದ ಕಾರ್ಯ ಉರಿಯುವದು. ಉರಿಯದ ದೀಪದ ಎಣ್ಣೆ ತುಂಬಿಯೇ ಇರುವದು. ಅದಕ್ಕಾಗಿಯೇ ಸಾಹಿತ್ಯಸೇವೆಗೂ ಸ್ಥೂಲತೆಗೂ ಬದ್ಧ ವೈರತ್ವ.”

“ಸಾಹಿತ್ಯವು ತನ್ನ ಕಾಲದ ಪ್ರತಿಬಿಂಬ. ಯಾವ ಭಾವನೆಗಳು, ವಿಚಾರಗಳು ಜನತೆಯ ಅಂತಃಕರಣವನ್ನು ಮೀಟುವವೋ ಅವೇ ಸಾಹಿತ್ಯವನ್ನು ಪ್ರಭಾವ ಶಾಲಿಯನ್ನಾಗಿ ಮಾಡುತ್ತವೆ.” —ಪ್ರೇಮಚಂದ

ಪ್ರೇಮಚಂದರ ಸಾಹಿತ್ಯವನ್ನು ಓದುವದರಿಂದ ೨೦ ನೇ ಶತಮಾನದ ಮೊದಲಿನ ೩೫–೩೬ ವರ್ಷಗಳ ಸಜೀವ ಇತಿಹಾಸವೇ ನಿರ್ಮಾಣವಾಗಿದೆ ಯೆಂದು ಅನಿಸುವದು. ಪ್ರೇಮಚಂದರ ಸಾಹಿತ್ಯದ ಇತಿಹಾಸವೆಂದರೆ ನಮ್ಮ ದೇಶದ ರಾಜನೈತಿಕ ಹಾಗೂ ಸಾಮಾಜಿಕ ಪರಿವರ್ತನೆಗಳ ಇತಿಹಾಸವೆನ್ನ ಬಹುದು. ಬರೇ ಸಮಕಾಲೀನ ಪರಿಸ್ಥಿತಿಯ ಪ್ರತಿಬಿಂಬ ಮಾತ್ರವಲ್ಲ-ಜೀವನದ ಆಳವಾದ ರೇಖಾಚಿತ್ರಗಳು ಅವರ ಲೇಖನಿಯಿಂದ ಉದ್ಭವಿಸಿದವು. ಗಾಂಧೀಜಿ ಯವರ ವ್ಯಕ್ತಿತ್ವದಿಂದ ಅವರು ಬಹಳವಾಗಿ ಪ್ರಭಾವಿತರಾಗಿದ್ದರು. ಸನ್ ೧೯೩೫ ರಲ್ಲಿ ಹಿಂದೀ ಸಾಹಿತ್ಯ ಪರಿಷತ್ತಿನ ಸಭೆಗೆ ಅವರು ಹೋಗಿದ್ದರು. ಅಲ್ಲಿ ಗಾಂಧೀಜಿಯವರ ಕೂಡ ಆದ ಅವರ ಭೆಟ್ಟಿಯನ್ನು ಕುರಿತು ಶಿವರಾನೀ ದೇವಿಯವರೊಡನೆ ನಡೆಸಿದ ಚರ್ಚೆ ಹೀಗಿದೆ:—

**ಶಿ:—** ಅಂದರೆ ತಾವು ಗಾಂಧೀಜಿಯವರ ಶಿಷ್ಯರಾಗಿಯೇ ಬಿಟ್ಟಿರಿ?

**ಪ್ರೇ:—** ಶಿಷ್ಯರಾಗುವದೆಂದರೆ ಯಾರನ್ನೂ ಪೂಜಿಸುವದೆಂದಲ್ಲ. ಅವರ ಗುಣಗಳನ್ನು ಗ್ರಹಿಸುವದು. ಅವನ್ನು (ಗಾಂಧೀಜಿಯವರ ಆ ಪೂಜ್ಯ ಗುಣ ಗಳನ್ನು) ನನ್ನದನ್ನಾಗಿ ಮಾಡಿಕೊಂಡೇ ಪ್ರೇಮಾಶ್ರಮವನ್ನು ಬರೆದಿರುವೆನು.

**ಶಿ:—** ಇದನ್ನಂತೂ ತಾವು ಮೊದಲಿನಿಂದಲೇ ಬರೆಯುತ್ತಿದ್ದಿರಿ. ಮಹಾತ್ಮಾ ಗಾಂಧಿಯವರ ಮಾತು ಅದರೊಳಗೇನು ವಿಶೇಷ ಬಂದಿತು?

**ಪ್ರೇ:—** ಅಂದರೆ ಅವರು ಮಾಡಬೇಕಾಗಿರುವದನ್ನು ನಾನು ಮುಂದಾ ಗಿಯೇ ಮಾಡಿದೆನಂತಲ್ಲವೇ?

**ಶಿ:—** ಇದೇನು—ತರ್ಕವೇ?

ಪ್ರೇ:— ತರ್ಕವಿತರ್ಕದ ಪ್ರಶ್ನೆಯಲ್ಲ. ಅವರಾದರೂ ಕೂಲಿಕುಂಬಳಿ ಮಾಡುವವರ ಕಲ್ಯಾಣಕ್ಕಾಗಿ ದುಡಿಯುತ್ತಿದ್ದಾರೆ. ನಾನಾದರೂ ಲೆಕ್ಕಣಿಕೆಯ ಸಹಾಯದಿಂದ ಅದನ್ನೇ ನಡೆಸಿದ್ದೇನೆ.

ಅವರು ಗಾಂಧೀಜೀಯವರ ವ್ಯಕ್ತಿತ್ವದಿಂದ ಬಹಳವಾಗಿ ಪ್ರಭಾವಿತರಾಗಿದ್ದರು. ಅವರ ರಾಜನೈತಿಕ ಸಮಸ್ಯೆಗಳಿಂದ ಕೂಡಿಕ ಕಾದಂಬರಿಗಳು ೧೯೨೨ರಿಂದಲೇ ಅಂದರೆ ಪ್ರೇಮಾಶ್ರಮದಿಂದಲೇ ಪ್ರಾರಂಭವಾಗುತ್ತವೆ. ರಂಗಭೂಮಿ, ಕರ್ಮಭೂಮಿ, ಗೋದಾನ ಎಂಬ ಕಾದಂಬರಿಗಳವರೆಗೂ ಇದೇ ಪರಂಪರೆ ಸಾಗುತ್ತದೆ. ಗಾಂಧೀಜೀಯವರು ಕೊಟ್ಟ ಮಂತ್ರ ಅಂದರೆ— "ರಾಜನೈತಿಕ-ದಾಸ್ಯವೇ ನಮ್ಮ ಸಾಮಾಜಿಕ ಪತನಕ್ಕೆ ಕಾರಣ." ಪ್ರೇಮಚಂದರು ಯೋಗ್ಯ ಶಿಷ್ಯನೋಪಾದಿಯಲ್ಲಿ ಈ ಗುರುಮಂತ್ರವನ್ನು ಸೆರಗಿಗೆ ಗಂಟು ಹಾಕಿಕೊಂಡರು. ಪರಿಣಾಮ ಸ್ವರೂಪವಾಗಿ ಮೊಟ್ಟಮೊದಲು ಅವರ ಸೃಷ್ಟಿಯು ಹಳ್ಳಿಗೆ ಹೊರಟಿತು. ಭಾರತೀಯ ನೈಜಸಂಸ್ಕೃತಿಯು ರೂಪಗೊಂಡಿತು. ಹಳ್ಳಿಗಳು ಭಾರತದ ಬೆನ್ನೆಲುಬು ಎಂತ ಗಾಂಧೀಜೀಯವರು ಹಾಕಿಕೊಟ್ಟ ಮಾರ್ಗವನ್ನು ತುಳಿಯುತ್ತ ಮುಷ್ಟಿಯಲ್ಲಿ ಸೃಷ್ಟಿಯನ್ನೇ ತುಂಬಿದರು. ಹಿಂದೂ-ಮುಸ್ಲಿಮ ಐಕ್ಯವನ್ನು ಅವರು ಪ್ರಾಯೋಗಿಕವಾಗಿ ಸಾಧಿಸುತ್ತಿರುವಾಗ ಪ್ರೇಮಚಂದರು ತಮ್ಮ ಸಾಹಿತ್ಯದಿಂದ ರಚನಾತ್ಮಕವಾಗಿ ಸಾಧಿಸಿ ತೋರಿಸಿದರು. ದಲಿತರ ಹಾಗೂ ಅಸ್ಪೃಶ್ಯರ ಉದ್ಧಾರವನ್ನೂ ಬಾಪೂಜಿಯವರ ಪ್ರೇರಣೆಯಿಂದ ತಮ್ಮ ಸಾಹಿತ್ಯದಲ್ಲಿ ಸಂಪೂರ್ಣವಾಗಿ ರೂಪಿಸಿ ಜನತಾ ಜನಾರ್ದನನಿಗಾಗಿ ದುಡಿದರು. ಸ್ತ್ರೀಯರ ಸ್ವಾತಂತ್ರ್ಯಕ್ಕಾಗಿ ಬಾಪೂಜಿಯವರು ಹೆಣಗುವ ಕಾಲಕ್ಕೆ ಪ್ರೇಮಚಂದರು ಭಾರತೀಯ ನಾರಿಯ ತ್ಯಾಗ, ಪ್ರೇಮ ಹಾಗೂ ಬಲಿದಾನದ ತ್ರಿವೇಣೀ ಸಾಹಿತ್ಯ ಪ್ರವಾಹವನ್ನು ರಮ್ಯವಾಗಿ ಹರಿಸಿದರು. ಸೇವಾಸದನದ ಸೇವಾಮೂರ್ತಿ ಸುಮನ ಬಾಯಿಯು ಇದಕ್ಕೆ ಸಾಕ್ಷಿ. ಸೇವಾಸದನ ಪಟ್ಟಣದ ವಾತಾವಾರಣದಿಂದ ಪ್ರೇಮಾಶ್ರಮದಲ್ಲಿ ಗ್ರಾಮೀಣತೆಯ ಕಡೆಗೆ ಹೊರಳಿದರು. ಪ್ರೇಮಚಂದರ ಪ್ರತಿಜ್ಞಾ, ಗಬನ್, ನಿರ್ಮಲಾ ಕಾದಂಬರಿಗಳು ಸ್ತ್ರೀಜೀವನಕ್ಕೆ ಸಂಬಂಧಪಟ್ಟ ಸಂಪೂರ್ಣ ಸಮಸ್ಯೆಗಳ ಬಹು ಅಂಶವನ್ನು ಸಫಲವಾಗಿ ಚಿತ್ರಿಸಿವೆ. ಗೋದಾನದಲ್ಲಿಯಂತೂ

ಹಳ್ಳಿಯೊಳಗಿನ ಸಮಸ್ಯೆಗಳ ಕಠೋರ ರೂಪವನ್ನು ಮಾರ್ಮಿಕವಾಗಿ ಚಿತ್ರಿಸಿ-ದರು. ಒಟ್ಟಾರೆ ಹೇಳುವದಾದರೆ, ಪ್ರೇಮಚಂದರ ಕತೆ ಕಾದಂಬರಿಗಳು ಭಾರತೀಯ ಹಳ್ಳಿಗಳ ಪತನದ ಕೈಗನ್ನಡಿಗಳೆನ್ನಬಹುದು. ಒಂದುಕಡೆ ಶೋಷಣ ಮತ್ತೊಂದು ಕಡೆ ಪೋಷಣ ಎಂದರೇನೆಂಬುದನ್ನು ಈ ಕಾದಂಬರಿಗಳು ಪ್ರತ್ಯಕ್ಷವಾಗಿ ತೋರಿಸಿಕೊಟ್ಟವೆ. ಸ್ವತಃ ಅವರು ಹಳ್ಳಿಗರಾಗಿದ್ದರು. ಅದೇ ಕಾರಣದಿಂದಾಗಿ ಅವರಿಗೆ ಹಳ್ಳಿಗಳೇ, ಅವುಗಳ ವಾಸ್ತವಿಕತೆಗಳೇ ಹೆಚ್ಚು ರುಚಿಸಿದವು. ಅವರ ತೀಕ್ಷ್ಣ ದೃಷ್ಟಿ ಪಥದಿಂದ ಹಳ್ಳಿಯ ಯಾವ ಸಮಸ್ಯೆಯೂ ಅಡಗಿ ಉಳಿಯಲಿಲ್ಲ. ಗೋದಾನ ಕಾದಂಬರಿಯ "ಹೋರಿ" ಒಕ್ಕಲಿಗನಂತೂ ಸ್ವಯಂ ಪ್ರೇಮಚಂದರೇ ಇರುವರು. ಪ್ರೇಮಾಶ್ರಮದ ಪ್ರೇಮಶಂಕರನಂತೂ ಗಾಂಧೀಜೀಯವರ ಪ್ರತೀಕದಂತಿರುವನು. ಕಾಯಾ-ಕಲ್ಪದ ಚಕ್ರಧರನು ಹುತಾತ್ಮಾ ಗಣೇಶಶಂಕರ ವಿದ್ಯಾರ್ಥಿಯೇ ಆಗಿರುವನು. ಜೀವನವನ್ನು ಆಳವಾಗಿ ಅಭ್ಯಾಸಿಸುವದು ಅವರ ಸ್ವಭಾವ. ಆದುದರಿಂದಲೇ ಅವರ ಕಾದಂಬರಿಗಳಲ್ಲಿ ಜೀವನದ ಮನೋವೈಜ್ಞಾನಿಕ ವಿಶ್ಲೇಷಣದ ವ್ಯಾಖ್ಯೆಯು ಸುಂದರವಾಗಿ ಚಿತ್ರಿತವಾಗಿದೆ. ಧರ್ಮದ ಒಣಆಡಂಬರವು ಅವರಿಗೆ ಸೇರುತ್ತಿರಲಿಲ್ಲ. ಆರ್ಥಿಕ ಸಮಸ್ಯೆಯನ್ನೇ ಮೂಲವಾಗಿಟ್ಟುಕೊಂಡು ಜೀವನದ ವ್ಯಥೆ ಚಿಂತೆಗಳನ್ನು ಚಿತ್ರಿಸುವದು ಅವರಿಗೆ ಬಹಳ ಸೇರುತ್ತಿತ್ತು. ಧರ್ಮವಿರಲಿ, ಆಧುನಿಕ-ಶಿಕ್ಷಣವಿರಲಿ, ಸರಕಾರವಿರಲಿ, ಜಮೀಂದಾರೀ ಸಾಹುಕಾರೀ ಸಮಸ್ಯೆಗಳಿರಲಿ, ಪ್ರೇಮದ ಸಮಸ್ಯೆ ಇರಲಿ ಪ್ರೇಮಚಂದರು ಎಲ್ಲವನ್ನೂ ಆಳವಾಗಿ ಅಭ್ಯಾಸಿಸಿ ಸಫಲ ಫೋಟೋಗ್ರಾಫರನಂತೆ ಚಿತ್ರಿಸಿ ಸಮಾಜದ ಮುಂದೆ ಹಿಡಿದಿದ್ದಾರೆ. ಈ ಚಿತ್ರಗಳು ತಮ್ಮ ಪರಿಸ್ಥಿತಿಗಳನ್ನು ತಾವೇ ಹೇಳುತ್ತಿರುವಂತೆ ಭಾಸವಾಗುತ್ತಿವೆ. "ಸಮರ ಯಾತ್ರೆ" ಎಂಬ ಕಥೆಗಳ ಸಮೂಹವಂತೂ ರಾಷ್ಟ್ರೀಯ ಭಾವನೆಯಿಂದ ತುಂಬಿ ತುಳುಕುತ್ತಿದೆ. ಕಲೆಗಾಗಿ ಕಲೆ ಅವರದಲ್ಲ. ಜೀವನಕ್ಕಾಗಿ, ಜೀವನ ವಿಕಾಸಕ್ಕಾಗಿ ಕಲೆ ಎಂಬುದು ಅವರ ಧ್ಯೇಯ. ಯಥಾರ್ಥದಿಂದ ಹೊರಟ ಆದರ್ಶವೇ ಅವರ ಸಾಹಿತ್ಯದ ಜೀವಾಳ. ಸುಧಾರಕ ಪ್ರೇಮಚಂದರು ಸಮಸ್ಯೆಗಳಲ್ಲಿಯೇ ತಮ್ಮ ಸಂಪೂರ್ಣ ಲಕ್ಷ್ಯ ಸೇರಿಸಿ ಪಾತ್ರಗಳನ್ನು ಮೇಲಕ್ಕೆ ಎಬ್ಬಿಸುತ್ತಾರೆ. ಹೀಗೆ ಏಳದ ಪಾತ್ರಗಳು ಮುಳುಗುವವು. ಇಲ್ಲವೆ ಆತ್ಮಹತ್ಯ ಮಾಡಿಕೊಳ್ಳುವವು.

ಕೆಲವು ಪಾತ್ರಗಳು ವಿರೋಧಿ ಪರಿಸ್ಥಿತಿಗಳನ್ನು ಎದುರಿಸಿ ಧೀರೋದಾತ್ತವಾಗಿ ಮುಂದೆ ಸಾಗುವವು, ವಿಕಸಿತಗೊಳ್ಳುವವು.

ಭಾಷೆಯ ವೈಖರಿಯು ಅವರ ವೈಶಿಷ್ಟ್ಯ. ಹಿಂದೀ ಭಾಷೆಯ ಪಡಿಯುಚ್ಛುಗಳ ನಿರ್ಮಾತರೇ ಅವರು. ಪಡೆ-ನುಡಿಗಳು ಮತ್ತು ಗಾದೆಯ ಮಾತುಗಳಂತೂ ಅವರ ಲೆಕ್ಕಣಿಕೆಯ ಪ್ರತಿಭೆಯ ಫಲರೂಪವಾಗಿ ಜನಿಸಿದವು. ಪಾತ್ರೋಚಿತ ಭಾಷೆಯಂತೂ ಅವರ ಅಮರ ವೈಶಿಷ್ಟ್ಯ. ಹಿಂದೂ ಪಾತ್ರಗಳಿಂದ ಸಂಸ್ಕೃತ ಮಿಶ್ರಿತ ಹಿಂದೀಯನ್ನೂ ಮುಸಲ್ಮಾನ ಪಾತ್ರಗಳಿಂದ ಫಾರಸೀ ಅರಬ್ಬೀ ಮಿಶ್ರಿತ ಭಾಷೆಯನ್ನೂ ಮಾತನಾಡಿಸುವದರಿಂದ ಚಿತ್ರಗಳು ಎದ್ದುಕಾಣುವ ಸಜೀವತೆಯನ್ನು ದೊರಕಿಸುತ್ತವೆ. ಹಳ್ಳಿಯ ಭಾಷೆಯಂತೂ ಅವರ ಕೈಚಳಕ. ಪಟ್ಟಣದ ಎಷ್ಟೋ ಶಬ್ದಗಳನ್ನು ತೆಗೆದೊಗೆದು ಅವುಗಳ ಸ್ಥಳದಲ್ಲಿ ಸ್ವಾಭಾವಿಕ ಸೌಂದರ್ಯ ಪರಿಪೂರ್ಣ ಶಬ್ದಗಳನ್ನು ಬಳಸಿಕೊಂಡಿದ್ದಾರೆ. ಉಪಮೆಗಳಂತೂ ಗ್ರಾಮೀಣ ಜೀವನದಿಂದಲೇ ಹೊರಸೂಸುತ್ತವೆ. ಒಮ್ಮೊಮ್ಮೆ ಈ ಉಪಮೆಗಳನ್ನು ಕೊಡುವಾಗ ಅವರ ಭಾಷೆಯು ಕಾವ್ಯದ ಮಟ್ಟಕ್ಕೆ ಏರುವದು. ದೇವಕೀನಂದನ ಖತ್ರೀಯವರ ಉಪನ್ಯಾಸಕ್ಕೆ ಮರುಳಾಗಿ ಜನರು ಹಿಂದೀಯನ್ನು ಕಲಿತರೆ ಪ್ರೇಮಚಂಪಜೀಯವರ ಕಾದಂಬರಿಗೆ ಮರುಳಾಗಿ ಜನರು ಹಿಂದೀ ಸಾಹಿತ್ಯವನ್ನು ಅಭ್ಯಾಸ ಮಾಡುವಂತಾಯಿತು. **ಅವರು ರಾಷ್ಟ್ರಭಾಷೆಯ ಮೊಟ್ಟ ಮೊದಲಿನ ಸಫಲ ಲೇಖಕರು.**

ಅವರ ಕಲೆಯ ಸಾಫಲ್ಯವು ಅವರ ಸಮಸ್ಯಾತ್ಮಕ ಕಾದಂಬರಿಗಳಿಂದಲೋ ಅಥವಾ ಪಡೆನುಡಿಗಳಿಂದ ತುಂಬಿದ ಅಲಂಕೃತ ಭಾಷಾ ಶೈಲಿಯಿಂದಲೋ ಎಂದು ವಿಚಾರ ಮಾಡಿದಾಗ ಕಲೆಗಾಗಿ ಕಲೆ(Art for Arts Sake) ಎಂಬುದು ಅವರ ಧ್ಯೇಯವಾಗಿರಲಿಲ್ಲ. ಅವರ ಕಲೆಯ ಸಫಲತೆ ಅವರ ಜೀವನದಿಂದ ಆಯಿತು. Art for life's Sake ಹೊರ ಹೊಮ್ಮಿದ ಮಾತುಗಳಲ್ಲ ಜೀವನದಿಂದಲೇ ಜೀವನಕ್ಕಾಗಿ ವಿಕಾಸಗೊಂಡವು. ಜನತೆಗಾಗಿ ಸಂಪೂರ್ಣ ಜೀವನವನ್ನು ಹೋಮಮಾಡಿದರು. ತಮ್ಮ ಸಾಹಿತ್ಯವನ್ನು ಕುರಿತು ಅವರು—

“ತಮ್ಮ ತಮ್ಮೊಳಗಿನ ಭೇದಭಾವಗಳನ್ನು ಅಳಿಸಲು ಮಾಡುವ ಪ್ರಯತ್ನಪೂರ್ಣ ಉದ್ಯೋಗಗಳಿಗೆ ಸಾಹಿತ್ಯವೆಂದು ಕರೆಯುತ್ತೇನೆ. ಪೃಥ್ವಿಯ ಅಂತರಾಳದಲ್ಲಿ ಜ್ವಾಲಾಮುಖಿ ಅಡಗಿದೆ. ಮೇಲೆ ಮಾತ್ರ ಸೌಂದರ್ಯ ಆವರಿಸಿದೆ. ವಿಚಾರ ಮತ್ತು ಭಾವನೆಗಳಲ್ಲಿ ವಾಸ್ತವಿಕತೆಯಿಂದ ಬಹುದೂರ ಹೋಗುವದರಿಂದ ನಾವು ಆ ಉಷ್ಣ ಸ್ರೋತಕ್ಕೆ, ಜ್ವಾಲೆಗೆ ತಲ್ಪುತ್ತೇವೆ. ಮತ್ತು ಅದರ ತೀವ್ರ ಕಠೋರ ಪ್ರವಾಹವನ್ನು ಕಾಣುತ್ತೇವೆ.” ಇದಕ್ಕೋಸ್ಕರವೇ ಅವರು ಸಮಾಜದ ಹೊಟ್ಟೆಯೊಳಗಿನ ಜ್ವಾಲಾಮುಖಿಯನ್ನು ಕಂಡರು. ಆದರೆ ಅದು ನಗ್ನಸತ್ಯವಾಗಿರದೆ ಆದರ್ಶೋನ್ಮುಖ ಸತ್ಯವಾಗಿತ್ತು. ಯಥಾರ್ಥದ ನೆಲಗಟ್ಟಿನ ಮೇಲೆ ಆದರ್ಶದ ತಾಜಮಹಲನ್ನು ಅವರು ಕಟ್ಟಿದರು. ಈ ತಾಜಮಹಲು ಪ್ರತಿದಿನವೂ ತನ್ನ ಹೊಸತನ, ಸೌಂದರ್ಯದಿಂದಾಗಿ ಲಕ್ಷೋಪಲಕ್ಷ ಜನರನ್ನು ತನ್ನ ಕಡೆಗೆ ಬರಮಾಡಿಕೊಳ್ಳುತ್ತಿದೆ.

ಈ ಸಾಹಿತ್ಯಕಾರನು ನಮ್ಮ ಪಥಪ್ರದರ್ಶಕ. ನಮ್ಮ ಮಲಗಿದ ಮನುಷ್ಯತ್ವವನ್ನು ಎಚ್ಚರಿಸುವವ. ನಮ್ಮ ದೃಷ್ಟಿಯನ್ನು ವಿಕಸಿತವನ್ನಾಗಿ ಮಾಡಿ ಕೈ ಹಿಡಿದು ನಡೆಸಿದ ಪೂಜ್ಯ ದೇವ. ಕಲೆಯ ರಾಗರಾಗಿಣಿಗಳಲ್ಲಿ ನಮ್ಮನ್ನು ತೇಲಿಸಿದ ಮಹಾನುಭಾವ. ಇಂದಿನದು ತನ್ನದನ್ನಾಗಿ ಮಾಡಿಕೊಂಡು ಮುಂದಿನದನ್ನು ಸ್ಥೂಲವಾಗಿ ತೋರಿಸಿದ. ಆರ್ಯಸಮಾಜ, ಗಾಂಧೀವಾದಗಳ ಪ್ರೇರಣೆಯು ಸುಪ್ತಜಗತ್ತಿನ ಸಾಹಿತ್ಯಸ್ರೋತವಾಗಿ ಅನಂತಧಾರೆಗಳಲ್ಲಿ ಪ್ರವಹಿಸಿದ ಪ್ರಖ್ಯಾತ ವಿಶ್ವಕಲಾಕಾರ. ಇನ್ನು ಹತ್ತು ವರ್ಷ ಅವರು ಜೀವಂತವಾಗಿದ್ದರೆ ಸಾಮ್ಯವಾದದ ಸಫಲ ಚಿತ್ರಗಳನ್ನು ಕೊಡಬಹುದಾಗಿತ್ತು. ಆದರೆ ಅವರು ಅಸಮಯದಲ್ಲಿಯೇ ಅಗಲಿದರು. ಈಗ ಅವರು ಇಲ್ಲ. ಆದರೆ ಆ ಯುಗವು ಪರಿವರ್ತನೆಗೊಂಡಿದೆ. ರಾಷ್ಟ್ರನೀತಿ ರಾಜನೀತಿಗಳು ಪರಿವರ್ತನಗೊಂಡಿವೆ. ಆದರೂ ಪ್ರೇಮಚಂದರು ಕಂಡ ಸಮಸ್ಯೆಗಳು ಇಂದಿಗೂ ಇವೆ. ಅವರು ಕೊಟ್ಟ ಉತ್ತರಗಳೂ ಇಂದಿಗೂ ಉಪಯುಕ್ತವಿವೆ. ಅವರ ಸಾಹಿತ್ಯವು ತ್ರಿಕಾಲಾಬಾಧಿತ ಸತ್ಯವೆಂದು ಎನಿಸದೆ ಇರಲಾರದು. ಯಾವ ಯುಗವೂ ಅವರನ್ನು ಮರೆಯಲಾರದು. ಪ್ರೇಮಚಂದರ ಮೃತ್ಯುವಿನ ನಂತರವೂ ಅವರು ಹಾಕಿಕೊಟ್ಟ ಪರಂಪರೆಯು ಜೀವಿಸಿದೆ. ಭಾರತದ ಈ

ಮಹಾನ್ ಸಾಹಿತಿಯ ಕೀರ್ತಿಯು ದೇಶವಿದೇಶಗಳಲ್ಲಿಯೂ ಹಬ್ಬಿದೆ, ಹಬ್ಬುತ್ತಲಿದೆ. ಸ್ವತಂತ್ರ ಭಾರತಕ್ಕೆ ಈ ತನ್ನ ಮಹಾನ್ ಕಲಾಕಾರನಿಗಾಗಿ ಎಂದೆಂದೂ ಅಭಿಮಾನವಿದ್ದೇ ಇರುವದು ಎಂಬ ಮಾತಿನಲ್ಲಿ ಎನಿತೂ ಸಂಶಯವಿಲ್ಲ.

ಸನ್ ೧೯೩೬ ಅಕ್ಟೋಬರ ೭ನೇ ದಿನಾಂಕ ಎಷ್ಟೋ ಹೊತ್ತಿನ ವರೆಗೆ ಜೈನೇಂದ್ರ ಕುಮಾರನ ಹತ್ತರ ಮಾತಾಡುತ್ತ ಕುಳಿತರು. ತಮ್ಮ ಹಂಸ ಪತ್ರಿಕೆಗೋಸುಗ ಕಳವಳ ವ್ಯಕ್ತಪಡಿಸುತ್ತಿದ್ದರು. ಸಾಹಿತ್ಯದ ಭವಿತವ್ಯವನ್ನು ಕುರಿತು ಚರ್ಚಿಸುತ್ತಿದ್ದರು. ಬೆಳಗಾಗುತ್ತ ಆಗುತ್ತ ಎಷ್ಟೋ ಸಾರೆ ಮೂರ್ಛೆ ಬಂದಿತು. ಕರ್ಮವೀರ ಸಾಹಿತ್ಯಕಾರ ನಮ್ಮನ್ನಗಲಿದ. ಪರಂಪರೆಯು ಮಾತ್ರ ಇನ್ನೂ ಉಳಿದಿದೆ. ಈ ಅಮರ ಕಲಾಕಾರನು ಪುನಃ ಜನಿಸಿ ಭಾರತವನ್ನು ಬೆಳಗಲಿ !!

— ಎಸ್. ವ್ಹಿ. ಭಟ್ಟ

ಎಮ್. ಎ. (ಹಿಂದಿ), ಸಾಹಿತ್ಯರತ್ನ (ಪ್ರಯಾಗ)

ಎಸ್. ಟಿ. ಸಿ., ಎಚ್. ಎಸ್. ಎಸ್.

ಪ್ರೇಮಚಂದ ಕಥಾ ಸಾಹಿತ್ಯ

# ಮಾನಸರೋವರ

ಅನುವಾದಕ:

ಮೇವುಂಡಿ ಮಲ್ಲಾರಿ

# ಶಾಂತಿ



ನಾನು ಅತ್ತೆಮನೆಗೆ ಬಂದಾಗ ತೀರ ಕಗ್ಗಳಾಗಿದ್ದೆ. ಉಡಿಗೆತೊಡಿಗೆಯಲ್ಲಿ ಒಂದು ಅಂದವಿಲ್ಲ; ಮಾತುಕತೆಯಲ್ಲಿ ಒಂದು ಚೆಂದವಿಲ್ಲ. ಯಾರೊಡನೆಯೂ ಮೊಗವೆತ್ತಿ ಮಾತನಾಡುತ್ತಿರಲಿಲ್ಲ. ಕಣ್ಣು ತಮಗೆ ತಾವೇ ಮುಚ್ಚಿಕೊಳ್ಳುತ್ತಿದ್ದವು. ಯಾರೆದುರಿಗೆ ಹೋಗಲೂ ನಾಚುತ್ತಿದ್ದೆ; ಬುರುಕಿಯಿಲ್ಲದೆ ಹೆಂಗುಸರ ಮುಂದೆಯೂ ಹೋಗಲು ಸಂಕೋಚ. ನಾನು ಸ್ವಲ್ಪ ಹಿಂದೀ ಕಲಿತಿದ್ದೆ; ಆದರೆ ಕಾದಂಬರಿ, ನಾಟಕ ಮುಂತಾದುವನ್ನು ಓದುವುದರಲ್ಲಿ ಅಭಿರುಚಿಯಿರಲಿಲ್ಲ. ಸಮಯ ದೊರೆತರೆ ರಾಮಾಯಣ ಓದುತ್ತಿದ್ದೆ. ಅದು ನನ್ನ ಮನಸಿಗೆ ಬಹಳ ಹಿಡಿಯುತ್ತಿತ್ತು. ಅದು ಮಾನವನ ರಚನೆ ಎಂದು ನಾನು ತಿಳಿಯುತ್ತಿರಲಿಲ್ಲ; ಯಾವ ದೇವತೆಯೊ ರಚಿಸಿದುದೆಂದು ನನ್ನ ಪೂರ್ಣವಿಶ್ವಾಸ. ಮಾನವರು ಇಷ್ಟು ಬುದ್ಧಿವಂತರು, ಇಷ್ಟು ಸಹೃದಯರು ಎಂದು ನನಗೆನಿಸುತ್ತಿರಲಿಲ್ಲ. ದಿನವೆಲ್ಲ ನಾನು ಒಂದಿಲ್ಲೊಂದು ಕೆಲಸದಲ್ಲಿ ತೊಡಗಿರುತ್ತಿದ್ದೆ; ಯಾವ ಕೆಲಸವೂ ಇಲ್ಲದಿದ್ದರೆ ರಾಟೆಯಿಂದ ನೂಲುವುದು. ಮುದುಕ ಅತ್ತೆಯನ್ನು ಕಂಡರೆ ಥರಥರ ನಡುಗುತ್ತಿದ್ದೆ. ಒಂದು ದಿನ ಸಾರಿಗೆ ಉಪ್ಪು ಹೆಚ್ಚಾಗಿಬಿಟ್ಟಿತು. ಊಟಕ್ಕೆ ಕುಳಿತಾಗ ಮಾವನವರು, 'ಉಪ್ಪು ಸ್ವಲ್ಪ ನೋಡಿ ಹಾಕು,' ಎಂದಿಷ್ಟೇ ಅಂದರು. ಇಷ್ಟಕ್ಕೇ ನನ್ನ ಎದೆ ಬಡಿದುಕೊಳ್ಳುತ್ತಿತ್ತು. ಇದಕ್ಕಿಂತ ಹೆಚ್ಚಿನ ಪೆಟ್ಟೂ ಉಂಟೇ ?

ನನ್ನ ಬಾಬೂಜಿ(ಪತಿ)ಗೆ ನನ್ನ ಈ ಕಗ್ಗತನ ಸೇರುತ್ತಿರಲಿಲ್ಲ ಅವರು ವಕೀಲರು. ಶಿಕ್ಷಣದಲ್ಲಿ ಉಚ್ಚೋಚ್ಚ ಪದವಿಗಳನ್ನು ಪಡೆದಿದ್ದರು. ನನ್ನಲ್ಲಿ ಅವರಿಗೆ ಪ್ರೇಮವಿದ್ದಿತು; ಆದರೆ ಆ ಪ್ರೇಮದಲ್ಲಿ ದಯೆಯ ಪ್ರಮಾಣವೇ ಅಧಿಕ. ಸ್ತ್ರೀಯರ ರೀತಿನೀತಿ, ಶಿಕ್ಷಣ-ಸಂಸ್ಕೃತಿಗಳ ವಿಷಯದಲ್ಲಿ ಅವರ

ವಿಚಾರ ಅತ್ಯಂತ ಉದಾರವಾಗಿತ್ತು. ಆ ವಿಚಾರಗಳಿಂದ ತೀರ ಕೆಳಮಟ್ಟ ದಲ್ಲಿ ನನ್ನನ್ನು ಕಂಡು ಅವರ ಮನಸ್ಸು ಬಹುಶಃ ಒಳಗೊಳಗೆ ಖಿನ್ನವಾಗುತ್ತಿತ್ತು; ಆದರೆ ಅದರಲ್ಲಿ ನನ್ನ ತಪ್ಪೇನೂ ಇಲ್ಲದುದನ್ನು ಕಂಡು ನಮ್ಮ ರೂಢಿ ಪರಂಪರೆಗಳ ಮೇಲೆ ಅವರು ರೇಗುತ್ತಿದ್ದರು. ನನ್ನೊಂದಿಗೆ ಕುಳಿತು ಮಾತನಾಡುವುದರಲ್ಲಿ ಎಷ್ಟೂ ಆನಂದವೆನಿಸುತ್ತಿರಲಿಲ್ಲ. ಮಲಗಲು ಬರುವಾಗ ಒಂದಿಲ್ಲೊಂದು ಇಂಗ್ಲಿಶ್ ಪುಸ್ತಕ ತರುತ್ತಿದ್ದರು, ನಿದ್ದೆ ಬರುವತನಕ ಓದುತ್ತಿದ್ದರು. ನಾನು ಒಮ್ಮೊಮ್ಮೆ ಏನು ಓದುತ್ತೀರಿ ಎಂದು ಕೇಳಿದರೆ, ನನ್ನ ಕಡೆ ಕರುಣದೃಷ್ಟಿಯಿಂದ ನೋಡಿ ಉತ್ತರ ಕೊಡುತ್ತಿದ್ದರು— 'ಏನೆಂದು ಹೇಳಲಿ ನಿನಗೆ? ಆಸ್ಕರ್ ವೈಲ್ಡನ ಸರ್ವೋತ್ಕೃಷ್ಟ ಕೃತಿ ಇದು.' ನನ್ನ ಅನರ್ಹತೆಯ ಬಗ್ಗೆ ನಾನು ನಾಚುತ್ತಿದ್ದೆ. ಇಂತಹ ವಿದ್ವಾನ್ ಪುರುಷನಿಗೆ ನಾನು ತಕ್ಕವಳಲ್ಲ, ಯಾವುದಾದರೂ ಕಗ್ಗಮನೆಗೆ ಬೀಳಬೇಕಿತ್ತು ಎಂದು ನನ್ನನ್ನು ಧಿಕ್ಕರಿಸಿಕೊಳ್ಳುತ್ತಿದ್ದೆ; ಬಾಬೂಜಿ ನನ್ನನ್ನು ಅನಾದರ ದೃಷ್ಟಿಯಿಂದ ಕಾಣುತ್ತಿರಲಿಲ್ಲ,– ಅದೇ ನನ್ನ ಸೌಭಾಗ್ಯ ಎನಿಸುತ್ತಿತ್ತು.

ಒಂದು ದಿನ ಸಂಜೆಯ ಮುಂದೆ ನಾನು ರಾಮಾಯಣ ಓದುತ್ತಿದ್ದೆ. ಭರತಜೀ ರಾಮಚಂದ್ರಜಿಯನ್ನು ಹುಡುಕಿಕೊಂಡು ಹೊರಟಿದ್ದ. ಅವನ ಕರುಣವಿಲಾಪದಿಂದ ನನ್ನ ಹೃದಯ ಗದ್ಗದವಾಗುತ್ತಲಿತ್ತು; ಕಣ್ಣುಗಳಲ್ಲಿ ನೀರು ಹರಿಯುತ್ತಿತ್ತು; ಎದೆ ತುಂಬಿಬರುತ್ತಲಿತ್ತು. ಪಕ್ಕನೆ ಬಾಬೂಜಿ ಕೋಣೆಯೊಳಗೆ ಬಂದರು. ನಾನು ಕೂಡಲೆ ಪುಸ್ತಕ ಮುಚ್ಚಿದೆ. ನನ್ನ ಕಗ್ಗತನವನ್ನು ಆದಷ್ಟು ಮಟ್ಟಿಗೂ ಅವರೆದುರು ತೋರಗೊಡುತ್ತಿರಲಿಲ್ಲ. ಆದರಂದು ಅವರು ಪುಸ್ತಕ ನೋಡಿಬಿಟ್ಟರು.

"ರಾಮಾಯಣ ಅಲ್ಲವೆ?" ಎಂದು ಕೇಳಿಬಿಟ್ಟರು.

ನಾನು ತಪ್ಪುಗಾರ್ತಿಯಂತೆ ತಲೆ ತಗ್ಗಿಸಿದೆ.

"ಹಾಂ, ಹಾಗೇ ನೋಡುತ್ತಿದ್ದೆ." ಎಂದೆ.

ಬಾಬೂಜಿ, "ಬಹಳ ಒಳ್ಳೆಯ ಪುಸ್ತಕ, ಸಂದೇಹವಿಲ್ಲ, ಭಾವಪೂರ್ಣವಾಗಿದೆ. ಆದರೆ ಇಂಗ್ಲಿಶ್ ಇಲ್ಲವೆ ಫ್ರೆಂಚ್ ಲೇಖಕರು ತೋರಿಸಿದ ಹಾಗೆ

ಇದರಲ್ಲಿ ಮಾನವಚರಿತ್ರೆಯನ್ನು ಅಷ್ಟು ಚೆನ್ನಾಗಿ ತೋರಿಸಿಲ್ಲ. ನಿನಗೇನೂ ತಿಳಿಯಲಿಕ್ಕಿಲ್ಲ, ಆದರೂ ಹೇಳಿದರೆ ನಷ್ಟವೇನಿಲ್ಲ : ಇತ್ತೀಚೆ ಯುರೋಪಿನಲ್ಲಿ ವಾಸ್ತವಿಕತೆಯ ಯುಗ ನಡೆಯುತ್ತಿದೆ. ಅವರು ಮಾಡುವ ಮನೋಭಾವಗಳ ಏಳು-ಬೀಳುಗಳ ವರ್ಣನೆ ಓದಿದರೆ ಆಶ್ಚರ್ಯವಾಗುತ್ತದೆ. ನಮ್ಮಲ್ಲಿ ಕವಿಗಳು ಅಡಿಗಡಿಗೂ ಧರ್ಮ-ನೀತಿಗಳ ಕಡೆಗೆ ದೃಷ್ಟಿ ಇಡಬೇಕಾಗುತ್ತದೆ, ಇದರಿಂದ ಎಷ್ಟೋ ಸಲ ಅವರ ಭಾವಗಳಲ್ಲಿ ಅಸ್ವಾಭಾವಿಕತೆ ಬಂದುಬಿಡುತ್ತದೆ. ಇದೇ ಕುಂದು, ತುಲಸೀದಾಸನಲ್ಲಿಯೂ ಇದೆ. " ಎಂದರು.

ಆಗ ನನಗೆ ಕೊಂಚವೂ ತಿಳಿಯಲಿಲ್ಲ. "ಇದೇ ನನಗೆ ಹೆಚ್ಚಾಯ್ತು, ಇಂಗ್ರೇಜಿ ಪುಸ್ತಕ ಹೇಗೆ ತಿಳಿದುಕೊಳ್ಳಲಿ?" ಎಂದೆ.

"ಅದೇನೂ ಕಠಿನ ಮಾತಲ್ಲ. ದಿನಾಲು ಒಂದು ಗಂಟೆ ಓದಿದರೂ ಸ್ವಲ್ಪ ಕಾಲದಲ್ಲಿ ಎಷ್ಟೋ ಕಲಿತುಕೊಳ್ಳಬಹುದು. ಆದರೆ ನೀನಂತೂ ನನ್ನ ಮಾತು ಕೇಳಬಾರದೆಂದು ಆಣೆ ಇಟ್ಟುಕೊಂಡ ಹಾಗೆ ಕಾಣುತ್ತದೆ. ನನ್ನೊಂದಿಗೆ ನಾಚುವ ಅಗತ್ಯವಿಲ್ಲ ಎಂದೆಷ್ಟು ತಿಳಿಸಿಹೇಳಿದೆ ನಾನು; ನಿನಗೆ ಸ್ವಲ್ಪವೂ ನಾಟಲಿಲ್ಲ. ನಾನು ಹೇಳಿಯೇ ಹೇಳುತ್ತೇನೆ— ಸ್ವಲ್ಪ ಓರಣವಾಗಿ ಇರು; ಸೌಂದರ್ಯವನ್ನು ಕೊಡುವ ದೇವರು ಅದರ ಶೃಂಗಾರವನ್ನೂ ಅಪೇಕ್ಷಿಸುತ್ತಾನೆ, ಎಂದು. ಆದರೆ ನಿನ್ನ ದೃಷ್ಟಿಯಲ್ಲಿ ಅದಕ್ಕೆ ಬೆಲೆ ಕಿಂಚಿತ್ತೂ ಇಲ್ಲವೆಂದು ತೋರುತ್ತದೆ. ಅಥವಾ, ಬಹುಶಃ ನನ್ನಂತಹ ಕುರೂಪಿಗೆ ನೀನು ಹೇಗಿದ್ದರೂ ಅಗತ್ಯಕ್ಕಿಂತಲೂ ಹೆಚ್ಚು ಚೆನ್ನಾಗಿದ್ದೇನೆಂದು ತಿಳಿದುಕೊಂಡಂತಿದೆ. ಇದು ನನ್ನ ಮೇಲೆ ಅತ್ಯಾಚಾರ. ನನಗೆ ನೀನು ತಿವಿದು ಚುಚ್ಚಿ ವೈರಾಗ್ಯವನ್ನು ಕಲಿಸಬೇಕೆನ್ನುತ್ತೀ. ನಾನು ಹಗಲಿರುಳು ದುಡಿದು ಗಳಿಸುತ್ತೇನೆ, ಸ್ವಾಭಾವಿಕವಾಗಿಯೇ ಆ ಹಣದ ಸದ್ವಿನಿಯೋಗವಾಗಬೇಕೆಂದು ಅಪೇಕ್ಷಿಸುತ್ತೇನೆ. ಆದರೆ ನಿನ್ನ ಕಗ್ಗತನ, ಹಳೆಯ ವಿಚಾರಗಳು ನನ್ನ ಎಲ್ಲ ಪರಿಶ್ರಮದ ಮೇಲೂ ನೀರು ಹುಯ್ಯುತ್ತಿವೆ. ಹೆಂಗುಸರು ಅಡಿಗೆ ಮಾಡುವುದು, ಮಕ್ಕಳನ್ನು ಸಲಹುವುದು, ಗಂಡನನ್ನು ಸೇವಿಸುವುದು, ಏಕಾದಶೀವ್ರತ ಪಾಲಿಸುವುದು ಇವಕ್ಕಾಗಿ ಮಾತ್ರವೇ ಇಲ್ಲ. ಅವರ ಬಾಳಿನ ಗುರಿ ಇದಕ್ಕೂ ಬಹಳ ಎತ್ತರವಾಗಿದೆ. ಮನುಷ್ಯರ ಎಲ್ಲ ಸಾಮಾಜಿಕ

ಮತ್ತು ಮಾನಸಿಕ ವಿಷಯಗಳಲ್ಲಿ ಸಮಾನತೆಯಿಂದ ಭಾಗಿಯಾಗಲು ಅಧಿಕಾರ ಇದೆ ಅವರಿಗೆ. ಮನುಷ್ಯರಂತೆ ಸ್ವತಂತ್ರವಾಗಿರಲು ಅವರಿಗೂ ಹಕ್ಕುಂಟು. ನಿನ್ನ ಈ ಬಂಧನಾವಸ್ಥೆಯನ್ನು ಕಂಡು ನನಗೆ ಬಹಳ ದುಃಖ ವಾಗುತ್ತದೆ. ಸ್ತ್ರೀ ಪುರುಷನ ಅರ್ಧಾಂಗಿ ಎನಿಸಿದ್ದಾಳೆ; ಆದರೆ ನೀನು ನನ್ನ ಮಾನಸಿಕ ಅಥವಾ ಸಾಮಾಜಿಕ ಆವಶ್ಯಕತೆಯೊಂದನ್ನೂ ಪೂರಯಿಸುವುದಿಲ್ಲ. ನನ್ನ ನಿನ್ನ ಧರ್ಮ ಬೇರೆ ಆಚಾರವಿಚಾರ ಬೇರೆ, ಆಮೋದ ಪ್ರಮೋದಗಳ ವಿಷಯಗಳೂ ಬೇರೆ. ಜೀವನದ ಯಾವ ಕಾರ್ಯದಲ್ಲಿಯೂ ಯಾವ ಬಗೆಯ ಸಹಾಯವೂ ನಿನ್ನಿಂದ ದೊರೆಯುವ ಹಾಗಿಲ್ಲ ನನಗೆ. ಇಂತಹ ಅವಸ್ಥೆಯಲ್ಲಿ ನನ್ನ ಜೀವನ ಎಷ್ಟು ಶೋಚನೀಯವಾಗಿ ಸಾಗಿದೆ ಎಂಬುದನ್ನು ನೀನೇ ವಿಚಾರ ಮಾಡಬಹುದು. ”

ಬಾಬೂಜಿಯವರ ಮಾತು ದಿಟ. ಅವರ ಕೊರಳಿಗೆ ಒಂದು ಸಂಕೋಲೆ ಯಂತೆ ಬಿದ್ದಿದ್ದೆ ನಾನು. ಅಂದಿನಿಂದ ಅವರ ಹೇಳಿಕೆಯಂತೆ ನಡೆಯುವ ಸಂಕಲ್ಪಮಾಡಿದೆ. ನನ್ನ ದೇವತೆಯನ್ನು ಅದು ಹೇಗೆ ಅಪ್ರಸನ್ನ ಗೊಳಿಸುವುದು ?

೨

ಉಡಿಗೆತೊಡಿಗೆಯ ವಿಷಯದಲ್ಲಿ ನನಗೆ ಪ್ರೀತಿ ಇರಲಿಲ್ಲ ಎಂದಾದರೂ ಹೇಗೆ ಹೇಳಲಿ ? ಇತ್ತು, ಮಿಕ್ಕ ಹೆಂಗುಸರಿಗೆ ಎಷ್ಟಿರುವುದೋ ಅಷ್ಟಿತ್ತು. ಹುಡುಗರೂ ಮುದುಕರೂ ಸಿಂಗಾರವನ್ನು ಮೆಚ್ಚುತ್ತಿರುವಾಗ ನಾನಂತೂ ಯುವತಿ. ಮನಸು ಒಳಗೊಳಗೇ ಹಟ ಮಾಡುತ್ತಿತ್ತು. ನಮ್ಮ ತವರು ಮನೆಯಲ್ಲಿ ಒರಟು ಉಣಿಸು ತಿನಿಸು, ಉರುಟು ಉಡಿಗೆತೊಡಿಗೆಯ ಪರಿಪಾಠವಿತ್ತು. ನಮ್ಮ ತಾಯಿ ಅಜ್ಜಿ ಕೈಲಿ ನೂತು ನೇಕಾರರಿಂದ ನೇಯಿಸಿಕೊಳ್ಳುತ್ತಿದ್ದರು. ಹೊರಗಿಂದ ತರುವ ಬಟ್ಟೆ ತೀರ ಕಡಿಮೆ. ನಾನು ಸ್ವಲ್ಪ ನಯವಾದ ಬಟ್ಟೆ ಉಡಲು ಅಪೇಕ್ಷಿಸಿದರೆ, ಸಿಂಗಾರದ ಒಲವು ತೋರಿಸಿದರೆ ನಮ್ಮ ತಾಯಿ ಜಬರಿಸುತ್ತಿದ್ದರು; ಒಳ್ಳೆಯ ಮನೆತನದ ಹುಡುಗಿಯರಿಗೆ ಅಷ್ಟು ಸಿಂಗಾರ-ಠೀವಿ ಶೋಭಿಸುವುದಿಲ್ಲ ಎಂದು ಬುದ್ಧಿ

ಹೇಳುತ್ತಿದ್ದರು; ಅಂತಹ ಅಭ್ಯಾಸ ಒಳ್ಳೆಯದಲ್ಲ ಎನ್ನುತ್ತಿದ್ದರು. ಎಂದಾದರೂ ನಾನೂ ಕನ್ನಡಿಯ ಮುಂದೆ ನಿಂತುದನ್ನು ಕಂಡರೆ ಸಿಟ್ಟು ಮಾಡುತ್ತಿದ್ದರು. ಆದರೀಗ ಬಾಬೂಜಿಯವರ ಹಟದಿಂದ ನನ್ನ ಆ ಭಯ ದೂರಾಗತೊಡಗಿತು. ನನ್ನ ಅತ್ತೆ ನಾದಿನಿಯರು ಸಿಂಗಾರ–ಸೊಗಸುಗಳಿಗೆ ಮೂಗುಮುರಿಯುತ್ತಿದ್ದರು. ಆದರೆ ಅದರ ಪರಿವೆ ನನಗಿರಲಿಲ್ಲ. ಬಾಬೂಜಿಯವರ ಪ್ರೇಮಪೂರ್ಣದೃಷ್ಟಿಗಾಗಿ ಬಯ್ಗುರೂ ಸಹಿಸುತ್ತಿದ್ದೆ. ಈಗ ಅವರ ನನ್ನ ವಿಚಾರಗಳು ಒಂದಾಗುತ್ತ ನಡೆದಿದ್ದವು. ಅವರು ಹೆಚ್ಚು ಪ್ರಸನ್ನರಾಗಿರುವಂತೆ ಕಾಣುತ್ತಿತ್ತು. ನನಗಾಗಿ ಫ್ಯಾಶನೇಬಲ್ ಸೀರೆ, ಸುಂದರವಾದ ಜಾಕೆಟ್ಟು, ಮಿರುಗುವ ಜೋಡು, ಜರತಾರಿ ನಕ್ಷೆಯ ಸ್ಲೀಪರುಗಳನ್ನು ತರುತ್ತಿದ್ದರು. ಆದರೆ ಅವನ್ನು ಧರಿಸಿ ಯಾರ ಎದುರಿಗೂ ಹೋಗುತ್ತಿರಲಿಲ್ಲ; ಕೇವಲ ಬಾಬೂಜಿಯವರ ಎದುರು ಧರಿಸುವುದಕ್ಕಾಗಿ ಇರಿಸಿದ್ದೆ. ಈ ವೇಷಭೂಷಣದಲ್ಲಿ ನನ್ನನ್ನು ಕಂಡು ಅವರು ಬಹು ಪ್ರಸನ್ನರಾಗುತ್ತಿದ್ದರು. ನಾರಿ ಗಂಡನ ಮೆಚ್ಚಿಕೆಗಾಗಿ ಏನನ್ನು ಮಾಡಲಾರಳು? ನನ್ನ ಸಮಯ ಮನೆಗೆಲಸಗಳಿಗಿಂತ ಸೊಗಸು–ಸಿಂಗಾರದಲ್ಲಿ, ಓದಿನಲ್ಲಿ ಹೆಚ್ಚಾಗಿ ಕಳೆಯ ತೊಡಗಿತು. ಪುಸ್ತಕಗಳಲ್ಲಿ ನನ್ನ ಪ್ರೀತಿ ಹೆಚ್ಚಿತು.

ನಾನಿನ್ನೂ ಅತ್ತೆಮಾವಂದಿರನ್ನು ಗೌರವಿಸುತ್ತಿದ್ದೆ, ಅವರೆದುರಿನಲ್ಲಿ ಬೂಟು–ಗೌನು ಧರಿಸಲು ಅಂಜುತ್ತಿದ್ದೆನಾದರೂ ಅವರ ಬುದ್ಧಿಯ ಮಾತುಗಳು ನನಗೆ ಸೇರುತ್ತಿರಲಿಲ್ಲ. ನನ್ನ ಗಂಡ ತಿಂಗಳಾ ನೂರಾರು ರೂಪಾಯಿ ಗಳಿಸುತ್ತಾರೆ, ಮನೆಯಲ್ಲಿ ನಾನೇಕೆ ತೊತ್ತಾಗಿ ಇರಬೇಕು? ನನಗೆ ತಿಳಿದಷ್ಟು ಕೆಲಸ ನಾನು ಮಾಡುತ್ತೇನೆ; ನನಗೆ ಅಪ್ಪಣೆ ಮಾಡಲು ಇವರು ಯಾರು?–ಎಂದು ಯೋಚಿಸುತ್ತಿದ್ದೆ. ನನ್ನಲ್ಲಿ ಆತ್ಮಾಭಿಮಾನದ ಪ್ರಮಾಣ ಹೆಚ್ಚ ತೊಡಗಿತು. ಅತ್ತೆಯವರು ಏನಾದರೂ ಕೆಲಸ ಹೇಳಿದರೆ ಬುದ್ಧಿಪೂರ್ವಕವಾಗಿ ತಪ್ಪಿಸುತ್ತಿದ್ದೆ. ಒಂದು ದಿನ ಅವರು, ಬೆಳಗಿನ ಉಪಹಾರಕ್ಕಾಗಿ ಉಸಳಿ ಮಾಡು ಎಂದು ಹೇಳಿದರು. ನಾನು ಕೇಳಿಯೂ ಕೇಳದಂತೆ ಇದ್ದು ಬಿಟ್ಟೆ. ಅತ್ತೆಯವರು ತುಸು ಹೊತ್ತು ಕಾಯ್ದರು. ನಾನು ಕೋಣೆಯಿಂದ ಹೊರಬೀಳದಿರಲು ಅವರಿಗೆ ರೇಗಿತು. ಅವರದು ಬಲು ಸಿಡುಕಿನ ಪ್ರಕೃತಿ.

ಸಣ್ಣ ಸಣ್ಣ ಮಾತಿಗೂ ಗುರ್ರೆನ್ನುತ್ತಿದ್ದರು. ಅವರಿಗೆ ತಮ್ಮ ಪ್ರತಿಷ್ಠೆಯ ಅಭಿಮಾನ ಹೆಚ್ಚು; ನನ್ನನ್ನವರು ತೊತ್ತೆಂದೇ ಭಾವಿಸಿದ್ದರು. ಹಾಂ,-ತಮ್ಮ ಹೆಣ್ಣುಮಕ್ಕಳೊಡನೆ ಯಾವಾಗಲೂ ನಯವಾಗಿ ನಡೆದುಕೊಳ್ಳುತ್ತಿದ್ದರು. ಆದರೆ, ಅವರನ್ನು ತಲೆಗೇರಿಸಿಕೊಂಡಿದ್ದರೆಂದು ನಾನೆನ್ನುತ್ತೇನೆ. ಅವರು ಸಿಟ್ಟುಸಿಟ್ಟಿನಿಂದ ನನ್ನ ಕೋಣೆಯ ಬಾಗಿಲಬಳಿ ಬಂದು, " ನಿನಗೆ ಉಪಹಾರ ತಯಾರಿಸಲಿಕ್ಕೆ ಹೇಳಿದ್ದೆ, ತಯಾರಿಸಿದೆಯಾ ? " ಎಂದರು. " ಇನ್ನೂ ಪುರಸತ್ತು ಸಿಕ್ಕಲಿಲ್ಲ " ಎಂದು ನಾನೂ ಸಿಟ್ಟಿನಿಂದ ಉತ್ತರವಿತ್ತೆ.

" ಅಂದರೆ, ಹಗಲೆಲ್ಲಾ ಬಿದ್ದುಕೊಂಡಿರೋದೇ ನಿನ್ನ ಕೆಲಸ ಅಂತೀಯಾ ? ಇತ್ತೀಚೆ ಏನಾಗಿದೆ ನಿನಗೆ ? ಯಾತರ ಸೊಕ್ಕು ಇದು ? ಗಂಡ ಗಳಿಸುತ್ತಾನೆ, ನಾ ಯಾಕ ದುಡೀಲಿ ಅಂತಾನೋ ? ಈ ಸೊಕ್ಕಿನಾಗ ಮರೀ ಬ್ಯಾಡ—ನಿನ್ನ ಗಂಡ ಲಕ್ಷ ಗಳಿಸಲಿ, ಮನೆಯಾಗ ನಂದೇ ರಾಜ್ಯ. ಈಗ ಅವ ನಾಲ್ಕು ದುಡ್ಡು ತರಲಿಕ್ಕೆ ಹತ್ಯಾನ, ಆಗಲೇ ಬಂತು ನಿನಗ ಮನೀ ಯಜಮಾನಿಯಾಗೋ ಹೌಸು ! ಆದರೆ ಅವನನ್ನು ಪಾಲನ ಪೋಷಣ ಮಾಡಲಿಕ್ಕೆ ನೀ ಬಂದಿದ್ದಿಲ್ಲ, ನಾನೇ ಅವನನ್ನು ಬೆಳೆಸಿ ಓದಿಸಿ ಮನಸ್ಯನ್ನ ಮಾಡಿದೆ. ಭಲೆ ! ನಿನ್ನೆ ಮೊನ್ನಿನ ಹುಡುಗಿ, ಈಗಿನಿಂದಲೇ ಈ ಗರ್ವ ! "

ನಾನು ಅಳಲಾರಂಭಿಸಿದೆ. ಬಾಯಿಂದ ಮಾತೇ ಹೊರಡಲಿಲ್ಲ. ಬಾಬೂಜಿ ಮೇಲಿನ ಕೋಣೆಯಲ್ಲಿ ಓದುತ್ತ ಕುಳಿತಿದ್ದರು. ಈ ಮಾತು ಅವರು ಕೇಳಿದರು. ಬಹಳ ನೊಂದುಕೊಂಡರು. ರಾತ್ರಿ ಕೋಣೆಗೆ ಬಂದಾಗ ಅವರೆಂದರು : " ಇವೊತ್ತು ನೋಡಿದೆಯಾ ಅವ್ವನ ಸಿಟ್ಟು ? ಇಂತಹ ಅತ್ಯಾಚಾರದಿಂದಲೇ ಹೆಂಗುಸರಿಗೆ ಬದುಕು ಬೆಟ್ಟದಂತೆ ಎನಿಸುವುದು. ಈ ಮಾತುಗಳಿಂದ ಹೃದಯದಲ್ಲಿ ಆಗುವ ವೇದನೆ ಹೇಳಲು ಅಸಾಧ್ಯ. ಜೀವನ ಭಾರವಾಗುತ್ತದೆ, ಹೃದಯ ಜರ್ಜರವಾಗುತ್ತದೆ, ಮನುಷ್ಯನ ಆತ್ಮೋನ್ನತಿ, —ಗಾಳಿ ಬೆಳಕು ನೀರು ಇಲ್ಲದ ಗಿಡ ಒಣಗುವಂತೆ ನಷ್ಟವಾಗುತ್ತದೆ. ನಮ್ಮ ಮನೆಗಳಲ್ಲಿ ಇದು ಮಹಾ ಅನ್ಯಾಯ. ನಾನಂತೂ ಅವರ ಮಗ. ಅವರ ಮುಂದೆ ಬಾಯಿ ಬಿಡಲಾರೆ. ನನ್ನ ಮೇಲೆ ಅವರ ಅಧಿಕಾರ

ಅತಿಶಯವಾಗಿದೆ. ಅವರಿಗೆದುರಾಗಿ ಒಂದು ಶಬ್ದ ಉಚ್ಚರಿಸುವುದೂ ನನಗೆ ಲಜ್ಜಾಸ್ಪದ; ಈ ಬಂಧನ ನಿನಗೂ ಇದೆ. ಅವರು ಆಡಿದುದನ್ನು ನೀನು ಬಾಯಿ ಮುಚ್ಚಿಕೊಂಡು ಕೇಳಿರದಿದ್ದರೆ ನನಗೆ ಬಹಳ ದುಃಖವಾಗುತ್ತಿತ್ತು. ಕದಾಚಿತ್ ನಾನು ವಿಷವನ್ನೇ ತೆಗೆದುಕೊಳ್ಳುತ್ತಿದ್ದೆ. ಈ ಪರಿಸ್ಥಿತಿಯಲ್ಲಿ ಎರಡು ಮಾತ್ರ ಉಪಾಯ– ಸದೈವ ಅವರು ಅಂದದ್ದು ಆಡಿದ್ದು ಸೈರಿಸಿ ಕೊಂಡಿರುವುದು, ಇಲ್ಲವೆ ನಮ್ಮ ದಾರಿ ನಾವು ಕಂಡುಕೊಳ್ಳುವುದು. ಈಗ ಅವ್ವನ ಸ್ವಭಾವ ಬದಲಾದೀತೆಂದು ಆಶಿಸುವುದು ಪೂರಾ ಭ್ರಮೆ. ಹೇಳು, ನಿನಗೆ ಯಾವುದು ಒಪ್ಪಿಗೆ ? ”

ನಾನು ಅಂಜುತ್ತಂಜುತ್ತ, “ ನೀವು ಹೇಳಿದಂತೆ ಮಾಡುತ್ತೇನೆ. ಇನ್ನೆಂದೂ ನಾನು ಓದುವುದಿಲ್ಲ, ಬರೆಯುವುದಿಲ್ಲ; ಅವರು ಏನು ಹೇಳುತ್ತಾರೆ, ಅದನ್ನು ಮಾಡುತ್ತೇನೆ. ಇದರಿಂದಲೇ ಅವರಿಗೆ ತೃಪ್ತಿಯೊಗುತ್ತಿದ್ದರೆ ಆಗಲಿ. ನಾನು ಓದಿ, ಬರೆದು ಮಾಡುವುದೇನು ? ” ಎಂದೆ.

“ ಆದರೆ ಇದು ನನಗೆ ಇಷ್ಟವಲ್ಲ. ಅವ್ವ ಈ ದಿನ ಆರಂಭ ಮಾಡಿದ್ದಾರೆ; ಇನ್ನು ದಿನಾಲು ಬೆಳೆಯುತ್ತ ಹೋಗುವುದು. ನಾನು ನಿನ್ನನ್ನು ಸಭ್ಯಳನ್ನಾಗಿ ವಿಚಾರಶೀಲಳನ್ನಾಗಿ ಮಾಡಲು ಪ್ರಯತ್ನಿಸಿದಂತೆಲ್ಲ ಅವರಿಗೆ ಕೆಟ್ಟೆನಿಸುವುದು, ಮತ್ತು ಅವರ ಸಿಟ್ಟು ನಿನ್ನ ಮೇಲೆ ಹಾಯುವುದು. ಅವರು ಯಾವ ವಾತಾವರಣದಲ್ಲಿ ತಮ್ಮ ಆಯುಷ್ಯವನ್ನು ಕಳೆದಿರುವರೋ ಅದೀಗ ಉಳಿದಿಲ್ಲ ಎಂಬುದನ್ನು ಅವರರಿಯರು. ವಿಚಾರಸ್ವಾತಂತ್ರ್ಯ ಮತ್ತು ಸಮಯಾನುಕೂಲತೆ ಅವರ ದೃಷ್ಟಿಯಲ್ಲಿ ಅಧರ್ಮಕ್ಕಿಂತ ಕಡಿಮೆಯಲ್ಲ. ನನಗೊಂದು ಉಪಾಯ ಹೊಳೆದಿದೆ– ಬೇರೆ ಯಾವ ಊರಿಗಾದರೂ ಹೋಗಿ ಉದ್ಯೋಗ ಹೂಡಬೇಕು. ಇಲ್ಲಿ ನನ್ನ ವಕೀಲಿಯೂ ಚೆನ್ನಾಗಿ ನಡೆದಿಲ್ಲ ಆದುದರಿಂದ ಏನಾದರೂ ನೆವ ಹುಡುಕುವ ಆವಶ್ಯಕತೆಯಿಲ್ಲ. ”

ಈ ಏರ್ಪಾಡಿಗೆ ನಾನೇನೂ ಎದುರು ನುಡಿಯಲಿಲ್ಲ. ಒಬ್ಬೊಂಟಿಗಳಾಗಿ ಇರುವುದಕ್ಕೆ ಮನಸ್ಸು ಬೆದರುತ್ತಿದ್ದರೂ ಸ್ವಾತಂತ್ರ್ಯದ ಆಶೆಯಿಂದ ಹಿಗ್ಗಿದೆ.

೩

ಆ ದಿನದಿಂದಲೇ ಅತ್ತೆಯವರು ನನ್ನೊಡನೆ ಮಾತುಬಿಟ್ಟರು. ತವರು ಮನೆಯವರಲ್ಲಿ, ನೆರೆಹೊರೆಯವರಲ್ಲಿ, ನಾದಿನಿಯರಲ್ಲಿ ನನ್ನ ಗೇಲಿ ಮಾಡ ತೊಡಗಿದರು. ಇದರಿಂದ ನನಗೆ ಬಹಳ ನೋವಾಗುತ್ತಿತ್ತು. ಈ ಮೊದಲು ಅವರೇನಾದರೂ ಅಂದು-ಆಡಿ ಮಾಡಿದರೆ ನನಗೆ ಒಗ್ಗುತ್ತಿತ್ತು. ನನ್ನ ಹೃದಯದಿಂದ ಅವರ ಮಾನಮರ್ಯಾದೆ ಹಾರತೊಡಗಿತು. ಯಾರ ಮೇಲೇ ಆಗಲಿ, ಈ ರೀತಿ ಕಟಾಕ್ಷ ಇಡುವುದೆಂದರೆ, ಅವರ ಹೃದಯದಲ್ಲಿ ತಮ್ಮ ಬಗೆಗಿದ್ದ ಆದರವನ್ನು ಕಳೆದುಕೊಳ್ಳುವುದೇ ಸೈ. ನನ್ನ ಮೇಲಿನ ದೊಡ್ಡ ಆರೋಪವೆಂದರೆ, ನಾನು ಬಾಬೂಜಿಯವರ ಮೇಲೆ ಮೋಹನಮಂತ್ರ ಊದಿದ್ದೇನೆ, ಅವರು ನನ್ನ ಇಂಗಿತದಂತೆ ನಡೆಯುತ್ತಾರೆ ಎಂಬುದು. ಆದರೆ ವಾಸ್ತವವಾಗಿ ಇದರ ವಿಪರೀತವಿತ್ತು.

ಭಾದ್ರಪದಮಾಸ; ಜನ್ಮಾಷ್ಟಮಿಯ ಹಬ್ಬ ಬಂದಿತು. ಮನೆಯಲ್ಲಿ ಎಲ್ಲರೂ ವ್ರತ ಮಾಡಿದರು. ಎಂದಿನಂತೆ ನಾನೂ ಮಾಡಿದೆ. ಠಾಕೂರಜಿಯ ಜನನ ರಾತ್ರಿ ಹನ್ನೆರಡು ಗಂಟೆಗೆ ಆಗುವುದಿತ್ತು; ನಾವೆಲ್ಲರೂ ಹಾಡುತ್ತ ಬಾರಿಸುತ್ತ ಕುಳಿತಿದ್ದೆವು. ಬಾಬೂಜಿ ಈ ಅಸಭ್ಯ ಪದ್ಧತಿಯ ತೀವ್ರ ವಿರೋಧಿಗಳು. ರಾತ್ರಿ ಒಂದು ಗಂಟೆಗೆ ನಾನವರ ಕೋಣೆಗೆ ಹೋದೆ. ಆಗವರು “ ಹೀಗೆ ಶರೀರವನ್ನು ಬಳಲಿಸುವುದರಿಂದ ಬರುವ ಲಾಭವೇನು ? ಕೃಷ್ಣ ಅವಶ್ಯವಾಗಿ ಮಹಾಪುರುಷ, ಅವನನ್ನು ಪೂಜಿಸುವುದು ನಮ್ಮ ಕರ್ತವ್ಯವೇ. ಆದರೆ, ಹೀಗೆ ಹಾಡಿದರೆ ಬಾರಿಸಿದರೆ ಏನು ಬಂತು ? ಈ ಡಬಡ್ಡಾಳಿಕೆ ಧರ್ಮವಲ್ಲ. ಸತ್ಯಪ್ರಾಮಾಣಿಕತೆಗಳಲ್ಲಿ ಇದೆ ಧರ್ಮ, ಹೊರತೋರಿಕೆಯಲ್ಲಿಲ್ಲ. ” ಎಂದು ನನಗೆ ತಿಳಿಹೇಳಿದರು.

ಬಾಬೂಜಿ ಈ ದಾರಿಯಲ್ಲಿಯೇ ನಡೆಯುತ್ತಿದ್ದರು. ಅವರು ಭಗವದ್-ಗೀತೆಯನ್ನು ಕೊಂಡಾಡುತ್ತಿದ್ದರು; ಆದರೆ ಅದನ್ನೆಂದೂ ಪಠಿಸುತ್ತಿರಲಿಲ್ಲ. ಅವರು ಉಪನಿಷತ್ತುಗಳನ್ನು ಪ್ರಶಂಸಿಸುತ್ತಿದ್ದರೆ, ಬಾಯಿಂದ ಹೂಮಳೆ ಸುರಿದಂತೆ; ಆದರೆ, ಎಂದೂ ಯಾವ ಉಪನಿಷತ್ತನ್ನೂ ಓದಿದುದನ್ನು ನೋಡಿಲ್ಲ. ಹಿಂದುಧರ್ಮದ ಗೂಢತತ್ತ್ವಜ್ಞಾನಕ್ಕೆ ಮನಸೋತಿದ್ದರು;

ಆದರೆ, ಅದನ್ನು ಸಮಯಾನುಕೂಲವೆಂದು ಎಣಿಸಿರಲಿಲ್ಲ. ವಿಶೇಷವಾಗಿ, ವೇದಾಂತವನ್ನಂತೂ ಭಾರತದ ಅವನತಿಯ ಮೂಲಕಾರಣವೆಂದು ತಿಳಿಯುತ್ತಿದ್ದರು. ಈ ವೇದಾಂತವೇ ನಮ್ಮನ್ನು ಹಾಳುಮಾಡಿದುದು; ಜಗತ್ತಿನ ಪದಾರ್ಥಗಳನ್ನು ನಾವು ತುಚ್ಛವೆಂದು ತಿಳಿಯತೊಡಗಿದೆವು, ಇಂದಿಗೂ ಅದರ ಫಲ ಅನುಭವಿಸುತ್ತಿರುವೆವು—ಎಂದವರು ಎನ್ನುತ್ತಿದ್ದರು. ಈಗ ಏಳ್ಗೆಯ ಕಾಲವಿದೆ. ಸುಮ್ಮನಿದ್ದರೆ ಆಗದು. ಸಂತೋಷವೇ ಭಾರತವನ್ನು ಮುಗ್ಗಿಸಿದ್ದು ಎಂದು ಅವರ ಅಭಿಪ್ರಾಯ.

ಆಗ ಅವರಿಗೆ ಉತ್ತರಕೊಡುವ ಶಕ್ತಿ ಎಲ್ಲಿತ್ತು ನನಗೆ? ಅವರು ಯುರೋಪೀಯ ನಾಗರಿಕತೆಯ ತಿರುಗಣಿಯಲ್ಲಿ ಬಿದ್ದಿದ್ದರೆಂದು ಈಗ ನನಗೆನಿಸುತ್ತಿದೆ. ಈಗ ಅವರೂ ಹಾಗೆಲ್ಲ ಮಾಡುವುದಿಲ್ಲ, ಆ ಹುಮ್ಮಸ್ಸೂ ಈಗ ತಣ್ಣಗಾಗಿದೆ.

೪

ಕೆಲ ದಿನಗಳಲ್ಲಿ ಅಲಹಾಬಾದಿಗೆ ಹೊರಟುಹೋದೆವು ಒಂದು ಅಟ್ಟದ ಮನೆಯನ್ನು ಬಾಬೂಜಿ ಮೊದಲೇ ಹಿಡಿದಿದ್ದರು. ಎಲ್ಲ ಬಗೆಯಿಂದ ಸಜ್ಜಾದ ಮನೆ. ನಮ್ಮಲ್ಲಿ ಐದು ಜನ ನೌಕರರಿದ್ದರು—ಇಬ್ಬರು ಗಂಡಾಳು, ಇಬ್ಬರು ಹೆಣ್ಣಾಳು, ಒಬ್ಬ ಅಡಿಗೆಯವ. ಈಗ ನನಗೆ ಒಂದೂ ಮನೆಗೆಲಸವಿರಲಿಲ್ಲ. ಮನಸು ವ್ಯಾಕುಲವಾದಾಗ ಯಾವುದೊಂದು ಕಾದಂಬರಿ ಓದುತ್ತಿದ್ದೆ.

ಇಲ್ಲಿ ಕಂಚು-ಹಿತ್ತಾಳೆಯ ಪಾತ್ರೆಗಳು ತೀರ ಕಡಿಮೆ ಇದ್ದವು. ಕಪಾಟಿನಲ್ಲಿ ಚೀನಿಮಣ್ಣಿನ ತಟ್ಟೆಗಳೂ ಬಟ್ಟಲುಗಳೂ ಇಟ್ಟಿದ್ದವು. ಊಟ ಮೇಜಿನ ಮೇಲೇ ಬರುತ್ತಿತ್ತು. ಬಾಬೂಜಿ ಒಳ್ಳೇ ಸೊಗಸಿನಿಂದ ಉಣ್ಣುತ್ತಿದ್ದರು. ಮೊದಮೊದಲು ನನಗೆ ನಾಚಿಕೆಯಾಗುತ್ತಿತ್ತು; ಬರುಬರುತ್ತ ಮೇಜಿನ ಮೇಲೆ ಉಣ್ಣುವುದು ಅಭ್ಯಾಸವಾಯಿತು. ಒಂದು ಕುದುರೆ ಗಾಡಿಯನ್ನೂ ಇಟ್ಟಿದ್ದೆವು. ನಡೆದು ಹೋಗುವುದನ್ನು ಪೂರಾ ಬಿಟ್ಟೆವು. ಯಾರನ್ನಾದರೂ ಕಾಣುವುದಕ್ಕೆ- ಹತ್ತೇ ಹೆಜ್ಜೆ ಹೋಗುವುದಿರಲಿ — ಗಾಡಿ ಹೂಡಿಸುವುದೇ. ಇದೇ ಫ್ಯಾಶನ್ನು ಎನ್ನುತ್ತಿದ್ದರು ಬಾಬೂಜಿ.

ಬಾಬೂಜಿಯವರ ಸಂಪಾದನೆ ಇನ್ನೂ ಬಹಳ ಕಡಿಮೆಯಿತ್ತು. ಸಮನಾಗಿ ವೆಚ್ಚವೂ ಸಾಗುತ್ತಿರಲಿಲ್ಲ. ಒಮ್ಮೊಮ್ಮೆ ಅವರು ಚಿಂತೆಯಲ್ಲಿರುವು ದನ್ನು ಕಂಡು, "ಗಳಿಕೆ ಇಷ್ಟು ಕಡಿಮೆಯಿರುವಾಗ ಇಷ್ಟೇಕೆ ವೆಚ್ಚ ಹಬ್ಬಿಸಿ ಕೊಂಡಿದ್ದೀರಿ ? ಯಾವುದಾದರೂ ಸಣ್ಣ ಮನೆ ಹಿಡಿಯಿರಿ; ಇಬ್ಬರು ನೌಕರರಾದರೂ ಸಾಕು," ಎಂದು ನಾನೆಂದರೆ, ಬಾಬೂಜಿ ನಕ್ಕುಬಿಟ್ಟು, "ನಮ್ಮ ಬಡತನದ ಡಂಗುರ ನಾನೇ ಏಕೆ ಹೊಡೆಯಲಿ? ಬಡತನವನ್ನು ತೋರಿಸಿಕೊಳ್ಳುವುದು ಬಡತನಕ್ಕಿಂತಲೂ ದುಃಖದಾಯಕ. ನಾವು ನಿರ್ಧನರು ಎಂಬುದನ್ನು ಮರೆತುಬಿಡು; ಲಕ್ಷ್ಮಿ ನಮ್ಮ ಕಡೆ ತಾನೇ ಓಡಿಬರುತ್ತಾಳೆ. ವೆಚ್ಚ ಹೆಚ್ಚುವುದು, ಆವಶ್ಯಕತೆ ಬೆಳೆಯುವುದು ದ್ರವ್ಯೋಪಾರ್ಜನೆಯ ಮೊದಲನೆಯ ಮೆಟ್ಟಲು. ಇದರಿಂದ ನಮ್ಮ ಗುಪ್ತಶಕ್ತಿಗಳು ವಿಕಾಸ ವಾಗುವುವು; ಆ ಕಷ್ಟಗಳನ್ನು ತಳ್ಳುತ್ತ ಮುಂದಡಿಯಿಡಲು ನಾವು ಸಮರ್ಥ ರಾಗುವೆವು. ದರಿದ್ರತೆಯ ಇನ್ನೊಂದು ಹೆಸರು ಸಂತೋಷ" ಎನ್ನುತ್ತಿದ್ದರು.

ನಮ್ಮ ವ್ಯಯ ದಿನ ದಿನ ಹೆಚ್ಚುತ್ತಲಿತ್ತು. ವಾರದಲ್ಲಿ ಮೂರು ಸಲ ಸಿನೆಮಕ್ಕೆ ತಪ್ಪದೆ ಹೋಗುತ್ತಿದ್ದೆವು. ವಾರಕ್ಕೊಮ್ಮೆ ಮಿತ್ರರಿಗೆ ಭೋಜನ ಇದ್ದೇ ಇರುತ್ತಿತ್ತು ನಮ್ಮಲ್ಲಿ. ಸುಖಭೋಗವೇ ಬಾಳಿನ ಗುರಿ ಎಂದು ನನಗೀಗ ತಿಳಿಯತೊಡಗಿತು. ಈಶ್ವರನಿಗೆ ನಮ್ಮ ಉಪಾಸನೆಯ ಬಯಕೆ ಇಲ್ಲ. ಅವನು ಉತ್ತಮೋತ್ತಮ ವಸ್ತುಗಳನ್ನು ನಮಗೆ ಭೋಗಕ್ಕಾಗಿಯೇ ನೀಡಿದ್ದಾನೆ. ಅವನ್ನು ಭೋಗಿಸುವುದೇ ಅವನ ಶ್ರೇಷ್ಠ ಆರಾಧನೆ. ನನಗೆ ಓದು ಹೇಳಲು, ಗಾಯನ ಕಲಿಸಲು ಒಬ್ಬ ಈಸಾಯಿಲೇಡಿ ಬರಲಾರಂಭಿಸಿ ದಳು. ಒಂದು ಪೇಟಿಯೂ ಬಂದಿತು. ಈ ಆನಂದದಲ್ಲಿ ಮುಳುಗಿ ನಾನು ರಾಮಾಯಣ, ಭಕ್ತಮಾಲಗಳನ್ನು ಮರೆತುಬಿಟ್ಟೆ. ಆ ಪುಸ್ತಕಗಳು ಅಪ್ರಿಯವಾದವು. ದೇವರಲ್ಲಿಯ ವಿಶ್ವಾಸ ಹಾರಿಹೋಯಿತು.

ಇರುಇರುತ್ತ ಅಲ್ಲಿಯ ದೊಡ್ಡ ದೊಡ್ಡ ಮಂದಿಯ ಸ್ನೇಹ, ಸಂಬಂಧ ಬೆಳೆದವು. ಅದೊಂದು ತೀರ ಹೊಸ ಸೊಸಾಯಿಟಿಯಾಗಿತ್ತು. ಅವರ ರೀತಿ ನೀತಿ, ಆಹಾರ–ವಿಹಾರ, ಆಚಾರ–ವಿಚಾರ ನನಗೆ ಪೂರಾ ಅಪರಿಚಿತ. ಆ ಸೊಸಾಯಿಟಿಯಲ್ಲಿ ನಾನು ನವಿಲುಹಿಂಡಿನಲ್ಲಿ ಕಾಗೆ ಸೇರಿದಂತಿದ್ದೆ.

ಆ ಲೇಡಿಗಳ ಮಾತುಕತೆಯ ವಿಷಯಗಳೆಂದರೆ ನಾಟಕ ಚಿತ್ರಪಟ, ಕುದುರೆ ಜೂಜು, ಟೆನಿಸ್, ವೃತ್ತಪತ್ರಿಕೆಗಳು ಮತ್ತು ಒಳ್ಳೊಳ್ಳೆಯ ಲೇಖಕರ ಲೇಖನಗಳು. ಅವರ ಚಾತುರ್ಯಬುದ್ಧಿಯ ತೀವ್ರತೆ, ಅವರ ಸ್ಫೂರ್ತಿ, ಅವರ ಚಪಲತೆಗಳಿಗೆ ನಾನು ಬೆರಗಾಗುತ್ತಿದ್ದೆ. ಅವರು ಜ್ಞಾನ–ಪ್ರಕಾಶಗಳ ಪುತ್ತಳಿಗಳೆಂದು ನನಗೆನಿಸುತ್ತಿತ್ತು. ಅವರು ಮುಸುಕು ಬಿಟ್ಟು ಹೊರಗೆ ತಿರುಗಾಡುತ್ತಿದ್ದರು. ಅವರ ದಿಟ್ಟತನ ನನ್ನನ್ನು ಚಕಿತಗೊಳಿಸುತ್ತಿತ್ತು. ಒಮ್ಮೊಮ್ಮೆ ನನ್ನನ್ನೂ ತಮ್ಮ ಜೊತೆಯಲ್ಲಿ ಕರೆದೊಯ್ಯಲು ಹವಣಿಸುವರು, ನಾನು ನಾಚಿಕೆಯಿಂದ ಹೋಗುತ್ತಿರಲಿಲ್ಲ. ಆ ಲೇಡಿಗಳು ಚಿಂತಿತರಾದುದನ್ನಾಗಲಿ ಉದಾಸರಾಗಿದ್ದುದನ್ನಾಗಲಿ ನಾನೆಂದೂ ಕಾಣಲಿಲ್ಲ. ಮಿಸ್ಟರ್ ದಾಸರಿಗೆ ಬಹಳ ಜಡ್ಡಾಗಿತ್ತು; ಆದರೂ ಮಿಸೆಸ್ ದಾಸರ ಮೋರೆಯ ಮೇಲೆ ಚಿಂತೆಯ ಚಿಹ್ನೆಪೂ ಇರಲಿಲ್ಲ. ಮಿಸ್ಟರ್ ಬಾಗಡಿ ಸೈನಿತಾಲದಲ್ಲಿ ಕ್ಷಯ ರೋಗದ ಚಿಕಿತ್ಸೆಹೊಂದುತ್ತಿದ್ದರು; ಆದರೂ ಮಿಸೆಸ್ ಬಾಗಡಿ ನಿತ್ಯವೂ ಟೆನಿಸ್ ಆಡಲು ಹೋಗುತ್ತಿದ್ದರು. ಈ ಪರಿಸ್ಥಿತಿಯಲ್ಲಿ ನನ್ನ ಸ್ಥಿತಿ ಹೇಗಿತ್ತೆಂಬುದು ನನಗೇ ಗೊತ್ತು.

ಈ ಲೇಡಿಗಳ ನಡೆನುಡಿಗಳಲ್ಲಿ ಒಂದು ಆಕರ್ಷಣಶಕ್ತಿಯಿತ್ತು; ಅದು ನನ್ನನ್ನು ಎಳೆದೊಯ್ಯುತ್ತಿತ್ತು. ಆಮೋದಪ್ರಮೋದಗಳಿಗಾಗಿ ಅವರು ಯಾವಾಗಲೂ ಉತ್ಸುಕರು; ಅವರನ್ನು ನೋಡಿ ಅವರ ಹಾಗೆಯೇ ನಾನೂ ನಿಃಸಂಕೋಚಳಾಗಿದ್ದರೆ ಎಂದು ಹಾರಯಿಸುವುದು ನನ್ನ ಜೀವ. ಅವರು ಇಂಗ್ಲಿಷ್ ಮಾತಾಡುವುದನ್ನು ಕೇಳಿ ಅವರು ದೇವಿಯರೆಂದು ನನಗೆನ್ನಿಸುತ್ತಿತ್ತು. ನನ್ನ ಈ ಕುಂದುಕೊರತೆಗಳನ್ನು ತುಂಬಿಕೊಳ್ಳಲು ನಾನು ಪ್ರಯತ್ನಿಸುತ್ತಿದ್ದೆ.

ಈ ಮಧ್ಯೇ ನನಗೊಂದು ಖೇದಜನಕ ಅನುಭವ ಬರತೊಡಗಿತು. ಬಾಬೂಜಿ ನನ್ನನ್ನು ಮೊದಲಿಂದಲೂ ಅತ್ಯಂತ ಆದರಿಸುತ್ತಿದ್ದರು. ಸದೈವ 'ಡಿಯರ್, ಡಾರ್ಲಿಂಗ್' ಮೊದಲಾಗಿ ಸಂಬೋಧಿಸುತ್ತಿದ್ದರು; ಆದರೂ ಅವರ ಮಾತಿನಲ್ಲಿ ಒಂದು ಬಗೆಯ ಕೃತಕತನವಿದ್ದಂತೆ ಎನಿಸುತ್ತಿತ್ತು. ಈ ಮಾತು ಹೃದಯದಿಂದ ಹೊರಡದೆ ಬಾಯಿಂದ ಮಾತ್ರ ಬರುತ್ತಿವೆ ಎನಿಸುತ್ತಿತ್ತು. ಅವರ ಸ್ನೇಹ ಪ್ರೇಮಗಳಲ್ಲಿ ಹಾರ್ದಿಕಭಾವಕ್ಕಿಂತ ಅಲಂಕಾರ

ಹೆಚ್ಚಾಗಿರುತ್ತಿತ್ತು. ಆದರೆ ಇನ್ನೂ ವಿಸ್ಮಯದ ಮಾತೆಂದರೆ, ಬಾಬೂಜಿ ಯವರ ಮೇಲೆ ಮೊದಲಿನ ಆ ಶ್ರದ್ಧೆ ಉಳಿದಿರಲಿಲ್ಲ. ಈಗ ಅವರ ತಲೆ ನೋವಿನಿಂದ ನನ್ನ ಹೃದಯಕ್ಕೆ ನೋವಾಗುತ್ತಿರಲಿಲ್ಲ. ನನ್ನಲ್ಲಿ ಆತ್ಮಗೌರವದ ಆವಿರ್ಭಾವವಾಗುತ್ತಲಿತ್ತು. ನಾನೀನ ವೇಷಗುಸಿಂಗಾರ ಮಾಡಿಕೊಳ್ಳುವುದು ಇದೂ ಒಂದು ಜಗತ್ತಿನಲ್ಲಿ ನನ್ನ ಕರ್ತವ್ಯವೆಂದು, ಯಾವನೊಬ್ಬ ಪುರುಷನ ವ್ರತಧಾರಿಣಿ ಎಂದಲ್ಲ. ನನಗೂ ನನ್ನ ಸೌಂದರ್ಯದ ಬಗ್ಗೆ ಹೆಮ್ಮೆ ಎನಿಸುತ್ತಿತ್ತು ಈಗ. ಈಗ ನಾನು ಎರಡನೆಯವರಿಗಾಗಿ ಅಲ್ಲ, ನನಗಾಗಿ ಬಾಳುತ್ತಿದ್ದೆ. ತ್ಯಾಗ–ಸೇವಾಭಾವಗಳು ನನ್ನ ಅಂತರಂಗದಿಂದ ಲುಪ್ತವಾಗ ತೊಡಗಿದ್ದವು.

ನಾಸೀಗಲೂ ಪರದೆ ಬಿಟ್ಟಿರಲಿಲ್ಲ. ಆದರೆ ತನ್ನ ರೂಪದ ಪ್ರಶಂಸೆ ಯನ್ನು ಕೇಳಲು ಹೃದಯ ಹಾತೊರೆಯುತ್ತಿತ್ತು. ಒಂದು ದಿನ ಮಿಸ್ಟರ್ ದಾಸ ಹಾಗೂ ಬೇರೆ ಕೆಲ ಸಭ್ಯರು ಬಾಬೂಜಿಯವರ ಜೊತೆಯಲ್ಲಿ ಕುಳಿತಿದ್ದರು. ಅವರ ನನ್ನ ನಡುವೆ ಒಂದು ತೆರೆ ಮಾತ್ರ ಅಡ್ಡವಿತ್ತು. ನನ್ನ ಈ ಸಂಕೋಚಕ್ಕಾಗಿ ಬಾಬೂಜಿ ಬಹಳ ಲಜ್ಜಿತರಾಗಿದ್ದರು. ತಮ್ಮ ಸಭ್ಯತೆಗೆ ಇದೊಂದು ಕಪ್ಪುಕಲೆಯೆಂದು ಅವರು ತಿಳಿಯುತ್ತಿದ್ದರು. ತಮ್ಮ ಹೆಂಡತಿ ರೂಪಸಿಂಗಾರಗಳಲ್ಲಿ ಇತರರಿಗಿಂತ ಕೀಳೆಂಬುದಕ್ಕಾಗಿ ಪರದೆಯಲ್ಲಿಲ್ಲ, ಅವಳಿನ್ನೂ ನಾಚಿಕೊಳ್ಳುತ್ತಿದ್ದಾಳೆ ಎಂಬುದನ್ನು ಅವರು ತೋರಿಸಲು ಬಯಸುತ್ತಿದ್ದರು. ತಮ್ಮ ಗೆಳೆಯರು ನನ್ನ ಚೆಲುವಿಕೆ, ನನ್ನ ಉಡಿಗೆ ಒಡವೆ ನೋಡಲಿ ಎಂಬ ಆಶೆಯಿಂದ ಬಾಬೂಜಿ ನನ್ನನ್ನು ಮತ್ತೆ ಮತ್ತೆ ಪರದೆಯ ಹತ್ತಿರಕ್ಕೆ ಕರೆಯುತ್ತಿದ್ದರು. ಕೊನೆಗೆ, ಕೆಲದಿನಗಳಲ್ಲಿ ನನ್ನ ಸಂಕೋಚ ತೊಲಗಿತು. ಅಲಹಾಬಾದಿಗೆ ಬಂದು ಪೂರಾ ಎರಡು ವರುಷ ಕಳೆದ ಮೇಲೆ, ನಾನು ಬಾಬೂಜಿಯವರೊಟ್ಟಿಗೆ ಮುಸುಕು ತೊರೆದು ಅಡ್ಡಾಡತೊಡಗಿದೆ. ತಿರುಗಾಟದ ತರುವಾಯ ಟೆನಿಸಿನ ಪಾಳಿ. ಕೊನೆಗೆ ಕ್ಲಬ್ಬಿಗೆ ಹೋಗಿ ಕೂಡ್ರ ತೊಡಗಿದೆ. ಆರಂಭದಲ್ಲಿ ಈ ಕ್ಲಬ್ಬು, ಟೆನಿಸ್ಸು ಒಂದು ತಮಾಶೆಯಾಗಿ ತೋರಿದವು. ಈ ಜನ ವ್ಯಾಯಾಮಕ್ಕಾಗಿ ಟೆನಿಸ್ ಆಡುವುದಿಲ್ಲ, ಫ್ಯಾಶನಿಗಾಗಿ ಆಡುತ್ತಾರೆ ಎಂದೆನಿಸಿತು. ತಾವು ಟೆನಿಸ್ ಆಡುತ್ತಿದ್ದೇವೆ ಎಂಬುದನ್ನು ಯಾವಾಗಲೂ ಮರೆಯುತ್ತಿರಲಿಲ್ಲ. ಅವರ ಪ್ರತಿಯೊಂದು ಚಟುವಟಿಕೆಯಲ್ಲಿ

ಬಾಗುವುದರಲ್ಲಿ, ಓಡುವುದರಲ್ಲಿ, ಜಿಗಿಯುವುದರಲ್ಲಿ—ಕೃತ್ರಿಮತೆ ಇರುತ್ತಿತ್ತು; ಈ ಆಟದ ಗುರಿ ಕಸರತ್ತಲ್ಲ, ಬರೀ ತೋರಿಕೆ ಎಂದೆನಿಸುತ್ತಿತ್ತು.

ಕ್ಲಬ್ಬಿನ ಸ್ಥಿತಿ ಇದಕ್ಕೂ ವಿಚಿತ್ರ. ಅಲ್ಲೆಲ್ಲವೂ ನಕಲು, ಅಸಡ್ಡಾಳ, ವಿರೂಪ. ಅಲ್ಲಿ ಜನ ಕೆಲ ಆರಿಸಿದ ಶಬ್ದಗಳನ್ನು—ಅವೂ ಸಾರವಿಲ್ಲದವು—ಬಳಸುತ್ತಿದ್ದರು; ನಾಟಕದ ನಗೆ—ಅದೂ ಅರ್ಥಹೀನ—ನಗುತ್ತಿದ್ದರು; ಸ್ತ್ರೀಯರ ಆ ಅಭದ್ರ ನಿರ್ಲಜ್ಜತೆ, ಪುರುಷರ ಆ ಭಾವಶೂನ್ಯ ಸ್ತ್ರೀಪೂಜೆ ನನಗೆಷ್ಟೂ ಹಿಡಿಸುತ್ತಿರಲಿಲ್ಲ. ನಾಲ್ಕೂ ಕಡೆ ಆಂಗ್ಲರ ರೀತಿನಡತೆಗಳ ಹಾಸ್ಯಜನಕ ನಕಲು! ಆದರೆ ಕ್ರಮಶಃ ನಾನೂ ಆ ನಡೆವಳಿಗೇ ಒಲಿದು ಅವರನ್ನು ಹಿಂಬಾಲಿಸಿದೆ. ಈ ಪ್ರದರ್ಶನಲೋಲುಪತೆಯಲ್ಲಿ ಎಂತಹ ಶಕ್ತಿಯುಂಟೆಂಬುದು ಈಗ ನನ್ನ ಅನುಭವಕ್ಕೆ ಬಂದಿತು. ದಿನಕ್ಕೊಂದು ಬಗೆಯ ಸಿಂಗಾರ, ವೇಷರಚನೆ ಮಾಡತೊಡಗಿದೆ ನಾನು–ಕೇವಲ ಕ್ಲಬ್ಬಿನಲ್ಲಿ ಎಲ್ಲರ ಕಣ್ಣೊಳಗೂ ಬಿಂಬಿಸುವುದಕ್ಕಾಗಿ. ಬಾಬೂಜಿಯವರ ಸೇವೆ ಸತ್ಕಾರಗಳಿಗಿಂತ ನನ್ನ ಸಿಂಗಾರದಲ್ಲಿಯೇ ಮನಸಿನ ಆಸಕ್ತಿ ಹೆಚ್ಚಿತು; ಆ ಲಾಲಸೆ ನನಗೆ ಅಮಲಿನಂತೆಯೇ ಅಂಟಿಕೊಂಡಿತು. ಇಷ್ಟೇ ಅಲ್ಲ, ಜನರ ಬಾಯಿಂದ ನನ್ನ ಸೌಂದರ್ಯದ ಹೊಗಳಿಕೆ ಕೇಳಿದರೆ ಹೆಮ್ಮೆ ಬೆರೆತ ಆನಂದ ನನಗಾಗುತ್ತಿತ್ತು. ನನ್ನ ಲಜ್ಜಾಶೀಲತೆಯು ಎಲ್ಲೆ ವಿಸ್ಮೃತವಾಯಿತು. ಮೊದಲು ನನ್ನ ಮೈತುಂಬ ನವಿರೇಳಿಸುತ್ತಿದ್ದ ಆ ದೃಷ್ಟಿಪಾತದಿಂದ, ಮೊದಲು ನನ್ನನ್ನು ವಿಷ ಕುಡಿಯಲು ಪ್ರೇರಿಸುತ್ತಿದ್ದ ಆ ಹಾಸ್ಯಕಟಾಕ್ಷದಿಂದ, ಈಗ ನನಗೆ ಉನ್ಮಾದಪೂರ್ಣ ಹರ್ಷವಾಗುತ್ತಿತ್ತು. ಆದರೆ, ನನ್ನ ಸ್ಥಿತಿಯ ಮೇಲೆ ಯಾವಾಗಲಾದರೂ ಒಳನೋಟ ಚೆಲ್ಲಿದರೆ ಮನಸ್ಸು ಬೆಚ್ಚುತ್ತಿತ್ತು. ಈ ಡೋಣಿ ಯಾವ ದಡಕ್ಕೆ ಹತ್ತುವುದು? ಕ್ಲಬ್ಬಿಗೆ ಹೋಗಬಾರದು ಎಂದು ಎಷ್ಟೋ ಸಲ ಎಂದುಕೊಳ್ಳುವೆ; ಆದರೆ ಆ ಹೊತ್ತು ಬರುತ್ತಲೂ ಹೋಗಲು ಅಣಿಯಾಗುವೆ. ನನ್ನಂಕೆಯಲ್ಲಿ ನಾನಿರಲಿಲ್ಲ. ನನ್ನ ಒಳ್ಳೆಯ ಕಲ್ಪನೆಗಳು ದುರ್ಬಲವಾಗಿದ್ದವು.

*

ಮತ್ತೆರಡು ವರುಷಗಳು ಉರುಳಿದವು. ಬಾಬೂಜಿಯವರ ಸ್ವಭಾವದಲ್ಲಿ ವಿಚಿತ್ರ ಪರಿವರ್ತನೆ ಕಂಡುಬರತೊಡಗಿತು. ಅವರು ಉದಾಸೀನರಾಗಿ

ಚಿಂತಾಮಗ್ನರಾಗಿ ಕಾಣುತ್ತಿದ್ದರು. ನನ್ನೊಡನೆ ಮಾತು ಕಡಿಮೆ ಯಾಯಿತು. ಇವರನ್ನು ಏನೋ ಕಠಿನ ಚಿಂತೆ ಆವರಿಸಿದೆ, ಇಲ್ಲವೆ ಏನಾದರೂ ಅಸ್ವಾಸ್ಥ್ಯವಿರಬೇಕು ಎನಿಸುತ್ತಿತ್ತು. ಮೋರೆ ಬತ್ತಿರುತ್ತಿತ್ತು. ಅಂತಹ ಇಂತಹ ಮಾತಿಗಾಗಿಯೂ ನೌಕರರ ಮೇಲೆ ಹರಿಹಾಯುತ್ತಿದ್ದರು. ಹೊರಗೆ ಹೋಗುವುದೂ ತೀರ ಕಡಿಮೆಯಾಯಿತು.

ಒಂದೇ ಒಂದು ತಿಂಗಳ ಹಿಂದೆ ಅವರು ತಪ್ಪದೆ ಕ್ಲಬ್ಬಿಗೆ ಹೋಗುತ್ತಿದ್ದರು; ಬಿಟ್ಟರೆ ಅವರ ಮನಸಿಗೆ ನೆಮ್ಮದಿಯೇ ಇರುತ್ತಿರಲಿಲ್ಲ. ಆದರೆ, ಈಗವರು ತಮ್ಮ ಕೋಣೆಯಲ್ಲಿ ಆರಾಮ ಕುರ್ಚಿಯಲ್ಲಿ ಒರಗಿಕೊಂಡು ಪತ್ರಿಕೆಯನ್ನೋ ಪುಸ್ತಕವನ್ನೋ ನೋಡುತ್ತಿರುವರು. ಏನು ವಿಷಯ ಎಂಬುದು ನನಗೆ ತಿಳಿಯುತ್ತಿರಲಿಲ್ಲ.

ಒಂದು ದಿನ ಅವರಿಗೆ ಬಹಳ ಜ್ವರ ಬಂದವು. ಇಡೀ ದಿನ ಎಚ್ಚರಿರಲಿಲ್ಲ. ಆದರೆ ನನಗೆ ಅವರ ಬಳಿ ಕುಳ್ಳಿರುವುದೆಂದರೆ ಅಂಕುಶದಂತೆ ಚುಚ್ಚುತ್ತಿತ್ತು. ನನ್ನ ಮನಸು ಒಂದು ಕಾದಂಬರಿಯಲ್ಲಿ ತಲ್ಲೀನವಾಗಿತ್ತು. ಅವರ ಹತ್ತಿರ ನಿಮಿಷ ಮಾತ್ರ ಹೋಗಿ ಬಂದುಬಿಡುತ್ತಿದ್ದೆ. ಟೆನಿಸಿನ ಸಮಯವಾದಾಗ ಹೋಗಲೋ ಬೇಡವೋ ಎಂದು ಇತಿಮಿತಿಯಲ್ಲಿ ಬಿದ್ದೆ. ಬಹಳ ಹೊತ್ತು ಈ ಕದನ ನಡೆಯಿತು. ನಾನು ಇಲ್ಲಿರುವುದರಿಂದ ಅವರಿಗೇನು ಗುಣವಾಗುವುದಿಲ್ಲ, ಅದು ನಿರರ್ಥಕ ಎಂದು ಕೊನೆಯ ನಿರ್ಣಯವಾಯಿತು. ರೆಕೆಟ್ ತೆಗೆದುಕೊಂಡು ಕ್ಲಬ್ಬಿಗೆ ನಡೆದೆ. ಅಲ್ಲಿ ಮಿಸೆಸ್ ದಾಸ, ಮಿಸೆಸ್ ಬಾಗಡಿಯವರಿಗೆ ನನ್ನ ಪತಿಯ ಸ್ಥಿತಿಯನ್ನು ತಿಳಿಸಿ, ಸಜಲನೇತ್ರಳಾಗಿ ಸುಮ್ಮನೆ ಕುಳಿತುಕೊಂಡೆ. ಎಲ್ಲರೂ ಟೆನಿಸ್ ಕೋರ್ಟಿಗೆ ಹೊರಟರು. ಮಿಸ್ಟರ್ ದಾಸರು ನನ್ನನ್ನು ಕರೆದರು. ತಣ್ಣನೆಯ ನಿಟ್ಟುಸಿರಿಟ್ಟು ಅಂಗಳಕ್ಕೆ ಹೋಗಿ ಆಟದಲ್ಲಿ ಸೇರಿದೆ.

ಮೂರು ವರುಷಗಳ ಹಿಂದೆ ಬಾಬೂಜಿಯವರಿಗೆ ಹೀಗೆಯೇ ಜ್ವರ ಬಂದಿದ್ದವು; ರಾತ್ರಿಯೆಲ್ಲಾ ಅವರಿಗೆ ಗಾಳಿ ಹಾಕುತ್ತ ಕುಳಿತಿರುತ್ತಿದ್ದೆ ನಾನು. ಹೃದಯ ಕಳವಳಿಸುತ್ತಿತ್ತು. ಇವರ ಬದಲು ನನಗೆ ಜ್ವರ ಬರಲಿ, ಇವರು ಎದ್ದು ಕೂಡ್ರಲಿ ಎಂದು ಜೀವ ಕೋರುತ್ತಿತ್ತು. ಈಗ ಆ ಹೃದಯ

ಸ್ನೇಹಶೂನ್ಯವಾಗಿತ್ತು, ತೋರಾಟಿಕೆ ಹೆಚ್ಚಿತ್ತು. ಏಕಾಕಿಯಾಗಿ ಅಳುವ ಕ್ಷಮತೆ ನನ್ನಲ್ಲಿ ಉಳಿದಿರಲಿಲ್ಲ. ಎಂದಿನಂತೆಯೇ ರಾತ್ರಿ ಒಂಬತ್ತಕ್ಕೆ ಮನೆಗೆ ಮರಳಿದೆ. ಬಾಬೂಜಿಯವರ ಪ್ರಕೃತಿ ಕೊಂಚ ವಾಸಿಯಾಗಿ ಕಂಡಿತು. ನನ್ನನ್ನು ಅಶಕ್ತದೃಷ್ಟಿಯಿಂದ ನೋಡಿ ಮಗ್ಗುಲು ಹೊರಳಿದರು ಮಾತ್ರ. ನಾನು ಅಡ್ಡಾದಾಗ, ನನ್ನ ಹೃದಯ ನನ್ನನ್ನು ಸ್ವಾರ್ಥಪರತೆಗಾಗಿ, ವಿಲಾಸಾಸಕ್ತಿಗಾಗಿ ಧಿಕ್ಕರಿಸುತ್ತಲಿತ್ತು.

ನಾನೀಗ ಇಂಗ್ಲಿಷ್ ಕಾದಂಬರಿಗಳನ್ನು ಓದಿ ತಿಳಿದುಕೊಳ್ಳುತ್ತಿದ್ದೆ. ನಮ್ಮ ಮಾತುಕತೆ ಅತ್ಯಂತ ಉತ್ಕೃಷ್ಟವಾಗಿ, ವಿಚಾರಾತ್ಮಕವಾಗಿ ನಡೆಯುತ್ತಿತ್ತು.

ನಮ್ಮ ಸುಸಂಸ್ಕೃತತೆಯ ಆದರ್ಶ ಈಗ ಅತೀವ ಉಚ್ಚವಾಗಿತ್ತು. ನಮ್ಮ ಮಿತ್ರಮಂಡಲಿಯ ಹೊರತಾಗಿ ಇತರರೊಡನೆ ಬೆರೆಯುವುದಕ್ಕೆ ನಮಗೆ ಸಂಕೋಚವೆನಿಸುತ್ತಿತ್ತು. ನಮಗಿಂತ ಕೆಳಮಟ್ಟದ ಜನರೊಡನೆ ಮಾತ ನಾಡುವುದು ಅಪಮಾನವೆಂದು ನಾವು ತಿಳಿಯುತ್ತಿದ್ದೆವು. ನೌಕರರೆಂದರೆ ಕೇವಲ ನೌಕರರು; ಅವರ ಸ್ವಂತದ ಸ್ಥಿತಿಗತಿಯ ಪರವೆ ನಮಗಿರಲಿಲ್ಲ. ಅವರಿಂದ ನಾವು ಅಲಿಪ್ತರಾಗಿದ್ದುಕೊಂಡು ಅವರ ಮೇಲೆ ನಮ್ಮ ಪ್ರಭುತ್ವ ವನ್ನು ಪ್ರಸ್ಥಾಪಿಸಲು ಬಯಸುತ್ತಿದ್ದೆವು. ನಮ್ಮನ್ನು ಅವರು ಸಾಹೇಬರೆಂದು ತಿಳಿಯಲೆಂಬುದು ನಮ್ಮಾಸೆ. ಹಿಂದುಸ್ತಾನೀ ಹೆಂಗುಸರನ್ನು ಕಂಡರೆ ನನಗೆ ಹೇಸಿಕೆ—ಅವರಲ್ಲಿ ಶಿಷ್ಟತೆ ಇರಲಿಲ್ಲ. ಇರಲಿ.

ಮರುದಿನವೂ ಬಾಬೂಜಿಯವರಿಗೆ ಗುಣವಾಗಲಿಲ್ಲ. ನಾನು ಕ್ಲಬ್ಬಿಗೆ ಹೋಗಲಿಲ್ಲ. ಅವರಿಗೆ ಸತತ ಮೂರು ದಿನ ಜ್ವರ ಬಂದವು. ಮಿಸೆಸ್ ದಾಸರು ಒಬ್ಬ ನರ್ಸನ್ನು ಕರೆಯಲು ಮತ್ತೆ ಮತ್ತೆ ಆದೇಶವಿತ್ತುದರಿಂದ ನಾನೊಪ್ಪಿಕೊಂಡೆ. ಅಂದಿನಿಂದ ರೋಗಿಯ ಆರಯ್ಕೆಯ ಕೆಲಸದಿಂದ ಬಿಡುವಾಗಿ ನನಗೆ ಸಂತೋಷವೆನಿಸಿತು. ಎರಡು ದಿನ ನಾನು ಕ್ಲಬ್ಬಿಗೆ ಹೋಗಿರದಿದ್ದರೂ ನನ್ನ ಜೀವ ಅಲ್ಲಿಯೇ ಇತ್ತು. ಆದರೆ ನನ್ನ ಭೀರುತ್ವ-ಪೂರ್ಣ ತ್ಯಾಗದಮೇಲೆ ಕೋಪವೂ ಬರುತ್ತಿತ್ತು.

ಒಂದು ದಿನ ಕುರ್ಚಿಯಲ್ಲಿ ಒರಗಿ ನಾನೊಂದು ಇಂಗ್ಲಿಷ್ ಪುಸ್ತಕ

ಓದುತ್ತಿದ್ದೆ. ಬಾಬೂಜಿಯವರ ಜಡ್ಡು ಅಸಾಧ್ಯವಾಗಿ ಬಿಟ್ಟರೆ ಎಂಬ ವಿಚಾರ ನನ್ನ ಮನದಲ್ಲಿ ಪಕ್ಕನೆ ಎದ್ದಿತು. ಈ ಶೋಕಮಯ ಕಲ್ಪನೆಯಿಂದ ನಾನು ಒಳಗೊಳಗೆ ಆನಂದ ಹೊಂದತೊಡಗಿದೆ. ಮಿಸೆಸ್ ದಾಸ, ಮಿಸೆಸ್ ನಾಯ್ಡು, ಮಿಸೆಸ್ ಶ್ರೀವಾಸ್ತವ, ಮಿಸ್ ಖರೆ, ಮಿಸೆಸ್ ಶರಗಾ ಎಲ್ಲರೂ ಸಹಾನುಭೂತಿಯನ್ನು ತೋರಲು ಬರುವರು. ಅವರನ್ನು ಕಂಡೊಡನೆ ನನ್ನ ಕಣ್ಣುಗಳಲ್ಲಿ ನೀರುಕ್ಕುವುದು. 'ಸೋದರಿಯರೆ, ನನ್ನ ಸರ್ವಸ್ವ ಹೋಯಿತು. ಅಯ್ಯೋ, ಬದುಕು ಹಾಳಾಯ್ತು. ನನ್ನ ಬಾಳು ಕಾಳಿರುಳಿನ ಕಾಡಿನ—ಸುಡುಗಾಡಿನ ದೀವಿಗೆಗೆ ಸಮನಾಯಿತು. ನನ್ನ ಗತಿಗಾಗಿ ದುಃಖ ವನ್ನು ಮಾತ್ರ ಪ್ರಕಟಿಸಬೇಡಿರಿ. ಬಂದುದನ್ನೆಲ್ಲ ಆ ಮಹಾನ್ ಆತ್ಮದ ಮುಕ್ತಿಯ ಸಲುವಾಗಿ ಸಹಿಸಿಕೊಳ್ಳುವೆ.' ಎಂದು ನಾನೆನ್ನುವೆ

ಹೀಗೊಂದು ದುಃಖಪೂರ್ಣ ವ್ಯಾಖ್ಯಾನವನ್ನು ಮನದಲ್ಲಿ ರಚಿಸಿದೆ. ಶವದೊಂದಿಗೆ ಮಸಣಕ್ಕೆ ಹೋಗುವಾಗ ಯಾವ ವಸ್ತ್ರ ಧರಿಸಬೇಕೆಂಬುದನ್ನು ಕೂಡ ನಿಶ್ಚಯಿಸಿದೆ!

ಊರಲ್ಲೆಲ್ಲ ಈ ಘಟನೆಯ ಚರ್ಚೆ ನಡೆಯುವುದು. ಇಡಿ ಕಂಟೋನ್ಮೆಂಟಿನ ಜನ ಸಮವೇದನೆಯ ಓಲೆ ಬರೆಯುವರು. ಅವುಗಳಿಗೆ ನನ್ನ ಉತ್ತರವನ್ನು ಪತ್ರಿಕೆಗಳಲ್ಲಿ ಪ್ರಕಟಿಸುವೆ.—'ಒಂದೊಂದಕ್ಕೂ ಪ್ರತ್ಯೇಕ ವಾಗಿ ಉತ್ತರ ಬರೆಯಲು ನಾನು ಅಸಮರ್ಥಳಾಗಿದ್ದೇನೆ; ಹೃದಯ ಚೂರು ಚೂರಾಗಿದೆ; ಅದಕ್ಕೆ ಅಳುವುದಕ್ಕೆ ಹೊರತು ಬೇರೇತಕ್ಕೂ ಸಮಯವಿಲ್ಲ. ಆ ಜನರಿಗೆಲ್ಲ ಅವರ ಸಹಾನುಭೂತಿಗಾಗಿ ನಾನು ಕೃತಜ್ಞಳಾಗಿದ್ದೇನೆ; ಮೃತರ ಆತ್ಮದ ಸದ್ಗತಿಗಾಗಿ ದೇವರಲ್ಲಿ ಪ್ರಾರ್ಥಿಸಬೇಕೆಂದು ಅವರನ್ನು ಬಿನ್ನವಿಸಿಕೊಳ್ಳುವೆ.'

ಈ ಕಲ್ಪನೆಯಲ್ಲಿ ಮುಳುಗಿರುವಾಗ ನರ್ಸ್ ಬಂದು "ತಮ್ಮನ್ನು ಸಾಹೇಬರು ಕೇಳುತ್ತಾರೆ" ಎಂದು ತಿಳಿಸಿದಳು.

ಆಗ ಕ್ಲಬ್ಬಿಗೆ ಹೋಗುವ ಸಮಯ. ಈ ಕರೆಯಿಂದ ನನಗೆ ಬೇಸರ ವೆನಿಸಿತು. ಆದರೆ ಮಾಡುವುದೇನು? ಹೇಗೋ ಅವರ ಹತ್ತಿರ ಹೋದೆ. ಅವರಿಗೆ ಜಡ್ಡಾಗಿ ಸುಮಾರು ತಿಂಗಳಾಗಿತ್ತು. ಬಹಳ ದುರ್ಬಲರಾಗಿದ್ದರು.

ವಿನಯಪೂರ್ಣ ದೃಷ್ಟಿಯಿಂದ ಅವರು ನನ್ನ ಕಡೆ ನೋಡಿದರು. ಕಣ್ಣುಗಳಲ್ಲಿ ನೀರಿತ್ತು. ನನಗೆ ದಯೆ ಬಂದಿತು. ಕುಳಿತುಕೊಂಡು ಧೈರ್ಯ ಹೇಳಿದೆ. "ಏನು ಮಾಡಲಿ? ಬೇರೆ ಡಾಕ್ಟರನ್ನು ಕರೆಯಲೆ?" ಎಂದು ಕೇಳಿದೆ.

ಬಾಬೂಜಿ ದೃಷ್ಟಿ ತಗ್ಗಿಸಿ ಅತ್ಯಂತ ಕರುಣಭಾವದಿಂದ ಮಾತನಾಡಿದರು. "ಇಲ್ಲಿ ನನಗೆ ಗುಣವಾಗುವುದಿಲ್ಲ; ಅವ್ವನ ಹತ್ತಿರ ಹೋಗಬೇಕು," ಎಂದರು.

"ಇಲ್ಲಿಗಿಂತ ಅಲ್ಲಿ ಚಿಕಿತ್ಸೆ ಚೆನ್ನಾಗಿ ಆಗುವುದೆಂದು ತಿಳಿದಿರುವಿರೇನು?" ಎಂದು ನಾನು ಕೇಳಿದೆ.

"ಏಕೋ ಏನೋ, ಅವ್ವನನ್ನು ನೋಡಬೇಕೆಂದು ಜೀವ ಚಡಪಡಿಸುತ್ತಿದೆ. ಔಷಧ ಉಪಚಾರ ಇಲ್ಲದೆಯೂ ಅಲ್ಲಿ ನೆಟ್ಟಗಾಗುವುದೆಂದು ಎನಿಸುತ್ತಿದೆ." ಎಂದರು.

"ಇದು ನಿಮ್ಮ ವಿಚಾರಮಾತ್ರ" ನಾನೆಂದೆ.

"ಹಾಗೂ ಇದ್ದೀತು. ಆದರೆ ನನ್ನ ಅಪೇಕ್ಷೆ ಪೂರೈಸು. ಈ ರೋಗದಿಂದಷ್ಟೇ ಅಲ್ಲ, ಈ ಜೀವನದಿಂದಲೂ ನನಗೆ ರೋಸಿಕಿಟ್ಟಿದೆ."

ನಾನು ವಿಸ್ಮಯದಿಂದ ಅವರ ಕಡೆ ನೋಡಿದೆ. ಅವರು ಮತ್ತೆ ಆರಂಭಿಸಿದರು:

"ಹಾಂ, ಈ ಬಾಳು ಬೇಸರಾಗಿದೆ. ನಾನು ಯಾವ ತರಂಗಿತವಾದ ಸ್ವಚ್ಛವಾದ ಜಲದ ಕಡೆಗೆ ಓಡುತ್ತಲಿದ್ದೆನೋ ಅದು ಮರುಭೂಮಿಯೆಂದು ನನಗೀಗ ಎನಿಸುತ್ತಿದೆ.. ಈ ಬಗೆಯ ಜೀವನದ ಹೊರರೂಪಕ್ಕೆ ನಾನು ಮನಸೋತಿದ್ದೆ. ಈಗ ಅದರ ಆಂತರಿಕ ಅವಸ್ಥೆಗಳ ಅರಿವು ನನಗಾಗಿದೆ. ಈನಾಲ್ಕು ವರುಷಗಳಲ್ಲಿ ನಾನು ಈ ಉಪವನದಲ್ಲಿ ಸಾಕಷ್ಟು ವಿಹರಿಸಿದೆ; ಇದು ಮೊದಲಿನಿಂದ ಕೊನೆಯವರೆಗೂ ಕಂಟಕಮಯವಾಗಿದೆ. ಇಲ್ಲಿ ಹೃದಯಕ್ಕೆ ಶಾಂತಿಯಿಲ್ಲ, ಆತ್ಮಿಕ ಆನಂದವಿಲ್ಲ. ಇದೊಂದು ಉನ್ಮತ್ತ ಅಶಾಂತಿಮಯ, ಸ್ವಾರ್ಥಪೂರ್ಣ, ವಿಲಾಸಯುಕ್ತ ಜೀವನ; ನೀತಿಯಿಲ್ಲ ಧರ್ಮವಿಲ್ಲ. ಸಹಾನುಭೂತಿಯಿಲ್ಲ, ಸಹೃದಯತೆಯಿಲ್ಲ. ದೇವರಿಗಾಗಿ ಈ ಕಿಚ್ಚಿನಿಂದ ನನ್ನನ್ನು ಉಳಿಸು. ಬೇರೆ ಯಾವ ಉಪಾಯವೂ ಇಲ್ಲದಿದ್ದರೆ,

ಅವ್ವನಿಗೆ ಒಂದು ಕಾಗದ ಬರೆ. ಅವರು ಬರದೆ ನಿಲ್ಲುವುದಿಲ್ಲ. ತನ್ನ ದೈವ-ಗೇಡಿ ಮಗನ ದುಃಖವನ್ನು ಅವರು ನೋಡಲಾರರು. ಈ ಸೊಸಾಯಿಟಿಯ ಗಾಳಿ ಅವರಿಗಿನ್ನೂ ಬಡಿದಿಲ್ಲ, ಅವರು ಬರುತ್ತಾರೆ. ಅವರ ಮಮತೆಯ ದೃಷ್ಟಿಯಿಂದ, ಅವರ ಸ್ನೇಹದ ಆರೈಕೆಯಿಂದ ನೂರು ಔಷಧಗಳ ಕೆಲಸವಾಗುತ್ತದೆ. ಅವರ ಮೊಗದಲ್ಲಿ ಬೆಳಗುವ ಜ್ಯೋತಿಗಾಗಿ ನನ್ನ ಕಣ್ಣುಗಳು ಹಂಬಲಿಸುತ್ತಿವೆ. ಅವರ ತೊಡೆಯಮೇಲೆ, ಒಂದು ವೇಳೆ ನಾನು ಮಡಿದರೂ ನನ್ನ ಆತ್ಮಕ್ಕೆ ಶಾಂತಿ ದೊರೆಯುವುದು. ”

ಇದು ಜ್ವರದಲ್ಲಿಯ ಬಡಬಡಿಕೆ ಎಂದು ನಾನು ತಿಳಿದುಕೊಂಡೆ. “ ಸ್ವಲ್ಪ ಇವರ ಟೆಂಪರೇಚರ್ ನೋಡಿರಿ. ನಾನು ಡಾಕ್ಟರರ ಕಡೆಗೆ ಹೋಗುತ್ತೇನೆ. ” ಎಂದು ನರ್ಸಿಗೆ ಹೇಳಿದೆ. ಒಂದು ಅಜ್ಞಾತಭಯದಿಂದ ನನ್ನೆದೆ ನಡುಗತೊಡಗಿತು. ನರ್ಸ್ ಥರ್ಮಾಮೀಟರ್ ತೆಗೆದುಕೊಂಡು ಬಾಬೂಜಿಯ ಹತ್ತಿರ ಹೋದಳು. ಕೂಡಲೇ ಅವರು ಆ ಯಂತ್ರವನ್ನು ಅವಳ ಕೈಯಿಂದ ಕಸಿದುಕೊಂಡು ನೆಲಕ್ಕೆಸೆದರು ಅದು ಒಡೆದು ತುಂಡು ತುಂಡಾಯಿತು. ನನ್ನ ಕಡೆ ಅವಹೇಲನೆಯ ದೃಷ್ಟಿಯಿಂದ ನೋಡಿ ಅವರೆಂದರು: “ ಏಕೆ ಸ್ಪಷ್ಟವಾಗಿ ಹೇಳುವುದಿಲ್ಲ,—ಕ್ಲಬ್ಬಿಗೆ ಹೋಗುತ್ತೇನೆಂದು? ಅದಕ್ಕಾಗಿ ಈ ವಸ್ತ್ರ ಧರಿಸಿದ್ದೀ, ಗವುಸು ತೊಟ್ಟಿದ್ದೀ. ಇರಲಿ, ಆ ಕಡೆ ಅಡ್ಡಾಡುತ್ತ ಡಾಕ್ಟರರ ಕಡೆ ಹೋದರೆ ಅವರಿಗೆ ಹೇಳು—ಟೆಂಪರೇಚರು ಬೆಂಕಿ ಹತ್ತುವಂತಹ ಪರಮಾವಧಿ ಬಿಂದುವಿಗೆ ಮುಟ್ಟಿದೆ. ”

ನಾನು ಮತ್ತಷ್ಟು ಭಯಭೀತಳಾದೆ. ಹೃದಯದಲ್ಲಿ ಕರುಣ–ಚಿಂತೆಯ ಸಂಚಾರವಾಗತೊಡಗಿತು. ಕೊರಳು ತುಂಬಿಬಂದಿತು. ಬಾಬೂಜಿ ಕಣ್ಣು ಮುಚ್ಚಿಕೊಂಡಿದ್ದರು; ಉಸಿರು ವೇಗವಾಗಿ ಆಡುತ್ತಿತ್ತು. ಯಾರನ್ನಾದರೂ ಡಾಕ್ಟರರ ಕಡೆಗೆ ಕಳಿಸಬೇಕೆಂದು ಬಾಗಿಲಕಡೆ ಹೊರಟೆ. ಈ ಧಿಕ್ಕಾರವನ್ನು ಕೇಳಿದ ಮೇಲೂ ನಾನೇ ಹೇಗೆ ಹೋಗುವೆ? ಇಷ್ಟರಲ್ಲಿ ಬಾಬೂಜಿ ಎದ್ದು ಕುಳಿತು ವಿನಯಭಾವದಿಂದ ಮಾತನಾಡಿದರು: “ ಶ್ಯಾಮಾ, ನಿನ್ನೊಡನೆ ಕೊಂಚ ಹೇಳುವುದಿದೆ. ಅದು ಒಂದು ವಾರದಿಂದಲೂ ಮನಸ್ಸಿನಲ್ಲಿ ಬಂದಿದೆ; ಆದರೆ ಸಾಹಸ ಸಾಗಿರಲಿಲ್ಲ. ಇಂದು ಹೇಳಿಯೇಬಿಡಬೇಕೆಂದು ಗಟ್ಟಿಮಾಡಿದೆ.

ನಾನಿನ್ನು ನಮ್ಮೂರಿಗೆ ಮರಳಿ ಹೋಗಿ, ಅಲ್ಲಿಯೇ ಮೊದಲಿನಂತೆ ಜೀವನ ನಡೆಸಬೇಕೆಂದು ಅಪೇಕ್ಷಿಸುತ್ತೇನೆ. ಈ ಜೀವನದ ಬಗ್ಗೆ ಹೇಸಿಕೆ ಹುಟ್ಟಿದೆ; ಅದೇ ನನ್ನ ಬೇನೆಯ ಮುಖ್ಯ ಕಾರಣ. ನನ್ನ ಕಷ್ಟ ಶಾರೀರಿಕವಲ್ಲ, ಮಾನಸಿಕ. ನಾನು ನಿನ್ನನ್ನು ಪುನಃ ಅದೇ—ಲಜ್ಜಾಶೀಲವಾದ, ತಲೆವಾಗಿ ನಡೆಯುವ, ವ್ರತಪೂಜೆ ಮಾಡುವ, ರಾಮಾಯಣ ಓದುವ, ಮನೆಗೆಲಸ ಮಾಡುವ, ಚರಕದಿಂದ ನೂಲುವ, ದೇವರಿಗೆ ಅಂಜುವ, ಪತಿಶ್ರದ್ಧೆಯುಳ್ಳ–ಮೊದಲಿನ ರೂಪದಲ್ಲಿಯೇ ನೋಡಬಯಸುತ್ತೇನೆ. ನಿನ್ನನ್ನು ಹದಿನಾರಣೆ ನನ್ನವಳನ್ನಾಗಿ ಮಾಡಲು, ಹದಿನಾರಾಣೆ ನಿನ್ನವನಾಗಲು ಬಯಸುತ್ತೇನೆ. ಆ ಸಾದಾ ಪವಿತ್ರ ಜೀವನದಲ್ಲಿಯೇ ನಿಜವಾದ ಸುಖವಿದೆ ಎಂದು ನಾನೀಗ ಅರಿತುಕೊಂಡೆ. ಹೇಳು, ಸಮ್ಮತವೇ? ನೀನು ಯಾವಾಗಲೂ ನನ್ನ ಮಾತಿನಂತೆ ನಡೆದಿದ್ದೀ; ಈಗ ನಿರಾಶೆಗೊಳಿಸಬೇಡ ಇಲ್ಲದಿದ್ದರೆ, ಈ ಕಷ್ಟದ, ಈ ಶೋಕದ ಪರಿಣಾಮ ಎಷ್ಟು ಭಯಂಕರವಾಗುವುದೋ ಯಾರು ಬಲ್ಲರು!"

ಸಹಸಾ ನನ್ನಿಂದ ಯಾವ ಉತ್ತರವನ್ನೂ ಕೊಡಲಾಗಲಿಲ್ಲ. ಯೋಚಿಸ ತೊಡಗಿದೆ. ಈ ಸ್ವತಂತ್ರ ಜೀವನದಲ್ಲಿ ಎಷ್ಟು ಸುಖವಿತ್ತು— ಈ ಮಜ ಅಲ್ಲೆಲ್ಲಿ? ಇಷ್ಟು ದಿನ ಬಯಲುಗಾಳಿಯಲ್ಲಿ ಹಾರಾಡಿ ಮತ್ತೆ ತಿರುಗಿ ಅದೇ ಪಂಜರ ಸೇರಬೇಕೆ? ತೊತ್ತಾಗಿ ಇರಬೇಕೆ? ಇಷ್ಟು ವರುಷಗಳೂ ಇವರೇಕೆ ಸ್ವಾತಂತ್ರ್ಯದ ಪಾಠ ಕಲಿಸಿದರು ನನಗೆ? ಇಷ್ಟು ಕಾಲವೂ ದೇವರು ದಿಂಡರನ್ನು, ರಾಮಾಯಣವನ್ನು, ಪೂಜಾಪಾಠಗಳನ್ನು ವ್ರತೋಪವಾಸಗಳನ್ನು ಏಕೆ ಹೀಗಳೆದರು? ಏಕೆ ಚೇಷ್ಟೆ ಮಾಡಿದರು? ಈಗ— ಅವನ್ನೆಲ್ಲ ನಾನು ಮರೆತಮೇಲೆ, ಸುಳ್ಳೆಂದು ತಿಳಿಯಹತ್ತಿದ ಮೇಲೆ,— ಪುನಃ ಮತ್ತೆ ನನ್ನನ್ನು ಅದೇ ಅಂಧಕೂಪದಲ್ಲಿ ಕೆಡಹಬೇಕೆನ್ನುತ್ತಾರೆ. ಇವರ ಇಚ್ಛಾನುಸಾರವಾಗಿಯೇ ನಾನು ನಡೆಯುತ್ತೇನೆ–ಎಂದರೂ ನನ್ನ ತಪ್ಪೇನು? ಆದರೆ ಬಾಬೂಜಿಯವರ ಮುಖದಲ್ಲಿಯ ದೈನ್ಯವನ್ನು, ವಿವಶತೆಯನ್ನು ಕಂಡು, ಅವರ ಮಾತನ್ನು ಅಲ್ಲಗಳೆಯುವುದು ನನ್ನಿಂದಾಗಲಿಲ್ಲ

"ಇರಲಿ, ಇಲ್ಲಿ ನಿಮಗಿರುವ ಕಷ್ಟವೇನು?" ಎಂದು ನಾನು ಪ್ರಶ್ನಿಸಿದೆ. ಅವರ ವಿಚಾರಗಳ ತಳತನಕ ತಲುಪಲು ಆಶಿಸಿದೆ.

ಬಾಬೂಜಿ ಮತ್ತೆ ಎದ್ದು ಕುಳಿತು ಕಠೋರ ದೃಷ್ಟಿಯಿಂದ ನನ್ನನ್ನು ನೋಡಿ ಉತ್ತರವಿತ್ತರು: “ಈ ಪ್ರಶ್ನೆಯನ್ನು ನನ್ನನ್ನು ಕೇಳದೆ ನಿನ್ನ ಹೃದಯವನ್ನೇ ಕೇಳಿಕೊಂಡಿದ್ದರೆ ಉಚಿತವಾಗುತ್ತಿತ್ತು. ನಾನು ಮೂರು ವರುಷಗಳ ಹಿಂದಿನವನೇ ಇದ್ದೇನೆ ಎಂದು ತಿಳಿದಿರುವೆಯಾ ? ಆಗ ನಾನು ನಿನಗಿಂತ ಹೆಚ್ಚು ಶಿಕ್ಷಿತನಾಗಿದ್ದೆ, ನಿನಗಿಂತ ಬುದ್ಧಿವಂತನಾಗಿದ್ದೆ, ನಿನಗಿಂತ ತಿಳಿವಳಿಕೆಯುಳ್ಳವನಾಗಿದ್ದೆ; ಹಾಗೆ ಈಗ ಉಳಿದಿಲ್ಲ. ನಿನಗಿದು ಅನುಭವಕ್ಕೆ ಬಂದಿರಲಿಕ್ಕಿಲ್ಲ, ನನಗೆ ಬಂದಿದೆ. ಆ ಭಾವನೆಗಳೇ ನಿನ್ನನ್ನು ಪತನಗೊಳಿಸಿರ-ಲಾರವೆಂದು ಹೇಗೆ ಬಗೆಯಲಿ ? ಆದರೆ ಆ ಭಾವನೆಗಳ ಪ್ರಭಾವ ಇನ್ನೂ ಹೆಚ್ಚಾಗಿಯೇ ನಿನ್ನ ಮೇಲೆ ಆಗಿರುವ ಚಿಹ್ನಗಳು ಪ್ರತ್ಯಕ್ಷವಾಗಿ ಕಾಣುತ್ತಿವೆ. ಉಚ್ಚವಾದ ರುಚಿ—ರೀತಿ-ವಿಲಾಸಗಳ ತಿರುಗಣಿಮಡುವಿನಲ್ಲಿ ಬಿದ್ದಿದ್ದೀ ನೀನು—ಅದರ ಅರಿವು ಮಾತ್ರ ನಿನಗೆ ಲೇಶವೂ ಇಲ್ಲ. ಸಭ್ಯತೆ, ಸ್ವೇಚ್ಛಾಚಾರದ ಭೂತ ಹೆಂಗುಸರ ಕೋಮಲ ಹೃದಯವನ್ನು ಬಹುಸುಲಭವಾಗಿ ವಶಪಡಿಸಿಕೊಳ್ಳುವುದೆಂಬ ದೃಢನಂಬುಗೆ ಈಗ ನನಗಾಯಿತು. ಈಗ ಮೂರು ವರುಷಗಳ ಹಿಂದೆಯೂ ನನ್ನನ್ನು ಇಂತಹ ಸ್ಥಿತಿಯಲ್ಲಿ ಬಿಟ್ಟು ನೆರೆಹೊರೆಯವರಲ್ಲಿ ಗಾಯನವಾದನಕ್ಕಾಗಿ ಹೋಗುವ ಸಾಹಸ ನಿನ್ನಲ್ಲಿತ್ತೆ ? ನಾನು ಹಾಸಿಗೆ ಹಿಡಿದು ಬಿದ್ದಿರುವಾಗ, ನೀನು ಯಾರ ಮನೆಯಲ್ಲಿಯೋ ಆಮೋದಪಡುತ್ತಿದ್ದೆಯಾ ? ಸ್ತ್ರೀಯರ ಹೃದಯ ಆಧಿಕ್ಯಪ್ರಿಯವಾದದ್ದು; ಆದರೆ ಈ ನವೀನ ಅತಿರೇಕಕ್ಕಿಂತ ಆ ಪುರಾಣ ಅತಿರೇಕವನ್ನೇ ನಾನು ಹೆಚ್ಚು ಮೆಚ್ಚುತ್ತೇನೆ. ಆ ಆಧಿಕ್ಯದ ಫಲ, ಆತ್ಮಿಕ ಶಾರೀರಿಕ ಅಭ್ಯುದಯವಾಗಿತ್ತು, ಹೃದಯದ ಪಾವಿತ್ರ್ಯವಾಗಿತ್ತು. ಆದರೆ ಈ ಆಧಿಕ್ಯದ ಫಲಿತಾಂಶವೆಂದರೆ, ನೀಚತೆ, ನಿರ್ಲಜ್ಜತೆ, ಪ್ರದರ್ಶನ ಮತ್ತು ಸ್ವೇಚ್ಛಾಚಾರ. ಆ ಸಮಯದಲ್ಲಿ ನೀನು ಮಿಸ್ಟರ್ ದಾಸರೆದುರು ನಕ್ಕುಕೆಲೆದು ಮಾಡಿದ್ದರೆ, ನಾನು ನಿನ್ನನ್ನಾದರೂ ಕೊಲ್ಲುತ್ತಿದ್ದೆ, ನಾನಾದರೂ ವಿಷ ತೆಗೆದುಕೊಳ್ಳುತ್ತಿದ್ದೆ. ಆದರೆ, ನಿರ್ಲಜ್ಜತನವು ಇಂತಹ ಜೀವನದ ಪ್ರಧಾನತತ್ತ್ವವಾಗಿದೆ. ನಾನು ಏನೆಲ್ಲವನ್ನೂ ನೋಡಬಲ್ಲೆ, ಸಹಿಸಬಲ್ಲೆ;—ಈ ಬೇನೆ ನನ್ನನ್ನು ಎಚ್ಚರಿಸದಿದ್ದರೆ ಕದಾಚಿತ್ ಸಹಿಸಿಯೂ ಸಹಿಸುತ್ತಿದ್ದೆ. ಈಗ ನೀನು ಇಲ್ಲಿ ಕುಳಿತಿದ್ದರೆ ನನಗೆ ಸಂತೋಷವೆನಿಸದು; ಏಕೆಂದರೆ ನಿನ್ನ ಹೃದಯ ಇಲ್ಲಿಲ್ಲವೆಂಬ ವಿಚಾರ

ನನ್ನನ್ನು ಚುಚ್ಚುತ್ತಿರುವುದು. ನನ್ನನ್ನು ನಾನು ಆ ಇಂದ್ರಜಾಲದಿಂದ ಬಿಡಿಸಿ ಕೊಳ್ಳಬೇಕೆಂದು ನಿಶ್ಚಯಿಸಿದ್ದೇನೆ;— ಇಲ್ಲಿ ಧನವೆಂದರೆ ಮಾನವಾಗಿದೆ, ಇಂದ್ರಿಯಲಿಪ್ಸೆ ಸಭ್ಯತೆಯಾಗಿದೆ, ಭ್ರಷ್ಟತೆ ವಿಚಾರಸ್ವಾತಂತ್ರ್ಯವಾಗಿದೆ.- ಹೇಳು, ನನ್ನ ಸೂಚನೆ ಮಾನ್ಯವೆ ? ”

ನನ್ನ ಹದೃಯಕ್ಕೆ ಸಿಡಿಲೆರಗಿದಂತಾಯಿತು. ಬಾಬೂಜಿಯವರ ಅಭಿಪ್ರಾಯ ಪೂರಾ ಮನದಟ್ಟಿತು. ಹೃದಯದಲ್ಲಿ ಹಳೆಯ ಲಜ್ಜೆ ಇನ್ನೂ ಕೊಂಚ ಉಳಿದಿತ್ತು. ಆ ಪೀಡೆ ಅಸಹ್ಯವಾಯಿತು; ಲಜ್ಜೆಯಾಯಿತು. ಅಂತರಾತ್ಮ ಹೇಳಿತು—ಅವಶ್ಯವಾಗಿ! ಈಗ ಆ ಮೊದಲಿನವಳು ನಾನಲ್ಲ. ಆಗ ನಾನು ಇವರನ್ನು ಇಷ್ಟದೇವತೆಯೆಂದು ತಿಳಿದಿದ್ದೆ, ಇವರ ಆಜ್ಞೆ ಶಿರಸಾ ಮಾನ್ಯವಾಗಿತ್ತು; ಆದರೀಗ ಇವರೊಬ್ಬ ಸಾಧಾರಣ ಮನುಷ್ಯರು ನನ್ನ ದೃಷ್ಟಿಯಲ್ಲಿ. ಮಿಸ್ಟರ್ ದಾಸರ ಚಿತ್ರ ಕಣ್ಣೆದುರು ಮೂಡಿತು. ನಿನ್ನೆ ಈ ದುರಾತ್ಮನ ಮಾತುಗಳಿಂದ ನನ್ನ ಹೃದಯಕ್ಕೆ ಹೇಗೆ ಅಮಲೇರಿತ್ತು ಎಂಬುದನ್ನು ನೆನೆದೊಡನೆ ನನ್ನ ಕಣ್ಣುಗಳು ನಾಚಿಕೆಯಿಂದ ತಗ್ಗಿದವು. ಬಾಬೂಜಿಯವರ ಆಂತರಿಕ ಅವಸ್ಥೆ ಅವರ ಮೊಗದಲ್ಲಿಯೇ ಕಾಣುತ್ತಿತ್ತು. ಸ್ವಾರ್ಥ-ವಿಲಾಸಲೋಲುಪತೆಗಳ ವಿಚಾರ ನನ್ನ ಹೃದಯದಿಂದ ದೂರ ತೊಲಗಿತು. ಆ ಎಡೆಯಲ್ಲಿ—ಫ್ಯಾಶನ್ನು ವಸ್ತ್ರಾಲಂಕಾರಗಳಲ್ಲಿ ನೀನು ಅವಶ್ಯವಾಗಿ ಉನ್ನತಿ ಪಡೆದಿರುವೆ; ನಿನಗೆ ನಿನ್ನ ಸ್ವಾರ್ಥಗಳ ಅರಿವಾಗಿದೆ; ಜೀವನಸುಖವನ್ನು ಭೋಗಿಸುವ ನಿನ್ನ ಯೋಗ್ಯತೆಯೂ ಹೆಚ್ಚಿದೆ; ನೀನೀಗ ಅಧಿಕ ಗರ್ವಿಣಿಯೂ ದೃಢಹೃದಯಳೂ ಶಿಕ್ಷಾಸಂಪನ್ನಳೂ ಕೂಡ ಆಗಿರುವೆ. ಆದರೆ ನಿನ್ನ ಆತ್ಮಿಕಬಲದ ವಿನಾಶವಾಗಿದೆ; ಏಕೆಂದರೆ ನೀನು ನಿನ್ನ ಕರ್ತವ್ಯವನ್ನು ಮರೆತುಬಿಟ್ಟೆ. — ಎಂಬ ಮಾತುಗಳು ನಿಗಿನಿಗಿಯಾದ ಅಕ್ಷರಗಳಲ್ಲಿ ಮೂಡಿದ್ದವು.

ನಾನು ಎರಡೂ ಕೈಗಳನ್ನು ಜೋಡಿಸಿ ಬಾಬೂಜಿಯವರ ಅಡಿಗಳ ಮೇಲೆ ಬಿದ್ದೆ. ಕೊರಳು ಬಿಗಿಯಿತು. ಬಾಯಿಂದ ಒಂದು ಶಬ್ದವೂ ಹೊರಡಲಿಲ್ಲ. ಕಣ್ಣೀರ ಕೋಡಿ ಹರಿಯಿತು.

*         *         *         *

ಈಗ ನಾನು ನನ್ನ ಮನೆಗೆ ಮರಳಿದ್ದೇನೆ. ಅತ್ತೆಯವರು ನನ್ನನ್ನು ಅಧಿಕವಾಗಿ ಸಮ್ಮಾನಿಸುತ್ತಾರೆ, ಬಾಬೂಜಿ ಸಂತುಷ್ಟರಾಗಿ ಕಾಣುತ್ತಾರೆ. ಅವರೀಗ ಪ್ರತಿದಿನವೂ ಸಂಧ್ಯಾವಂದನೆ ಮಾಡುತ್ತಾರೆ.

ಮಿಸೆಸ್ ದಾಸರ ಕಾಗದಗಳು ಆಗಾಗ ಬರುತ್ತವೆ. ಅಲಹಾಬಾದೀ ಸೊಸಾಯಿಟಿಯ ಹೊಸ ಹೊಸ ಸುದ್ದಿ ತುಂಬಿರುತ್ತವೆ ಅವುಗಳಲ್ಲಿ ಮಿಸ್ಟರ್ ದಾಸ ಮತ್ತು ಮಿಸ್ ಭಾಟಿಯಾ ಅವರ ವಿಷಯದಲ್ಲಿ ಹರಲಿಯಾಗಿದೆ ಈ ಪತ್ರಗಳಿಗೆ ಉತ್ತರವನ್ನೇನೋ ನಾನು ಬರೆಯುತ್ತೇನೆ; ಆದರೆ ಇವು ಬಾರದಿದ್ದರೇ ಒಳ್ಳೆಯದು ಎಂದೆನಿಸುವುದು. ನಾನು ಮರೆಯಲು ಹವಣಿಸುತ್ತಿರುವ ದಿನಗಳ ನೆನಪನ್ನು ಅವು ಕೆದಕುತ್ತಿದ್ದವು.

ಮೊನ್ನೆ ಬಾಬೂಜಿಯವರು ಹಲವು ಹಳೆಯ ಪುಸ್ತಕಗಳನ್ನು ಅಗ್ನಿದೇವನಿಗೆ ಅರ್ಪಣಮಾಡಿದರು. ಆಸ್ಕರ್ ವೈಲ್ಡನ ಕೆಲವು ಕೃತಿಗಳು ಅವುಗಳಲ್ಲಿದ್ದವು. ಅವರು ಇಂಗ್ಲಿಷ್ ಪುಸ್ತಕಗಳನ್ನು ಓದುವುದು ಬಹಳ ಕಡಿಮೆಯಾಗಿದೆ. ಕಾರ್ಲಾಯಿಲ್, ರಸ್ಕಿನ್ ಮತ್ತು ಎಮರ್ಸನರ ಪುಸ್ತಕಗಳ ಹೊರತು ಬೇರೆಯವನ್ನು ಅವರು ಓದುವುದನ್ನು ನಾನು ಕಂಡಿಲ್ಲ. ನನಗೆ ನನ್ನ ರಾಮಾಯಣ ಮಹಾಭಾರತಗಳಲ್ಲಿ ಪುನಃ ಅದೇ ಆನಂದ ಲಭಿಸುತ್ತಿದೆ. ಮೊದಲಿಗಿಂತ ಹೆಚ್ಚಾಗಿ ನೂಲುತ್ತಿದ್ದೇನೆ; ಏಕೆಂದರೆ, ಈ ಅವಧಿಯಲ್ಲಿ ಚರಕದ ಪ್ರಸಾರ ವಿಶೇಷವಾಗಿ ಆಗಿದೆ.

---

# ಸೌಭಾಗ್ಯ ಸೀರೆ



ದಾಂಪತ್ಯಸುಖಕ್ಕೆ ಗಂಡಹೆಂಡಿರ ಸ್ವಭಾವದಲ್ಲಿ ಮೇಳವಿರುವುದು ಅಗತ್ಯ ಎಂದು ಹೇಳುವುದು ತಪ್ಪು. ಶ್ರೀಮತಿ ಗೌರಾ ಮತ್ತು ಶ್ರೀಯುತ ಕುವರ ರತನಸಿಂಹರೊಳಗೆ ಯಾವ ವಿಷಯದಲ್ಲೂ ಮೇಳವಿರಲಿಲ್ಲ. ಗೌರಾ ಉದಾರಳು, ರತನಸಿಂಹ ಕವಡಿಚುಂಬಕ; ಅವಳು ನೆಗೆಮೊಗದವಳು, ಆತ ಗಂಟುಮೋರೆಯವ; ಅವಳಿಗೆ ಕುಲಮರ್ಯಾದೆ ಪಂಚಪ್ರಾಣ, ಅದಕ್ಕೆ ಆಡಂಬರ ಎನ್ನುವವನು ಆತ. ಅವರ ಸಾಮಾಜಿಕ ಆಚಾರ ವಿಚಾರಗಳಲ್ಲಿಯೂ ಬಹಳ ಅಂತರ. ಇಲ್ಲಿ ಉದಾರತೆ ರತನಸಿಂಹನ ಪಕ್ಷಕ್ಕೆ. ಗೌರಾಗೆ ಸಹ-ಭೋಜನ ಆಗುತ್ತಿರಲಿಲ್ಲ, ವಿಧವಾವಿವಾಹವೆಂದರೆ ತಿರಸ್ಕಾರ, ಅಸ್ಪೃಶ್ಯರ ಪ್ರಶ್ನೆಯ ಬಗ್ಗೆ ವಿರೋಧ. ಈ ಎಲ್ಲ ವ್ಯವಸ್ಥೆಗಳನ್ನು ರತನಸಿಂಹ ಅನುಮೋದಿಸುತ್ತಿದ್ದ. ರಾಜನೀತಿಕ ವಿಷಯಗಳಲ್ಲಿ ಈ ಭಿನ್ನತೆ ಇನ್ನೂ ಜಟಿಲವಾಗಿತ್ತು. ಇದ್ದ ಸ್ಥಿತಿಯನ್ನು ಗೌರಾ ಅಚಲ, ಅಮರ, ಅಪರಿಹಾರ್ಯ ಎಂದು ತಿಳಿಯುತ್ತಿದ್ದಳು, ಆದಕ್ಕಾಗಿ ಮಂದ, ತೀವ್ರ, ಕಾಂಗ್ರೆಸ್ಸು, ಸ್ವರಾಜ್ಯ, ಹೋಂರೂಲು ಯಾವೂ ಅವಳಿಗೆ ಹಿಡಿಸುತ್ತಿರಲಿಲ್ಲ. "ಈ ಕಲಿತ ಒಂದು ಹಿಡಿ ಜನ ಏನು ಮಾಡಿಯಾರು? ಕಡಲೆ ಎಲ್ಲಿಯಾದರೂ ಭಟ್ಟಿಯ ಒಲೆಯನ್ನು ಒಡೆಯಬಲ್ಲುದೆ?" ಎನ್ನುತ್ತಿದ್ದಳು. ರತನಸಿಂಹ ಒಳ್ಳೇ ಆಶಾವಾದಿ; ರಾಜನೀತಿಕ ಸಭೆಯಲ್ಲಿ ಮೊದಲ ಸಾಲಿನಲ್ಲಿ ಕುಳಿತುಕೊಳ್ಳುವವ; ಕಾರ್ಯಕ್ಷೇತ್ರದಲ್ಲಿ ಎಲ್ಲರಿಗಿಂತ ಮುಂದೆ ಅವನ ಹೆಜ್ಜೆ; ಸ್ವದೇಶೀವ್ರತಧಾರಿ ಮತ್ತು ಬಹಿಷ್ಕಾರದ ನಿಜ ಅನುಯಾಯಿ. ಇಷ್ಟು ವೈಷಮ್ಯಗಳಿದ್ದರೂ ಅವರ ದಾಂಪತ್ಯಜೀವನೂ ಸುಖಮಯವಾಗಿತ್ತು; ಒಮ್ಮೊಮ್ಮೆ ಇಬ್ಬರಲ್ಲಿಯೂ ಅವಶ್ಯವಾಗಿ ಮತಭೇದವಾಗುತ್ತಿತ್ತು; ಆದರದು ಸ್ಥಿರವಾದ ಜಲವನ್ನು ಸಣ್ಣ ಸಣ್ಣ ಲಹರಿಗಳಿಂದ ಅಲಂಕರಿಸುವ ಸುಳಿಗಾಳಿಯಂತೆ, — ಸಾಗರದಲ್ಲಿ

ವಿಪ್ಲವವನ್ನುಂಟುಮಾಡುವ ಬಿರುಗಾಳಿಯಲ್ಲ. ಸ್ವಲ್ಪ ಸದಿಚ್ಛೆ, ಎಲ್ಲ ವಿಷಮತೆಗಳನ್ನು, ಮತಭೇದಗಳನ್ನು ದೂರಗೊಳಿಸುತ್ತಿತ್ತು.

೨

ವಿದೇಶೀಯ ಬಟ್ಟೆಗಳ ಹೋಳಿಗಳು ನಡೆಯುತ್ತಿದ್ದವು. ಸ್ವಯಂ ಸೇವಕರ ಗುಂಪುಗಳು ತಿರುಕರಂತೆ ಮನೆಮನೆಯ ಬಾಗಿಲಲ್ಲಿ ನಿಂತು ವಿದೇಶೀಯ ಬಟ್ಟೆಗಳನ್ನು ಬೇಡುತ್ತಿದ್ದವು. ಕ್ವಚಿತ್ತಾಗಿ ಅವರು ನಿರಾಶರಾಗು ವಂತಹ ಬಾಗಿಲುಗಳೂ ಇದ್ದವು. ದಿನಗಳು ತಿರುಗಿಬಿಟ್ಟಿದ್ದವು. ಅಂದ ವಾದದ್ದು ಅಂದಗೇಡಿಯಾಗಿತ್ತು, ಮಲಮಲ್ಲು ಮನಮಲವಾಗಿತ್ತು, ನಯ ವಾದದ್ದು ವ್ಯಂಗೆ ಒತ್ತುತ್ತಿತ್ತು. ರತನಸಿಂಹ ಬಂದು ಗೌರಾಗೆ ಹೇಳಿದ: "ತಾ, ಸಂದುಕದಿಂದ ಎಲ್ಲ ವಿದೇಶೀ ಅರಿವೆಗಳನ್ನು ತೆಗೆದುಕೊಡು; ಕೊಟ್ಟು ಬಿಡುತ್ತೇನೆ."

"ಅಲ್ಲಾ, ಈಗೇನು ಮುಹೂರ್ತ ಮೀರಿಹೋಗುತ್ತದೆಯೇ, ಮತ್ತೆ ಯಾವಾಗಲಾದರೂ ಕೊಟ್ಟರಾಯಿತು."

"ಭಲೆ, ಜನ ಬಾಗಿಲಲ್ಲಿ ಕೋಲಾಹಲ ಎಬ್ಬಿಸಿದ್ದಾರೆ; ನೀನಂತೀ,— ಯಾವಾಗಾದರೂ ಕೊಟ್ಟರಾಯಿತು."

"ಈ ಕೀಲೀಕೈ ತಗೊಳ್ಳಿರಿ, ತೆಗೆದು ಕೊಟ್ಟುಬಿಡಿರಿ. ಆದರೆ ಇದೆಲ್ಲವೂ ಹುಡುಗಾಟಿಕೆ ಅಷ್ಟೆ. ಮನೆ ಸುಡೋದರಿಂದ ಸ್ವರಾಜ್ಯ ಎಂದೂ ಸಿಕ್ಕಿಲ್ಲ, ಸಿಗೋದೂ ಇಲ್ಲ."

"ನಿನ್ನೆ ಮಾತ್ರವೇ ನಿನ್ನ ಕೂಡ ಈ ವಿಷಯ ಗಂಟೆಗಟ್ಲೆ ತಲೆ ಒಡ ಕೊಂಡೆ; ಆಗ ನನ್ನ ಮಾತಿಗೆ ಹೌದಂದಿದ್ದಿ. ಈಗ ಮತ್ತೆ ಅವೇ ಸಂದೇಹ ತಗೀತೀಯೇನು?"

"ನಿಮ್ಮ ಮನಸು ನೋಯಬಾರದೆಂದು ನಾನು ಸುಮ್ಮನಾಗಿದ್ದೆ."

"ಆಗಲಿ, ನಿನ್ನ ಸಂದೇಹ ಆಮೇಲೆ ತಗಿ, ಈಗ ಮಾಡೋ ಕೆಲಸ ಮಾಡು."

"ಆದರೆ ನನ್ನ ಬಟ್ಟೆ ತೆಗೆದುಕೊಳ್ಳೋದಿಲ್ಲ ತಾನೆ?"

" ಎಲ್ಲಾ ಕೊಡಬೇಕಾಗ್ತದ. ವಿಲಾಯತಿಯ ಒಂದೆಳೆಯೂ ಮನೆಯಲ್ಲಿದ್ದರೆ ನನ್ನ ವ್ರತ ಕೆಟ್ಟುಹೋಗ್ತದ. "

" ಸರಕಾರ, ಜನರು ಗಡಿಬಿಡಿ ಮಾಡತಾರ. ಇನ್ನೂ ಬಹಳ ಓಣೀ ತಿರುಗೋದಯ್ತಿ ಅಂತಾರೆ. ಯಾವುದಾದರೂ ದಪ್ಪ ತುಂಡು ಇದ್ದರೆ ನನಗೂ ತಂತಾರ್ರಿ, ನಾನೂ ನನ್ನ ಅರಿವೀ ಕೊಟ್ಟುಬಿಡತೇನು. " ಹೊರಗಿನಿಂದ ಆಳು ರಾಮಟಹಲ ಹೇಳಿದ.

ಕೇಸರ ಮಹರಿ ಒಂದು ಅರಿವೆಯ ಗಂಟನ್ನು ತೆಗೆದುಕೊಂಡು ಹೊರಗೆ ಹೊರಟಿರುವುದನ್ನು ಕಂಡು, " ನೀನೂ ನಿನ್ನರಿವೀ ಕೊಡಾಕ ಹೊಂಟೀನು ? " ಎಂದು ರತನಸಿಂಹ ಕೇಳಿದ.

ಕೇಸರ ನಾಚುತ್ತ ಹೇಳಿದಳು : " ಹಾಂ ಸರಕಾರ, ದೇಶಾನೇ ಬಿಡತ್ತೀನಿ ಅಂದಮ್ಯಾಗ ಹ್ಯಾಂಗುಡಲಿ ? "

ರತನಸಿಂಹ ಆದೇಶಪೂರ್ಣ ನೇತ್ರಗಳಿಂದ ಗೌರಾನ ಕಡೆ ನೋಡಿದ ಆಗ ಅವಳಿಗೆ ತಡಮಾಡುವುದು ಅಶಕ್ಯವಾಯಿತು. ನಾಚಿಕೆಯಿಂದ ತಲೆ ತಗ್ಗಿಸಿಕೊಂಡು ಸಂದುಕ ತೆರೆದು ಬಟ್ಟೆ ತೆಗೆದಳು. ಒಂದು ಸಂದುಕ ಬರಿದಾಯಿತು; ಇನ್ನೊಂದು ತೆರೆದಳು. ಎಲ್ಲಕ್ಕೂ ಮೇಲೆ ಅಂದವಾದ ಒಂದು ರೇಶಿಮೆ ಸೂಟಿತ್ತು;— ಕುವರ ಸಾಹೇಬ ಯಾವುದೋ ಅಂಗ್ರೇಜಿ ಕಾರಖಾನೆಯಲ್ಲಿ ಹೊಲಿಸಿದ್ದು. " ಸೂಟನ್ನೂ ತಗದುಕೊಡಲಿ ? " ಗೌರಾ ಕೇಳಿದಳು.

" ಹಾಂ ಹಾಂ, ಅದನ್ನು ಯಾವ ದಿನಕ್ಕೆ ಇಡತೀದಿ ? "

" ಇಷ್ಟು ಬೇಗ ಗಾಳಿ ತಿರುಗೋದು ಗೊತ್ತಾಗಿದ್ದರೆ ಈ ಸೂಟು ಹೊಲಿಸೇಗೊಡುತ್ತಿದ್ದಿಲ್ಲ. ಎಲ್ಲಾ ಹಣ ವ್ಯರ್ಥ ಆತು. "

ರತನಸಿಂಹ ಏನೂ ಉತ್ತರ ಕೊಡಲಿಲ್ಲ. ಬಳಿಕ ಗೌರಾ ತನ್ನ ಸಂದುಕ ತೆರೆದಳು. ಪಿಟ್ಟುಪಿಟ್ಟನಿಂದ ದೇಶೀ ವಿದೇಶೀ ಎಲ್ಲ ಬಟ್ಟೆಗಳನ್ನು ತೆಗೆತೆಗೆದು ಒಗೆಯತೊಡಗಿದಳು. ಅವಳು ಆವೇಶದ ಸೆಳವಿನಲ್ಲಿ ಬಿದ್ದಳು. ತಾನು ಯಾವಾಗಲಾದರೂ ಧರಿಸಿ ಆನಂದದಿಂದ ಉಬ್ಬುತ್ತಿದ್ದ ಬೆಲೆಬಾಳುವ ಜಾಕೆಟ್ಟುಗಳೂ ಸೀರೆಗಳೂ ಅವುಗಳಲ್ಲಿದ್ದವು. ಆ ಸೀರೆಗಳಿಗಾಗಿ ಅವಳು ರತನಸಿಂಹನನ್ನು ಮತ್ತೆ ಮತ್ತೆ ಕಾಡಿದ್ದಳು. ಆದರೀಗ ಅವೆಲ್ಲವೂ ಕಣ್ಣಲ್ಲಿ

ಒತ್ತುತ್ತಲಿದ್ದವು. ರತನಸಿಂಹ ಅವಳ ಭಾವಗಳನ್ನು ಲಕ್ಷಿಸುತ್ತಲಿದ್ದ. ಸ್ವದೇಶೀ ಬಟ್ಟೆಗಳನ್ನು ತೆಗೆಯುವುದು ಅವನ ಹೃದಯಕ್ಕೆ ತಾಗುತ್ತಿತ್ತು. ಆದರೆ ಈ ಹೊತ್ತಿನಲ್ಲಿ ಸುಮ್ಮನಿರುವುದೇ ಲೇಸೆಂದು ಬಗೆದ. ಇಷ್ಟಾದರೂ ಒಂದೆರಡು ಸಲ ವಾದವಿವಾದದ ಪ್ರಸಂಗ ಬಂದೇ ಬಂದಿತು. ಒಂದು ಬನಾರಸೀ ಸೀರೆಗಾಗಿಯಂತೂ ಅವನು ಜಗಳಾಡಿಬಿಟ್ಟ. ಅದನ್ನು ಗೌರಾನ ಕೈಯಿಂದ ಸೆಳೆದುಕೊಳ್ಳಲು ಹವಣಿಸಿದ. ಆದರೆ ಗೌರಾ ಒಂದನ್ನೂ ಒಪ್ಪಲಿಲ್ಲ; ತೆಗೆದು ಒಗೆದುಬಿಟ್ಟಳು. ಸಹಸಾ, ಸಂದುಕದಿಂದ ಕೇಸರಿ ಬಣ್ಣದ ಜಿನುಗಾದ ನುಣುಪಾದ ಸೀರೆಯೊಂದು ಹೊರಟಿತು; ಸೆರಗಿನಲ್ಲಿ ಒಳ್ಳೆಯ ಕುಸುರಿನ ಕಸೂತಿ ಮಾಡಿದ ಸೀರೆ. ಗೌರಾ ಅದನ್ನು ಸರಕ್ಕನೆ ಎತ್ತಿ ಬಗಲಲ್ಲಿ ಮರೆಸಿಕೊಂಡಳು.

"ಎಂಥ ಸೀರೆ ಅದು?" ರತನಸಿಂಹ ಕೇಳಿದ.

"ಏನೂ ಇಲ್ಲ. ಮಲ್ಲಿನ ಸೀರೆ. ಕಸೂತಿ ಸೆರಗಿನದು."

"ಮಲಮಲ್ಲಿನದೆಂದ ಮೇಲೆ ಖಂಡಿತ ವಿಲಾಯತೀದು. ಅದನ್ನೇಕೆ ಬೇರೆ ತಗೆದಿ? ಬನಾರಸೀ ಸೀರೆಗಿಂತಲೂ ಛಲೋದೇನು ಅದು?"

"ಛಲೋ ಏನಿಲ್ಲ. ಆದರೆ ಇದನ್ನ ಕೊಡೋದಿಲ್ಲ."

"ಈ ವಿಲಾಯತಿ ಸೀರೀನ ಮನಿಯೊಳಗ ಇಡಗೊಡೂದಿಲ್ಲ. ತಾ ಇಲ್ಲೆ."

"ನನಗಾಗಿ ಇದನ್ನು ಬಿಡಿರಿ."

"ನನಗಾಗಿ ನೀನು ಒಂದು ವಸ್ತುವನ್ನೂ ಇಡಲಿಲ್ಲ, ನಿನಗಾಗಿ ನಾ ಯಾಕೆ ಮಾಡಲಿ?"

"ನಿಮ್ಮ ಕಾಲಿಗೆ ಬೀಳುತ್ತೇನೆ, ಹಟ ಹಿಡೀಬೇಡಿರಿ."

"ಸ್ವದೇಶೀ ಸೀರೀ ಬೇಕಾದ್ದು ಇಟ್ಟುಕೋ. ವಿಲಾಯತೀ ಅರಿವಿ ಮಾತ್ರ ನಾ ಇಡಗೊಡೋದಿಲ್ಲ. ಈ ಅರಿವೀ ದಶಿಂದಲೇ ನಾವು ಗುಲಾಮರಾದೆವು ಈ ದಾಸ್ಯದ ಕಲಂಕ ಇರಿಸೋದು ಅಶಕ್ಯ. ಇಲ್ಲಿ ಕೊಡು."

"ಇದನ್ನು ನಾ ಕೊಡೋದಿಲ್ಲ; ಒಂದು ಸಲ ಯಾಕೆ, ಸಾವಿರ ಸಲ ಹೇಳ್ತೇನೆ, ಕೊಡೋದಿಲ್ಲ."

"ನಾ ತಗೊಂಡೇ ಬಿಡ್ತೇನೆ ಅದನ್ನು. ಈ ಗುಲಾಮಿಯ ವಸ್ತ್ರ, ಈ ದಾಸ್ಯದ ಬಂಧನ ಎಂದಿಗೂ ಇಡಗೊಡಿಸೋದಿಲ್ಲ."

"ಸುಮ್ಮನೆ ಹಟಾ ಹಿಡೀತೀರಿ."

"ಅಲ್ಲಾ, ಇದರ ಮೇಲೆ ನಿನಗೆ ಯಾಕಿಷ್ಟು ಪ್ರೀತಿ?"

"ನೀವಂತೂ ಮಾತಿನ ತೊಗಲೇ ತೆಗೀತೀರಿ. ಈ ಅರಿವೇನು ಕಡಿಮೆ ಅವನೇ? ಒಂದು ಸೀರೀ ಇಟ್ಕೊಂಡರೆ ಆತೇನು?"

"ಈ ಹೋಳೀ ಅರ್ಥವೇ ತಿಳಿದಿಲ್ಲ ನಿನಗಿನ್ನೂ."

"ಛಲೋ ತಿಳಿದಿದೆ. ಎಲ್ಲಾ ಢೋಂಗು. ಎಲ್ಲಾ ಹುರುಪು ನಾಕು ದಿನದಾಗ ಇಳಿದುಹೋಗ್ತದ."

"ಈ ಸೀರೆಂದರೆ ನಿನಗ್ಯಾಕ ಇಷ್ಟು ಪ್ರೀತಿ ಅಂಬೋದು ಹೇಳು. ಅಂದರೆ ನಾ ಬಿಟ್ಟರೂ ಬಿಟ್ಟೇನು."

"ಇದು ನನ್ನ ಸೌಭಾಗ್ಯ ಸೀರೆ"

ರತನಸಿಂಹ ಸ್ವಲ್ಪ ವಿಚಾರಮಾಡಿದ. ಬಳಿಕ, "ಅಂದರಂತೂ ಎಂದೂ ಇಡೋದಿಲ್ಲ. ವಿದೇಶೀ ಬಟ್ಟೆಗೆ ಇಂಥ ಶುಭಸ್ಥಾನ ನಾ ಕೊಡಲಾರೆ. ಈ ಪವಿತ್ರ ಸಂಸ್ಕಾರದ ನೆನಪಿಗೆ ಈ ಅಪವಿತ್ರ ಚಿಹ್ನ ಇಡೋದು ಸಾಧ್ಯವಿಲ್ಲ. ಇದನ್ನು ಎಲ್ಲಕ್ಕೂ ಮೊದಲು ಮಾಡಬೇಕು ಹೋಳೀ. ಎಂಥಾ ಬುದ್ಧಿಗೇಡಿ ಆಗಿದ್ದರು ನಮ್ಮ ಜನ—ಇಂಥ ಶುಭಕಾರ್ಯದಲ್ಲಿ ವಿದೇಶೀ ಒಡವಿ ಉಪಯೋಗಿಸಲಿಕ್ಕೆ ಎಗ್ಗಿದ್ದಿಲ್ಲ. ಇದನ್ನು ನಾ ಅವಶ್ಯ ಹೋಳಿಗೆ ಕೊಡತೀನಿ."

"ಎಂಥ ವಾಗತ್ಯದ ಮಾತಾಡ್ತೀರಿ ನೀವು!"

"ಇಂಥ ಸೌಭಾಗ್ಯ ಸೀರೀ ಮನೆಯೊಳಗ ಇಡೋದೇ ವಾಗತ್ಯ. ಅಮಂಗಲ, ಅನಿಷ್ಟ, ಅನರ್ಥ."

"ಬೇಕಾದರೆ ನೀವು ಬಲಾತ್ಕಾರದಿಂದ ಕಸಗೊಂಡು ಹೋಗಿರಿ. ನಾನೇನು ಸಂತೋಷದಿಂದ ಕೊಡೋದಿಲ್ಲ."

"ಬಲಾತ್ಕಾರದಿಂದಲೇ ತಗೋತೀನಿ, ಉಪಾಯಿಲ್ಲ."

ಗೌರಾನ ಕೈಯಿಂದ ಸೀರೆಯನ್ನು ಕಸಿದುಕೊಳ್ಳಲು ರತನಸಿಂಹ ಎರಗಿದ. ಅವಳು ಅದನ್ನು ಗಟ್ಟಿಯಾಗಿ ಹಿಡಿದುಕೊಂಡು ಕಾತರದೃಷ್ಟಿಯಿಂದ ಅವನ ಕಡೆ ನೋಡಿದಳು. "ನಿಮಗೆ ನನ್ನ ಕೊರಳಾಣೆ" ಎಂದಳು.

" ಬಹೂಜಿಯು ಅಪೇಕ್ಷೆ ಇದ್ದರೆ ಇರಲಿ ಬಿಡಿರಿ. " ಎಂದಳು ಕೇಸರ ಮಹರಿ.

ರತನಸಿಂಹನ ನೀಡಿದ ಕೈ ತಡೆಯಿತು. ಮುಖ ಮಲಿನವಾಯಿತು. ಉದಾಸೀನನಾಗಿ ಅವನೆಂದ: " ನಾನು ನನ್ನ ವ್ರತ ಮುರಿಯಬೇಕಾಗುತ್ತದೆ. ಪ್ರತಿಜ್ಞಾಪತ್ರಕ್ಕೆ ಸುಳ್ಳು ಅಂಕಿತ ಹಾಕಬೇಕಾಗುತ್ತದೆ. ಇಷ್ಟೇ. "

೩

ಸಂಜೆಯಾಗಿತ್ತು. ಬಾಗಿಲಲ್ಲಿ ಸ್ವಯಂಸೇವಕರ ಕೂಗಾಟ ನಡೆದಿತ್ತು. " ಕುವರಸಾಹೇಬ, ಬೇಗ ಬನ್ನಿರಿ. ಶ್ರೀಮತಿಯವರಿಗೂ ಹೇಳಿರಿ, ನಮ್ಮ ಬಿನ್ನಹ ಮನ್ನಿಸಲಿಕ್ಕೆ. ಬಹಳ ತಡವಾಗುತ್ತಿದೆ. "

ಅತ್ತ ರತನಸಿಂಹ ಗೊಂದಲದಲ್ಲಿ ಬಿದ್ದಿದ್ದ. ಪ್ರತಿಜ್ಞಾಪತ್ರಕ್ಕೆ ಹೇಗೆ ರುಜು ಹಾಕಲಿ? ಮನೆಯೊಳಗೆ ವಿದೇಶೀ ವಸ್ತ್ರ ಇಟ್ಟುಕೊಂಡು ಸ್ವದೇಶೀ ವ್ರತ ಪಾಲಿಸುವುದು ಹೇಗೆ ? ಹೆಜ್ಜೆ ಮುಂದೆ ಇಟ್ಟುಬಿಟ್ಟಿದ್ದೇನೆ, ಹಿಂದಕ್ಕೆ ತೆಗೆಯುವುದು ಅಶಕ್ಯ. ಆದರೆ, ಪ್ರತಿಜ್ಞೆಯನ್ನು ಅಕ್ಷರಶಃ ಪಾಲಿಸುವುದು ಅಭೀಷ್ಟವೇನೂ ಅಲ್ಲ; ಕೇವಲ ಅದರ ಆಶಯವನ್ನು ಲಕ್ಷಿಸಬೇಕು. ಈ ವಿಚಾರದಿಂದ ಪ್ರತಿಜ್ಞಾಪತ್ರಕ್ಕೆ ಅಂಕಿತ ಹಾಕಲು ನನಗೆ ಪೂರ್ಣ ಅಧಿಕಾರ ಇದೆ. ಸ್ತ್ರೀಯರ ಹಟದ ಮುಂದೆ ಯಾರದೂ ನಡೆಯುವುದಿಲ್ಲ. ಮನಸ್ಸು ಮಾಡಿದರೆ ಒಂದು ಸೆಳೆತದಿಂದ ಕೆಲಸ ಆಗಬಹುದು. ಆದರೆ, ಅವಳಿಗೆ ಬಹಳ ದುಃಖವಾಗುವುದು; ಬಹಳ ಭಾವುಕಳು, ಅವಳ ಭಾವನೆಗಳನ್ನು ಆದರಿಸುವುದು ನನ್ನ ಕರ್ತವ್ಯ.

ಗೌರಾನೂ ಚಿಂತೆಯಲ್ಲಿ ಮುಳುಗಿದ್ದಳು. ಸೌಭಾಗ್ಯದ ಸೀರೆ ಸೌಭಾಗ್ಯದ ಚಿಹ್ನವಾಗಿದೆ. ಅದಕ್ಕೆ ಬೆಂಕಿ....ಎಂಥ ಅಶುಭ ಸಂಗತಿ. ಇವರು ಒಮ್ಮೊಮ್ಮೆ ಸಣ್ಣ ಹುಡುಗರಂತೆ ಹಟ ಮಾಡುತ್ತಾರೆ. ತಮ್ಮ ಹುಚ್ಚುಹಂಬಲದಲ್ಲಿ ಯಾರನ್ನೂ ಕೇಳುವುದಿಲ್ಲ. ಸಿಟ್ಟಾದರಂತೂ ಬಾಯೋಸಮ ಇರುವುದಿಲ್ಲ.

ಆದರೆ, ಪಾಪ, ಅವರೂ ತಮ್ಮ ಸಿದ್ಧಾಂತಗಳಿಂದ ಬದ್ಧರಾಗಿದ್ದಾರೆ. ಅಸತ್ಯ ಅವರಿಗೆ ಸೇರುವುದಿಲ್ಲ. ಪ್ರತಿಜ್ಞಾಪತ್ರಕ್ಕೆ ಸುಳ್ಳು ಸಹಿ

ಮಾಡಬೇಕಾಗುತ್ತದೆ; ಅವರ ಆತ್ಮಕ್ಕೆ ಬಹಳ ದುಃಖವಾಗುವುದು. ಘೋರ ಧರ್ಮಸಂಕಟದಲ್ಲಿ ಬಿದ್ದಿರಬಹುದು. ಇಡೀ ನಗರದಲ್ಲಿ ಸ್ವದೇಶ ಪ್ರೇಮಿಗಳ ಶಿರೋಮಣಿಗಳಾಗಿ, ಆ ಪ್ರತಿಜ್ಞಾಪತ್ರಕ್ಕೆ ಅಂಕಿತ ಹಾಕಲು ಅಲಕ್ಷ್ಯ ಮಾಡುವುದೂ ಆಗದ ಮಾತು. ಮೋರೆ ತೋರಿಸಲು ಸ್ಥಾನವೇ ಉಳಿಯುಲಿಕ್ಕಿಲ್ಲ. ತಯಾರಾಗಿದ್ದಾರೆಂಬು ತಿಳಿದುಕೊಳ್ಳುವರು ಜನ. ಆದರೆ ಮಂಗಲ ವಸ್ತುವನ್ನು ಹೇಗೆ ಕೊಡುವುದು ?

ಅಷ್ಟರೊಳಗೆ ರಾಮಟಹಲ ತಲೆಯ ಮೇಲೆ ಮೂಟೆ ಹೊತ್ತುಕೊಂಡು ಹೊರಗೆ ಹೊರಟಿರುವುದನ್ನು ಅವಳು ಕಂಡಳು. ಕೇಸರ ಮಹರಿಯೂ ಒಂದು ಗಂಟು ಹೊತ್ತಿದ್ದಳು. ಹಿಂದೆ ಹಿಂದೆ ರತನಸಿಂಹ ಕೈಯೊಳಗೆ ಪ್ರತಿಜ್ಞಾಪತ್ರ ಹಿಡಿದುಕೊಂಡು ನಡೆದಿದ್ದ. ಅವನ ಮುಖದಲ್ಲಿ ಗ್ಲಾನಿಯ ಮ್ಲಾನತೆಯಿತ್ತು; ಸತ್ಯವಂತ ಮನುಷ್ಯ ಅಸತ್ಯ ಸಾಕ್ಷ್ಯವನ್ನು ನುಡಿಯಲು ಹೊರಬರುವಂತೆ. ಗೌರಾನನ್ನು ನೋಡಿ ಅವನು ನೋಟ ಹೊರಳಿಸಿದ; ಅವಳ ದೃಷ್ಟಿಯನ್ನು ತಪ್ಪಿಸಿಕೊಂಡು ಹೊರಟುಹೋಗಲು ಬಯಸಿದ. ಅವನ ಕಣ್ಣುಗಳು ನೀರ್ದುಂಬಿರುವಂತೆ ಗೌರಾಗೆ ಭಾಸವಾಯಿತು. ಅವಳು ಅವನ ದಾರಿಗೆ ಅಡ್ಡವಾಗಿ, " ಸ್ವಲ್ಪ ಕೇಳಿರಿಲ್ಲೆ " ಎಂದಳು.

" ಹೋಗಗೊಡು, ಕಾಡಬೇಡ, ಹೊರಗೆ ಜನ ನಿಂತಿದ್ದಾರೆ. "

ಕಾಗದವನ್ನು ಬಚ್ಚಿಟ್ಟುಕೊಳ್ಳಲು ಅವನು ಹವಣಿಸಿದ. ಆದರೆ ಗೌರಾ ಅದನ್ನು ಕಸಿದುಕೊಂಡಳು. ಅದನ್ನು ಕಣ್ಣಿಟ್ಟು ಓದಿ, ಒಂದು ಕ್ಷಣ ವಿಚಾರ ಮಾಡಿ, " ಆ ಸೀರೀನೂ ಒಯ್ದುಬಿಡಿರಿ " ಎಂದಳು.

" ಇರಲಿ ಬಿಡು. ಈಗಂತೂ ಸುಳ್ಳು ಬರೆದುಕೊಟ್ಟಿದ್ದೇನೆ. "

" ನನಗೇನು ಗೊತ್ತು, ನೀವು ಇಂತಹ ಕಠಿನ ಪ್ರತಿಜ್ಞೆ ಮಾಡುತ್ತಿದ್ದೀರಿ ಅಂತ ? "

" ಈ ಮಾತು ನಾನಂತೂ ಮೊದಲೇ ಹೇಳಿದ್ದೆ. "

" ನಂದು ತಪ್ಪಾಯ್ತು, ಕ್ಷಮಿಸಿರಿ. ಇದನ್ನು ಒಯ್ಯಿರಿ. "

" ಅದನ್ನು ಕೊಡೋದು ಅಮಂಗಲ ಎಂದು ನಿನಗನಿಸುತ್ತದೆ ಅಂದ ಮೇಲೆ, ಇರಲೊಲ್ಲದೇಕೆ. ನಿನಗಾಗಿ ಸ್ವಲ್ಪ ಸುಳ್ಳು ಹೇಳಲಿಕ್ಕೆ ನನಗೇನೂ ಅಡ್ಡಿಯಿಲ್ಲ. "

“ ಇಲ್ಲ, ಒಯ್ಯಿರಿ. ಅಮಂಗಲದ ಭಯದಿಂದ ನಿಮ್ಮ ಆತ್ಮದ ಕೊಲಿ ಮಾಡೋದು ನನಗ ಬೇಡ. ”

ಗೌರಾ ತನ್ನ ಸೌಭಾಗ್ಯ ಸೀರೆಯನ್ನೆತ್ತಿ ಗಂಡನ ಕೈಯಲ್ಲಿಟ್ಟಳು. ರತನ ನೋಡಿದ ಅವಳ ಮೊಗದಲ್ಲಿ ಒಂದು ಬಣ್ಣ ಬರುತ್ತಿದೆ, ಒಂದು ಬಣ್ಣ ಹೋಗುತ್ತಿದೆ;—ರೋಗಿ ತನ್ನ ಒಳಗಿನ ವೇದನೆಯನ್ನು ಅದುಮಿ ಇಡುತ್ತಿರುವ ಹಾಗೆ. ತನ್ನ ಹೃದಯಶೂನ್ಯತೆಗಾಗಿ ಅವನಿಗೆ ನಾಚಿಕೆಯಾಯಿತು. ಕೇವಲ ನನ್ನ ಸಿದ್ಧಾಂತಗಳ ರಕ್ಷಣೆಗಾಗಿ, ನನ್ನ ಆತ್ಮದ ಸಮ್ಮಾನಕ್ಕಾಗಿ, ನಾನು ಈ ದೇವಿಯ ಭಾವಗಳ ಕೊಲೆ ನಡೆಸಿದ್ದೇನೆ! ಇದು ಅತ್ಯಾಚಾರ. ಸೀರೆಯನ್ನು ಗೌರಾಗೆ ತಿರುಗಿ ಕೊಟ್ಟು ಅವನೆಂದ: “ ಇದನ್ನು ಇಟ್ಟುಕೋ. ನಾನು ಪ್ರತಿಜ್ಞಾಪತ್ರ ಹರಿದುಹಾಕುತ್ತೇನೆ. ”

“ ನೀವು ಒಯ್ಯದಿದ್ದರೆ ನಾನೇ ಹೋಗಿ ಕೊಟ್ಟು ಬರ್‍ತೇನೆ. ” ಗೌರಾ ದೃಢತೆಯಿಂದ ಉತ್ತರವಿತ್ತಳು.

ರತನಸಿಂಹ ವಿವಶನಾದ. ಸೀರೆ ತೆಗೆದುಕೊಂಡು ಹೊರಹೊರಟ.

೪

ಅಂದಿನಿಂದ ಗೌರಾನ ಹೃದಯದ ಮೇಲೆ ಏನೋ ಭಾರ ಹೇರಿದಂತೆ ಎನಿಸತೊಡಗಿತು. ಮನವನ್ನು ಪ್ರಸನ್ನವಾಗಿರಿಸಲು ಅವಳು ನಾನಾ ಉಪಾಯ ಮಾಡುತ್ತಿದ್ದಳು. ಸಮಾರಂಭಗಳಲ್ಲಿ ಭಾಗವಹಿಸುತ್ತಿದ್ದಳು, ತಿರುಗಾಡಲು ಹೋಗುತ್ತಿದ್ದಳು, ಸರಸ ಸಾಹಿತ್ಯವನ್ನು ಓದುತ್ತಿದ್ದಳು, ಅದೇಕೆ, ನಿಯಮಕ್ಕೆ ವಿರುದ್ಧವಾಗಿ ನಾಟಕ ಸಿನೆಮಾಗಳಿಗೂ ಹೋದಳು. ಹೇಗಾದರೂ ಅಮಂಗಲದ ಕಲ್ಪನೆಯನ್ನು ಶಾಂತಗೊಳಿಸಲು ಬಯಸುತ್ತಿದ್ದಳು. ಆದರೆ ಈ ಸಭಯ ಸಂಶಯ ಮೋಡ ಕವಿದಂತೆ ಅವಳ ಹೃದಯವನ್ನು ಕವಿದೇ ಇರುತ್ತಿತ್ತು.

ಇಡೀ ಒಂದು ತಿಂಗಳು ಕಳೆಯಿತು; ಅವಳ ಮಾನಸಿಕ ವೇದನೆ ದಿನ ದಿನಕ್ಕೆ ಹೆಚ್ಚುತ್ತಲೇ ಹೋಯಿತು. ಆಗ ರತನಸಿಂಹ ಅವಳನ್ನು ಕೆಲವು ದಿನ ತಮ್ಮೂರಿಗೆ ಕರೆದುಕೊಂಡು ಹೋಗಬೇಕೆಂದು ನಿಶ್ಚಯಿಸಿದ. ಅವನ ಮನಸು ಅವನನ್ನು ತನ್ನ ಆದರ್ಶ ಪ್ರೇಮದ ಬಗ್ಗೆ ನಿತ್ಯವೂ ತಿರಸ್ಕರಿಸುತ್ತಿತ್ತು.

ಅವನು ಹೆಚ್ಚಾಗಿ ಪ್ರಚಾರಕನ್ನಾಗಿ ಹಳ್ಳಿಗಳಿಗೆ ಹೋಗುತ್ತಿದ್ದ. ಆದರೀಗ ತನ್ನ ಊರು ಬಿಟ್ಟು ಹೊರಗೆ ಹೋಗುತ್ತಿರಲಿಲ್ಲ; ಹೋದರೂ ಸಂಜೆಗೆ ಮರಳುತ್ತಿದ್ದ. ಅವನ ಒಂದು ದಿನದ ವಿಲಂಬ, ಅವನ ಸಾಧಾರಣ ತಲೆ ಶೂಲಿ, ನೆಗಡಿ ಅವಳನ್ನು ಅವ್ಯವಸ್ಥಿತಳನ್ನಾಗಿ ಮಾಡುತ್ತಿದ್ದವು. ಅವಳಿಗೆ ಮೇಲಿಂದ ಮೇಲೆ ಕೆಟ್ಟ ಕನಸು ಬೀಳುತ್ತಿದ್ದವು. ಯಾವುದೋ ಅನಿಷ್ಟದ ಕಾಲ್ಪನಿಕ ಅಸ್ತಿತ್ವದ ಛಾಯೆ ಯಾವಾಗಲೂ ತನ್ನ ಸುತ್ತಲೂ ತಿರುಗುತ್ತಿರು ವಂತೆ ಅವಳಿಗೆ ಪ್ರತೀತವಾಗುತ್ತಿತ್ತು.

ಹಳ್ಳಿಯನ್ನು ಸೇರಿ ಅವಳು ಸಂದೇಹದ ಸೂತ್ರದ ಬೊಂಬೆಯಾಗಿದ್ದಳು. ಇತ್ತ ಅವಳ ಸೌಭಾಗ್ಯಸೀರೆ ಸ್ವದೇಶ ಪ್ರೇಮದ ವೇದಿಯ ಮೇಲೆ ಭಸ್ಮವಾಗಿ ಶುದ್ಧಿಪ್ರದಾಯಿನಿಯಾದ ವಿಭೂತಿಯಾಗಿತ್ತು.

ಎರಡನೆಯ ತಿಂಗಳ ಕೊನೆಯಲ್ಲಿ ರತನಸಿಂಹ ಅವಳನ್ನು ಕರೆದು ಕೊಂಡು ಮರಳಿಬಂದ.

೫

ಗೌರಾ ಮರಳಿ ಬಂದು ಮೂರು ನಾಲ್ಕು ದಿನಗಳಾಗಿದ್ದವು. ಆದರೂ ಅವಳು ಮನೆಯ ವಸ್ತುವಡವೆಗಳನ್ನು ಜತನ ಮಾಡುವುದರಲ್ಲಿ, ಅವವುಗಳ ಸ್ಥಾನದಲ್ಲಿ ಅವನ್ನಿರಿಸುವುದರಲ್ಲಿ ಪೂರಾ ಮಗ್ನಳಾಗಿರುತ್ತಿದ್ದಳು; ಹೊರಗೆ ಹೋಗುವುದಕ್ಕೇ ಅವಳಿಗಾಗಿರಲಿಲ್ಲ. ಅವರು ಹಳ್ಳಿಗೆ ಹೋದ ಮರುದಿನವೇ ಕೇಸರಮುಹರಿ ಬಿಟ್ಟುಹೋಗಿದ್ದಳು; ಅಂತಹ ಚತುರ ದಾಸಿ ಇನ್ನೂ ಸಿಕ್ಕಿರ ಲಿಲ್ಲ. ಕುವರ ಸಾಹೇಬನ ಆಳು ರಾಮಟಹಲನೂ ಬಿಟ್ಟುಹೋಗಿದ್ದ. ಹೀಗಾಗಿ ಗಾಡಿಯವನೇ ಕುದುರೆ ಚಾಕರಿ ಮಾಡಬೇಕಾಗಿತ್ತು.

ಸಂಜೆಯ ಸಮಯ. ಗೌರಾ ಹೊರ ಪಡಸಾಲೆಯಲ್ಲಿ ಕುಳಿತು ನಟ್ಟ ನೋಟದಿಂದ ಮುಗಿಲನ್ನು ನೋಡುತ್ತಿದ್ದಳು. ಚಿಂತಾಗ್ರಸ್ತ ಜೀವಿಗಳಿಗೆ ಇರುವುದು ಇದೊಂದೇ ಅವಲಂಬನ! ಸಹಸಾ ರತನಸಿಂಹ ಬಂದು ಹೇಳಿದ: "ನಡೆ, ನಿನ್ನನ್ನು ಸ್ವದೇಶೀ ಪೇಟೆಯಲ್ಲಿ ತಿರುಗಾಡಿಸಿಕೊಂಡು ಬರುತ್ತೇನೆ. ಇದು ನನ್ನ ಸೂಚನೆಯೇ ಆಗಿತ್ತು; ಆದರೆ ಇಲ್ಲಿಗೆ ಬಂದು ನಾಲ್ಕು ದಿನ ಆದವು, ಅಲ್ಲಿಗೆ ಹೋಗಲು ಪುರಸತ್ತೇ ಸಿಕ್ಕಿಲ್ಲ."

"ನನಗಂತೂ ಬರಲಿಕ್ಕೆ ಮನಸಾಗುವುದಿಲ್ಲ. ಇಲ್ಲಿಯೇ ಕೂತು ಕೊಂಡು ಏನಾದರೂ ಮಾತನಾಡಿರಿ."

"ಇಲ್ಲ, ನಡೆ, ನೋಡಿಕೊಂಡು ಬರುವಾ. ಒಂದು ಗಂಟೆಯೊಳಗೆ ಬಂದುಬಿಡ್ತೇವೆ."

ಕೊನೆಗೆ ಗೌರಾ ಒಪ್ಪಿಕೊಂಡಳು. ಈಚೆ ತಿಂಗಳಾನುತಿಂಗಳು ಅವಳು ಹೊರಗೆ ಹೊರಟಿರಲಿಲ್ಲ. ಇಂದು ನಾಲ್ಕಾ ಕಡೆ ಅವಳು ವಿಚಿತ್ರ ಶೋಭೆ ಯನ್ನು ಕಂಡಳು. ಪೇಟೆಗೆ ಇಷ್ಟೊಂದು ಕಳೆ ಎಂದೂ ಬಂದಿರಲಿಲ್ಲ. ಸ್ವದೇಶೀ ಪೇಟೆಯನ್ನು ತೆಲುಪಿದರು. ನೇಕಾರರು ಮತ್ತು ಸ್ವದೇಶೀ ಬಟ್ಟೆ ಮಾರುವವರು ತಮ್ಮ ತಮ್ಮ ಅಂಗಡಿಗಳನ್ನು ಹಚ್ಚಿಕೊಂಡು ಕುಳಿತಿದ್ದರು. ಒಬ್ಬ ನೇಕಾರ ಮುದುಕ ಪಕ್ಕನೆ ಎದ್ದು ಬಂದು ರತನಸಿಂಹನಿಗೆ ವಂದಿಸಿದ. ರತನಸಿಂಹ ಚಕಿತನಾಗಿ, "ರಾಮುಟಹಲ! ಎಲ್ಲಿರ್ತೀ ನೀನೀಗ?" ಎಂದು ಕೇಳಿದ

ರಾಮುಟಹಲನ ಮುಖಮುದ್ರೆ ಶ್ರೀಸಂಪನ್ನವಾಗಿತ್ತು. ಅವನ ಅಂಗಾಂಗ ಗಳಲ್ಲಿಯೂ ಆತ್ಮಗೌರವದ ಬೆಳಕು ಹೊಮ್ಮುತ್ತಿತ್ತು. ಕಣ್ಣುಗಳಲ್ಲಿ ಗೌರವದ ಜ್ಯೋತಿಯಿತ್ತು. ಕುದುರೆಲಾಯವನ್ನು ಬಳಿಯುವ ಮುದುಕ ರಾಮುಟಹಲ ಇಷ್ಟು ಸೌಮ್ಯ, ಇಷ್ಟು ಸಭ್ಯ ಗೃಹಸ್ಥನಿರಬಹುದೆಂದು ರತನ ಸಿಂಹ ಬಗೆದಿರಲಿಲ್ಲ. ರಾಮುಟಹಲ ಹೇಳಿದ: "ಸರಕಾರ, ಈಗ ನಾನು ನನ್ನ ಉದ್ಯೋಗ ಮಾಡುತ್ತಿದ್ದೇನೆ. ತಮ್ಮ ಸೇವೆ ಬಿಟ್ಟಂದಿನಿಂದ ಈ ಕೆಲಸಕ್ಕೆ ತೊಡಗಿದ್ದೇನೆ. ತಮ್ಮ ದೃಷ್ಟಿ ನಮ್ಮ ಬಡವರ ಮೇಲೆ ಬಿತ್ತಂತೇ ನಮ್ಮ ಬಾಳೇವು ನಡದೈತೆ. ಇಲ್ಲದಿದ್ದರೆ, ನಿಮಗೆ ಗೊತ್ತಿದ್ದದ್ದೇ ಅಯ್ತೆ, ನಮ್ಮ ಹಾಡು ಹೆಂಗಿತ್ತಂತ. ಜಾತಿಯಿಂದ ನೇಕಾರ, ಆದರೆ ಪಾಪಿ ಹೊಟ್ಟೇ ದಶಿಂದ ಚಮ್ಮಾರ ಆಗಿಬಿಟ್ಟಿದ್ದೆ."

"ಆಗಲಪ್ಪ, ಇನ್ನು ಸುಖವಾಗಿರು. ಈ ಪೇಟೆ ಏರ್ಪಡಿಸಬೇಕೆಂದು ನಾನೇ ಸಲಹೆ ಕೊಟ್ಟಿದ್ದೆ. ವ್ಯಾಪಾರ ಹೇಗೆ, ಚೆನ್ನಾಗಯ್ತೆ?

"ಹಾಂ ಸರಕಾರ, ಈಗೀಗ ಬಹಳ ವ್ಯಾಪಾರ ಆಗಾಕ ಹತ್ತೈತೆ. ಕೈಯಾಗಿಂದು ಕೈಯಾಗೇ ಹ್ವಾರಿಹೋಗತೆಯ್ತೆ ಮಾಲು. ಇಲ್ಲಿ ಕುಂತು ಒಂದು ತಿಂಗಳಾತು. ತಮ್ಮ ದಯಾ;—ಜನರದು ನಾಲ್ಕು ದುಡ್ಡು

ಕೊಡೋದಿತ್ತು, ಎಲ್ಲಾ ತೀರಿಸಿದೆ. ದೇವರ ದಯದಿಂದ ಒಣಾದಾಗಲಿ ಹಸೀದಾಗಲಿ, ಎರಡೂ ಹೊತ್ತು ಊಟ ಸಿಗತಯ್ತಿ; ಇನ್ನೇನು ಬೇಕು? ಬಾಯವರ ಸೌಭಾಗ್ಯಸೀರೆ ಹೋಳ್ಯಾಗ ಬಿತ್ತು ಅಂದ ಕೂಡ್ಲೆ, ಪ್ಯಾಟಿಗೆ ಕಳೆ ಕಟ್ಟಿತು ಅನ್ನಿರಿ. ಮಂದಿ ಅಂತು—ಇಂತಾ ದೊಡ್ಡ ಮಂದ್ಯಾಗ ಇಂತಾ ಸುಬದ ದಟ್ಟೀ ನೋಡಲಿಲ್ಲ ಅಂದವ್ಯಾಗ, ನಾವ್ಯಾಕ ಇಡಬೇಕು ಪರದೇಶೀ ಅರಿವಿ! ಹೋಳೀ ನಡದ ದಿನದಕಿಂತ ಮೂರು ದಿನ ಮುಂಚಾಕೇ ಸರಕಾರ ಊರಿಗೆ ಹೋಗಿತ್ತು. ಅದಕ್ಕೆ ಮುಂಚಾಕೂ ಹೊರ್ರ್ಯಾಕ ಬಾಳ ಬರತಿದ್ದಿಲ್ಲ ಸರಕಾರ. ನನಗ ಅನಸ್ತೈತೆ—ಈ ಎಲ್ಲಾ ಮಾಯಾ ಆ ಸುಬಸೀರೀದೇ ಐತೆ.''

ಅಷ್ಟರಲ್ಲಿ ಇಳಿವಯಸ್ಸಿನ ಹೆಂಗುಸೊಬ್ಬಳು ಗೌರಾನ ಎದುರಿಗೆ ಬಂದು "ಬಹುಜೀ, ನನ್ನ ಮರೆತಿಲ್ಲ ಅಷ್ಟೇ?" ಎಂದು ಕೇಳಿದಳು.

ಗೌರಾ ಮೋರೆ ಮೇಲೆತ್ತಿ ನೋಡಿದಳು. ಮುಂದೆ ನಿಂತಿದ್ದವಳು ಕೇಸರಮುಹರಿ. ಅಂದವಾದ ಸೀರೆ ಉಟ್ಟಿದ್ದಳು; ಕೈಕಾಲುಗಳಲ್ಲಿ ಮಾಮೂಲಿ ಒಡವೆಗಳೂ ಇದ್ದವು ಮೊಗ ಹಿಗ್ಗಿತ್ತು. ಪ್ರತಿಯೊಂದು ಭಾವದಲ್ಲಿಯೂ ಸ್ವತಂತ್ರ ಜೀವನದ ಗೌರವ ಒಡೆದುಕಾಣುತ್ತಿತ್ತು.

"ಇಷ್ಟು ಬೇಗ ಮರೆತೇನೆ? ಈಗೆಲ್ಲಿರೋದು? ನಾವು ತಿರುಗಿ ಬರೊ ಪುರಸತ್ತಿಲ್ಲದೇ ಅಷ್ಟರೊಳಗೇ ಹಾರಿಹೋದಿ." ಗೌರಾ ಪ್ರಶ್ನಿಸಿದಳು.

"ಏನು ಮಾಡಲಿ ಸರಕಾರ, ನಮ್ಮ ಕೆಲಸ ಸಾಗ್ತಯ್ತೆಂತ ನೋಡಿ ನಿಲ್ಲಾಕಾಗಲಿಲ್ಲ, ಎಲ್ಲೀತನಕ ಹೊಟ್ಟೀಬಟ್ಟೀಗೆ ಸಿಗತಿದ್ದಿಲ್ಲ, ಅಲ್ಲೀ ತನಕ ಉಪಾಯಿದ್ದಿಲ್ಲ. ಹೊಟ್ಟೀ ಸಲುವಾಗಿ ಸ್ಯಾವಿ–ಚಾಕರಿ, ಒಳ್ಳೇದು ಕೆಟ್ಟದ್ದು ಎಲ್ಲಾನೂ ಮಾಡಬೇಕಾಕ್ಕಿತ್ತು. ಈಗ ತಮ್ಮ ಕಿರಪಾದಿಂದ ನಮ್ಮ ದಿನಾನೂ ತಿರಿಗಿದಾವು, ಈಗ ಎರಡನೇ ದಗದ ಮಾಡಾಣಿಲ್ಲ. ಪೇಟಿ ಇದೇ ರಂಗಿನಾಗ ಇದ್ದರ ನಮ್ಮ ಗಳಿಕಿಗೇನೂ ಸಾವಿಲ್ಲ. ಇದೆಲ್ಲಾ ತಮ್ಮ ಸೀರಿ ಮಹಿಮಾ. ಅದರ ಭಾಗ್ಯೇದಿಂದ ನಮ್ಮ ಬಡವರ ಬಾಳ ಮನಿ ನಿಂತವು. ಒಂತಿಂಗಳ ಮುಂಚಾಕ ಈ ಅಂಗಡಿಯವರಿಗೆ ಯಾರಿಗೂ ರೊಟ್ಟಿಗೆ ಗತಿ ಇದ್ದಿಲ್ಲ. ಯಾರು ಗಾಡಿ ಹೊಡೀತಿದ್ರು, ಯಾರು ತಾಸೆ ಬಾರಿಸತಿದ್ರು, ಕೆಲವರಂತೂ

ಭಂಗೀ ಕೆಲಸಕ್ಕ ನಿಂತಿದ್ರು; ಎಷ್ಟೋ ಜನ ತಿರಕೊಂತಿದ್ರು. ಈಗ ಎಲ್ಲರೂ ತಮ್ಮ ಹ್ವಾರ್ಯಾಕ ಹತ್ಯಾರು. ಖರೇ ಕೇಳಿದರ, ನಿಮ್ಮ ಸವುಬಾಗ್ಯೆ ಸೀರಿ ನಮ್ಮ ಬಾಗ್ಗೇವು ತೆರಿಸಿತು. ನಿಮ್ಮ ಸವುಬಾಗ್ಗೇವು ಅಮರಾಗ್ಲಿ ಅಂತಾ ನೂರಾರು ಮಂದಿ ಹಾಡಿ ಹರಸ್ತಯ್ತೊ, ಖರೇ ಅಂದ್ರೂ;—ನಮ್ಮ ರಂಡೇರ ಜಾತಿಗೆ ಸವುಬಾಗ್ಗ ಕೊಟ್ಟಿತು ಅದು."

ರತನಸಿಂಹ ಒಂದು ಅಂಗಡಿಯಲ್ಲಿ ಕುಳಿತು ಕೆಲ ಬಟ್ಟೆಗಳನ್ನು ನೋಡ ತೊಡಗಿದ. ಗೌರಾನ ಭಾವಿಕ ಹೃದಯು ಆನಂದದಿಂದ ಪುಲಕಿತವಾಗುತ್ತ ಲಿತ್ತು. ಅವಳ ಅಮಂಗಲದ ಕಲ್ಪನೆಗಳೆಲ್ಲ ಕನಸಿನಂತೆ ಹರಿದುಹೋಗುತ್ತ ಲಿದ್ದವು. ನಯನಗಳು ಸಜಲವಾಗಿದ್ದವು. ಅಶ್ರುಸಿಂಚಿತ ನೇತ್ರಗಳೆದುರು ಸೌಭಾಗ್ಯದೇವತೆ ನಿಂತು ಸೆರಗು ನೀಡಿ ಅವಳನ್ನು ಹರಸುತ್ತಿದ್ದಳು. ಭಕ್ತಿ ಪೂರ್ಣ ಚಕ್ಷುಗಳಿಂದ ರತನಸಿಂಹನನ್ನು ನೋಡಿ ಅವಳೆಂದಳು: "ನನಗೆ ಒಂದು ಸೀರೀನೂ ತಗೊಳ್ಳಿರಿ."

೬

ಗೌರಾ ಇಲ್ಲಿಂದ ಹೊರಟಾಗ ಬೀದಿಯ ವಿದ್ಯುದ್ದೀಪಗಳು ಹತ್ತಿದ್ದವು. ಬೀದಿಯಲ್ಲಿ ಜಗಜಗ ಬೆಳಕಿತ್ತು. ಆನಂದದ ಪ್ರಕಾಶದಿಂದ ಅವಳ ಹೃದಯವೂ ಬೆಳಗುತ್ತಿತ್ತು.

"ನೆಟ್ಟಗೆ ಮನೆಗೆ ಹೋಗೋಣವೇ?" ರತನಸಿಂಹ ಕೇಳಿದ.

"ಇಲ್ಲ. ಛಾವಣಿಯ ಕಡೆಯಿಂದ ನಡೀರಿ."

"ಪ್ಯಾಟಿ ಬಹಳ ಛಲೋ ಏರ್ಪಟ್ಟೈತ್ತು."

"ಆ ಸ್ಥಳ ಕೊಂಡುಕೊಂಡು ಕಾಯಂಪ್ಯಾಟಿ ಮಾಡಿಬಿಡಿರಿ. ಸ್ವದೇಶೀ ಆರಿವೀ ಅಂಗಡೀನೇ ಇರಬೇಕು, ಯಾರಿಂದಲೂ ಬಾಡಿಗಿ ತಗೋಬಾರದು."

"ಬಹಳ ವೆಚ್ಚ ಮಾಡಬೇಕಾಗ್ತದೆ."

"ಮನಿ ಮಾರಿಬಿಡಿರಿ. ರೂಪಾಯೀನೇ ರೂಪಾಯಿ ಆಗ್ತದ."

"ಅಂದರೆ, ಇರೋದೆಲ್ಲಿ ಮರದ ಬುಡಕೆ?"

"ಅಲ್ಲ; ನಮ್ಮ ಹಳ್ಳೀ ಮನೆಯಾಗ."

"ನೋಡೋಣ."

ಸ್ವಲ್ಪ ಹೊತ್ತಿನ ಮೇಲೆ ಗೌರಾ ಮತ್ತೆಂದಳು: "ಪ್ರಾಂತದಾಗ ಹತ್ತೀ ಬೆಳಿ ಹೆಚ್ಚು ಮಾಡಿರಿ. ಹತ್ತೀ ಬಿತ್ತೋವರಿಗೆ ಬಿಟ್ಟೀ ಮಾಫ ಮಾಡಿರಿ."

"ಭಲೋ ತಕ್ಕ ಉಪಾಯ. ಎರಡುಪಟ್ಟು ಅಗ್ಗದ ಉತ್ಪತ್ತಿ."

ಗೌರಾ ಸ್ವಲ್ಪ ಸಮಯ ಯೋಚಿಸಿದಳು. ಆ ಮೇಲೆ, "ಕಟಗೀ ಪುಕ್ಕಟೆ ಕೊಟ್ಟರ ಹೆಂಗರೀ? ಯಾರಿಗೆ ಬೇಕವರು ರಾಟಿ ಮಾಡಿಸಿಕೊಳ್ಳ ಲಿಕ್ಕೆ ಕಡಕೊಂಡು ಹೋಗಲಿ."

"ಲೂಟೀನೇ ಆಗಿಬಿಟ್ಟೀತು."

"ಅಂಥಾ ಅಪ್ರಾಮಾಣಿಕತನ ಯಾರೂ ಮಾಡಲಿಕ್ಕಿಲ್ಲ."

ಅವರು ಗಾಡಿಯಿಂದಿಳಿದು ಮನೆಯ ಹೊಸಲಿನೊಳಗೆ ಕಾಲಿಟ್ಟಾಗ ಗೌರಾನ ಚಿತ್ತ ಶುಭ ಕಲ್ಪನೆಗಳಿಂದ ಪ್ರಫುಲ್ಲಿತವಾಗುತ್ತಲಿತ್ತು. ಆಕಳಕರು ಕಣ್ಣೆ ಹರಿದುಕೊಂಡು ಚಿನ್ನಾಟ ಆಡುತ್ತಿರುವ ಹಾಗೆ.

# ಬ್ಯಾಂಕಿನ ದಿವಾಳಿ



ಲಖನೌ ನ್ಯಾಶನಲ್ ಬ್ಯಾಂಕಿನ ದೊಡ್ಡ ಆಫೀಸಿನಲ್ಲಿ ಲಾಲಾ ಸಾಈದಾಸರು ಆರಾಮು ಕುರ್ಚಿಯಲ್ಲಿ ಒರಗಿ, ಶೇರುಗಳ ಭಾವವನ್ನು ನೋಡುತ್ತ, ಈ ಸಾರೆ ಪಾಲುಗಾರರಿಗೆ ಲಾಭಾಂಶವನ್ನು ಎಲ್ಲಿಂದ ಕೊಡ ಬೇಕೆಂದು ಯೋಚಿಸುತ್ತಿದ್ದರು. ಚಹ, ಕಲ್ಲಿದ್ದಲಿ, ಜೂಟುಗಳ ಪಾಲು ಗಳನ್ನು ಕೊಳ್ಳುವುದು, ಬೆಳ್ಳಿ, ಬಂಗಾರ, ಹತ್ತಿಗಳ ಸಟ್ಟಾ ವ್ಯವಹಾರ ಮಾಡುವುದು ಎಂದು ಅವರ ವಿಚಾರ. ಆದರೆ ಹಾನಿಯ ಭಯದಿಂದ ಅವರು ಯಾವ ನಿಶ್ಚಯಕ್ಕೂ ಬರುತ್ತಿರಲಿಲ್ಲ. ಈ ವರುಷ ಕಾಳಿನ ವ್ಯಾಪಾರದಲ್ಲಿ ನಷ್ಟವಾಗಿತ್ತು. ಪಾಲುಗಾರರಿಗೆ ಧೈರ್ಯಕೊಡುವುದಕ್ಕಾಗಿ ಲಾಭಹಾನಿಯ ಕಲ್ಪಿತ ತಾಳೆ ತೋರಿಸಬೇಕಾಯಿತು; ಮತ್ತು ಲಾಭವನ್ನು ಬಂಡವಾಳದಿಂದ ಹಂಚಬೇಕಾಯಿತು. ಆದುದರಿಂದ ತಿರುಗಿ ಕಾಳಿನ ವ್ಯಾಪಾರದಲ್ಲಿ ಕೈ ಹಾಕಲು ಎದೆ ನಡುಗುತ್ತಿತ್ತು.

ಆದರೆ ಹಣವನ್ನು ನಿಷ್ಕ್ರಿಯವಾಗಿ ಇಟ್ಟುಬಿಡುವುದಕ್ಕಾಗದು. ಒಂದೆರಡು ದಿನಗಳಲ್ಲಿಯೇ ಅದನ್ನು ಒಂದಿಲ್ಲೊಂದರಲ್ಲಿ ತೊಡಗಿಸಲು ತಕ್ಕ ಯೋಜನೆ ಮಾಡುವುದು ಅವಶ್ಯವಾಗಿತ್ತು. ಇನ್ನೊಂದು ವಾರದೊಳಗೇ ಡೈರೆಕ್ಟರರ ತ್ರೈಮಾಸಿಕ ಸಭೆ ಕೂಡುವುದಿತ್ತು. ಅಷ್ಟರೊಳಗೆ ಯಾವ ಏರ್ಪಾಟವೂ ಆಗದಿದ್ದರೆ, ಮತ್ತೆ ಮೂರು ತಿಂಗಳು ಹಾಗೇ ಉಳಿದು ಬಿಡುವುದು. ಹೀಗಾದರೆ, ಷಾಣ್ಮಾಸಿಕ ಲಾಭದ ಹಂಚಿಕೆಯ ಸಮಯದಲ್ಲಿ ಮತ್ತೆ ಅದೇ ತೋರುಗಾಣಿಕೆಯ ತಂತ್ರ ಮಾಡಬೇಕಾಗುವುದು; ಇದು ದುಸ್ತರವಾದದ್ದು. ಈ ಸಮಸ್ಯೆಯಲ್ಲಿ ಬಹಳ ಹೊತ್ತು ತೊಳಲಾಡಿದ ಮೇಲೆ ಸಾಈದಾಸರು ಗಂಟೆ ಬಾರಿಸಿದರು. ಪಕ್ಕದ ಕೋಣೆಯಿಂದ ಬಂಗಾಲಿ ಬಾಬುಗಳೊಬ್ಬರು ಹಣಿಕಿ ಹಾಕಿದರು.

ಸಾಈದಾಸ—ತಾತಾ ಸ್ಟೀಲ್ ಕಂಪನಿಗೆ ಅವರ ಹೊಸ ಬ್ಯಾಲನ್ಸ್ ಶೀಟ್ ಕಳಿಸಲು ಒಂದು ಕಾಗದ ಬರೆಯಿರಿ.

ಬಾಬು—ಅವರಿಗೆ ಹಣದ ಅಗತ್ಯವಿಲ್ಲ, ಕಾಗದಕ್ಕೆ ಉತ್ತರವನ್ನೇ ಕೊಡುವುದಿಲ್ಲ.

" ಒಳ್ಳೇದು, ನಾಗಪುರದ ಸ್ವದೇಶೀ ಮಿಲ್ಲಿಗೆ ಬರೆಯಿರಿ. "

" ಅದರ ವ್ಯವಹಾರ ಚೆನ್ನಾಗಿಲ್ಲ. ಮೊನ್ನೆ ಮೊನ್ನೆ ಅದರ ಕೂಲಿ ಕಾರರು ಮುಷ್ಕರ ಹೂಡಿದ್ದರು. ಗಿರಣಿ ಎರಡು ತಿಂಗಳು ನಿಂತಿತ್ತು. "

" ಅಲ್ಲಾ, ಬರೆದಾದರೂ ಬರೆಯಿರಿ! ನಿಮಗಂತೂ ಇಡೀ ಜಗತ್ತು ಅಪ್ರಾಮಾಣಿಕರ ಕೂಟವೇ!"

" ಸ್ವಾಮಿ, ಬರೆಯುವುದೇನು, ನಾವು ಎಲ್ಲರಿಗೂ ಬರೆಯಬಹುದು. ಆದರೆ ಬರೀ ಬರೆದ ಮಾತ್ರಕ್ಕೆ ಲಾಭವೇನೂ ಇಲ್ಲ. "

ಲಾಲಾ ಸಾಈದಾಸರು ತಮ್ಮ ಮನೆತನದ ಗೌರವಪ್ರತಿಷ್ಠೆಗಳಿಂದ ಬ್ಯಾಂಕಿನ ಮ್ಯಾನೇಜಿಂಗ್ ಡೈರೆಕ್ಟರ್ ಆದವರು. ವ್ಯಾವಹಾರಿಕ ಮಾತು ಗಳನ್ನು ಅರಿಯದವರು. ಬಂಗಾಲಿ ಬಾಬುಗಳೇ ಅವರ ಸಲಹೆಗಾರರು. ಈ ಬಾಬುಗಳಿಗೆ ಯಾವ ಕಂಪನಿ ಕಾರಖಾನೆಗಳಮೇಲೂ ಭರವಸೆ ಇರಲಿಲ್ಲ. ಇವರ ಅವಿಶ್ವಾಸದಿಂದಾಗಿಯೇ ಬ್ಯಾಂಕಿನ ಹಣ ಕಳೆದ ವರ್ಷ ಬೊಕ್ಕಸ ಬಿಟ್ಟು ಬರಲಿಲ್ಲ. ಮತ್ತೂ ಅದೇ ಲಕ್ಷಣ ತೋರುತ್ತಿತ್ತು. ಈ ತೊಂದರೆ ತಪ್ಪಿಸಲು ಸಾಈದಾಸರಿಗೆ ಹಂಚಿಕೆ ತೋಚದಾಗಿತ್ತು. ಆತ್ಮವಿಶ್ವಾಸದಿಂದ ಯಾವ ವ್ಯವಹಾರದಲ್ಲಿ ಕೈಹಾಕಲೂ ಧೈರ್ಯ ಸಾಲದು. ಚಂಚಲ ಮನಸಿನಿಂದ ಎದ್ದು ಎಡೆಯಾಡತೊಡಗಿದರು.

ಅಷ್ಟರಲ್ಲಿ ಪೇದೆ ಬಂದು ಅರಿಕೆ ಮಾಡಿದ: " ಬರಹಲದ ಮಹಾರಾಣಿ ಯವರ ಸ್ವಾರಿ ಬಂದಿದೆ. "

ಲಾಲಾ ಸಾಈದಾಸರು ಬೆಚ್ಚಿಬಿದ್ದರು. ಬರಹಲ ಮಹಾರಾಣಿ ಲಖನೌಗೆ ಬಂದು ಮೂರುನಾಲ್ಕು ದಿನ ಆಗಿತ್ತು. ಪ್ರತಿಯೊಬ್ಬರ ಬಾಯಲ್ಲೂ ಅವರ ಚರ್ಚೆಯೇ ಕೇಳುತಿತ್ತು. ಕೆಲವರು ಅವರ ಉಡಿಗೆ ತೊಡಿಗೆಗೆ ಮುಗ್ಧ ರಾಗಿದ್ದರು, ಕೆಲವರು ಅವರ ಸೌಂದರ್ಯಕ್ಕೆ ಕೆಲವರು ಅವರ ಸ್ವಚ್ಛಂದ ವೃತ್ತಿಗೆ. ಅವರ ಆಳು-ತೊತ್ತುಗಳು ಕೂಡ ಜನರ ಚರ್ಚೆಯಲ್ಲಿ ಸೇರಿದ್ದರು.

ರಾಯಲ್ ಹೋಟೆಲಿನ ಬಾಗಿಲಲ್ಲಿ ನೋಡುವವರ ದೊಡ್ಡ ಗುಂಪು ಯಾವಾಗಲೂ ಇರುತ್ತಿತ್ತು. ಅನೇಕ ರಸಿಕರು, ಯಾವುದಕ್ಕೂ ಎಗ್ಗಿಲ್ಲದ ಜನರು, ನಾನಾ ಛಲದಿಂದ–ಬಟ್ಟೆಮಾರುವವರಾಗಿ, ತಂಬಾಕುಗಾರರಾಗಿ— ಅವರ ದರ್ಶನ ಪಡೆಯುತ್ತಲಿದ್ದರು. ರಾಣಿಯ ಸವಾರಿ ಹೊರಗೆ ಹೊರಟಲ್ಲಿ ನುಂದಿಯ ನುಗ್ಗಾಟ.—ಭಲೆ, ಎಂತಹ ವೈಖರಿ! ಇಂತಹ ಇರಾಕ ಕುದರೆ ಜೋಡಿ, ದೊಡ್ಡಸಾಹೇಬರಲ್ಲಲ್ಲದೆ, ಇಲ್ಲಿ ರಾಜಮಹಾರಾಜರಲ್ಲಿ ಮಾತ್ರವೇ ಕಾಣಬಹುದು. ದೇವಿಯೂ ಎಷ್ಟು ಸುಂದರ! ಇಂತಹ ಬಿಳೀ ಮನುಷ್ಯರು ಎಲ್ಲಿಯೂ ಸಿಕ್ಕಲಿಕ್ಕಿಲ್ಲ. ಇಲ್ಲಿಯ ಶ್ರೀಮಂತರು ಮೃಗಾಂಕ, ಚಂದ್ರೋಯು,— ದೇವರೇ ಬಲ್ಲ,—ಮತ್ತೇನೇನು ತಿನ್ನುವರೋ; ಆದರೆ ಯಾರ ಮೋರೆಯ ಮೇಲೂ ತೇಜದ ಅಥವಾ ಪ್ರಕಾಶದ ಹೆಸರೂ ಇಲ್ಲ ಇವರು ಉಣ್ಣುವು ದೇನು, ಕುಡಿಯುವುದು ಯಾವ ಬಾವಿಯ ನಿರೋ, ನೋಡಲು ತಾಜಾ ಸೇಬು ಆಗಿದ್ದಾರೆ. ಇದೆಲ್ಲವೂ ಗಾಳಿನೀರಿನ ಪ್ರಭಾವ.

ಬರಹಲ, ಉತ್ತರದಲ್ಲಿ ನೇಪಾಳದ ಹತ್ತಿರ ಆಂಗ್ಲರಾಜ್ಯದಲ್ಲಿಯ ಒಂದು ನಾಡು ಅದು ಒಳ್ಳೇ ಧನಿಕ ದೇಶವೆಂದು ಜನರ ತಿಳಿವಳಿಕೆ; ಆದರೆ ವಾಸ್ತವದಲ್ಲಿ ಅದರ ಉತ್ಪನ್ನ ಎರಡು ಲಕ್ಷಕ್ಕಿಂತ ಹೆಚ್ಚಿರಲಿಲ್ಲ. ಕ್ಷೇತ್ರ ಮಾತ್ರ ಬಹಳ ವಿಸ್ತಾರವಾದದ್ದು, ನಿಜ. ಆದರೆ, ಬಂಜರು ಮತ್ತು ಹಾಳು ನೆಲವೇ ಹೆಚ್ಚು. ಜನವಸತಿಯ ಭಾಗ ಕೂಡ ಗುಡ್ಡಗಾಡು, ಬರಡು. ಭೂಮಿಗೆ ಬೆಲೆ ಕಡಿಮೆ.

ಲಾಲಾ ಸಾಈದಾಸರು ಲಗುಬಗೆಯಿಂದ ಕೋಲಮೇಲಿನ ರೇಶಿಮೆ ಸೂಟನ್ನು ತೆಗೆದುಕೊಂಡು ಧರಿಸಿ, ಮೇಜಿನ ಬಳಿ ಆತ್ಮೀಯತೆಯಿಂದ—ಇಲ್ಲಿ ರಾಜರಾಣಿಯರು ಬರುವುದು ಸಾಮಾನ್ಯ ಮಾತಲ್ಲ ಎನ್ನುವ ರೀತಿಯಲ್ಲಿ— ಕುಳಿತುಕೊಂಡರು. ಗುಮಾಸ್ತರೂ ಜತನದಿಂದ ಕುಳಿತರು. ಬ್ಯಾಂಕಿನ ಲ್ಲೆಲ್ಲ ಸ್ತಬ್ಧತೆಯ ಗಡಿಬಿಡಿ ಉಂಟಾಯಿತು. ಪೇದೆಗಳು ಟೊಪ್ಪಿಗೆ ಸರಿ ಪಡಿಸಿಕೊಂಡರು. ಕಾವಲುಗಾರನು ಕತ್ತಿ ಹಿಡಿದು ತನ್ನ ಸ್ಥಾನದಲ್ಲಿ ನಿಂತುಕೊಂಡ. ಬೀಸಣಿಕೆಯ ಆಳಿನ ಸಕ್ಕರೆನಿದ್ದೆ ಹರಿಯಿತು. ಬಂಗಾಲಿ ಬಾಬು ಮಹಾರಾಣಿಯ ಸ್ವಾಗತಕ್ಕಾಗಿ ಹೊರಹೊರಟರು.

ಸಾಈದಾಸರು ಹೊರಠೀವಿಯನ್ನೇನೋ ಮಾಡಿಕೊಂಡರು. ಆದರೆ, ಆಶೆ ಭಯಗಳಿಂದ ಅವರ ಮನಸು ಚಂಚಲವಾಗಿತ್ತು. ರಾಣಿಯರೊಡನೆ ವ್ಯವಹಾರ ಇದೇ ಮೊದಲಿನದು. ಮಾತುಕತೆ ಸಾಧಿಸೀತೋ ಇಲ್ಲವೋ ಎಂದು ಭಯ. ಶ್ರೀಮಂತರ ಪ್ರಕೃತಿ ಮುಗಿಲಮೇಲಿರುತ್ತದೆ. ಮಾತಿನಲ್ಲಿ ನಾನೆಲ್ಲಿ ತಪ್ಪುತ್ತೇನೋ ಏನೋ. ತಮ್ಮಲ್ಲಿ ಏನೋ ಒಂದು ಕುಂದು ಭಾಸವಾಗುತ್ತಿತ್ತು ಅವರಿಗೆ. ರಾಜಸೀ ನಿಯಮಗಳು ಅವರಿಗೆ ಅಪರಿಚಿತ. ಅವರನ್ನು ಗೌರವಿಸುವುದು ಹೇಗೆ, ಅವರೊಡನೆ ಮಾತನಾಡುವಾಗ ಯಾವ ವಿಷಯ ಗಮನದಲ್ಲಿಡಬೇಕು, ಅವರ ಮರ್ಯಾದೆಯ ರಕ್ಷಣೆಗಾಗಿ ಎಷ್ಟು ನಮ್ರತೆ ಅವಶ್ಯ, ಮುಂತಾದ ಪ್ರಶ್ನೆಗಳಿಂದ ಅವರು ಪೇಚಾಡುತ್ತಿದ್ದರು. ಹೇಗಾದರೂ ಈ ಪರೀಕ್ಷೆಯಿಂದ ಬೇಗ ಬಿಡುಗಡೆಯಾದರೆ ಸಾಕು ಎಂದು ಅವರಿಗೆನಿಸುತ್ತಿತ್ತು. ವ್ಯಾಪಾರಿಗಳು, ಸಾಧಾರಣ ಜಮೀನುದಾರರು, ಧನಿಕರೊಡನೆ ಇವರು ಸ್ಪಷ್ಟವಾಗಿ ನಿಷ್ಠುರವಾಗಿ ಮಾತನಾಡುತ್ತಿದ್ದರು; ಸುಶಿಕ್ಷಿತ ಸಜ್ಜನರೊಡನೆ ಶಿಷ್ಟತೆಯಿಂದ ವರ್ತಿಸುತ್ತಿದ್ದರು. ಆ ಸಂದರ್ಭಗಳಲ್ಲಿ ವಿಶೇಷ ವಿಚಾರ ಮಾಡಬೇಕಾಗುತ್ತಿರಲಿಲ್ಲ. ಈಗ ಬಹಳ ಕಷ್ಟಕ್ಕಿಟ್ಟು ಕೊಂಡಿತು. ತಿಬೆಟ್ಟಕ್ಕೆ—ಅಲ್ಲಿನ ರೀತಿ ರೂಢಿ, ಮಾತು ಕತೆ ಅಪರಿಚಿತವಾದ ನಾಡಿಗೆ—ಹೋಗಿದ್ದ ಲಂಕಾನಿವಾಸಿಯ ಗತಿ!

ಪಕ್ಕನೆ ಗಡಿಯಾಳದ ಕಡೆ ದೃಷ್ಟಿ ಹೋಯಿತು. ಆಗ ನಾಲ್ಕು ಗಂಟೆ ಹೊತ್ತಾಗಿದ್ದರೂ ಗಡಿಯಾಳ ಇನ್ನೂ ಎರಡು ಪ್ರಹರದ ನಿದ್ರೆಯಲ್ಲಿ ಮಗ್ನವಾಗಿತ್ತು. ತಾರೀಖಿನ ಮುಳ್ಳು ಓಟದಲ್ಲಿ ಸಮಯವನ್ನು ಪರಾಜಯಗೊಳಿಸಿತ್ತು. ಅವರು ಚಟ್ಟನೆದ್ದು ಗಡಿಯಾಳ ಸರಿಪಡಿಸಬೇಕು ಎನ್ನುವಷ್ಟರಲ್ಲಿ ಮಹಾರಾಣಿಯರು ಕೋಣೆಯೊಳಗೆ ಅಡಿಯಿಟ್ಟರು. ಸಾಈದಾಸರು ಗಡಿಯಾಳವನ್ನು ಬಿಟ್ಟರು; ಮಹಾರಾಣಿಯವರ ಹತ್ತಿರ ಹೋಗಿ ಪಕ್ಕದಲ್ಲಿ ನಿಂತರು. ಕೈಕೂಡಿಸಬೇಕೇ, ಬಾಗಿ ಸಲಾಮು ಮಾಡಬೇಕೇ ನಿರ್ಧರಿಸಲಾಗಲಿಲ್ಲ. ಮಹಾರಾಣಿಯವರೇ ಕೈನೀಡಿ ಅವರ ಒಡಪನ್ನು ಬಿಡಿಸಿದರು.

ಜನರು ಖುರ್ಚಿಗಳಲ್ಲಿ ಕುಳಿತ ಬಳಿಕ, ರಾಣಿಯ ಅಸ್ತಕಾರ್ಯದರ್ಶಿ ವ್ಯವಹಾರದ ಮಾತನ್ನು ಆರಂಭಿಸಿದ. ಬರಹಲದ ಹಿಂದಿನ ಇತಿಹಾಸವನ್ನು

ಹೇಳಿ, ರಾಣಿಯವರ ಪ್ರಯತ್ನದಿಂದ ಆದ ಅದರ ಉನ್ನತಿಯನ್ನು ಅವನು ಬಣ್ಣಿಸಿದ. ಈಗ ಕಾಲುವೆಯ ಒಂದು ಶಾಖೆ ತೆಗೆಯುವುದಕ್ಕಾಗಿ ಹತ್ತು ಲಕ್ಷ ರೂಪಾಯಿಗಳ ಆವಶ್ಯಕತೆಯಿತ್ತು; ಆದರೆ ಅವರು ಯಾವುದೊಂದು ಹಿಂದುಸ್ಥಾನೀ ಬ್ಯಾಂಕಿನೊಡನೆ ವ್ಯವಹಾರ ಮಾಡುವುದೇ ಒಳ್ಳೆಯದೆಂದು ಬಗೆದರು. ಈಗ ಅವರ ನಿರ್ಣಯವು ನ್ಯಾಶನಲ್ ಬ್ಯಾಂಕಿನ ಕೈಯಲ್ಲಿದೆ— ಈ ಸಂಧಿಯ ಲಾಭವನ್ನು ಅದು ಪಡೆಯಲಿಚ್ಛಿಸುವುದೇ ಅಥವಾ ಇಲ್ಲವೆ ?

" ನಾವು ಹಣ ಕೊಡಬಹುದು. ಆದರೆ ಕಾಗದಪತ್ರಗಳನ್ನು ನೋಡದೆ ಏನು ಮಾತಲೂ ಸಾಧ್ಯವಿಲ್ಲ. " ಎಂದರು ಬಂಗಾಲಿ ಬಾಬು.

" ಏನಾದರೂ ಹೊಣೆ ಬೇಕೆನ್ನುವಿರಾ ? " ಎಂದು ಆಪ್ತಕಾರ್ಯದರ್ಶಿ ಕೇಳಿದ.

" ಮಹಾಶಯರೇ, ಹೊಣೆಯ ಬಗ್ಗೆ ನಿಮ್ಮ ನಾಲಗೆಯೇ ಸಾಕು " ಎಂದು ಸಾಈದಾಸರು ಔದಾರ್ಯದಿಂದ ನುಡಿದರು.

" ತಮ್ಮ ಬಳಿ ರಾಜ್ಯದ ಲೆಕ್ಕಪತ್ರ ಏನಾದರೂ ಉಂಟೆ ? " ಬಂಗಾಲಿ ಬಾಬು ಪ್ರಶ್ನಿಸಿದರು.

ತಮ್ಮ ಪ್ರಧಾನ ಗುಮಾಸ್ತನ ಈ ವ್ಯಾವಹಾರಿಕ ವರ್ತನೆ ಸಾಈದಾಸರಿಗೆ ರುಚಿಸಲಿಲ್ಲ ಔದಾರ್ಯದ ಮತ್ತಿನಲ್ಲಿ ಅವರು ವ್ಯೆಮರೆತಿದ್ದರು. ಮಹಾರಾಣಿಯ ಸ್ವರೂಪವೇ ಭದ್ರವಾದ ಹೊಣೆಯಾಗಿರುವಾಗ, ಅವರೆದುರು ಲೆಕ್ಕ-ಕಾಗದಗಳ ಮಾತೆತ್ತುವುದು ವ್ಯಾಪಾರಿತನವೆನಿಸುವುದು; ಅದರಲ್ಲಿ ಅವಿಶ್ವಾಸದ ಗಂಧ ಹೊರಡುವುದು.

ಮಹಿಳೆಯರ ಎದುರು ಶೀಲ–ಸಂಕೋಚಗಳ ಮೂರ್ತಿಗಳಾಗುತ್ತೇವೆ ನಾವು. ಸಾಯೀದಾಸರು ಕ್ರೂರ ಕಠೋರ ದೃಷ್ಟಿಯಿಂದ ಬಂಗಾಲಿ ಬಾಬುಗಳ ಕಡೆ ನೋಡಿ, " ಕಾಗದಪತ್ರಗಳ ಪರೀಕ್ಷಣವೇನೂ ಅಷ್ಟು ಮಹತ್ವದ ಮಾತಲ್ಲ; ಮುಖ್ಯ ಬೇಕು ವಿಶ್ವಾಸ. " ಎಂದರು.

" ಡೈರೆಕ್ಟರರು ಎಂದೂ ಒಪ್ಪಲಾರರು, " ಎಂದರು ಬಂಗಾಲಿ ಬಾಬು.

"ಅದರವೇನು ಚಿಂತೆಯಿಲ್ಲ. ನಾವು ನಮ್ಮ ಜವಾಬ್ದಾರಿಯಿಂದ ಹಣ ಕೊಡಬಲ್ಲೆವು." ಎಂದು ಸಾಈದಾಸರು ನುಡಿದರು.

ರಾಣಿ ಕೃತಜ್ಞತೆಯ ನೋಟದಿಂದ ಸಾಈದಾಸರ ಮೋರೆ ನೋಡಿದಳು. ಅವಳ ತುಟಿಗಳಲ್ಲಿ ಮೆಲುನಗೆ ಅರಳಿತ್ತು.

೩

ಡೈರೆಕ್ಟರರು ಕಾಗದಪತ್ರ, ಆಯ-ವ್ಯಯ ನೋಡುವುದು ಅಗತ್ಯವೆಂದರು; ಆ ಕಾರ್ಯವನ್ನು ಸಾಈದಾಸರಿಗೇ ಒಪ್ಪಿಸಿದರು. ಉಳಿದವರಿಗೆ ಯಾರಿಗೂ ಇಡೀ ಆಫೀಸಿನ ವಿಚಾರಣೆ ಮಾಡುವುದಕ್ಕೆ ತಮ್ಮ ಕೆಲಸದಲ್ಲಿ ಬಿಡುವೇ ಇರಲಿಲ್ಲ. ಸಾಈದಾಸರು ನಿಯಮದಂತೆ ನಡೆದರು. ಮೂರು ನಾಲ್ಕು ದಿನ ಲೆಕ್ಕ ಪರಿಶೋಧಿಸಿದರು. ತಮ್ಮ ವಿಶ್ವಾಸಕ್ಕೆ ಅನುಕೂಲವಾದ ವರದಿ ಬರೆದರು. ವ್ಯವಹಾರ ನಿಶ್ಚಿತವಾಯಿತು. ಕಾಗದ ಬರೆದಾಯಿತು, ಹಣ ಕೊಟ್ಟಾಯಿತು; ನೂರಕ್ಕೆ ಒಂಬತ್ತರಂತೆ ಬಡ್ಡಿ ಗೊತ್ತಾಯಿತು.

ಮೂರು ವರುಷಗಳವರೆಗೆ ಬ್ಯಾಂಕಿನ ವ್ಯವಹಾರದ ಉನ್ನತಿ ಚೆನ್ನಾಗಿ ಆಯಿತು. ಆರು ತಿಂಗಳಿಗೊಮ್ಮೆ ನಾಲ್ವತ್ತೈದು ಸಾವಿರ ರೂಪಾಯಿಗಳ ಗಂಟು ಕೇಳದೆ ಮಾಡದೆ ಬ್ಯಾಂಕಿಗೆ ಬರುತ್ತಿತ್ತು. ವ್ಯವಹಾರಿಗಳಿಗೆ ನೂರಕ್ಕೆ ಐದರಂತೆ ಬಡ್ಡಿ ಕೊಡುತ್ತಿದ್ದರು. ಪಾಲುಗಾರರಿಗೆ ನೂರಕ್ಕೆ ಏಳರಂತೆ ಲಾಭಾಂಶ ದೊರೆಯುತ್ತಿತ್ತು.

ಸಾಈದಾಸರ ಬಗ್ಗೆ ಜನರು ತುಷ್ಟರಾದರು. ಎಲ್ಲರೂ ಅವರ ಬುದ್ಧಿಯನ್ನು ಕೊಂಡಾಡಿದರು. ಬಂಗಾಲಿ ಬಾಬು ಕೂಡ ಬರುಬರುತ್ತ ಅವರಿಗೆ ಅನುಕೂಲವಾಗುತ್ತಲಿದ್ದರು. ಸಾಈದಾಸರು ಅವರಿಗೆ ಹೇಳುತ್ತಿದ್ದರು: "ಬಾಬೂಜೀ, ವಿಶ್ವಾಸವು ಜಗತ್ತಿನಿಂದ ಲುಪ್ತವಾಗಿಲ್ಲ, ಆಗುವುದಿಲ್ಲ. ಸತ್ಯದಲ್ಲಿ ನಂಬುಗೆ ಇಡುವುದು ಪ್ರತಿಯೊಬ್ಬನ ಧರ್ಮ. ವಿಶ್ವಾಸ ಇಲ್ಲದವನು ಸತ್ತಂತೆಯೇ ಸರಿ. ಸುತ್ತೂ ಕಡೆ ಶತ್ರುಗಳು ಮುತ್ತಿರುವಂತೆ ಕಾಣುತ್ತದೆ ಅವನಿಗೆ. ದೊಡ್ಡ ದೊಡ್ಡ ಸಿದ್ಧಮಹಾತ್ಮರೂ ಬುಬ್ಬಣಾಚಾರಿಗಳಂತೆ

ತೋರುತ್ತಾರೆ. ನಿಜವಾದ ದೇಶಭಕ್ತನೂ ಅವನ ಕಣ್ಣಲ್ಲಿ ಸ್ವಾರ್ಥಪ್ರಿಯನಾಗುತ್ತಾನೆ. ಜಗತ್ತೇ ಛಲ-ಮೋಸಗಳಿಂದ ತುಂಬಿದೆ ಎಂದು ಬಗೆಯುತ್ತಾನೆ ಅವನು. ಅವನ ದೇವರ ಮೇಲಿನ ಶ್ರದ್ಧಾಭಕ್ತಿಗಳು ಕೂಡ ಲುಪ್ತವಾಗುತ್ತವೆ. ಯಾವನೊಬ್ಬ ಮನುಷ್ಯನ ವಿರುದ್ಧ ಪ್ರತ್ಯಕ್ಷ ಪ್ರಮಾಣ ಸಿಕ್ಕದವರೆಗೂ ಅವನನ್ನು ಒಳ್ಳೆಯವನೆಂದೇ ತಿಳಿಯೆಂದು ಒಬ್ಬ ಹೆಸರಾದ ತತ್ತ್ವಜ್ಞಾನಿ ಹೇಳಿದ್ದಾನೆ. ಸಭ್ಯದ ಶಾಸನಪದ್ಧತಿ ಈ ಮಹತ್ತ್ವಪೂರ್ಣ ಸಿದ್ಧಾಂತದ ಮೇಲೆಯೇ ನಿಂತಿದೆ. ತಿರಸ್ಕಾರವಂತೂ ಯಾರ ಬಗೆಗೂ ಇರಲಾಗದು. ನಮ್ಮ ಆತ್ಮಗಳು ಪವಿತ್ರವಾಗಿವೆ. ಅವನ್ನು ತಿರಸ್ಕರಿಸುವುದು ಪರಮಾತ್ಮನನ್ನು ತಿರಸ್ಕರಿಸಿದಂತೆ. ಕಪಟ ನಟನೆ ಪ್ರಪಂಚದಲ್ಲಿ ಇಲ್ಲವೇ ಇಲ್ಲವೆಂದು ನಾನು ಹೇಳುವುದಿಲ್ಲ. ಇವೆ, ತುಂಬಾ ಇವೆ. ಆದರೆ ಅದರ ನಿವಾರಣೆ ಅವಿಶ್ವಾಸದಿಂದಾಗುವುದಿಲ್ಲ, ಮಾನವಚರಿತ್ರೆಯ ಜ್ಞಾನದಿಂದಾಗುತ್ತದೆ. ಇದು ದೇವದತ್ತ ಗುಣ. ಮನುಷ್ಯನನ್ನು ನೋಡಿಯೇ ಅವನ ಆಂತರಿಕ ಭಾವಗಳವರೆಗೆ ನಾನು ತಲುಪಬಲ್ಲೆನೆಂಬ ವಿಶ್ವಾಸ ನನಗಿದೆ. ಬೇಕಾದ ಹಾಗೆ ರೂಪ-ವೇಷ ಬದಲಿಸಲಿ, ನನ್ನ ಅಂತರ್ದೃಷ್ಟಿಯನ್ನು ಮೋಸಗೊಳಿಸುವುದು ಸಾಧ್ಯವಿಲ್ಲ ವಿಶ್ವಾಸದಿಂದಲೇ ವಿಶ್ವಾಸ ಹುಟ್ಟುವುದೆಂಬುದನ್ನು ಮರೆಯಲಾಗದು. ಅವಿಶ್ವಾಸದಿಂದ ಹುಟ್ಟುವುದು ಅವಿಶ್ವಾಸವೇ. ಇದು ನಿಸರ್ಗನಿಯಮ. ನೀವು ಮೂಲದಿಂದಲೇ ಯಾರನ್ನು ಧೂರ್ತ ಕಪಟಿ, ದುರ್ಜನ ಎಂದು ತಿಳಿಯುವಿರೊ, ಅವರು ನಿಮ್ಮೊಡನೆ ಎಂದೂ ನಿಷ್ಕಪಟಿಗಳಾಗಿ ನಡೆಯರು; ನಿಮ್ಮನ್ನು ಕೀಳರೆಂದು ತೋರಿಸಲು ಯತ್ನಿಸುವರು. ಇದಕ್ಕೆ ವಿಪರೀತವಾಗಿ, ನೀವೊಬ್ಬ ಕಳ್ಳನನ್ನು ನಂಬಿದರೂ ಅವನು ನಿಮ್ಮ ಆಳಾಗುವನು. ಇಡೀ ಪ್ರಪಂಚವನ್ನೇ ಕೊಳ್ಳೆ ಹೊಡೆಯಬಹುದು, ಆದರೆ ನಿಮಗೆ ಅವನು ವಿಶ್ವಾಸಘಾತ ಮಾಡಲಾರ. ವಿಶ್ವಾಸದ ಬಲೆಯನ್ನು ಕೊರಳಿಗೆ ಹಾಕಿ ಎಂತಹ ಕುಕರ್ಮಿಯನ್ನೂ ನಿಮಗೆ ಬೇಕಾದ ದಾರಿಯಲ್ಲಿ ನಡೆಸಬಹುದು; ಅವನು ನಿಮ್ಮ ಕೈಯಲ್ಲಿ ಪುಣ್ಯಾತ್ಮನೂ ಆದಾನು.''

ಈ ದಾರ್ಶನಿಕ ತರ್ಕಗಳಿಗೆ ಬಂಗಾಲಿ ಬಾಬುವಿನ ಬಳಿ ಯಾವ ಉತ್ತರವೂ ಇರಲಿಲ್ಲ.

೪

ನಾಲ್ಕನೆಯ ವರುಷದ ಮೊದಲ ದಿನ, ಸಾಈದಾಸರು ಬ್ಯಾಂಕಿನ ಕಚೇರಿಯಲ್ಲಿ ಟಪ್ಪಾಲಿನ ದಾರಿ ನೋಡುತ್ತಿದ್ದರು. ಬರಹಲದಿಂದ ನಾಲ್ವತ್ತೈದು ಸಾವಿರ ರೂಪಾಯಿ ಬರುವ ದಿನ. ಈ ಸಲ ಬ್ಯಾಂಕಿನ ಸೌಕರ್ಯಸಾಧನಗಳನ್ನು ಹೆಚ್ಚಿಸಿಕೊಳ್ಳಬೇಕೆಂದು ಅವರು ಎಣಿಕೆ ಹಾಕಿದ್ದರು. ಬ್ಯಾಂಕಿನಲ್ಲಿ ಇದುವರೆಗೂ ಟೆಲಿಫೋನು ಇರಲಿಲ್ಲ. ಅದರ ಅಂದಾಜನ್ನೂ ತರಿಸಿದ್ದರು. ಮೊಗದಲ್ಲಿ ಆಶೆ ಮಿನುಗುತ್ತಿತ್ತು. ಬಂಗಾಲಿ ಬಾಬುಗಳೊಂದಿಗೆ ನಗುತ್ತ ಎನ್ನುತ್ತಿದ್ದರು. “ಈ ತಾರೀಖಿಗೆ ನನ್ನ ಕೈಗಳು ತುರಿಸಹತ್ತುತ್ತವೆ; ಈವೊತ್ತೂ ತುರಿಸುತ್ತಿವೆ.” ಒಮ್ಮೆ ದಫ್ತರಿಗೆ ಎನ್ನುವರು. “ಓ ಭಾಈ, ಸ್ವಲ್ಪ ಶಕುನವನ್ನಾದರೂ ವಿಚಾರಿಸಿರಿ. ಬರೀ ಬಡ್ತಿಯೋ ಬರುವುದೊ, ಸಿಬ್ಬಂದಿಯವರಿಗೆ ಕಪ್ಪಕಾಣಿಕೆಗಳು ಬರುತ್ತವೆಯೋ?”

ಅಂಚೆಯಾಳು ಸರಿಯಾದ ವೇಳೆಗೆ ಬಂದ. ಸಾಈದಾಸರು ಲಕ್ಷ್ಯ ಹೀನವಾಗಿ ಅವನ ಕಡೆ ನೋಡಿದರು. ಅವನು ತನ್ನ ಚೀಲದಿಂದ ಕೆಲವು ರಜಿಸ್ಟರ್ಡ್ ಲಕ್ಕೋಟೆಗಳನ್ನು ತೆಗೆದ. ಹಾರುನೋಟದಿಂದ ಅವರು ಅವು ಗಳನ್ನು ನೋಡಿದರು. ಬರಹಲದ ಲಕ್ಕೋಟೆ ಇರಲಿಲ್ಲ; ವಿಮೆಯಿಲ್ಲ, ಅರಗು ಮುದ್ರೆಯಿಲ್ಲ, ಆ ಬರೆವಣಿಗೆಯಿಲ್ಲ. ಅವರಿಗೆ ನಿರಾಶೆಯಾದಂತಾಯಿತು. ಏನಾದರೂ ರಜಿಸ್ಟರು ಉಳಿದಿದೆಯೋ ಎಂದು ಕೇಳಲು ಮನಸು ಹವಣಿಸಿತು; ಆದರೆ ಕೇಳಲಿಲ್ಲ.—ಗುಮಾಸ್ತರ ಎದುರಿನಲ್ಲಿ ಇಷ್ಟು ಅಧೈರ್ಯ ಉಚಿತವಲ್ಲ. ಆದರೆ ಅಂಚೆಯಾಳು ತಿರುಗಿ ಹೊರಟಾಗ ಅವರ ಜೀವ ನಿಲ್ಲಲಿಲ್ಲ. “ಇನ್ಶೂರ್ಡ್ ಪಾಕೀಟು ಯಾವುದೂ ಉಳಿದಿಲ್ಲಷ್ಟೆ? ಈವೊತ್ತು ಬರಬೇಕಾಗಿತ್ತು.” ಎಂದು ಕೇಳಿದರು. “ಹಾಗೆಲ್ಲಾದರೂ ಆಗುವುದುಂಟೇ ಸರಕಾರ! ತಪ್ಪು ತಡೆ ಇನ್ನೆಲ್ಲಿಯಾದರೂ ಆದಾವು; ತಮ್ಮ ಕೆಲಸದಲ್ಲಿ ಆದೀತೇ?” ಎಂದು ಅಂಚೆಯಾಳು ಮಾರ್ನುಡಿದ.

ಸಾಈದಾಸರ ಮೋರೆ ಇಳಿಯಿತು—ಕಚ್ಚಾ ಬಣ್ಣದ ಮೇಲೆ ನೀರು ಬಿದ್ದಹಾಗೆ. ಅಂಚೆಯವನು ಹೊರಟುಹೋದ ಮೇಲೆ ಬಂಗಾಲಿ ಬಾಬು ಗಳನ್ನು ಕುರಿತು, “ಅದೇಕೆ ತಡವಾಗಿರಬಹುದು? ಹೀಗೆಂದೂ ಆಗಿದ್ದಿಲ್ಲ.” ಎಂದರು.

“ ಯಾವ ಕಾರಣದಿಂದಲೋ ತಡವಾಗಿದೆ. ಗಾಬರಿಯಾಗುವ ವಿಷಯುವೇನಲ್ಲ. ” ಬಂಗಾಲಿ ಬಾಬು ನಿಷ್ಠುರ ಭಾವದಿಂದ ಉತ್ತರವಿತ್ತರು.

ನಿರಾಶೆ ಅಸಂಭವವನ್ನೂ ಸಂಭವಗೊಳಿಸುತ್ತದೆ. ಹಣ ಪಾರ್ಸಲಿನಿಂದ ಬಂದರೂ ಬರಬಹುದು; ಮೂರುಸಾವಿರ ಬಂಗಾರ ನಾಣ್ಯಗಳ ಪಾರ್ಸಲ್ ಮಾಡಿದ್ದರೂ ಮಾಡಿರಬಹುದು; ಎಂದು ಅವರು ಯೋಚಿಸಿದರು. ಈ ವಿಚಾರವನ್ನು ಪ್ರಕಟಗೊಳಿಸಲಿಲ್ಲ. ಆದರೆ ಈ ಆಸೆ ಬಹಳ ಹೊತ್ತು ನಿಲ್ಲಲಿಲ್ಲ. ಪಾರ್ಸಲಿನ ಅಂಚೆಯಾಳು ಬರಲೇ ಇಲ್ಲ. ಸಂಜೆಗೆ ಅಶಾಂತ ಚಿತ್ತದಿಂದ ಮನೆಗೆ ತೆರಳಿದರು. ಇನ್ನು ಪತ್ರದ ಅಥವಾ ತಂತಿಯ ನಿರೀಕ್ಷೆ. ಎರಡು ಮೂರು ಸಲ ಮನಸು ಕೆರಳಿತು.—ಪತ್ರಬರೆದು ಬಿಡಬೇಕು, ಕೊಡು ಕೊಳ್ಳುವ ಮಾತಿನಲ್ಲಿ ಕರಾರು ತಪ್ಪುವುದು ವಿಶ್ವಾಸಘಾತ ಎಂದು ಸ್ಪಷ್ಟವಾಗಿ ತಿಳಿಸಬೇಕು; ಒಂದು ದಿನದ ವಿಲಂಬವೂ ಬ್ಯಾಂಕಿಗೆ ಘಾತಕ ವಾದದ್ದು; ಆಗುವುದಿಷ್ಟೇ: ಇಂತಹ ಶಿಫಾರಸಿಗೆ ಮತ್ತೆಂದೂ ಅವಕಾಶ ಸಿಕ್ಕಲಾರದು; ಇತ್ಯಾದಿ. ಆದರೆ ಏನೋ ವಿಚಾರಮಾಡಿ ಬರೆಯಲಿಲ್ಲ

ಸಂಜೆಯಾಗಿತ್ತು. ಕೆಲ ಗೆಳೆಯರು ಬಂದರು. ಹರಟೆ ಸಾಗಿತು. ಅಂಚೆಯಾಳು ಸಂಜೆಯ ಟಪಾಲು ತಂದುಕೊಟ್ಟ. ಯಾವಾಗಲೂ ಮೊದಲು ಪತ್ರಿಕೆ ಒಡೆಯುವವರು. ಇಂದು ಪತ್ರ ಒಡೆದರು. ಬರಹಲದ ಕಾಗದ ಇರಲೇ ಇಲ್ಲ. ಆಗ ಹತಾಶರಾಗಿ ಒಂದು ಇಂಗ್ಲಿಷ್ ಪತ್ರಿಕೆ ಒಡೆದರು. ಮೊದಲಿಗೇ ತಾರಿನ ಶೀರ್ಷಿಕೆ ಕಣ್ಣಿಗೆ ಬಿದ್ದು, ಅವರ ನೇತ್ರರು ತಣ್ಣ-ಗಾಯಿತು. ಅಲ್ಲಿ —

“ ನಿನ್ನೆ ಸಂಜೆ ಬರಹಲದ ಮಹಾರಾಣಿ ತೀರಿಕೊಂಡರು. ಕಳೆದ ಮೂರು ದಿನಗಳಿಂದ ಅವರು ಅಸ್ವಸ್ಥರಾಗಿದ್ದರು. ” ಎಂದು ಬರೆದಿತ್ತು. ಮುಂದೆ ಚಿಕ್ಕ ಟಿಪ್ಪಣಿಯೂ ಇತ್ತು. “ ಬರಹಲದ ಮಹಾರಾಣಿಯವರ ಅಕಾಲಮೃತ್ಯು ರಾಜ್ಯಕ್ಕೆ ಮಾತ್ರವಲ್ಲ, ಸಮಸ್ತಪ್ರಾಂತಕ್ಕೂ ಶೋಕಜನಕ ಘಟನೆ. ದೊಡ್ಡ ದೊಡ್ಡ ಭಿಷಗಾಚಾರ್ಯರು ರೋಗಪರೀಕ್ಷೆ ಮಾಡುವುದ ರೊಳಗೇ ಮೃತ್ಯು ಕೆಲಸ ಪೂರಯಿಸಿಬಿಟ್ಟಿತು. ರಾಣೀಜಿಗೆ ಯಾವಾಗಲೂ ತಮ್ಮ ನಾಡಿನ ಏಳಿಗೆಯ ಧ್ಯಾನವಿರುತ್ತಿತ್ತು. ಅವರ ಆಳಿಕೆಯ ಅಲ್ಪಾ ವಧಿಯಲ್ಲಿ ರಾಜ್ಯಕ್ಕಾದ ಲಾಭ ಚಿರಸ್ಮರಣೀಯವಾಗಿದೆ. ತಮ್ಮ ತರುವಾಯ

ರಾಜ್ಯ ಅನ್ಯರ ಕೈಗೆ ಹೋಗುವುದೆಂಬುದು ಖಂಡಿತವಿದ್ದರೂ ಆ ವಿಚಾರ ರಾಣೀಸಾಹೇಬರ ಕರ್ತವ್ಯಪಾಲನೆಗೆ ಬಾಧಕವಾಗಲಿಲ್ಲ. ರಾಜ್ಯದ ಹೊಣೆಯ ಮೇಲೆ ಸಾಲತೆಗೆಯಲು ಶಾಸನಾನುಸಾರವಾಗಿ ಅವರಿಗೆ ಅಧಿಕಾರವಿಲ್ಲದಿದ್ದರೂ ಪ್ರಜೆಗಳ ಹಿತಕ್ಕಾಗಿ ಎಷ್ಟೋ ಸಲ ಈ ನಿಯಮವನ್ನವರು ಉಲ್ಲಂಘಿಸ ಬೇಕಾಯಿತು. ಇನ್ನು ಕೆಲಕಾಲ ಅವರು ಜೀವಿಸಿದ್ದರೆ ನಾಡನ್ನು ಋಣ ಮುಕ್ತಗೊಳಿಸುತ್ತಿದ್ದರೆಂಬಲ್ಲಿ ಸಂದೇಹವಿಲ್ಲ. ಹಗಲಿರುಳೂ ಆ ವಿಚಾರ ಅವರಿಗಿರುತ್ತಿತ್ತು. ಆದರೆ ಈ ಅಕಾಲ ಮೃತ್ಯು ಆ ತೀರ್ಮಾನವನ್ನು ಎರಡನೆಯವರಿಗೆ ಒಪ್ಪಿಸಿತು. ಈ ಸಾಲದ ಪರಿಣಾಮ ಏನಾಗುತ್ತದೋ ನೋಡಬೇಕು. ನಮಗೆ ವಿಶ್ವಸನೀಯವಾಗಿ ತಿಳಿದ ಮೇರೆಗೆ, ಈಗ ಲಖನೌ ದಲ್ಲಿರುವ ಹೊಸ ಮಹಾರಾಜರವರು ತಮ್ಮ ವಕೀಲರ ಸಮ್ಮತಿಯಂತೆ, ದಿವಂಗತ ಮಹಾರಾಣಿಯವರ ಸಾಲವನ್ನು ತೀರಿಸಲು ನಿರಾಕರಿಸಿದ್ದಾರಂತೆ. ಸಾವುಕಾರರ ಗುಂಪಿನಲ್ಲಿ ದೊಡ್ಡಗೊಂದಲವೇಳಬಹುದು. ಲಖನೌದ ಎಷ್ಟೋ ಧನಾಧೀಶರಿಗೆ ಬಡ್ಡಿಯ ಲೋಭ ಎಂತಹ ಅನಿಷ್ಟಕಾರಿಯಾಗಿರುವುದೆಂಬ ಪಾಠ ದೊರೆಯಬಹುದು.

ಲಾಲಾ ಸಾಈದಾಸರು ಪತ್ರಿಕೆಯನ್ನು ಮೇಜಿನಮೇಲಿರಿಸಿ, ಆಕಾಶದ ಕಡೆಗೆ ನೋಡಿದರು.—ನಿರಾಶೆಯ ಕೊನೆಯ ಆಸರೆ ಅದು. ಬೇರೆ ಗೆಳೆಯರೂ ಈ ಸುದ್ದಿ ಓದಿದರು. ಅದರ ಚರ್ಚೆ ನಡೆಯಿತು. ಸಾಈದಾಸರ ಮೇಲೆ ಸುತ್ತಲಿಂದಲೂ ಜಡಿಮಳೆ ಬೀಳತೊಡಗಿತು. ಎಲ್ಲ ತಪ್ಪನ್ನು ಅವರ ತಲೆಗೆ ಕಟ್ಟಲಾಯಿತು. ಅವರ ಚಿರಕಾಲದ ಕಾರ್ಯಕುಶಲತೆ ಮತ್ತು ಪರಿಣಾಮದರ್ಶಿತೆಗಳು ಮಣ್ಣುಪಾಲಾದವು. ಇಷ್ಟು ದೊಡ್ಡ ಪೆಟ್ಟನ್ನು ತಾಳಿಕೊಳ್ಳಲು ಬ್ಯಾಂಕು ಸಮರ್ಥವಾಗಿರಲಿಲ್ಲ. ಅದರ ಜೀವ ಉಳಿಸು ವುದು ಹೇಗೆಂಬ ಪ್ರಶ್ನೆ ಉತ್ಪನ್ನವಾಯಿತು.

೫

ಸುದ್ದಿ ಊರೊಳಗೆ ಹರಡಿತು. ಜನರು ತಮ್ಮ ಹಣವನ್ನು ತೆಗೆಸು ಕೊಳ್ಳಲು ಆತುರರಾದರು. ಬೆಳಗಿನಿಂದ ಸಂಜೆಯವರೆಗೂ ಹಣ ತೆಗೆಯು ವವರ ಜಳವೇರಿತ್ತು. ದಿನಬಳಕೆಯ ಲೆಕ್ಕದಲ್ಲಿ ಹಣವಿಟ್ಟವರು ಆಗಿಂದಾಗಲೆ

ತೆಗೆದುಕೊಂಡರು. ಯಾವ ಮಾತನ್ನೂ ಕೇಳಲಿಲ್ಲ. ಇದು ಆ ಪತ್ರಿಕೆಯ ಲೇಖನದ ಪರಿಣಾಮ—ನ್ಯಾಶನಲ್ ಬ್ಯಾಂಕಿನ ಪತ್ತು ಹಾರಿಹೋಯಿತು. ಸ್ವಲ್ಪ ಧೈರ್ಯದಿಂದ ನಡೆದಿದ್ದರೆ ಬ್ಯಾಂಕು ಸಾವರಿಸಿಕೊಳ್ಳಬಹುದಿತ್ತು ಆದರೆ ಬಿರುಗಾಳಿ-ಸುಂಟರುಗಾಳಿ ಎದ್ದಾಗ ಯಾವ ನೌಕೆ ಸ್ಥಿರವಾಗಿ ಉಳಿಯಬಲ್ಲದು? ಕೊನೆಗೆ ಕ್ಯಾಶರ್ ತಟ್ಟು ತಿರುವಿ ಹಾಕಿದ. ಬ್ಯಾಂಕಿನ ನರಗಳಿಂದ ರಕ್ತವೆಲ್ಲ ಹರಿದುಹೋಗಿ ಅದು ಪ್ರಾಣರಹಿತವಾಯಿತು.

ಮೂರು ದಿನಗಳು ಕಳೆದಿದ್ದವು. ಬ್ಯಾಂಕಿನ ಎದುರು ಸಾವಿರಾರು ಜನ ಸೇರಿದ್ದರು. ಬಾಗಿಲಲ್ಲಿ ಸಶಸ್ತ್ರ ಪೋಲಿಸರ ಕಾವಲು. ತರತರದ ಹಾರು ಸುದ್ದಿಗಳು ಹರಡುತ್ತಿದ್ದವು. ಒಮ್ಮೆ ಲಾಲಾ ಸಾಈದಾಸ ವಿಷ ಕುಡಿದು ಸತ್ತ ಎಂಬ ಸುದ್ದಿ; ಅವರನ್ನು ಬಂಧಿಸಿದರೆಂಬ ಸುದ್ದಿಯನ್ನು ಒಬ್ಬ ತರುತ್ತಿದ್ದರೆ, ಡೈರೆಕ್ಟರರು ನಜರುಬಂದಿಯಲ್ಲಿ ಇದ್ದಾರೆ ಎಂದು ಮತ್ತೊಬ್ಬ ಹೇಳುತ್ತಿದ್ದ.

ಅಕಸ್ಮಾತ್ ಒಂದು ಮೋಟರು ಬ್ಯಾಂಕಿನ ಮುಂದೆ ಬಂದು ನಿಂತಿತು ಒಬ್ಬನೆಂದ—"ಬರಹಲದ ಮಹಾರಾಜರ ಮೋಟರು." ಇದನ್ನು ಕೇಳಿದೊಡನೆ ನೂರಾರು ಜನರು ಓಡಿಹೋಗಿ ಮೋಟರನ್ನು ಮುತ್ತಿದರು.

ಮಹಾರಾಣಿ ತೀರಿದ ಮೇಲೆ ಕುವರ ಜಗದೀಶಸಿಂಹರು ವಕೀಲರ ಸಲಹೆಗಾಗಿ ಲಖನೌಗೆ ಬಂದಿದ್ದರು. ಬಹಳ ವಸ್ತುಗಳನ್ನು ಕೊಳ್ಳುವುದೂ ಇತ್ತು. ಬಹುದಿನಗಳಿಂದ ಸುಸಂಧಿಗಾಗಿ ಕಾದಿದ್ದ ಇಚ್ಛೆಗಳು ಕಟ್ಟೆದ ನೀರಿನಂತೆ ದಾರಿ ಸಿಕ್ಕೊಡನೆ ದುಮ್ಮಿಕ್ಕಿದ್ದವು. ಈ ಮೋಟರನ್ನು ಅಂದೇ ಕೊಂಡಿತ್ತು. ನಗರದಲ್ಲಿ ಒಂದು ಉಪ್ಪರಿಗೆಯ ಮನೆ ಕೊಳ್ಳುವ ಮಾತುಕತೆ ನಡೆದಿತ್ತು. ಬಹುಮೂಲ್ಯವಾದ ವಿಲಾಸ ವಸ್ತುಗಳನ್ನು ಹೇರಿಕೊಂಡು ಒಂದು ಗಾಡಿ ಬರಹಲಕ್ಕೆ ಹೋಗಿತ್ತು. ಇಲ್ಲಿ ಜನರ ನೆರವಿಯನ್ನು ನೋಡಿ, ಯಾವುದೋ ಹೊಸ ನಾಟಕ ಆಗುತ್ತಿರಬೇಕು ಎಂದು ತಿಳಿದು ಮೋಟರನ್ನು ತರುಬಿದರು. ಅಷ್ಟರಲ್ಲಿಯೇ ಜನ ಮುಗಿಬಿದ್ದಿತು.

"ಇಲ್ಲೇಕೆ ಇಷ್ಟು ಮಂದಿ ಕೂಡಿದ್ದೀರಿ? ಏನಾದರೂ ತಮಾಶೆ ಆಗುವುದಿದೆಯೋ?" ಎಂದು ಕುವರ ಸಾಹೇಬರು ಕೇಳಿದರು.

ಒಬ್ಬ ಮಹಾಶಯ—ಸಿಡುಕು ಸ್ವಭಾವದ ಸಿರಿವಂತನಂತೆ ಕಾಣುವ ಮನುಷ್ಯ—ಉತ್ತರವಿತ್ತ: "ಹಾಂ, ಒಳ್ಳೇ ವಿಲಕ್ಷಣ ತಮಾಶೆಯಿದೆ."

"ಯಾತರ ತಮಾಶೆ?"

"ದೈವದ್ದು."

ಈ ಉತ್ತರದಿಂದ ಕುವರ ಸಾಹೇಬರಿಗೆ ಆಶ್ಚರ್ಯವಂತೂ ಆಯಿತು. ಆದರೆ ಲಖನೌದವರು ಮಾತು ಮಾತಾಡುತ್ತ ಮಾತು ಹೊರಡಿಸುವವರೆಂದು ಕೇಳಿದ್ದರು. ಆದುದರಿಂದ ಆ ರೀತಿಯಲ್ಲಿಯೇ ಉತ್ತರವೀಯುವುದು ಅವಶ್ಯವೆಂದು ಅವರು, "ಅದೃಷ್ಟದ ಆಟ ನೋಡುವುದಕ್ಕೆ ಇಲ್ಲಿಗೆ ಬರುವ ಅಗತ್ಯವೇನಿಲ್ಲ." ಎಂದರು.

ಲಖನವೀ ಮಹಾಶಯ ಹೇಳಿದ: "ನೀವೆನ್ನುವುದು ನಿಜ. ಆದರೆ ಬೇರೆ ಕಡೆ ಈ ಮೋಜು ಎಲ್ಲಿದೆ? ಇಲ್ಲಿ ಮುಂಜಾನೆಯಿಂದ ಸಂಜೆಯೊಳಗಾಗಿ, ಧನಿಯನ್ನು ನಿರ್ಧನನನ್ನಾಗಿ, ನಿರ್ಧನನನ್ನು ಭಿಕ್ಷುಕನನ್ನಾಗಿ ಮಾಡಿತು ದೈವ. ಬೆಳಗ್ಗೆ ಮಹಲಿನಲ್ಲಿದ್ದವನ ಹಣೆಬರಹಕ್ಕೆ ಈ ಹೊತ್ತಿಗೆ ಮರದಡಿಯೂ ಇಲ್ಲ. ಯಾರ ಬಾಗಿಲಲ್ಲಿ ಅನ್ನದಾನ ನಡೆಯುತ್ತಿತ್ತೋ ಅವರು ರೊಟ್ಟಿಗಾಗಿ ಬಾಯಿಬಿಡುತ್ತಿದ್ದಾರೆ. ಒಂದೇ ಒಂದು ವಾರದ ಹಿಂದೆ, ಕಾಲಗತಿ, ಭಾಗ್ಯದ ಆಟ ಎಂದರೆ ಕವಿಗಳ ಉಪಮೆ, ಎಂದು ತಿಳಿಯುತ್ತಿದ್ದವರ ನಿಟ್ಟುಸಿರು, ಅವರ ಕರುಣಕ್ರಂದನ ಈಗ ವಿಯೋಗಿಗಳನ್ನೂ ನಾಚಿಸುತ್ತಿದೆ. ಇಂತಹ ತಮಾಶೆ ಇನ್ನೆಲ್ಲಿ ಕಾಣಬಹುದು?"

"ಸ್ವಾಮೀ, ತಾವು ಒಗಟವನ್ನು ಮತ್ತಷ್ಟು ತೊಡಕು ಹಾಕಿಬಿಟ್ಟಿರಿ. ಹಳ್ಳೀ ಹುಂಬ ನಾನು, ಸರಳವಾಗಿ ಮಾತನಾಡಿರಿ."

ಆಗ ಒಬ್ಬ ಸಜ್ಜನ ಹೇಳಿದ: "ಸಾಹೇಬ, ಇದು ನ್ಯಾಶನಲ್ ಬ್ಯಾಂಕು; ಇದರ ದಿವಾಳಿ ಆಗಿದೆ. ನಮಸ್ಕಾರ ಸ್ವಾಮೀ, ನನ್ನ ಗುರುತು ಹತ್ತಿತೆ?"

ಕುವರ ಸಾಹೇಬರು ಅವನನ್ನು ನೋಡಿದರು. ಮೋಟರಿನಿಂದ ಹೊರಕ್ಕೆ ನೆಗೆದು ಅವನ ಕೈ ಕುಲುಕುತ್ತ, "ಓ, ಮಿಸ್ಟರ್ ನಸೀಮ? ನೀನು ಇಲ್ಲಿ ಹೇಗೆ? ನಿನ್ನ ಭೆಟ್ಟಿಯಾದದ್ದು ಬಹಳ ಸಂತೋಷ," ಎಂದರು.

ಇಬ್ಬರೂ ಡೆಹರಾಡೂನ ಕಾಲೇಜಿನಲ್ಲಿ ಒಟ್ಟಿಗೆ ಕಲಿಯುತ್ತಿದ್ದರು. ಇಬ್ಬರೂ ಜೊತೆಯಾಗಿ ಗುಡ್ಡಗಳಲ್ಲಿ ಅಲೆಯುತ್ತಿದ್ದರು. ಮನೆಯು

ಜೊಂಜಾಟದಿಂದ ವಿವಶರಾಗಿ ಕುವರಸಾಹೇಬರು ಕಾಲೇಜು ಬಿಟ್ಟ ಬಳಿಕ ಈ ಮಿತ್ರದ್ವಯದ ಭೆಟ್ಟಿಯಾಗಿರಲಿಲ್ಲ. ನಸೀಮನೂ ಅವರು ಬಿಟ್ಟ ಕೆಲದಿನಗಳಲ್ಲಿಯೇ ಮನೆಗೆ ಮರಳಿದ್ದ.

“ಧನ್ಯವಾದ, ಗುರುತು ಮರೆತಿಲ್ಲ. ಹೇಳಿ, ಈಗಂತೂ ದೈವ ತೆರೆದಿದೆ. ಗೆಳೆಯರ ನೆನಸಿರುವುದೆ?” ನಸೀಮನೆಂದ.

“ನಿಜವಾಗಿ, ನಿಮ್ಮ ನೆನಪು ಯಾವಾಗಲೂ ಆಗುತ್ತಿತ್ತು. ಸುಖವಾಗಿದ್ದೀರಾ? ರಾಯಲ್ ಹೊಟಲಿನಲ್ಲಿ ಇಳಿದಿದ್ದೇನೆ. ಈಪೊತ್ತು ಬನ್ನಿ ಆರಾಮವಾಗಿ ಮಾತನಾಡೋಣ.”

“ಮಹಾಶಯಾ, ಆರಾಮವೆಂಬುದು ನ್ಯಾಶನಲ್ ಬ್ಯಾಂಕಿನೊಡನೆಯೇ ಹೊರಟುಹೋಯಿತು. ಈಗ ನಿರ್ವಾಹದ ಚಿಂತೆ ಬೆನ್ನುಹತ್ತಿದೆ ಗಳಿಸಿಟ್ಟುದೆಲ್ಲ ತನುಗೆ ,ಕಾಣಿಕೆಯಾಯಿತು. ಈ ದಿವಾಳಿ ನನ್ನನ್ನು ಫಕೀರನನ್ನಾಗಿ ಮಾಡಿತು. ಇನ್ನು ನಿಮ್ಮ ಬಾಗಿಲಲ್ಲಿ ಧರಣಿ ಕೂಡುವುದೇ.”

“ಮನೆ ನಿಮ್ಮದೇ, ನಿಸ್ಸಂಕೋಚವಾಗಿ ಬರಬಹುದು. ನನ್ನ ಸಂಗಡಲೇ ಏಕೆ ಬರಬಾರದು?—ಏನು ಹೇಳಲಿ? ನಾನು ನಿರಾಕರಿಸಿದರೆ ಹೀಗಾಯಿತೆಂದು ನನಗೆನಿಸಿರಲೇ ಇಲ್ಲ. ಬ್ಯಾಂಕು ಬಹಳ ಜನರನ್ನು ಹಾಳು ಮಾಡಿದಂತೆ ತೋರುತ್ತದೆ.”

“ಮನೆಮನೆಯಲ್ಲೂ ಗೋಳು. ನನ್ನಲ್ಲಿ ಮೈಮೇಲಿನ ಬಟ್ಟೆಗಳ ಹೊರತು ಏನೂ ಉಳಿದಿಲ್ಲ.”

ಆ ಹೊತ್ತಿಗೆ ಒಬ್ಬ ತಿಲಕಧಾರಿ ಪಂಡಿತಜಿ ಬಂದು ಹೇಳಿದರು: “ಸ್ವಾಮೀ, ನಿಮ್ಮ ಮೈಮೇಲೆ ಬಟ್ಟೆಗಳಾದರೂ ಇವೆ. ನಮ್ಮ ಹಾಡು—ಭೂಮಿ ಆಕಾಶ ಎಲ್ಲೂ ನೆಲೆಯಿಲ್ಲ. ನಾನು ರಾಘೋಜೀ ಪಾಠಶಾಲೆಯ ಅಧ್ಯಾಪಕ. ಪಾಠಶಾಲೆಯ ಹಣವೆಲ್ಲಾ ಈ ಬ್ಯಾಂಕಿನಲ್ಲಿಯೇ ಇಟ್ಟಿತ್ತು. ಅದರ ಆಸರದಿಂದಲೇ ಐವತ್ತು ವಿದ್ಯಾರ್ಥಿಗಳು ಉಂಡುಕೊಂಡು ಸಂಸ್ಕೃತ ಕಲಿಯುತ್ತಿದ್ದರು. ನಾಳೆಯಿಂದ ಪಾಠಶಾಲೆ ಮುಚ್ಚಿಬಿಡುವುದು. ದೂರದೂರದ ವಿದ್ಯಾರ್ಥಿಗಳಿದ್ದಾರೆ; ಅವರೆಲ್ಲ ತಮ್ಮ ತಮ್ಮ ಮನೆ ಕಾಣುವುದೆಂತೋ ದೇವರೇ ಬಲ್ಲ!”

ಮತ್ತೊಬ್ಬ ಮಹಾಶಯರು ಮುಂಬರಿದು ಬಂದು, ನೇತೃತ್ವದ ಭಾವದಿಂದ ಮಾತನಾಡಿದರು: "ಮಹಾಶಯರೇ, ಈ ಬ್ಯಾಂಕಿನ ಫೇಲ್ಯುಅರಿನಿಂದ ಎಷ್ಟೋ ಇನ್‌ಸ್ಟಿಟ್ಯೂಶನುಗಳು ಮುಕ್ತಾಯಹೊಂದಿದವು. ಲಾಲಾ ದೀನನಾಥರ ಅನಾಥಾಲಯ ಇನ್ನು ಒಂದಿನವೂ ನಡೆಯಲಾರದು; ಅದರ ಒಂದು ಲಕ್ಷ ರೂಪಾಯಿಗಳು ಮುಳುಗಿದವು. ಇನ್ನೂ ಹದಿನೈದು ದಿನ ಆಯಿತು; — ನಾನು ಡೆಪುಟೇಶನ್ನಿನಿಂದ ಬಂದು, ಹದಿನೈದು ಸಾವಿರ ರೂಪಾಯಿ ಅನಾಥಾಲಯ ನಿಧಿಗೆ ಜಮೆ ಕಟ್ಟಿ ಆದರೀಗ ಒಂದು ಕವಡೆಗೂ ಗತಿಯಿಲ್ಲ."

"ಸಾಹೇಬ, ನನ್ನಿಡೀ ಜೀವನದ ಗಳಿಕೆಯೇ ಮಣ್ಣುಗೂಡಿತು! ಇನ್ನು ಪ್ರೇತವಸ್ತ್ರದ ಭರವಸೆಯೂ ಇಲ್ಲ." ಒಬ್ಬ ಮುದುಕ ನುಡಿದ.

ಮೆಲ್ಲಮೆಲ್ಲನೆ ಮತ್ತನೇಕರು ಕೂಡಿದರು. ಸಾಧಾರಣ ಮಾತು ಕತೆ ಆರಂಭವಾಯಿತು. ಪ್ರತಿಯೊಬ್ಬನೂ ತನ್ನ ಪಕ್ಕದವನಿಗೆ ತನ್ನ ದುಃಖದ ಕಥೆ ಹೇಳತೊಡಗಿದ. ಕುವರ ಸಾಹೇಬರು ನಸೀಮನೊಂದಿಗೆ ನಿಂತು ಅರ್ಧಗಂಟೆ ಕಾಲ ಅವುಗಳನ್ನು ಕೇಳಿದರು. ಬಳಿಕ ಮೋಟರನ್ನು ಏರಿ ಹೊಟೆಲಿಗೆ ಹೊರಡುವ ಹೊತ್ತಿಗೆ, ಒಬ್ಬ ಮನುಷ್ಯನ ಮೇಲೆ ಅವರ ಕಣ್ಣು ಬಿತ್ತು. ಅವನು ತಲೆ ತಗ್ಗಿಸಿಕೊಂಡು ನೆಲದಮೇಲೆ ಕುಳಿತಿದ್ದ. ಅವನೊಬ್ಬ ಗವಳಿಗ, ಚಿಕ್ಕಂದು ಕುವರ ಸಾಹೇಬರೊಂದಿಗೆ ಆಡಿದವ. ಆಗ ಅವರಲ್ಲಿ ಉಚ್ಚ ನೀಚ ಭಾವವಿರಲಿಲ್ಲ. ಕೂಡಿ ಹುಡುತೂತು ಆಡಿದ್ದರು, ಕೂಡಿ ಮರಹತ್ತಿ ಹಕ್ಕಿಮರಿಗಳನ್ನು ಹಿಡಿದಿದ್ದರು. ಕುವರಜಿ ಕಲಿಯಲು ದೆಹರಾದೂನಿಗೆ ಹೋದಾಗ, ಈ ಗವಳಿಗರ ಹುಡುಗ ಶಿವದಾಸ ತಂದೆಯೊಂದಿಗೆ ಲಖನೌಗೆ ಬಂದ. ಇಲ್ಲಿ ಹಾಲಿನಂಗಡಿ ತೆರೆದಿದ್ದ. ಕುವರ ಸಾಹೇಬರು ಅವನನ್ನು ಗುರುತಿಸಿ ಕೂಗಿದರು: "ಓ ಶಿವದಾಸ!"

ಶಿವದಾಸ ಕೇಳಿದ. ಆದರೆ ಮೋರೆ ಮೇಲೆತ್ತಲಿಲ್ಲ. ಕುಳಿತಲ್ಲಿಂದಲೇ ಕುವರ ಸಾಹೇಬರನ್ನು ನೋಡುತ್ತಲಿದ್ದ. ಎಳೆತನದ ದಿನಗಳು ನೆನಪಿಗೆ ಬರುತ್ತಿದ್ದವು – ತಾನು ಜಗದೀಶನೊಂದಿಗೆ ಚಿಣ್ಣಿಕೋಲು ಆಡಿದ್ದು, ಇಬ್ಬರೂ ಮುದುಕ ಗಫೂರಮಿಯಾನನ್ನು ಅಣಕಿಸಿ ಮನೆಯಲ್ಲಿ ಅಡಗುತ್ತಿದ್ದದ್ದು,

ತಾನು ಸನ್ನೆಮಾಡಿ ಜಗದೀಶನನ್ನು ಶಿಕ್ಷಕರ ಬಳಿಯಿಂದ ಕರೆದೊಯ್ಯು ತ್ತಿದ್ದದ್ದು ಮತ್ತು ಇಬ್ಬರೂ ಕೂಡಿ ರಾಮಲೀಲೆ ನೋಡಲು ಹೋಗುತ್ತಿದ್ದದ್ದು ಇತ್ಯಾದಿ. ಜಗದೀಶ ಈಗ ತನ್ನನ್ನು ಮರೆತಿದ್ದಾನೆಂದು ಅವನ ದೃಢಭಾವನೆ. ಆ ಸಣ್ಣಂದಿನ ಮಾತು ಈಗೆಲ್ಲಿ? ಅರಸನೆತ್ತ, ತಾನೆತ್ತ? ಆದರೆ ಜಗದೀಶ ತನ್ನ ಹೆಸರುಗೊಂಡು ಕರೆದಾಗ, ಅವನ ಬಗ್ಗೆ ಪ್ರಸನ್ನನಾಗುವ ಬದಲು ಇನ್ನಷ್ಟು ತಲೆ ತಗ್ಗಿಸಿದ, ಅಲ್ಲಿಂದ ಜಾರಿಕೊಳ್ಳಲು ಬಯಸಿದ. ಕುವರ ಸಾಹೇಬರ ಸಹೃದಯತೆಯಲ್ಲಿ ಆ ಸಮತೆಯ ಭಾವವಿರಲಿಲ್ಲ. ಆದರೆ ಅವರು, ಅವನು ತಪ್ಪಿಸಿಕೊಳ್ಳುವುದನ್ನು ಕಂಡು ಮೋಟರಿನಿಂದ ಇಳಿದು ಹೋಗಿ ಅವನ ಕೈಹಿಡಿದು, "ಶಿವದಾಸ, ನನ್ನನ್ನು ಮರೆತುಬಿಟ್ಟೆಯಾ?" ಎಂದು ಮಾತನಾಡಿಸಿದರು.

ಆಗ ತನ್ನ ಮನೋವೇಗವನ್ನು ತಡೆಯುವುದು ಶಿವದಾಸನಿಗೆ ಅಸಾಧ್ಯ ವಾಯಿತು. ಅವನ ಕಣ್ಣುಗಳು ತುಂಬಿಬಂದವು. ಕುವರ ಸಾಹೇಬರ ಕೊರಳಿಗೆ ತಳಕೆಬಿದ್ದು ಮಾತನಾಡಿದ: "ಮರೆತಿಲ್ಲ. ತಮ್ಮೆದುರಿಗೆ ಬರಲು ನಾಚಿಕೆಯಾಗುತ್ತದೆ."

ಇಲ್ಲಿ ಹಾಲಿನ ಅಂಗಡಿ ನಡೆಸಿದ್ದೀಯಾ? ನನಗೆ ಗೊತ್ತೇ ಇಲ್ಲ. ಇಲ್ಲದಿದ್ದರೆ ವಾರಾನುವಾರ ನೀರು ಕುಡಿಕುಡಿದು ಏಕೆ ನೆಗಡಿ ತಂದುಕೊಳ್ಳು ತ್ತಿದ್ದೆ? ಬಾ ನನ್ನ ಮೋಟರಿನಲ್ಲಿ; ನಡೆ ಹೋಟೆಲಿಗೆ. ನಿನ್ನ ಕೂಡ ಮಾತಾಡಬೇಕೆಂದು ಹಂಬಲಿಸುತ್ತಿದೆ. ಜೀವ ನಿನ್ನನ್ನು ಬರಹಲಕ್ಕೆ ಕರೆದು ಕೊಂಡು ಹೋಗುತ್ತೇನೆ; ಇನ್ನೊಮ್ಮೆ ಮತ್ತೆ ಚಿಣ್ಣಿಕೋಲು ಆಡುವಾ."

"ಹಾಗೆ ಮಾಡಬೇಡಿ; ಜನ ನಗುತ್ತಾರೆ. ಹೋಟೆಲಿಗೆ ಬರುತ್ತೇನೆ. ಆದೇ ಹಜರತಗಂಜ ಹೋಟೆಲಿನಲ್ಲಿ ಇಳಿದಿದ್ದೀರಿ, ಅಲ್ಲವೆ?"

"ಹಾಂ ತಪ್ಪದೆ ಬರುತ್ತೀ ತಾನೆ?"

"ತಾವು ಕರೆದರೆ ನಾನು ಬರುವುದಿಲ್ಲವೆ?"

"ಇಲ್ಲಿ ಹೇಗೆ ಕೂತಿದ್ದೀ? ಅಂಗಡಿ ಚೆನ್ನಾಗಿ ನಡೆದಿದೆಯಷ್ಟೆ?"

"ಈವೊತ್ತು ಬೆಳಗಿನತನಕಂತೂ ನಡೆದಿತ್ತು. ಮುಂದೆ ಹೇಗೋ!"

'ನಿನ್ನ ಹಣವೂ ಇತ್ತೊ ಈ ಬ್ಯಾಂಕಿನಲ್ಲಿ?"

" ಹೊಟೆಲಿಗೆ ಬಂದಾಗ ಹೇಳುತ್ತೇನೆ."

ಕುವರ ಸಾಹೇಬರು ಮೋಟರಿನಲ್ಲಿ ಕುಳಿತು ಡ್ರೈವರಿಗೆ ಅಪ್ಪಣೆ ಯಿತ್ತರು: " ಹೋಟೆಲಿಗೆ ಹೊಡೆ."

" ವ್ಹಾಯಿಟ್‌ವೇ ಕಂಪನಿಯ ಅಂಗಡಿಗೆ ಹೋಗಬೇಕೆಂದು ಅಪ್ಪಣೆ ಯಾಗಿತ್ತಲ್ಲವೆ ? "

" ಈಗ ಅಲ್ಲಿಗೆ ಹೋಗುವುದಿಲ್ಲ. "

" ಜೇಕಬ್‌ಸಾಹೇಬ ಬ್ಯಾರಿಸ್ಟರರ ಕಡೆಗೂ ಹೋಗುವುದಿಲ್ಲವೆ ? "

" ಇಲ್ಲ. ಎಲ್ಲಿಗೂ ಹೋಗಬೇಡ. ನೆಟ್ಟಗೆ ಹೋಟೆಲಿಗೆ ! " ಕುವರ್ ಸಾಹೇಬರು ಕೋಪಗೊಂಡು ನುಡಿದರು.

ಆಪತ್ತಿನ ಈ ನಿರಾಶಾಮಯ ದೃಶ್ಯ, ಜಗದೀಶಸಿಂಹರ ಮನದಲ್ಲಿ ಈಗ ತನ್ನ ಕರ್ತವ್ಯವೇನು ? ' ಎಂಬ ಪ್ರಶ್ನೆಯನ್ನು ಎತ್ತಿತ್ತು.

೬

ಏಳು ವರುಷಗಳ ಹಿಂದೆ ಬರಹಲ ಮಹಾರಾಜರು ತುಂಬು ಹರೆಯ ದಲ್ಲಿಯೇ ಕುದುರೆಯ ಮೇಲಿಂದ ಬಿದ್ದು ಮಡಿದರು. ಆಗ ಉತ್ತರಾಧಿಕಾರದ ಪ್ರಶ್ನೆ ಎದ್ದಿತು. ಮಹಾರಾಜರಿಗೆ ಮಕ್ಕಳಿರಲಿಲ್ಲ. ಹತ್ತಿರದ ಸೋದರ ವಂಶೀಯನಾದ ಠಾಕುರ ರಾಮಸಿಂಹನಿಗೆ ಉತ್ತರಾಧಿಕಾರ ಪ್ರಾಪ್ತವಾಗು ತ್ತಿತ್ತು ಅವನು ವ್ಯಾಜ್ಯ ಹೂಡಿದ. ನ್ಯಾಯಾಲಯವು ರಾಣಿಯೇ ಅಧಿಕಾರಿಣಿ ಎಂದು ತೀರ್ಪು ಹೇಳಿತು. ಠಾಕುರ ಸಾಹೇಬನು ಅಪೀಲು ಮಾಡಿ ಪ್ರೀವ್ಹಿ ಕೌನ್ಸಿಲಿನವರೆಗೆ ಹೋದರೂ ಫಲ ದೊರೆಯಲಿಲ್ಲ. ಅವನ ಲಕ್ಷಾಂತರ ರೂಪಾಯಿಗಳು ವೆಚ್ಚವಾದವು; ಇದ್ದ ಆಸ್ತಿಯೂ ಕೈಬಿಟ್ಟಿತು. ಆದರೆ ಸೋತರೂ ಅವನು ಸ್ವಸ್ಥವಾಗಿ ಕುಳ್ಳಿರಲಿಲ್ಲ. ವಿಧವೆಯಾದ ರಾಣಿ ಯನ್ನು ಯಾವಾಗಲೂ ಕಾಡುತ್ತಲಿದ್ದ. ಅವಳ ವಿರುದ್ಧವಾಗಿ ಒಕ್ಕಲುಗಳನ್ನು ಪ್ರೇರೇಪಿಸುತ್ತಿದ್ದ, ಒಮ್ಮೊಮ್ಮೆ ಅವಳನ್ನು ಕೃತಕವಾದ ಮೊಕದ್ದಮೆಗೆ ಗುರಿಮಾಡುತ್ತಿದ್ದ. ಆದರೆ ರಾಣಿ ಬಲು ಧೀರಳು. ಪ್ರತಿಯೊಂದಕ್ಕೂ ಆಕೆ ಚೆನ್ನಾಗಿಯೆ ಉತ್ತರ ಕೊಡುತ್ತಿದ್ದಳು. ಈ ಜಗ್ಗುಮುಗ್ಗಾಟದಲ್ಲಿ ಅವಳೂ

ಬಹಳ ಧನವ್ಯಯ ಮಾಡಬೇಕಾಗುತ್ತಿತ್ತು. ಒಕ್ಕಲುಗಳಿಂದ ಹಣ ವಸೂಲಾಗುತ್ತಿರಲಿಲ್ಲ. ಅವಳು ಮತ್ತೆ ಮತ್ತೆ ಸಾಲ ಮಾಡಬೇಕಾಗುತ್ತಿತ್ತು. ಆದರೆ ಸಾಲ ತೆಗೆಯಲು ಕಾಯದೆಯಂತೆ ಅವಳಿಗೆ ಅಧಿಕಾರವಿರಲಿಲ್ಲ. ಅದಕ್ಕಾಗಿ ಈ ಅವಸ್ಥೆಯನ್ನು ಅವಳು ಬಚ್ಚಿಡಬೇಕಾಗುತ್ತಿತ್ತು, ಇಲ್ಲವೆ, ಹೆಚ್ಚಿನ ಬಡ್ಡಿದರ ಒಪ್ಪಿಕೊಳ್ಳಬೇಕಾಗುತ್ತಿತ್ತು.

ಕುವರ ಜಗದೀಶಸಿಂಹ ಚಿಕ್ಕಂದು ಅಚ್ಚೆಯಿಂದ ಬೆಳೆದವ. ಆದರೆ ರಾಮುಸಿಂಹನು ವ್ಯಾಜ್ಯಾಸಕ್ತಿಯಿಂದ ಹಣ್ಣಾಗಿದ್ದ. ರಾಣಿಯು ತಂತ್ರದಿಂದ ಕುವರನು ಸಂಕಟಕ್ಕೀಡಾದಾನೆಂಬ ಸಂದೇಹದಿಂದ ಅವನನ್ನು ದೇಹರಾದೂನಿಗೆ ಕಳಿಸಿದ. ಅಲ್ಲಿ ಕುವರ ಸಾಹೇಬ ಎರಡು ವರುಷ ಆನಂದದಿಂದ ಕಳೆದ. ಆದರೆ ಕಾಲೇಜಿನಲ್ಲಿ ಪ್ರಥಮ ಶ್ರೇಣಿಯನ್ನು ತಲುಪುವ ಹೊತ್ತಿಗೆ ತಂದೆ ಪರಲೋಕವಾಸಿಯಾದ; ಅವನು ಓದು ನಿಲ್ಲಿಸಬೇಕಾಯಿತು. ಬರಹಲಕ್ಕೆ ಹೋಗಿ ಕುಟುಂಬದ ಭಾರಕ್ಕೂ ರಾಣಿಯೊಡನೆ ಹಳೆಯ ವೈರದ ಸಾಧನೆಗೂ ಕುವರ ತಲೆಯೊಡ್ಡಬೇಕಾಯಿತು. ಅಂದಿನಿಂದ ರಾಣಿಯು ಮರಣದವರೆಗೆ ಅವನ ದಶೆ ಬಲು ಕೀಳಾಗಿತ್ತು. ಸಾಲ, ಹೆಂಗಸರ ಒಡವೆಗಳ ಹೊರತು ಬೇರೆ ಆಧಾರವಿರಲಿಲ್ಲ. ಇಷ್ಟಲ್ಲದೆ ಕುಲಮರ್ಯಾದೆಯ ರಕ್ಷಣೆಯ ಚಿಂತೆಯೊಂದು. ಈ ಮೂರು ವರುಷಗಳ ಅವಧಿ ಅವನ ಪರೀಕ್ಷೆಯ ಕಾಲವಾಗಿತ್ತು. ಸಾವುಕಾರರ ನಿರ್ದಯ ಬಾಣಗಳಿಂದ ಅವನೆದೆ ಛಿನ್ನವಾಗಿತ್ತು. ಅಧಿಕಾರಿಗಳ ನಿಷ್ಠುರಗಳನ್ನು ಅತ್ಯಾಚಾರಗಳನ್ನು ಸಹಿಸಬೇಕಾಗಿತ್ತು. ತನ್ನ ಆತ್ಮೀಯ ಜನರ ಕುಹಕ ಇವೆಲ್ಲಕ್ಕಿಂತ ಹೆಚ್ಚಾಗಿತ್ತು. ಅವರು ಎದುರಿನಿಂದ ಇರಿಯದೆ ಪಕ್ಕದಿಂದ ಚುಚ್ಚುವವರಾಗಿದ್ದರು. ಮೈತ್ರಿ-ಐಕ್ಯಗಳ ಮರೆಯಲ್ಲಿ ಕಪಟದ ಕೈಚಳಕವಿರುತ್ತಿತ್ತು. ಈ ಕಠೋರ ಯಾತನೆಗಳು ಕುವರನನ್ನು ಅಧಿಕಾರ, ಸ್ವೇಚ್ಛಾಚಾರ ಮತ್ತು ಧನಸಂಪತ್ತಿಗಳ ಕಡುಹಗೆಯನ್ನಾಗಿ ಮಾಡಿದ್ದವು. ಅವನು ಅತ್ಯಂತ ಭಾವುಕ ಮನುಷ್ಯ. ಸಂಬಂಧಿಗಳ ಕೃಪಾಶೂನ್ಯತೆ, ದೇಶಬಂಧುಗಳ ದುರ್ನೀತಿಗಳು ಅವನ ಹೃದಯದಲ್ಲಿ ಕಪ್ಪುಕಲೆ ಮಾಡುತ್ತಿದ್ದವು. ಸಾಹಿತ್ಯಪ್ರೇಮವು ಅವನನ್ನು ಮಾನವ ಪ್ರಕೃತಿಯ ತತ್ತ್ವಾನ್ವೇಷಿಯನ್ನಾಗಿ ಮಾಡಿತ್ತು; ಈ ಜ್ಞಾನವು ಅವನನ್ನು ಪ್ರತಿದಿನವೂ ಸಭ್ಯತೆಯಿಂದ ದೂರ ಒಯ್ಯುತ್ತಿತ್ತು; ಅವನ ಚಿತ್ತದಲ್ಲಿ ಜನಸತ್ತೆಯ ಮತ್ತು ಸಾಮ್ಯವಾದದ

ವಿಚಾರಗಳು ಪುಷ್ಟವಾಗುತ್ತಿದ್ದವು. ಸದ್ವ್ಯವಹಾರವು ಜೀವಿತವಾಗಿದ್ದರೆ, ಅದು ಗುಡಿಸಲುಗಳಲ್ಲಿ. ನಾಲ್ಕು ಕಡೆ ಕತ್ತಲೆ ಮುಸುಕಿರುವ ಕಠಿನ ಸಮಯ ದಲ್ಲಿ, ಅವಸಿಗೆ ಬಡವರಲ್ಲಿಯೇ, ಆಗಾಗ ನಿಜವಾದ ಸಹಾನುಭೂತಿಯ ಪ್ರಕಾಶವು ಕಾಣುತ್ತಿತ್ತು. ಧನ ಸಂಪತ್ತಿ ಈಶ್ವರನ ಪ್ರೀತಿಪ್ರಸಾದವಲ್ಲ, ಪ್ರಕೋಪವೆಂದು ಅವನು ತಿಳಿಯುತ್ತಿದ್ದ. - ಅದು ಮನುಷ್ಯನ ಹೃದಯದಿಂದ ದಯೆಯನ್ನು ಪ್ರೇಮವನ್ನು ತೆಗೆದೊಗೆಯುತ್ತದೆ; ಅದು ಚಿತ್ತದ ಪ್ರಕಾಶಿತ ತಾರೆಗಳನ್ನು ಮುಚ್ಚುವ ಮೋಡವಾಗಿದೆ.

ಆದರೆ ಮಹಾರಾಣಿಯ ಮೃತ್ಯುವಿನ ತರುವಾಯ ಧನಸಂಪತ್ತಿ ಅವನ ಮೇಲೆ ಎರಗಿದೊಡನೆ. ಸರಿ, ದಾರ್ಶನಿಕ ತರ್ಕಗಳ ಈ ಢಾಲು ನುಚ್ಚುನುರಿ ಯಾಯಿತು; ಆತ್ಮನಿದರ್ಶನದ ಶಕ್ತಿ ನಷ್ಟವಾಯಿತು. ಶತ್ರುಗಳಂತಿದ್ದವರು ಮಿತ್ರರಾದರು, ನಿಜವಾದ ಹಿತೈಷಿಗಳು ಮರೆತುಹೋದರು. ಸಾಮ್ಯವಾದದ ಮನೋಗತ ವಿಚಾರಗಳಲ್ಲಿ ಘೋರ ಪರಿವರ್ತನೆ ಆರಂಭವಾಯಿತು. ಹೃದಯ ದಲ್ಲಿ ಅಸಹಿಷ್ಣುತೆ ತಲೆಯೆತ್ತಿತು. ತ್ಯಾಗವು ಭೋಗದ ಕಡೆ ಒಲಿಯಿತು, ಮರ್ಯಾದೆಯ ಬೇಡಿ ಕೊರಳಲ್ಲಿ ಬಿದ್ದಿತು. ಯಾರನ್ನು ಕಂಡರೆ ಅವನ ವಕ್ರದೃಷ್ಟಿ ಕೆರಳುತ್ತಿತ್ತೊ, ಆ ಅಧಿಕಾರಿಗಳೇ ಈಗ ಅವನ ಸಲಹೆಗಾರ ರಾದರು. ದೀನತೆ ದಾರಿದ್ರ್ಯಗಳನ್ನು—ಮೊದಲವಸಿಗೆ ಅವುಗಳ ಬಗ್ಗೆ ನಿಜವಾದ ಸಹಾನುಭೂತಿಯಿತ್ತು—ಕಂಡರೆ ಈಗ ಅವನು ಕಣ್ಣುಮುಚ್ಚಿ ಕೊಳ್ಳುವನು.

ಈಗಲೂ ಕುವರ ಸಾಹೇಬರು ಸಾಮ್ಯವಾದದ ಭಕ್ತರೇ, ಸಂದೇಹವಿಲ್ಲ. ಆದರೆ ಆ ವಿಚಾರಗಳನ್ನು ಪ್ರಕಟಿಸಲು ಅವರಿಗೆ ಹಿಂದಿದ್ದ ಸ್ವಾತಂತ್ರ್ಯವಿರ ಲಿಲ್ಲ. ವಿಚಾರ ವ್ಯವಹಾರಕ್ಕೆ ಹೆದರುತ್ತಿತ್ತು. ಮಾತನ್ನು ಕೃತಿಗಿಳಿಸುವ ಸಂಧಿ ಅವರಿಗೆ ದೊರೆತಿತ್ತು. ಆದರೆ ಕಾರ್ಯಕ್ಷೇತ್ರ ಕಷ್ಟಮಯವಾಗಿ ಕಾಣುತ್ತಿತ್ತು ಈಗ. ಅವರು ಬಿಟ್ಟಿಯ ಕಡುವಿರೋಧಿ; ಆದರೆ ಈಗ ಅದನ್ನು ನಿಲ್ಲಿಸುವುದು ದುಷ್ಕರವೆಂದು ತೋರುವುದು. ಸ್ವಚ್ಛತೆ ಸ್ವಾಸ್ಥ್ಯರಕ್ಷಣೆಗಳ ಭಕ್ತರಾಗಿದ್ದ ಅವರು ಈಗ ಹಣ ವೆಚ್ಚ ಮಾಡದೆಯೂ ಗ್ರಾಮವಾಸಿಗಳಿಂದಲೇ ವಿರೋಧ

ವಾಗುವುದೆಂಬ ಸಂದೇಹ ಅವರಿಗೆ. ಒಕ್ಕಲಿಗರಿಂದ ಕಠೋರವಾಗಿ ತೆರಿಗೆ ಎತ್ತುವುದು ಪಾಪವೆಂದು ತಿಳಿಯುತ್ತಿದ್ದರು; ಆದರೆ ಕಠೋರತೆಯಿಲ್ಲದೆ ಕೆಲಸವಾಗುವುದೆಂದು ಅವರಿಗೀಗ ಎನಿಸುವುದಿಲ್ಲ. ಒಟ್ಟಾರೆ, ಮೊದಲು ಶ್ರದ್ಧೆಯಿದ್ದ ಅದೆಷ್ಟೋ ಸಿದ್ಧಾಂತಗಳು ಈಗ ಅಸಂಗತವಾಗುತ್ತಲಿದ್ದವು.

ಆದರೆ ಇಂದು ಬ್ಯಾಂಕಿನ ವಲಯದಲ್ಲಿ ಕಂಡ ದುಃಖಜನಕ ದೃಶ್ಯ ಅವರ ದಯಾಭಾವವನ್ನು ಎಚ್ಚರಿಸಿತು. ಒಬ್ಬ ಮನುಷ್ಯ ದೋಣಿಯಲ್ಲಿ ಕುಳಿತು ಸುರಮ್ಯವಾದ ತಟದ ಶೋಭೆಯ ಆನಂದವನ್ನು ಅನುಭವಿಸುತ್ತಿರು ತ್ತಾನೆ; ಅವನು ತಲುಪುವುದು ಯಾವುದೋ ಸ್ಮಶಾನಕ್ಕೆ; ಹೆಣ ಸುಡುತ್ತಿವೆ, ಶೋಕ ಸಂತಪ್ತರ ಕರುಣಾಕ್ರಂದನ ನಡೆದಿದೆ; ಅದನ್ನು ನೋಡಿ ಅವನು ದೋಣಿಯಿಂದಿಳಿದು ಅವರ ದುಃಖದಲ್ಲಿ ಸಮ್ಮಿಲಿತನಾಗುತ್ತಾನೆ. ಹಾಗೆಯೇ ಆಯಿತು ಕುವರ ಸಾಹೇಬರ ಸ್ಥಿತಿ.

ಹತ್ತು ಗಂಟೆಯ ರಾತ್ರಿ. ಕುವರ ಸಾಹೇಬರು ಮಂಚದ ಮೇಲೆ ಒರಗಿದ್ದರು. ಬ್ಯಾಂಕಿನ ಬಳಿಯ ದೃಶ್ಯ ಕಣ್ಮುಂದೆ ಕುಣಿಯುತ್ತಿತ್ತು. ಕಿವಿಗಳಲ್ಲಿ ಆ ವಿಲಾಪವೇ ತುಂಬಿತ್ತು. ಮನದಲ್ಲಿ ಪ್ರಶ್ನೆ ಏಳುತ್ತಿತ್ತು—ನಾನೇ ಏನು ಈ ವಿಡಂಬನೆಯ ಕಾರಣ? ನಾನಂತೂ ಕಾಯದೆಯಿಂದ ನನಗಿದ್ದ ಅಧಿಕಾರದಂತೆ ಮಾಡಿದ್ದೇನೆ. ಪೂರ್ಣ ಜಾಮೀನು ಇಲ್ಲದೆ ಇಷ್ಟು ಹಣ ಕೊಟ್ಟುದು ಬ್ಯಾಂಕಿನ ಆತಳಿತಗಾರರ ತಪ್ಪು. ಠೇವುದಾರರು ಅವರ ಕುತ್ತಿಗೆ ಅಳೆಯಬೇಕು. ಬೇರೆಯವರ ಹೆಡ್ಡತನದ ಫಲವನ್ನು ನಾನು ಭೋಗಿಸಲು ದೈವೀ ದಳಪತಿಯಲ್ಲ.....ಮತ್ತೆ ವಿಚಾರ ತಿರುಗಿತು— ನಾನು ವ್ಯರ್ಥವಾಗಿ ಈ ಹೋಟೆಲಿನಲ್ಲಿ ಇಳಿದಿದ್ದೇನೆ, ದಿನಾಲು ನಾಲ್ವತ್ತು ರೂಪಾಯಿ ತೆರಬೇಕು. ಸುಮಾರು ನಾಲ್ಕುನೂರು ರೂಪಾಯಿಗಳ ಮೇಲೆ ಹೋಗುವುದು. ಇಷ್ಟು ವಸ್ತುಗಳನ್ನೂ ಸುಮ್ಮನೆ ಕೊಂಡೆ. ಏಕೆ ಬೇಕಿತ್ತು? ಮಕಮಲಿನ ಗಾದಿಯ ಕುರ್ಚಿಗಳಿಂದ, ಅಥವಾ ಕಾಜು—ಕನ್ನಡಿಗಳ ಠೀವಿಯಿಂದ ನನ್ನ ಗೌರವವೇನೂ ಹೆಚ್ಚುವುದಿಲ್ಲ ಐದು ರೂಪಾಯಿ ಬಾಡಿಗೆಯ ಸಾಧಾರಣ ಮನೆ ಹಿಡಿದಿದ್ದರೆ ಆಗುತ್ತಿರಲಿಲ್ಲವೇ? ನಾನೂ ನನ್ನ ಜೊತೆಯವರೂ ಸುಖವಾಗಿ ಇರಬಹುದಿತ್ತು. ಜನ ಆಡಿಕೊಳ್ಳುತ್ತಲೂ ಇರಲಿಲ್ಲ. ಇದರ

ಚಿಂತೆಯೇನು ? ಯಾವ ಜನರ ಆಧಾರದ ಮೇಲೆ ಈ ಆಡಂಬರ ನಡೆದಿದೆಯೋ ಆ ಬಡವರು ರೊಟ್ಟಿಗಾಗಿ ತಳಮಳಿಸುತ್ತಿದ್ದಾರೆ. ಈ ಹತ್ತು ಹನ್ನೆರಡು ಸಾವಿರ ರೂಪಾಯಿಗಳಿಂದ, ಕೆರೆ-ಬಾವಿ ಕಟ್ಟಿಸಿದ್ದರೆ ಸಾವಿರಾರು ದೀನರ ಹಿತವಾಗುತ್ತಿತ್ತು. ಇನ್ನು ಮತ್ತೆ ಜನರ ಮೋಹದಲ್ಲಿ ಬೀಳುವುದಿಲ್ಲ ಈ ಕಾರು ವ್ಯರ್ಥ. ನನ್ನ ಸಮಯವೇನೂ ಗಂಟೆ ಅರ್ಧ ಗಂಟೆಯು ಉಳಿತಾಯಕ್ಕಾಗಿ ಎರಡು ನೂರು ರೂಪಾಯಿ ತಿಂಗಳ ವೆಚ್ಚ ಬೆಳೆಸುವಷ್ಟು ತುಟ್ಟಿಯದಲ್ಲ. ಉಪವಾಸ ಮಾಡುವ ಒಕ್ಕಲುಗಳ ಮುಂದೆ ಕಾರು ಓಡಿಸುವುದೆಂದರೆ ಅವರ ಎದೆಯ ಮೇಲೆ ನೆಲಗಡಲೆ ಒಡೆದಹಾಗೆ. ಈಗ ತಿಳಿಯುವಾ—ಅವರು ಭಯಚಕಿತರಾಗುವರು; ಯಾವ ಕಡೆ ಹೋಗುವೆನೆಂದು ನೂರಾರು ಹೆಂಗಸರು ಹುಡುಗರು ನೋಡುತ್ತ ನಿಲ್ಲುವರು; ಆದರೆ ಇಷ್ಟು ಪ್ರದರ್ಶನಕ್ಕಾಗಿಯೆ ಇಷ್ಟು ವೆಚ್ಚ ಹೆಚ್ಚಿಸುವುದು ಮೂರ್ಖತನ. ಬೇರೆ ಧನಾಢ್ಯರು ಹೀಗೆ ಮಾಡುತ್ತಿದ್ದರೆ ಮಾಡಲಿ, ನಾನೇಕೆ ಅವರಂತೆ ಮಾಡಬೇಕು ? ಈವರೆಗೆ ವರುಷಕ್ಕೆ ಎರಡುಸಾವಿರ ರೂಪಾಯಿಗಳಲ್ಲೇ ನನ್ನ ನಿರ್ವಾಹ ನಡೆಯುತ್ತಿತ್ತು. ಈಗ ಎರಡರ ಬದಲು ನಾಲ್ಕು ಸಾವಿರವಾದರೆ ಸಾಕಷ್ಟಾಯಿತು. ಅಲ್ಲದೆ, ಅನ್ಯರು ಗಳಿಸಿದ್ದನ್ನು ಈ ರೀತಿ ಹಾರಿಸಲು ಅಧಿಕಾರವಾದರೂ ಇದೆಯೆ ? ನಾನು ಯಾವ ಉದ್ಯೋಗ ವ್ಯವಸಾಯವನ್ನು ಮಾಡುವುದಿಲ್ಲ; ಈ ಲಾಭಕ್ಕಾಗಿ ನನ್ನ ಪೂರ್ವಜರು ಹಠಧರ್ಮಿಗಳಾಗಿ ಬಲಪ್ರಯೋಗದಿಂದ ಈ ಪ್ರಾಂತವನ್ನು ತಮ್ಮ ಕೈಯಲ್ಲಿಟ್ಟುಕೊಂಡಿದ್ದರೂ ಅವರ ಸುಲಿಗೆಯ ಧನದಲ್ಲಿ ಪಾಲುಗಾರನಾಗಲು ನನಗೆ ಅಧಿಕಾರವೇನಿದೆ ? ದುಡಿಯುವವನಿಗೆ ಆ ದುಡಿತದ ಪ್ರತಿಫಲ ಪೂರ್ಣವಾಗಿ ಸಿಕ್ಕಬೇಕು. ರಾಜ್ಯವು ಅವರನ್ನು ಇತರರ ಕಠೋರ ಹಸ್ತದಿಂದ ಉಳಿಸುವುದು ಮಾತ್ರ. ಆ ಸೇವೆಗಾಗಿ ಅದಕ್ಕೆ ಉಚಿತ ಪ್ರತಿಫಲ ಸಿಕ್ಕಬೇಕು, ಅಷ್ಟೆ. ರಾಜ್ಯದ ಪರವಾಗಿ ಈ ಪ್ರತಿಫಲದ ವಸೂಲಿಗಾಗಿ ನಿಯುಕ್ತನಾದವನು ನಾನು. ಇದರ ಹೊರತು ಈ ಬಡವರ ಗಳಿಕೆಯಲ್ಲಿ ಬೇರೆ ಭಾಗವೇನೂ ನನಗಿಲ್ಲ. ಇವರು ಪಾಪ, ದೀನರಾಗಿದ್ದಾರೆ, ಮೂರ್ಖರಿದ್ದಾರೆ, ಬಾಯಿಯಿಲ್ಲದವರಿದ್ದಾರೆ, ಇವರನ್ನು ನಾವು ಬೇಕಾದಷ್ಟು ಹಿಂಸಿಸಬಹುದು. ಇವರಿಗೆ ತಮ್ಮ ಸ್ವತ್ವದ ಅರಿವಿಲ್ಲ ; ತಮ್ಮ ಮಹತ್ವ ತಮಗೆ ಗೊತ್ತಿಲ್ಲ. ಆದರೆ ಕಾಲ ಬಂದೀತು—ಇವರಿಗೆ ಬಾಯಿ

ಬಂದೀತು, ತಮ್ಮ ಅಧಿಕಾರದ ತಿಳಿವಳಿಕೆ ಬಂದೀತು, ಆಗ ನಮಗೆ ಕೆಟ್ಟ ಗತಿ ಬಂದೀತು. ಈ ಭೋಗವಿಲಾಸ ನನ್ನನ್ನು ನನ್ನ ಜನರಿಂದ ದೂರ ಗೊಳಿಸುತ್ತದೆ. ಈ ಜನರಲ್ಲಿಯೇ ಇದ್ದು ಇವರಂತೆಯೆ ಜೀವನ ನಡೆಸಿ, ಇವರಿಗೆ ಸಹಾಯ ಮಾಡುವಲ್ಲಿಯೇ ನನ್ನ ಮೇಲ್ಮೆಯಿದೆ. ಸಣ್ಣ ಪುಟ್ಟ ಗಂಟಾಗಿದ್ದರೆ ಹೇಳುತ್ತಿದ್ದೆ—ಕೊಡಿರಿ, ತಲೆಯ ಮೇಲೆ ಭಾರ ಬಹಳವಿದೆ ಎಂದ ಮೇಲೆ ಇದು ಯೋಗ್ಯ. ಅಸಲಲ್ಲದೆ ಎಷ್ಟೋ ಸಾವಿರ ರೂಪಾಯಿ ಬಡ್ಡಿ ಬೇರೆ. ಮತ್ತೆ ಸಾವುಕಾರರದೂ ಮೂರು ಲಕ್ಷ ಇದೆ. ರಾಜ್ಯದ ಉತ್ಪನ್ನ ವರುಷಕ್ಕೆ ಒಂದೂವರೆ ಎರಡು ಲಕ್ಷ ರೂಪಾಯಿ; ಹೆಚ್ಚಿಲ್ಲ. ನಾನು ಇಷ್ಟು ದೊಡ್ಡ ಸಾಹಸ ಮಾಡುವುದಾದರೂ ಯಾವ ಆಧಾರದಿಂದ? ಹಾಂ. ವೈರಾಗಿಯಾಗಿ ಬಿಟ್ಟರೆ, ನನ್ನ ಜೀವನದಲ್ಲಿ—ಆಕಲ್ಪಿತವಾಗಿ ಸಾಯದಿದ್ದರೆ— ಈ ಜಗಳ ಕೊನೆಗೊಳ್ಳುವ ಸಂಭವವಿದೆ. ಈ ಕಿಚ್ಚಿನಲ್ಲಿ ಹಾರುವುದೆಂದರೆ ನನ್ನ ಸಂಪೂರ್ಣ ಜೀವನವನ್ನು, ನನ್ನ ಸುಖಗಳನ್ನು, ನನ್ನ ಆಸೆಗಳನ್ನು ಬೂದಿ ಮಾಡುವುದು. ಆಹ! ಈ ದಿನಗಳ ಪ್ರತೀಕ್ಷೆಯಲ್ಲಿ ನಾನು ಯಾವ ಯಾವ ಕಷ್ಟಗಳನ್ನು ಅನುಭವಿಸಿದೆ! ತಂದೆ ಇದೇ ಚಿಂತೆಯಲ್ಲಿ ಪ್ರಾಣಬಿಟ್ಟರು. ಈ ಶುಭ ಮುಹೂರ್ತ ನನ್ನ ಕಾಳರಾತ್ರಿಯಲ್ಲಿ ದೂರದ ದೀಪವಾಗಿತ್ತು. ಇದರ ಆಸರದಿಂದಲೇ ನಾನು ಬದುಕಿದೆ. ನಿದ್ದೆಯಲ್ಲಿ ಎಚ್ಚರಲ್ಲಿ ಇದೇ ಚರ್ಚೆ. ಇದರಿಂದ ಮನಸಿಗೆ ಆಲ್ಹಾದವೆಷ್ಟು. ಅಭಿಮಾನವೆಷ್ಟು! ಇಷ್ಟು ಧೈರ್ಯ ಮತ್ತು ಸಂತೋಷಗಳ ತರುವಾಯ ಒಳ್ಳೆಯ ದಿನ ಬೆಳಗಿರುವಾಗ, ಇದರಿಂದ ವಿಮುಖನಾಗುವುದು ಹೇಗೆ? ನನ್ನ ಚಿಂತೆ ಮಾತ್ರವಲ್ಲ, ರಾಜ್ಯದ ಉನ್ನತಿಯ ಎಷ್ಟೋ ಸ್ಕೀಮುಗಳನ್ನು ಯೋಚಿಸಿದ್ದೇನೆ. ನನ್ನ ಇಚ್ಛೆಗಳೊಂದಿಗೆ ಆ ವಿಚಾರಗಳನ್ನು ಬಿಟ್ಟುಬಿಡುವುದೆ? ಈ ದಶೆಗೇಡಿ ರಾಣಿ ಬದಕಿರುವಷ್ಟು ಕಾಲವೂ ನನ್ನನ್ನು ಹಾಯಾಗಿ ಕುಳ್ಳಿರಗೊಡಲಿಲ್ಲ. ಸತ್ತರೂ ನನ್ನ ಮೇಲೆ ಈ ಸಂಕಟ ಹೇರಿದಳು. ಆದರೆ ಬಡತನಕ್ಕೆ ನಾನು ಇಷ್ಟೇಕೆ ಅಂಜುತ್ತಿರುವೆ? ಬಡತನವೇನೂ ಪಾಪವಲ್ಲ. ನನ್ನ ತ್ಯಾಗದಿಂದ ಸಾವಿರಾರು ಕುಟುಂಬಗಳ ಕಷ್ಟ ದುರ್ದಶೆಗಳು ತಪ್ಪುತ್ತಿದ್ದರೆ ನಾನು ಹಿಂಜರಿಯಲಾಗದು. ಕೇವಲ ಸುಖಜೀವನ ನಡೆಸುವುದು ನಮ್ಮ ಧ್ಯೇಯವಲ್ಲ. ನಮ್ಮ ಮಾನ, ಪ್ರತಿಷ್ಠೆ, ಕೀರ್ತಿಗಳು ಸುಖಭೋಗದಿಂದ ಬರುವವೇನಲ್ಲ. ಅರಮನೆಯಲ್ಲಿರುವ,

ವಿಲಾಸರತನಾಗಿರುವ ರಾಣಾಪ್ರತಾಪನನ್ನು ಯಾರು ಬಲ್ಲರು? ಅವನ ಆತ್ಮ ಸಮರ್ಪಣ, ಕಠಿಣವ್ರತಪಾಲನಗಳೇ ಅವನನ್ನು ನಮ್ಮ ಜನಾಂಗದ ಸೂರ್ಯ ನನ್ನಾಗಿ ಮಾಡಿವೆ. ಶ್ರೀ ರಾಮಚಂದ್ರನು ತನ್ನ ಜೀವನವನ್ನು ಸುಖಭೋಗ ದಲ್ಲಿ ಕಳೆದಿದ್ದರೆ, ಇಂದು ನಾವು ಅವನ ಹೆಸರನ್ನು ಅರಿಯುತ್ತಿರಲಿಲ್ಲ. ಆತ್ಮ ಬಲಿದಾನದಿಂದಲೇ ಅವನು ಅಮರನಾದ. ನಮ್ಮ ಪ್ರತಿಷ್ಠೆ ನಮ್ಮ ಧನ-ವಿಲಾಸಗಳನ್ನು ಅವಲಂಬಿಸಿಲ್ಲ. ನಾನು ಮೋಟರಿನಲ್ಲಿ ತಿರುಗಿದರೇನು, ತಟ್ಟೂಸವಾರಿ ಮಾಡಿದರೇನು? ಹೊಟೆಲಿನಲ್ಲಿ ತಂಗಿದರೇನು, ಸಾಧಾರಣ ಮನೆಯಲ್ಲಿದ್ದರೇನು? ಬಹಳವಾದರೆ ತಾಲೂಕುದಾರರ ನಗೆಗೆ ಈಡಾಗ ಬಹುದು. ಏನಡ್ಡಿಯಿಲ್ಲ. ನನಗಂತೂ ಆ ಜನರಿಂದ ಪ್ರತ್ಯೇಕವಾಗಿರುವುದೇ ಬೇಕಾಗಿದೆ. ಇಷ್ಟು ನಿಂದೆಯಿಂದ ನೂರಾರು ಕುಟುಂಬಗಳ ಹಿತವಾಗುತ್ತಿ ದ್ದರೆ, ಅದನ್ನು ಸಂತೋಷದಿಂದ ಸಹಿಸಿಕೊಳ್ಳದಿದ್ದರೆ ನಾನು ಮನುಷ್ಯನಲ್ಲ. ನನ್ನ ಕುದುರೆ, ನನ್ನ ಸಾರೋಟು, ನನ್ನ ಸಂಚಾರ, ನನ್ನ ಬೇಟೆ, ನನ್ನ ಆಳು ಹೋಳುಗಳು, ನನ್ನ ಸ್ವಾರ್ಥಸಾಧಕರಾದ ಹಿತಮಿತ್ರರು ಇವುಗಳಿಂದ ದೂರ ವಾಗಿ, ಸಾವಿರಾರು ಸಧನ ನಿರ್ಧನ ಕುಟುಂಬಗಳ ಮತ್ತು ವಿಧವೆಯರ, ಅನಾಥರ ಹಿತ ಸಾಧಿಸುವುದಾದರೆ, ನಾನಿನ್ನು ತಡಮಾಡಲಾಗದು. ಸಾವಿರಾರು ಸಂಸಾರಗಳ ಭಾಗ್ಯ ಈಗ ನನ್ನ ಮುಷ್ಟಿಯಲ್ಲಿದೆ. ನನ್ನ ಸುಖಭೋಗ ಅವರಿಗೆ ವಿಷವಾಗಿದೆ. ನನ್ನ ಆತ್ಮಸಂಯಮ ಅವರಿಗೆ ಅಮೃತವಾಗಿದೆ. ನಾನು ಅಮೃತವಾಗುವುದು ಸಾಧ್ಯವಿದ್ದರೆ ಏಕೆ ವಿಷವಾಗಬೇಕು? ಅಲ್ಲದೆ, ಇದನ್ನು ಆತ್ಮತ್ಯಾಗವೆಂದು ತಿಳಿಯುವುದೂ ತಪ್ಪೇ. ನಾನೀಗ ಈ ಸೊತ್ತಿನ ಒಡೆಯನಾದುದು ದೈವಯೋಗವಷ್ಟೆ. ಇದು ನಾನು ಗಳಿಸಿದ್ದಲ್ಲ. ಇದಕ್ಕಾಗಿ ನಾನು ನೆತ್ತರು ಬಸಿದಿಲ್ಲ, ಬೆವರನ್ನು ಸುರಿಸಿಲ್ಲ. ನನಗೀ ಸೊತ್ತು ಸಿಕ್ಕ ದಿದ್ದರೆ, ಸಾವಿರಾರು ದೀನಬಾಂಧವರಂತೆ ನಾನೂ ಜೀವಿತೋಪಾರ್ಜನೆಯಲ್ಲಿ ತೊಡಗಿರುತ್ತಿದ್ದೆ. ಈ ರಾಜ್ಯದ ಒಡೆಯ ನಾನೆಂಬುದನ್ನು ನಾನೇಕೆ ಮರೆಯ ಬಾರದು? ಮನುಷ್ಯನ ಪರೀಕ್ಷೆಯಾಗುವುದು ಇಂತಹ ಪ್ರಸಂಗಗಳಲ್ಲಿ. ನಾನು ಎಷ್ಟೋ ವರುಷ ಪರೋಪಕಾರ ಸಿದ್ಧಾಂತದ ಅನುಯಾಯಿಯಾಗಿದ್ದೆ. ಈಗ ಆ ಸಿದ್ಧಾಂತಗಳನ್ನು ಮರೆತುಬಿಟ್ಟು, ಸ್ವಾರ್ಥವನ್ನು ಮಾನವತೆ ಮತ್ತು ಸದಾಚಾರಗಳಿಗಿಂತ ಬೆಳೆಸಿಬಿಟ್ಟರೆ, ಅತ್ಯಂತ ಹೇಡಿತನವೆನಿಸುವುದು,

ಸ್ವಾರ್ಥಪರತೆ ಎನಿಸುವುದು. ಸ್ವಾರ್ಥಸಾಧನ ವಿದ್ಯೆಗಾಗಿ, ಗೀತಾ, ಮಿಲ್, ಎಮರ್ಸನ್, ಅರಸ್ತೂ ಅವರ ಶಿಷ್ಯನಾಗುವ ಆವಶ್ಯಕತೆ ಏನಿತ್ತು? ಈ ಪಾಠ ನನಗೆ ಇತರ ಬಂಧುಗಳಿಂದ ತಾನಾಗಿ ದೊರೆಯುತ್ತಿತ್ತು. ಪ್ರಚಲಿತ ಪ್ರಥೆಗಿಂತ ಹೆಚ್ಚಿನ ಗುರು ಯಾರಿದ್ದಾರೆ? ಸಾಮಾನ್ಯರಂತೆ ನಾನೂ ಸ್ವಾರ್ಥಕ್ಕೆ ತಲೆಬಾಗಬೇಕೆ? ಹಾಗಾದರೆ ವಿಶೇಷವೇನು ಬಂದಿತು? ಇಲ್ಲ, ನಾನು ಕಾನ್ಸೆನ್ಸಿನ (ವಿವೇಕದ) ಕೊಲೆ ಮಾಡುವುದಿಲ್ಲ. ಪುಣ್ಯ ಸಾಧ್ಯವಿರುವಾಗ ಪಾಪಮಾಡುವುದಿಲ್ಲ ಪರಮಾತ್ಮನ್, ನನಗೆ ನೆರವಾಗು; ನೀನು ನನ್ನನ್ನು ರಾಜಪೂತವಂಶದಲ್ಲಿ ಹುಟ್ಟಿಸಿದ್ದೀ; ನನ್ನ ಕೃತ್ಯದಿಂದ ಈ ಮಹಾನ್ ಜಾತಿಯನ್ನು ನಾಚಿಕೆಗೇಡು ಮಾಡಬೇಡ.—ಇಲ್ಲ, ಎಂದಿಗೂ ಇಲ್ಲ. ಸ್ವಾರ್ಥದ ಮುಂದೆ ಈ ಕತ್ತನ್ನು ಬಗ್ಗಿಸುವುದಿಲ್ಲ. ರಾಮ, ಭೀಷ್ಮ, ಪ್ರತಾಪರ ವಂಶದವ ನಾನು, ಶರೀರದ ಸೇವಕನಾಗಲಾರೆ.

ಯಾವುದೋ ಎತ್ತರವಾದ ಗೋಪುರವನ್ನು ತಾನೇರಿರುವಂತೆ ಕುವರ ಜಗದೀಶಸಿಂಹರಿಗೆ ಎನಿಸಿತು. ಚಿತ್ತವು ಅಭಿಮಾನದಿಂದ ತುಂಬಿತು; ಕಣ್ಣುಗಳು ಪ್ರಕಾಶಮಾನವಾದವು. ಆದರೆ ಒಂದು ಕ್ಷಣದಲ್ಲಿಯೇ ಈ ಆವೇಗ ಇಳಿಯತೊಡಗಿತು ಗೋಪುರದ ತುದಿಯಿಂದ ದೃಷ್ಟಿ ಕೆಳಗೆ ಹೋಯಿತು. ಮೈ ಜುಮ್ಮೆಂದಿತು. ನದಿಯಲ್ಲಿ ಹಾರಿಕೊಳ್ಳಬೇಕೆಂದು ವಿಚಾರಮಾಡುತ್ತ ದಡದಲ್ಲಿ ಕುಳಿತಿರುವ ಮನುಷ್ಯನಂತೆ ಅವರ ಸ್ಥಿತಿಯಾಯಿತು.

ಮನೆಯವರು ನನ್ನನ್ನು ಸಹಕರಿಸಬಹುದೆ? ನನಗಾಗಿ ಅವರು ಒಪ್ಪಿದರೂ ನನ್ನೊಡನೆ ಅವರ ಆಶೆಗಳನ್ನು ಬಲಿದಾನ ಮಾಡುವ ಅಧಿಕಾರ ನನಗಿದೆಯೆ? ಉಳಿದವರಿರಲಿ, ತಾಯಿಯವರು ಎಂದಿಗೂ ಒಪ್ಪಲಿಕ್ಕಿಲ್ಲ. ಅಲ್ಲದೆ ಅಣ್ಣ ತಮ್ಮಂದಿರೂ ಕದಾಚಿತ್ ನಿರಾಕರಿಸಬಹುದು. ರಾಜ್ಯದ ಸ್ಥಿತಿಯನ್ನು ನೋಡಿದರೆ, ಅವರು ವರುಷಾ ಕನಿಷ್ಠ ಹತ್ತುಸಾವಿರ ರೂಪಾಯಿಗಳ ಪಾಲುಗಾರರಿದ್ದಾರೆ. ಅವರ ಭಾಗದಲ್ಲಿ ಹಸ್ತಕ್ಷೇಪ ಮಾಡಲು ಬರುವುದಿಲ್ಲ. ನಾನು ನನ್ನ ಒಡೆಯನು ಮಾತ್ರ. ಆದರೆ ನಾನೂ ಒಬ್ಬನಿಲ್ಲ. ಸಾವಿತ್ರಿ ಸ್ವಯಂ ಬೇಕಾದರೆ ನನ್ನೊಂದಿಗೆ ಕಿಚ್ಚಿನಲ್ಲಿ ಧುಮುಕಲು ಸಿದ್ಧಳಾಗ

ಬಹುದು; ಆದರೆ ತನ್ನ ಪ್ರೀತಿಯ ಮಗನನ್ನು ಈ ಕುತ್ತದ ಬಳಿ ಎಂದಿಗೂ ಬರಗೊಡುವುದಿಲ್ಲ.

ಹೆಚ್ಚು ವಿಚಾರ ಮಾಡುವುದು ಕುವರ ಸಾಹೇಬರಿಗೆ ಅಸಾಧ್ಯ ವಾಯಿತು. ಒಂದು ಬಗೆಯ ವಿಕಲ ಸ್ಥಿತಿಯಲ್ಲಿ ಅವರೆದ್ದು ಕೋಣೆಯಲ್ಲಿ ಎಡೆಯಾಡತೊಡಗಿದರು. ಕೆಲ ಹೊತ್ತಿನ ಮೇಲೆ ಅವರು ಹೊರಗಡೆ ನೋಡಿದರು. ಬಾಗಿಲು ತೆರೆದುಕೊಂಡು ಹೊರಬಿದ್ದರು. ನಾಲ್ಕೂ ಕಡೆ ಕತ್ತಲೆ. ಅವರ ಚಿಂತೆಗಳಂತೆಯೇ ಅಪಾರ ಭಯಂಕರ ಗೋಮತೀ ನದಿ ಎದುರಿನಲ್ಲಿ ಹರಿಯುತ್ತಿತ್ತು. ಮೆಲ್ಲಮೆಲ್ಲನೆ ನದೀತೀರಕ್ಕೆ ಹೋಗಿ, ಅಲ್ಲಿ ಬಹಳ ಹೊತ್ತು ಎಡೆಯಾಡುತ್ತಲಿದ್ದರು. ಅವರ ಆಕುಲ ಹೃದಯಕ್ಕೆ ತರಂಗಗಳ ಮೇಲೆ ಪ್ರೀತಿಯುಂಟಾಯಿತು. ಬಹುಶಃ ಅಲೆಗಳೂ ವ್ಯಾಕುಲ ವಾಗಿದ್ದುದಕ್ಕಾಗಿ ಇರಬಹುದು. ತಮ್ಮ ಚಂಚಲಚಿತ್ತವನ್ನು ಅವರು ಮರಳಿ ಏಕಾಗ್ರಗೊಳಿಸಿದರು. ರಾಜ್ಯದ ಉತ್ಪನ್ನದಿಂದ ಈ ಎಲ್ಲ ವೃತ್ತಿಗಳನ್ನು ಕೊಡುವುದಾದರೆ ಸಾಲದ ಬಡ್ಡಿ ಹೊರಡುವುದೂ ಕಠಿನ, ಅಸಲಿನ ಮಾತು ತೆಗೆಯುವುದೇ ಬೇಡ. ಆಯ ಹೆಚ್ಚಲಾರದೇನು? ಇನ್ನೂ ಲಾಯದಲ್ಲಿ ಇಪ್ಪತ್ತು ಕುದುರೆಗಳಿವೆ. ನನಗೆ ಒಂದು ಸಾಕು. ನೌಕರರು ನೂರಕ್ಕೆ ಕಡಿಮೆಯಿಲ್ಲ. ನನಗೆ ಇಬ್ಬರಾದರೆ ಹೆಚ್ಚಾಯಿತು. ನಮ್ಮ ಬಂಧು ಗಳಿಂದಲೇ ಸೇವಾಸೇವೆ ಮಾಡಿಸಿಕೊಳ್ಳುವುದು ಅನುಚಿತ. ಆ ಮನುಷ್ಯರಿಗೆ ನನ್ನ ಪಾಲಿನ ಭೂಮಿಗಳನ್ನು ಕೊಟ್ಟುಬಿಡುತ್ತೇನೆ; ಸುಖವಾಗಿ ಬೇಸಾಯ ಮಾಡಿಕೊಂಡು ನನ್ನನ್ನು ಹರಸುವರು. ತೋಟದ ಹಣ್ಣುಗಳು ಟೊಂಗೆ ಗಳಿಗೇ ಕಾಣಿಕೆಯಾಗುತ್ತಿವೆ. ಇನ್ನು ಅವನ್ನು ಮಾರಬೇಕು. ಕೇವಲ ಮಹೇಶಗಂಜ ಪೇಟೆಯಿಂದಲೆ ಹತ್ತುಸಾವಿರ ರೂಪಾಯಿ ಬರುತ್ತವೆ. ಈ ಎಲ್ಲ ಉತ್ಪನ್ನವನ್ನು ಮಹಂತಜಿ ಹಾರಿಸುತ್ತಾರೆ. ಅವರಿಗೆ ವರುಷಾ ಒಂದು ಸಾವಿರ ಇರಬೇಕು. ಇನ್ನು ಈ ಪೇಟೆಯ ಗುತ್ತಿಗೆ ಕೊಡುತ್ತೇನೆ. ಆದರಿಂದ ಎಂಟು ಸಾವಿರಕ್ಕಿಂತ ಕಡಿಮೆಯೇನು ಬರುವುದಿಲ್ಲ. ಈ ವಿಭಾಗಗಳಿಂದ ವಾರ್ಷಿಕ ಆದಾಯ ಇಪ್ಪತ್ತೈದು ಸಾವಿರ ರೂಪಾಯಿ ಆಗುವುದು. ಸಾವಿತ್ರಿಗೂ ಲಲ್ಲಾಗೂ ಒಂದು ಸಾವಿರ ರೂಪಾಯಿ ಸಾಕಷ್ಟಾಗುತ್ತದೆ. ಸಾವಿತ್ರಿಗೆ ಸ್ಪಷ್ಟವಾಗಿ ಹೇಳಿಬಿಡುತ್ತೇನೆ— ತಿಂಗಳಾ ಒಂದು ಸಾವಿರ

ರೂಪಾಯಿ ತೆಗೆದುಕೋ, ನನ್ನ ಜೊತೆಯಲ್ಲಿ ಇರು; ಅಥವಾ ರಾಜ್ಯದ ಅರ್ಧ ಉತ್ಪನ್ನ ತೆಗೆದುಕೋ, ನನ್ನನ್ನು ಬಿಟ್ಟುಬಿಡು. ರಾಣಿಯಾಗುವ ಇಚ್ಛೆಯಿದ್ದರೆ ಸಂತೋಷದಿಂದ ಆಗು; ಆದರೆ ನಾನು ರಾಜನಾಗಲು ಒಲ್ಲೆ.

'ರಾಮನಾಮ ಸತ್ಯ ಹೈ!'

ಒಮ್ಮೆಲೆ ಕುವರ ಸಾಹೇಬರಿಗೆ ಕೇಳಬಂದಿತು. ತಿರುಗಿ ನೋಡಿದರು. ಕೆಲವರು ಒಂದು ಹೆಣ ತರುತ್ತಿದ್ದರು. ಅವರು ನದಿಯ ದಡದಲ್ಲಿ ಚಿತೆಯನ್ನು ರಚಿಸಿ ಕೊಳ್ಳಿಕೊಟ್ಟರು. ಇಬ್ಬರು ಹೆಂಗುಸರು ಬೋರಾಡಿ ಅಳುತ್ತಿದ್ದರು. ಆ ವಿಲಾಪದ ಪರಿಣಾಮ ಕುವರಸಾಹೇಬರ ಮನಸಿನ ಮೇಲೆ ಏನೂ ಆಗಲಿಲ್ಲ ತಾನೆಂಥ ಕಲ್ಲೆದೆಯವನು ಎಂದು ಅವರು ಒಳಗೊಳಗೆ ನಾಚಿಕೆಪಡುತ್ತಿದ್ದರು. ಒಬ್ಬ ದೀನನ ಹೆಣ ಉರಿಯುತ್ತಿದೆ, ಹೆಂಗುಸರು ಅಳುತ್ತಿದ್ದಾರೆ. ಆದರೂ ನನ್ನೆದೆ ಕೊಂಚವೂ ಕರಗಲೊಲ್ಲದು! ಕಲ್ಲ ಮೂರ್ತಿಯಂತೆ ನಿಂತಿದ್ದೇನೆ! ಒಬ್ಬ ಹೆಂಗುಸು ಅಳುತ್ತ ನುಡಿದಳು: "ಹಾಯ್, ನನ್ನರಸಾ, ವಿಷ ನಿಮಗೆ ಹೇಗೆ ಸವಿಯಾಯಿತು?"

ಈ ವಿಲಾಪವನ್ನು ಕೇಳಿ ಕುವರ ಸಾಹೇಬರ ಹೃದಯದಲ್ಲಿ ಇರಿದಂತಾಯಿತು. ಕರುಣೆ ಎಚ್ಚತ್ತಿತು; ಕಣ್ಣುಗಳಲ್ಲಿ ಕಂಬನಿ ತುಂಬಿತು. ಇವನು ವಿಷ ಸೇವಿಸಿ ಸತ್ತಹಾಗಿದೆ. ಹಾಯ್, ಇವನಿಗೆಂತು ವಿಷ ಸವಿಯಾಯಿತು! ಇದರಲ್ಲಿ ಎಷ್ಟು ಆಶ್ಚರ್ಯ! ವಿಷವಂತೂ ಕಟುಪದಾರ್ಥ; ಅದು ಹೇಗೆ ಸವಿಯಾಯಿತು? ಕಟುವಿಷಕ್ಕೆ ಬದಲಾಗಿ ತನ್ನ ಮಧುರವಾದ ಪ್ರಾಣವನ್ನಿತ್ತ ಈತನ ಮೇಲೆ ದೊಡ್ಡ ಸಂಕಟ ಬಿದ್ದಿರಬೇಕು. ಅಂತಹ ಸ್ಥಿತಿಯಲ್ಲಿಯೇ ವಿಷ ಮಧುರವಾಗುವುದು. ಕುವರಸಾಹೇಬರು ತಳಮಳಿಸಿದರು. ಕಾರುಣಿಕ ಶಬ್ದಗಳು ಅವರ ಚಿತ್ತದಲ್ಲಿ ಮತ್ತೆ ಮತ್ತೆ ದನಿಗೈಯುತ್ತಿದ್ದವು. ಅವರಿಗೆ ಅಲ್ಲಿ ನಿಂದಿರುವುದಾಗಲಿಲ್ಲ. ಆ ಜನರ ಹತ್ತಿರ ಹೋಗಿ ಒಬ್ಬನನ್ನು ಪ್ರಶ್ನಿಸಿದರು: "ಏನು, ಬಹಳ ದಿನಗಳಿಂದ ಜಡ್ಡಾಗಿತ್ತೆ?" ಅಶ್ರುಭರಿತ ನೇತ್ರಗಳಿಂದ ಕುವರ ಸಾಹೇಬರ ಕಡೆ ನೋಡಿ ಆ ಮನುಷ್ಯ ಉತ್ತರವಿತ್ತ: "ಇಲ್ಲ, ಜಡ್ಡೆಲ್ಲಿಯದು ಸಾಹೇಬ! ಇನ್ನೂ ಇದೆ ಸಂಜೆಯ ತನಕ ಚೆನ್ನಾಗಿ

ಮಾತನಾಡುತ್ತಿದ್ದರು. ಸಂಜೆಗೆ ಏನು ತಿಂದರೋ ಗೊತ್ತಿಲ್ಲ, ರಕ್ತವಾಂತಿಯಾಗತೊಡಗಿತು. ವೈದ್ಯರಾಜರಲ್ಲಿಗೆ ಹೋಗುವುದರೊಳಗೆ ಗುಡ್ಡೆಗಳು ತಿರುಗಿದವು; ನಾಡಿಗಳು ನಿಂತುಹೋದವು. ವೈದ್ಯರಾಜರು ಬಂದು ನೋಡಿ "ಕೆಲಸ ಮುಗಿಯಿತು," ಎಂದರು. ಇನ್ನೂ ಇಪ್ಪತ್ತೆರಡು ಇಪ್ಪತ್ತುಮೂರು ವರುಷಗಳ ವಯಸ್ಸು. ಇಂಥ ಜಟ್ಟಿ ಇಡೀ ಲಖನೌದಲ್ಲಿಯೆ ಇದ್ದಿಲ್ಲ."

"ಏನಾದರೂ ಗೊತ್ತಾಯಿತೇನು, ವಿಷ ಯಾಕೆ ತೆಗೆದುಕೊಂಡ?"

ಆ ಮನುಷ್ಯ ಸಂದೇಹದೃಷ್ಟಿಯಿಂದ ನೋಡಿದ. "ಮಹಾಶಯರೇ, ಮತ್ತೊಂದು ಏನೂ ಇಲ್ಲ. ಆ ದೊಡ್ಡ ಬ್ಯಾಂಕು ಮುಳುಗಿದಂದಿನಿಂದ ಬಹಳ ಉದಾಸರಾಗಿದ್ದರು. ಒಂದೆರಡು ಸಾವಿರರೂಪಾಯಿ ಬ್ಯಾಂಕಿನಲ್ಲಿಟ್ಟಿದ್ದರು. ತುಪ್ಪ, ಹಾಲು, ಖೋವೆಗಳ ದೊಡ್ಡ ಅಂಗಡಿಯಿತ್ತು. ಬಂಧುಬಳಗದಲ್ಲಿ ಮರ್ಯಾದೆಯಿಂದ ಬಾಳಿದವರು. ಆ ಬಂಡವಾಳವೆಲ್ಲ ಮುಳುಗಿತು. ಬ್ಯಾಂಕಿನಲ್ಲಿ ಹಣ ಇಡಬೇಡವೆಂದು ನಾವು ಹೇಳಿಯೇ ಹೇಳಿದೆವು. ಆದರೆ ಹೀಗೆ ಆಗುವುದಿತ್ತು; ಯಾರ ಮಾತೂ ಕೇಳಲಿಲ್ಲ. ಈವೊತ್ತು ಮುಂಜಾನೆ ಹೆಂಡತಿಯನ್ನು ಆಭರಣ ಕೇಳಿದರು—ಅಡವಿಟ್ಟು ಗವಳಿಗರ ಹಣ ಸಲ್ಲಿಸುವುದಕ್ಕೆ. ಮಾತಿಗೆ ಮಾತಾಗಿ ಜಗಳವಾಯಿತು. ಸರಿ, ಏನು ತಿಂದುಬಿಟ್ಟರೋ ದೇವರಿಗೆ ಗೊತ್ತು." ಎಂದು ವಿವರಿಸಿದ.

ಕುವರಸಾಹೇಬರ ಎದೆ ನಡುಗಿತು. ಕೂಡಲೆ, ಶಿವದಾಸನೇ ಅಲ್ಲವಷ್ಟೆ ಎಂದು ಎನಿಸಿತು. "ಇವನ ಹೆಸರು ಶಿವದಾಸ ಎಂದಿಲ್ಲವಷ್ಟೆ?" ಎಂದು ಕೇಳಿದರು.

ಆ ಮನುಷ್ಯ ವಿಸ್ಮಯದಿಂದ ನೋಡುತ್ತ, "ಹೌದು, ಅದೇ ಹೆಸರು. ನಿಮಗೆ ಗುರುತಿತ್ತೇ?" ಎಂದ.

"ಹಾಂ, ನಾವು ಇವ ಬರಹಲದಲ್ಲಿ ಬಹಳ ದಿನ ಕೂಡಿ ಆಡಿದ್ದೆವು. ಇಂದು ಸಂಜೆಯ ಮುಂದೆ ಬ್ಯಾಂಕಿನಲ್ಲಿ ನಮಗೆ ಕೂಡಿದ್ದ. ಅವನು ನನ್ನೊಂದಿಗೆ ಸ್ವಲ್ಪವಾದರೂ ಮಾತೆತ್ತಿದ್ದರೆ ಸಾಧ್ಯವಿದ್ದಷ್ಟು ಸಹಾಯ ಮಾಡುತ್ತಿದ್ದೆ. ದುರ್ದೈವ!"

ಆ ಮನುಷ್ಯ ಕುವರ ಸಾಹೇಬರನ್ನು ದಿಟ್ಟಿಸಿ ನೋಡಿ, ಹೆಂಗಸರ ಕಡೆ ಹೋಗಿ ಹೇಳಿದ: " ಸುಮ್ಮನಾಗಿರಿ. ಬರಹಲದ ಮಹಾರಾಜರು ಬಂದಿದ್ದಾರೆ! "

ಅದನ್ನು ಕೇಳಿದೊಡನೆ ಶಿವದಾಸನ ತಾಯಿ ಹಣೆ ಬಡಿದುಕೊಳ್ಳುತ್ತ ಅಳುತ್ತ ಬಂದು ಕುವರ ಸಾಹೇಬರ ಅಡಿಗಳ ಮೇಲೆ ಬಿದ್ದಳು. " ಮಗೂ, ಚಿಕ್ಕಂದಿನಿಂದ ನೀನು ಭೈಯ್ಯಾ ಎಂದು ಕರೆಯುತ್ತಿದ್ದೆ... ... .... " ಇಷ್ಟು ಮಾತು ಅವಳ ಬಾಯಿಂದ ಹೊರಟಿತು; ಮುಂದೆ ಕೊರಳು ಕಟ್ಟಿತು.

ಕುವರ ಮಹಾಶಯರ ಕಣ್ಣುಗಳಿಂದಲೂ ಕಣ್ಣೀರು ಹರಿಯುತ್ತಿತ್ತು. ಶಿವದಾಸನ ಮೂರ್ತಿ ಎದುರಿಗೆ ನಿಂತು, ನೀನು ಗೆಳೆಯನಾಗಿ ನನ್ನ ಪ್ರಾಣ ತೆಗೆದುಕೊಂಡೆ. ಎಂದು ಹೇಳುತ್ತಿರುವಂತೆ ಕಂಡಿತು.

೭

ನಸುಕು ಹರಿಯಿತು. ಕುವರ ಸಾಹೇಬರಿಗೆ ನಿದ್ದೆಯೇ ಇಲ್ಲ. ಗೋಮತಿಯ ತೀರದಿಂದ ಬಂದಾಗಿನಿಂದಲೂ ಅವರ ಚಿತ್ತವನ್ನು ವೈರಾಗ್ಯ ಆವರಿಸಿದಂತಿತ್ತು. ಆ ಕಾರುಣಿಕ ದೃಶ್ಯ ಅವರ ಸ್ವಾರ್ಥವಿಚಾರಗಳನ್ನು ಛಿನ್ನಭಿನ್ನ ಮಾಡುತ್ತಲಿತ್ತು. ಸಾವಿತ್ರಿಯ ವಿರೋಧ, ಲಲ್ಲಾನ ನಿರಾಶಾಯುಕ್ತ ಹಠ, ತಾಯಿಯ ಮಾತುಗಳು ಇವುಗಳ ಭಯ ಲೇಶಮಾತ್ರವೂ ಇರಲಿಲ್ಲ. ಸಾವಿತ್ರಿ ಮುಸುಗುಟ್ಟುವಳು, ಮುಸುಗುಟ್ಟಲಿ. ಲಲ್ಲಾನೂ ಕದನಕಣಕ್ಕೆ ದುಮುಕಬೇಕಾಗುವುದು, ಏನೂ ಚಿಂತೆಯಿಲ್ಲ. ತಾಯಿ ಜೀವ ಕೊಡಲು ಉದ್ಯುಕ್ತಳಾಗಬಹುದು, ಅಡ್ಡಿಯಿಲ್ಲ. ಹೆಂಡತಿಮಕ್ಕಳು ಹಿತಮಿತ್ರರಿಗಾಗಿ ಸಾವಿರಾರು ಸಂಸಾರಗಳ ಕೊಲೆ ಮಾಡಲಾರೆ, ಹಾಯ್! ಶಿವದಾಸನನ್ನು ಬದುಕಿಸುವುದಕ್ಕಾಗಿ ನಾನು ಇಂತಹ ಎಷ್ಟು ರಾಜ್ಯಗಳನ್ನು ಬಿಡಲು ಸಾಧ್ಯ? ಸಾವಿತ್ರಿ ಉಪವಾಸ ಬೀಳಲಿ, ಲಲ್ಲಾ ಕೂಲಿ ಮಾಡಲಿ, ನಾನು ಮನೆಮನೆ ತಿರುಪೆ ಬೇಡಲಿ, ಎಂದರೂ ಎರಡನೆಯವರ ಕತ್ತು ಹಿಸುಕಲಾರೆ. ಇನ್ನು ವಿಲಂಬಕ್ಕೆ ಅವಕಾಶವಿಲ್ಲ. ಈ ದಿವಾಳಿ ಇನ್ನೂ ಯಾವ ಯಾವ ಆಪತ್ತಿ ಒಡ್ಡುವುದೋ ಕಾಣೆ. ನಾನೇಕೆ ಇಷ್ಟು ಹಿಂದೆ ಮುಂದೆ ನೋಡುತ್ತಿದ್ದೇನೆ? ಇದು ಕೇವಲ ಆತ್ಮದೌರ್ಬಲ್ಯವಲ್ಲದೆ, ಯಾರೂ ಮಾಡದಂತಹ ದೊಡ್ಡ

ಕೆಲಸವೇನೂ ಇದಲ್ಲ. ನನಗೆ ಕರ್ತವ್ಯಜ್ಞಾನವಿದೆ. ಅದರಿಂದ ಏಕೆ ಹಿಮ್ಮುಖನಾಗಬೇಕು? ಏನೇ ಆಗಲಿ, ತಲೆ ಬೇಕಾದರೆ ಹೋಗಲಿ, ಏನು ಚಿಂತೆ? ಕುವರ ಸಾಹೇಬರು ಗಂಟೆ ಬಾರಿಸಿ, ಕಣ್ಣುಜ್ಜುತ್ತ ಬಂದು. ನಿಂತ ಸೇವಕನಿಗೆ ಹೇಳಿದರು: " ಈಗಲೇ ಜೇಕಬ್ ಬ್ಯಾರಿಸ್ಟರ್ ಸಾಹೇಬರಿಗೆ ನನ್ನ ನಮಸ್ಕಾರ ಹೇಳು. ಎದ್ದಿದ್ದಾರು. ಅಗತ್ಯದ ಕೆಲಸವಿದೆ ಎಂದು ಹೇಳು. ಇಲ್ಲ, ಈ ಚೀಟಿ ತೆಗೆದುಕೊಂಡು ಹೋಗು. ಮೋಟರು ಸಿದ್ಧಪಡಿಸಿಕೋ."

೮

ಮಿಸ್ಟರ್ ಜೇಕಬ್ ಕುವರ ಸಾಹೇಬರಿಗೆ ತಿಳಿಸಿಹೇಳಿದರು: ಈ ಹುದಲಿನಲ್ಲಿ ನೀವು ಬೀಳಬೇಡಿರಿ, ಹೊರಕ್ಕೆ ಬರುವುದು ಕಠಿನವಾದೀತು. ಇನ್ನೂ ಇಂತಹ ರಕಮು ಎಷ್ಟಿದೆಯೋ ಯಾರು ಬಲ್ಲರು? ನೀವರಿಯಿರಿ; ಆದರೆ ಮನಸಿನಲ್ಲಿ ದೃಢವಾಗುವ ನಿಶ್ಚಯ ಗಚ್ಚಿನ ನೆಲಗಟ್ಟು; ಆಪತ್ತಿಗಳ ಬಡಿತದಿಂದ ಅದು ಮತ್ತಷ್ಟು ಗಟ್ಟಿಯಾಗುವುದು. ಕುವರ ಸಾಹೇಬರು ತಮ್ಮ ನಿಶ್ಚಯ ಬಿಡಲಿಲ್ಲ. ಮರುದಿನ ಪತ್ರಿಕೆಗಳಲ್ಲಿ ಅಚ್ಚಾಯಿತು-ಮೃತ ಮಹಾರಾಣಿಯವರ ಸಾಲವನ್ನೆಲ್ಲ ನಾವು ಒಪ್ಪಿಕೊಳ್ಳುತ್ತೇವೆ; ನಿಶ್ಚಿತ ಅವಧಿಯೊಳಗೆ ತೀರಿಸುತ್ತೇವೆ.

ಈ ಪ್ರಕಟನೆಯಿಂದ ಲಖನೌದಲ್ಲಿ ಗಡಿಬಿಡಿ ಎದ್ದಿತು. ಬುದ್ಧಿವಂತರ ಅಭಿಪ್ರಾಯದಲ್ಲಿ ಕುವರ ಸಾಹೇಬರ ಈ ಕೆಲಸ ದೊಡ್ಡ ತಪ್ಪು; ಕಾಯದೆ ಅರಿಯದವರು ಇದರಲ್ಲಿ ಏನೋ ರಹಸ್ಯ ಖಂಡಿತ ಇರಬೇಕು ಎಂದು ಎಣಿಸಿ-ದರು. ಕುವರ ಸಾಹೇಬರ ಸದುದ್ದೇಶವನ್ನು ಒಪ್ಪಿದವರು ತೀರ ವಿರಳ. ಅವರ ಪ್ರಶಂಸೆ ಆಗದೆ ಹೋಗಿರಬಹುದು, ಆಶೀರ್ವಾದಗಳ ಕೊರತೆ ಇರಲಿಲ್ಲ. ಬ್ಯಾಂಕಿನ ಸಾವಿರಾರು ಬಡ ಠೇವುದಾರರು ಅವರನ್ನು ಹೃತ್ಪೂರ್ವಕವಾಗಿ ಹರಸುತ್ತಲಿದ್ದರು. ಒಂದು ವಾರದ ವರೆಗೆ ಕುವರ ಸಾಹೇಬರಿಗೆ ತಲೆಯೆತ್ತಲು ಅವಕಾಶ ದೊರೆಯಲಿಲ್ಲ. ಮಿಸ್ಟರ್ ಜೇಕಬರ ವಿಚಾರ ನಿಜವಾಯಿತು. ಕೊಡುವುದು ದಿನಾಲು ಹೆಚ್ಚುತ್ತಲೆ ಇತ್ತು. ಅವರಿಗೆ ಏನೂ ಪತ್ತೆಯಿಲ್ಲದ ಎಷ್ಟೋ ಪುರನೋಟುಗಳು ಹೊರಟವು. ರತ್ನಪಡಿ ವ್ಯಾಪಾರಿಗಳ ಮತ್ತು ಬೇರೆ ದೊಡ್ಡ ದೊಡ್ಡ ಅಂಗಡಿಕಾರರ ಉದ್ದರಿಯು ಕಡಿಮೆ ಇರಲಿಲ್ಲ.

ಸುಮಾರು ಹದಿಮೂರು ಹದಿನಾಲ್ಕು ಲಕ್ಷಗಳಷ್ಟಿತ್ತು. ಒಟ್ಟು ಇಪ್ಪತ್ತು ಲಕ್ಷಕ್ಕೆ ಮುಟ್ಟಿತು. ಕುವರ ಸಾಹೇಬರು ಬೆದರಿದರು. ಸಹೋದರರ ವೃತ್ತಿಯನ್ನು ನಿಲ್ಲಿಸುವ ಪ್ರಸಂಗ ಬರಬಾರದು-ಆ ಅಧಿಕಾರ ನನಗಿಲ್ಲ. ಏಳನೆಯ ದಿನ ಅವರು ಕೆಲವು ಸಾವುಕಾರರನ್ನು ಒದರಾಡಿ ಕಳಿಸಿಬಿಟ್ಟರು. ಬಡ್ಡಿದರ ಹೆಚ್ಚಿದ್ದುದನ್ನು ಕಡಿಮೆ ಮಾಡಿಸಿಕೊಂಡರು; ಅವಧಿ ಮೀರಿದ ಸಾಲವನ್ನು ನಿರಾಕರಿಸಿದರು.

ಸಾವುಕಾರರ ಕಠೋರತನಕ್ಕಾಗಿ ಅವರಿಗೆ ಸಿಟ್ಟುಬರುತ್ತಿತ್ತು. ಮುಳು ಗುವ ಗಂಟಿನಲ್ಲಿ ಒಂದು ಭಾಗ ಪಡೆದುಕೊಂಡು ಸಾವುಕಾರರು ತೃಪ್ತರಾಗ ಬೇಕೆಂದು ಅವರ ವಿಚಾರ. ಇಷ್ಟು ಜಗ್ಗಾಡಿದರೂ ಹತ್ತೊಂಬತ್ತು ಲಕ್ಷಕ್ಕಿಂತ ಕೆಳಗೇನೂ ಬರಲಿಲ್ಲ.

ಈ ಕಾರ್ಯದಿಂದ ಬಿಡುವು ಹೊಂದಿ ಒಂದು ದಿನ ಕುವರ ಸಾಹೇಬರು ಬ್ಯಾಂಕಿಗೆ ಹೋದರು. ಬ್ಯಾಂಕು ತೆರೆದಿತ್ತು. ಹೆಣದಲ್ಲಿ ಜೀವ ಮರಳಿತ್ತು. ಠೇವುದಾರರ ಸಂದಣಿಯಿತ್ತು. ಜನರು ನಗುಮೊಗದಿಂದ ಮರಳುತ್ತಿದ್ದರು. ಕುವರ ಸಾಹೇಬರನ್ನು ಕಂಡೊಡನೆ ಪ್ರೀತಿಯಿಂದ ಅವರ ಕಡೆ ಓಡಿದರು. ಯಾರು ಅತ್ತು, ಯಾರು ಕಾಲಿಗೆ ಬಿದ್ದು, ಯಾರು ಸಭ್ಯತಾಪೂರ್ವಕವಾಗಿ ತಮ್ಮ ಕೃತಜ್ಞತೆ ಸೂಚಿಸಿದರು. ಅವರು ಬ್ಯಾಂಕಿನ ಕಾರ್ಯಕರ್ತರನ್ನು ಕಂಡರು. ಜನರು ಈ ವಿಜ್ಞಾಪನೆ ಬ್ಯಾಂಕನ್ನು ಬದುಕಿಸಿತು ಎಂದರು. ಬಂಗಾಲಿ ಬಾಬು ಲಾಲಾ ಸಾಈದಾಸರ ಬಗ್ಗೆ "ಜಗತ್ತಿನಲ್ಲಿ ಎಲ್ಲರೂ ಒಳ್ಳೆಯ ಮನಸಿನವರಿರುತ್ತಾರೆಂದು ಅವರ ತಿಳಿವಳಿಕೆ; ನಮಗೆ ಉಪದೇಶ ಮಾಡುತ್ತಿದ್ದರು. ಈಗ ಕಣ್ಣುಗಳು ತೆರೆದವು." ಎಂದರು. ಒಬ್ಬರೇ ಮನೆಯಲ್ಲಿ ಕುಳಿತಿರುತ್ತಾರೆ; ಯಾರಿಗೂ ಮೋರೆ ತೋರಿಸುವುದಿಲ್ಲ; ಅವರು ಇಲ್ಲಿಂದ ಓಡಿಹೋಗಬೇಕೆಂದು ಮಾಡಿದ್ದರಂತೆ; ದೊಡ್ಡ ಸಾಹೇಬರು ಹಾಗೆ ಮಾಡಿದರೆ ನಿಮ್ಮ ಮೇಲೆ ವಾರಂಟು ಜಾರಿ ಮಾಡಲಾಗುವುದು ಎಂದು ಹೇಳಿ ದರಂತೆ. ಈಗ ಸಾಈದಾಸರ ಬದಲು ಬಂಗಾಲಿ ಬಾಬು ಬ್ಯಾಂಕಿನ ಮ್ಯಾನೇಜರು.

ಇದಾದ ಬಳಿಕ ಕುವರ ಸಾಹೇಬರು ಬರಹಲಕ್ಕೆ ಹೋದರು. ಬಂಧು ಗಳು ಸಮಾಚಾರ ಕೇಳಿ, ರೇಗಿದರು; ಕೋರ್ಟಿನ ಬೆದರಿಕೆ ಹಾಕಿದರು.

ತಾಯಿಯವರಿಗೆ ದೊಡ್ಡ ಆಘಾತವಾಯಿತು; ಅಂದೇ ಅವರು ಬೇನೆ ಬಿದ್ದು ಒಂದು ವಾರದಲ್ಲಿ ಪ್ರಪಂಚದಿಂದ ಬೀಳ್ಕೊಂಡರು. ಸಾವಿತ್ರಿಗೂ ಪೆಟ್ಟಾಯಿತು. ಆದರೆ ಅವಳು ಬರೀ ಸಂತೋಷಪಡಲಿಲ್ಲ, ಗಂಡನ ಔದಾರ್ಯವನ್ನೂ ತ್ಯಾಗವನ್ನೂ ಪ್ರಶಂಸಿದಳು. ಉಳಿದವ ಲಾಲಸಾಹೇಬ. ಲಾಯದಿಂದ ಕುದುರೆಗಳು ಹೋಗುವುದು, ಆನೆಗಳು ಮುಕನಪುರದ ಜಾತ್ರೆಗೆ ಮಾರಾಟಕ್ಕೆ ತೆರಳುವುದು, ಬೋಯಿಗಳು ನಿರೋಪ ತಕ್ಕೊಳ್ಳುವುದು, ಎಲ್ಲವನ್ನೂ ನೋಡಿ ಅವನು ವ್ಯಾಕುಲನಾಗಿ ತಂದೆಯನ್ನು ಕೇಳಿದ:

" ಅಪ್ಪಾ, ಈ ಆಳು–ಮಂದಿ, ಆನೆ–ಕುದುರೆ ಎಲ್ಲಾ ಎಲ್ಲಿಗೆ ಹೋಗುತ್ತಿವೆ? "

" ಒಬ್ಬ ರಾಜರ ಉತ್ಸವಕ್ಕೆ. "

" ಯಾವ ರಾಜ ? "

" ಆತನ ಹೆಸರು ದೀನಸಿಂಹ. "

" ಎಲ್ಲಿ ಇರುತ್ತಾನೆ? "

" ದರಿದ್ರಪುರದಲ್ಲಿ. "

" ಹಾಗಾದರೆ ನಾವೂ ಹೊರಡೋಣ. "

" ನಿನ್ನನ್ನು ಕರೆದುಕೊಂಡು ಹೋಗುತ್ತೇನೆ. ಆದರೆ ಈ ನಿಬ್ಬಣದಲ್ಲಿ ಸವಾರರಿಗಿಂತ ನಡೆಯುವವರಿಗೇ ಸನ್ಮಾನ ಹೆಚ್ಚು. "

" ಹಾಗಾದರೆ ನಾವೂ ನಡೆಯೋಣ. "

" ಅಲ್ಲಿ ದುಡಿಯುವವರನ್ನು ಹೊಗಳುತ್ತಾರೆ. "

" ನಾವು ಎಲ್ಲರಿಗಿಂತ ಹೆಚ್ಚು ದುಡಿಯೋಣ. "

ಕುವರ ಸಾಹೇಬರ ಸೋದರರಿಬ್ಬರೂ ಐದೈದು ಸಾವಿರ ರೂಪಾಯಿ ವರ್ಷಾಶನ ತೆಗೆದುಕೊಂಡು ಬೇರೆಯಾದರು. ಉಳಿದ ಕುಟುಂಬಕ್ಕಾಗಿ ವರುಷಕ್ಕೆ ಒಂದು ಸಾವಿರ ರೂಪಾಯಿಯ ಏರ್ಪಾಡು ಕಷ್ಟದಿಂದ ಸಾಧ್ಯವಾಯಿತು. ಆದರೆ ಒಬ್ಬ ಶ್ರೀಮಂತನಿಗೆ ಆ ಆದಾಯ ಯಾವ ರೀತಿಯಿಂದಲೂ ಸಾಕಷ್ಟಾಗಿರಲಿಲ್ಲ. ಅತಿಥಿ ಅಭ್ಯಾಗತರು ನಿತ್ಯವೂ ಇರುತ್ತಿದ್ದರು; ಎಲ್ಲರನ್ನು ಸತ್ಕರಿಸಬೇಕಾಗುತ್ತಿತ್ತು. ಬಹಳ ಕಷ್ಟದಿಂದ ಸಾಗುತ್ತಿತ್ತು.

ಈಚೆಗೆ ಒಂದು ವರುಷದಿಂದ ಶಿವದಾಸನ ಕುಟುಂಬದ ಭಾರವೂ ಕುವರ ಸಾಹೇಬರ ಮ್ಯೆಮೇಲೆ ಬಿದ್ದಿತು. ಆದರೂ ಕುವರ ಸಾಹೇಬರು ತಮ್ಮ ನಿಶ್ಚಯಕ್ಕಾಗಿ ಎಂದೂ ದುಃಖಪಡಲಿಲ್ಲ. ಅವರು ಚಿಂತೆಯಲ್ಲಿರುವುದನ್ನು ಯಾರೂ ಕಾಣರು. ಅವರ ಮುಖಮಂಡಲ ಯಾವಾಗಲೂ ಧೈರ್ಯ ಮತ್ತು ನಿಜವಾದ ಅಭಿಮಾನದಿಂದ ಬೆಳಗುತ್ತಿರುತ್ತದೆ. ಈಗ ಮನಸು ತೋಟಗಾರಿಕೆಗೆ ಮೆಚ್ಚಿದೆ. ತಮ್ಮ ತೋಟದಲ್ಲಿ ಬೆಳಗಿಂದ ಸಂಜೆಯ ತನಕ ಗಿಡಬಳ್ಳಿಗಳ ಆರೈಕೆ ಮಾಡುತ್ತಾರೆ; ಲಾಲಾಸಾಹೇಬನಂತೂ ಥೇಟ ಒಕ್ಕಲಿಗ ನಾಗುವಂತೆ ಕಾಣುತ್ತಿದ್ದ. ಅವನ ವಯಸ್ಸು ಇನ್ನೂ ಒಂಬತ್ತು ಹತ್ತು ವರುಷದ ಮೇಲಿಲ್ಲ. ಚುಮುಂಚುಮು ನಸುಕಿನಲ್ಲಿಯೇ ಹೊಲಕ್ಕೆ ಹೋಗು ತ್ತಾನೆ; ಊಟ ತಿಂಡಿಯ ಅರಿವೂ ಇರುವುದಿಲ್ಲ.

ಅವನ ಕುದುರೆ ಇದೆ. ಆದರೆ ತಿಂಗಳಾನುತಿಂಗಳು ಅದನ್ನು ಏರುವು ದಿಲ್ಲ. ಅವನ ಒಲವನ್ನು ಕಂಡು ಕುವರ ಸಾಹೇಬರಿಗೆ ಹಿಗ್ಗು. "ರಾಜ್ಯದ ಭವಿಷ್ಯತ್ತಿನ ವಿಷಯದಲ್ಲಿ ನಾನು ನಿಶ್ಚಿಂತನಾಗಿದ್ದೇನೆ. ಲಾಲಸಾಹೇಬ ಈ ಪಾಠವನ್ನು ಎಂದೂ ಮರೆಯುವುದಿಲ್ಲ. ಗೃಹಸಂಪತ್ತಿ ಇದ್ದರೆ ಸುಖಭೋಗ, ಚೇಷ್ಟೆ, ದುರಾಚಾರಗಳ ಹೊರತು ಮತ್ತೇನು ಕಾಣುವುದು! ಸಂಪತ್ತಿಯನ್ನು ಮಾರಿ ಮಡಿತನವನ್ನೂ ಸಂತೋಷವನ್ನೂ ಕೊಂಡೆವು; ಈ ವ್ಯಾಪಾರ ಕೆಟ್ಟದಲ್ಲ." ಎನ್ನುತ್ತಾರೆ ಅವರು. ಸಾವಿತ್ರಿಗೆ ಇಷ್ಟು ಸಂತೋಷವಿಲ್ಲ. ಕುವರ ಸಾಹೇಬರು ಕೂಡದೆಂದರೂ ಒಕ್ಕಲುಗಳಿಂದ ಕಾಣಿಕೆ ತೆಗೆದುಕೊಳ್ಳುತ್ತಾಳೆ; ಮನೆತನದ ರೂಢಿಯನ್ನು ಮುರಿಯುವುದು ಅವಳಿಗೆ ಸೇರದು.

# ಸಭ್ಯತೆಯ ರಹಸ್ಯ



ನನಗಂತೂ ಜಗತ್ತಿನ ಸಾವಿರ ವಿಷಯಗಳ ಅರ್ಥವೇ ಆಗುವುದಿಲ್ಲ—ಜನರು ಮುಂಜಾನೆ ಎದ್ದ ಕೂಡಲೆ ಕೂದಲಮೇಲೆ ಕತ್ತಿ ಆಡಿಸುವುದು ಏಕೆ? ಕೂದಲ ಭಾರ ಸಹಿಸದಷ್ಟು ನಾಜೂಕಾಗಿಬಿಟ್ಟರೇ ಈಗ ಗಂಡಸರು? ಎಲ್ಲ ಸುಶಿಕ್ಷಿತ ಜನರ ಕಣ್ಣುಗಳೂ ಒಮ್ಮೆಲೆ ಇಷ್ಟು ಮಂದವಾಗಿಬಿಟ್ಟವೆ? ಮೆದುಳಿನ ದೌರ್ಬಲ್ಯವೇ ಇದಕ್ಕೆ ಕಾರಣವೋ ಅಥವಾ ಇನ್ನೇನಾದರೂ ಉಂಟೊ? ಬಿಸುದು ಬಾವಲಿಗಳಿಗೆ ಜನರ ಹಪಾಪಿ ಏಕೆ ಇಷ್ಟು? ಮುಂತಾಗಿ. ಆದರೆ ಈಗ ಈ ವಿಷಯಗಳ ವಿಚಾರ ನನಗೆ ಬೇಕಿಲ್ಲ. ನನ್ನ ಮನಸಿನಲ್ಲಿ ಒಂದು ಹೊಸ ಪ್ರಶ್ನೆ ಏಳುತ್ತಿದೆ; ಅದಕ್ಕೆ ಉತ್ತರ ಯಾರೂ ಕೊಡಲೊಲ್ಲರು. ಸಭ್ಯರು ಯಾರು, ಅಸಭ್ಯರು ಯಾರು, ಎಂಬುದೇ ಆ ಪ್ರಶ್ನೆ. ಸಭ್ಯತೆಯ ಲಕ್ಷಣಗಳು ಯಾವವು? ಮೇಲೆ ಮೇಲೆ ನೋಡಿದರೆ, ಇದಕ್ಕಿಂತಲೂ ಹಗುರಾದ ಪ್ರಶ್ನೆಯೇ ಯಾವುದಿಲ್ಲ; ಸಣ್ಣ ಹುಡುಗರೂ ಇದಕ್ಕೆ ಉತ್ತರ ಹೇಳಬಲ್ಲರು. ಆದರೆ ತುಸ ಲಕ್ಷ್ಯಗೊಟ್ಟು ನೋಡಿದರೆ, ಈ ಪ್ರಶ್ನೆ ಹಗುರಾಗಿ ಕಾಣುವುದಿಲ್ಲ. ಕೋಟು ಪಾಟಲೂನು ಧರಿಸುವುದು, ಹ್ಯಾಟು, ಟಾಯಿ, ಕಾಲರು ಇಟ್ಟುಕೊಳ್ಳುವುದು, ಮೇಜಿನ ಮೇಲೆ ಊಟ ಮಾಡುವುದು, ದಿನದಲ್ಲಿ ಹದಿಮೂರು ಸಲ ಕೋಕೋ ಇಲ್ಲವೆ ಚಹ ಕುಡಿಯುವುದು, ಸಿಗಾರು ಸೇದುತ್ತ ಬೀದಿಯಲ್ಲಿ ತಿರುಗುವುದು ಸಭ್ಯತೆ ಎಂದು ಹೇಳುವುದಾದರೆ, ಸಂಜೆಯಮುಂದೆ ಬೀದಿಯಲ್ಲಿ ಅಡ್ಡಾಡುವ ಬಿಳಿಯರನ್ನು ಕಾಣುತ್ತೇವಲ್ಲ—ಸೆರೆಯ ಅಮಲಿನಿಂದ ಕೆಂಪು ಲಾಲಾದ ಕಣ್ಣುಗಳು, ಎಳೆದೆಳೆದು ಹಾಕುವ ಕಾಲುಗಳು, ಹಾದಿ ಹೋಗುವವರನ್ನು ಎಗ್ಗಿಲ್ಲದೆ ಕೆಣಕುವ ಉನ್ಮಾದ—ಅವರನ್ನೂ ಸಭ್ಯರೆಂದು ಎಣಿಸಬೇಕಾಗುವುದು. ಎನ್ನಬಹುದೇನು ಅವರಿಗೆ ಸಭ್ಯರೆಂದು? ಎಂದೂ ಇಲ್ಲ. ಎಂದರೆ ಸಭ್ಯತೆ ಎಂಬುದು

ಬೇರೆ ಯಾವುದೋ ಒಂದು ವಸ್ತುವಿದೆ ಎಂದ ಹಾಗಾಯಿತು; ಅದರ ಸಂಬಂಧ ಮನಸಿನೊಡನೆ ಇರುವಷ್ಟು ದೇಹದೊಡನೆ ಇಲ್ಲ.

೨

ನನ್ನ ಕೆಲವೇ ಗೆಳೆಯರಲ್ಲಿ ರಾಯ ರತನಕಿಶೋರರೂ ಒಬ್ಬರು. ಅವರು ಅತ್ಯಂತ ಸಹೃದಯರು, ಬಹಳ ಉದಾರರು, ಅತಿಶಯ ಸುಶಿಕ್ಷಿತರು, ಒಂದು ದೊಡ್ಡ ಹುದ್ದೆಯಲ್ಲಿ ಇದ್ದವರು. ವೇತನ ಚೆನ್ನಾಗಿ ಬರುತ್ತಿದ್ದರೂ ಅವರ ಉತ್ಪನ್ನ ವೆಚ್ಚಕ್ಕೆ ಸಾಕಷ್ಟು ಆಗುತ್ತಿರಲಿಲ್ಲ. ಕಾಲು ಪಾಲು ಸಂಬಳವನ್ನು ಬಂಗಲೆಯೇ ತಿನ್ನುವುದು. ಆದುದರಿಂದ ಅವರು ಬಹಳಮಟ್ಟಿಗೆ ಚಿಂತೆಯಲ್ಲಿಯೇ ಇರುವರು. ಲಂಚವನ್ನಂತೂ ತೆಗೆದುಕೊಳ್ಳುವುದಿಲ್ಲ—ಕನಿಷ್ಟ ಪಕ್ಷಕ್ಕೆ ನನಗೆ ಗೊತ್ತಿಲ್ಲ, ಆದರೂನು ಎನ್ನುವವರು ಎನ್ನುತ್ತಾರೆ—ಆದರೆ ಭತ್ತೆಯನ್ನು ಹೆಚ್ಚಿಸುವುದಕ್ಕಾಗಿ ಅವರು ಹೆಚ್ಚಾಗಿ ಸಂಚಾರದಲ್ಲಿರುತ್ತಾರೆ ಎಂಬುದನ್ನು ಮಾತ್ರ ನಾನು ಬಲ್ಲೆ. ಅದಕ್ಕಾಗಿ ಪ್ರತಿ ವರುಷವೂ ಮುಂಗಡ ಪತ್ರಿಕೆಯಲ್ಲಿಯ ಬೇರೆ ಯಾವುದೊಂದು ಬಾಬಿನಿಂದ ಹಣ ತೆಗೆದುಕೊಳ್ಳಬೇಕಾಗುತ್ತದೆ. ಅವರ ಆಫೀಸರು 'ಸಂಚಾರ ಇಷ್ಟೇಕೆ ಮಾಡುತ್ತೀರಿ' ಎಂದು ಕೇಳಿದರೆ ಹೇಳುತ್ತಾರೆ: 'ಈ ಜಿಲ್ಲೆಯ ಕೆಲಸವೇ ಹೀಗಿದೆ; ಮೇಲಿಂದ ಮೇಲೆ ಸಂಚರಿಸದೆ ಬಿಟ್ಟರೆ ಪ್ರಜೆಗಳು ಶಾಂತರಾಗಿರುವುದೇ ಇಲ್ಲ.' ಆದರೆ ಒಂದು ಮೋಜೆಂದರೆ ರಾಯಸಾಹೇಬರು ವಾಸ್ತವವಾಗಿ ಅಷ್ಟು—ತಮ್ಮ ದಿನಚರಿಯಲ್ಲಿ ಬರೆದಿರುವಷ್ಟು—ಸಂಚಾರ ಮಾಡುವುದಿಲ್ಲ. ಅವರ ಬೀಡಾರ ಇರುತ್ತದೆ, ನಗರದಿಂದ ಐವತ್ತು ಮೈಲು ದೂರದಲ್ಲಿ; ಅಲ್ಲಿ ಗೂಡಾರ ಹೊಡೆದಿರುತ್ತಾರೆ, ಕ್ಯಾಂಪಿನ ಅಧಿಕಾರಿಗಳು ಅಲ್ಲಿ ಬಿದ್ದಿರುತ್ತಾರೆ; ರಾಯಸಾಹೇಬರು ತಮ್ಮ ಮಿತ್ರರೊಡನೆ ಹರಟೆಯಲ್ಲಿ ತೊಡಗಿರುತ್ತಾರೆ ಮನೆಯಲ್ಲಿ. ಆದರೆ ರಾಯಸಾಹೇಬರ ಪ್ರಾಮಾಣಿಕತನದ ಬಗ್ಗೆ ಸಂದೇಹಪಡುವ ಶಕ್ತಿ ಯಾರಿಗುಂಟು! ಅವರು ಸಭ್ಯ ಪುರುಷರೆಂಬುದರಲ್ಲಿ ಯಾರಿಗೂ ಶಂಕೆ ಬರುವುದು ಸಾಧ್ಯವಿಲ್ಲ.

ನಾನು ಅವರನ್ನು ಕಾಣಲು ಹೋದೆ ಒಂದು ದಿನ. ಆಗ ಅವರು ತಮ್ಮ ಆಳುಮಗ ದಮಡಿಯನ್ನು ಗದರಿಸುತ್ತಿದ್ದರು. ದಮಡಿ ಹಗಲೂ

ಇರುಳೂ ಸೇವಿಸುವ ಆಳು. ರೊಟ್ಟಿ ತಿಂದು ಬರಲು ಮಾತ್ರ ಮನೆಗೆ ಹೋಗು ತ್ತಿದ್ದ. ಅವನ ಮನೆ ಇರುವುದು ಹತ್ತಿರದ ಒಂದು ಹಳ್ಳಿಯಲ್ಲಿ. ನಿನ್ನೆ ರಾತ್ರಿ ಏನೋ ಕಾರಣದಿಂದ ಇಲ್ಲಿಗೆ ತಿರುಗಿ ಬರಲಾಗಲಿಲ್ಲ. ಅದಕ್ಕಾಗಿ ಗದರಿಕೆಗೆ ಗುರಿಯಾಗಿದ್ದ.

"ನಿನ್ನನು ಹಗಲು ರಾತ್ರಿ ಎಂದು ಹೇಳಿ ನಾವು ಇಟ್ಟುಕೊಂಡಿರಲಿಕ್ಕೇ ನೀನು ಊರೊಳಗೇ ಏಕೆ ಇದ್ದುಬಿಟ್ಟೆ? ನಿನ್ನಿನ ಸಂಬಳ ಮುರಿದುಬಿಡು ತ್ತೇನೆ." ಎಂದರು ರಾಯಸಾಹೇಬರು.

"ಒಬ್ಬರು ಊರಿಂದ ಬಂದಿದ್ದರು ಹುಜೂರ, ಅದಕ್ಕೆ ಬರಾಣಾಗ ಲಿಲ್ಲ."

"ಹಾಗಾದರೆ ನಿನ್ನಿನ ಪಗಾರ ಅವರಿಂದಲೇ ತೆಗೆದುಕೋ."

"ಇಂತಾ ತೆಪ್ಪು ಇನ್ನೆಂದೂ ಆಗಾಣಿಲ್ಲ ಸರಕಾರ!"

"ಸಾಕು, ಲಡಬಡ ಹಚ್ಚಬೇಡ"

"ಸ್ವಾಮೀ........"

"ಎರಡು ರೂಪಾಯಿ ದಂಡ!"

ದಮಡಿ ಅಳುತ್ತ ಹೋದ. ನಮಾಜು ಮಾಡಲಿಕ್ಕೆ ಹೋಗಿ ಮಸೀದೆ ಕೊರಳಿಗೆ ಬಿತ್ತು. ಎರಡು ರೂಪಾಯಿಯ ದಂಡ ಬಿದ್ದಿತು. ಅಪರಾಧ ಇಷ್ಟೇ—ಪಾಪ, ತನ್ನ ದೋಷಕ್ಕೆ ಕ್ಷಮೆ ದೊರಕಿಸಲು ಧಡಪಡಿಸಿದ.

ಒಂದು ರಾತ್ರಿ ಬಾರದಿದ್ದುದಕ್ಕೆ ಈ ಶಿಕ್ಷೆ. ಬಡಪಾಯಿ. ಇಡೀ ಹಗಲು ಕೆಲಸ ಮಾಡಿದ್ದ, ಇರುಳು ಇಲ್ಲಿ ಮಲಗಲಿಲ್ಲ; ಅದಕ್ಕಾಗಿ ಈ ದಂಡ! ಆದರೆ ಮನೆಯೊಳಗೆ ಕುಳಿತು ಭತ್ತೆ ಕೆತ್ತುವವರನ್ನು ಯಾರೂ ಕೇಳುವವರಿಲ್ಲವೆ? ದಂಡಿಸುವವರಿಲ್ಲವೆ? ದಂಡವೇನೋ ಆಗುವುದು—ಇಡೀ ಜನ್ಮದಲ್ಲಿ ನೆನಪು ಳಿಯುವಂತೆ ಆಗುವುದು. ಆದರೆ ಹಿಡಿಯುವುದೇ ಕಷ್ಟ. ದಮಡಿಯೂ ಕೊಂಚ ಜಾಣನಾಗಿದ್ದರೆ, ಸ್ವಲ್ಪ ರಾತ್ರಿ ಇರುವಾಗಲೇ ಬಂದು ಮಲಗಿಬಿಡು ತ್ತಿದ್ದ. ಅವನು ರಾತ್ರಿ ಎಲ್ಲಿದ್ದ ಎಂಬುದು ತಿಳಿಯುತ್ತಿತ್ತು ಯಾರಿಗೆ? ಆದರೆ ಅಂತಹ ಧೂರ್ತನಲ್ಲ ದಮಡಿ.

೩

ದಮುಡಿಗಿದ್ದ ಸೊತ್ತೆಂದರೆ ಒಟ್ಟು ಆರು ಬಿಸ್ವೆ* ಭೂಮಿ ! ಆದರೆ ಇಷ್ಟೇ ಪ್ರಾಣಿಗಳ ವೆಚ್ಚವೂ ಇತ್ತು. ಅವನ ಹೆಂಡತಿ, ಇಬ್ಬರು ಗಂಡು ಮಕ್ಕಳು, ಇಬ್ಬರು ಹೆಣ್ಣು ಮಕ್ಕಳು. ಎಲ್ಲರೂ ಒಕ್ಕಲುತನದಲ್ಲಿ ತೊಡಗಿರುತ್ತಿದ್ದರು. ಆದರೂ ಹೊಟ್ಟೆಗೆ ರೊಟ್ಟಿ ದೊರೆಯುತ್ತಿರಲಿಲ್ಲ. ಇಷ್ಟು ಭೂಮಿಯೇನು ಬಂಗಾರದ ಬೆಳೆ ಕೊಡುವುದೆ? ಒಂದು ವೇಳೆ ಅವರೆಲ್ಲರೂ ಮನೆಯ ಹೊರಗೆ ಹೋಗಿ ಕೂಲಿ ಕೆಲಸಕ್ಕೆ ಸೇರಿದ್ದರೆ ಸುಖವಾಗಿ ಬಾಳಬಹುದಿತ್ತು. ಆದರೆ ವಂಶಪರಂಪರೆಯಾಗಿ ಒಕ್ಕಲಿಗನಾದವನು ಕೂಲಿಕಾರ ಎಂದೆನಿಸಿಕೊಳ್ಳುವುದು ಮಾನಗೇಡು; ಅದು ಅವನಿಗೆ ಅಸಹ್ಯ. ಆ ಕಲಂಕದಿಂದ ಉಳಿದುಕೊಳ್ಳುವು ದಕ್ಕಾಗಿ ಎತ್ತಿನ ಜೋಡಿಯನ್ನು ಇಟ್ಟಿದ್ದ. ಅವನ ವೇತನದ ಬಹ್ವಂಶ ಹೊಟ್ಟು ಮೇವಿಗೇ ವ್ಯಯವಾಗುತ್ತಿತ್ತು. ಇವೆಲ್ಲ ಕಷ್ಟಗಳನ್ನೂ ವರಿಸಿಯಾನು ಒಕ್ಕಲತನ ಬಿಟ್ಟು ಕೂಲಿಯಾಳಾಗುವುದನ್ನು ಒಪ್ಪಲಾರ, ಎಂದಿಗೂ. ಕೃಷಿಕ ನಿಗೆ ಇರುವ ಪ್ರತಿಷ್ಠೆ ಕೂಲಿಕಾರನಿಗೆ ಬಂದೀತೇ ಎಲ್ಲಿಯಾದರೂ—ಅವನು ದಿನದಿನವೂ ಹಣ ತರಲೊಲ್ಲನೇಕೆ ಬೇಕಾದರೆ ? ಒಕ್ಕಲುತನದ ಜೊತೆಯಲ್ಲಿ ಕೂಲಿ ಮಾಡುವುದು ಅಷ್ಟು ಅಪಮಾನದ ಸಂಗತಿಯಲ್ಲ. ಬಾಗಿಲಲ್ಲಿ ಕಟ್ಟಿದ್ದ ಎತ್ತುಗಳು ಅವನ ಮಾನ ಕಾಯುತ್ತಿವೆ. ಅವನ್ನು ಮಾರಿಬಿಟ್ಟರೆ ಮೋರೆ ತೋರಿಸಲು ಎಲ್ಲಿಯಾದರೂ ಸಿಕ್ಕೀತೇನು ಸ್ಥಳ !

ಒಂದು ದಿನ ಅವನು ಚಳಿಯಿಂದ ನಡುಗುತ್ತಿದ್ದ. ಅದನ್ನು ನೋಡಿ ರಾಯಸಾಹೇಬರೆಂದರು—" ಅರಿವೆ ಏಕೆ ಹೊಲಿಸಿಕೊಳ್ಳುವುದಿಲ್ಲ, ಏಕೆ ನಡು ಗುತ್ತೀ ? "

" ಸರಕಾರ, ಹೊಟ್ಟೆಗೆ ರೊಟ್ಟಿಯೂ ಪೂರಾ ಸಿಕ್ಕೋದಿಲ್ಲ. ಎಲ್ಲಿಂದ ಹೊಲಿಸಲಿ ಅರಿವಿ ? "

" ಎತ್ತುಗಳನ್ನು ಮಾರಿಬಿಡಬಾರದೇಕೆ ? ನಿನಗೆ ನೂರು ಸಲ ಹೇಳಿ ದ್ದೇನೆ. ಆದರೆ ಇಷ್ಟು ನಿಚ್ಚಳ ಮಾತು ನಿನಗೆ ತಿಳಿಯಲೊಲ್ಲದು. "

* ಬಿಸ್ವೆ = ಭಿಗೆಯ ೨೦ನೆಯ ಭಾಗ

"ನೆಂಟರಾಗ ಬಳಗದಾಗ ಮಕಾ ತೋರಸದಾಂಗ ಆಕ್ತಯ್ತಿ, ಸರಕಾರ! ಹುಡಗೀ ಮದವಿ ಸಂಬಂದಾನೂ ಆಗಾಣಿಲ್ಲ. ದೈವದನರು ಎತ್ತಿಟ್ಟುಬಿಡ ತಾರು ನನ್ನ."

"ಇದೇ ದಡ್ಡತನದಿಂದ ನೀವೆಲ್ಲಾ ಹಾಳಾಗಿ ಈ ಗತಿಗೆ ಬಂದದ್ದು. ಇಂಥ ಜನರಿಗೆ ದಯಾ ತೋರಿಸುವುದೂ ಪಾಪ." ಎಂದು ನನ್ನ ಕಡೆ ನೋಡಿ ರಾಯರೆಂದರು, "ಏನು ಮುನ್ಷಿಯವರೇ, ಈ ಹುಚ್ಚಿಗೂ ಏನಾದರೂ ಮದ್ದು ಇದೆಯೊ? ತಂಡಿಯೊಳಗೆ ನಡುಗಿ ಸಾಯುತ್ತಾರೆ, ಆದರೂ ಬಾಗಿಲಲ್ಲಿ ಎತ್ತು ಕಟ್ಟುವವರೇ!"

"ಸಾಹೇಬ, ಇದು ಅವರವರ ಭಾವನೆ," ಎಂದು ನಾನೆಂದೆ.

"ಇಂತಹ ಕಲ್ಪನೆಗೆ ದೂರದಿಂದ ಶರಣೆನ್ನಿರಿ. ನಮ್ಮಲ್ಲಿ ಎಷ್ಟೋ ತಲೆಮಾರುಗಳಿಂದ ಜನ್ಮಾಷ್ಟಮಿಯ ಉತ್ಸವ ನಡೆಯುತ್ತಿತ್ತು. ಎಷ್ಟೋ ಸಾವಿರ ರೂಪಾಯಿಗಳ ಮೇಲೆ ನೀರು ಬಿಡಬೇಕಾಗುತ್ತಿತ್ತು. ಬಳಗದವರನ್ನೆಲ್ಲ ಕರೆಸುತ್ತಿತ್ತು, ಭೋಜನ ಸಮಾರಂಭ ಜರಗುತ್ತಿತ್ತು, ಬಡವರಿಗೆ ಬಟ್ಟೆ ಹಂಚುತ್ತಿತ್ತು, ಗಾಯನ ನಡೆಯುತ್ತಿತ್ತು. ತಂದೆಯವರ ತರುವಾಯ ನಾನು ಮೊದಲನೆಯ ವರುಷವೇ ಅದನ್ನು ನಿಲ್ಲಿಸಿಬಿಟ್ಟೆ. ಏನು ಲಾಭ? ಏನೂ ಇಲ್ಲದೆ ಸುಮ್ಮನೆ ನಾಲ್ಕೈದು ಸಾವಿರ ರೂಪಾಯಿಗಳ ಪೆಟ್ಟು ಬೀಳುತ್ತಿತ್ತು. ಸುತ್ತಮುತ್ತಲೂ ಗಲಿಬಿಲಿ ಉಂಟಾಯಿತು, ಜನರು ಆಡಿಕೊಂಡರು, ಅನೇಕರು ನಾಸ್ತಿಕ ಎಂದರು, ಅನೇಕರು ಈಸಾಯಿ ಎಂದರು, ಯಾವುದನ್ನೂ ಲೆಕ್ಕಿಸಲಿಲ್ಲ ನಾನು. ಕೊನೆಗೆ ಕೆಲದಿನಗಳಲ್ಲಿ ಕೋಲಾಹಲ ಶಾಂತವಾಯಿತು. ಬಹಳ ಕುಚೋದ್ಯ ನಡೆಯುತಿತ್ತಯ್ಯ. ಯಾರಲ್ಲಿಯೇ ಮದುವೆಯಾಗಲಿ, ಕಟ್ಟಿಗೆ ನಮ್ಮಲ್ಲಿಂದಲೇ ಒಯ್ಯಬೇಕು. ಎಂದಿನಿಂದಲೋ ನಡೆದುಬಂದಿತ್ತು ಈ ವಾಡಿಕೆ. ತಂದೆಯವರು ಎರಡನೆಯವರಿಂದ ಮರ ಕೊಂಡು ಈ ರೂಢಿಯನ್ನು ನಡೆಸುತ್ತಿದ್ದರು. ದಡ್ಡತನ ಎನ್ನಬೇಕೋ ಎನ್ನಬಾರದೋ? ನಾನು ಕಟ್ಟಿಗೆ ಕೊಡುವುದನ್ನು ತಕ್ಷಣ ನಿಲ್ಲಿಸಿಬಿಟ್ಟೆ. ಇದಕ್ಕೂ ಜನ ಗೋಳಿಟ್ಟರು, ದೂರಿಕೊಂಡರು. ಆದರೆ ಮುಂದಿಯ ಅಳು-ಗೋಳು ನೋಡಲೇ, ನನ್ನ ಲಾಭ ನೋಡಲೇ? ಕಟ್ಟಿಗೆಯಿಂದಲೇ ಏನಿಲ್ಲೆಂದರೂ ವರುಷಕ್ಕೆ ೫೦೦

ರೂಪಾಯಿಗಳ ಉಳಿತಾಯವಾಯಿತು. ಈಗ ತಪ್ಪಿಕೂಡ ಈ ವಸ್ತುವಿಗಾಗಿ ನನ್ನನ್ನು ಕಾಡಲು ಬರುವುದಿಲ್ಲ."

ನನ್ನ ಮನಸ್ಸಿನಲ್ಲಿ ಮತ್ತೆ ಪ್ರಶ್ನೆ ಎದ್ದಿತು. ಇಬ್ಬರೊಳಗೆ ಯಾರು ಸಭ್ಯರು? ಕುಲಪ್ರತಿಷ್ಠೆಗಾಗಿ ಪ್ರಾಣಕೊಡುವ ಮೂರ್ಖ ದಮಡಿಯೋ? ಧನಕ್ಕಾಗಿ ಕುಲದ ಮರ್ಯಾದೆಯನ್ನು ಬಲಿ ಕೊಡುವ ರಾಯ ರತನ ಕಿಶೋರರೋ?

೪

ರಾಯ ಸಾಹೇಬರ ಕೋರ್ಟಿನಲ್ಲಿ ಒಂದು ದೊಡ್ಡ ಮೊಕದ್ದಮೆ ಬಂದಿತ್ತು. ನಗರದ ಒಬ್ಬ ಶ್ರೀಮಂತ ಕೊಲೆಯ ಪ್ರಕರಣದಲ್ಲಿ ಸಿಕ್ಕು ಬಿದ್ದಿದ್ದ. ಅವನ ಜಾಮೀನು ಸ್ವೀಕರಿಸುವುದಕ್ಕಾಗಿ ರಾಯ ಸಾಹೇಬರ ಮನ ವೊಲಿಸುವ ಪ್ರಯತ್ನ ನಡೆದಿತ್ತು. ಮರ್ಯಾದೆಯ ಪ್ರಶ್ನೆಯಿತ್ತು. ತನ್ನ ಭೂಮಿಕಾಣಿ ಎಲ್ಲವೂ ಮಾರಿಹೋಗಲಿ, ಈ ಮೊಕದ್ದಮೆಯಿಂದ ನಿಷ್ಕಲಂಕ ವಾಗಿ ಹೊರಬೀಳುವಂತಾಗಲಿ ಎಂದು ಆ ಶ್ರೀಮಂತನ ಅಪ್ಪಣೆಯಾಗಿತ್ತು. ಕಾಣಿಕೆಗಳನ್ನು ಸಾರಲಾಯಿತು. ವಸೀಲಿ ಹಚ್ಚಲಾಯಿತು. ರಾಯ ಮಹಾಶಯರ ಮೇಲೆ ಯಾವ ಪರಿಣಾಮವೂ ಆಗಲಿಲ್ಲ; ಬಾಯಿಬಿಚ್ಚಿ ಲಂಚದ ಮಾತನಾಡಲು ಶ್ರೀಮಂತನ ಜನಗಳಿಗೆ ಧೈರ್ಯ ಸಾಲುತ್ತಿರಲಿಲ್ಲ. ಯಾವ ಉಪಾಯವೂ ನಡೆಯದಿರಲು ಕೊನೆಗೆ ಶ್ರೀಮಂತನ ಹೆಂಡತಿ ರಾಯರ ಹೆಂಡತಿಯನ್ನು ಸಂದರ್ಶಿಸಿ ವ್ಯಾಪಾರ ಹೊಂದಿಸಬೇಕೆಂದು ಗೊತ್ತಾಯಿತು.

ರಾತ್ರಿ ೧೦ ಹೊಡೆದಿತ್ತು. ಇಬ್ಬರು ಹೆಂಗುಸರಲ್ಲಿಯೂ ಮಾತುಕತೆ ನಡೆಯಿತು. ಇಪ್ಪತ್ತು ಸಾವಿರದ ಮಾತಿತ್ತು. ರಾಯಸಾಹೇಬರ ಹೆಂಡತಿಗೆ ಹಿಡಿಸಲಾರದ ಹಿಗ್ಗು. ಅವಳು ಆಗಿಂದಾಗ ಗಂಡನ ಕಡೆಗೆ ಧಾವಿಸಿದಳು.

"ತಗೋಳ್ರಿ ತಗೋಳ್ರಿ. ನೀವು ತಗೋದಿದ್ದರೆ ನಾ ತಗೋತೀನಿ" ಎಂದು ಹೇಳಿದಳು.

"ಇಷ್ಟು ಆತುರ ಪಡಬೇಡ. ಅವರು ನಿನ್ನ ಬಗ್ಗೆ ಮನಸಿನಲ್ಲಿ ಏನು ತಿಳಕೊಂಡಾರು? ನಮ್ಮ ಮರ್ಯಾದೆಯು ಸ್ಮೃತಿಯಾದರೂ ನಮಗೆ ಇರ ಬೇಡವೆ? ಗಂಟು ದೊಡ್ಡದೇ ನಾ ಒಪ್ಪುತ್ತೇನೆ; ಇದರಿಂದ ನಾನು ನಿನ್ನ

ಆರ್ಡರುಗಳಿಂದ ಒಮ್ಮೆಲೆ ಮುಕ್ತನಾಗುತ್ತೇನೆ. ಆದರೆ ಒಬ್ಬ ಸಿವಿಲಿಯನ್ನನ ಮರ್ಯಾದೆಯೇನೂ ಮಾಮೂಲಿಯ ಮಾತಲ್ಲ. ನೀನು ಮೊದಲಿಗೇ, 'ನನ್ನ ಜೊತೆ ಇಂಥ ಅಭದ್ರ ಮಾತನಾಡುವುದಿದ್ದರೆ ಈಗಳೇ ಹೊರಟುಹೋಗಿರಿ; ಇದನ್ನೆಲ್ಲ ನಾನು ಕಿವಿಯಿಂದ ಕೇಳಲಾರೆ,' ಎಂದು ಸ್ವಲ್ಪ ಕೊಡವಿ ಮಾತ ನಾಡಬೇಕಿತ್ತು." ರಾಯ ಮಹಾಶಯರು ಉತ್ತರವಿತ್ತರು.

"ಹೀಗೆ ನಾ ಮೊದಲೇ ಮಾಡಿದ್ದೇನೆ. ಸಿಟ್ಟಿನಿಂದ ಏನಂಬೋದು ಎಲ್ಲಾ ಅಂದೆ. ಏಕೆ, ನನಗಿಷ್ಟು ತಿಳಿಯೋದಿಲ್ಲವೆ? ಆದರೆ ಪಾಪ, ಅವರು ನನ್ನ ಕಾಲಮೇಲೆ ಬಿದ್ದು ಅಳಹತ್ತಿದರು."

"ಅಲ್ಲ, ರಾಯಸಾಹೇಬರಿಗೆ ಹೇಳುತ್ತೇನೆ ಎಂದಿದ್ದರೆ ನಿನ್ನನ್ನು ಹಾಗೇ ಹರಿದು ತಿನ್ನುತ್ತಿದ್ದರೆ?"

ಎಂದೆನ್ನುತ್ತ ರಾಯ ಸಾಹೇಬರು ಗದ್ಗದರಾಗಿ ಹೆಂಡತಿಯನ್ನು ಎದೆ ಗವಚಿಕೊಂಡರು.

"ಹೇಳೋದರಾಗ ನಾನೇನೂ ಉಳಿಸಿಲ್ಲರಿ, ಇಂಥಾ ಮಾತು ಎಷ್ಟೋ ಹೇಳಿದೆ. ಆದರೆ ಎಷ್ಟು ಬಗೀಲೆ ಹಾರಿಸಿಕೊಂಡರೂ ನಡೀಲಿಲ್ಲ. ಅತ್ತು ಪ್ರಾಣ ಕೊಡಲಿಕ್ಕೆ ಹತ್ಯಾಳ." ಎಂದು ಹೆಂಡತಿ ನುಡಿದಳು.

"ಅವರ ಕೂಡ ಕರಾರೇನು ಮಾಡಿಕೊಂಡಿಲ್ಲ ತಾನೆ?"

"ಕರಾರು? ರೂಪಾಯಂತೂ ತಗೊಂಡು ಸಂದಕದಾಗ ಇಟ್ಟು ಬಂದೀನಿ. ನೋಟಿದ್ದವು."

"ಎಂಥ ಹಸೀ ದಡ್ಡಿ ನೀನು! ದೇವರು ಎಂದಿಗಾದರೂ ನಿನಗೆ ಬುದ್ಧಿ ಕೊಡುತ್ತಾನೋ ಏನು ಇಲ್ಲವೇ ಇಲ್ಲವೂ ಅಂತೀನಿ."

"ಇನ್ನೇನು ಕೊಡುತ್ತಾನೆ, ಕೊಡೋದಿದ್ದರೆ ಕೊಡದೆ ಬಿಡುತಿದ್ದ ನ್ಯಾಕೆ?"

"ಹೌದು, ಹಾಗೇ ಅನಿಸುತ್ತದೆ. ನನಗೆ ಒಂದು ಮಾತು ತಿಳಿಸಲಿಲ್ಲ ಕೂಡ, ರೂಪಾಯಿ ತಕ್ಕೊಂಡು ಸಂದುಕದಲ್ಲಿ ಹಾಕಿಬಿಟ್ಟೆ! ಒಂದು ವೇಳೆ, ಯಾವುದೇ ಬಗೆಯಿಂದು ವಿಷಯ ಬಯಲಿಗೆ ಬಿದ್ದರೆ, ಉಳಿಗಾಲವೇ ಇಲ್ಲ!"

"ಹಾಂಗಿದ್ದರೆ ವಿಚಾರ ಮಾಡಿರಿ. ಏನಾದರೂ ಗಡಿಬಿಡಿಯಾದರೆ ನಾನು ಹೋಗಿ ರೂಪಾಯಿ ತಿರುಗಿ ಕೊಟ್ಟುಬಿಡುತ್ತೇನೆ."

"ಸರಿ, ಮತ್ತೆ ಅದೇ ಮೂರ್ಖತನ! ಅಲ್ಲೇ, ಈಗ ಆಗುವುದಂತೂ ಆಗಿಬಿಟ್ಟಿದೆ. ದೇವರ ಮೇಲೆ ಭಾರ ಹಾಕಿ ಜಾಮೀನು ತೆಗೆದುಕೊಳ್ಳ ಬೇಕಾಗುತ್ತದೆ. ಈ ಕೆಲಸ ಎಂದರೆ ಹಾವಿನ ಬಾಯೊಳಗೆ ಬೆರಳಿಟ್ಟ ಹಾಗೆ, ಬಲ್ಲೆಯಾ? ಇಂಥ ವಿಷಯಗಳೆಂದರೆ ನನಗೆಷ್ಟು ಜಿಗುಪ್ಸೆ ಎಂಬುದು ಗೊತ್ತಿದ್ದು ಎಂಥ ಗಡಿಬಿಡಿ ಮಾಡುತ್ತೀ ನೋಡು ನೀನು. ಈಗ ನಿನ್ನ ಮೂರ್ಖತನಕ್ಕಾಗಿ ನನ್ನ ವ್ರತ ಭಂಗವಾಗುತ್ತಿದೆ. ಈ ಪ್ರಕರಣದಲ್ಲಿ ನಾನು ಕೈಹಾಕಬಾರದೆಂದು ಮನಸಿನಲ್ಲಿ ನಿಶ್ಚಯವನ್ನೇ ಮಾಡಿದ್ದೆ. ಆದರೆ ನಿನ್ನ ದಡ್ಡತನದಿಂದ ನನ್ನದೊಂದೂ ನಿಲ್ಲುವಂತಿಲ್ಲ."

"ನಾ ಹೋಗಿ ತಿರುಗಿ ಕೊಟ್ಟುಬಿಡುತ್ತೇನೆ."

"ಮತ್ತೆ ನಾನು ಹೋಗಿ ವಿಷ ತೆಗೆದುಕೊಳ್ಳುತ್ತೇನೆ."

ಇಲ್ಲಿ ಗಂಡಹೆಂಡಿರಲ್ಲಿ ಈ ಅಭಿನಯ ನಡೆದಿರುವಾಗ, ಅಲ್ಲಿ ದಮಡಿ, ತಮ್ಮೂರಿನ ಧನಿಯರ ಹೊಲದಲ್ಲಿ ಜೋಳ ಕೊಯ್ಯುತ್ತಲಿದ್ದ. ಅಂದು ಇಡೀ ರಾತ್ರಿಯ ರಜೆ ಪಡೆದುಕೊಂಡು ಅವನು ಹೋಗಿದ್ದ. ಎತ್ತುಗಳಿಗೆ ಒಂದು ಗಣಿಕೆ ಮೇವೂ ಇರಲಿಲ್ಲ. ವೇತನ ಬರುವುದಕ್ಕೆ ಇನ್ನೂ ಬಹಳದಿನ ವಿತ್ತು, ಕೊಂಡುಕೊಳ್ಳುವುದು ಸಾಧ್ಯವಿರಲಿಲ್ಲ. ಹಗಲು ಹೊತ್ತು ಮನೆಯ ವರು ಎಲ್ಲೆಲ್ಲಿಯೋ ಸ್ವಲ್ಪ ಹುಲ್ಲು ಕೊಯ್ದು ತರುತ್ತಿದ್ದರೇನೋ ನಿಜ; ಆದರೆ ಒಂಟೆಯ ಬಾಯಿಗೆ ಜೀರಿಗೆ. ಅಷ್ಟು ಹುಲ್ಲು ಏತಕ್ಕೆ ಹತ್ತಬೇಕು? ಎರಡೂ ಎತ್ತುಗಳು ಹಸಿದು ನಿಂತಿರುತ್ತಿದ್ದವು. ದಮಡಿಯನ್ನು ಕಂಡೊಡನೆ ಎರಡೂ ಬಾಲವನ್ನೆತ್ತಿ ಹೂಂಕರಿಸತೊಡಗಿದವು. ಅವನು ಹತ್ತಿರ ಹೋಗುತ್ತಲೂ ಅವು ಅವನ ಅಂಗೈ ನೆಕ್ಕತೊಡಗಿದವು. ದಮಡಿಯ ಮನಸು ತಳಮಳ ಗೊಂಡಿತು. ಈಗಂತೂ ಏನು ಮಾಡಲೂ ಸಾಧ್ಯವಿಲ್ಲ, ಮುಂಜಾನೆ ಯಾರಲ್ಲಿ ಯಾದರೂ ಕೈಗಡ ಮಾಡಿ ಮೇವು ತರಬೇಕು ಎಂದು ಅವನು ಯೋಚಿಸಿದ.

ರಾತ್ರಿ ಹನ್ನೊಂದು ಗಂಟೆಗೆ ದಮಡಿ ಎಚ್ಚತ್ತು ಕಣ್ಣು ತೆರೆದು ನೋಡಿದ. ಎತ್ತುಗಳೆರಡೂ ಗೋದಲೆಯೆದುರು ನಿಂತೇ ಇದ್ದವು. ಬೆಳುದಿಂಗಳು

ಬಿದ್ದಿತ್ತು. ಅವೆರಡೂ ತನ್ನ ಕಡೆಗೇ ಆಸೆಗಣ್ಣುಗಳಿಂದ ನೋಡುತ್ತಿರುವಂತೆ ಅವನಿಗೆನಿಸಿತು. ಅವುಗಳ ಹಸಿವಿನ ನೋವನು ಕಂಡು ಅವನ ಕಣ್ಣುಗಳು ಸಜಲವಾದವು. ಒಕ್ಕಲಿಗರಿಗೆ ಎತ್ತುಗಳೆಂದರೆ ಹೊಟ್ಟೆಯ ಮಕ್ಕಳಂತೆ. ಅವು ಅವರಿಗೆ ಪಶುಗಳಲ್ಲ, ಅವನ್ನು ತಮ್ಮ ಮಿತ್ರರು, ಸಹಾಯಕರು ಎಂದು ಅವರು ತಿಳಿಯುತ್ತಾರೆ. ಎತ್ತುಗಳು ಹೊಟ್ಟೆಗಿಲ್ಲದೆ ನಿಂತಿರುವುದನ್ನು ನೋಡಿ ಅವನ ಕಣ್ಣಲ್ಲಿಯ ನಿದ್ದೆ ಹಾರಿಹೋಯಿತು. ಏನೋ ಯೋಚಿಸಿಕೊಳುತ್ತ ಎದ್ದ. ಕುಡುಗೋಲನ್ನು ತೆಗೆದುಕೊಂಡು ಮೇವಿನ ಥೇನಿಕೆಯಲ್ಲಿ ಹೊರಟ. ಊರ ಹೊರಗಡೆ ಸಜ್ಜೆ ಜೋಳಗಳ ಹೊಲಗಳಿದ್ದವು. ದಮಡಿಯ ಕೈಗಳು ನಡುಗತೊಡಗಿದವು ಆದರೆ ಎತ್ತುಗಳ ನೆನಪು ಅವನಿಗೆ ಉತ್ತೇಜನವಿತ್ತಿತು. ಮನಸು ಮಾಡಿದ್ದರೆ, ಅವನು ಬೇಕಾದಾತಹ ಹೊರೆ ಕೊಯ್ದು ತರಬಹುದಿತ್ತು. ಆದರೆ ಕಳವಿಗೆ ಹೋಗಿದ್ದರೂ ಅವನು ಕಳ್ಳನಲ್ಲ. ಎರಡು ಎತ್ತುಗಳಿಗೆ ರಾತ್ರಿಯ ಮಟ್ಟಿಗೆ ಎಷ್ಟು ಬೇಕೋ ಅಷ್ಟೇ ಮೇವು ಕೊಯ್ದುಕೊಂಡ. ಸ್ವಲ್ಪ ಮೇವಿಗಾಗಿ ತನ್ನನ್ನು ಯಾರೂ ಹಿಡಿಯುವುದಿಲ್ಲವೆಂದು ಅವನು ನಂಬಿದ್ದ ನಾನೇನೂ ಮಾರುವುದಕ್ಕಾಗಿ ಕೊಯ್ಯುತ್ತಿಲ್ಲವಲ್ಲ ? ಎಂದಮೇಲೆ ನನ್ನನ್ನು ಹಿಡಿಯುವಂತಹ ನಿರ್ದಯಿ ಯಾರಿರುತ್ತಾರೆ? ಬಹಳವಾದರೆ ತಮ್ಮ ಬೆಲೆ ತೆಗೆದುಕೊಂಡಾರು. ಕಳವಿನ ಅಪರಾಧದಿಂದ ರಕ್ಷಿಸುವುದಕ್ಕೆ ಮೇವು ತೀರ ಕಡಿಮೆ ಇದ್ದ ಪ್ರಮಾಣವೇ ಸಾಕು. ಕಳ್ಳನಾದರೆ ತನಗೆ ಎಷ್ಟು ಹೊರಲು ಸಾಧ್ಯವೋ ಅಷ್ಟು ಕೊಯ್ಯುತ್ತಿದ್ದ; ಮತ್ತೊಬ್ಬರದು ನಷ್ಟವಾದರೇನು, ಭ್ರಷ್ಟವಾದರೇನು ಅವನಿಗೆ? ಊರ ಜನ ದಮಡಿ ಮೇವು ಒಯ್ಯುವುದನ್ನು ಕಂಡಿದ್ದರೆ ಖಂಡಿತ ಕೆರಳುತ್ತಿದ್ದರು ನಿಜ, ಆದರೆ ಇಷ್ಟಕ್ಕಾಗಿ ಕಳವಿನ ಅಪಾದನೆ ಹೊರಿಸಿ ಅವನನ್ನು ಕಟ್ಟಳೆಗೆ ಗುರಿಪಡಿಸುತ್ತಿರಲಿಲ್ಲ. ಆದರೆ ವಿಧಿವಶದಿಂದ ಸಣ್ಣ ಚೌಕಿಯ ಒಬ್ಬ ಸಿಪಾಯಿ ಆ ಹಾದಿಯಲ್ಲಿ ಹೊರಟಿದ್ದ. ಹತ್ತಿರದಲ್ಲಿಯೆ ಒಬ್ಬ ವ್ಯಾಪಾರಿಯ ಮಳಿಗೆಯಲ್ಲಿ ಜೂಜಾಟ ನಡೆಯುವುದೆಂಬ ಸುಳಿವು ಹಿಡಿದು, ಏನಾದರೂ ಹಿಂಡಿಕೊಳ್ಳುವ ಚಪಲದಿಂದ ಅವನು ಹೊರಟಿದ್ದ. ದಮಡಿ ಮೇವನ್ನು ಹೊರುತ್ತಿರುವುದನ್ನು ಕಂಡು ಅವನಿಗೆ ಸಂದೇಹವುಂಟಾಯಿತು. ಇಷ್ಟು ಅಪರಾತ್ರಿಯಲ್ಲಿ ಯಾರು ಮೇವು ಕೊಯ್ಯುತ್ತಾರೆ? ಯಾವನೋ ಕಳ್ಳತನದಿಂದ ಕೊಯ್ಯುತ್ತಿರಬೇಕು.

" ಯಾರವರು ನೀವು ಒಯ್ಯೋವರು ? ನಿಲ್ಲು ! " ಎಂದು ಗದ್ದರಿಸಿದ, ಶಿಪಾಯಿ.

ದಮುಡಿ ಬೆದರಿ ಹಿಂದಿರುಗಿ ನೋಡಿದ, ಪೋಲೀಸ್ ಶಿಪಾಯಿ ! ಕೈ ಕಾಲುಗಳೇ ತಣ್ಣಗಾದವು. ಅವನು ನಡುಗುತ್ತ ಉತ್ತರವಿತ್ತ: " ಹುಜೂರ, ತುಸಾನೇ ಕೊಯ್ಕೊಂಡೀನಿ, ನೋಡಿಕೋರಿ. "

" ತುಸಾನೇ ಕೊಯ್ಯೋ ಬಾಳಾನೇ ಕೊಯ್ಯೋ; ಕಳವಂತೂ ಸೈನೇ ? ಯಾರದು ಹೊಲ ? "

" ಬಲದೇವ ಮಹಂತರದು. "

ಬೇಟೆ ಬಲೆಯೊಳಗೆ ಬಿತ್ತು, ಏನಾದರೂ ಇವನಿಂದ ಕಿತ್ತುವಾ ಎಂದು ಶಿಪಾಯಿ ಬಗೆದಿದ್ದ. ಆದರೆ ಅಲ್ಲೇನಿತ್ತು ? ಹಿಡಿದುಕೊಂಡು ಊರೊಳಗೆ ಒಯ್ದ. ಅಲ್ಲಿಯೂ ಏನೂ ಕೈಗೆ ಹತ್ತುವುದಿಲ್ಲವೆಂದು ಕಂಡುಬರಲು, ಠಾಣ್ಯಕ್ಕೆ ಎಳೆದೊಯ್ದ. ಠಾಣ್ಯದಾರನು ಅವನನ್ನು ಕೈಸೆರೆ ಮಾಡಿದ. ಮೊಕದ್ದಮೆ ರಾಯಸಾಹೇಬರ ನ್ಯಾಯಾಲಯಕ್ಕೇ ಹೋಯಿತು.

ರಾಯಸಾಹೇಬರು ದಮುಡಿ ಸಿಕ್ಕುಬಿದ್ದಿರುವುದನ್ನು ಕಂಡು, ಸಹಾನುಭೂತಿಯ ಬದಲು ಕಠೋರತನದಿಂದಲೇ ಕೆಲಸ ನಡೆಸಿದರು. " ಇದರಿಂದ ನನಗೆ ಬರುತ್ತದೆ ಅಪಕೀರ್ತಿ; ನಿನ್ನದೇನು ಕೆಟ್ಟಿತು ? ವರುಷ-ಆರು ತಿಂಗಳ ಶಿಕ್ಷೆ ಆಗುತ್ತದೆ. ನಾಚಿಕೊಳ್ಳಬೇಕಾದದ್ದು ನಾನೇ. ರಾಯಸಾಹೇಬರ ಮನುಷ್ಯ ಇಂಥ ದುರಾಚಾರಿ, ಕಳ್ಳ ಎಂದು ಜನರು ಆಡಿಕೊಳ್ಳುತ್ತಾರೆ. ನೀನು ನನ್ನ ಆಳಾಗಿರದಿದ್ದರೆ ಸೌಮ್ಯ ಶಿಕ್ಷೆ ಕೊಡುತ್ತಿದ್ದೆ; ಆದರೆ ನನ್ನ ಆಳಾದುದರಿಂದ ನಿನಗೆ ಹೆಚ್ಚಿನ ಕಠಿನ ಶಿಕ್ಷೆ ಕೊಡುತ್ತೇನೆ. ರಾಯಸಾಹೇಬರು ತಮ್ಮ ನೌಕರನನ್ನು ದಯೆಯಿಂದ ನೋಡಿದರು ಎಂದು ಎನಿಸಿಕೊಳ್ಳಲಾರೆ." ಎಂದು ಅವರೆಂದರು.

ಕೊನೆಗೆ ರಾಯಸಾಹೇಬರು ದಮುಡಿಗೆ ಆರು ತಿಂಗಳ ಕಠಿನ ಸಜೆಯನ್ನು ವಿಧಿಸಿದರು.

ಅದೇ ದಿನ ಅವರು ಕೊಲೆಯ ಪ್ರಕರಣದಲ್ಲಿ ಜಾಮೀನು ಸ್ವೀಕರಿಸಿದರು. ಎರಡು ವೃತ್ತಾಂತಗಳನ್ನೂ ನಾನು ಕೇಳಿದೆ. ಕೇವಲ ಚಾತುರ್ಯದಿಂದ ಪಾಪ

ಮಾಡುವುದಕ್ಕೇ ಸಭ್ಯತೆಯೆಂಬ ಹೆಸರು ಎಂಬ ನನ್ನ ಅಭಿಪ್ರಾಯ ಮನಸಿನಲ್ಲಿ ಮತ್ತಷ್ಟು ಗಟ್ಟಿಯಾಯಿತು. ನಾವು ಬೇಕಾದಂತಹ ಕೆಟ್ಟ ಕೆಲಸಗಳನ್ನು ಮಾಡಲಿ, ಅವುಗಳ ಮೇಲೆ ಮುಸುಕೆಳೆಯಲು ಶಕ್ತರಾದರಾಯಿತು, ನಾವು ಸಭ್ಯರು, ಸಜ್ಜನರು, ಜಂಟಲ್ಮೆನ್ನರು. ಆ ಗುಣ ನಮ್ಮಲ್ಲಿ ಇಲ್ಲದಿದ್ದರೆ, ನಾವು ಅಸಭ್ಯರು, ಕಾಡುಜನ, ಅನಾಚಾರಿಗಳು. ಇದೇ ಸಭ್ಯತೆಯ ರಹಸ್ಯ !

# ಬೆಣ್ಣೆಯಲ್ಲಿ ಕೂದಲು



ಬಾಬು ಕುಂದನಲಾಲನು ಕಚೇರಿಯಿಂದ ಮರಳಿದಾಗ ಅವನ ಹೆಂಡತಿ ತೋಟಗಿತ್ತಿಯೊಡನೆ ಕಾಯಿ-ಪಲ್ಲೆಯ ವ್ಯಾಪಾರ ನಡೆಸಿದ್ದಳು. ಆಕೆ ಪಾಲಕವನ್ನು ಆರ್ಧಾಣೆಗೆ ಸೇರು ಹೇಳುತ್ತಿದ್ದಳು, ಒಂದೂವರೆ ಬಿಲ್ಲಿಗೆ ಸೇರು ಈಕೆ ಬೇಡುತ್ತಿದ್ದಳು. ಈ ತಿಕ್ಕಾಟ ಎಷ್ಟೋ ನಿಮಿಷಗಳವರೆಗೆ ನಡೆಯಿತು. ಕೊನೆಗೆ ತೋಟಗಿತಿ ಒಂದೂವರೆ ಬಿಲ್ಲಿಗೇ ಒಪ್ಪಿಕೊಂಡಳು. ಆಮೇಲೆ ಬಂದಿತು ತಕ್ಕಡಿಯ ಹಾಗೂ ತೂಕದ ಪ್ರಶ್ನೆ. ಪರಡಿಗಳೆರಡೂ ಸಮ ಇರಲಿಲ್ಲ. ಒಂದು ಕಡೆ ಕಾಣಿಯಿತ್ತು. ತೂಕದ ಕಲ್ಲೂ ಸರಿಯಾಗಿರಲಿಲ್ಲ. ನೆರೆಮನೆಯಿಂದ ಸೇರಿನ ಕಲ್ಲು ಬಂದಿತು. ಪಲ್ಲೆಯ ತೂಕವಾದ ಮೇಲೆ ಕೊಸರಿನ ಪ್ರಶ್ನೆ ಎದ್ದಿತು ಹೆಂಡತಿ ಇನ್ನಿಷ್ಟು ಹಾಕು ಎನ್ನುತ್ತಿದ್ದಳು; ಇನ್ನೇನು, ಕೊಸರಿನಲ್ಲೇ ಸೇರು ಎರಡು ಸೇರು ಕೊಡಬೇಕೇನು ತಾಯೀ ಎಂದು ಪಲ್ಲೆಯವಳು ವಾದಿಸುತ್ತಿದ್ದಳು. ಅಂತೂ ಅರ್ಧಗಂಟೆಯಲ್ಲಿ ಈ ವ್ಯಾಪಾರ ಮುಗಿಯಿತು. ಇನ್ನೆಂದೂ ನಿಮ್ಮಮನೆಗೆ ಬರುವುದಿಲ್ಲವೆಂದು ಬೆದರಿಕೆ ಹಾಕಿ ತೋಟಗಿತ್ತಿ ಹೊರಟುಹೋದಳು. ಕುಂದನಲಾಲ ನಿಂತುಕೊಂಡು ಈ ತಮಾಶೆಯನ್ನು ನೋಡಿದ. ಪಲ್ಲೆಯವಳು ಹೊರಟುಹೋದ ಬಳಿಕ ಹೆಂಡತಿ ಒಂದು ಲೋಟ ನೀರು ತಂದಾಗ ಅವನೆಂದ :

" ಈಪೊತ್ತು ಒಂದಿಷ್ಟು ಪಲ್ಲೆ ತೆಗೆದುಕೊಳ್ಳುವುದಕ್ಕೆ ಇಡೀ ಅರ್ಧ ಗಂಟೆ ಹಾಳುಮಾಡಿದೆ. ಇಷ್ಟು ವೇಳೆಯೊಳಗೆ ಸಾವಿರ ಐನೂರು ರೂಪಾಯಿ ಗಳ ವ್ಯವಹಾರ ಆಗಬಹುದಿತ್ತು. ತೋಡೆತುಸು ತರಕಾರಿಯ ದೆಸೆಯಿಂದ ಇಷ್ಟು ಹೊಸೆದಾಡಿದರೂ ನಿನಗೆ ತಲೆಸೂಲಿ ಏಳುವುದಿಲ್ಲವೆ ? "

ರಾಮೇಶ್ವರಿ ಸ್ವಲ್ಪ ನಾಚಿಕೊಂಡಳು. " ದುಡ್ಡೇನೂ ಪುಕ್ಕಟೆ ಬರುವುದಿಲ್ಲ ! " ಎಂದಳು.

" ಅದೇನೋ ಸರಿ, ಆದರೆ ಹೊತ್ತಿಗೂ ಒಂದಿಷ್ಟು ಬೆಲೆ ಇದೆ ಇಷ್ಟು ಸಮಯದಲ್ಲಿ ನೀನು ಬಹಳ ಪರಿಶ್ರಮಪಟ್ಟು ಉಳಿಸಿದ್ದು ಒಂದು ಅದ್ದೇಲಿ ಎಂತಹ ಜೋಡಿ ಹೆಂಗುಸು ಎಂದು ತೋಟಿಗಿತ್ತಿಯೂ ಎಂದುಕೊಂಡಿರಬಹುದು. ಬಹಳವಾಡಿ ಅವಳಿನ್ನು ತಪ್ಪಿ ಕೂಡ ಇಲ್ಲಿಗೆ ಬರಲಿಕ್ಕಿಲ್ಲ "

" ಆದರೂನೂ ಒಂದು ದುಡ್ಡಿಗೆ ಅದ್ದೇಲಿಯ ಸಾಮಾನು ಕೊಟ್ಟರೂ ಸುಮ್ಮನೆ ತಕ್ಕೊಳ್ಳುವುದು ನನ್ನಿಂದಾಗದು. "

" ಇಷ್ಟು ಸಮಯದಲ್ಲಿ ಏನಿಲ್ಲೆಂದರೂ ಇಪ್ಪತ್ತು ಪುಟ ಓದಬಹುದಿತ್ತು. ನಿನ್ನೆ ಒಕ್ಕಲುಗಿತ್ತಿಯೊಡನೆ ಒಂದು ತಾಸು ತಲೆಯೊಡೆದುಕೊಂಡೆ; ಮೊನ್ನೆ ಗವಳಿಗನೊಡನೆ ತಾಸುಗಟ್ಟಲೆ ಶಾಸ್ತ್ರಾರ್ಥ ಚರ್ಚಿಸಿದೆ; ಈ ಮಾತುಗಳಲ್ಲಿ ವೆಚ್ಚ ಮಾಡುವದಕ್ಕೇ ಕೊಟ್ಟದ್ದೇನು ಜೀವನ ? "

ಕುಂದನಲಾಲ ಹೆಂಡತಿಗೆ ನಿತ್ಯವೂ ಸದುಪದೇಶ ಮಾಡುತ್ತಲೆ ಇದ್ದ. ಈಗಿನದು ಅವನ ಎರಡನೆಯ ಸಂಬಂಧ. ರಾಮೇಶ್ವರಿ ಬಂದು ಇನ್ನೂ ಎರಡು ಮೂರು ತಿಂಗಳು ಆಗಿತ್ತು ಅಷ್ಟೆ. ಇದುವರೆಗೂ ಹಿರಿಯ ನಾದಿನಿಯೇ ಮೇಲಿನ ಕೆಲಸಗಳನ್ನೆಲ್ಲ ಮಾಡುತ್ತಿದ್ದಳು. ಆದರೆ ರಾಮೇಶ್ವರಿಗೆ ಅವಳೊಂದಿಗೆ ಕೂಡಿಬರುತ್ತಿರಲಿಲ್ಲ. ಈಕೆ ತನ್ನ ಸರ್ವಸ್ವವನ್ನು ಹಾಳುಮಾಡುತ್ತಿದ್ದಾಳೆ ಎಂದು ಅವಳಿಗೆನಿಸುತ್ತಿತ್ತು. ಕೊನೆಗೆ ನಾದಿನಿ ಹೊರಟುಹೋದಳು. ಅಂದಿನಿಂದ ರಾಮೇಶ್ವರಿಯೇ ಮನೆಯ ಯಜಮಾನಿನಿಯಾದಳು ಗಂಡನನ್ನು ಪ್ರಸನ್ನವಾಗಿರಿಸಬೇಕೆಂಬುದು ಅವಳ ಮನೀಷೆ. ಆತನ ಸೂಚನೆಯಂತೆ ನಡೆಯುತ್ತಿದ್ದಳು; ಒಮ್ಮೆ ಕೇಳಿದ ಮಾತನ್ನು ಸೆರಗಿಗೆ ಗಂಟುಹಾಕಿಕೊಂಡು ಬಿಡುತ್ತಿದ್ದಳು. ಆದರೂ ದಿನಾಲು ಏನಾದರೊಂದು ಹೊಸ ಸಂಗತಿ ಜರುಗುತ್ತಲೇ ಇರುತ್ತದೆ; ಅವಳಿಗೆ ಉಪದೇಶ ಮಾಡಲು ಕುಂದನಲಾಲನಿಗೆ ಸಂಧಿ ದೊರೆತೇ ದೊರೆಯುತ್ತದೆ.

೨

ಒಂದು ದಿನ ಬೆಕ್ಕು ಬಂದು ಹಾಲು ಕುಡಿದುಬಿಟ್ಟಿತು. ರಾಮೇಶ್ವರಿ ಹಾಲನ್ನು ಕಾಸಿ ತಂದು ಗಂಡನ ತಲೆದಿಂಬು ದಿಶೆಯಲ್ಲಿಟ್ಟು, ವೀಳ್ಯ ತಯಾರಿಸುತ್ತಿದ್ದಳು. ಬೆಕ್ಕು ಬಂದು ಹಾಲಿನ ಮೇಲಿನ ತೆನ್ನ ದೇವದತ್ತ

ಅಧಿಕಾರವನ್ನು ಸಿದ್ಧಪಡಿಸಿತು. ರಾಮೇಶ್ವರಿ ಈ ಅಪಹರಣವನ್ನು ಒಪ್ಪಲಿಲ್ಲ. ರೂಲುಕಟ್ಟಿಗೆಯನ್ನು ಬಲವಾಗಿ ಬೀಸಿದಳು. ಬೆಕ್ಕು ಎರಡು ಮೂರು ದಿಂಡರಿಕೆ ಉರುಳಿತು.

ಕುಂದನಲಾಲ ಮಲಗಿ ಪತ್ರಿಕೆ ಓದುತ್ತಿದ್ದ. "ಸತ್ತುಗಿತ್ತೀತು ಎಲ್ಲಿಯಾದರೂ!" ಎಂದ.

"ನನ್ನ ಹಾಲು ಯಾಕೆ ಕುಡಿಯಬೇಕು?" ದಿಟ್ಟತನದಿಂದ ರಾಮೇಶ್ವರಿ ಎಂದಳು.

"ಅದನ್ನು ಹೊಡೆದಿದ್ದರಿಂದ ಹಾಲೇನೂ ಸಿಕ್ಕಲಿಲ್ಲ?"

"ಯಾರಾದರೂ ಹಾನಿ ಮಾಡಿದರೆ ಅವರ ಮೇಲೆ ಸಿಟ್ಟು ಬರುವುದೆ."

"ಬರಬಾರದು. ಪಶುಗಳ ಕೂಡ ಮನುಷ್ಯನೂ ಪಶು ಆಗಬೇಕೇನು? ಮನುಷ್ಯ ಮತ್ತು ಪಶುಗಳಲ್ಲಿ ಇದನ್ನು ಬಿಟ್ಟು ಬೇರೆ ಅಂತರ ಯಾವುದು?"

ಕುಂದನಲಾಲ ದಯೆ, ವಿವೇಕ, ಶಾಂತಿಗಳನ್ನು ಕುರಿತು ಎಷ್ಟೋ ಹೊತ್ತು ಉಪದೇಶ ಮಾಡಿದ. ರಾಮೇಶ್ವರಿಗೆ ಅತಿಶಯವಾದ ಗ್ಲಾನಿಯುಂಟಾಗಿ ಅಳುವೇ ಬಂದಿತು.

ಹೀಗೆಯೇ ಇನ್ನೊಂದು ದಿನ, ರಾಮೇಶ್ವರಿ ಒಬ್ಬ ಭಿಕ್ಷುಕನನ್ನು ಬಯ್ದುದಕ್ಕಾಗಿ ಬಾಬು ಸಾಹೇಬರ ಉಪದೇಶ ಪ್ರಾರಂಭವಾಯಿತು ಪುನಃ— "ನಿನಗೆ ಏಳಲಿಕ್ಕಾಗದಿದ್ದರೆ, ಇಲ್ಲಿ ತಾ, ನಾನು ನೀಡಿ ಬರುತ್ತೇನೆ. ಬಡವರಿಗೆ ಹೀಗೆಲ್ಲ ಮಾಡಬಾರದು."

"ಹಗಲೆಲ್ಲಾ ಕಾಟಕ್ಕೆ ತೆರಪೇ ಇಲ್ಲ. ಯಾರು ಎಷ್ಟಂತ ಒದ್ದಾಡುವುದು? ಇಡೀ ದೇಶವೇ ತಿರುಕರಿಂದ ತುಂಬಿಹೋಗಿದೆಯೋ ಏನೋ!" ಹುಬ್ಬುಗಂಟಿಕ್ಕಿ ಉತ್ತರವಿತ್ತಳು ರಾಮೇಶ್ವರಿ.

ಕುಂದನಲಾಲ ಉಪೇಕ್ಷೆಯಿಂದ ನಕ್ಕು ನುಡಿದ: "ನೀನಾದರೂ ಇರುವುದು ಅದೇ ದೇಶದಲ್ಲಿ."

"ಇಷ್ಟೆಲ್ಲಾ ಮಂದಿ ಬಂದರೆಲ್ಲಿಂದ ಭಿಕ್ಷುಕರು? ಇವರೇಕೆ ಕೆಲಸ ಮಾಡುವುದಿಲ್ಲ?"

" ಕೆಲಸ ಸಿಕ್ಕರೂ ಭಿಕ್ಷೆ ಬೇಡುವಂತಹ ನೀಚ ಜನ ಇರುವುದಿಲ್ಲ ಯಾರೂ. ಹಾಂ, ಕುರುಡರು ಕುಂಟರು ಇದ್ದರೆ ಆ ಮಾತು ಬೇರೆ. ಕುರುಡ ಕುಂಟರಿಗೆ ಭಿಕ್ಷೆಯಲ್ಲದೆ ಬೇರೆ ದಾರಿ ಎಲ್ಲಿದೆ ? "

" ಸರಕಾರದವರು ಇವರಿಗಾಗಿ ಅನಾಥಾಲಯ ಯಾಕೆ ತೆರೆಯುವುದಿಲ್ಲ ? "

" ಸ್ವರಾಜ್ಯ ಬಂದ ಮೇಲೆ ಬಹುಶಃ ತೆರೆಯಬಹುದು. ಈಗಂತೂ ಯಾವ ಆಶೆ ಇಲ್ಲ ಆದರೆ ಸ್ವರಾಜ್ಯವೂ ಧರ್ಮದಿಂದಲೇ ಬರುವುದು. "

" ಲಕ್ಷಾವಧಿ ಸಾಧು-ಸನ್ಯಾಸಿಗಳು, ಪಂಡೆ-ಪೂಜಾರಿಗಳು ಉಚಿತವಾಗಿ ಸಾಮುಗ್ರಿ ಸೆಳೆಯುತ್ತಾರೆ; ಅಷ್ಟು ಧರ್ಮ ಸಾಲದೇನು ? ಒಂದು ವೇಳೆ ಈ ಧರ್ಮದಿಂದ ಸ್ವರಾಜ್ಯ ಸಿಕ್ಕುವುದಾದರೆ ಎಂದೋ ಸಿಕ್ಕು ಬಿಡುತ್ತಿತ್ತು. "

" ಈ ಧರ್ಮದ ಪ್ರಸಾದದಿಂದಲೇ ಹಿಂದೂ ಜಾತಿ ಇನ್ನೂ ಬಾಳಿದೆ. ಇಲ್ಲದಿದ್ದರೆ ಎಂದೋ ರಸಾತಳ ಕಂಡಿರುತ್ತಿತ್ತು. ರೋಮ್, ಯೂನಾನ್, ಇರಾಣ್, ಅಸೀರಿಯಾ — ಯಾವುದರ ಕುರುಹೂ ಈಗ ಉಳಿಯಲಿಲ್ಲ. ಇದುವರೆಗೂ ಕಾಲದ ಕ್ರೂರ ಆಘಾತಗಳನ್ನು ಇದಿರಿಸಿ ಈ ಹಿಂದೂ ಜಾತಿ ನಡೆದುಬಂದಿದೆ "

" ನೀವು ತಿಳಿದಿರಬಹುದು, ಹಿಂದೂ ಜಾತಿ ಬದುಕಿದೆ ಎಂದು. ಎಂದು ಪರತಂತ್ರವಾಯಿತೋ ಅಂದೇ ಅದು ಸತ್ತಿದೆ ಎಂದು ನಾನು ತಿಳಿಯುತ್ತೇನೆ. ಜೀವನ ಎಂಬುದು ಸ್ವಾತಂತ್ರ್ಯದ ಹೆಸರು; ದಾಸ್ಯ ಎಂಬುದು ಮೃತ್ಯು. "

ಕುಂದನಲಾಲ ಚಕಿತ ನೇತ್ರಗಳಿಂದ ಯುವತಿಯನ್ನು ನೋಡಿದ. ಇಂತಹ ವಿಚಾರಗಳು ಇವಳಲ್ಲಿ ಬಂದುವೆಲ್ಲಿಂದ ? ನೋಡಲಿಕ್ಕೆ ಬಹಳ ಭೋಳೆ ಆಗಿ ಕಾಣುತ್ತಾಳೆ, ಅಲ್ಲಿ ಇಲ್ಲಿ ಕೇಳಿಕೊಂಡದ್ದು ಇರಬೇಕು. ಅವನು ಕಠೋರವಾಗಿ ಮಾತನಾಡಿದ. " ಏನು ವ್ಯರ್ಥ ವಿವಾದ ಹೂಡಿದ್ದೀಯೆ. ನಾಚುವುದಂತೂ ಇರಲಿ, ತಿರುಗಿ ಬಡಬಡಿಸುತ್ತೀ ಬೇರೆ. "

ಈ ಏಟನ್ನು ತಿಂದು ರಾಮೇಶ್ವರಿ ಸುಮ್ಮನಾದಳು. ಕ್ಷಣಹೊತ್ತು ಹಾಗೇ ನಿಂತು, ಬಳಿಕ ನಿಧಾನವಾಗಿ ಕೋಣೆಯಿಂದ ಹೊರಟುಹೋದಳು.

೩

ಒಂದು ದಿನ ಕುಂದನಲಾಲ ಕೆಲವು ಗೆಳೆಯರಿಗೆ ಔತಣವಿತ್ತ. ರಾಮೇಶ್ವರಿ ಬೆಳಗಿನಿಂದಲೂ ಅಡಿಗೆಯಲ್ಲಿ ತೊಡಗಿದಳು, ಸಂಜೆಯವರೆಗೆ ತಲೆಯೆತ್ತಲೂ ಪುರಸತ್ತು ಸಿಕ್ಕಲಿಲ್ಲ ಅವಳಿಗೆ. ಬಲು ಕಟ್ಟೆ ಬಿಟ್ಟೆ ಇದು ಎಂದು ಅವಳಿಗೆನಿಸುತ್ತಲಿತ್ತು. ಗೆಳೆಯರಿಗೆ ಔತಣ ಕೊಡುವುದಿದ್ದರೆ, ಅಡಿಗೆ ಮಾಡಿಸುವ ವ್ಯವಸ್ಥೆ ಏಕೆ ಮಾಡಬಾರದು? ಎಲ್ಲಾ ಭಾರ ತನ್ನ ತಲೆಯಮೇಲೇ ಏಕೆ ಹಾಕಿದರು? ಔತಣ ಏರ್ಪಡಿಸೋಣವೇ ಬೇಡವೇ ಎಂದು ತನ್ನನ್ನು ಒಮ್ಮೆಯಾದರೂ ವಿಚಾರಿಸಿದ್ದರೆ! ವಿಚಾರಿಸಿದ್ದರೂ ಇದೇ ಹಾಡು, ಈಗ ನಡೆದದ್ದು. ಔತಣದ ಸೂಚನೆಯನ್ನು ಅವಳು ಒಳ್ಳೇ ಸಂತೋಷದಿಂದಲೇ ಅನುಮೋದಿಸುತ್ತಿದ್ದಳು; ಆಗ ಈ ಔತಣ ತನ್ನದೇ ಎಂದು ಆಕೆ ಭಾವಿಸುತ್ತಿದ್ದಳು. ಈಗ ತನ್ನನ್ನು ಬಿಟ್ಟೆ ದುಡಿಸಿಕೊಳ್ಳುತ್ತಿರುವಂತೆ ಅವಳಿಗೆನಿಸುತ್ತಿದೆ. ಅಂತೂ ಅಡಿಗೆಯಾಯಿತು, ಜನ ಬಂದರು, ಉಂಡು ಹೋದರು. ಆದರೆ ಮುನ್ಷಿ ಗಂಟುಮೋರೆ ಹಾಕಿಕೊಂಡು ಕುಳಿತಿದ್ದ.

"ನೀವೇಕೆ ಉಣ್ಣುವುದಿಲ್ಲ? ಇನ್ನೂ ಏನು ಪ್ರಾತಃಕಾಲ ಎನ್ನುವಿರಾ?" ರಾಮೇಶ್ವರಿ ವಿಚಾರಿಸಿದಳು.

"ಏನುಣ್ಣಲಿ! ಇದೇನು ಅಡಿಗೆಯೋ ಅಥವಾ ದನಗಳಿಗೆ ಇಡುವ ಮುಸುರೆನೀರೋ?" ಕಣ್ಣು ಕೆಕ್ಕರಿಸಿ ಕುಂದನಲಾಲನೆಂದ.

ರಾಮೇಶ್ವರಿಗೆ ಅಂಗಾಲಿಂದ ನೆತ್ತಿಯವರೆಗೂ ಉರಿಯಿತು. ಇಡೀ ದಿನ ಒಲೆಯ ಮುಂದೆ ಬೆಂದುದಕ್ಕೆ ಈ ಪ್ರಶಸ್ತಿ! "ನನಗೆ ಬಂದ ಹಾಗೆ ನಾ ಮಾಡಿದೆ. ನನ್ನ ವಶ ಮೀರಿದ ಕೆಲಸ ಆಗೆಂದರೆ ಹೇಗೆ ಆದೀತು?" ಎಂದಳು.

"ಪೂರಿಗಳಂತೂ ಹಸಿಬಿಸಿ!"

"ಇರಬಹುದು."

"ಉದ್ದಿನೊಡೆ ಉಪ್ಪಿನ ಕಟಿ, ಯಾರೂ ಮುಟ್ಟಲೇ ಇಲ್ಲ."

"ಇರಬಹುದು."

"ಹಲವಾ ಚೆನ್ನಾಗಿ ಬೆಂದಿರಲಿಲ್ಲ; ಹಸಿ ವಾಸನೆ ಬರುತ್ತಿತ್ತು."

" ಬರುತ್ತಿರಬಹುದು. "

" ಸಾರೋ ಚಹದ ಹಾಗೆ ನೀರಾಗಿತ್ತು. "

" ಆಗಿರಬಹುದು. "

" ಅಡಿಗೆಯು ನಿಪುಣಳಾಗಿ ಇರಬೇಕು, ಇದು ಹೆಂಗುಸರ ಮೊದಲನೆಯ ಧರ್ಮ ! "

ಮತ್ತೆ ಉಪದೇಶದ ತಂತಿ ಏರಿಸಿದ; ರಾಮೇಶ್ವರಿಗೆ ಸಾಕಾಗಿ ಎದ್ದು ಹೋಗಿಬಿಟ್ಟಳು.

೪

ಐದಾರು ತಿಂಗಳುಗಳು ಕಳೆದವು. ಕುಂದನಲಾಲನ ದೂರದ ಸಂಬಂಧಿಕರೊಬ್ಬರು ಅವನನ್ನು ಕಾಣಲು ಬಂದರು. ಈ ವರ್ತಮಾನ ತಿಳಿದ ಕೂಡಲೆ ರಾಮೇಶ್ವರಿ ಉಪಹಾರಕ್ಕಾಗಿ ಮಿಠಾಯಿ ಕಳಿಸಿದಳು. ತೊತ್ತಿನೊಡನೆ ಹೇಳಿಯೂ ಕಳಿಸಿದಳು: " ಈವೊತ್ತು ಊಟ ಇಲ್ಲಿಯೇ ಆಗಲಿ. " ಮಹಾಶಯರಿಗೆ ಬಲು ಸಂತೋಷವಾಯಿತು. ಗಂಟು ಹಾಸಿಗೆ ತಂದು ಠಾಣ್ಯ ಹಾಕಿದರು. ಒಂದು ವಾರ ಕಳೆದರೂ ಅವರು ಹೊರಡುವ ಮಾತನ್ನೇ ತೆಗೆಯಲಿಲ್ಲ. ಊಟ ಉಪಚಾರಗಳಲ್ಲಿ ಕುಂದುಕೊರತೆಯಾಗಿದ್ದರೆ ಬಹುಶಃ ಅವರು ಚಿಂತಿಸಬಹುದಾಗಿತ್ತು. ಆದರೆ ಅವರ ಆದರ ಸತ್ಕಾರಗಳಲ್ಲಿ ರಾಮೇಶ್ವರಿ ಅತ್ಯಂತ ಆಸ್ಥೆಯಿಂದ ತೊಡಗಿದ್ದಳು. ಎಂದಮೇಲೆ ಅವರಿಗೇಕೆ ಹೊರಡುವ ಯೋಚನೆ ಹುಟ್ಟೀತು ?

" ಇದೊಂದು ಕೆಟ್ಟ ಬೇನೆಯನ್ನೇ ನೀನು ಜೋಪಾನ ಮಾಡಿದೆ " ಎಂದು ಕುಂದನಲಾಲ ಒಂದು ದಿನ ಹೆಂಡತಿಗೆ ಎಂದ.

" ಎಂಥ ಬೇನೆ ? " ಅಚ್ಚರಿಯಿಂದ ಅವಳು ಪ್ರಶ್ನಿಸಿದಳು.

" ಇವರನ್ನು ಏಕೆ ಹೋಗಗೊಡಲೊಲ್ಲೆ ? "

" ನನ್ನದೇನು ನಷ್ಟವಾಗುತ್ತದೆ ? "

" ನಿತ್ಯ ಕಡಿಮೆಯೆಂದರೂ ಒಂದು ರೂಪಾಯಿ ಘಟ್ಟಿನ್ನುತ್ತದೆ. ಹೀಗೆಯೇ ಆತಿಥ್ಯ ನಡೆಯುತ್ತಿದ್ದರೆ ಸಾಯುವ ತನಕ ಹೋಗಲಿಕ್ಕಿಲ್ಲ. "

"ಯಾರಾದರೂ ನಾಲ್ಕು ದಿನದ ಮಟ್ಟಿಗೆ ಬಂದರೆ ಅಸಡ್ಡೆ ಮಾಡು ವುದು ನನ್ನ ಕೈಲಂತೂ ಆಗುವುದಿಲ್ಲ. ತಮ್ಮ ಅಪೇಕ್ಷೆ ಇದ್ದಷ್ಟು ದಿನ ಇದ್ದುಕೊಳ್ಳಲಿ."

"ಇಂಥ ಪುಕ್ಕಟೆ ಜನದ ಸತ್ಕಾರ ಮಾಡುವುದು ಪಾಪ. ನೀನು ಇಷ್ಟು ತಲೆಮೇಲೆ ಏರಿಸಿಕೊಳ್ಳದಿದ್ದರೆ ಇಷ್ಟೊತ್ತಿಗೆ ಕಾಲು ಕೀಳುತ್ತಿದ್ದರು. ದಿನಕ್ಕೆ ಮೂರು ಊಟ, ಐವತ್ತು ಸಲ ಕವಳ ಸಿಕ್ಕುತ್ತಿರುವುದೆಂದ ಮೇಲೆ, ಅವರ ನ್ನೇನು ನಾಯಿ ಕಚ್ಚಿಲ್ಲ, ಊರಿಗೆ ಹೋಗಲಿಕ್ಕೆ !"

"ರೊಟ್ಟಿಗಳ್ಳರಾಗುವುದು ಒಳ್ಳೇಯದಲ್ಲ !"

"ಕುಪಾತ್ರ ಸುಪಾತ್ರಗಳನ್ನು ನೋಡಬೇಕಷ್ಟೆ. ಇಂಥ ಮೈಗಳ್ಳರಿಗೆ ಉಣಿಸುವುದು ತಿನಿಸುವುದು ಅವರಿಗೆ ವಿಷ ಕೊಟ್ಟಹಾಗೆ. ವಿಷ ಪ್ರಾಣವನ್ನು ಮಾತ್ರ ಕೊಳ್ಳುತ್ತದೆ, ಈ ಸತ್ಕಾರವಾದರೋ ಆತ್ಮದ ಸರ್ವನಾಶ ಮಾಡು ತ್ತದೆ. ಒಂದು ತಿಂಗಳು ಈ ಮಹಾನುಭಾವರು ಇಲ್ಲಿದ್ದುಬಿಟ್ಟರೆ. ಸರಿ, ಸಾಯುವತನಕ ನಿರುದ್ಯೋಗಿಯಾಗುವರು. ತಿರುಗಿ ಇವರಿಂದ ಏನೂ ಆಗುವುದಿಲ್ಲ; ಇದರ ದೋಷವೆಲ್ಲ ನಿನ್ನ ತಲೆಯಮೇಲೆ ಬರುವುದು."

ತರ್ಕದ ಕ್ರಮ ಆರಂಭವಾಯಿತು; ಪ್ರಮಾಣಗಳ ಜಡಿಮಳೆ ಹಿಡಿ ಯಿತು. ರಾಮೇಶ್ವರಿಗೆ ತಲೆಚಿಟ್ಟು ಹಿಡಿದು ಜಾರಿಕೊಂಡು ಹೋದಳು. ಕುಂದನಲಾಲ ಒಮ್ಮೊಮ್ಮೆ ಅದರಿಂದ ಸಂತುಷ್ಟನೂ ಆಗುವುದುಂಟು, ಒಮ್ಮೊಮ್ಮೆ ಅವನ ಉಪದೇಶಗಳ ಮಳೆ ನಿಲ್ಲುವುದೂ ಉಂಟು, ಎಂಬ ಪ್ರಶ್ನೆ ಆವಳ ಮನಸಿನಲ್ಲಿ ಮತ್ತೆ ಮತ್ತೆ ಏಳುತ್ತಲಿತ್ತು.

೫

ಒಮ್ಮೆ ಹಳ್ಳಿಯಿಂದ ಎಮ್ಮೆಯ ಒಳ್ಳೆಯ ತುಪ್ಪ ಬಂದಿತು. ಈಗ ತಿಂಗಳಿಂದಲೂ ಪೇಟೆಯ ತುಪ್ಪ ತಿಂದು ತಿಂದು ಹೇಸಿಗಿಟ್ಟಿತ್ತು. ರಾಮೇಶ್ವರಿ ಅದನ್ನು ಕರಗಿಸಿದಳು, ಅದರಲ್ಲಿ ಲವಂಗ ಹಾಕಿದಳು, ಒಂದು ಮಡಕೆಯಲ್ಲಿ ಹಾಕಿಟ್ಟಳು. ಅದರ ಗಮಗಮ ವಾಸನೆ ಮನೆಯೆಲ್ಲ ಇಡುಗಿತ್ತು. ಒಕ್ಕಲುಗಿತ್ತಿ ಹೋರೆಗೆ ಬಂದಳು. ಮಡಕೆಯನ್ನು ಎತ್ತಿ ನೆಲುವಿನ ಮೇಲೋ ಗೂಡಿನಲ್ಲೋ ತೆಗೆದಿಡಲು ಹೋದಳು. ಆದರೆ ಯೋಗಾಯೋಗದಿಂದ,

ಮಡಕೆ ಅವಳ ಕೈಯಿಂದ ಜಾರಿ ಬಿದ್ದುಬಿಟ್ಟಿತು ತುಪ್ಪವೆಲ್ಲ ನೆಲದ ಪಾಲು! ಸಪ್ಪುಳ ಕೇಳಿ ರಾಮೇಶ್ವರಿ ಓಡಿಬಂದಳು; ಒಕ್ಕಲುಗಿತ್ತಿ ಅಳುತ್ತ ನಿಂತಿದ್ದಾಳೆ; ಮಡಕೆ ಚೂರು ಚೂರಾಗಿದೆ. ಅವಳು ರೇಗಿದಳು :

"ಹೇಗೆ ಒಡೆಯಿತು ಮಡಕೆ? ನಿನ್ನ ಸಂಬಳದಲ್ಲಿ ಮುರಿಯುತ್ತೇನೆ. ರಾಮ ರಾಮಾ! ಎಲ್ಲಾ ತುಪ್ಪ ಮಣ್ಣುಗೂಡಿಸಿದಳು! ನಿನ್ನ ಕಣ್ಣು ಒಡೆದು ಹೋಗಿದ್ದವೇನು? ನಿನ್ನ ಕೈಯಲ್ಲಿ ಶಕ್ತಿ ಇದ್ದಿಲ್ಲವೇನು? ಅಷ್ಟು ದೂರದಿಂದ ತರಿಸಿ, ಇಷ್ಟು ಶ್ರಮಬಟ್ಟು ಕಾಸಿ, ಒಂದು ತೊಟ್ಟೂ ಗಂಟಲ ಕೆಳಗೆ ಇಳಿಯಲಿಲ್ಲ! ಇನ್ನೇಕೆ ನಿಂತು ದುಃಖಿಸುತ್ತೀ, ಹೋಗು ನಿನ್ನ ಕೆಲಸಕ್ಕೆ!"

ಕೆಲಸದವಳು ಕಣ್ಣೊರಸಿಕೊಳ್ಳುತ್ತ ಹೇಳಿದಳು : "ಅವ್ವಾವರೇ, ಕೈಯಿಂದಂತೂ ತಪ್ಪಾಗಿದೆ; ಬೇಕಾದರೆ ಸಂಬಳ ಮುರಿಯಿರಿ, ಬೇಕಾದರೆ ಜೀವ ತೆಗೆಯಿರಿ. ನಾನಂತೂ ನೆಲುವಿನಮೇಲೆ ಎತ್ತಿಟ್ಟು ಸಾರಿಸಬೇಕೆಂದು ಮಾಡಿದ್ದೆ. ಹಣೆಬರಹದಲ್ಲಿ ಹೀಗೆ ಬರೆದಿತ್ತೆಂದು ಏನು ಗೊತ್ತು? ಈವೊತ್ತು ಎದ್ದ ಕೂಡಲೆ ಯಾರ ಮೋರೆ ನೋಡಿದ್ದೆನೋ!"

"ನನಗೆ ಯಾವುದೂ ಗೊತ್ತಿಲ್ಲ, ಎಲ್ಲಾ ರೂಪಾಯಿ ನಿನ್ನ ಸಂಬಳದಿಂದ ತೆಗೆದುಕೊಳ್ಳುತ್ತೇನೆ. ಒಂದು ರೂಪಾಯಿ ದಂಡ ಮಾಡದಿದ್ದರೆ ಹೇಳು!"

"ಸತ್ತುಹೋಗುವೆ ಬಡವೆ ಸರಕಾರ, ಒಂದು ಬಿಲ್ಲಿಗೂ ಗತಿಯಿಲ್ಲ."

"ಸತ್ತುಕೋ, ಇಲ್ಲ ಬದುಕಿಕೋ. ನನಗೇನೂ ಗೊತ್ತಿಲ್ಲ."

ತೊತ್ತು ಒಂದು ನಿಮಿಷ ಏನೋ ಯೋಚಿಸಿ, ಬಳಿಕೆಂದಳು : "ಆಗಲಿ ಸರಕಾರ, ಮುರಿದುಕೊಳ್ಳಿರಿ. ತಮಗೆ ತಾಳಿಕೊಳ್ಳಲಾಗುವುದಿಲ್ಲ, ನಾನು ತಾಳಿಕೊಳ್ಳುತ್ತೇನೆ. ಆಗುವುದೇನು, ಉಪವಾಸ ಸತ್ತೇನು. ಸಾವಿಗೆ ಅಂಜುವುದಕ್ಕೆ ಬದುಕಿಯಾದರೂ ನಾನು ಸುರುಕೊಳ್ಳುವ ಸುಖ ಏನು? ಒಂದು ತಿಂಗಳು ಏನೂ ಕೆಲಸವನ್ನೆ ಮಾಡಲಿಲ್ಲ ಎಂದು ತಿಳುಕೊಳ್ಳುತ್ತೇನೆ. ಮನುಷ್ಯನಿಂದ ಎಂಥೆಂಥ ನಷ್ಟಗಳೋ ಆಗುತ್ತವೆ; ಇದಂತೂ ತುಪ್ಪ."

ರಾಮೇಶ್ವರಿಗೆ ಒಮ್ಮೆಲೆ ತೊತ್ತಿನ ಮೇಲೆ ಮರುಕವುಂಟಾಯಿತು.

"ನೀನು ಉಪವಾಸ ಸತ್ತರೆ ನನ್ನ ಕೆಲಸ ಮಾಡುವವರು ಯಾರು ?" ಎಂದಳು.

"ಕೆಲಸ ಮಾಡಿಸಿಕೊಳ್ಳುವುದಿದ್ದರೆ ಊಟಕ್ಕೆ ಹಾಕಿರಿ; ಕೆಲಸ ಮಾಡಿಸುವುದು ಬೇಡ ಎಂತಿದ್ದರೆ ಉಪವಾಸ ಕೊಲ್ಲಿರಿ. ಈವೊತ್ತಿನಿಂದ ನಿಮ್ಮ ಬಾಗಿಲಲ್ಲಿಯೇ ಬಿದ್ದುಕೊಂಡಿರುತ್ತೇನೆ."

"ನಿಜವಾಗಿ ಹೇಳುತ್ತೇನೆ, ನೀನು ಈವೊತ್ತು ದೊಡ್ಡ ಹಾನಿ ಮಾಡಿಬಿಟ್ಟೆ."

"ನನಗೆ ಬಹಳ ಪಶ್ಚಾತ್ತಾಪ ಆಗಿದೆ ಸರಕಾರ."

"ಹೋಗು, ಮಡಕೆಯ ಚೂರು ಹೊರಗೆ ಒಯ್ದು ಒಗೆ, ನೆಲ ಸಾರಿಸು; ಮತ್ತು ಪೇಟೆಗೆ ಹೋಗಿ ತುಪ್ಪ ತೆಗೆದುಕೊಂಡು ಬಾ."

ಒಕ್ಕಲುಗಿತ್ತಿ ಹರುಷದಿಂದ ನೆಲ ಸಾರಿಸಿದಳು, ಮಡಕೆಯ ತುಂಡುಗಳನ್ನು ಕೂಡಿಸುತ್ತಿದ್ದಳು. ಅಷ್ಟರಲ್ಲಿ ಕುಂದನಲಾಲನು ಬಂದು ಗಡಿಗೆ ಒಡೆದುದನ್ನು ಕಂಡು, "ಈ ಮಡಕೆ ಏಕೆ ಒಡೆಯಿತು ?" ಎಂದು ಕೇಳಿದ.

"ಒಕ್ಕಲುಗಿತ್ತಿ ಎತ್ತಿ ಮೇಲಿಡುತ್ತಿದ್ದಳು; ಕೈತಪ್ಪಿ ಕೆಳಗೆ ಬಿದ್ದಿತು." ರಾಮೇಶ್ವರಿ ಉತ್ತರವಿತ್ತಳು.

"ಅಂದರೆ ಎಲ್ಲಾ ತುಪ್ಪ ನೆಲದ ಪಾಲಾಯಿತೆ ?" ಎಂದು ಕುಂದನಲಾಲ ಗುಡುಗಿದ.

"ಇನ್ನೇನು ಸ್ವಲ್ಪವಾದರೂ ಉಳಿದೀತು !"

"ಒಕ್ಕಲುಗಿತ್ತಿಗೆ ನೀನೇನೂ ಅನ್ನಲಿಲ್ಲವೆ ?"

"ಏನು ಅನ್ನುವುದು ? ಅವಳೇನು ತಿಳಿದೂ ತಿಳಿದೂ ಕೆಡವಲಿಲ್ಲ."

"ಈ ನಷ್ಟ ಯಾರು ಕೊಡುವವರು ?"

"ನಾವೇ ವಹಿಸುವುದು, ಮತ್ತಿನ್ನು ಯಾರು ? ನನ್ನ ಕೈಯಿಂದಲೇ ಜಾರಿಗೀರಿ ಬಿದ್ದಿದ್ದರೆ, ಕೈ ಕಡಿದುಕೊಳ್ಳುತ್ತಿದ್ದೆನೆ ?"

ಕುಂದನಲಾಲ ಆವಡುಗಚ್ಚಿದ. "ನಿನ್ನ ಮಾತೇ ನನಗೆ ಯಾವುದೂ ತಿಳಿಯಲೊಲ್ಲದು. ನಷ್ಟ ಮಾಡಿದವರಿಂದಲೇ ಅದನ್ನು ತೆಗೆದುಕೊಳ್ಳಬೇಕು. ಇದೇ ದೇವರ ನಿಯಮ. ಕಣ್ಣಿಗೆ ಕಣ್ಣು, ಪ್ರಾಣಕ್ಕೆ ಪ್ರಾಣ ಎಂದು ಈಸಾಮಸೀಹರಂಥ ದಯಾಳು ಪುರುಷರ ವಚನವುಂಟು. ಶಿಕ್ಷೆಯ ವಿಧಾನವನ್ನೇ

ವಿಶ್ವದಿಂದ ತೆಗೆದುಹಾಕಿಬಿಟ್ಟರೆ, ಇಲ್ಲಿ ಉಳಿಯುವರು ಯಾರು? ಇಡೀ ಭೂಮಂಡಲ ರಕ್ತದಿಂದ ಕೆಂಪಾಗುವುದು; ಕೊಲೆಗಾರರು ಹಗಲುಹಾಡೇ ಜನರ ತಲೆ ಒಡೆಯುವರು. ದಂಡದಿಂದಲೇ ಸಮಾಜದ ಮರ್ಯಾದೆ ಸ್ಥಿರವಾಗಿ ನಿಂತಿದೆ. ಎಂದು ದಂಡ ಇಲ್ಲದಾಗುವುದೋ ಅಂದು ಪ್ರಪಂಚವೂ ಇರುವುದಿಲ್ಲ. ದಂಡನೀತಿಗೆ ಇಷ್ಟೊಂದು ಮಹತ್ತ್ವವಿತ್ತಿರುವ ಮನು ಮೊದಲಾದ ಸ್ಮೃತಿಕಾರರು ಮೂರ್ಖರಲ್ಲ. ಬೇರೆ ಯಾವ ವಿಚಾರದಿಂದಲ್ಲ, ಮರ್ಯಾದೆಯ ರಕ್ಷಣೆಗಾಗಿ ದಂಡಿಸುವುದು ಅಗತ್ಯ. ಈ ರೂಪಾಯಿ ತೊತ್ತು ಕೊಡಲೇಬೇಕು. ಅವಳ ಸಂಬಳದಲ್ಲಿ ಮುರಿಯಬೇಕು. ಇಲ್ಲದಿದ್ದರೆ, ಇಂದು ಅವಳು ತುಪ್ಪದ ಗಡಿಗೆ ಒಡೆದಳು, ನಾಳೆ ಮತ್ತೇನಾದರೂ ಹಾನಿ ಮಾಡಿಯಾಳು."

ರಾಮೇಶ್ವರಿ ಅಂಜಂಜುತ್ತ "ನಾನಂತೂ ಅವಳನ್ನು ಕ್ಷಮಿಸಿಬಿಟ್ಟಿದ್ದೇನೆ." ಎಂದಳು.

ಕುಂದನಲಾಲ ಕಣ್ಣು ಕಿಸಿದು, "ಆದರೆ ನಾನು ಕ್ಷಮಿಸುವುದು ಅಸಂಭವ." ಎಂದ.

ಬಾಗಿಲ ಬದಿಯಲ್ಲಿ ನಿಂತು ಒಕ್ಕಲುಗಿತ್ತಿ ಈ ಮಾತುಕತೆ ಕೇಳಿದಳು. ಕುಂದನಲಾಲನ ಸಿಟ್ಟು ಏರುತ್ತಲೇ ಇತ್ತು. ತನಗಾಗಿ ರಾಮೇಶ್ವರಿ ಬಯಿಸಿಕೊಳ್ಳುವುದನ್ನು ಕಂಡು ಅವಳು ಮುಂದೆ ಬಂದಳು. "ಬಾಬೂಜೀ, ಈಗ ತಪ್ಪಂತೂ ಆಗಿಹೋಗಿದೆ. ಎಲ್ಲ ಹಣವನ್ನು ನನ್ನ ಸಂಬಳದಲ್ಲಿ ಮುರಿದುಕೊಳ್ಳಿರಿ. ಹತ್ತಿರ ಹಣ ಇಲ್ಲ, ಇದ್ದಿದ್ದರೆ ಈಗಲೇ ತಂದು ತಮ್ಮ ಕೈಯಲ್ಲಿ ಹಾಕುತ್ತಿದ್ದೆ." ಎಂದು ಅವಳೆಂದಳು.

ರಾಮೇಶ್ವರಿ ಅವಳನ್ನು ಗದರಿಸಿದಳು: "ತೊಲಗಾಚೆ, ನೀಯಾಕೆ ಬಂದೆ ನಡುವೆ! ದೊಡ್ಡ ಶ್ರೀಮಂತಿಕೆ ಬಂದವರ ಹಾಗೆ ಮಾಡುತ್ತಾಳೆ!"

ಕುಂದನಲಾಲ ಕಠೋರ ದೃಷ್ಟಿಯಿಂದ ಹೆಂಡತಿಯ ಕಡೆಗೆ ನೋಡಿ, "ನೀನೇಕೆ ಅವಳ ವಕೀಲಿ ಮಾಡುತ್ತೀ? ಇದು ನಿಚ್ಚಳವಾಗಿ ಕಾಣುವ ಮಾತೇ ಇದೆ. ಸಣ್ಣ ಹುಡುಗರಿಗೂ ತಿಳಿಯುತ್ತದೆ—ಯಾರು ಹಾನಿ ಮಾಡುತ್ತಾರೋ ಅವರು ಅದರ ದಂಡ ಅನುಭವಿಸಬೇಕು. ಇದು

ರೂಪಾಯಿ ಹಾನಿ ನಾನು ಸೋಸಬೇಕು ? ಏನು ಕಾರಣ ? ಮಡಕೆಯನ್ನು ಜೋಕೆಯಿಂದ ಎತ್ತಬಾರದೇಕೆ ಇವಳು ? ಏಕೆ ಮಾಡಬೇಕಿತ್ತು ಇಷ್ಟು ಗಡಿಬಿಡಿ ? ನಿನ್ನನ್ನು ಸಹಾಯಕ್ಕೆ ಕರೆಯಬಾರದೇಕೆ ? ಇದು ಪೂರ್ಣ ಇವಳ ನಿಷ್ಕಾಳಜಿತನ. ” ಎಂದೆನ್ನುತ್ತ ಹೊರಗೆ ಹೊರಟುಹೋದ.

೬

ಈ ಅಪಮಾನ ರಾಮೇಶ್ವರಿಗೆ ಬಹಳ ನಟ್ಟಿತು. ಬಯ್ಯುವುದೇ ಇದ್ದರೆ ಕೋಣೆಯಲ್ಲಿ ಕರೆದು ಏಕಾಂತದಲ್ಲಿ ಬಯ್ದಿದ್ದರೆ ! ತೊತ್ತಿನ ಎದುರಿನಲ್ಲಿ ತನ್ನನ್ನು ಅರಳೆ ಹೊಡಚಿದಂತೆ ಹೊಡಚಿಬಿಟ್ಟರು. ಇವರು ಎಂತಹ ಪ್ರಕೃತಿಯ ಮನುಷ್ಯರೆಂಬುದೇ ಅವಳಿಗೆ ತಿಳಿಯದಾಗಿತ್ತು. ಈವೊತ್ತು ಒಂದು ಮಾತನಾಡಿದರೆ ನಾಳೆ ಅದನ್ನೇ ಖಂಡಿಸುತ್ತಾರೆ. ಬಾಯಿಬಡಕರಂತೆ ರೀತಿ. ಒಂದೊಂದು ಬಾರಿ ದಯೆಯ ಹಾಗೂ ಔದಾರ್ಯದ ಅವತಾರವೇ ಆಗುತ್ತಾರೆ; ಅದೇ ಈ ದಿನ ಐದು ರೂಪಾಯಿಗಳಿಗಾಗಿ ಪ್ರಾಣ ಕಳೆದುಕೊಳ್ಳುತ್ತಿದ್ದಾರೆ. ನಾಳೆ ಒಕ್ಕಲಗಿತ್ತಿ ಕುಳಿತು ಬಿಟ್ಟಳೆಂದರೆ ದೊಡ್ಡ ತಮಾಷೆಯೇ ಆದೀತು. ಇವರ ಬಾಯಿಂದ ಒಮ್ಮೆ ಒಂದು ಪ್ರಸನ್ನತೆಯ ಮಾತು ಹೊರಟಿದ್ದರೆ! ಇನ್ನು ನಾನೂ ನನ್ನ ಸ್ವಭಾವವನ್ನು ಬದಲಿಸಬೇಕಾಗುವುದು. ಇದೆಲ್ಲವೂ ನನ್ನ ಸರಳತನದ ಫಲ. ನಾನು ನಯವಾಗಿ ಹೋದಂತೆಲ್ಲ ಇವರು ಕೋಪದ ಎಲ್ಲೆ ಮೀರುತ್ತಾರೆ. ಇವಕ್ಕೆ, ಒಂದು ಆಡಿದರೆ ಎರಡು ಆಡುವುದೇ ಮದ್ದು. ನಾನು ಸೈರಿಸಿಕೊಳ್ಳುವುದಾದರೂ ಎಲ್ಲಿಯ ತನಕ, ಎಷ್ಟೆಂದು ಸೈರಿಸಿಕೊಳ್ಳುವುದು ? ಅದಕ್ಕೊಂದು ಎಲ್ಲೆ ಇದೆ. ಯಾವಾಗ ನೋಡಿದರೂ ಅನ್ನುವುದೇ ಅನ್ನುವುದು. ಸ್ವಭಾವದ ನೆಲೆಯೇ ತಿಳಿಯದಿದ್ದಾಗ ಅವರನ್ನು ಸಂತುಷ್ಟವಾಗಿ ಇರಿಸುವುದು ಯಾರಿಗೆ ಸಾಧ್ಯ ? ಆ ದಿನ ಬೆಕ್ಕನ್ನು ಕೊಂಚ ಹೊಡೆದರೆ ದಯೆಯ ಬಗ್ಗೆ ಉಪದೇಶ ಮಾಡಿದರು. ಈ ದಿನ ಆ ದಯೆ ಎಲ್ಲಿ ಹೋಯಿತು ? ಇವರನ್ನು ಸಮ ಮಾಡಲು ಒಂದೇ ಉಪಾಯ—ನಾಯಿ ಬೊಗಳುತ್ತಿದೆ ಎಂದು ತಿಳಿಯುವುದು; ಬೇಡ, ಹಾಗೇಕೆ ಮಾಡಬೇಕು ? ನನ್ನ ವಿಚಾರದಿಂದ ಯಾವ ಕೆಲಸವನ್ನೂ ಮಾಡಲಾಗದು; ಅವರು ಎಷ್ಟು ಹೇಳುತ್ತಾರೆ ಅಷ್ಟು ಮಾಡುವುದು.—ರವಷ್ಟು

ಕಡಿಮೆ ಬೇಡ, ರವಷ್ಟು ಹೆಚ್ಚು ಬೇಡ. ನನ್ನ ಯಾವ ಕೆಲಸವೂ ಇವರ ಮನಸಿಗೆ ಬರುವುದಿಲ್ಲವೆಂದ ಮೇಲೆ, ಮುಂಬಿದ್ದು ದುಡಿಯುವುದಕ್ಕೆ ನನಗೇನು ನಾಯಿ ಕಚ್ಚಿದೆ! ಸರಿ, ಇದೇ ಲೇಸು.

ಇಡೀ ಇರುಳು ಅವಳು ಇದೇ ಸ್ವಪ್ನಜಾಲದಲ್ಲಿ ಬಿದ್ದಿದ್ದಳು. ಬೆಳಗಿನಲ್ಲಿ ಕುಂದನಲಾಲ ಜಳಕಕ್ಕೆ ಹೋದ. ಮನೆಗೆ ಮರಳಿದಾಗ ಒಂಬತ್ತು ಹೊಡೆದು ಹೋಗಿತ್ತು. ಒಳಗೆ ಹೋಗಿ ನೋಡಿದ. ಕಸ-ಮುಸುರೆ-ಸಾರಣೆ ಒಂದೂ ಆಗಿರಲಿಲ್ಲ. ಜೀವವೇ ಬತ್ತಿದಂತಾಯಿತು.

"ಏಕೆ, ಒಕ್ಕಲುಗಿತ್ತಿ ಬರಲಿಲ್ಲವೆ?" ಎಂದು ರಾಮೇಶ್ವರಿಯನ್ನು ಕೇಳಿದ.

"ಇಲ್ಲ"

"ಮುಂದೆ?"

"ತಮ್ಮ ಅಪ್ಪಣೆಯಾದ ಹಾಗೆ."

"ಇದು ಬಹಳ ಕಷ್ಟ."

"ಹಾಂ, ಹೂಂ!"

"ಪಕ್ಕದವರ ಒಕ್ಕಲುಗಿತ್ತಿಯನ್ನು ಏಕೆ ಕರಿಸಿಕೊಳ್ಳಲಿಲ್ಲ?"

"ಯಾರ ಅಪ್ಪಣೆಯಿಂದ ಕರಸಲಿ? ಈಗ ಅಪ್ಪಣೆಯಾಯಿತು; ಇನ್ನು ಕರೆಸಿಕೊಳ್ಳುತ್ತೇನೆ."

"ಈಗ ಕರೆಸುತ್ತೀಯೆ, ಎಂದರೆ ಅಡಿಗೆ ಆಗುವುದು ಯಾವಾಗ? ಒಂಬತ್ತು ಹೊಡೆದುಹೋಯಿತು. ಇಷ್ಟು ನೀನು ನಿನ್ನ ಬುದ್ಧಿಯಿಂದಲೇ ಮಾಡಬೇಕಿತ್ತು; ಒಕ್ಕಲುಗಿತ್ತಿ ಬರದೆ ಇದ್ದರೆ ಮತ್ತೊಬ್ಬಳನ್ನು ಕರೆಯಬೇಕಿತ್ತು."

"ಆದರೆ, ಆಗ, ಬೇರೆ ಕೆಲಸದವಳನ್ನು ಏಕೆ ಕರೆದೆ, ಎಂದು ಸರಕಾರ ಕೇಳಿದ್ದರೆ ಏನು ಉತ್ತರ ಹೇಳಲಿ? ನನ್ನ ಬುದ್ಧಿಯಿಂದ ಕೆಲಸ ಮಾಡುವುದನ್ನು ನಾನು ಬಿಟ್ಟುಬಿಟ್ಟಿದ್ದೇನೆ. ಇನ್ನು ನಿಮ್ಮ ಬುದ್ಧಿಯಂತೆಯೇ ಕೆಲಸ ನಡೆಸುವೆ. ನನ್ನ ಮೇಲೆ ಯಾರೂ ಕಣ್ಣು ತೆರೆಯುವುದು ನನಗೆ ಬೇಕಾಗಿಲ್ಲ."

"ಒಳ್ಳೇದು, ಈಗ ಏನು ಮಾಡಬೇಕು?"

" ತಾವು ಹೇಳಿದ ಹಾಗೆ. "

" ನೀನು ನನ್ನನ್ನು ತಿದ್ದಬೇಕೆನ್ನುವೆಯೋ ? "

" ಛೆ. ನಿಮ್ಮನ್ನು ತಿದ್ದುವ ಸಾಮರ್ಥ್ಯ ನನಗೆಲ್ಲಿ ? ಹುಜೂರವರ ದಾಸಿ ನಾನು; ಹೇಳಿದ್ದು ಮಾಡುವವಳು. "

" ನಾನಂತೂ ಹೋಗುತ್ತೇನೆ. ನಿನ್ನ ಮನಸಿಗೆ ಬಂದ ಹಾಗೆ ಮಾಡಿಕೋ. "

" ಹೋಗಿರಿ. ನನ್ನ ಮನಸಿಗೆ ಯಾವುದೂ ಬರುವುದಿಲ್ಲ, ನಾನು ಏನೂ ಮಾಡುವುದಿಲ್ಲ. "

" ಹೋಗಲಿ, ನೀನು ಏನು ಉಣ್ಣುತ್ತೀ ? "

" ತಾವು ಕೊಟ್ಟದ್ದು. "

" ತಾ, ಪೇಟೆಯಿಂದ ಪೂರಿ ತಂದು ಕೊಡುತ್ತೇನೆ. "

ರಾಮೇಶ್ವರಿ ರೂಪಾಯಿ ತಂದುಕೊಟ್ಟಳು. ಕುಂದನಲಾಲ ಪೂರಿ ತಂದ. ಆ ಒಪ್ಪೊತ್ತಿನ ಕೆಲಸ ತೀರಿದಂತಾಯಿತು. ಕಚೇರಿಗೆ ಹೋದ. ತಿರುಗಿ ಬರುವುದು ತಡವಾಯಿತು.

" ಕೆಲಸದವಳು ಬಂದಳೇ ? " ಬರುಬರುತ್ತಲೇ ಕೇಳಿದ.

" ಇಲ್ಲ. "

" ನಾನು ಹೇಳಿದ್ದೆನಲ್ಲ—ಮುಗ್ಗುಲು ನುನೆಯುವವಳನ್ನು ಕರೆದುಕೊಂಡು ಬಾ ಎಂದು. "

" ಕರೆಸಿದ್ದೆ. ಆಕೆ ಐದು ರೂಪಾಯಿ ಬೇಡುತ್ತಾಳೆ. "

" ಒಂದೇ ರೂಪಾಯಿ ವ್ಯತ್ಯಾಸವಾಯಿತು; ಏಕೆ ಇಟ್ಟುಕೊಳ್ಳಲಿಲ್ಲ? "

" ಹಾಗೆ ಅಪ್ಪಣೆ ಆಗಿರಲಿಲ್ಲ. ಒಂದು ರೂಪಾಯಿ ಏಕೆ ಹೆಚ್ಚು ಕೊಟ್ಟೆ ಎಂದು ಕೇಳಿದರೆ, ಮಿತವ್ಯಯದ ಬಗ್ಗೆ ಉಪದೇಶ ಮಾಡತೊಡಗಿದರೆ ನಾನೇನು ಮಾಡಲಿ ? "

" ಶತಮೂರ್ಖಳು ನೀನು ! "

" ಸತ್ಯವಾಗಿ. "

" ಹಾಗಾದರೆ ಈಗಲೂ ಅಡಿಗೆ ಇಲ್ಲವೆ ? "

" ಉಪಾಯವಿಲ್ಲ. "

ಕುಂದನಲಾಲ ತಲೆಹಿಡಿದುಕೊಂಡು ಚಾಪೆಯ ಮೇಲೆ ಕುಳಿತ. ಇದೊಂದು ಹೊಸ ಸಂಕಟವೇ ಮೈಮೇಲೆ ಬಿದ್ದಿತ್ತು. ಅವನಿಗೆ ಪೂರಿ ಸೇರುತ್ತಿರಲಿಲ್ಲ. ಅವನ ಮನಸು ಕೆರಳಿತು. ರಾಮೇಶ್ವರಿಗೆ ಎತ್ತರೆ ಪತ್ತರೆ ನಾಲ್ಕು ಮಾತನಾಡಿದ. ಆದರೆ ಅವಳು ಅವನ್ನು ಕಿವಿಯೊಳಗೇ ಹಾಕಿಕೊಳ್ಳಲಿಲ್ಲವೇನೋ ಯಾವ ಆಟವೂ ನಡೆಯದಾಗಲು ತೊತ್ತಿನ ಶೋಧಕ್ಕಾಗಿ ಹೊರಟ. ಅವನು ಹೋದ ಕಡೆ ತೊತ್ತು ಕೆಲಸ ತೀರಿಸಿ ಮನೆಗೆ ಹೋದಳೆಂದು ತಿಳಿಯಿತು. ಕೊನೆಗೆ ಒಬ್ಬ ನೀರಿನವ ಸಿಕ್ಕ. ಅವನನ್ನೆ ಕರೆದುಕೊಂಡು ಬಂದ. ಅವನು ಎರಡಾಣೆ ತಕ್ಕೊಂಡ; ಪಾತ್ರೆಗಳನ್ನಷ್ಟು ತೊಳೆದಿಟ್ಟು ಹಾದಿಹಿಡಿದ.

" ಅಡಿಗೆ ಏನಾಗಬೇಕು ? "

" ರೊಟ್ಟಿ ಪಲ್ಲೆ ಮಾಡು, ಅಥವಾ ಇದಕ್ಕೂ ಆತಂಕವುಂಟೊ ಏನಾದರೂ ? '

" ಮನೆಯಲ್ಲಿ ತರಕಾರಿ ಇಲ್ಲವಲ್ಲ ? "

" ಹಗಲೆಲ್ಲ ಕುಳಿತಿದ್ದೆ, ತರಕಾರಿ ತಕ್ಕೊಳ್ಳಲಿಕ್ಕೂ ಆಗಲಿಲ್ಲವೆ ? ಈಗ ಇಷ್ಟು ರಾತ್ರಿಯಾದ ಮೇಲೆ ತರಕಾರಿ ಎಲ್ಲಿ ಸಿಕ್ಕಬೇಕು ? "

" ತರಕಾರಿ ತಕ್ಕೊಂಡಿಡಲಿಕ್ಕೆ ಅಪ್ಪಣೆಯಾಗಿದ್ದಿಲ್ಲ ನನಗೆ. ನಾನೆಲ್ಲಾದರೂ ದುಡ್ಡು ಅದ್ದೇಲಿ ಹೆಚ್ಚಿಗೆ ಕೊಟ್ಟು ಬಿಟ್ಟಿದ್ದರೆ ? "

ಕುಂದನಲಾಲನು ವಿವಶನಾಗಿ ಹಲ್ಲುಮಸೆಯುತ್ತ, " ಅಂತೂ ನೀನು ಅನ್ನುವುದಾದರೂ ಏನು ? " ಎಂದ.

ರಾಮೇಶ್ವರಿ ಶಾಂತಭಾವದಿಂದ ಉತ್ತರವಿತ್ತಳು : " ಏನೂ ಇಲ್ಲ. ಕೇವಲ ಅಪಮಾನ ಮಾತ್ರ ಬೇಡ. "

" ನಿನ್ನ ಅಪಮಾನ ಯಾರು ಮಾಡುತ್ತಾರೆ ? "

" ತಾವು. "

"ಅಂದರೆ, ಮನೆಯ ಮಾತಿನಲ್ಲಿ ನಾನು ಏನೂ ಹೇಳಬಾರದೆ ?"

"ನೀವು ಹೇಳದಿದ್ದರೆ ಮತ್ತೆ ಯಾರು ಹೇಳಬೇಕು ? ನಾನಂತೂ ಕೇವಲ ಆಜ್ಞೆಯ ಅಧೀನಳು."

ರೊಟ್ಟಿ-ಬೇಳೆಯ ಮೇಲೆ ರಾತ್ರಿ ಸಾಗಿತು. ಇಬ್ಬರೂ ಮಲಗಿದರು. ರಾಮೇಶ್ವರಿಗೆ ಕ್ಷಿಪ್ರದಲ್ಲಿಯೇ ನಿದ್ದೆ ಬಂದುಬಿಟ್ಟಿತು. ಕುಂದನಲಾಲ ಬಹಳ ಹೊತ್ತಿನ ತನಕ ಆ ಮಗ್ಗುಲು ಈ ಮಗ್ಗುಲು ಹೊರಳುತ್ತಲಿದ್ದ. ರಾಮೇಶ್ವರಿ ಈ ರೀತಿ ಅಸಹಕಾರ ಮಾಡುತ್ತಿದ್ದರೆ ಒಂದಿನವೂ ಬಾಳುವೆ ನಡೆಯಲಾರದು. ಈವೊತ್ತೇ ಊಟ ದೊರೆಯಲು ಅತಿ ಕಷ್ಟವಾಯಿತು. ಇವಳ ತಿಳಿವಳಿಕೆಯೇ ವಿಪರೀತವಾಗಿದೆ. ನಾನು ತನ್ನನ್ನು ತಿರಸ್ಕರಿಸುತ್ತಿರುವೆನೆಂದು ಅವಳು ತಿಳಿದುಕೊಂಡಂತೆ ಕಾಣುವುದು. ಸುಮ್ಮನಿರುವುದು ನನ್ನಿಂದ ಆಗುವುದಿಲ್ಲ. ಆದರೆ, ಆಡಿದ ಮಾತಿನ ಪರಿಣಾಮ ಈ ರೀತಿಯಾದರೆ ಮಾತನಾಡುವುದು ನಿಷ್ಪ್ರಯೋಜಕ. ಹಾನಿಯಾದರೂ ಚಿಂತೆಯಿಲ್ಲ; ಕಚೇರಿಯಿಂದ ಬಂದು ತಿರುಗಿ ಪೇಟೆಗೆ ಓಡು ಎಂದರೆ ನನ್ನಿಂದ ಸಾಧ್ಯವಿಲ್ಲ. ಒಕ್ಕಲುಗಿತ್ತಿಯಿಂದ ರೂಪಾಯಿ ತೆಗೆದುಕೊಳ್ಳುವುದು ಈಕೆಗೆ ಸೇರಲಿಲ್ಲ; ಹೌದು ಅದು ಅನುಚಿತವೂ ಆಗಿತ್ತು. ಹಣವಂತೂ ಸಿಕ್ಕಲಿಲ್ಲ, ಮೇಲೆ ತೊತ್ತೂ ಕೆಲಸವನ್ನು ಬಿಟ್ಟು ಹೋದಳು. ಕುಂದನಲಾಲ ಹೆಂಡತಿಯನ್ನು ಎಬ್ಬಿಸಿದ.

"ಎಷ್ಟು ನಿದ್ದೆಯೇ ನಿನ್ನದು ?"

"ಕೂಲಿಕಾರರಿಗೆ ಚೆನ್ನಾಗಿ ನಿದ್ದೆ ಬರುತ್ತದೆ."

"ಸಿಟ್ಟಾಗಬೇಡ; ಒಕ್ಕಲುಗಿತ್ತಿಯಿಂದ ರೂಪಾಯಿ ವಸೂಲು ಮಾಡುವುದು ಬೇಡ."

"ಅವಳು ಕೈಯೊಳಗೆ ಹಿಡಿದುಕೊಂಡೇ ನಿಂತಿದ್ದಾಳೇನೋ ಬಹುಶಃ."

"ಅವಳಿಗೆ ಗೊತ್ತಾದರೆ ಕೆಲಸಕ್ಕೆ ಬರುತ್ತಾಳೆ."

"ಒಳ್ಳೇದಾಗಲಿ, ಕರೆ ಕಳಿಸುತ್ತೇನೆ."

"ಇಂದಿನಿಂದ ನಾನು ಕಿವಿ ಹಿಡಿಯುತ್ತೇನೆ: ನಿನ್ನ ಮಾತಿನಲ್ಲಿ ನಡುವೆ ಬಾಯಿಹಾಕುವುದಿಲ್ಲ."

"ನಾನೊಂದು ವೇಳೆ ಮನೆಯನ್ನೇ ಹಾಳುಮಾಡಿದರೆ ?"

" ಹಾಳು ಮಾಡು ಅಥವಾ ಕಾಯಿ, ಆದರೆ ಸಿಟ್ಟಾಗಬೇಡ ಮಾತ್ರ. ಆದರೆ ನೀನು ಯಾವ ವಿಷಯದಲ್ಲಿಯಾದರೂ ನನ್ನ ಆಲೋಚನೆ ಕೇಳಿದರೆ ಹೇಳುತ್ತೇನೆ; ಇಲ್ಲದಿದ್ದರೆ ಬಾಯಿ ಬಿಚ್ಚುವುದಿಲ್ಲ. "

" ನಾನು ಅಪಮಾನ ಸಹಿಸುವುದಿಲ್ಲ. "

" ಈ ತಪ್ಪನ್ನು ಕ್ಷಮಿಸು. "

" ನಿಜವಾದ ಮನಸಿನಿಂದ ಹೇಳುವಿರಷ್ಟೆ ? "

" ನಿಜವಾದ ಮನಸಿನಿಂದಲೇ. "

# ಪಂಚಪರಮೇಶ್ವರ



ಜುಮ್ಮನ ಶೇಖ ಮತ್ತು ಅಲಗು ಚೌಧರಿ ಅತ್ಯಂತ ನಿಕಟ ಸ್ನೇಹಿತರು. ಪಾಲುಗಾರಿಕೆಯಲ್ಲಿ ಬೇಸಾಯ ನಡೆಯುತ್ತಿತ್ತು. ಕೆಲವೊಂದು ಕೊಡು ಕೊಳ್ಳುವಿಕೆಯಲ್ಲಿಯೂ ಪಾಲುಗಾರಿಕೆಯಿತ್ತು. ಒಬ್ಬನಲ್ಲಿ ಇನ್ನೊಬ್ಬನಿಗೆ ಅಚಲವಾದ ವಿಶ್ವಾಸ. ಜುಮ್ಮನ ಮಕ್ಕಾಯಾತ್ರೆಗೆ ಹೋದಾಗ ತನ್ನ ಮನೆಯನ್ನು ಅಲಗುವಿಗೆ ಒಪ್ಪಿಸಿ ಹೋಗಿದ್ದ. ಅಲಗೂ ಊರು ಬಿಟ್ಟು ಹೋಗುವ ಸಂದರ್ಭಗಳಲ್ಲಿ ಜುಮ್ಮನನಿಗೆ ಮನೆ ಒಪ್ಪಿಸುತ್ತಿದ್ದ. ಅವರಿಬ್ಬರಲ್ಲಿ ಪಾನ-ಭೋಜನ ವ್ಯವಹಾರವಿರಲಿಲ್ಲ; ಧರ್ಮದ ಸಂಬಂಧವಿರಲಿಲ್ಲ. ಕೇವಲ ವಿಚಾರದಲ್ಲಿ ಹೊಂದಿಕೆಯಿತ್ತು. ಗೆಳೆತನದ ಮೂಲಮಂತ್ರವೂ ಇದೇ.

ಅವರ ಈ ಗೆಳೆತನ ಹುಟ್ಟಿದುದು ಅವರಿಬ್ಬರೂ ಚಿಕ್ಕ ಬಾಲಕರಿರುವಾಗ. ಜುಮ್ಮನನ ಪೂಜ್ಯ ತಂದೆ ಜುಮರಾತಿಯವರು ವಿದ್ಯೆ ಕಲಿಸುತ್ತಿದ್ದರು. ಅಲಗುಗುರುವಿನ ಸೇವೆಯನ್ನು ಬಹಳವಾಗಿ ಮಾಡುತ್ತಿದ್ದ. ಎಷ್ಟೋ ದಿನ ತಟ್ಟೆಗಳನ್ನು ತಿಕ್ಕಿದ, ತಾಲಿಗಳನ್ನು ತೊಳೆದ. ಅವರ ಹುಕ್ಕಗೆ ಒಂದು ಕ್ಷಣವೂ ವಿರಾಮ ದೊರೆಯುತ್ತಿರಲಿಲ್ಲ—ಪ್ರತಿಯೊಂದು ಚಿಲಿಮೆ ಅಲಗುವನ್ನು ಅರ್ಧ ಗಂಟೆಯವರೆಗೂ ಪುಸ್ತಕಗಳಿಂದ ಅಗಲಿಸಿರುತ್ತಿತ್ತು. ಅಲಗುವಿನ ತಂದೆ ಹಳೆಯ ವಿಚಾರದ ಮನುಷ್ಯ. ಅವರಿಗೆ ಶಿಕ್ಷಣಕ್ಕಿಂತ ಗುರುವಿನ ಸೇವೆ ಶುಶ್ರೂಷೆಗಳಲ್ಲಿಯೇ ವಿಶ್ವಾಸ ಹೆಚ್ಚು. ವಿದ್ಯೆ ಓದುವುದರಿಂದ ಬರುವುದಲ್ಲ, ಎಲ್ಲಾ ಆಗುವುದು ಗುರುವಿನ ಆಶೀರ್ವಾದದಿಂದ ಎಂದು ಅವರು ಹೇಳುವರು. ಎಲ್ಲದಕ್ಕೂ ಗುರುವಿನ ಕೃಪಾದೃಷ್ಟಿ ಬೇಕು, ಎನ್ನುವರು. ಆದರೂ, ಜುಮರಾತಿ ಶೇಖರವರ ಆಶೀರ್ವಾದ ಅಥವಾ ಸತ್ಸಂಗದ ಯಾವ ಪರಿಣಾಮ ಆಗದೆ ಹೋದರೂ ವಿದ್ಯೋಪಾರ್ಜನೆಯಲ್ಲಿ ನಾನು ಯಥಾಶಕ್ತಿ

ಯಾವ ಮಾತನ್ನೂ ಎತ್ತಿಡಲಿಲ್ಲವೆಂದು ಬಗೆದು ಸಮಾಧಾನ ಹೊಂದುವನು; ವಿದ್ಯೆ ಅವನ ಭಾಗ್ಯದಲ್ಲಿಯೇ ಇರದಿದ್ದರೆ ಹೇಗೆ ಬರುತ್ತದೆ ಎಂದು ಅವರೆನ್ನುತ್ತಿದ್ದರು.

ಆದರೆ ಜುಮರಾತಿ ಶೇಖರು ಸ್ವಯಂ ಆಶೀರ್ವಾದದ ತತ್ವವನ್ನು ಒಪ್ಪುವವರಾಗಿರಲಿಲ್ಲ. ತಮ್ಮ ಬಡಿಗೆಯ ಮೇಲೆಯೇ ಹೆಚ್ಚು ಭರವಸೆ ಅವರಿಗೆ. ಆ ಒಡಿಗೆಯ ಪ್ರತಾಪದಿಂದಲೇ ಈಗ ನೆರೆಹೊರೆಯ ಹಳ್ಳಿಗಳಲ್ಲಿ ಜುಮ್ಮನನಿಗೆ ಗೌರವ ದೊರೆಯುತ್ತಿದೆ. ಅವರು ಬರೆದ ಒತ್ತೆ ಕಾಗದದ ಮೇಲೆ ಅಥವಾ ಖರೀದಿ ಕಾಗದದ ಮೇಲೆ ಲೆಕ್ಕಣಿಕೆ ಎತ್ತಲು ಕಚೇರಿಯ ಗುಮಾಸ್ತರೂ ಅಶಕ್ತರಾಗಿದ್ದರು. ಹಳ್ಳಿಯ ಅಂಚೆಯಾಳುಗಳು, ಕಾನ್ಸ ಟೇಬಲರು, ತಹಸೀಲದ ಪೇದೆಗಳು ಅವರ ಕೃಪೆಯನ್ನು ಹಾರೈಸುತ್ತಿದ್ದರು. ಅತಏವ, ಅಲಗುವಿನ ಮಾನಕ್ಕೆ ಅವನ ಧನ ಕಾರಣವಾಗಿದ್ದರೆ, ಜುಮ್ಮನ ಶೇಖನು ತನ್ನ ಅಮೂಲ್ಯ ವಿದ್ಯೆಯಿಂದಲೇ ಎಲ್ಲರ ಆದರಕ್ಕೆ ಪಾತ್ರನಾಗಿದ್ದ.

೨

ಜುಮ್ಮನ ಶೇಖನಿಗೆ ಒಬ್ಬ ಮುದುಕಿ ಖಾಲಾ (ಅಬಚಿ) ಇದ್ದಳು ಅವಳಿಗೆ ಸ್ವಲ್ಪ ಆಸ್ತಿಯಿತ್ತು; ಅವಳ ಹತ್ತಿರದ ಸಂಬಂಧಿಕರು ಯಾರೂ ಇರಲಿಲ್ಲ. ಜುಮ್ಮನ ದೊಡ್ಡ ದೊಡ್ಡ ಆಶ್ವಾಸನ ಕೊಟ್ಟು ಆ ಆಸ್ತಿಯನ್ನು ತನ್ನ ಹೆಸರಿಗೆ ಬರೆಸಿಕೊಂಡಿದ್ದ. ಆ ದಾನಪತ್ರದ ನೋಂದಾಗುವವರೆಗೂ ಖಾಲಾ ಜಾನಳಿಗೆ ತುಂಬಾ ಆದರ ಸತ್ಕಾರ ನಡೆಯುತ್ತಿತ್ತು. ಒಳ್ಳೊಳ್ಳೆಯ ಸವಿಯೂಟ ತಿನಿಸುಗಳು ಅವಳಿಗೆ ದೊರೆಯುತ್ತಿದ್ದವು ಹಲ್ವೆ, ಮಾಂಸ ಬೆರೆಸಿದ ಅನ್ನಗಳ ಸುರಿಮಳೆಯೇ ಆಗುತ್ತಿತ್ತು. ಆದರೆ ನೋಂದಿನ ಮುದ್ರೆ ಈ ಆದರ ಸತ್ಕಾರಗಳಿಗೂ ಮುದ್ರೆಯೊತ್ತಿಬಿಟ್ಟಿತೇನೊ. ಜುಮ್ಮನನ ಹೆಂಡತಿ–ಕರೀಮನ–ರೊಟ್ಟಿಗಳ ಜೊತೆಯಲ್ಲಿ ಕಹಿ ಮಾತಿನ ತೀಕ್ಷ್ಣವಾದ ಪಲ್ಯೆಯನ್ನೂ ನೀಡತೊಡಗಿದಳು. ಜುಮ್ಮನ ಶೇಖನೂ ನಿಷ್ಠುರನಾದ. ಈಗ ಬಹುಶಃ ದಿನಾಲೂ ಇಂತಹ ಮಾತುಗಳನ್ನು ಬಡಪಾಯಿ ಖಾಲಾಜಾನ ಆಡಿಸಿಕೊಳ್ಳಬೇಕಾಗುವುದು.

‘ಈ ಮುದಿ ಖೋಡಿ ಇನ್ನೂ ಎಷ್ಟು ದಿನ ಬದುಕುತ್ತದೋ ಏನೋ.

ಎರಡು ಮೂರು ಬಿಘೆ ಬರಡು ಭೂಮಿ ಕೊಡುವದಿರಲಿ, ಕೊಂಡುಕೊಂಡು ಬಿಟ್ಟಹಾಗೆ ಮಾಡುತ್ತಾಳೆ. ಒಗ್ಗರಣೆಯ ತೊವ್ವೆ ಇಲ್ಲದೆ ರೊಟ್ಟಿಯೇ ಇಳಿಯುವದಿಲ್ಲ ಗಂಟಲೊಳಗೆ. ಈಕೆಯ ಹೊಟ್ಟೆ ಬಕ್ಕರಿಸಿದಷ್ಟು ಹಣದಿಂದ ಇಡೀ ಊರನ್ನೇ ಕೊಳ್ಳಬಹುದಾಗಿತ್ತು.'

ಖಾಲಾಜಾನ ಕೆಲ ದಿನ ಅನಿಸಿಕೊಂಡಳು, ಸಹಿಸಿಕೊಂಡಳು. ಕೊನೆಗದು ಅಸಹ್ಯವಾಗಲು ಜುಮ್ಮನನಲ್ಲಿ ದೂರಿಕೊಂಡಳು. ಜುಮ್ಮನನಿಗೆ ಸ್ಥಾನೀಯ ಅಧಿಕಾರಿಯ–ಗೃಹಸ್ವಾಮಿನಿಯ–ವ್ಯವಸ್ಥೆಯಲ್ಲಿ ಕೈ ಹಾಕುವುದು ಉಚಿತ ವೆಂದು ತೋರಲಿಲ್ಲ. ಮತ್ತೆ ಕೆಲದಿನಗಳು ಹೀಗೆಯೇ ಅಳುತ್ತ ಕರೆಯುತ್ತ ಸಾಗಿದವು. ಕೊನೆಗೆ ಒಂದು ದಿನ ಖಾಲಾಜಾನ ಜುಮ್ಮನನಿಗೆ, "ಮಗೂ, ನಿನ್ನೊಂದಿಗೆ ನನಗೆ ಕೂಡಿ ನಡೆಯುವುದಿಲ್ಲ. ನೀನು ನನಗೆ ರೂಪಾಯಿ ಕೊಡುತ್ತ ಹೋಗು, ನಾನು ಬೇರೆ ಕುಚ್ಚಿಕೊಂಡು ಉಣ್ಣುತ್ತೇನೆ" ಎಂದಳು.

ಜುಮ್ಮನ ದಿಟ್ಟತನದಿಂದ ಉತ್ತರವಿತ್ತ. "ಇಲ್ಲೇನು ರೂಪಾಯಿ ಗಿಡದಲ್ಲಿ ಆಗುತ್ತವೆಯೆ?"

"ನನಗೆ ಒಣದೋ ಹಸಿಯದೋ ಏನಾದರೂ ಬೇಕು ಅಲ್ಲವೆ?" ನಮ್ರತೆಯಿಂದ ಖಾಲಾ ನುಡಿದಳು.

"ನೀನು ಸಾವಿನೊಂದಿಗೆ ಕಾದಾಡಿ ಬಂದಿದ್ದೀ ಎಂದು ಒಂದು ಸ್ವಲ್ಪ ವಾದರೂ ತಿಳಿದಿದ್ದರೆ?" ಗಂಭೀರವಾಗಿ ಜುಮ್ಮನ ಮಾರ್ನುಡಿದ.

ಖಾಲಾಜಾನಳಿಗೆ ಸಿಟ್ಟುಬಂದಿತು. ಪಂಚಾಯಿತಿ ಕೂಡಿಸುವೆನೆಂದು ಬೆದರಿಸಿದಳು. ಚಿಗರಿ ಬಲೆಯ ಕಡೆಗೆ ಹೊರಟಿರುವುದನ್ನು ಕಂಡು ಬೇಡ ಮನದೊಳಗೇ ನಗುವ ಹಾಗೆ ನಕ್ಕ ಜುಮ್ಮನ. "ಅವಶ್ಯವಾಗಿ ಪಂಚಾಯಿತಿ ಮಾಡು. ತೀರ್ಮಾನ ಆಗುತ್ತದೆ. ಹಗಲೂ ಇರಳೂ ಈ ಕಟಕಟಿ ನನಗೂ ಸಾಕಾಗಿಹೋಗಿದೆ." ಎಂದ.

ಪಂಚಾಯಿತಿಯಲ್ಲಿ ಯಾರಿಗೆ ಗೆಲುವಾಗುವುದೆಂಬ ವಿಷಯದಲ್ಲಿ ಜುಮ್ಮನನಿಗೆ ಸಂದೇಹವಿರಲಿಲ್ಲ. ಅವನ ಅನುಗ್ರಹದಿಂದ ಋಣಿಯಾಗದವರು ಸುತ್ತು ಹಳ್ಳಿಗಳಲ್ಲಿ ಯಾರಿದ್ದಾರೆ? ಅವನ ವೈರವನ್ನು ಕಟ್ಟಿಕೊಳ್ಳುವ ಎದೆ ಯಾರಿಗಿದೆ? ಅವನಿಗೆ ಎದುರಾಗಿ ನಿಲ್ಲುವಂತಹ ಶಕ್ತಿವಂತರು ಯಾರು?

ಪಂಚಾಯತಿ ಮಾಡುವುದಕ್ಕೆ ಗಗನದಿಂದ ದೇವದೂತರಂತೂ ಇಳಿದು ಬರುವುದಿಲ್ಲ.

೩

ಆಮೇಲೆ ಕೆಲವು ದಿನ ವೃದ್ಧ ಖಾಲಾಜಾನ ಕೈಯಲ್ಲಿ ಕೋಲು ಹಿಡಿದುಕೊಂಡು ಅಕ್ಕಪಕ್ಕದ ಹಳ್ಳಿಗಳನ್ನೆಲ್ಲ ತಿರುಗಿದಳು. ಟೊಂಕ ಬಗ್ಗಿ ಬಿಲ್ಲಾಗಿದ್ದಳು. ಒಂದೊಂದು ಹೆಜ್ಜೆ ನಡೆಯುವುದೂ ದುಃಸಹವಾಗಿತ್ತು. ಆದರೆ ಅಂತಹ ಹೊತ್ತೇ ಬಂದಿತ್ತು. ಆ ವಿಷಯದ ತೀರ್ಮಾನ ಆಗಲೇ ಬೇಕಿತ್ತು.

ಮುದುಕಿ ದುಃಖದ ಕಣ್ಣೀರನ್ನು ಇಂಥವರೆದುರು ಸುರಿಸದೆ ಬಿಟ್ಟಳು ಎಂಬುದು ತೀರ ವಿರಳ. ಕೆಲವರಂತೂ ಹೊರಮನಸಿನಿಂದ ಹೂಂ ಹಾಂ ಎಂದು ದಾಟಿಸಿದರು; ಮತ್ತೆ ಕೆಲವರು ಈ ಅನ್ಯಾಯಕ್ಕಾಗಿ ಕಾಲವನ್ನು ಬಯ್ದರು. ‘ ಒಂದು ಕಾಲು ಗೋರಿಯೊಳಗೆ ಬಿದ್ದಿದೆ; ಇಂದು ಸತ್ತರೆ ನಾಳೆ ಎರಡನೆಯ ದಿವಸ, ಆದರೂ ಆಸೆ ಬಿಡಲೊಲ್ಲದು. ಇನ್ನು ನಿನಗೆ ಏತಕೆ ಬೇಕು ? ರೊಟ್ಟಿ ತಿನ್ನು, ಅಲ್ಲಾನ ಸ್ಮರಣೆ ಮಾಡು. ಇನ್ನೇಕೆ ನಿನಗೆ ಹೊಲ ಮನೆಯ ಅಗತ್ಯ ? ’ ಎಂದರು. ಹಾಸ್ಯರಸದ ರಸಾಸ್ವಾದನೆಗೆ ಒಳ್ಳೆಯ ಸಂಧಿ ದೊರೆಯಿತೆಂದು ಬಗೆದ ಸಜ್ಜನರೂ ಇದ್ದರು. ಬಾಗಿದ ನಡು, ಬಚ್ಚ ಬಾಯಿ, ನಾರಿನಂತಹ ಕೂದಲು. ಇಷ್ಟೆಲ್ಲವೂ ಒತ್ತಟ್ಟಿಗೆ ಸೇರಿರುವಾಗ ಏಕೆ ನಗು ಬರಬಾರದು ? ಆ ಅಬಲೆಯ ಗೋಳನ್ನು ಮನಗೊಟ್ಟು ಕೇಳಿದ, ಅವಳಿಗೆ ಸಾಂತ್ವನದ ಮಾತುಗಳನ್ನಾಡಿದ ನ್ಯಾಯಪ್ರಿಯರು, ದಯಾಳು ಗಳು, ದೀನವತ್ಸಲರು ತೀರ ಕಡಿಮೆಯಿದ್ದರು. ಎಲ್ಲ ಕಡೆಗೂ ಸುತ್ತಾಡಿ ಗೋಗರೆದು ಬಡವಿ ಅಲಗು ಚೌಧರಿಯ ಬಳಿ ಬಂದಳು. ಕೋಲನ್ನು ಬಿಸುಟು, ವಿಶ್ರಮಿಸಿ, “ ಮಗೂ, ನೀನೂ ದಯವಿಟ್ಟು ನನ್ನ ಪಂಚಾಯತಿ ಯಲ್ಲಿ ಬರಬೇಕು ” ಎಂದಳು.

“ ನನ್ನನ್ನು ಕರಕೊಂಡು ಹೋಗಿ ಏನು ಮಾಡುತ್ತೀ ? ಊರ ಜನ ಎಷ್ಟೋ ಮಂದಿ ಬಂದೇ ಬರುತ್ತಾರಲ್ಲ. ” ಎಂದು ಅಲಗು ಉತ್ತರವಿತ್ತ.

“ನನ್ನ ಸಂಕಟವನ್ನಂತೂ ಎಲ್ಲರ ಮುಂದೆ ತೋಡಿಕೊಂಡು ಬಂದೆ. ಇನ್ನು ಬರುವ ಬಿಡುವ ವಿಚಾರ ಅವರಿಗೆ ಕೂಡಿದ್ದು.”

“ಬರುವುದೇನು ಬರುತ್ತೇನೆ ಬಿಡು. ಆದರೆ ಪಂಚಾಯತಿಯಲ್ಲಿ ಮಾತ ನಾಡುವುದಿಲ್ಲ.”

“ಅದೇಕೆ ಮಗೂ?”

“ಇನ್ನೇನು ಹೇಳಲಿ ಈ ಮಾತಿಗೆ? ನನ್ನ ಇಚ್ಛೆ! ಜುಮ್ಮನ್ ನನ್ನ ಬಾಲ್ಯ ಸ್ನೇಹಿತ. ಅವನನ್ನು ಕೆಡಿಸಿಕೊಳ್ಳುವುದು ನನಗೆ ಬೇಕಾಗಿಲ್ಲ.”

“ಮಗೂ, ಒಬ್ಬರಿಗೆ ಸಿಟ್ಟು ಬರುತ್ತದೆಂದು ಅಂಜಿ ನ್ಯಾಯವಾದದ್ದನ್ನು ಹೇಳದೆ ಇರುತ್ತೀಯಾ?”

ನಮ್ಮ ಸುಪ್ತ ಧರ್ಮಜ್ಞಾನ ಎಲ್ಲ ಸಂಪತ್ತೂ ಕೊಳ್ಳೆ ಹೋಗಲಿ, ಅದಕ್ಕೆ ಅದರ ಪರಿವೆಯಿರುವುದಿಲ್ಲ. ಆದರೆ ಆಹ್ವಾನವನ್ನು ಕೇಳಿದಾಗ ಅದು ಜಾಗೃತವಾಗುತ್ತದೆ. ಆಮೇಲೆ ಅದನ್ನು ಗೆಲ್ಲುವುದು ಅಶಕ್ಯ. ಈ ಪ್ರಶ್ನೆಗೆ ಉತ್ತರ ಕೊಡುವುದು ಅಲಗುವಿಗೆ ಅಸಾಧ್ಯವಾಯಿತು. ಅವನ ಹೃದಯ ದಲ್ಲಿ ಮಾತ್ರ ಈ ಶಬ್ದಗಳು ನಿನದಿಸುತ್ತಿದ್ದವು:

“ಒಬ್ಬರಿಗೆ ಸಿಟ್ಟು ಬರುವುದೆಂದು ಅಂಜಿ ನ್ಯಾಯವಾದದ್ದನ್ನು ಹೇಳದೆ ಇರುತ್ತೀಯಾ?”

೪

ಸಂಜೆಯ ಮುಂದೆ ಒಂದು ಮರದಡಿಯಲ್ಲಿ ಪಂಚಾಯತಿ ಕೂಡಿತು. ಶೇಖ ಜುಮ್ಮನ ಮೊದಲೆ ಅಲ್ಲಿ ಗುಡಾರ ಹಾಸಿದ್ದ. ಎಲೆ ಅಡಕೆ ಯಾಲಕ್ಕಿ ಇರಿಸಿದ್ದ. ಹುಕ್ಕೆತಂಬಾಕುಗಳ ಏರ್ಪಾಡೂ ಮಾಡಲಾಗಿತ್ತು. ಅವನು ಸ್ವಯಂ ಸ್ವಾಭಾವಿಕವಾಗಿಯೆ ಅಲಗು ಚೌಧರಿಯೊಡನೆ ಸ್ವಲ್ಪ ದೂರದಲ್ಲಿ ಕುಳಿತಿದ್ದ. ಪಂಚಾಯತಿಗೆ ಬರುತ್ತಿದ್ದವರಿಗೆ ಸುಮ್ಮನೆ ನಮಸ್ಕಾರ ಮಾಡಿ ಸ್ವಾಗತ ಕೋರುತ್ತಿದ್ದ. ಸೂರ್ಯ ಮುಳುಗಿದ. ಮರಗಳ ಮೇಲೆ ಕಲರವಗೆಯ್ಯುವ ಹಕ್ಕಿಗಳ ಪಂಚಾಯತಿ ಸೇರಿತು. ಆಗ ಕೆಳಗಡೆಯಲ್ಲಿ ಈ ಪಂಚಾಯತಿ ಆರಂಭವಾಯಿತು. ಹಾಸಿಕೆ ಒಂದಂಗುಲದಷ್ಟೂ ಉಳಿಯದಂತೆ ಜನ ನೆರೆ ದರು; ಆದರೆ ಹೆಚ್ಚಾಗಿ ಪ್ರೇಕ್ಷಕರೇ ಇದ್ದರು. ನಿಮಂತ್ರಿತ ಮಹಾಶಯರಲ್ಲಿ,

ಜುಮ್ಮನನ ಬಗ್ಗೆ ಒಳಗೊಳಗೆ ಕುನಸಿದ್ದವರು ಮಾತ್ರ ಆಗಮಿಸಿದ್ದರು. ಒಂದು ಕಡೆಯಲ್ಲಿ ಬೆಂಕಿ ಹೊತ್ತಿಸಲಾಗಿತ್ತು. ನಾವಲಿಗ ಲಗುಬಗೆಯಿಂದ ಚಿಲಿಮೆ ತುಂಬುತ್ತಲಿದ್ದ. ಉರಿಯುವ ಅಗ್ಗಿಷ್ಟಿಗೆಯಿಂದ ಹೊರಡುತ್ತಿದ್ದ ಹೊಗೆ ಹೆಚ್ಚೋ ಚಿಲಿಮೆಗಳ ಜುರಿಕೆಯಿಂದ ಏಳುವ ಹೊಗೆ ಹೆಚ್ಚಿತ್ತೋ ತಿಳಿಯುವುದು ಅಸಂಭವ. ಹುಡುಗರು ಅತ್ತ ಇತ್ತ ಓಡಾಡುತ್ತಲಿದ್ದರು; ಕೆಲವರು ತಮ್ಮ ತಮ್ಮೊಳಗೆ ಬಯ್ದಾಡುತ್ತಿದ್ದರು. ನಾಲ್ಕು ಕಡೆ ಗದ್ದಲವೋ ಗದ್ದಲ. ಇಲ್ಲಿ ಪಂತಿಯೂಟ ನಡೆದಿರಬೇಕೆಂದು ಊರ ನಾಯಿಗಳೆಲ್ಲ ನೆರೆದಿದ್ದವು.

ಪಂಚರೆಲ್ಲ ಕುಳಿತುಕೊಂಡ ಮೇಲೆ ಖಾಲಾ ತನ್ನ ಮನವಿಯನ್ನು ಒಪ್ಪಿಸಿದಳು.

"ಪಂಚರೇ, ಇಂದಿಗೆ ಮೂರು ವರ್ಷಗಳಾದವು, ನಾನು ನನ್ನ ಸೊತ್ತನ್ನೆಲ್ಲ ನನ್ನ ಸೋದರನ ಮಗ ಜುಮ್ಮನನಿಗೆ ಬರೆದುಕೊಟ್ಟಿದ್ದೇನೆ. ಈ ವಿಷಯ ತಮಗೆ ಗೊತ್ತಿರಲು ಸಾಕು. ಜುಮ್ಮನ ನಾನು ಬದುಕಿರುವ ತನಕ ರೊಟ್ಟಿ ಬಟ್ಟೆ ಕೊಡಲು ಒಪ್ಪಿಕೊಂಡಿದ್ದಾನೆ. ಇವನ ಜೊತೆಯಲ್ಲಿ ನಾನು ಕಣ್ಣೀರಿಡುತ್ತ ವರುಷಗಟ್ಟಲೆ ದಿನ ಕಳೆದೆ. ಈಗ ಹಗಲೂ ಇರುಳೂ ಈ ಗೋಳು ತಡೆಯಲಾರೆ. ನನಗೆ ಹೊಟ್ಟೆಗೆ ರೊಟ್ಟಿಯೂ ದೊರೆಯುವುದಿಲ್ಲ, ಮೈಗೆ ಬಟ್ಟೆಯೂ ಇಲ್ಲ. ದಿಕ್ಕಿಲ್ಲದ ರಂಡೆಮುಂಡೆ ನಾನು. ಕೋರ್ಟು ಕಚೇರಿ ನನ್ನಿಂದಾಗುವ ಕೆಲಸವಲ್ಲ. ತಮ್ಮನ್ನು ಬಿಟ್ಟು ನನ್ನ ಕಷ್ಟ ಯಾರಲ್ಲಿ ಹೇಳಿಕೊಳ್ಳಲಿ? ನೀವು ಯಾವ ದಾರಿ ತೋರಿಸುತ್ತೀರೋ ಆ ದಾರಿಯಲ್ಲಿ ನಡೆಯುತ್ತೇನೆ. ನನ್ನ ತಪ್ಪೇನಾದರೂ ಕಂಡರೆ ನನ್ನ ಮೋರೆಗೆ ಹೊಡೆಯಿರಿ. ಜುಮ್ಮನನಲ್ಲಿ ದೋಷ ಕಂಡರೆ,—ಏಕೆ ಒಬ್ಬ ಬಡಪಾಯಿಯ ಜೀವ ಅರೆಯುತ್ತಾನೆ!— ಅವನಿಗೆ ತಿಳಿಹೇಳಿರಿ. ಪಂಚರ ಅಪ್ಪಣೆಯನ್ನು ನಾನು ತಲೆಯ ಮೇಲೆ ಧರಿಸುತ್ತೇನೆ."

ರಾಮಧನ ಮಿಶ್ರನು—ಅವನ ಕೆಲವು ಒಕ್ಕಲುಗಳನ್ನು ಜುಮ್ಮನ ತನ್ನ ಊರಲ್ಲಿ ಇಟ್ಟುಕೊಂಡಿದ್ದ— ಮಾತನಾಡಿದ: "ಜುಮ್ಮನ ಮಿಯಾ, ಯಾರನ್ನು ಪಂಚರೆಂದು ಆರಿಸಿಕೊಳ್ಳುತ್ತೀಯಪ್ಪಾ? ಈಗಲೇ ಇದನ್ನು

ನಿಶ್ಚಯ ಮಾಡಿಕೋ. ಆಮೇಲೆ ಪಂಚರು ಹೇಳಿದ ಹಾಗೆ ಕೇಳಬೇಕಾಗುತ್ತದೆ. ”

ಜುಮ್ಮನ ಎಲ್ಲ ಸಭಾಸದರನ್ನು ಲಕ್ಷಿಸಿದ. ಒಂದಿಲ್ಲೊಂದು ಕಾರಣದಿಂದ ತನ್ನ ಬಗ್ಗೆ ವೈಮನಸ್ಯವುಳ್ಳವರೇ ಹೆಚ್ಚು ಮಂದಿಯಿತ್ತು. ಅವನು ಉತ್ತರವಿತ್ತ : “ ಪಂಚರ ಅಪ್ಪಣೆಯೆಂದರೆ ಅಲ್ಲಾನ ಅಪ್ಪಣೆಯೇ. ಖಾಲಾಜಾನ ಯಾರು ಬೇಕವರನ್ನು ಆರಿಸಲಿ, ನನ್ನದೇನೂ ಅಡ್ಡಿ ಇಲ್ಲ. ''

“ ಅಹಹಾ, ಅಲ್ಲಾನ ಕೂಸೇ ! ಪಂಚರ ಹೆಸರನ್ನು ಏಕೆ ಹೇಳುವುದಿಲ್ಲ? ನನಗೂ ಸ್ವಲ್ಪ ಗೊತ್ತಾಗಲಿ '' ಎಂದು ಖಾಲಾಜಾನ ಕೂಗಿಕೊಂಡಳು

ಜುಮ್ಮನನಿಗೆ ರೇಗಿತು. '' ಮತ್ತೆ ಈ ಹೊತ್ತಿನಲ್ಲಿ ನನ್ನನ್ನು ಬಾಯಿ ಬಿಡಿಸಬೇಡ. ನಿನ್ನದು ಸಾಧಿಸಿದೆ. ಯಾರನ್ನು ಬೇಕಾದರೂ ಆರಿಸಿಕೋ. ” ಎಂದ.

ಖಾಲಾಜಾನಿಗೆ ಜುಮ್ಮನನ ಆಕ್ಷೇಪ ತಿಳಿಯಿತು. ಅವಳೆಂದಳು: '' ದೇವರಿಗೆ ಅಂಜು ಮಗೂ. ಪಂಚರು ಯಾರ ಮಿತ್ರರೂ ಅಲ್ಲ, ಯಾರ ಶತ್ರುಗಳೂ ಅಲ್ಲ. ಎಂಥ ಮಾತಾಡುತ್ತೀ ! ಬೇರೆ ಯಾರಲ್ಲಿಯೂ ಭರವಸೆಯಿಲ್ಲದಿದ್ದರೆ ಬಿಡು, ಅಲಗು ಚೌಧರಿಯವರನ್ನಾದರೂ ಒಪ್ಪುತ್ತೀಯಷ್ಟೆ ? ಅವನನ್ನೇ ಸರಪಂಚನೆಂದು ನಾನು ಆರಿಸುತ್ತೇನೆ, ತಗೊ. ”

ಜುಮ್ಮನ ಶೇಖ ಆನಂದದಿಂದ ಉಬ್ಬಿದ ಆದರೆ ಮನೋಭಾವವನ್ನು ಬಚ್ಚಿಟ್ಟುಕೊಂಡು ಮಾತನಾಡಿದ. '' ಅಲಗು ಚೌಧರಿಯಾದರೂ ಸರಿಯೆ. ನನಗೆ ರಾಮುಧನ ಎಷ್ಟೋ ಅಲಗೂನೂ ಅಷ್ಟೇ. ಎಂದ.

ಅಲಗು ಚೌಧರಿಗೆ ಈ ರಗಳೆಯಲ್ಲಿ ಬೀಳಲು ಮನಸಿರಲಿಲ್ಲ. ಅವನು ಹಿಂದೆ ಮುಂದೆ ನೋಡತೊಡಗಿದ “ಖಾಲಾ, ನಿನಗೆ ಗೊತ್ತೇ ಇದೆ,—ಜುಮ್ಮನ ನನ್ನ ಜೀವದ ಗೆಳೆಯ. '' ಎಂದು ಜಾರಿಕೊಳ್ಳಲು ಹವಣಿಸಿದ.

ಖಾಲಾ ಗಂಭೀರ ಸ್ವರದಲ್ಲಿ ಉತ್ತರವಿತ್ತಳು: “ ಮಗೂ, ಗೆಳೆತನಕ್ಕಾಗಿ ಯಾರೂ ತಮ್ಮ ಪ್ರಾಮಾಣಿಕತನ ಮಾರುವುದಿಲ್ಲ. ಪಂಚರ ಎದೆಯಲ್ಲಿ ದೇವರು ವಾಸಿಸುತ್ತಾನೆ. ಆವರ ಬಾಯಿಂದ ಹೊರಬೀಳುವ ಮಾತು ದೇವರಿಂದಲೇ ಹೊರಡುತ್ತದೆ. ''

ಅಲಗು ಚೌಧರಿ ಮುಖ್ಯ ಪಂಚನಾದ. ರಾಮಧನ ಮಿಶ್ರನೂ ಜುಮ್ಮನನ ಇತರ ವಿರೋಧಿಗಳೂ ಖಾಲಾಜಾನಳನ್ನು ಮನಸಿನೊಳಗೇ ಬಯ್ದರು.

ಅಲಗು ಚೌಧರಿ ಹೇಳಿದ: "ಶೇಖ ಜುಮ್ಮನ, ನೀನೂ ನಾನೂ ಬಹುಕಾಲದ ಗೆಳೆಯರು. ಅಗತ್ಯವಿದ್ದಾಗ ನೀನು ನನಗೆ ಸಹಾಯ ಮಾಡಿರುವೆ; ನಾನೂ ನನ್ನ ಕೈಲಾದಷ್ಟು ಮಾಡಿದ್ದೇನೆ. ಆದರೆ ಈಗ ನಮ್ಮ ದೃಷ್ಟಿಯಲ್ಲಿ ನೀನು ಮತ್ತು ವೃದ್ಧ ಖಾಲಾ ಇಬ್ಬರೂ ಸಮ. ಪಂಚರಿಗೆ ಏನು ಹೇಳಬೇಕಾದದ್ದು ಇದೆಯೇ ಹೇಳು."

ಗೆಲವು ತನ್ನ ಕಡೆಗೇ ಎಂದು ಜುಮ್ಮನನಿಗೆ ಪೂರ್ಣ ಭರವಸೆಯಿತ್ತು. ಅಲಗು ತೋರಿಕೆಯ ನಟನೆ ಮಾಡುತ್ತಿದ್ದಾನೆ ಎಂದು ಅವನಿಗೆನಿಸಿತು. ಅಂತೆಯೇ ಶಾಂತಚಿತ್ತದಿಂದ ಅವನು ನಿವೇದಿಸಿದ: "ಪಂಚರೇ, ಮೂರು ವರುಷಗಳಾದವು: ಖಾಲಾಜಾನ ತನ್ನ ಸೊತ್ತನ್ನು ನನ್ನ ಹೆಸರಿನಲ್ಲಿ ದಾನ ಪತ್ರ ಮಾಡಿಕೊಟ್ಟಳು. ಅವಳಿಗೆ ಜೀವಾವಧಿ ಅನ್ನವಸ್ತ್ರ ಕೊಡಲು ನಾನು ಒಪ್ಪಿಕೊಂಡಿದ್ದೆ. ಖುದಾ ಸಾಕ್ಷಿಯಾಗಿದ್ದಾನೆ—ಇದುವರೆಗೆ ಖಾಲಾಜಾನಿಗೆ ಯಾವ ಕಷ್ಟವನ್ನೂ ನಾನು ಕೊಟ್ಟಿಲ್ಲ. ಈಕೆಯನ್ನು ನನ್ನ ತಾಯಿಗೆ ಸರಿ ಎಂದು ತಿಳಿದಿದ್ದೇನೆ. ಈಕೆಯನ್ನು ಜೋಪಾನ ಮಾಡುವುದು ನನ್ನ ಧರ್ಮ. ಆದರೆ ಹೆಂಗುಸು–ಹೆಂಗುಸರೊಳಗೆ ಸ್ವಲ್ಪ ವಿಷಮಭಾವ ಇರುವುದೇ, ಅದಕ್ಕೆ ನಾನು ಮಾಡುವುದೇನು? ಖಾಲಾಜಾನ ತನಗೆ ಪ್ರತ್ಯೇಕ ಮಾಸಿಕ ವೆಚ್ಚ ಕೊಡಬೇಕೆಂದು ಕೇಳುತ್ತಾಳೆ. ಆಸ್ತಿ ಇರುವುದೆಷ್ಟು ಎಂಬುದು ದೈವದವರಿಗೆ ಗುಟ್ಟಿನ ವಿಷಯವಲ್ಲ. ಈಕೆಯ ಮಾಸಿಕ ವೆಚ್ಚವನ್ನು ಕೊಡುವಷ್ಟು ಅದರ ಲಾಭವಿಲ್ಲ ಇದೂ ಅಲ್ಲದೆ, ದಾನಪತ್ರದಲ್ಲಿ ಮಾಸಿಕ ವೆಚ್ಚದ ನಿಬಂಧನೆ ಯೇನೂ ಇಲ್ಲ. ಹಾಗಿದ್ದರೆ ನಾನು ಅದರ ತಂಟೆಗೇ ಹೋಗುತ್ತಿದ್ದಿಲ್ಲ ಸರಿ, ನನ್ನ ಹೇಳಿಕೆ ಇಷ್ಟೆ. ಇನ್ನು ಮುಂದಿನ ವಿಚಾರ ದೈವದವರಿಗೆ ಸೇರಿದ್ದು; ತಮಗೆ ತಿಳಿದ ಹಾಗೆ ತೀರ್ಮಾನಿಸಲಿ."

ಅಲಗು ಚೌಧರಿ ಯಾವಾಗಲೂ ಕಚೇರಿ ಕಟ್ಟೆಯ ಕೆಲಸದಲ್ಲಿ ನುರಿತವ. ಪೂರ್ಣ ಕಾಯದೆ ಪ್ರವೃತ್ತಿಯ ಮನುಷ್ಯನಾಗಿದ್ದ. ಅವನು ಜುಮ್ಮನನಿಗೆ ಅಡ್ಡ ಸವಾಲು ಮಾಡಲಾರಂಭಿಸಿದ. ಒಂದೊಂದು ಪ್ರಶ್ನೆಯೂ

ಜುಮ್ಮನನ ಎದೆಗೆ ಸುತ್ತಿಗೆಯ ಪೆಟ್ಟಿನಂತೆ ಬೀಳುತ್ತಿತ್ತು. ಆ ಪ್ರಶ್ನೆಗಳಿಂದ ರಾಮಧನ ಮಿಶ್ರನು ಮುಗ್ಧನಾಗಿ ಬಿಟ್ಟ. ಜುಮ್ಮನ ಚಕಿತನಾದ—ಅಲಗುವಿಗೆ ಏನಾಗಿದೆ ? ಇನ್ನೂ ಇದೆ, ಇದೇ ಅಲಗು ನನ್ನ ಜೊತೆ ಕುಳಿತು ಎಂತೆಂತಹ ಮಾತು ಆಡುತ್ತಿದ್ದ. ಇಷ್ಟರೊಳಗೇ ಎಷ್ಟು ಕಾರ್ಯ ಪಲ್ಲಟವಾಗಿ ಬಿಟ್ಟಿತಲ್ಲ. ನನ್ನ ಬೇರುಗಳನ್ನೆ ಕೀಳಲು ಗುದ್ದಲಿ ಎತ್ತಿದ್ದಾನೆ! ಯಾವಾಗಿನ ಕುನುಸು ತೆಗೆಯುತ್ತಿದ್ದಾನೋ ಏನೊ! ಇಷ್ಟು ದಿನದ ಗೆಳೆತನವೆಲ್ಲ ಯಾವ ಕೆಲಸಕ್ಕೂ ಬಾರದ್ದೇನು ?

ಜುಮ್ಮನ ಈ ಸಂಕಲ್ಪ-ವಿಕಲ್ಪಗಳಲ್ಲಿ ತೊಳಲುತ್ತಿರುವಾಗಲೆ ಅಲಗು ತನ್ನ ತೀರ್ಪನ್ನು ಹೇಳಿದ:

“ಜುಮ್ಮನ ಶೇಖ, ಪಂಚರು ಈ ಪ್ರಕರಣವನ್ನು ವಿಚಾರಿಸಿದರು. ಖಾಲಾಜಾನಿಗೆ ಮಾಸಿಕ ವೆಚ್ಚವನ್ನು ಕೊಡಬೇಕಾದುದು ನೀತಿಸಂಗತವೆಂದು ಅವರಿಗೆ ತೋರುತ್ತದೆ. ಖಾಲಾಜಾನಳ ಆಸ್ತಿಯಿಂದ ಅವಳ ಮಾಸಿಕವೆಚ್ಚವನ್ನು ಪೂರಯಿಸುವಷ್ಟು ಲಾಭ ನಿರ್ವಿವಾದವಾಗಿ ಬರುತ್ತಿದೆಯೆಂದು ನಮ್ಮ ಅಭಿಪ್ರಾಯ. ಇದೇ ನಮ್ಮ ತೀರ್ಮಾನ. ವೆಚ್ಚವನ್ನು ಕೊಡಲು ಜುಮ್ಮನ ಒಪ್ಪದಿದ್ದರೆ ದಾನಪತ್ರ ರದ್ದೆಂದು ತಿಳಿಯಬೇಕು.”

೫

ತೀರ್ಪನ್ನು ಕೇಳಿ ಜುಮ್ಮನ ಸ್ತಬ್ಧನಾಗಿಬಿಟ್ಟ. ತನ್ನ ಮಿತ್ರನೆ ಶತ್ರುವಾಗಿ ವರ್ತಿಸುವುದು, ಕೊರಳಿಗೆ ಚೂರಿ ಇಕ್ಕುವುದು ಎಂದರೆ ಕಾಲದ ವಿಪರ್ಯಾಸವೆನ್ನದೆ ಏನೆನ್ನಬೇಕು ? ಯಾವನಲ್ಲಿ ಪೂರ್ಣ ನಂಬುಗೆಯಿತ್ತೋ ಅವನೇ ಹೊತ್ತಿನಲ್ಲಿ ಘಾತ ಮಾಡಿದ. ಸತ್ಯ ಮತ್ತು ಕೃತಕ ಮಿತ್ರತ್ವದ ಪರೀಕ್ಷೆಯಾಗುವುದು ಇಂತಹ ಪ್ರಸಂಗದಲ್ಲಿಯೇ. ಇದೇ ಕಲಿಯುಗದ ಗೆಳೆತನ. ಜನರು ಇಂತಹ ಕಪಟಿಗಳು, ಘಾತಕರು ಆಗಿರದಿದ್ದರೆ ದೇಶದಲ್ಲಿ ವಿಪತ್ತುಗಳ ಪ್ರಕೋಪ ಏಕೆ ಆಗುತ್ತಿತ್ತು ? ಕಾಲರಾ-ಪ್ಲೇಗು ಮೊದಲಾದ ರೋಗಗಳೂ ದುಷ್ಕರ್ಮಗಳ ಫಲಗಳೇ.

ಆದರೆ ರಾಮಧನ ಮಿಶ್ರನೂ ಇತರ ಪಂಚರೂ ಅಲಗು ಚೌಧರಿಯ ನೀತಿಪರಾಯಣತೆಯನ್ನು ಮನವಾರೆ ಕೊಂಡಾಡಿದರು. ಇದಕ್ಕೆನ್ನಬೇಕು

ಪಂಚಾಯಿತಿ ! ಹಾಲನ್ನು ಹಾಲು, ನೀರುನ್ನು ನೀರು ಮಾಡಿದರು. ಗೆಳೆತನದ ಸ್ಥಾನ ಗೆಳೆತನಕ್ಕೆ; ಆದರೆ ಧರ್ಮವನ್ನು ಪಾಲಿಸುವುದು ಮುಖ್ಯ. ಇಂತಹ ಸತ್ಯವಾದಿಗಳ ಬಲದಿಂದಲೇ ಪೃಥ್ವಿ ನಿಂತಿದೆ; ಇಲ್ಲದಿದ್ದರೆ ಅದು ಎಂದೋ ರಸಾತಳ ಕಂಡುಬಿಡುತ್ತಿತ್ತು.

ಈ ತೀರ್ಪು ಅಲಗು–ಜುಮ್ಮನರ ಗೆಳೆತನದ ಬೊಡ್ಡೆಯನ್ನು ಅಳ್ಳಾಡಿಸಿತು. ಈಗ ಅವರು ಒಬ್ಬರೊಡನೊಬ್ಬರು ಮಾತನಾಡುವುದು ಕಂಡು ಬರುತ್ತಿಲ್ಲ. ಅಷ್ಟು ದೀರ್ಘಕಾಲದದಿಂದ ಬೆಳೆದು ನಿಂತ ಗೆಳೆತನದ ಮರ ಸತ್ಯದ ಒಂದು ಹೊಡೆತವನ್ನೂ ತಾಳಿಕೊಳ್ಳಲಿಲ್ಲ. ನಿಜವಾಗಿ ಅದು ಮಳಲು ನೆಲದಲ್ಲಿ ನಿಂತಿರಬೇಕು.

ಈಚೆಗೆ ಅವರ ಪರಸ್ಪರ ವ್ಯವಹಾರದಲ್ಲಿ ಶಿಷ್ಟಾಚಾರ ಮಾತ್ರ ಇದೆ. ಪರಸ್ಪರರಲ್ಲಿ ಉಪಚಾರದ ಮಾತು ಹೆಚ್ಚಿತು. ಅವರಿಬ್ಬರೂ ಕೂಡುತ್ತಾರೆ, ಮಾಡುತ್ತಾರೆ; ಆದರೆ ಅದು ಕತ್ತಿ ಗುರಾಣಿ ಕೂಡಿದ ಹಾಗೆ.

ಜುಮ್ಮನನ ಮನಸಿನಲ್ಲಿ ಇಪ್ಪತ್ತು ನಾಲ್ಕು ತಾಸೂ ಮಿತ್ರನ ಕುಟಿಲತನವೇ ಕಟೆಯುತ್ತಿರುವುದು. ಇದರ ಮಯ್ಯು ತೀರಿಸಲು ಯಾವಾಗ ಸಮಯ ಬರುವುದೋ ಎಂಬ ಯೋಚನೆಯೇ ಯಾವಗಲೂ.

೬

ಒಳ್ಳೆಯ ಕೆಲಸಗಳು ಸಿದ್ಧಿಸುವುದಕ್ಕೆ ಬಹಳ ಸಮಯ ತಗಲುತ್ತದೆ ಕೆಟ್ಟ ಕೆಲಸಗಳ ಮಾತು ಹಾಗಲ್ಲ. ಜುಮ್ಮನನಿಗೆ ಮುಯ್ಯಿ ತೀರಿಸಿಕೊಳ್ಳ ಸಂದರ್ಭವೂ ಶೀಘ್ರದಲ್ಲಿಯೇ ಒದಗಿಬಂದಿತು. ಕಳೆದ ವರುಷ ಅಲಗು ಚೌಧರಿ ಬಟೇಸರದಿಂದ ಒಂದು ಒಳ್ಳೆಯ ಎತ್ತಿನ ಜೋಡಿ ಕೊಂಡುತಂದಿದ್ದ. ಒಳ್ಳೆಯ ಸುಂದರವಾಗಿದ್ದವು; ಉದ್ದುದ್ದವಾದ ಕೋಡುಗಳು; ಪಛಾಹೀ (ಪಶ್ಚಿಮ) ಜಾತಿಯ ಹೋರಿಗಳು. ಅವುಗಳನ್ನು ನೋಡಲು ಸುತ್ತುಮುತ್ತಿನ ಜನ ತಿಂಗಳುಗಟ್ಟಲೆ ಬರುತ್ತಿದ್ದರು. ದೈವಯೋಗದಿಂದ, ಜುಮ್ಮನನ ಪಂಚಾಯಿತಿಯಾದ ಒಂದು ತಿಂಗಳೊಳಗೆ ಜೋಡಿಯಲ್ಲಿ ಒಂದು ಎತ್ತು ಸತ್ತು ಹೋಯಿತು. ಜುಮ್ಮನ ತನ್ನ ಮಿತ್ರರಲ್ಲಿ ಆಡಿಕೊಂಡ: ' ಘಾತಕತನಕ್ಕೆ

ಶಿಕ್ಷೆ ಇದು. ಮನುಷ್ಯ ಬೇಕಾದ ಹಾಗೆ ಧೈರ್ಯದಿಂದ ಮಾಡಲಿ: ಖುದಾ ಒಳ್ಳೆಯದು ಕೆಟ್ಟದು ಎಲ್ಲವನ್ನೂ ನೋಡುತ್ತಾನೆ.'

ಜುಮ್ಮನ ಎತ್ತಿಗೆ ವಿಷ ಹಾಕಿರಬೇಕು ಎಂದು ಅಲಗು ಚೌಧರಿಗೆ ಸಂದೇಹವುಂಟಾಯಿತು ಅವನ ಹೆಂಡತಿಯೂ ಜುಮ್ಮನನ ಮೇಲೆಯೇ ಈ ಈ ದುರ್ಘಟನೆಯ ದೋಷಾರೋಪಣೆ ಹೊರಿಸಿದಳು "ಜುಮ್ಮನ ಏನು ಮಾಡಿದನೋ ಏನು ಮಾಡಿಸಿದನೋ" ಎಂದು ಅವಳೆಂದಳು. ಒಂದು ದಿನ ಚೌಧರಿಯ ಹೆಂಡತಿಗೂ ಜುಮ್ಮನನ ಹೆಂಡತಿಗೂ ಈ ವಿಷಯದಲ್ಲಿ ದೊಡ್ಡ ಬಾಯ್ವಾದನವೇ ಆಯಿತು. ದೇವಿಯುವರಿಬ್ಬರೂ ತಮ್ಮ ಶಬ್ದಭಾಂಡಾರದ ಹೊಳೆ ಹರಿಸಿಬಿಟ್ಟರು ವ್ಯಂಗ್ಯ, ವಕ್ರೋಕ್ತಿ, ಅನ್ಯೋಕ್ತಿ, ಉಪಮೆ ಮೊದಲಾದ ಅಲಂಕಾರಗಳಲ್ಲಿ ವಾದ ನಡೆಯಿತು. ಜುಮ್ಮನ ಹೇಗೋ ಮಾಡಿ ಶಾಂತಿ ಸ್ಥಾಪನೆ ಮಾಡಿದ. ತನ್ನ ಹೆಂಡತಿಯನ್ನು ಗದರಿಸಿ ಜಬರಿಸಿ ಬುದ್ಧಿ ಹೇಳಿದ. ಅವಳನ್ನು ಆ ಕಾಳಗದ ಕಣದಿಂದ ಎಳೆದುಕೊಂಡೂ ಹೋದ. ಅತ್ತ ಅಲಗು ಚೌಧರಿ ಹೇಳುವ ತಿಳಿಸುವ ಕೆಲಸವನ್ನು ತನ್ನ ತರ್ಕಪೂರ್ಣ ಬಡಿಗೆಯಿಂದ ನೆರವೇರಿಸಿದ.

ಒಂದೇ ಎತ್ತು ಇನ್ನೇತಕ್ಕೆ ಉಪಯೋಗ? ಅದಕ್ಕೆ ಜೊತೆಯನ್ನು ಬಹಳ ಹುಡುಕಿದ; ಎಲ್ಲಿಯೂ ಸಿಕ್ಕಲಿಲ್ಲ ಅದನ್ನು ಮಾರಿಬಿಡಬೇಕೆಂಬ ಸಲಹೆ ಬಂದಿತು. ಊರಲ್ಲಿ ಒಬ್ಬ ಸಮುಝೂ ಸಾಹು ಇದ್ದ; ಅವನು ಎಕ್ಕಾ ಗಾಡಿ ಇಟ್ಟುಕೊಂಡು ವ್ಯಾಪಾರ ಮಾಡುತ್ತಿದ್ದ. ಊರಿಂದ ಬೆಲ್ಲ ತುಪ್ಪ ಒಯ್ದು ಪೇಟೆಯಲ್ಲಿ ಮಾರಿ, ಅಲ್ಲಿಂದ ಉಪ್ಪು ಎಣ್ಣೆ ಹೇರಿಕೊಂಡು ಬಂದು ಊರೊಳಗೆ ಮಾರುತ್ತಿದ್ದ. ಈ ಎತ್ತಿನ ಮೇಲೆ ಅವನಿಗೆ ಮನಸಾಯಿತು ಈ ಎತ್ತು ಸಿಕ್ಕರೆ, ದಿನದಲ್ಲಿ ಮೂರು ಸಾರಿಗೆ ಅನಾಯಾಸವಾಗಿ ಮಾಡಬಹುದು. ಈಗೀಗಂತೂ ದಿನಕ್ಕೆ ಒಂದೇ ಸಾರಿಗೆ ಆಗುವುದೂ ಕಠಿಣವಾಗಿದೆ ಎಂದು ಅವನು ಯೋಚಿಸಿದ. ಎತ್ತನ್ನು ನೋಡಿದ, ಬಂಡಿಗೆ ಹೂಡಿ ಪರೀಕ್ಷಿಸಿದ, ಕೂದಲು ಸುಳಿಗಳನ್ನು ಪರೀಕ್ಷೆ ಮಾಡಿಸಿದ. ಬಳಿಕ ಬೆಲೆ ಗೊತ್ತುಮಾಡಿ ಅದನ್ನು ತಂದು ಬಾಗಿಲಲ್ಲಿ ಕಟ್ಟಿಕೊಂಡ. ಬೆಲೆಯನ್ನು ಒಂದು ತಿಂಗಳಲ್ಲಿ ಸಲ್ಲಿಸಬೇಕೆಂದು ಒಪ್ಪಂದವಾಯಿತು. ಚೌಧರಿಗೆ ಅಗತ್ಯವೇ ಇತ್ತು, ಹಾನಿಯನ್ನು ಲೆಕ್ಕಿಸಲಿಲ್ಲ.

ಹೊಸ ಎತ್ತು ಬಂದದ್ದೇ ತಡ, ಸಮರ್ಝೂ ಸಾಹು ಅದನ್ನು ತೇವು ಗೊಡವೆ ದುಡಿಸಲಾರಂಭಿಸಿದ. ದಿನದಲ್ಲಿ ಮೂರು ಮೂರು, ನಾಲ್ಕು ನಾಲ್ಕು ಸಾರಿಗೆ ಮಾಡತೊಡಗಿದ. ಹೊಟ್ಟೆ ಮೇವಿನ ಕಾಳಜಿಯಿಲ್ಲ, ನೀರಿನ ಚಿಂತೆ ಯಿಲ್ಲ; ಕೇವಲ ಹೂಡುವುದೇ ಹೂಡುವುದು. ಪೇಟೆಗೆ ಹೋಗುವುದು, ಅಲ್ಲಿ ಸ್ವಲ್ಪ ಹೊತ್ತು ಅದರ ಮುಂದೆ ಒಣ ಹೊಟ್ಟು ಒಂದು ಹಿಡಿ ಚೆಲ್ಲಿಬಿಡುವುದು. ಪಾಪ, ಮೂಕಪ್ರಾಣಿಯ ದಣಿವು ಇನ್ನೂ ಆರಿರುತ್ತಿತ್ತೋ ಇಲ್ಲವೋ, ಮತ್ತೆ ನೊಗ ಹೇರುವುದೇ. ಅಲಗು ಚೌಧರಿಯ ಮನೆಯಲ್ಲಿರುವಾಗಲೋ ಸುಖದ ಕೊಳಲು ಊನುತ್ತಿತ್ತು. ಬೈಲರಾಮುನನ್ನು ಮೂರು ತಿಂಗಳಿಗೆ ಆರು ತಿಂಗ ಳಿಗೆ ಒಮ್ಮೆ ಎಂದೋ ಹೂಡುತ್ತಿದ್ದರು. ಆಗ ಒಳ್ಳೇ ಕುಣಿಯುತ್ತ ಕುದು ರುತ್ತ ಎಷ್ಟೋ ಹರದಾರಿ ಓಡುತ್ತಿತ್ತು. ಅಲ್ಲಿದ್ದಾಗ ಬೈಲರಾಮುನಿಗೆ ಸ್ವಚ್ಛ ವಾದ ನೀರು, ತಳಿಸಿದ ತೊಗರೆ ಬೇಳೆ, ಹೊಟ್ಟಿನ ಜೊತೆಯಲ್ಲಿ ಹಿಂಡಿ, ಮತ್ತಿಷ್ಟೇ ಅಲ್ಲ, ಆವಾಗೀವಾಗ ತುಪ್ಪದ ಸವಿಯೂ ದೊರೆಯುತ್ತಿತ್ತು. ಬೆಳಗ್ಗೆ ಸಂಜೆಗೆ ಒಬ್ಬ ಆಳು ಮೈ ತೊಳೆಯುತ್ತಿದ್ದ, ತಿಕ್ಕುತ್ತಿದ್ದ, ಒರಸು ತ್ತಿದ್ದ. ಆ ಸುಖ ಚೈನಿ ಎಲ್ಲಿ, ಇಪ್ಪತ್ತುನಾಲ್ಕು ತಾಸಿನ ಈ ಬರಿ ದುಡಿತ ಎಲ್ಲಿ! ತಿಂಗಳು ತುಂಬುವುದರೊಳಗೆ ಸೊರಗಿ ತ್ರಾಣಗೆಟ್ಟಿತು. ಗಾಡಿಯ ನೊಗವನ್ನು ಕಂಡೊಡನೆ ಅದರ ಮೈ ನೆತ್ತರೇ ಇಂಗಿಹೋಗುತ್ತಿತ್ತು. ಒಂದೊಂದು ಹೆಜ್ಜೆ ಸಾಗುವುದೂ ದುಸ್ತರವಾಗುತ್ತಿತ್ತು. ಡೊಕ್ಕೆ ತೆರೆದಿದ್ದವು. ಆದರೆ ಅದು ಗಟ್ಟಿ ಪ್ರಾಣಿ, ಹೊಡೆತಗಳ ಎಗ್ಗಿರಲಿಲ್ಲ.

ಒಂದು ದಿನ ನಾಲ್ಕನೆಯ ಸಾರಿಗೆಯಲ್ಲಿ ಸಾಹುಜಿ ಎರಡುಪಟ್ಟು ಭಾರ ಹೇರಿದ. ಎತ್ತು ಇಡೀ ದಿನ ದುಡಿದು ದಣಿದಿತ್ತು. ಕಾಲೇಳದಾಗಿ ದ್ದವು. ಸಾಹುಜಿ ಬಾರುಕೋಲಿಂದ ಕಟೆಯತೊಡಗಿದ. ಸರಿ, ಇನ್ನೇನು, ಎತ್ತು ಜೀವದಾಸೆ ಬಿಟ್ಟು ಓಡತೊಡಗಿತು. ಸ್ವಲ್ಪ ದಾರಿ ಓಡಿತು. ಸ್ವಲ್ಪ ದಣಿವಾರಿಸಿಕೊಳ್ಳಬೇಕೆಂದು ಅದಕ್ಕೆ ಆಶೆ. ಆದರೆ ಸಾಹುಜಿಗೆ ಬೇಗ ಊರು ಸೇರುವ ಆತುರ. ಸರಿ, ಅತ್ಯಂತ ನಿರ್ದಯತನದಿಂದ ನಾಲ್ಕಾರು ಏಟು ಬಿಗಿದ. ಎತ್ತು ಮತ್ತೊಮ್ಮೆ ಕಿತ್ತೋಡಿತು; ಆದರೆ ಈ ಸಲ ಅದರ ಶಕ್ತಿ ಉತ್ತರವಿತ್ತಿತು. ಅದು ಭೂಮಿಗೆ ಬಿದ್ದುಬಿಟ್ಟಿತು; ತಿರುಗಿ ಏಳದ ಹಾಗೆ

ಬಿದ್ದಿತು. ಸಾಹುಜಿ ಬಹಳವಾಗಿ ಹೊಡೆದ, ಬಾಲ ತಿರುವಿದ, ಎಳೆದ, ಕಣ್ಣುಗಳಲ್ಲಿ ಕೋಲು ಚುಚ್ಚಿದ. ಆದರೆ ಸತ್ತುದು ಏನು ಮಾಡಿದರೆ ಎದ್ದೀತು? ಆಗ ಸಾಹುಜಿಗೆ ಏನೋ ಸಂದೇಹವುಂಟಾಯಿತು. ಎತ್ತನ್ನು ಲಕ್ಷ್ಯಗೊಟ್ಟು ನೋಡಿದ. ಕೊರಳು ಹರಿದು ಬಿಟ್ಟ. ಇನ್ನು ಗಾಡಿ ಮನೆ ಸೇರುವ ಬಗೆ ಏನೆಂದು ಚಿಂತಿಸತೊಡಗಿದ ಬಹಳ ಕೂಗಿಕೊಂಡ ಒದರಿ ಕೊಂಡ. ಆದರೆ, ಹಳ್ಳಿಯ ದಾರಿಗಳೆಂದರೆ ಮಕ್ಕಳ ಕಣ್ಣುಗಳ ಹಾಗೆ,— ಸಂಜೆಯಾಗುತ್ತಲೇ ಮುಚ್ಚಿಕೊಳ್ಳುತ್ತವೆ. ಯಾರೂ ಕಣ್ಣಿಗೆ ಬೀಳಲಿಲ್ಲ. ಹತ್ತಿರದಲ್ಲಿ ಯಾವ ಹಳ್ಳಿಯೂ ಇರಲಿಲ್ಲ. ಅವನು ಸಿಟ್ಟಿಗೆದ್ದು ಸತ್ತ ಎತ್ತಿಗೆ ಮತ್ತೆರಡು ಏಟು ಕೊಟ್ಟ, ಬಯ್ದ. 'ಹಾಳಾದ ಎತ್ತು, ಸಾಯುವ ದಿದ್ದರೆ ಊರಿಗೆ ಹೋಗಿ ಸತ್ತಿದ್ದರೆ! ನಡು ದಾರಿಯೊಳಗೇ ಸಾಯಬೇಕೇನು? ಇನ್ನು ಗಾಡಿ ಎಳೆಯುವವರು ಯಾರು?' ಇತ್ಯಾದಿ ಉರಿದುಬಿದ್ದ ಎತ್ತಿನ ಮೇಲೆ. ಎಷ್ಟೋ ಚೀಲ ಬೆಲ್ಲ, ಎಷ್ಟೋ ಪೀಪಾಯಿ ತುಪ್ಪ ಮಾರಿದ್ದ. ಎರಡು ಎರಡೂವರೆ ನೂರು ರೂಪಾಯಿ ಟೊಂಕದಲ್ಲಿ ಕಟ್ಟಿಕೊಂಡಿದ್ದ ಅಲ್ಲದೆ, ಗಾಡಿಯಲ್ಲಿ ಎಷ್ಟೋ ಉಪ್ಪಿನ ಚೀಲಗಳಿದ್ದವು. ಬಿಟ್ಟು ಹೋಗಿ ಬೇರೆ ಎತ್ತು ತರಲು ಮಾರ್ಗವಿಲ್ಲ. ಸಾಹುಜಿ ನಿರುಪಾಯನಾಗಿ ಗಾಡಿ ಯಲ್ಲಿಯೆ ಮಲಗಿಕೊಂಡ. ಅಲ್ಲಿಯೆ ಜಾಗರಣೆಯಿಂದ ರಾತ್ರಿಯನ್ನು ಕಳೆಯಲು ನಿರ್ಧರಿಸಿದ. ಬೀಡಿಮೆ ಸೇದಿದ, ಹಾಡಿದ, ಮತ್ತೆ ಹುಕ್ಕಾ ಸೇದಿದ. ಹೀಗೆಯೆ ಅರ್ಧರಾತ್ರಿಯವರೆಗೂ ನಿದ್ರೆಯನ್ನು ಹೊಡೆದೋಡಿಸು ತ್ತಿದ್ದ. ತನ್ನ ಮನದಲ್ಲಂತೂ ತಾನು ಎಚ್ಚರವಾಗಿಯೇ ಇದ್ದ ಆದರೆ ಕಾಲು ನೋವಾದುದರಿಂದ ನಿದ್ದೆ ಹರಿಯಿತು. ಟೊಂಕದಲ್ಲಿ ಕೈಯಿಟ್ಟು ಕೊಂಡು ನೋಡಿದ. ಹಮ್ಮಿಣಿ ಮಾಯಮಾಯ! ಗಾಬರಿಯಾಗಿ ಅವನು ಅತ್ತಿತ್ತ ನೋಡಿದ; ಕೆಲವು ಎಣ್ಣೆ ಡಬ್ಬಿಗಳೂ ಅದೃಶ್ಯ! ದುಃಖದಿಂದ ಪಾಪ! ತಲೆ ಜಜ್ಜಿಕೊಂಡ. ಹಾಗೆಯೆ ಊರಿಗೆ ಹಿಂತಿರುಗಿದ ಅಳುತ್ತ ಹಣೆ ಬಡಿದುಕೊಳ್ಳುತ್ತ ನಸುಕಿನಲ್ಲಿ ಮನೆ ಸೇರಿದ. ಅವನ ಹೆಂಡತಿ ಈ ಕೆಟ್ಟ ಸಮಾಚಾರವನ್ನು ಕೇಳಿ ಮೊದಲು ಅತ್ತಳು; ಬಳಿಕ ಅಲಗು ಚೌಧರಿ ಯನ್ನು ಶಪಿಸತೊಡಗಿದಳು—ಎಂಥಾ ದುರ್ಲಕ್ಷಣದ ಎತ್ತು ಕೊಟ್ಟನೋ ನೀಚ, ಇಡೀ ಜನ್ಮದ ಗಳಿಕೆಯೆಲ್ಲಾ ಕಳವಾಗಿಹೋಯ್ತು!

ಈ ಘಟನೆ ನಡೆದು ಕೆಲ ತಿಂಗಳು ಗತಿಸಿದವು. ಅಲಗು ಚೌಧರಿ ತನ್ನ ಎತ್ತಿನ ಬೆಲೆಯನ್ನು ಕೇಳಹೋದಾಗಲೆಲ್ಲ, ಸಾಹು ಮತ್ತು ಅವನ ಹೆಂಡತಿ ಇಬ್ಬರೂ ಹುಚ್ಚು ನಾಯಿಗಳಂತೆ ಅಡರುತ್ತಿದ್ದರು. ಲಂಡಭಂಡವಾಗಿ ಬೊಗಳುತ್ತಿದ್ದರು—"ಭಲೆ, ಇಲ್ಲಿ ಇಡೀ ಜನ್ಮದ ಉತ್ಪನ್ನವೆಲ್ಲಾ ಕಳೆದು ಕೊಂಡು ಕುಳಿತಿದ್ದೇವೆ, ನಮ್ಮ ಸತ್ಯಾನಾಶವಾಗಿದೆ. ಇವನಿಗೆ ಹತ್ತಿದೆ ಹಣದ್ದು. ಸಾಯುವ ಎತ್ತು ಕೊಟ್ಟು ಬೆಲೆ ಬೇಡಲಿಕ್ಕೆ ಬಂದಿದ್ದಾನೆ! ಕಣ್ಣೊಳಗೆ ಮಣ್ಣು ಚೆಲ್ಲಿದೆ, ಸರ್ವನಾಶೀ ಎತ್ತನ್ನು ಕೊರಳಿಗೆ ಕಟ್ಟಿದೆ, ನಮ್ಮನ್ನು ಶುದ್ಧ ಮೂರ್ಖರೆಂದು ತಿಳಿದಿದೆಯೋ ? ನಾವೂ ವ್ಯಾಪಾರೀ ಮಕ್ಕಳಿದ್ದೇವೆ; ಇಂಥ ಮಡ್ಡರು ಮತ್ತೆಲ್ಲಿಯಾದರೂ ಇದ್ದಾರು. ಮೊದಲು ಹೋಗಿ ಯಾವುದಾದರೂ ಹೊಂಡದೊಳಗೆ ಮುಖ ತೊಳೆದುಕೊಂಡು ಬಾ, ಆಮೇಲೆ ತೆಗೆದುಕೊ ಬೆಲೆ. ಮನಸಿಗೆ ಬಾರದಿದ್ದರೆ, ಬೇಕಾದರೆ ನಮ್ಮ ಎತ್ತು ಬಿಚ್ಚಿ ಕೊಂಡು ಹೋಗು. ಒಂದು ತಿಂಗಳಿಗೆ ಬದಲು ಎರಡು ತಿಂಗಳು ಹೂಡಿಕೊ. ಮತ್ತೇನು ಬೇಕು ?"

ಚೌಧರಿಗೆ ಕೇಡು ಬಗೆಯುವವರ ಸಂಖ್ಯೆಯೂ ಸಣ್ಣದಿರಲಿಲ್ಲ. ಇಂತಹ ಪ್ರಸಂಗಗಳಲ್ಲಿ ಅವರೂ ಒಂದುಗೂಡುತ್ತಿದ್ದರು. ಸಾಹುಜಿಯ ಮಾತಿಗೆ ಪುಷ್ಟಿ ಕೊಡುತ್ತಿದ್ದರು. ಆದರೆ ಒಂದುವರೆ ನೂರು ರೂಪಾಯಿಗಳ ಮೇಲೆ ನೀರು ಬಿಡುವುದು ಅಷ್ಟು ಸಹಜವಾದ ಮಾತಲ್ಲ. ಒಮ್ಮೆ ಅವನ ತಲೆಯೂ ಕಾಯಿತು. ಸಾಹುಜಿ ಕ್ಷುಬ್ಧನಾಗಿ ಬಡಿಗೆಯನ್ನು ತರಲು ಮನೆ ಯೊಳಗೆ ಹೋದ. ಆಗ ಅವನ ಹೆಂಡತಿ ಕಣಕ್ಕಿಳಿದಳು. ಮಾತಿಗೆ ಮಾತು ಬೆಳೆಯುತ್ತ ಕೈಗೆ ಕೈ ಹತ್ತುವವರೆಗೂ ಬಂದಿತು ಕದನ. ಅವಳು ಮನೆ ಯೊಳಗೆ ಹೊಕ್ಕುಕೊಂಡು ಕದ ಮುಚ್ಚಿದಳು. ಗಲಭೆಯನ್ನು ಕೇಳಿ ಊರಿನ ದೊಡ್ಡ ಜನಗಳು ಬಂದು ನೆರೆದರು. ಅವರು ಇಬ್ಬರನ್ನೂ ಸಮಾಧಾನ ಪಡಿಸಿದರು. ಸಾಹುವಿಗೆ ಭರವಸೆ ಕೊಟ್ಟು ಮನೆಯಿಂದ ಹೊರಗೆ ತಂದರು. ಈ ರೀತಿ ಮಾಡುವುದು ತರವಲ್ಲ. ಉಪಯೋಗವೂ ಇಲ್ಲ. ಪಂಚಾಯತಿ ಮಾಡಿಕೊಳ್ಳಿರಿ. ಅಲ್ಲಿ ಆಗುವ ತೀರ್ಮಾನದಂತೆ ಮಾಡಿರಿ, ಎಂದು ಸಲಹೆ ಇತ್ತರು. ಸಾಹುಜಿ ಒಪ್ಪಿಕೊಂಡ; ಚೌಧರಿಯೂ ಸಮ್ಮತಿ ಕೊಟ್ಟ.

೭

ಪಂಚಾಯತಿಯ ಸಿದ್ಧತೆ ನಡೆಯಿತು. ಇಬ್ಬರೂ ತಮ್ಮ ತಮ್ಮ ಪಕ್ಷವನ್ನು ರಚಿಸಿಕೊಳ್ಳಲು ಆರಂಭಿಸಿದರು. ಮೂರು ದಿನಗಳ ತರುವಾಯ ಅದೇ ಮರದ ಅಡಿಯಲ್ಲಿ ಪಂಚಾಯತಿ ಕೂಡಿತು. ಅದೇ ಸಂಜೆಯ ಹೊತ್ತು. ಹೊಲಗಳಲ್ಲಿ ಕಾಗೆಗಳ ಪಂಚಾಯತಿ ನಡೆದಿತ್ತು. ವಾದಗ್ರಸ್ತ ವಿಷಯ ವೆಂದರೆ, ನೆಲಗಡಲೆಕಾಯಿಗಳ ಮೇಲೆ ಅಧಿಕಾರ ಇರುವುದೋ, ಇಲ್ಲವೋ ಎಂಬುದು; ಈ ಪ್ರಶ್ನೆಯ ಇತ್ಯರ್ಥವಾಗುವವರೆಗೂ ಕಾವಲುಗಾರನ ಕೂಗಾಟದ ಬಗ್ಗೆ ತಮ್ಮ ಅಸಂತೋಷವನ್ನು ವ್ಯಕ್ತಗೊಳಿಸುವುದು ಆವಶ್ಯ ವೆಂದು ಅವು ತಿಳಿದಿದ್ದವು. ಮರದ ರೆಂಬೆಗಳಲ್ಲಿ ಸಭೆ ಸೇರಿದ ಶುಕ ಮಂಡಲಿ ಯಲ್ಲಿ, ತಮ್ಮನ್ನು ಸಂಕೋಚವಿಲ್ಲದವರೆಂದು ಹೇಳುವುದಕ್ಕೆ ಮನುಷ್ಯರಿಗೆ ಏನು ಅಧಿಕಾರವಿದೆ? ತಾವೇ ಸ್ವಯಂ ಮಿತ್ರರನ್ನು ಮೋಸಗೊಳಿಸಲಿಕ್ಕೂ ಸಂಕೋಚಪಡುವುದಿಲ್ಲ, ಎಂಬ ಪ್ರಶ್ನೆ ಎದ್ದಿತ್ತು.

ಪಂಚಾಯತಿ ಸೇರಿದ ಮೇಲೆ ರಾಮಧನ ಮಿಶ್ರನು "ಇನ್ನು ವಿಲಂಬ ವೇಕೆ? ಪಂಚರ ಆಯಿಕೆ ಆಗಲಿ. ಹೇಳಿರಿ ಚೌಧರಿ, ಯಾರು ಯಾರನ್ನು ಸೂಚಿಸುವಿರಿ?" ಎಂದು ಪ್ರಾರಂಭಿಸಿದ.

"ಸಮುಝೂ ಸಾಹುವೇ ಆಯ್ದುಕೊಳ್ಳಲಿ." ದೀನಭಾವದಿಂದ ಅಲಗು ಉತ್ತರವಿತ್ತ.

ಸಮುಝು ಎದ್ದುನಿಂತು ಖಡಖಡನೆ ಹೇಳಿದ: "ನನ್ನ ಪರವಾಗಿ ಜುಮ್ಮನ ಶೇಖರು."

ಜುಮ್ಮನನ ಹೆಸರನ್ನು ಕೇಳಿದೊಡನೆ ಅಲಗು ಚೌಧರಿಯ ಎದೆಯಲ್ಲಿ ಡವಡವಿಕೆ ಆರಂಭವಾಯಿತು. ರಾಮಧನ ಅಲಗುವಿನ ಮಿತ್ರ. ಅವನು ಮರ್ಮವನ್ನು ಅರಿತುಕೊಂಡು, "ಏಕೆ ಚೌಧರಿ, ನಿಮ್ಮ ಆಕ್ಷೇಪಣೆ ಇಲ್ಲ ವಷ್ಟೆ?" ಎಂದು ಕೇಳಿದ.

"ಇಲ್ಲ, ನನ್ನದೇಕೆ ಆಕ್ಷೇಪಣೆ?" ನಿರಾಶನಾಗಿ ಚೌಧರಿ ನುಡಿದ.

* * * * *

ನಮ್ಮ ಹೊಣೆಗಾರಿಕೆಯ ಅರಿವು ವಿಶೇಷತಃ ನಮ್ಮ ಸಂಕುಚಿತ ವ್ಯವಹಾರಗಳನ್ನು ಸುಧಾರಿಸುವುದು. ನಾವು ದಾರಿ ತಪ್ಪಿ ಅಲೆಯುತ್ತಿರುವಾಗ ಈ ಜ್ಞಾನವೇ ನಮ್ಮ ವಿಶ್ವಸನೀಯ ಮಾರ್ಗದರ್ಶಕವಾಗುತ್ತದೆ.

ಪತ್ರಿಕಾ ಸಂಪಾದಕರು ತಮ್ಮ ಶಾಂತಿ ಕುಟೀರದಲ್ಲಿ ಕುಳಿತು, ಎಷ್ಟು ಧಾರ್ಷ್ಟ್ಯದಿಂದ ಎಷ್ಟು ಸ್ವಾತಂತ್ರ್ಯದಿಂದ ತಮ್ಮ ಪ್ರಬಲವಾದ ಲೆಕ್ಕಣಿಕೆಯಿಂದ ಮಂತ್ರಿಮಂಡಲದ ಮೇಲೆ ದಾಳಿ ಮಾಡುತ್ತಾರೆ. ಆದರೆ, ಅವರೇ ಮಂತ್ರಿಮಂಡಲದಲ್ಲಿ ಸಮಾವಿಷ್ಟರಾಗುವ ಸಮಯವೂ ಬರುವುದುಂಟು. ಮಂಡಲದ ಭವನದಲ್ಲಿ ಕಾಲು ಹಾಕಿದಾಕ್ಷಣವೆ ಅವರ ಲೆಕ್ಕಣಿಕೆ ಎಷ್ಟು ಮರ್ಮಜ್ಞ, ಎಷ್ಟು ವಿಚಾರಶೀಲ, ನ್ಯಾಯಪರಾಯಣವಾಗುತ್ತದೆ! ಇದಕ್ಕೆಲ್ಲ ಕಾರಣ ಉತ್ತರದಾಯಿತ್ವದ ಜ್ಞಾನ. ನವಯುವಕರು ಯುವಾವಸ್ಥೆಯಲ್ಲಿ ಅದೆಷ್ಟು ಉದ್ದಂಡರಾಗಿರುತ್ತಾರೆ! ಅವರಿಗಾಗಿ ತಂದೆ ತಾಯಿಗಳು ಎಷ್ಟು ಚಿಂತಿಸುತ್ತಾರೆ! ಅವರು ಅವನನ್ನು ಕುಲಕಲಂಕನೆನ್ನುತ್ತಾರೆ. ಆದರೆ, ಸ್ವಲ್ಪ ಸಮಯದಲ್ಲಿಯೆ, ಸಂಸಾರದ ಭಾರ ತಲೆಯ ಮೇಲೆ ಬೀಳುತ್ತಲೇ, ಅಸ್ತವ್ಯಸ್ತ ಮನಸಿನ ಆ ಉನ್ಮತ್ತ ಯುವಕನು ಅದೆಷ್ಟು ಧೈರ್ಯಶೀಲನಾಗುತ್ತಾನೆ, ಹೇಗೆ ಶಾಂತಚಿತ್ತನಾಗುತ್ತಾನೆ; ಇದು ಕೂಡ ಉತ್ತರದಾಯಿತ್ವದ ಜ್ಞಾನದ ಫಲ.

ಜುಮ್ಮನ ಶೇಖನ ಮನಸಿನಲ್ಲಿ ಕೂಡ, ಸರಪಂಚನ ಉಚ್ಚಸ್ಥಾನವನ್ನು ವಹಿಸಿಕೊಂಡೊಡನೆ, ತನ್ನ ಹೊಣೆಗಾರಿಕೆಯ ಅರಿವು ಉಂಟಾಯಿತು. ನಾನು ಈಗ ನ್ಯಾಯ ಮತ್ತು ಧರ್ಮದ ಸರ್ವೋಚ್ಚ ಆಸನದ ಮೇಲೆ ಕುಳಿತಿದ್ದೇನೆ; ಈ ಸಮಯದಲ್ಲಿ ನನ್ನ ಬಾಯಿಂದ ಹೊರಡುವ ಯಾವ ಮಾತೂ ದೇವವಾಣಿಗೆ ಸದೃಶವಾಗಿರುವುದು; ಈ ದೇವವಾಣಿಯಲ್ಲಿ ನನ್ನ ಮನೋವಿಕಾರಗಳ ಸಮಾವೇಶ ಎಂದಿಗೂ ಆಗಕೂಡದು; ನಾನು ಸತ್ಯದಿಂದ ಕೂದಲೆಳೆಯಷ್ಟು ಕದಲುವುದು ಉಚಿತವಲ್ಲ; ಇತ್ಯಾದಿ ಯೋಚನೆಗಳು ಅವನಲ್ಲಿ ಮೂಡಿದವು.

ಪಂಚರು ಎರಡೂ ಪಕ್ಷಗಳೊಡನೆ ಪ್ರಶ್ನೆ-ಪ್ರತಿಪ್ರಶ್ನೆಗಳನ್ನು ಆರಂಭಿಸಿದರು. ಎರಡು ಕಡೆಯವರೂ ಬಹಳ ಹೊತ್ತಿನವರೆಗೆ ತಮ್ಮ ತಮ್ಮ ಪಕ್ಷದ

ಸಮರ್ಥನೆ ಮಾಡಿದರು. ಸಮಝೂ ಎತ್ತಿನ ಬೆಲೆ ಕೊಡಬೇಕೆಂಬ ವಿಷಯದಲ್ಲಿ ಎಲ್ಲರದೂ ಒಮ್ಮತವಿತ್ತು. ಇಬ್ಬರು ಮಹಾಶಯರು ಮಾತ್ರ ಎತ್ತು ಸತ್ತು ಸಮಝೂಗೆ ನಷ್ಟವಾಗಿರುವುದರಿಂದ ಆವನಿಗೆ ರಿಯಾಯಿತಿ ದೊರೆಯಬೇಕೆಂದು ಹೇಳುವವರಾಗಿದ್ದರು. ಇದಕ್ಕೆ ವಿರುದ್ಧವಾಗಿ ಬೇರೆ ಇಬ್ಬರು ಸದಸ್ಯರು, ಎತ್ತಿನ ಬೆಲೆಯ ಹೊರತಾಗಿ ಸಮಝೂಗೆ ದಂಡವನ್ನೂ ವಿಧಿಸಬೇಕೆನ್ನುತ್ತಿದ್ದರು; ಎಂದರೆ ಇನ್ನು ಮುಂದೆ ಯಾವನೂ ದನಗಳನ್ನು ಹೀಗೆ ನಿರ್ದಯವಾಗಿ ದುಡಿಸಿಕೊಳ್ಳದಂತಾಗಲಿ ಎಂಬುದು ಅವರ ಅಭಿಪ್ರಾಯ. ಕೊನೆಗೆ ಜುಮ್ಮನ ಶೇಖ ತೀರ್ಪು ಹೇಳಿದ :

“ ಅಲಗು ಚೌಧರಿಯವರೇ ಮತ್ತು ಸಮಝು ಸಾಹುಅವರೇ, ನಿಮ್ಮ ವ್ಯಾಜ್ಯದ ಬಗ್ಗೆ ಪಂಚರು ಪೂರ್ಣ ವಿಚಾರ ಮಾಡಿದ್ದಾರೆ. ಸಮಝು ಅವರು ಎತ್ತಿನ ಬೆಲೆ ಪೂರ್ಣವಾಗಿ ಕೊಡುವುದು ಉಚಿತ ಅವರು ಕೊಂಡಾಗ ಎತ್ತಿಗೆ ಯಾವ ಬೇನೆ ಬೇಸರಿಕೆ ಇರಲಿಲ್ಲ. ಅಂದೇ ಅವರು ಬೆಲೆ ಕೊಟ್ಟು ಬಿಟ್ಟಿದ್ದರೆ ಸಮಝು ಅವರು ಅದನ್ನು ತಿರುಗಿ ಪಡೆಯುವ ಆಗ್ರಹ ಹಿಡಿಯುವಂತೆಯೇ ಇದ್ದಿಲ್ಲ. ಎತ್ತು ಸತ್ತದ್ದು, ಹೆಚ್ಚು ಕಠಿನತನದಿಂದ ದುಡಿಸಿಕೊಂಡದ್ದಕ್ಕಾಗಿ, ಮತ್ತು ಅದಕ್ಕೆ ಹೊಟ್ಟೆ ಮೇವಿನ ಸರಿಯಾದ ಏರ್ಪಾಡು ಮಾಡದಿದ್ದುದಕ್ಕಾಗಿ. ”

ರಾಮಧನ ಮಿಶ್ರ : “ ಸಮಝೂ ಎತ್ತನ್ನು ತಿಳಿದು ತಿಳಿದೂ ಕೊಂದಿದ್ದಾರೆ; ಅದಕ್ಕಾಗಿ ಅವರಿಂದ ದಂಡ ತೆಗೆದುಕೊಳ್ಳಬೇಕು. ”

ಜುಮ್ಮನ: “ ಇದು ಬೇರೆ ಪ್ರಶ್ನೆ. ಇದರ ಸಂಬಂಧ ನಮಗಿಲ್ಲ. ”

ಝಗಡು ಸಾಹು : “ ಸಮಝುವಿಗೆ ಏನಾದರೂ ರಿಯಾಯಿತಿ ದೊರೆಯಬೇಕು. ”

ಜುಮ್ಮನ: “ ಇದು ಅಗಲು ಚೌಧರಿಯವರ ಇಚ್ಛೆಗೆ ಸೇರಿದ ವಿಷಯ. ಅವರು ರಿಯಾಯಿತಿ ತೋರಿಸಿದರೆ ಅದು ಅವರ ದೊಡ್ಡ ಮನಸ್ಸು. ”

ಅಲಗು ಚೌಧರಿಗೆ ಆನಂದ ತಡೆಯಲಿಲ್ಲ. ಎದ್ದು ನಿಂತು ಘೋಷಿಸಿದ :

" ಪಂಚ ಪರಮೇಶ್ವರರಿಗೆ ಜಯವಾಗಲಿ ! "

ಕೂಡಲೇ ನಾಲ್ಕು ಕಡೆಗಳಿಂದ ಪ್ರತಿಧ್ವನಿ ಹೊರಟಿತು : " ಪಂಚ ಪರಮೇಶ್ವರರಿಗೆ ಜಯವಾಗಲಿ ! "

ಪ್ರತಿಯೊಬ್ಬನೂ ಜುಮ್ಮನನ ನೀತಿಯನ್ನು ಕೊಂಡಾಡುವವನೇ. –ಇದಕ್ಕೆ ಅನ್ನುತ್ತಾರೆ ನ್ಯಾಯ ! ಇದು ನರಮನುಷ್ಯನ ಕೆಲಸವಲ್ಲ; ಪಂಚರಲ್ಲಿ ಪರಮೇಶ್ವರ ಇರುತ್ತಾನೆ, ಅವನ ಮಹಿಮೆಯೇ ಇದು. ಪಂಚರ ಎದುರಿನಲ್ಲಿ ಅಸತ್ಯವನ್ನು ಸತ್ಯವೆಂದು ಹೇಳಲು ಯಾರಿಂದಾದೀತು ? "

ಕೆಲಹೊತ್ತಿನ ಬಳಿಕ ಜುಮ್ಮನ ಅಲಗುವಿನ ಬಳಿ ಹೋಗಿ ಅವನನ್ನು ಬಿಗಿದಪ್ಪಿಕೊಂಡನು. " ಬಂಧೂ, ನೀನು ನನ್ನ ಪ್ರಕರಣದ ಪಂಚಾಯಿತಿ ಮಾಡಿದ ದಿನದಿಂದಲೂ ನಾನು ನಿನ್ನ ಪ್ರಾಣಘಾತಕ ಶತ್ರುವೇ ಆಗಿದ್ದೆ. ಆದರೆ ಈ ದಿನ ಅರಿವಾಯಿತು– ಪಂಚಪದದಲ್ಲಿ ಕುಳಿತಾಗ ಯಾರೂ ಯಾರ ಮಿತ್ರರಲ್ಲ, ಶತ್ರುಗಳಲ್ಲ. ನ್ಯಾಯದ ಹೊರತು ಅವನಿಗೆ ಬೇರೆ ಯಾವುದೂ ತೋಚುವುದಿಲ್ಲ ಪಂಚರ ನಾಲಗೆಯಿಂದ ದೇವರು ಮಾತನಾಡುತ್ತಾನೆಂದು ನನಗಿಂದು ಮನವರಿಕೆಯಾಯಿತು. "

ಅಲಗು ಅತ್ತುಬಿಟ್ಟ. ಆ ನೀರಿನಿಂದ ಇಬ್ಬರ ಮನಸಿನ ಹೊಲಸೂ ತೊಳೆದುಹೋಯಿತು. ಬಾಡಿದ್ದ ಗೆಳೆತನದ ಬಳ್ಳಿ. ಮತ್ತೆ ಚಿಗುರಿತು.

# ಒಂದೂಕಾಲು ಸೇರು ಗೋದಿ



ಶಂಕರ ಒಬ್ಬ ಹಳ್ಳಿಯ ಒಕ್ಕಲಿಗ. ತೀರ ಸರಳ ಸಾಧು ಮನುಷ್ಯ. ತನ್ನ ಕೆಲಸವಾಯಿತು ತಾನಾಯಿತು; ಇನ್ನೊಬ್ಬರ ಯಾವ ತಂಟೆಗೂ ಹೋಗುವವನಲ್ಲ. ಒಳಗೊಂದು ಹೊರಗೊಂದು ಎಂಬುದೇ ಗೊತ್ತಿಲ್ಲ. ಛಲ ಪ್ರಪಂಚದ ಗಾಳಿಯೂ ಅವನಿಗೆ ತಾಗಿಲ್ಲ. ಮೋಸ ವಂಚನೆ ಎಂಬುದನ್ನು ಕೇಳಲೇ ಬೇಡಿ. ಊಟ ಸಿಕ್ಕಿತು ಉಂಡ ಇಲ್ಲದಿದ್ದರೆ ಚುರಮುರಿಯ ಮೇಲೆ ದಿನ ಕಳೆದ, ಅದೂ ದೊರೆಯಲಿಲ್ಲ ಎಂದರೆ ಒಂದು ಲೋಟ ನೀರು ಕುಡಿದು ರಾಮ ರಾಮ ಎಂದು ಮಲಗಿದ. ಆದರೆ ಯಾರಾದರೂ ಅತಿಥಿ ಮನೆಗೆ ಬಂದರೆ, ಅವನು ಈ ನಿವೃತ್ತಿಮಾರ್ಗವನ್ನು ಬಿಡಬೇಕಾಗುತ್ತಿತ್ತು. ವಿಶೇಷವಾಗಿ, ಸಾಧು ಸತ್ಪುರುಷರು ಬಂದಾಗ ಅನಿವಾರ್ಯವಾಗಿ ಸಾಂಸಾರಿಕ ಶಿಷ್ಟಾಚಾರಕ್ಕೆ ಶರಣು ಹೋಗಬೇಕಾಗುತ್ತಿತ್ತು. ತಾನು ಉಪವಾಸ ಬಿದ್ದು ಕೊಳ್ಳಬಹುದು. ಸಾಧುಗಳನ್ನು ಹೇಗೆ ಉಪವಾಸ ಮಲಗಿಸುತ್ತಾನೆ–ಭಗವಂತನ ಭಕ್ತರವರು!

ಒಂದು ದಿನ ಒಬ್ಬ ಮಹಾತ್ಮ ಬಂದು ಅವನ ಮನೆಯಲ್ಲಿ ಧ್ವಜ ಊರಿದ. ತೇಜಸ್ವಿ ಮೂರ್ತಿ. ಕೊರಳಲ್ಲಿ ಪೀತಾಂಬರ, ತಲೆಯ ಮೇಲೆ ಜಡೆ, ಕೈಯೊಳಗೆ ಹಿತ್ತಾಳೆಯ ಕಮಂಡಲು, ಕಾಲಲ್ಲಿ ಕಡಾವಿಗೆ, ಕಣ್ಣಿಗೆ ಕನ್ನಡಕ; ಸಂಪೂರ್ಣ ವೇಷ–ದೊಡ್ಡ ಶ್ರೀಮಂತರ ಪ್ರಾಸಾದಗಳಲ್ಲಿ ತಪಸ್ಸು, ಮೋಟಾರ್ ಕಾರಿದಲ್ಲಿ ದೇವಾಲಯಗಳ ಯಾತ್ರೆ, ಯೋಗ ಸಿದ್ಧಿಗೋಸುಗ ರುಚಿಕರವಾದ ಭೋಜನ ಮಾಡುವಂತಹ ಮಹಾತ್ಮರ ಹಾಗೆ. ಮನೆಯಲ್ಲಿ ಜವೆಗೋದಿಯ ಹಿಟ್ಟಿತ್ತು. ಆದರ ರೊಟ್ಟಿ ಅವರಿಗೆ ನೀಡುವುದು ಹೇಗೆ ? ಹಿಂದಿನ ಕಾಲದಲ್ಲಿ ಜವೆಗೋದಿಗೆ ಬೇಕಾದಷ್ಟು ಮಹತ್ವ ಇದ್ದಿರಬಹುದು; ಈಗ ? ಜವೆಗೋದಿಯ ಊಟ ಸಿದ್ಧಪುರುಷರಿಗೆ ಅರಗುವುದಿಲ್ಲ.

ಶಂಕರನಿಗೆ ಬಹಳ ಚಿಂತೆಯಾಯಿತು. ಮಹಾತ್ಮರಿಗೆ ಏನು ನೀಡಬೇಕು? ಯಾರಲ್ಲಿಯಾದರೂ ಗೋದಿಯ ಕಣಕವನ್ನು ಉದ್ರಿಯಾಗಲಿ ಕಡವಾಗಲಿ ತರಬೇಕೆಂದು ಊರೊಳಗೆ ಹೊರಟ. ಎಲ್ಲಿಯೂ ಕಣಕ ಸಿಕ್ಕಲಿಲ್ಲ. ಊರೊಳಗೆ ಇದ್ದವರೆಲ್ಲ ಮನುಷ್ಯರೇ, ದೇವತೆ ಒಬ್ಬನೂ ಇರಲಿಲ್ಲ; ದೇವತೆಗಳ ಖಾದ್ಯ ಸಿಕ್ಕುವುದು ಹೇಗೆ? ಸೌಭಾಗ್ಯದಿಂದ ಊರಲ್ಲಿ ಒಬ್ಬ ಬ್ರಾಹ್ಮಣ ಮಹಾರಾಜರಲ್ಲಿ ಸ್ವಲ್ಪ ಗೋದಿ ದೊರೆಯಿತು. ಅವರಿಂದ ಒಂದೂಕಾಲು ಸೇರು ಗೋದಿಯನ್ನು ಕಡವಾಗಿ ತಂದು ಹೆಂಡತಿ ಬೀಸಿದಳು. ಮಹಾತ್ಮನ ಊಟವಾಯಿತು, ಮಲಗಿ ನಿದ್ದೆಗೈದು ಬೆಳಗ್ಗೆ ಆಶೀರ್ವಾದ ಕೊಟ್ಟು ಹಾದಿ ಹಿಡಿದ.

ಬ್ರಾಹ್ಮಣ ಮಹಾರಾಜ ವರುಷದಲ್ಲಿ ಎರಡು ಸಲ ಆಯ ತೆಗೆದುಕೊಳ್ಳುವುದು ವಾಡಿಕೆ. ಶಂಕರ ಮನಸ್ಸಿನಲ್ಲಿ ವಿಚಾರ ಮಾಡಿದ— ಒಂದೂಕಾಲು ಸೇರು ಗೋದಿ ಅವರಿಗೆ ತಿರುಗಿ ಕೊಡುವುದು ಯಾಕೆ? ಪಂಚೇರಿನ ಬದಲು ಸ್ವಲ್ಪ ಹೆಚ್ಚಿಗೆ ಆಯ ಕೊಟ್ಟರಾಯಿತು, ಅವರೂ ತಿಳಿದುಕೊಳ್ಳುತ್ತಾರೆ, ನಾನೂ ತಿಳಿದುಕೊಳ್ಳುತ್ತೇನೆ. ಚೈತ್ರದಲ್ಲಿ ಬ್ರಾಹ್ಮಣರು ಬಂದಾಗ ಅವರಿಗೆ ಸುಮಾರು ಒಂದೂವರೆ ಪಂಚೇರು ಗೋದಿಯನ್ನು ಕೊಟ್ಟು ತಾನು ಋಣಮುಕ್ತನಾದನೆಂದು ತಿಳಿದುಕೊಂಡ, ಆ ಬಗ್ಗೆ ಯಾವ ಮಾತೂ ಆಡಲಿಲ್ಲ. ಬ್ರಾಹ್ಮಣನೂ ಮುಂದೆ ಎಂದೂ ಕೇಳಲಿಲ್ಲ.

ಏಳು ವರುಷಗಳು ಕಳೆದುವು. ಬ್ರಾಹ್ಮಣ ಸಾಹುಕಾರನಾದ; ಬೇಸಾಯಗಾರನಾದ ಶಂಕರ ಕೂಲಿಕಾರನಾದ. ಅವನ ತಮ್ಮ ಮಂಗಲ ಬೇರೆಯಾಗಿದ್ದ. ಕೂಡಿದ್ದಾಗ ಇಬ್ಬರೂ ಒಕ್ಕಲಿಗರಾಗಿದ್ದರು. ಬೇರೆಯಾಗಿ ಕೂಲಿಕಾರರಾದರು. ದ್ವೇಷದ ಬೆಂಕಿ ಹೊತ್ತಬಾರದೆಂದು ಶಂಕರನ ಇಚ್ಛೆ. ಆದರೆ ಪರಿಸ್ಥಿತಿ ಅವನನ್ನು ವಿವಶನನ್ನಾಗಿ ಮಾಡಿತು. ಒಲೆ ಬೇರೆ ಬೇರೆ ಹೊತ್ತಿದ ದಿನ ಅವನು ಅತ್ತ—ಇಂದಿನಿಂದ ಅಣ್ಣ-ತಮ್ಮಂದಿರು ಶತ್ರುಗಳಾಗುವೆವು: ಒಬ್ಬನು ಅತ್ತರೆ ಒಬ್ಬನಿಗೆ ನಗೆ; ಪ್ರೇಮದ ಬಂಧನ, ರಕ್ತದ ಬಂಧನ, ಹಾಲಿನ ಬಂಧನ ಇಂದು ಹರಿದುಹೋಗುತ್ತಿದೆ! ಅವನು ಭಗೀರಥ ಪ್ರಯತ್ನದಿಂದ ಕುಲ-ಮರ್ಯಾದೆಯ ವೃಕ್ಷವನ್ನು ಹಚ್ಚಿ ಬೆಳೆಸಿದ್ದ; ಅದಕ್ಕೆ ತನ್ನ ರಕ್ತವನ್ನೆರೆದಿದ್ದ;

ಆದಿಂದು ಬೇರುಸಹಿತ ಬೀಳುವುದನ್ನು ಕಂಡು ಅವನ ಹೃದಯ ಒಡೆದು ಚೂರು ಚೂರಾಗುತ್ತಿತ್ತು. ಏಳು ದಿನ ಅವನು ಅನ್ನದ ಕೋರೆ ನೋಡಲಿಲ್ಲ. ಜ್ಯೇಷ್ಠದ ಬಿಸಿಲಿನಲ್ಲಿ ಹಗಲೆಲ್ಲ ದುಡಿಯುವುದು, ರಾತ್ರಿ ಮುಸುಕಿಟ್ಟು ಕೊಂಡು ಮಲಗಿಬಿಡುವುದು. ಈ ಕಷ್ಟ ವೇದನೆಗಳಿಂದ ಅವನ ರಕ್ತ ಸುಟ್ಟು ಹೋಯಿತು. ಜಡ್ಡಾಯಿತು, ತಿಂಗಳುಗಟ್ಟಲೆ ಹೊರಸು ಬಿಟ್ಟೇಳಲಿಲ್ಲ. ಇನ್ನು ನಿರ್ವಾಹಕ್ಕೆ ಗತಿ? ಐದು ಭಿಘೆಯಲ್ಲಿ ಅರ್ಧ ಭೂಮಿ ಬಂತು, ಒಂದೆತ್ತು ಉಳಿಯಿತು. ಇನ್ನೇನು, ಒಕ್ಕಲುತನ ಕೇವಲ ಮರ್ಯಾದೆಗಾಗಿ ಇದ್ದಂತಾಗಿ, ಹೊಟ್ಟೆಯ ಭಾರ ಕೂಲಿಯ ಮೇಲೆ ಬಿದ್ದಿತು!

ಒಂದು ದಿನ ಶಂಕರ ಕೂಲಿ ಮಾಡಿ ಮನೆಗೆ ಬರುತ್ತಿದ್ದಾಗ ಬ್ರಾಹ್ಮಣನು ದಾರಿಯಲ್ಲಿ ತರುಬಿ ಕೇಳಿದ: "ಶಂಕರ, ನಾಳೆ ಬಂದು ನಿನ್ನ ಲೆಕ್ಕ ನೋಡಿ ಕೊಂಡು ಹೋಗು. ಎಷ್ಟೋ ದಿನದಿಂದ ಐದೂವರೆ ಮಣ ಗೋದಿಯ ಬಾಕಿ ಉಳಿದುಬಿಟ್ಟಿದೆ, ನೀನು ಕೊಡುವ ಮಾತನ್ನೇ ಆಡಲೊಲ್ಲೆ. ಏಕೆ, ಮುಳುಗಿಸಬೇಕೆಂದು ಮಾಡಿದ್ದೀಯೇನು?"

"ಐದೂವರೆ ಮಣ ಗೋದಿ! ನಾ ಎಂದು ತೆಗೆದುಕೊಂಡಿದ್ದೆ ಅಷ್ಟು? ಒಂದು ಹಿಡಿ ಕಾಳು, ಒಂದು ದುಡ್ಡು-ಪೈ ಯಾರದೂ ಇಟ್ಟುಕೊಂಡಿಲ್ಲ." ಶಂಕರ ವಿಸ್ಮಯದಿಂದ ನುಡಿದ.

"ಇಂಥ ಕರ್ಮದ ಫಲವನ್ನೇ ನೀನೀಗ ಉಣ್ಣುತ್ತಿರೋದು—ಹೊಟ್ಟೆಗಿಲ್ಲದಂತೆ ಆಗಿರೋದು." ಎಂದು ಬ್ರಾಹ್ಮಣ ಏಳು ವರುಷಗಳ ಹಿಂದಿನ ಒಂದೂಕಾಲು ಸೇರು ಗೋದಿಯ ಸಾಲವನ್ನು ನೆನಪಿಗೆ ತಂದುಕೊಟ್ಟ.

ಶಂಕರ ಅವಾಕ್ಕಾದ. ದೇವರೇ, ಎಷ್ಟು ವರುಷ ನಾನು ಆಯ ಕೊಟ್ಟೆ. ಇವರಿಗೆ, ಇವರೇನು ಮಾಡಿದರು ನನಗೆ? ಎಂದಾದರೂ ಹೊತ್ತಿಗೆ ಹೇಳಲಿಕ್ಕೆ, ಮುಹೂರ್ತ-ಶಕುನ ಹೇಳಲಿಕ್ಕೆ ಬಂದರೆ ದಕ್ಷಿಣೆ ತಕ್ಕೊಳ್ಳುತ್ತಿದ್ದರು. ಇಷ್ಟು ಸ್ವಾರ್ಥ! ಒಂದೂವರೆ ಸೇರಿನ ತತ್ತಿಗೆ ಕಾವು ಕೊಟ್ಟು ಇಂದು ದೊಡ್ಡ ಘಾತವನ್ನೇ ಮಾಡಿಟ್ಟರಲ್ಲ! ಇಷ್ಟು ದಿನ ಇದಕ್ಕಾಗಿಯೇ ಸುಮ್ಮನಿದ್ದರೆ? ಒಮ್ಮೆ ಕೇಳಿದ್ದರೆ ಗೋದಿ ಕೊಟ್ಟುಬಿಡುತ್ತಿದ್ದೆ.

"ಮಹಾರಾಜ, ಹಾಗೆ ಹೇಳಿ ಕೊಟ್ಟಿಲ್ಲ ಖರೆ. ಆದರೆ ಆಯ ಕೊಡುವಾಗ ಸೇರು ಸೇರು ಎರಡೆರಡು ಸೇರು ಹೆಚ್ಚಿಗೆ ಕೊಟ್ಟಿದ್ದೇನೆ. ಆದರೂ ಐದೂವರೆ ಮಣ ಗೋದಿ ಕೇಳುತ್ತೀರಿ-- ಎಲ್ಲಿಂದ ಕೊಡಲಿ?" ಎಂದ ಶಂಕರ.

"ಆಯ ನೀನು ಒಂದು ಬಿಟ್ಟು ನಾಲ್ಕು ಕೊಟ್ಟಿದ್ದೀ ಆದೀತು. ಅದು ಲೆಕ್ಕದಲ್ಲಿಲ್ಲ. ಲೆಕ್ಕದಲ್ಲಿ ನಿನ್ನ ಹೆಸರಿನಲ್ಲಿ ಐದೂವರೆ ಮಣ ಗೋದಿ ಇದೆ--- ಬೇಕಾದವರ ಕಡೆಯಿಂದ ಲೆಕ್ಕ ಮಾಡಿಸಿಕೋ. ಕೊಟ್ಟರೆ, ನಿನ್ನ ಹೆಸರು ಹೊಡೆದುಹಾಕುತ್ತೇನೆ, ಇಲ್ಲದಿದ್ದರೆ ಇನ್ನೂ ಬೆಳೆಯುತ್ತ ಹೋಗುತ್ತದೆ."

"ಪಾಂಡೇ, ಸುಮ್ಮನೆ ಬಡವನನ್ನು ಯಾಕೆ ಹಿಂಸಿಸುತ್ತೀರಿ? ಹೊಟ್ಟೆಗೂ ಗತಿಯಿಲ್ಲ. ಎಲ್ಲಿಂದ ತರಲಿ ಅಷ್ಟು ಗೋದಿ?"

"ಎಲ್ಲಿಂದಾದರೂ ತಾ. ಒಂದು ಚಟಾಕನ್ನೂ ನಾ ಬಿಡುವವನಲ್ಲ. ಇಲ್ಲಿ ಕೊಡದಿದ್ದರೆ ದೇವರ ಮನೆಯಲ್ಲಿಯಾದರೂ ಕೊಟ್ಟೀಯಾ?"

ಶಂಕರ ನಡುಗಿದ. ನಮ್ಮಂತಹ ಕಲಿತವರಾಗಿದ್ದರೆ, ಸರಿ, ಅಲ್ಲೇ ಕೊಡುತ್ತೇನೆ, ಅಲ್ಲಿಯ ಲೋಕ ಇಲ್ಲಿಯಕಿಂತ ದೊಡ್ಡದೇನಿರುವುದಿಲ್ಲ—ಎಂದು ಹೇಳುತ್ತಿದ್ದೆವು. ಅಲ್ಲದೆ ಪ್ರಮಾಣವಿಲ್ಲ ಪತ್ರವಿಲ್ಲ. ಶಂಕರ ಇಷ್ಟು ತಾರ್ಕಿಕನಲ್ಲ, ವ್ಯವಹಾರಕುಶಲನೂ ಅಲ್ಲ. ಒಂದೋ ಅದು ಋಣ, ಅದೂ ಬ್ರಾಹ್ಮಣನದು! ಹೊತ್ತಗೆಯಲ್ಲಿ ಹೆಸರುಳಿದರೆ ನೆಟ್ಟಗೆ ನರಕಕ್ಕೇ ಹೋಗುವುದು.

"ನಿಮಗೆ ಎಷ್ಟು ಕೊಡೋದು ಇಲ್ಲೇ ಕೊಡುತ್ತೇನೆ ಸ್ವಾಮಿ, ದೇವರ ಹತ್ತಿರ ಯಾಕೆ? ಈ ಜನ್ಮದಲ್ಲಿಯಂತೂ ಭವಣೆ ಬಡುತ್ತಿದ್ದೇನೆ, ಮುಂದಿನ ಜನ್ಮಕ್ಕೂ ಏಕೆ ಮುಳ್ಳು ಬಿತ್ತಲಿ? ಆದರೆ ಇದೇನು ನ್ಯಾಯವಲ್ಲ, ಬ್ರಾಹ್ಮಣರಾಗಿ ನೀವು ಹೀಗೆ ಮಾಡಬಾರದಿತ್ತು. ನಾನಂತೂ ಕೊಡುತ್ತೇನೆ, ಆದರೆ ನೀವು ಮಾತ್ರ ದೇವರ ಮುಂದೆ ಜವಾಬು ಕೊಡಬೇಕಾಗುತ್ತದೆ." ಎಂದ ಶಂಕರ.

"ಅಲ್ಲಿಯ ಹೆದರಿಕೆ ನಿನಗಿದ್ದೀತು, ನನಗೇಕೆ? ಅಲ್ಲಿ ಎಲ್ಲರೂ ನಮ್ಮವರೇ ಇದ್ದಾರೆ—ಋಷಿ-ಮುನಿಗಳು, ದೇವತೆಗಳು ಎಲ್ಲರೂ ಬ್ರಾಹ್ಮಣರೇ!— ಎಂದು ಕೊಡುತ್ತೀ?"

“ಹತ್ತಿರಂತೂ ಏನೂ ಇಲ್ಲ. ಯಾರನ್ನಾದರೂ ಕೇಳುತ್ತೇನೆ—ಸಿಕ್ಕ ಕೂಡಲೇ ಕೊಡುತ್ತೇನೆ.”

“ಅದೇನಿಲ್ಲ; ಏಳು ವರುಷ ಆಯಿತು, ಇನ್ನು ಒಂದು ದಿನವೂ ಕೇಳುವುದಿಲ್ಲ. ಗೋದಿ ಕೊಡದಿದ್ದರೆ ಕಾಗದ ಬರೆದುಕೊಡು.”

“ಕೊಡೋದೇ ಇದ್ದ ಮೇಲೆ, ಗೋದಿಯನ್ನಾದರೂ ತಕ್ಕೊಳ್ಳಿರಿ, ಕಾಗದವನ್ನಾದರೂ ಬರೆಸಿಕೊಳ್ಳಿರಿ. ಧಾರಣೆ ಹೇಗೆ ಹಿಡಿಯುತ್ತೀರಿ?”

“ಪೇಟೆಯಲ್ಲಿ ಐದು ಸೇರು ಇದೆ ರೂಪಾಯಿಗೆ. ಐದೂಕಾಲಿನಂತ ಹಿಡಿಯುತ್ತೇನೆ.”

“ಕೊಡೋದಕ್ಕೇ ಕೂತಿದ್ದೇನೆ, ಕಾಲು ಸೇರು ಹಿಡಿಸಿಕೊಂಡ ದೋಷವಾದರೂ ಯಾಕೆ? ಪೇಟೆಯ ಧಾರಣೆಯನ್ನೇ ಹಿಡಿಯಿರಿ.”

ಲೆಕ್ಕಮಾಡಿ, ಅರವತ್ತು ರೂಪಾಯಿಗಳಿಗೆ—ಬಡ್ಡಿ ದರ ೩ ರಂತೆ, ವರುಷದೊಳಗೆ ಕೊಡದಿದ್ದರೆ ೩||ಯಂತೆ— ಕಾಗದ ಬರೆಸಿಕೊಂಡಾಯಿತು.

೩

ಅವಧಿಯೊಳಗೇ ಸಾಲ ತೀರಿಸಬೇಕೆಂದು ಶಂಕರ ಕಠಿನ ವ್ರತವನ್ನೇ ಹಿಡಿದ. ಮೊದಲೂ ಮಧ್ಯಾಹ್ನ ಒಲೆ ಹೊತ್ತುತ್ತಿರಲಿಲ್ಲ, ಚುರಮುರಿಯಿಂದ ಸಾಗುತ್ತಿತ್ತು. ಈಗ ಅದೂ ನಿಂತಿತು. ಹುಡುಗರಿಗೆ ಮಾತ್ರ ರಾತ್ರಿ ರೊಟ್ಟಿ. ನಾಲು ಬಿಲ್ಲಿಯ ಬತ್ತಿ ಸೇದುತ್ತಿದ್ದ, ಎಂದೂ ಬಿಡಲಾಗದಿದ್ದ ಆ ಚಟ ಈಗ ಬಿಟ್ಟ. ವಸ್ತ್ರತ್ಯಾಗ ಮೊದಲೇ ಚರಮಸೀಮೆ ಮುಟ್ಟಿತ್ತು; ಈಗ ಅದು ಪ್ರಕೃತಿಯ ನ್ಯೂನತಮ ರೇಖೆಯೊಳಗೇ ಉಳಿಯಿತು. ಈ ತಪಸ್ಸಿಗೆ ಆಸೆ ಮೀರಿ ಫಲ ಸಿಕ್ಕಿತು. ವರ್ಷದ ಕೊನೆಯಲ್ಲಿ ೬೦ ರೂಪಾಯಿ ಕೂಡಿದವು. ಇಷ್ಟು ಕೊಟ್ಟು ಉಳಿದುದನ್ನು— ಇನ್ನು ೧೫ ರೂ. ಅಷ್ಟೇ— ಶೀಘ್ರದಲ್ಲಿಯೇ ಕೊಡುವೆನೆಂದರೆ ಪಂಡಿತಜಿ ಕೇಳಲಿಕ್ಕಿಲ್ಲವೆ? ಎಂದುಕೊಂಡು ಶಂಕರ ಹೋಗಿ ಹಣವನ್ನು ಬ್ರಾಹ್ಮಣನ ಮುಂದೆ ಇಟ್ಟ.

"ಎಲ್ಲಿಯಾದರೂ ಸಾಲಮಾಡಿ ತಂದೆಯಾ ?" ಬ್ರಾಹ್ಮಣ ಆಶ್ಚರ್ಯದಿಂದ ಕೇಳಿದ.

"ಇಲ್ಲ ಸ್ವಾಮಿ, ನಿಮ್ಮ ದಯೆಯಿಂದ ಈಗ ಕೂಲಿ ಚೆನ್ನಾಗಿ ಸಿಕ್ಕಿತು."

"ಆದರೆ ಇನ್ನೂ ೬೦ ಇದೆ!"

"ಉಳಿದದ್ದು ಎರಡು ಮೂರು ತಿಂಗಳಲ್ಲಿ ಕೊಡುತ್ತೇನೆ."

"ಸೈಗೆ ಸ್ಟೆ ಕೊಟ್ಟರೆ ಋಣಮುಕ್ತ ಆಗೋದು: ಹೋಗು, ಇನ್ನು ೧೫ ತಂದುಕೊಡು."

"ದಯಮಾಡಿರಿ ಮಹಾರಾಜ, ಈಗ ಸಂಜೆಯ ರೊಟ್ಟಿಗೂ ಇಲ್ಲ. ಊರೊಳಗೇ ಇರುತ್ತೇನೆ ಎಂದ ಮೇಲೆ ಇವತ್ತಿಲ್ಲ ನಾಳೆ ಕೊಟ್ಟೇ ತೀರುತ್ತೇನೆ."

"ನಾಥ್ಯವಿಲ್ಲ. ಹೆಚ್ಚುಮಾತು ಕೇಳಿಸುವವನಲ್ಲ ನಾನು. ಇವತ್ತು ಪೂರಾ ತೀರಿಸದಿದ್ದರೆ ಇನ್ನು ಬಡ್ಡಿ ದರ ಏರಬೇಕಾಗುತ್ತದೆ. ರೂಪಾಯಿ ಬೇಕಾದರೆ ನಿಮ್ಮ ಮನೆಯೊಳಗಿಟ್ಟುಕೋ, ಬೇಕಾದರೆ ನಮ್ಮಲ್ಲಿ ಬಿಟ್ಟುಹೋಗು."

"ಆಗಲಿ, ತಂದಷ್ಟು ಇಟ್ಟುಕೊಳ್ಳಿರಿ. ಇನ್ನು ೧೫ ಯಾರಿಂದಾದರೂ ತರುತ್ತೇನೆ."

ಶಂಕರನಿಗೆ ಎಲ್ಲಿಯೂ ಹಣ ಸಿಕ್ಕಲಿಲ್ಲ. ಅವನ ಬಗ್ಗೆ ಅವಿಶ್ವಾಸವಿಂದಲ್ಲ, ಯಾರಲ್ಲಿಯೂ ಹಣ ಇರಲಿಲ್ಲವೆಂದಲ್ಲ. ಪಂಡಿತಜಿಯ ಬೇಟೆಯನ್ನು ಬಿಡಿಸಲು ಯಾರಿಗೂ ಧೈರ್ಯ ಸಾಲದು.

೪

ಇದೇ ವರುಷ ತಪಸ್ಸು ಮಾಡಿದರೂ ಸಾಲ ತೀರದಿದ್ದುದಕ್ಕೆ ಶಂಕರನ ಸಂಯಮ ನಿರಾಶೆಯಲ್ಲಿ ಪರಿಣಮಿಸಿತು. ಇಷ್ಟು ಕಷ್ಟಪಟ್ಟು ವರುಷದಲ್ಲಿ ೬೦ಕ್ಕಿಂತ ಹೆಚ್ಚಿಗೆ ಉಳಿಯದಿದ್ದರೆ ಇಮ್ಮಡಿ ಉಳಿಸುವುದಕ್ಕೆ ಉಪಾಯ ವೇನಿದೆ ? ಸಾಲದ ಹೊರೆ ತಲೆಯ ಮೇಲೆ ಇರುವುದೇ ಆದರೆ, ಮಣ ಆದರೇನು, ಒಂದೂವರೆ ಮಣ ಆದರೇನು ಎಂದವನಿಗೆನಿಸಿತು. ಉತ್ಸಾಹ

ಕುಗ್ಗಿತು, ದುಡಿತದ ಬಗ್ಗೆ ತಿರಸ್ಕಾರ ಹುಟ್ಟಿತು. ಆಸೆಯೆ ಉತ್ಸಾಹದ ತಾಯಿ; ಅದರಲ್ಲಿ ತೇಜವಿದೆ, ಬಲವಿದೆ, ಜೀವನವಿದೆ. ಶಂಕರ ಆಶಾಹೀನ ನಾಗಿ ಉದಾಸನಾದ. ಇದುವರೆಗೆ ಹತ್ತಿಟ್ಟಿದ್ದ ಆವಶ್ಯಕತೆಗಳು ಮುಗಿ ಬಿದ್ದುವು. ಬಟ್ಟೆಗೆ ತೇಪೆ ಹಚ್ಚುವುದಕ್ಕೂ ಒಂದು ಮಿತಿಯಿದೆ. ಈಗವನು ಸಂಬಳ ಬಂದೊಡನೆ ಕೂಡಿಡುತ್ತಿರಲಿಲ್ಲ. ಬಟ್ಟೆ ತರುತ್ತಿದ್ದ, ತಿನ್ನುವ ಪದಾರ್ಥ ತರುತ್ತಿದ್ದ, ಮುಂಚೆ ತಂಬಾಕು ಮಾತ್ರ ಸೇದುತ್ತಿದ್ದವನು ಈಗ ಗಾಂಜಿ ಸುರುಮಾಡಿದ. ಯಾರಿಗೂ ರೂಪಾಯಿ ಕೊಡುವ ಚಿಂತೆಯೇ ಇಲ್ಲ. ಜ್ವರದಲ್ಲಿಯೂ ದುಡಿಯುತ್ತಿದ್ದವನು ಈಗ ಕೆಲಸ ತಪ್ಪಿಸಲು ನೆವ ಹುಡುಕ ತೊಡಗಿದ.

ಮೂರು ವರುಷಗಳು ಕಳೆದುವು; ಬ್ರಾಹ್ಮಣ ಒಮ್ಮೆಯೂ ತಗಾದೆ ಮಾಡಲಿಲ್ಲ. ಆಮೇಲೆ ಒಮ್ಮೆ ಶಂಕರನನ್ನು ಕರೆದು ಲೆಕ್ಕ ತೋರಿಸಿದ. ಇಟ್ಟಿದ್ದ ಅರುವತ್ತು ರೂಪಾಯಿ ಮುರಿದು ಇನ್ನೂ ನೂರಿಪ್ಪತ್ತು ಶಂಕರ ಕೊಡುವುದುಳಿಯಿತು.

"ಇಷ್ಟು ಈ ಜನ್ಮದಲ್ಲೇನು ತೀರಿಸಲಾರೆ ಇನ್ನೊಂದು ಜನ್ಮದಲ್ಲೇ ಸರಿ." ಎಂದ ಶಂಕರ.

"ಈ ಜನ್ಮದಲ್ಲಿಯೇ ನಾನು ತಕ್ಕೊಳ್ಳುವವ; ಗಂಟು-ಬಡ್ಡಿ ಎಲ್ಲಾ."

"ಒಂದು ಎತ್ತು ಇದೆ, ಅದನ್ನು ತಕ್ಕೊಳ್ಳಿರಿ; ಒಂದು ಗುಡಿಸಲಿದೆ, ಅದನ್ನೂ ತಕ್ಕೊಳ್ಳಿರಿ; ಇದರ ಹೊರತು ಏನಿದೆ ನನ್ನಲ್ಲಿ?"

"ಎತ್ತು-ಕತ್ತೆ ತಕ್ಕೊಂಡು ನಾನೇನು ಮಾಡಲಿ? ನನಗೆ ಕೊಡು ವಂತಹದು ನಿನ್ನಲ್ಲಿ ಬೇಕಾದಷ್ಟಿದೆ."

"ಇನ್ನೇನಿದೆ ಮಹಾರಾಜ?"

"ಇನ್ನೇನಿಲ್ಲದಿದ್ದರೂ ನೀನಂತೂ ಇದ್ದೀಯಲ್ಲ. ನೀನು ಕೂಲಿ ಯನ್ನಂತೂ ಮಾಡಿಯೇ ಮಾಡುತ್ತೀ. ನನಗೂ ಒಕ್ಕಲುತನಕ್ಕಾಗಿ ಒಂದು ಆಳು ಇಡಬೇಕಾಗಿದೆ. ಬಡ್ಡಿಯಲ್ಲಿ ನೀನು ಜೀತ ಮಾಡಿಕೊಂಡಿರು. ಒಳ್ಳೇ

ಕಾಲ ಬಂದಾಗ ಗಂಟು ಮುಟ್ಟಿಸುವೆಯಂತೆ. ಅಂದರೆ ನನ್ನ ಗಂಟು ಮುಟ್ಟುವ ವರೆಗೆ ನೀನು ಬೇರೆಕಡೆ ಕೆಲಸಕ್ಕೆ ಹೋಗುವಂತಿಲ್ಲ. ನಿನಗೆ ಯಾವ ಸೊತ್ತೂ ಇಲ್ಲ. ನಿನ್ನ ಮೇಲೆ ಇಷ್ಟು ಗಂಟು ಯಾವ ಭರವಸೆಯ ಮೇಲೆ ಬಿಡಲಿ? ನಿನ್ನಿಂದ ತಿಂಗಳಾ ತಿಂಗಳಾ ಬಡ್ಡಿ ಬರುತ್ತದೆಂಬುದಕ್ಕೆ ಹೊಣೆಯಾರು? ಮತ್ತೊಂದು ಕಡೆ ಕೆಲಸ ಮಾಡುತ್ತ ಬಡ್ಡಿ ಕೊಡವುದಕ್ಕೇ ಆಗದಿದ್ದರೆ ಗಂಟಿನ ಬಗ್ಗೆ ಭರವಸೆ ಯಾರದು? "

" ಮಹಾರಾಜ, ದುಡಿತವೆಲ್ಲ ಬಡ್ಡಿಗಾದರೆ ಹೊಟ್ಟೆಗೇನು? "

" ನಿನ್ನ ಹೆಂಡತಿ ಇದ್ದಾಳೆ, ಮಕ್ಕಳಿದ್ದಾರೆ, ಅವರೆಲ್ಲಾ ಕೈಕಾಲು ಕಟ್ಟಿಕೊಂಡು ಬಿದ್ದಿರುವರೆ? ಅಲ್ಲದೆ, ನಾನು ನಿನಗೆ ದಿನಾಲು ನ್ಯಾರಿಗೆ ಅರ್ಧ ಸೇರು ಜವೆಗೋದಿ ಕೊಡುತ್ತೇನೆ; ವರುಷಕ್ಕೆ ಒಂದು ಕಂಬಳಿ, ಒಂದು ಲಂಡಂಗಿ ಕೊಡುತ್ತೇನೆ; ಮತ್ತಿನ್ನೇನು ಬೇಕು? ಇಷ್ಟು ಮಾತ್ರ ನಿಜ-ಜೇರೆ ಯವರು ನಿನಗೆ ಆರಾಣೆ ದಿನಗೂಲಿ ಕೊಡುತ್ತಾರೆ; ಆದರೆ ನನಗಂಥ ಅಗತ್ಯ ವಿಲ್ಲ. ನನ್ನ ಹಣ ಮುಟ್ಟಿಸಿಕೊಳ್ಳಲಿಕ್ಕೆ ಇಟ್ಟುಕೊಳ್ಳುವವ ನಾನು. "

ಶಂಕರ ಬಹಳ ಹೊತ್ತು ಆಳವಾದ ಚಿಂತೆಯಲ್ಲಿ ಮುಳುಗಿ, ಮೇಲೆ ಬಂದು " ಸ್ವಾಮಿ, ಇದು ಜನುಮಕ್ಕೇ ಹತ್ತಿದ ಜೀತವಾಯಿತು! " ಎಂದ.

" ಜೀತವೆಂದು ತಿಳಿದುಕೋ ಅಥವಾ ಕೂಲಿ ಎಂದು ತಿಳಿದುಕೊ. ನನ್ನ ಹಣ ಮುಟ್ಟುವ ತನಕ ನಾನೇನು ನಿನ್ನನ್ನು ಬಿಡುವವನಲ್ಲ. ನೀನು ಓಡಿಹೋದರೆ ನಿನ್ನ ಮಗ ತುಂಬುತ್ತಾನೆ. ಹಾಂ, ಯಾರೂ ಇಲ್ಲದೆ ಹೋದರೆ ಆಗಿನ ಮಾತು ಬೇರೆ. "

ಈ ತೀರ್ಪಿಗೆ ಎಲ್ಲಿಯೂ ಅಪೀಲೇ ಇಲ್ಲ. ಕೂಲಿಕಾರರ ಹೊಣೆ ಯಾರು ಹೊರುತ್ತಾರೆ? ನೊರೆ ಕೇಳುವವರಿಲ್ಲ, ಓಡಿ ಹೋಗುವುದೆಲ್ಲಿ? ಮರುದಿನ ದಿಂದ ಶಂಕರ ಬ್ರಾಹ್ಮಣನಲ್ಲಿ ಕೆಲಸ ಆರಂಭಿಸಿದ. ಒಂದೂ ಕಾಲು ಸೇರು ಗೋದಿಗಾಗಿ ಆಜನ್ಮ ಜೀತದ ಬೇಡಿ ಹಾಕಿಕೊಳ್ಳಬೇಕಾಯಿತು. ಆ ದುರ್ಭಾಗ್ಯನಿಗೆ ಇರುವ ಸಮಾಧಾನವೆಂದರೆ, ಇದು ತನ್ನ ಪೂರ್ವಜನ್ಮದ ಸಂಸ್ಕಾರ ಎಂಬುದು. ಅವನ ಹೆಂಡತಿ ಎಂದೂ ಮಾಡದೆ ಇದ್ದ ಕೆಲಸಗಳನ್ನು

ಮಾಡಬೇಕಾಗಿ ಬಂದಿತು. ಮಕ್ಕಳು ಇಬ್ಬರಿಗಾಗಿಯೂ ಹಲುಬುತ್ತಿದ್ದನು. ಆದರೆ ಶಂಕರ ಎಲ್ಲವನ್ನೂ ಕಣ್ಣಿಂದ ನೋಡುವ ಹೊರತು ಮತ್ತೇನೂ ಮಾಡಲಾರ.

೫

ಬ್ರಾಹ್ಮಣನ ಜೀತದಾಳಾಗಿ ಇಪ್ಪತ್ತು ವರುಷ ದುಡಿದು ಶಂಕರ ಈ ದುಸ್ತಾರ ಸಂಸಾರದಿಂದ ಬೀಳ್ಕೊಂಡ. ೧೨೦ ರೂಪಾಯಿ ಸಾಲ ಅವನ ತಲೆಯ ಮೇಲೆ ಇದ್ದೇ ಇತ್ತು. ದೇವರ ಓಲಗದಲ್ಲಿ ಆ ಬಡವನನ್ನು ಕಾಡುವುದು ಸರಿಯಲ್ಲೆಂದು ಬ್ರಾಹ್ಮಣ ಬಗೆದ: ಅವನು ಅಷ್ಟು ಕೆಟ್ಟವನಲ್ಲ, ದಯೆಗೇಡಿಯಲ್ಲ. ಶಂಕರನ ಹರೆಯದ ಮಗನ ಕತ್ತನ್ನು ಹಿಡಿದ. ಅವನು ಇಂದಿಗೂ ಅಲ್ಲಿ ದುಡಿಯುತ್ತಾನೆ. ಅವನ ಉದ್ಧಾರ ಎಂದು ಆಗುವುದೋ ಅಥವಾ ಆಗುವುದೇ ಇಲ್ಲವೋ, ದೇವನೇ ಬಲ್ಲ.

ಈ ವೃತ್ತಾಂತ ಕಪೋಲಕಲ್ಪಿತವೆಂದು ತಿಳಿಯಬೇಡಿ. ಇದು ಸತ್ಯ ಘಟನೆ. ಇಂತಹ ಶಂಕರರಿಂದ, ಇಂತಹ ಬ್ರಾಹ್ಮಣರಿಂದ ಜಗತ್ತು ತೆರವಾಗಿಲ್ಲ.

# ಪ್ರೇಮಚಂದರ ಪತ್ರ ಸಾಹಿತ್ಯ

( ಶ್ರೀ. ಬನಾರಸೀದಾಸ ಚತುರ್ವೇದಿ ಅವರಿಗೆ ಬರೆದ ಪತ್ರ )

ಸರಸ್ವತಿ ಪ್ರೆಸ್, ಕಾಶಿ
೩-೬-೧೯೩೦

ಪ್ರೀತಿಯ ಅಣ್ಣನಿಗೆ ನಮಸ್ಕಾರ,

ತಮ್ಮ ಪತ್ರ ಬಂದು ಬಹಳ ದಿನಗಳಾದವು. ಮೊದಲು ಕೆಲ ದಿನ ನಿಬ್ಬಣಕ್ಕೆ ಹೋಗುವ ಪ್ರಸಂಗ ಬಂದಿತು. ನಂತರ ನೈನಿತಾಲಕ್ಕೆ ಹೋಗ ಬೇಕಾಯಿತು. ೧ನೇ ತಾರೀಖಿಗೆ ನೈನಿತಾಲದಿಂದ ಮರಳಿ ಬಂದೆ. ಬಂದವನೇ ಇಲ್ಲಿ ಕಾಂಗ್ರೆಸ್ ಕೆಲಸದಲ್ಲಿ ತೊಡಗಿದೆ. ನಗರದಲ್ಲಿ ಸೈನಿಕರ ಆಡಳಿತೆ ನಡೆಯುತ್ತಿದೆ. ಅಮೀನಾಬಾದದ ಎರಡೂ ಪಾರ್ಕುಗಳಲ್ಲಿ ಸೈನಿಕರೂ ಯುರೋಪಿಯನ್‌ರೂ ಠಾಣ್ಯ ಹಾಕಿದ್ದಾರೆ. ಊರಲ್ಲಿ ೧೪೪ನೇ ಕಲಮು ಜಾರಿಯಲ್ಲಿದೆ. ಪೋಲೀಸರು ಜನರನ್ನು ಸೆರೆಹಿಡಿಯುತ್ತಿದ್ದಾರೆ ಮತ್ತು ಕಾಂಗ್ರೆಸ್ಸು ೧೪೪ನೇ ಕಲಮನ್ನು ಕಿತ್ತೊಗೆಯಲು ಹೋರಾಡುತ್ತಿದೆ. ಪೋಲಿಸರ ಲಾಠೀ ಚಾರ್ಜಿನಿಂದ ಜನರಲ್ಲಿಯ ಈ ಧೈರ್ಯ ಹೋಗುತ್ತಿದೆ.

ತಾವು ನನ್ನ ಭಾವಚಿತ್ರವನ್ನು ಕೇಳುತ್ತಿದ್ದೀರಿ. ಕೆಲವೇ ದಿನಗಳ ಹಿಂದೆ ತೆಗೆಯಿಸಿ ಒಂದು ಫೋಟೋ ಲಾಹೋರಿಗೆ ಕಳಿಸಿದೆ. ಅದರ ಪಡಿಯಚ್ಚನ್ನು ತರಿಸಿ ನನ್ನ ಕಥಾ ಸಂಕಲನ "ಪಾಂಚ್‌ಫೂಲ"ದ ಮೇಲೆ ಮುದ್ರಿಸಿದೆ.

ನನ್ನ ವಿಷಯದಲ್ಲಿ ತಾವು ಕೇಳಿದ ಪ್ರಶ್ನೆಗಳಿಗೆ ಉತ್ತರಗಳನ್ನು ಕೆಳಗೆ ಕೊಡುತ್ತಿದ್ದೇನೆ.

(೧) ನಾನು ೧೯೦೭ರಿಂದ ಕತೆಗಳನ್ನು ಬರೆಯಲು ಪ್ರಾರಂಭಿಸಿದೆ. ೧೯೦೮ರಲ್ಲಿ ನನ್ನ ಮೊದಲನೇ ಕಥಾಸಂಕಲನ "ಸೋಜೆ ವತನ" (ಐದು ಕತೆಗಳ ಸಂಗ್ರಹ) ಜಮಾನಾ ಪ್ರೆಸ್‌ದಲ್ಲಿ ಪ್ರಕಾಶಿತವಾಯಿತು. ಆದರೆ ಹಮೀರಪುರದ ಕಲೆಕ್ಟರರು ಅವುಗಳನ್ನು ನನ್ನಿಂದಲೇ ತರಿಸಿ ಸುಡಿಸಿದರು. ಅವರ ದೃಷ್ಟಿಯಲ್ಲಿ ಆ ಕತೆಗಳು ವಿದ್ರೋಹಾತ್ಮಕವಿದ್ದವಂತೆ. ಆದರೆ ಆ ಕತೆಗಳ ಅನುವಾದಗಳು ಬೇರೆ ಕೆಲ ಪತ್ರಿಕೆಗಳಲ್ಲಿ ಮೊದಲೇ ಅಚ್ಚಾಗಿದ್ದವು.

(೨) ಈ ಪ್ರಶ್ನೆಯ ಉತ್ತರ ಕೊಡುವದು ಕಠಿಣವಿದೆ. ೨೦೦ ಕತೆಗಳಿಗಿಂತಲೂ ಹೆಚ್ಚಾಗಿರುವ ಸಂಗ್ರಹಗಳಲ್ಲಿ ಯಾವವನ್ನು ಆರಿಸಿ ಕೊಡಲಿ. ಆದರೂ ಸ್ಮರಿಸಿ ಬರೆಯುತ್ತಿದ್ದೇನೆ.

**ಬಡೇ ಘರಕೀ ಬೇಟಿ ರಾನೀ ಸಾರಂಧಾ. ನಮಕಕಾ ದಾರೋಗಾ. ಆಭೂಷಣ. ಪ್ರಾಯಶ್ಚಿತ್ತ. ಕಾಮನಾ ತರು. ಮಂದಿರ ಔರ ಮಸ್‌ಜಿದ್. ಘಾಸವಾಲಿ. ಮಹಾತೀರ್ಥ. ಸತ್ಯಾಗ್ರಹ. ಲಾಂಛನ. ಸತಿ. ಲೈಲಾ. ಮಂತ್ರ.**

"ಮಂಜಿಲೆ ಮಸ್‌ಜಿದ್" ಎಂಬ ಹೆಸರಿನ ಉರ್ದು ಕಥೆ ಬಹಳೇ ಸುಂದರವಾಗಿದೆ. ನನ್ನ ಎಷ್ಟೋ ಮುಸಲ್ಮಾನ್ ಮಿತ್ರರು ಬಹಳವಾಗಿ ಹೊಗಳಿದರು. ಆದರೂ ಅದರ ಅನುವಾದ ಇನ್ನೂ ಹಿಂದೀಯಲ್ಲಿ ಆಗಿಲ್ಲ. ಅನುವಾದವಾದರೆ ಮೂಲದ ಸ್ವಾರಸ್ಯ ಅದರಲ್ಲಿ ಉಳಿಯಲಾರದು.

(೩) ನನ್ನ ಮೇಲೆ ಯಾವದೇ ವಿಶಿಷ್ಟ ಲೇಖಕನ ಶೈಲಿಯ ಪ್ರಭಾವವು ಬೀಳಲಿಲ್ಲ. ಅಲ್ಪ ಸ್ವಲ್ಪವಾಗಿ ಪಂಡಿತ ರತನನಾಥ ದರ ಲಖನವಿ ಮತ್ತು ಡಾಕ್ಟರ ರವೀಂದ್ರನಾಥ ಠಾಕೂರ ಅವರ ಪ್ರಭಾವ ಬಿದ್ದಿದೆ.

(೪) ಆದಾಯದ ಬಗ್ಗೆ ಮಾತ್ರ ಏನನ್ನೂ ಕೇಳಬೇಡಿ. ಮೊದಲಿನ ಎಲ್ಲ ಪುಸ್ತಕಗಳ ಅಧಿಕಾರವನ್ನು ಪ್ರಕಾಶಕರಿಗೆ ಕೊಟ್ಟುಬಿಟ್ಟೆ. 'ಪ್ರೇಮ ಪಚ್ಚೀಸಿ,' 'ಸೇವಾಸದನ,' 'ಸಪ್ತ ಸರೋಜ,' 'ಪ್ರೇಮಾಶ್ರಮ' 'ಸಂಗ್ರಾಮ' ಇವುಗಳಿಗೆಲ್ಲ ಕೂಡಿ ೩೦೦೦ ರೂಪಾಯಿಗಳನ್ನು ಹಿಂದೀ ಪುಸ್ತಕ ಎಜನ್ಸಿಯವರು ಕೊಟ್ಟರು. 'ರಂಗಭೂಮಿ'ಯ ಸಲುವಾಗಿ ದುಲಾರಿಯವರು ೧೮೦೦ ರೂಪಾಯಿಗಳನ್ನು ಕೊಟ್ಟರು ಮತ್ತು ಕಥಾಸಂಕಲನಗಳಿಂದ ನೂರಿನ್ನೂರು ರೂಪಾಯಿಗಳು ಬಂದವು. 'ಕಾಯಾಕಲ್ಪ,' 'ಆಜಾದ ಕಥಾ,' 'ಪ್ರೇಮತೀರ್ಥ,' 'ಪ್ರೇಮ ಪ್ರತಿಮಾ,' 'ಪ್ರತಿಜ್ಞಾ.' ಈ ಪುಸ್ತಕಗಳನ್ನು ನಾನೇ ಅಚ್ಚು ಹಾಕಿಸಿದೆ. ಆದರೆ ದೇವರೇ ಎಂದು ಈಗ ೬೦೦ ರೂಪಾಯಿಗಳು ಮಾತ್ರ ವಸೂಲಾಗಿವೆ ಮತ್ತು ಅಚ್ಚು ಹಾಕಿಸಿದ ಪುಸ್ತಕಗಳೂ ಹಾಗೆಯೇ ಬಿದ್ದಿವೆ. ಅಲ್ಲಿ ಇಲ್ಲಿ ಬರೆಯುವ ಲೇಖನಗಳಿಂದ ತಿಂಗಳಿಗೆ ಸುಮಾರು ೨೫ ರೂಪಾಯಿಗಳ ಪ್ರಾಪ್ತಿ ಇದೆ. ಆದರೆ ಈಗೀಗ ಇಷ್ಟು ಆಗುವದಿಲ್ಲ. ಏಕೆಂದರೆ ನಾನೀಗ 'ಹಂಸ'

ವ ೯ "ಮಾಧುರಿ" ಪತ್ರಿಕೆಗಳಲ್ಲಿಯಷ್ಟೇ ಲೇಖನಗಳನ್ನು ಬರೆಯುತ್ತಿ-ದ್ದೇನೆ ಯಾವಾಗಲಾದರೊಮ್ಮೆ "ವಿಶಾಲ ಭಾರತ" ಮತ್ತು "ಸರಸ್ವತಿ" ಪತ್ರಿಕಗಳಲ್ಲಿ ಬರೆಯುತ್ತಿರುತ್ತೇನೆ. ತೀರಿತು. ಉರ್ದು ಅನುವಾದಗಳಿಂದಲಾ ಈ ವರೆಗೆ ಸುಮಾರಾಗಿ ೨೦೦೦ ರೂಪಾಯಿಗಳಿಗಿಂತಲೂ ಹೆಚ್ಚು ಸಿಕ್ಕಿಲ್ಲ. ೮೦೦ ರೂಪಾಯಿಗಳಿಗೆ 'ರಂಗಭೂಮಿ' ಮತ್ತು "ಪ್ರೇಮಾಶ್ರಮ"ದ ಅನುವಾದವನ್ನು ಕೊಟ್ಟುಬಿಟ್ಟಿದ್ದೇನೆ. ಪ್ರಕಟಿಸುವವರೇ ದೊರೆಯುತ್ತಿದ್ದಿಲ್ಲ.

(೫) ಹಿಂದೀಯಲ್ಲಿ ಕಥಾಸಾಹಿತ್ಯ ಇನ್ನೂ ವರೆಗೂ ಆರಂಭಿಕ ದಶೆ-ಯಲ್ಲಿಯೇ ಇದೆ. ಕತೆಗಳನ್ನು ಬರೆಯುವವರಲ್ಲಿ ಸುದರ್ಶನ, ಕೌಶಿಕ, ಜೈನೇಂದ್ರಕುಮಾರ, ಉಗ್ರ, ಪ್ರಸಾದ, ರಾಜೇಶ್ವರಿ ಇವರು ಕಾಣಿಸಿಕೊಳ್ಳು-ತ್ತಾರೆ. ನನಗೆ ಜೈನೇಂದ್ರ ಮತ್ತು ಉಗ್ರ ಇವರ ಕತೆಗಳಲ್ಲಿ ಸ್ವತಂತ್ರ ವಿಚಾರಶಕ್ತಿ ಮತ್ತು ಬಾಹುಲ್ಯದ ಚಿಹ್ನಗಳು ಕಂಡು ಬರುತ್ತಿವೆ ಪ್ರಸಾದರವು ಭಾವನಾತ್ಮಕವಾಗಿವೆ. ವಾಸ್ತವತೆ ಇಲ್ಲ. ರಾಜೇಶ್ವರಿಯವರೂ ಚೆನ್ನಾಗಿ ಬರೆಯುತ್ತಾರೆ. ಆದರೂ ಬರೆಯುವದು ಬಹಳ ಕಡಿಮೆ. ಸುದರ್ಶನರವರ ಕತೆಗಳ ರಚನೆ ಸುಂದರವಾಗಿರುತ್ತದೆ, ಆದರೆ ಆಳವಾಗಿರುವದಿಲ್ಲ ಮತ್ತು ಕೌಶಿಕರು ಕತೆಗಳಲ್ಲಿ ಮಾತುಗಳನ್ನು ಅನಾವಶ್ಯಕವಾಗಿ ಬೆಳೆಯಿಸಿಕೊಂಡು ಹೋಗುತ್ತಾರೆ. ಇವರಲ್ಲಿ ಯಾರೂ ಈ ವರೆಗೂ ಸಮಾಜದ ಯಾವದೇ ವಿಶೇಷ ಅಂಗದ ವಿಶೇಷ ಅಭ್ಯಾಸವನ್ನು ಮಾಡಿರುವದಿಲ್ಲ. ಉಗ್ರರೇನೋ ಸ್ವಲ್ಪ ಮಾಡಿದರು. ನಾನು ರೈತ ಸಮಾಜವನ್ನು ತೆಗೆದುಕೊಂಡೆ. ಆದರೆ ಇಂಥ ಎಷ್ಟೋ ಬೇರೆ ಬೇರೆ ವರ್ಗಗಳು ಬಿದ್ದಿವೆ. ಅಭ್ಯಾಸಮಾಡಿ ಅವುಗಳ ಮೇಲೆ ಬೆಳಕನ್ನು ಬೀರುವದು ಅವಶ್ಯವಿದೆ. ಸಾಧುಗಳ ಸಮಾಜದ ಮೇಲೆ ಈ ವರೆಗೆ ಯಾರೂ ಬರೆಯಲಿಲ್ಲ. ನಮ್ಮಲ್ಲಿ ಕಲ್ಪನೆಗೆ ಪ್ರಾಧಾನ್ಯ ಕೊಡುತ್ತೇನೆ, ಅನುಭೂತಿಗಲ್ಲ ಕಾರಣವಿಷ್ಟೇ, ಈ ವರೆಗೂ ಸಾಹಿತ್ಯ ವನ್ನು ನಾವು ನಮ್ಮ ನಿತ್ಯದ ವೃತ್ತಿಯನ್ನಾಗಿ ಮಾಡಿಕೊಂಡಿಲ್ಲ. ಆರ್ಥಿಕ ದೃಷ್ಟಿಯಿಂದಂತೂ ನನ್ನ ಜೀವನ ಅಯಶಸ್ವಿಯಾಯಿತು. ಅಯಶಸ್ವಿ ಯಾಗಿಯೇ ಉಳಿಯುವದು. 'ಹಂಸ' ಪತ್ರಿಕೆಯನ್ನು ಪ್ರಾರಂಭಿಸಿ, ನನ್ನ ಇತರ ಪುಸ್ತಕಗಳಿಂದ ಗಳಿಸಿದ ದುಡ್ಡನ್ನು ಹಾಳುಮಾಡಿದೆ. ಈ ವರುಷ ಮಾತ್ರ ಐದಾರುನೂರು ರೂಪಾಯಿ ಸಿಗಬಹುದು. ಮುಂದೆ ಮಾತ್ರ ಆಶೆ ಇಲ್ಲ.

(೬) ಮರಾಠಿ, ಗುಜರಾತಿ. ಉರ್ದು ಮತ್ತು ತಮಿಳು ಭಾಷೆಗಳಲ್ಲಿ ನನ್ನ ಕೆಲ ಕೃತಿಗಳು ಅನುವಾದಗೊಂಡಿವೆ. ಉರ್ದು ಭಾಷೆಯಲ್ಲಿ ನನ್ನ ಹೆಚ್ಚು ಕೃತಿಗಳು ಅನುವಾದಗೊಂಡವು. ಜಪಾನಿ ಭಾಷೆಯಲ್ಲಿ ಮೂರು ನಾಲ್ಕು ಕಥೆಗಳು ಭಾಷಾಂತರವಾಗಿ ಪ್ರಕಟಿಸಲ್ಪಟ್ಟವು, ಅದರ ಪ್ರತಿಫಲವಾಗಿ ನನಗೆ ೫೦ ರೂಪಾಯಿಗಳು ದೊರೆಕಿದವು. ನಾನು ಆಭಾರಿಯಾಗಿದ್ದೇನೆ. ಇಂಗ್ಲೀಷ ಭಾಷೆಯಲ್ಲಿಯೂ ೩-೪ ಕಥೆಗಳು ಅನುವಾದಿಸಲ್ಪಟ್ಟವು.

(೭) ನನ್ನಲ್ಲಿ ಯಾವ ಆಕಾಂಕ್ಷೆಗಳೂ ಇಲ್ಲ. ಈ ಸಮಯದಲ್ಲಿ ಮಾತ್ರ ನಾವೆಲ್ಲರೂ ಸ್ವರಾಜ್ಯ ಸಂಗ್ರಾಮದಲ್ಲಿ ವಿಜಯಿಗಳಾಗಬೇಕೆಂಬುದೇ ನನ್ನಲ್ಲಿರುವ ಆಕಾಂಕ್ಷೆ, ದುಡ್ಡು ಮತ್ತು ಯಶಸ್ಸಿನ ಆಶೆ ನನಗಿಲ್ಲ. ಹೊಟ್ಟೆಗಾಗಿ ಹಿಟ್ಟು ಸಿಗುತ್ತದೆ, ಸಾಕು. ಮೋಟರು, ಬಂಗಲೆಗಳ ಹವ್ಯಾಸವೂ ನನಗಿಲ್ಲ. ಆದರೆ ನಾನು ಉಚ್ಚ ತರಗತಿಯ ಕಾದಂಬರಿಗಳನ್ನು ಬರೆಯಬೇಕೆಂಬುದೇ ನನಗಿರುವ ಹಿರಿಯಾಸೆ. ಆ ಕಾದಂಬರಿಗಳ ಉದ್ದೇಶವೂ ಸ್ವರಾಜ್ಯ ಸಂಗ್ರಾಮದಲ್ಲಿಯ ವಿಜಯವೇ ಆಗಿರಬೇಕು. ನನ್ನ ಇಬ್ಬರೂ ಮಕ್ಕಳ ಬಗ್ಗೆ ನನಗೆ ಯಾವ ವಿಶೇಷ ವ್ಯಾಮೋಹವೂ ಇಲ್ಲ. ಅವರಿಬ್ಬರೂ ವಿಶ್ವಾಸಿಗಳೂ ಧೃಡ ಮನಸ್ಸಿನವರೂ ಆಗಬೇಕೆಂಬುದೇ ನನ್ನ ಇಚ್ಛೆ. ವಿಲಾಸಿಗಳಾದ ಧನಿಕರ ಮಕ್ಕಳನ್ನು ಕಂಡರೆ ನನಗಾಗುವುದಿಲ್ಲ. ಶಾಂತನಾಗಿ ಕೂಡುವದೂ ನನಗೆ ಸೇರುವದಿಲ್ಲ. ಸಾಹಿತ್ಯ ಮತ್ತು ಸ್ವದೇಶ ಇವುಗಳ ಸಲುವಾಗಿ ಏನನ್ನಾದರೂ ಮಾಡಲು ಪ್ರಯತ್ನಿಸುತ್ತಿರುತ್ತೇನೆ. ಹಾ, ರೊಟ್ಟಿ ಬ್ಯಾಳಿ ತುಪ್ಪ ಮತ್ತು ಸಾದಾ ತರದ ಅರಿವೆಗಳು ನನಗೆ ಸಾಕಾಗುತ್ತವೆ.

ಆಯಿತು, ತಮ್ಮ ಪ್ರಶ್ನೆಗಳಿಗೆ ಉತ್ತರಗಳನ್ನು ಬರೆದಂತಾಯಿತು. ನನ್ನ ಜನ್ಮ ಆದಿಗಳ ಬಗೆಗೆ ಈಗಾಗಲೇ ತಮ್ಮ ಪತ್ರಿಕೆಯಲ್ಲಿ ಪ್ರಕಟಿಸಲಾಗಿದೆ. ಇನ್ನು ನೀವು ನಿಮ್ಮ ವಚನವನ್ನು ಪಾಲಿಸಿರಿ. 'ಹಂಸ'ಕ್ಕೆ ಏನನ್ನಾದರೂ ಬರೆದು ಕಳಿಸಿಕೊಡಿರಿ. ಪಂಡಿತ ಸುಂದರಲಾಲಜಿಯವರಂತಹದೇ ಸ್ಕೆಚ್‌ನ್ನು ಕಳಿಸಿಕೊಡಿರಿ.

ಉಳಿದುದೆಲ್ಲವೂ ಕುಶಲ. ತಾವೂ ಆರೋಗ್ಯದಿಂದಿದ್ದೀರೆಂದು ಅಪೇಕ್ಷಿಸುತ್ತೇನೆ.

ಭಾವಾನುವಾದ :
**ವೆಂ. ಮು. ಜೋಶಿ**

ತಮ್ಮ ಮಿತ್ರ
**ಧನಪತರಾಯ**

# ಪ್ರೇಮಚಂದ-ಪ್ರಬಂಧ ಸಾಹಿತ್ಯ



೧ ಸಾಹಿತ್ಯದ ಉದ್ದೇಶ್ಯ

೨ ಕಥೆಯ ಕಲೆ

೩ ಕಾದಂಬರಿ

೪ ಜೀವನದಲ್ಲಿ ಸಾಹಿತ್ಯದ ಸ್ಥಾನ

೫ ರಾಷ್ಟ್ರಭಾಷೆ

# ಸಾಹಿತ್ಯದ ಉದ್ದೇಶ್ಯ *



## ೧. ಸಾಹಿತ್ಯದ ಪರಂಪರೆ

ಯಾವುದಾದರೊಂದು ಭಾಷೆಯು ಸುಸಂಸ್ಕೃತವಾದ ರೂಪವನ್ನು ಪಡೆಯಬೇಕಾದರೆ ಅದಕ್ಕೆ ಸಾವಿರಾರು ವರ್ಷಗಳ ಪರಂಪರೆ ಇರಬೇಕಾಗುವದು. ಆಗ ಅದರಲ್ಲಿ ಸರಿಯಾದ ಭಾವನೆಯನ್ನು ವ್ಯಕ್ತಮಾಡುವ ಶಕ್ತಿಯು ಬಂದೊದಗುತ್ತದೆ. ಭಾಷೆಯಲ್ಲಿ ಈ ರೀತಿಯಾದ ಶಕ್ತಿಯನ್ನು ತಂದೊದಗಿಸುವದು ಆಯಾ ದೇಶವಾಸಿಗಳ ಉಜ್ವಲ ಜೀವನವನ್ನವಲಂಬಿಸಿದೆ. ಭಾಷೆಯು ನಮ್ಮ ಭಾವನೆಗಳನ್ನು ವ್ಯಕ್ತಗೊಳಿಸುವ ಮುಖ್ಯ ಸಾಧನ. ಭಾಷೆಯು ಪರಿಶುದ್ಧವಾದ ರೂಪವನ್ನು ಪಡೆದ ಮೇಲೆ ಅದರಲ್ಲಿ ವಿಶಿಷ್ಟವಾದ ಕೆಲವು ಭಾವಗಳನ್ನು ವ್ಯಕ್ತಗೊಳಿಸುವ ಶಕ್ತಿಯು ಬರುವದು. ಮೊದಲು ವೇತಾಳದ ಕಥೆಯನ್ನು, ಕಾಡಡವಿಯ ವರ್ಣನೆಯನ್ನು ಮಾಡಿದ ಭಾಷೆಯು ಇಂದು ವಿವಿಧ ಶಾಸ್ತ್ರಗಳ ವಿವೇಚನೆಯಲ್ಲಿ ತೊಡಗಬೇಕಾಗಿದೆ. ಭಾಷೆಯಲ್ಲಿ ನಾವು ಎರಡು ವಿಭಾಗಗಳನ್ನು ಮಾಡಬಹುದು. ಒಂದು ವ್ಯಾವಹಾರಿಕ ಭಾಷೆ, ಇನ್ನೊಂದು ಲಲಿತಭಾಷೆ. ಮೊದಲನೆಯದು ತನ್ನ ಸಮೀಪದಲ್ಲಿರುವ ಜನರ ಮೇಲೆ ಮಾತ್ರ ಪರಿಣಾಮಕಾರಿಯಾಗುವಂತೆ ಹರ್ಷ-ಶೋಕಗಳ ಚಿತ್ರವನ್ನು ಚಿತ್ರಿಸಲು ಉಪಯುಕ್ತವಾದುದು. ಆದರೆ ಎರಡನೆಯದು ಸುತ್ತಲಿನ ಶ್ರೋತೃವರ್ಗದ ಮೇರೆಯನ್ನು ಮೀರಿ ಅತಿ ವಿಸ್ತೃತವಾದ ದಿಗ್ದಿಶೆಗಳನ್ನು ಮುಟ್ಟುವದು. ಇದಕ್ಕೆ ನಾವು ಸಾಹಿತ್ಯವೆಂದು ಕರೆಯುವೆವು. ಕವಿಕೃತಿಯ ಸತ್ಯತೆಯು ಶಾಶ್ವತವಾದದ್ದೇ ಆದರೆ, ಅದು ಎಷ್ಟೋ ಶತಮಾನಗಳ ಅವಧಿಯ ತನಕ ಓದುಗರ ಹೃದಯದ ಮೇಲೆ

* "ಪ್ರಗತಿಶೀಲ ಸಂಘ"ದ ಲಖನೌ ಅಧಿವೇಶನದಲ್ಲಿ ಅಧ್ಯಕ್ಷಸ್ಥಾನದಿಂದ ಆಜ್ಞೆ ಕೊಡಿಸಿದ ಭಾಷಣದ ಭಾವಾನುವಾದ.

ಪರಿಣಾಮಕಾರಿಯಾಗುವಂತೆ ಮಾಡುವದು. ಈ ರೀತಿಯಲ್ಲಿ ಬರೆದದ್ದೆ ನಿಜವಾದ ಸಾಹಿತ್ಯ; ಬರೆದದ್ದೆಲ್ಲ ಸಾಹಿತ್ಯವಾಗಲಾರದು. ಯಾವುದು ಒಂದು ವಿಶಿಷ್ಟವಾದ ಹೊಸ ಸತ್ಯತೆಯನ್ನು ಕಾಣಲು ಹೊರಟಿದೆಯೊ, ಯಾವುದು ಪ್ರೌಢ ಮತ್ತು ಸುಂದರ ಭಾಷೆಯಿಂದ ಯುಕ್ತವಾಗಿ ಬುದ್ಧಿ ಮತ್ತು ಮನಸ್ಸುಗಳ ಮೇಲೆ ಪರಿಣಾಮವನ್ನು ಮಾಡಲು ಹೊರಟಿದೆಯೊ, ಅದೇ ಶಾಶ್ವತವಾದ ಸಾಹಿತ್ಯವೆಂದು ಪರಿಗಣಿಸಲ್ಪಡುವದು.

ಜೀವನದಲ್ಲಿಯ ವಾಸ್ತವ ಘಟನೆಗಳನ್ನೂ ಮತ್ತು ನೈಜ ಅನುಭವಗಳನ್ನೂ ಪರಿಪೂರ್ಣವಾಗಿ ವ್ಯಕ್ತಪಡಿಸಲು ಸಮರ್ಥವಾದುದು ಮಾತ್ರ ಸಾಹಿತ್ಯವೆನ್ನಿಸಿಕೊಳ್ಳುವದು. ಹಿಂದೊಂದು ಕಾಲಕ್ಕೆ ನಾವು ಜಾದು ಮತ್ತು ಭೂತಪ್ರೇತಗಳ ಕಥೆಗಳಿಂದ, ಪ್ರೇಮ, ವಿಯೋಗಗಳ ಆಖ್ಯಾಯಿಕೆಗಳಿಂದ ಪ್ರಭಾವಿತರಾಗಿದ್ದಿರಬಹುದು. ಆದರೆ ಇಂದು ನಾವು ಅವುಗಳಿಂದ ಪ್ರೇರಣೆಯನ್ನು ಹೊಂದಲಾರೆವು. ಮಾನವ ಸ್ವಭಾವದ ಮರ್ಮಜ್ಞನಾದ ಶ್ರೇಷ್ಠ ಸಾಹಿತಿಯು ರಾಜಕುಮಾರರ ಪ್ರೇಮದ ಕಥೆಗಳಲ್ಲಿಯೂ ಜಾದುವಿನ ಕಥೆಗಳಲ್ಲಿಯೂ ಜೀವನದ ವಾಸ್ತವಾನುಭವಗಳನ್ನು ಎರಕ ಹೊಯ್ಯಬಲ್ಲನಷ್ಟೆ ಅಲ್ಲ, ಮನೋರಂಜಕವಾದ ಸೌಂದರ್ಯ ಸೃಷ್ಟಿಯನ್ನೂ ಕೂಡ ಮಾಡಬಲ್ಲನು. ಸಾಹಿತ್ಯವು ಜನರ ಹೃದಯದ ಮೇಲೆ ಪರಿಣಾಮಕಾರಿಯಾಗಬೇಕಾದರೆ ಅದು ಜೀವನದ ಸತ್ಯಾಂಶಗಳನ್ನು ತೋರಿಸುವ ದರ್ಪಣವಾಗಬೇಕು, ಎಂಬ ಅಂಶ ಹಿಂದಿನ ಮಾತಿನಿಂದಲೂ ಸಿದ್ಧವಾಗುವದು. ಕನ್ನಡಿಯನ್ನು ನೀವು ಬೇಕಾದ ಚೌಕಟ್ಟಿನಲ್ಲಿಯೂ ಸೇರಿಸಬಹುದು. ಗುಬ್ಬಿಗಳ ಸಂಸಾರವನ್ನು ಚಿತ್ರಿಸಿದರೂ ಸರಿಯೇ, ಕೋಗಿಲೆಗಳ ಇತಿವೃತ್ತವನ್ನು ಚಿತ್ರಿಸಿದರೂ ಸರಿಯೆ, ಎಲ್ಲವೂ ಜೀವನ–ದರ್ಶನಕ್ಕೆ ಉಪಯುಕ್ತವಾದ ಸಾಮಗ್ರಿಯೆ.

## ೨. ಸಾಹಿತ್ಯದ ಲಕ್ಷಣ

ಸಾಹಿತ್ಯದ ವ್ಯಾಖ್ಯೆಯನ್ನು ಬೇರೆ ಬೇರೆ ಜನರು ವಿಧವಿಧದಲ್ಲಿ ಮಾಡಿರುವದುಂಟು. ಆದರೆ ನಮ್ಮ ಅಭಿಪ್ರಾಯದಂತೆ ಅದನ್ನು ನಾವು

ಜೀವನದ ಸಮಾಲೋಚನೆಯೆಂದು ಕರೆಯುತ್ತೇವೆ. ಅದು ನಿಬಂಧ ರೂಪ ದಲ್ಲಿಯೆ ಇರಲಿ, ಕತೆಯ ರೂಪದಲ್ಲಿಯೆ ಇರಲಿ, ಅಥವಾ ಕಾವ್ಯ ರೂಪದಲ್ಲಿಯೆ ಇರಲಿ ನಮ್ಮ ಜೀವನದ ಸಮಾಲೋಚನೆಯನ್ನು ಮಾಡಿದರೆ ಮಾತ್ರ, ಸಾಹಿತ್ಯವೆಂಬ ಹೆಸರನ್ನು ಪಡೆಯಬಹುದು. ಹಿಂದಿನ ಯುಗದಲ್ಲಿ ಜೀವನಕ್ಕೂ ಸಾಹಿತ್ಯಕ್ಕೂ ಹೆಚ್ಚು ಸಂಬಂಧವಿರಲಿಲ್ಲ. ಹಿಂದಿನ ಸಾಹಿತಿಗಳು ತಮ್ಮ ಇಚ್ಛೆಗನುಸರಿಸಿ ಕಲ್ಪನಾ ಸೃಷ್ಟಿಯನ್ನು ಮಾಡಿ, ಓದುಗರ ಮೇಲೆ ಒಂದು ತರಹದ ಮುಗ್ಧ ಮಾಡಿಬಿಡುತ್ತಿದ್ದರು. ಹಿಂದಿನ ಪಶು ಪಕ್ಷಿಗಳ ವರ್ಣನೆ ಯಲ್ಲಿ ಕೇವಲ ಮನೋರಂಜನೆಯು ಮಾತ್ರ ಉದ್ದಿಷ್ಟವಿದ್ದಿತು. ಅದರಿಂದ ರಸ ಪ್ರೇರಣೆಯಾಗಿ ತೃಪ್ತಿಯೇನೊ ಆಗುತ್ತಿದ್ದಿತಾದರೂ ಸಾಹಿತ್ಯಕ್ಕೂ ಜನ ಜೀವನಕ್ಕೂ ಇಂದಿನಷ್ಟು ನಿಕಟವಾದ ಸಂಬಂಧ ಕಲ್ಪಿತವಿದ್ದಿಲ್ಲ. ಕಲ್ಪಿತ ವಾದ ಕಥೆಗಳಿಗೂ ವಾಸ್ತವ ಜೀವನದ ಘಟನೆಗಳಿಗೂ ಬಹಳವಾದ ಅಂತರ ಕಂಡುಬರುತ್ತಿತ್ತು. ಕಾಮ ವಾಸನೆಗಳಿಗೆ ತೃಪ್ತಿಕೊಡುವದೆ ಪ್ರೇಮದ ಆದರ್ಶ, ಕಣ್ಣುಗಳಿಗೆ ತೃಪ್ತಿಯನ್ನು ಉಂಟುಮಾಡುವದೆ ಸೌಂದರ್ಯದ ಆದರ್ಶ ಎಂಬುದು ಆಗಿನ ವಾದ. ಶೃಂಗಾರ ಭಾವನೆಗಳನ್ನು ವ್ಯಕ್ತಮಾಡು ವದರ ಸಲುವಾಗಿಯೆ ನಮ್ಮ ಹಿಂದಿನ ಕವಿಪುಂಗವರು ತಮ್ಮ ಪ್ರತಿಭೆ ಮತ್ತು ಕಲ್ಪನೆಗಳ ಚಮತ್ಕಾರವನ್ನು ತೋರಿಸುತ್ತಿದ್ದರು. ಪದ್ಯದಲ್ಲಿ ಒಂದು ತರಹದ ಪದ ಬಂಧವನ್ನು ರಚಿಸಿದರೆ ತಾವು ಕೃತಾರ್ಥರೆಂದು ಅವರ ತಿಳುವಳಿಕೆ. ವಸ್ತುಸ್ಥಿತಿಯಿಂದ ವರ್ಣನೆಯು ದೂರವಾದರೂ ಚಿಂತೆ ಇಲ್ಲ. ವರ್ಣನೆಯು ಮಾತ್ರ ಚರಮ ಸೀಮೆಯನ್ನು ಮುಟ್ಟಬೇಕೆಂಬುದೆ ಅವರ ಅಭಿಪ್ರಾಯ. ವಿರಹಾವಸ್ಥೆಯನ್ನು ವರ್ಣಿಸಲು ಉದ್ಯುಕ್ತರಾದ ಕವಿಗಳು ನಿರಾಶೆ ಮತ್ತು ವೇದನೆಗಳ ವಿವಿಧ ದರೆಗಳನ್ನು ವರ್ಣಿಸುವದರಲ್ಲಿ ತಮ್ಮ ಕಲ್ಪನಾ ಚಾತುರ್ಯದಿಂದ ಓದುಗರನ್ನು ಮುಗ್ಧಗೊಳಿಸಿದ್ದಾರೆ. ಈ ತೆರನಾದ ಕಾವ್ಯಗಳು ಎಷ್ಟು ಲೋಕಪ್ರಿಯ ಎಂಬುದು ಎಲ್ಲರಿಗೂ ತಿಳಿದ ಮಾತಾಗಿದೆ.

ನಮ್ಮ ಅನುಭವಗಳನ್ನು ಒರೆಗಲ್ಲಿಗೆ ಹಚ್ಚಿ ಅವುಗಳಿಗೆ ತಕ್ಕ ಪ್ರಚೋದನೆ ಕೊಡುವುದೆ ಕಾವ್ಯ ಮತ್ತು ಸಾಹಿತ್ಯಗಳ ಮುಖ್ಯ ಕೆಲಸ ವೆಂದು ನಾವು ನಿಃಸಂಶಯವಾಗಿ ಹೇಳಬಹುದು. ಆದರೆ ಮನುಷ್ಯನ ಜೀವನ

ಸ್ತ್ರೀ ಪುರುಷರ ಪ್ರೇಮದಲ್ಲಿ ಮಾತ್ರ ಪರ್ಯವಸಿತವಾಗಿಲ್ಲ. ಯಾವ ಸಾಹಿತ್ಯವು ನಮ್ಮ ಶೃಂಗಾರ ಮನೋಭಾವಗಳನ್ನು ಕೆರಳಿಸಿ ಅವುಗಳಿಂದ ಹುಟ್ಟುವ ವಿರಹವ್ಯಥೆಯನ್ನಾಗಲಿ, ನಿರಾಶೆಯನ್ನಾಗಲಿ ವರ್ಣಿಸುವದರಲ್ಲಿ ಮಾತ್ರ ಪರ್ಯವಸಾನವನ್ನು ಹೊಂದುವದೊ, ಯಾವ ಸಾಹಿತ್ಯವು ಪ್ರಾಪಂಚಿಕ ಜೀವನದಿಂದ ಮತ್ತು ಅದರ ಕಠಿಣತೆಗಳಿಂದ ದೂರುಳಿಯಲು ಉಪದೇಶಿಸುತ್ತದೆಯೊ ಆ ಸಾಹಿತ್ಯವು ನಮ್ಮ ವಿಚಾರ ಮತ್ತು ಭಾವನೆಗಳಿಗೆ ಪೂರಕವಾದ ಆವಶ್ಯಕತೆಗಳನ್ನು ಎಂದಾದರೂ ಪೂರ್ಣ ಮಾಡಲು ಸಾಧ್ಯವೆ? ಶೃಂಗಾರ ಮನೋಭಾವವು ಮಾನವ ಜೀವನದ ಒಂದು ಅಂಗಮಾತ್ರ ಈ ಶೃಂಗಾರ ರಸವೇ ಯಾವ ಸಾಹಿತ್ಯದಲ್ಲಿ ಪ್ರಧಾನವಾಗಿ ಉಪಲಬ್ಧವಿದೆಯೊ ಆ ಸಾಹಿತ್ಯವು ಆ ಯುಗದ ಜನರ ಮನೋವೃತ್ತಿಯನ್ನು ತೋರ್ಪಡಿಸುವ ದರಲ್ಲಿ ಯಾವ ಸಂಶಯವೂ ಇಲ್ಲ. ಹೀಗಿದ್ದರೂ ಕೂಡ ಅದು ಹಿಂದಿನ ಯುಗಕ್ಕೆ, ಜನಾಂಗಕ್ಕೆ ಅಭಿನವಾನಪಡುವ ವಸ್ತುವಾಗಲಾರದು ಮತ್ತು ಅವರ ಸುರುಚಿಯ ಪ್ರಮಾಣವಾಗಲಾರದು.

## ೩. ಹಿಂದಿನ ಸಾಹಿತ್ಯದ ರೀತಿ

ಯಾವ ಭಾಷೆಯಲ್ಲಿಯೇ ಕಾವ್ಯ ಬರೆದರೂ ಆಗಿನ ಜನರ ಅಭಿರುಚಿ ಆಯಾ ಕಾವ್ಯಗಳಲ್ಲಿ ಒಡಮೂಡಿಯೆ ತೀರಿದೆ. ಯಾವನಾದರೊಬ್ಬನನ್ನು ವರ್ಣಿಸುವದು, ಇಲ್ಲದ ಗುಣಗಳನ್ನು ಅವನಲ್ಲಿ ಆರೋಪಿಸುವದು ಮಾನವನ ಸಹಜವಾದ ಗುಣವಾಗಿರುತ್ತದೆ. ಹಿಂದಿನ ಕವಿಗಳು ಕಾವ್ಯರಚನೆಯನ್ನೆ ತಮ್ಮ ಉಪಜೀವನದ ವೃತ್ತಿಯನ್ನಾಗಿ ಮಾಡಿಕೊಂಡಿದ್ದರು. ನಾಡಿನ ಸಿರಿ-ವಂತರು ಮತ್ತು ಜಮೀನುದಾರರು ಮಾತ್ರ ಈ ಕಾವ್ಯ ರಚನೆಗೆ ಮರ್ಯಾದೆ ಯನು ಕೊಡುತ್ತಿದ್ದರು. ಆಗಿನ ನಮ್ಮ ಕವಿಗಳಿಗೆ ಸಾಧಾರಣ ಜೀವನವನ್ನು ಎದುರಿಸಲು ಮತ್ತು ಜೀವನದ ಸತ್ಯತೆಯಿಂದ ಪ್ರಭಾವಿತರಾಗಲು ಅವಕಾಶವೇ ಇರಲಿಲ್ಲ. ಯಾಕೆಂದರೆ ದೊಡ್ಡವರೇ ಆಗಲಿ, ಚಿಕ್ಕವರೇ ಆಗಲಿ ಪ್ರತಿಯೊಬ್ಬರ ಮನಸ್ಸಿನ ಮೇಲೆ ಅತಿ ನಿರಾಶೆಯ ಭಾವವು ಆವರಿಸಿಕೊಂಡು ಆಗಿನ ಜನರಿಗೆ ಮಾನಸಿಕ ಮತ್ತು ಬೌದ್ಧಿಕ ಜೀವನವನ್ನು ಸಾಗಿಸುವ ಅವಸರವೇ ಇರುತ್ತಿರ-ಲಿಲ್ಲ.

ಸಮಾಜದಲ್ಲಿಯ ಈ ತೆರನಾದ ನ್ಯೂನತೆಗೆ ಕೇವಲ ಸಾಹಿತಿಗಳು ಮಾತ್ರ ಹೊಣೆಗಾರರಲ್ಲ. ಸಾಹಿತ್ಯವು ಆಯಾ ಕಾಲದ ಪ್ರತಿಬಿಂಬವಾಗಿದೆ. ಯಾವ ಭಾವನೆಗಳು ಜನರ ಹೃದಯನ್ನು ಕಲಕುತ್ತಿವೆಯೋ ಅವೇ ಭಾವನೆ-ಗಳ ಛಾಯೆ ಸಾಹಿತ್ಯದ ಮೇಲೂ ಬೀಳುವದು ಸ್ವಾಭಾವಿಕ. ಮನುಷ್ಯನು ಮನಸ್ಸು ದುರ್ಬಲತೆಗೆ ಒಳಗಾದಾಗ ಭೋಗವಿಲಾಸದಲ್ಲಿಯಾಗಲಿ, ಆಧ್ಯಾತ್ಮ ಮತ್ತು ವೈರಾಗ್ಯಗಳಲ್ಲಿಯಾಗಲಿ ತನ್ನ ಮನಸ್ಸನ್ನು ತೊಡಗಿಸುತ್ತಾನೆ ಇದರ ಪ್ರತಿಫಲವಾಗಿಯೆ ಆಗಿನ ಸಾಹಿತ್ಯದ ಶಬ್ದ ಶಬ್ದಗಳಲ್ಲಿ ಪ್ರಪಂಚದ ನಶ್ವರತೆಯ ಭಾವನೆಯು ತುಂಬಿಕೊಂಡಿತು ಮತ್ತು ನಿರಾಶೆಯ ಪ್ರತಿಚ್ಛಾಯೆ ಎಲ್ಲೆಡೆಯಲ್ಲಿ ಆವರಿಸಿತು. ಸಾಹಿತ್ಯವು ಕೇವಲ ಕರುಣೆ ಮತ್ತು ಶೃಂಗಾರ ರಸಗಳ ಪಡಿನೆಳಲು ಆಗಿರುವ ತನಕ ನಮ್ಮ ಜನಾಂಗವು ಅಜ್ಞಾನ ಮತ್ತು ಅವನತಿಗಳ ಜಾಲದಿಂದ ಮುಕ್ತವಾಗಲು ಶಕ್ಯವಾಗದು, ಉದ್ಯೋಗ ಮತ್ತು ಸಂಘರ್ಷಗಳಿಗೆ ಪ್ರಚೋದಕವಾದ ಶಕ್ತಿಯು ಸಾಹಿತ್ಯದಲ್ಲಿ ಲುಪ್ತವಾದಂತಾಗಿದೆ ಉದಾತ್ತವಾದ ನಮ್ಮ ಧ್ಯೇಯ ಧೋರಣೆಗಳು ನಮ್ಮ ಕಣ್ಮರೆಯಾಗಿವೆ. ಸಂಸಾರದ ಅವಾಂತರ ಸೂಕ್ಷ್ಮತೆಗಳನ್ನು ನಿರೀಕ್ಷಿಸುವ ನಮ್ಮ ಶಕ್ತಿಯು ಹ್ರಾಸವಾಗಹತ್ತಿದೆ ಎಂದು ತಿಳಿಯಬೇಕು. ಆದರೆ ಈಗ ಸಾಹಿತ್ಯದ ಅಭಿರುಚಿಯು ದಿನದಿನಕ್ಕೆ ಬಹಳ ವೇಗದಿಂದ ಬದಲಾವಣೆಯನ್ನು ಹೊಂದಹತ್ತಿದೆ. ಸಾಹಿತ್ಯದ ಉದ್ದೇಶ್ಯ ಈಗ ಕೇವಲ ಮನೋರಂಜನೆ ಮಾತ್ರ ಆಗಿ ಉಳಿದಿಲ್ಲ. ಮನೋರಂಜನೆಯ ಹೊರತಾಗಿ ಇನ್ನೂ ಅನೇಕ ಉದ್ದೇಶ್ಯಗಳು ಸಾಹಿತ್ಯಕ್ಕಾಗಿ ಏರ್ಪಟ್ಟಿವೆ. ಸಾಹಿತ್ಯವು ಈಗ ಕೇವಲ ನಾಯಕ-ನಾಯಿಕೆಯರ ಮಿಲನ ಮತ್ತು ವಿಯೋಗವನ್ನಷ್ಟೆ ವರ್ಣಿಸದೆ ಜೀವನದ ನಾನಾ ತೆರನಾದ ಸಮಸ್ಯೆಗಳನ್ನು ಬಿಡಿಸಲು ಹೊರಟಿದೆ. ಅದ್ಭುತ ಮತ್ತು ಆಶ್ಚರ್ಯ-ಜನಕವಾದ ಘಟನೆಗಳ ವರ್ಣನೆಯಿಂದ, ಅನುಪ್ರಾಸ, ಶ್ಲೇಷ ಮೊದಲಾದ ಪದಬಂಧಗಳಿಂದ ಇಂದು ಜನರು ಪ್ರೇರಣೆ ಮತ್ತು ಸ್ಫೂರ್ತಿಗಳನ್ನು ಪಡೆಯಲಾರರು. ಸಾಮೂಹಿಕ ಅಥವಾ ವ್ಯಕ್ತಿಗತ ಸಮಸ್ಯೆಗಳನ್ನು ಬಿಡಿಸುವದರಿಂದ ಮಾತ್ರ ಜನರು ಇಂದು ಪ್ರಭಾವಿತರಾಗುತ್ತಾರೆ. ಸಮಸ್ಯೆಯನ್ನು ಬಿಡಿಸಲು ಹೊರಟ ಭಾವನೆಗಳು ಮತ್ತು ವಿಚಾರಗಳು ಎಷ್ಟು ಎಷ್ಟು ಅನುಭವದ ಒರೆಗಲ್ಲಿಗೆ ಹತ್ತಿ ಪರಿಶುದ್ಧವೆಂದು ಪರಿಗಣಿಸಲ್ಪಡುವವೊ ನಮ್ಮ ಜೀವನದ ಋಜುವಾತಿಗೆ

ಸರಿಹೋಗುವವೋ ಅಷ್ಟು ಅಷ್ಟು ಅವು ಉತ್ತಮ ತರಗತಿಯವು ಎಂದು ಪರಿಗಣಿಸಲ್ಪಡುವವು.

## ೪. ಸಾಹಿತ್ಯದ ಗುರಿ

ನೀತಿಶಾಸ್ತ್ರ ಮತ್ತು ಸಾಹಿತ್ಯ ಶಾಸ್ತ್ರಗಳ ಉದ್ದೇಶ್ಯ ಒಂದೇ ತೆರನಾಗಿ ಇರುವದು. ಆದರೆ ಉಪದೇಶದ ರೀತಿ ಮಾತ್ರ ಬೇರೆ. ನೀತಿಶಾಸ್ತ್ರವು ತರ್ಕ ಮತ್ತು ಉಪದೇಶಗಳ ಮುಖಾಂತರ ಬುದ್ಧಿ ಮತ್ತು ಮನಸ್ಸುಗಳ ಮೇಲೆ ಪರಿಣಾಮವಾಗುವಂತೆ ಮಾಡಿದರೆ, ಸಾಹಿತ್ಯವು ಮಾನಸಿಕ ಅವಸ್ಥೆ-ಗಳ ಮತ್ತು ಭಾವನೆಗಳ ಮುಖಾಂತರ ಹೃದಯದ ಮೇಲೆ ಪರಿಣಾಮವನ್ನು ಮಾಡುತ್ತದೆ. ನಾವು ನಮ್ಮ ಜೀವನದಲ್ಲಿ ಪಡೆದ ಅನುಭವ ಮತ್ತು ಅನುಭವದ ಒರೆಗಲ್ಲಿಗೆ ಹಚ್ಚಿ ಪರಿಶುದ್ಧಿಗೊಂಡ ಮನೋಭಾವಗಳೇ ಕಲ್ಪನೆಯ ಹಂತದ ವರೆಗೆ ಮುಟ್ಟಿದಾಗ ಸಾಹಿತ್ಯ ಸೃಷ್ಟಿಗೆ ಪ್ರೇರಕ ಶಕ್ತಿಗಳಾಗುವವು. ಸಾಹಿತ್ಯ ನಿರ್ಮಾತೃವಾದ ಕವಿಯ ಕಲ್ಪನಾಶಕ್ತಿಯು ತೀವ್ರವಾದಷ್ಟು ಕಾವ್ಯವು ಆಕರ್ಷಕವಾಗಿಯೂ ಉಚ್ಚಮಟ್ಟದ್ದಾಗಿಯೂ ನಿರ್ಮಿತವಾಗುವದು. ಯಾವ ಸಾಹಿತ್ಯದಿಂದ ನಮ್ಮ ಉತ್ತಮ ಅಭಿರುಚಿಗೆ ಪೋಷಣೆ ಸಿಕ್ಕುವದಿಲ್ಲವೋ, ಆಧ್ಯಾತ್ಮಿಕ ಮತ್ತು ಮಾನಸಿಕ ತೃಪ್ತಿಗೆ ಕೊಂಚವೂ ಅವ-ಕಾಶ ಕಲ್ಪಿತವಾಗುವದಿಲ್ಲವೋ, ನಮ್ಮ ಸೌಂದರ್ಯ ಪ್ರೇಮವು ಜಾಗ್ರತವಾಗಲಾರದೋ, ನಮ್ಮ ಜೀವನದಲ್ಲಿ ಕಟುತರ ಅನುಭವಗಳನ್ನು ಎದುರಿಸುವ ದೃಢತೆಯು ಯಾವುದರಿಂದ ಉತ್ಪನ್ನವಾಗಲಾರದೊ ಅಂಥ ಸಾಹಿತ್ಯವು ಇಂದಿನ ಜಗತ್ತಿನಲ್ಲಿ ನಿರರ್ಥಕವಷ್ಟೆ ಅಲ್ಲದೆ ಸಾಹಿತ್ಯವೆಂಬ ಹೆಸರಿಗೆ ಕೂಡ ತಕ್ಕುದಾಗಲಾರದು.

ಹಿಂದಿನ ಕಾಲದಲ್ಲಿ ಸಮಾಜದ ಮುಗದಾಣ ಧರ್ಮದ ಕೈಯಲ್ಲಿ ಇದ್ದಿತು. ಮನುಷ್ಯನಿಗೆ ಧರ್ಮದ ಆದೇಶಗಳೇ ಆಧ್ಯಾತ್ಮಿಕ ಮತ್ತು ನೈತಿಕ ಸಭ್ಯತೆಗಳ ಆಧಾರವಾಗಿದ್ದವು. ಧರ್ಮವು ಭಯವನ್ನಾಗಲಿ ಆಶೆಯನ್ನಾಗಲಿ ತೋರಿಸಿ ತನ್ನ ಕೆಲಸ ಸಾಧಿಸಿಕೊಳ್ಳುತ್ತಿತ್ತು. ಪಾಪ ಪುಣ್ಯಗಳೇ ಇದಕ್ಕೆ ಮುಖ್ಯ ಸಾಧನಗಳಾಗಿದ್ದವು. ಈಗ ಈ ಎಲ್ಲ ಕಾರ್ಯವನ್ನು ಸಾಹಿತ್ಯವು ತನ್ನ

ಕೈಯಲ್ಲಿ ತೆಗೆದುಕೊಂಡಿದೆ. ಈ ಕಾರ್ಯದಲ್ಲಿ ಮುಖ್ಯ ಸಾಧನವೆಂದರೆ ಸೌಂದರ್ಯ ಪ್ರೇಮ. ಮನುಷ್ಯನಲ್ಲಿಯ ಸೌಂದರ್ಯ ಪ್ರೇಮವನ್ನು ಜಾಗ್ರತ-ಗೊಳಿಸುವದೇ ಸಾಹಿತ್ಯದ ಕಾರ್ಯವು. ಪ್ರತಿಯೊಬ್ಬ ಮನುಷ್ಯನಲ್ಲಿ ಸೌಂದರ್ಯದ ಮೂಲಭೂತ ಅನುಭಾವಕ ಶಕ್ತಿಯು ಇದ್ದೇ ಇರುವದು. ಈ ಅನುಭಾವಕ ಶಕ್ತಿಯನ್ನು ಜಾಗ್ರತಗೊಳಿಸಿದಷ್ಟು ಸಾಹಿತ್ಯವು ತನ್ನ ಕಾರ್ಯ-ದಲ್ಲಿ ಸಫಲತೆ ಪಡೆಯುವದು. ತೀಕ್ಷ್ಣಾನ್ವೇಷಕ ದೃಷ್ಟಿಯಿಂದ ಪ್ರಕೃತಿ ನಿರೀಕ್ಷಣ ಅಥವಾ ಅನುಭವಗಳ ಮುಖಾಂತರ ಸೌಂದರ್ಯದ ಪರಿಜ್ಞಾನವು ಉಗ್ರರೂಪವನ್ನು ಧರಿಸುತ್ತದೆ. ಕವಿಯು ಅಭದ್ರವಾದದ್ದನ್ನೇ ಆಗಲಿ ಅಸುಂದರವಾದದ್ದನ್ನೇ ಆಗಲಿ ಮನುಷ್ಯತ್ವ ರಹಿತವಾದದ್ದನ್ನೇ ಆಗಲೀ ನೋಡಿದರೆ ಅದು ಸಹ್ಯವಾಗದೆ ಅದರ ಮೇಲೆ ತನ್ನ ಶಬ್ದ ಮತ್ತು ಭಾವಗಳ ಸಂಪೂರ್ಣ ಶಕ್ತಿಯಿಂದ ಬಲವಾದ ಏಟನ್ನು ಹಾಕಿಬಿಡುವನು. ಮನುಷ್ಯತ್ವ ಕೆರಳಿದಾಗ, ದಲಿತ ಮತ್ತು ಪೀಡಿತ ವ್ಯಕ್ತಿಗೋಸ್ಕರ ಅಥವಾ ಸಮಾಜ-ಕ್ಕೋಸ್ಕರ ತರ್ಕಬದ್ಧವಾದ ವಾದವನ್ನು ಹೂಡುವದು ಅವನ ಕರ್ತವ್ಯ-ವಾಗುತ್ತದೆ. ಈ ವಾದವನ್ನು ನಿರ್ಣಯಿಸುವ ಶಕ್ತಿ ಸಮಾಜದ್ದು. ಸಾಹಿತಿಯು ವಾದವನ್ನು ಸಮರ್ಥಿಸುವವನು ಮಾತ್ರ. ಅವನು ಕೂಲಂಕಷ ವಾಗಿ ಎಲ್ಲ ವಿಷಯಗಳನ್ನು ಸಮಾಜ-ನ್ಯಾಯಾಲಯದ ಎದುರು ಇಟ್ಟು ಸಮಾಜದ ನ್ಯಾಯ ವೃತ್ತಿಯನ್ನು ಮತ್ತು ಸೌಂದರ್ಯಾನುಭಾವಕ ಶಕ್ತಿಯನ್ನು ಜಾಗ್ರತಗೊಳಿಸುತ್ತಾನೆ.

## ೫. ಸಾಹಿತಿಯ ಲಕ್ಷಣ

ಸಾಹಿತಿಯು ಸಾಧಾರಣ ವಕೀಲರಂತೆ ತನ್ನ ಪಕ್ಷಗಾರನ ಉಚಿತ ಮತ್ತು ಅನುಚಿತ ಎಲ್ಲ ದಾವೆಗಳನ್ನು ಕೋರ್ಟಿನ ಎದುರು ತಂದಿಡುವದಿಲ್ಲ ಮತ್ತು ತನ್ನ ಮಾತನ್ನು ಅತಿಯಾಗಿ ವರ್ಣಿಸುವದೂ ಇಲ್ಲ. ತನ್ನ ಮನಸ್ಸೆ ಒಪ್ಪದಿರುವ ಮಾತು ಸಮಾಜವೆಂಬ ಕೋರ್ಟಿನ ಎದುರು ಪರಿಣಾಮ ಮಾಡ ಲಾರದೆಂಬುದನ್ನು ಸಾಹಿತಿಯು ಚನ್ನಾಗಿ ತಿಳಿದಿದ್ದಾನೆ. ಅವನು ಸತ್ಯದಿಂದ ಒಂದಷ್ಟಾದರೂ ದೂರ ಉಳಿದರೆ ಕೋರ್ಟಿನ ಹೃದಯಪರಿವರ್ತನೆಯನ್ನು ಎಂದೂ ಮಾಡಲಾರ. ಇಷ್ಟೇ ಅಲ್ಲದೆ ಕೋರ್ಟು ಸಾಹಿತಿಯ ಬಗ್ಗೆ ದುರಭಿ-

ಪ್ರಾಯವನ್ನು ಗ್ರಹಿಸಿ ವಿರುದ್ಧವಾದ ನ್ಯಾಯನಿರ್ಣಯವನ್ನು ಕೊಡಬಹುದು. ಸಾಹಿತಿಯು ಒಂದು ಕತೆ ಬರೆದರೆ, ಅದರಲ್ಲಿ ಒಂದು ವಾಸ್ತವಿಕತೆಯ ಕಲ್ಪನೆಯನ್ನು ಇಟ್ಟುಕೊಂಡಿರುವನು ಒಂದು ಮೂರ್ತಿಯನ್ನು ನಿರ್ಮಿಸಿದರೆ ಅದರಲ್ಲಿ ಜೀವಕಳೆ ತುಂಬುವನು. ಸಾಹಿತ್ಯಕಾರನು ಸೂಕ್ಷ್ಮದೃಷ್ಟಿಯಿಂದ ಮನುಷ್ಯ ಪ್ರಕೃತಿಯ ಅವಲೋಕನ ಮಾಡುವನು. ಮನೋವಿಜ್ಞಾನದ ಅಭ್ಯಾಸ ಮಾಡುವನು. ತನ್ನಿಂದ ರಚಿತನಾದ ಪ್ರತಿಯೊಂದು ಪಾತ್ರವು ಎಲ್ಲ ಸ್ಥಿತಿಗಳಲ್ಲಿ ಎಲ್ಲ ಸಮಯಗಳಲ್ಲಿ ರಕ್ತ ಮಾಂಸಗಳಿಂದ ಯುಕ್ತನಾದ ಸಜೀವ ವ್ಯಕ್ತಿಯಂತೆ ಗತಿಶೀಲನಾಗಲು ಅವನು ಯಾವಾಗಲೂ ಪ್ರಯತ್ನಿಸುವನು. ಇಂಥ ಸಾಹಿತಿಯು ಸಾಧಾರಣ ಮನುಷ್ಯನು ತನ್ನ ಮನುಷ್ಯತ್ವದ ಕಾರಣ ದಿಂದಾಗಿ ನಿಲುಕಲಾರದ ಅನುಭಾವಕ ಶಕ್ತಿ ಮತ್ತು ಸೌಂದರ್ಯ ಪ್ರೇಮಗಳ ಸೂಕ್ಷ್ಮಸ್ಥಾನಗಳ ಹಂತವನ್ನು ಮುಟ್ಟಿ ಅನುಭವಪಡೆಯುತ್ತಾನೆ.

ಇತ್ತೀಚಿನ ಸಾಹಿತ್ಯದಲ್ಲಿ ವಸ್ತುಸ್ಥಿತಿ ಚಿತ್ರಣವು ಅತಿಯಾಗಿ ಬೆಳೆದು ಬಿಟ್ಟಿದೆ. ಇಂದಿನ ಕಥೆಯ ಘಟನೆಗಳ ಕಲ್ಪನೆಗಳು ನಮ್ಮ ಅನುಭವದ ಮೇರೆಯನ್ನು ಮೀರುವದೆ ಇಲ್ಲ. ಮನೋವೈಜ್ಞಾನಿಕ ದೃಷ್ಟಿಯಿಂದ ವಿಚಾರ ಮಾಡಿದಲ್ಲಿ ಸಾಹಿತಿಯಿಂದ ಕಲ್ಪಿತವಾದ ಪಾತ್ರಗಳು ಕೇವಲ ಮನುಷ್ಯನ ಸಾಮ್ಯವನ್ನು ಹೋಲುವ ಮಾತ್ರದಿಂದ ನಮಗೆ ತೃಪ್ತಿಯಾಗಲಾರದು. ನಮ್ಮ ಮನಸ್ಸಿಗೆ ಋಜುವಾತಾಗುವಂತೆ ಮನುಷ್ಯನ ಸಾಮ್ಯವನ್ನು ನಾವು ಅಪೇಕ್ಷಿಸುತ್ತೇವೆ. ಲೇಖಕನು ಶಕ್ಯವಿದ್ದಮಟ್ಟಿಗೆ ಅವರ ಜೀವನ ಚರಿತ್ರವನ್ನು ಬರೆದರೂ ಕಲ್ಪನೆಯ ಮೂಲಾಧಾರದ ಮೇಲೆ ಕಲ್ಪಿತವಾದ ಪಾತ್ರ-ಗಳು ನಮ್ಮ ವಿಶ್ವಾಸಕ್ಕೆ ಪಾತ್ರವಾಗಲಾರವು ಮತ್ತು ಅವುಗಳ ಕಾರ್ಯಾನ್ವಿತ ವಿಚಾರಗಳಿಂದ ನಾವು ಪ್ರಭಾವಿತರೂ ಆಗಲಾರೆವು. ಲೇಖಕನು ತಾನು ತನ್ನ ಪ್ರತ್ಯಕ್ಷ ಅನುಭವದಿಂದ ಪಾತ್ರಗಳನ್ನು ರಚಿಸುತ್ತಾನೆಂದು ವಿಶ್ವಾಸ ವಾದ ಮೇಲೆ ಮಾತ್ರ, ಪಾತ್ರಗಳ ಮುಖಾಂತರ ಅವನು ತಾನೆ ಸ್ವತಃ ಮಾತಾಡುತ್ತಾನೆ ಎಂದು ತಿಳಿದ ಮೇಲೆ ಮಾತ್ರ ನಾವು ಅದನ್ನು ನಂಬುವೆವು. ಆದುದರಿಂದಲೆ ಕೆಲವು ಜನ ಸಮಾಲೋಚಕರು ಸಾಹಿತ್ಯವು ಲೇಖಕನ ಮನೋವೈಜ್ಞಾನಿಕ ಜೀವನ ಚರಿತ್ರವೆಂದು ಹೇಳಿದ್ದುಂಟು.

ಒಂದೇ ತೆರನಾದ ಘಟನೆಯಿಂದ ಎಲ್ಲರೂ ಸಮಾನ ರೂಪದಲ್ಲಿ ಪ್ರಭಾವಿತರಾಗುವರು ಎಂದು ಹೇಳಲು ಶಕ್ಯವಲ್ಲ. ಯಾಕಂದರೆ ಪ್ರತಿಯೊಬ್ಬ ಮನುಷ್ಯನ ಮನೋವೃತ್ತಿ ಮತ್ತು ದೃಷ್ಟಿಕೋಣಗಳು ಬೇರೆ ಬೇರೆಯಾಗಿರುವವು. ಲೇಖಕನು ಯಾವ ಮನೋವೃತ್ತಿಯವನೇ ಆಗಲಿ ಯಾವ ದೃಷ್ಟಿಕೋಣದವನೇ ಆಗಲಿ ತನಗೆ ಪ್ರತ್ಯಕ್ಷ ಅನುಭವಕ್ಕೆ ಬಂದದ್ದನ್ನೆಲ್ಲ ಪಾಠಕರಿಗೆ ಸಮ್ಮತವಾಗುವಂತೆ ರಚಿಸುವದೆ ಅವನಲ್ಲಿಯ ರಚನಾ ಕೌಶಲ್ಯ. ಇದುವೆ ಲೇಖನ ಸಫಲತೆಯು. ಒಡನೆಯೆ ಅವನು ತನ್ನ ಸರ್ವತೋ-ಮುಖವಾದ ಜ್ಞಾನದಿಂದ ತನ್ನ ವಿಚಾರಗಳ ವೈಶಾಲ್ಯದಿಂದ ನಮ್ಮ ವಿಚಾರಗಳಿಗೆ ಪ್ರಚೋದನೆ ಕೊಡುವಂತೆಯೂ ನಮ್ಮ ದೃಷ್ಟಿಯನ್ನು ಮತ್ತು ಮನಸ್ಸಿನ ಸೀಮೆಯನ್ನು ವಿಸ್ತೃತಗೊಳಿಸುವಂತೆಯೂ ಪ್ರಯತ್ನಿಸಬೇಕು. ಅವನ ದೃಷ್ಟಿಯು ಬಹಳ ಸೂಕ್ಷ್ಮವಾದದ್ದೂ ವಿಶಾಲವಾದದ್ದೂ ಆಗಿದ್ದರೆ ಮಾತ್ರ ಅದರಿಂದ ನಮಗೆ ಆತ್ಮಿಕವಾದ ಆನಂದವು ಪ್ರಾಪ್ತವಾಗಲು ಸಾಧ್ಯ. ಸಾಧಾರಣೆಯು ಯಾವ ಅವಸ್ಥೆಯಲ್ಲಿ ಇದ್ದರೂ ಅದರಿಂದ ಅತ್ಯುಚ್ಚ ಮಟ್ಟವನ್ನು ಮುಟ್ಟುವ ಪ್ರೇರಣೆಯು ಪ್ರತಿಯೊಬ್ಬ ಮನುಷ್ಯನಲ್ಲಿ ಇದ್ದೇ ಇರುವದು. ನಮ್ಮಲ್ಲಿರುವ ದುರ್ಬಲತೆಗಳು ರೋಗಗಳಂತೆ ನಮ್ಮನ್ನು ಅಂಟಿಕೊಂಡಿರುವವು. ಶರೀರಕ್ಕೆ ಸ್ವಾಸ್ಥ್ಯ ಸ್ವಾಭಾವಿಕವಾದದ್ದು. ರೋಗ ತದ್ವಿರುದ್ಧವಾದದ್ದು. ಇದರಂತೆಯೆ ನೈತಿಕ ಮತ್ತು ಮಾನಸಿಕ ಸ್ವಾಸ್ಥ್ಯವೆ ಹೃದಯದ ಸ್ವಭಾವಸಿದ್ಧವಾದ ವಿಷಯ. ಮಾನಸಿಕ ಮತ್ತು ನೈತಿಕ ಅವನತಿಯು ರೋಗದಂತೆ ನಮ್ಮನ್ನು ಪೀಡಿಸುತ್ತದೆ. ರೋಗಿಯು ಯಾವಾಗಲೂ ಚಿಕಿತ್ಸಕನ ಶೋಧದಲ್ಲಿ ತೊಡಗಿರುವಂತೆ ಮಾನಸಿಕ ಅವನತಿಯನ್ನು ಪಡೆದ ಮನುಷ್ಯನೂ ಕೂಡ ತನ್ನ ದುರ್ಬಲತೆಯನ್ನು ಕಿತ್ತೊಗೆಯಲು ಯಾವಾಗಲೂ ಪ್ರಯತ್ನ ಮಾಡುವನು. ಇದೇ ಕಾರಣದಿಂದ ಮನುಷ್ಯನು ಯಾವಾಗಲೂ ಸಾಧುಸಂತರ ಶೋಧದಲ್ಲಿ, ಪೂಜೆ ಪಾಠಗಳ ಗಡಿಬಿಡಿಯಲ್ಲಿ, ತಜ್ಞರ ಉಪದೇಶಪರ ಭಾಷಣಗಳಲ್ಲಿ ಮತ್ತು ಸಾಹಿತ್ಯದ ಅಧ್ಯಯನದಲ್ಲಿ ಮನಸ್ಸನ್ನು ತೊಡಗಿಸುವನು.

ನಾವು ನೈಜವಾದ ಪ್ರೇಮಭಾವದಿಂದ ವಂಚಿತರಾಗಿರುವೆವು. ನಮ್ಮ ದುಷ್ಟ ಮನೋಭಿಲಷಿತಗಳೆ ನಮ್ಮ ಮಾನಸಿಕ ದುರ್ಬಲತೆಗೆ ಕಾರಣ.

ವಾದವುಗಳು. ನೈಜ ಸೌಂದರ್ಯ ಪ್ರೇಮವು ಜಾಗ್ರತವಾಗಿರುವ ಸ್ಥಳದಲ್ಲಿ, ಪ್ರೇಮದಿಂದ ವಿಶಾಲ ದೃಷ್ಟಿ ಬೆಳೆದುಬಂದಲ್ಲಿ ದುರ್ಬಲತೆಗಳಿಗೆ ಅವಕಾಶ ವೆಲ್ಲಿಯದು? ಪ್ರೇಮವೆ ನಿಜದಲ್ಲಿಯೂ ಆಧ್ಯಾತ್ಮಿಕ ಭೋಜನವಾಗಿದೆ. ಈ ಭೋಜನವು ಸಾಕಷ್ಟು ಉತ್ತಮ ಪ್ರಮಾಣದಲ್ಲಿ ದೊರಕದೆ ಇರುವದರಿಂದಲೆ ಅಥವಾ ದೂಷಿತ ಭೋಜನವು ಸಿಗುವದರಿಂದಲೆ ನಮ್ಮ ಮನೋದೌರ್ಬಲ್ಯ ಬೆಳೆಯುತ್ತ ಬರುವದು. ಕಲಾಕಾರನು ನಮ್ಮಲ್ಲಿ ಸೌಂದರ್ಯದ ಅನುಭವಾತ್ಮಕ ಸ್ಥಾಯಿ ಭಾವನೆಯನ್ನು ಜಾಗ್ರತಗೊಳಿಸುತ್ತಾನೆ. ಅವನ ಒಂದೊಂದು ಶಬ್ದ, ಒಂದೊಂದು ವಾಕ್ಯ, ಒಂದೊಂದು ಸಂಕೇತ, ಎಲ್ಲವೂ ನಮ್ಮಲ್ಲಿ ಒಂದು ರೀತಿಯ ಹೊಸ ಪ್ರಕಾಶವನ್ನು ತಂದುಕೊಡುವವು. ಆದರೆ ಕಲಾಕಾರನು ತಾನೆ ಸ್ವತಃ ಈ ಸೌಂದರ್ಯ ಪ್ರೇಮದಲ್ಲಿ ತಲ್ಲೀನನಾಗದಿದ್ದರೆ ಪಾಠಕರನ್ನು ಹೇಗೆ ತಾನೆ ಪ್ರಕಾಶಶೀಲರನ್ನಾಗಿ ಮಾಡಬಲ್ಲನು?

## ೬. ಸೌಂದರ್ಯ ಮೀಮಾಂಸೆ

ಸೌಂದರ್ಯವೆಂದರೇನೆಂಬುದು ಒಂದು ದೊಡ್ಡ ಪ್ರಶ್ನವೇ ಆಗಿದೆ. ಈ ಪ್ರಶ್ನವು ವಾಸ್ತವದಲ್ಲಿ ನಿರರ್ಥಕವೆ ಎಂದು ಹೇಳಬಹುದು. ಯಾಕಂದರೆ ಸೌಂದರ್ಯದ ವಿಷಯದಲ್ಲಿ ನಮ್ಮ ಮನಸ್ಸಿನಲ್ಲಿ ಯಾವ ಸಂಶಯವು ಉಳಿದಿಲ್ಲ. ನಾವು ಸೂರ್ಯನ ಉದಯಾಸ್ತಗಳನ್ನು ನೋಡಿದ್ದೇವೆ. ಉಷಃಕಾಲದ ಮತ್ತು ಸಂಧ್ಯಾಕಾಲದ ಆರಕ್ತ ವರ್ಣವನ್ನು ನೋಡಿದ್ದೇವೆ. ಸುಂದರ ಮತ್ತು ಸುಗಂಧಪೂರ್ಣವಾದ ಕುಸುಮವನ್ನು ಕಂಡಿದ್ದೇವೆ. ಸುಮಧುರ ಸಂಗೀತ ಧ್ವನಿಗೈಯ್ಯುವ ಪಕ್ಷಿಗಳ ಕಿಲಕಿಲಾಟವನ್ನು ಸವಿದಿದ್ದೇವೆ. ಸುಂದರ ಧ್ವನಿಯಿಂದ ನಿನಾದ ಮಾಡುವ ನದಿಗಳನ್ನು ಕಣ್ಣಾರೆ ಕಂಡಿದ್ದೇವೆ. ನೃತ್ಯ ಭಂಗಿಯಲ್ಲಿ ಹರಿದು ಬರುವ ಪರ್ವತದ ನಿರ್ಝರಿಗಳನ್ನು ನೋಡಿದ್ದೇವೆ. ಇವೆಲ್ಲವೂ ಸೌಂದರ್ಯದಾಯಕ ವಸ್ತುಗಳು. ಈ ಎಲ್ಲ ದೃಶ್ಯಗಳನ್ನು ನೋಡಿ ನಮ್ಮ ಅಂತಃಕರಣವು ಏಕೆ ಹರುಷಗೊಳ್ಳುತ್ತದೆ? ಇವುಗಳಲ್ಲಿ ಧ್ವನಿ ಮತ್ತು ವರ್ಣಗಳ ಸಾಮಂಜಸ್ಯವಿದೆ. ವಾದ್ಯಗಳ ಸ್ವರ-ಸಾಮ್ಯ ಅಥವಾ ಸ್ವರೈಕ್ಯತೆ ಸಂಗೀತದಲ್ಲಿಯ ಮೋಹಕತೆಗೆ ಕಾರಣವಾಗಿದೆ. ನಮ್ಮ ರಚನೆಯೂ ತತ್ತ್ವಗಳ ಸಮಾನುಪಾತದಲ್ಲಿ ಸಂಯೋಗದಿಂದ ಆಗಿದೆ.

ಆದ್ದರಿಂದಲೇ ನಮ್ಮ ಆತ್ಮವು ಈ ತೆರನಾದ ಸಾಮ್ಯ ಅಥವಾ ಸಾಮಂಜಸ್ಯ ವನ್ನು ಅರಸುತ್ತಲೇ ಇರುವದು ಸಾಹಿತ್ಯವು ಕಲಾಕಾರನ ಆಧ್ಯಾತ್ಮಿಕ ಸಾಮಂಜಸ್ಯದ ವ್ಯಕ್ತರೂಪವಾಗಿದೆ ಸಾಮಂಜಸ್ಯವು ಸೌಂದರ್ಯ-ಸೃಷ್ಟಿ ಮಾಡುವದೆ ಹೊರತು ಅದರ ನಾಶವನ್ನು ಎಂದೂ ಮಾಡಲಾರದು. ಅದು ನಮ್ಮಲ್ಲಿಯ ಪ್ರಾಮಾಣಿಕತೆಯ, ಸತ್ಯತೆಯ, ಸಾಹಾನುಭೂತಿಯ, ನ್ಯಾಯ ಪ್ರಿಯತೆಯ ಮತ್ತು ಸಮತೆಯ ಭಾವಗಳನ್ನು ಪುಷ್ಟಿಗೊಳಿಸುತ್ತದೆ. ಈ ಭಾವನೆಗಳು ಇದ್ದೆಡೆಯಲ್ಲಿ ಜೀವನದ ದೃಢತೆ ಇದೆ ಎಂದು ಹೇಳಬಹುದು. ಇವುಗಳ ಅಭಾವವಿದ್ದಲ್ಲಿ ಜಗಳ, ವಿರೋಧ, ಸ್ವಾರ್ಥಪರತೆ, ದ್ವೇಷ ಮತ್ತು ಶತ್ರುತ್ವವು ತಲೆದೋರುವವು. ಇವೆಲ್ಲವುಗಳು ಪ್ರಕೃತಿ ವಿರುದ್ಧ ಜೀವನದ ಲಕ್ಷಣಗಳು. ಪ್ರಕೃತಿಯ ಅನುಕೂಲತೆ ಮತ್ತು ಸಾಮ್ಯಗಳು ಇದ್ದೆಡೆಯಲ್ಲಿ ಸಂಕುಚಿತ ಮತ್ತು ಸ್ವಾರ್ಥ ಭಾವನೆಗಳಿಗೆ ಅವಕಾಶವೆಲ್ಲಿಂದ ಬರಬೇಕು! ನಮ್ಮ ಆತ್ಮವು ಪ್ರಾಕೃತಿಕ ಪರಿಶುದ್ಧವಾದ ವಾಯುಮಂಡಲದಲ್ಲಿ ಪರಿಪೋಷಿತ ವಾಗುವಾಗ ಅಲ್ಲಿಯ ನೀಚತನ ಮತ್ತು ದುಷ್ಟತನಗಳೆಂಬ ಕೀಟಕಗಳು ತಮ್ಮಷ್ಟಕ್ಕೆ ತಾವೆ ಅಲ್ಲಿಯ ಗಾಳಿ ಮತ್ತು ಬೆಳಕುಗಳಿಂದ ನಷ್ಟವಾಗುತ್ತವೆ. ಪ್ರಕೃತಿಯಿಂದ ದೂರವಾಗಿ ನಾವು ಸಂಕುಚಿತ ಮನೋಭಾವವನ್ನು ಪಡೆದರೆ ನಮ್ಮಲ್ಲಿ ಮಾನಸಿಕ ಮತ್ತು ಭಾವಗಳ ರೋಗಗಳು ನೆಲೆಗೊಳ್ಳುವವು! ಸಾಹಿತ್ಯವು ನಮ್ಮ ಜೀವನಕ್ಕೆ ಸ್ವಾಭಾವಿಕತೆ ಮತ್ತು ಸ್ವಾತಂತ್ರ್ಯವನ್ನು ತಂದುಕೊಡುವದು. ಇದರ ಮುಖಾಂತರವೆ ನಮ್ಮ ಆತ್ಮಕ್ಕೆ ಉತ್ತಮ ಸಂಸ್ಕಾರವು ದೊರಕುವದೆಂದು ಹೇಳಿದರೆ ಏನೂ ತಪ್ಪಾಗಲಿಕ್ಕಿಲ್ಲ ಇದೇ ಸಾಹಿತ್ಯದ ಮುಖ್ಯವಾದ ಉದ್ದೇಶ್ಯ.

## ೭ ಸಾಹಿತಿಯ ಸಮಾಜಕ್ರಾಂತಿ

ಪ್ರಗತಿಶೀಲ ಲೇಖಕ ಸಂಘ'ವೆಂಬ ಈ ಹೆಸರೇ ನನ್ನ ವಿಚಾರ-ದೃಷ್ಟಿಯಿಂದ ತಪ್ಪು. ಸಾಹಿತಿಯು ಸ್ವಾಭಾವಿಕವಾಗಿ ಪ್ರಗತಿಶೀಲನು. ಹಾಗಾಗದಿದ್ದರೆ ಅವನು ಸಾಹಿತಿಯೆ ಆಗಲಾರನೆಂದು ಹೇಳಬಹುದು. ಅವನಿಗೆ ಒಂದು ತೆರನಾದ ಅತೃಪ್ತಿ ತಲೆದೋರಿದಾಗ ಅವನು ಹೊರಗಿನ ಜಗತ್ತಿನಲ್ಲಿಯೂ ಕೂಡ ಅನೇಕ ರೀತಿಯ ನ್ಯೂನತೆಗಳನ್ನು ಕಂಡು ಅನುಭವಿಸುವನು.

ಇವುಗಳನ್ನು ಪೂರ್ತಿಗೊಳಿಸುವುದಕ್ಕಾಗಿ ಅವನ ಆತ್ಮವು ಜಾಗ್ರತವಾಗುವದು. ಅವನು ವ್ಯಕ್ತಿ ಮತ್ತು ಸಮಾಜವನ್ನು ತಾನು ನೋಡಬೇಕೆಂದು ಅಪೇಕ್ಷಿಸಿದ ಸುಖ-ಸ್ವಾತಂತ್ರ್ಯದ ರೀತಿಯಲ್ಲಿ ನೋಡದೆ ಹೋಗುವನು. ಆಗ ಅವನ ಮನಸ್ಸಿನ ಮೇಲೆ ಒಂದು ಆಘಾತವಾಗುವದು ಒಂದು ರೀತಿಯು ಅತೃಪ್ತ ಭಾವನೆಗಳು ? ಅಂತರ್ವೇದನೆಗಳು ಲೇಖಕನ ಹೃದಯವನ್ನು ಮತ್ತು ಮಸ್ತಿಷ್ಕವನ್ನು ಕೆದಕತೊಡಗುವವು. ಅಂತರ್ದಾಹದಿಂದೊಡಗೂಡಿದ ಆತನ ಹೃದಯವು ಸಾಮಾಜಿಕ ನಡವಳಿಕೆಗಳ ಬಂಧನದಲ್ಲಿ ಸಿಲುಕಿ ಕಷ್ಟಪಡುತ್ತಿರುವ ಜನರ ಬಗ್ಗೆ ವಿಚಾರಿಸತೊಡಗುವದು. ಕಲಾಕಾರನ ಅಂತರ್ವೇದನೆಯು ಆಳವಾದಷ್ಟು ಅವನ ರಚನೆಯಲ್ಲಿ ಸತ್ಯತೆಯ ಪ್ರಮಾಣವು ಹೆಚ್ಚಾಗಿ ಕಂಡುಬರುವದು ತನ್ನ ಅನುಭವದ ಅಂತರಾಳವನ್ನು ಕಲಾವಿದನು ಯಾವ ರೀತಿಯಲ್ಲಿ ವ್ಯಕ್ತಮಾಡುವನೊ ಆ ಕ್ರಮಬದ್ಧತೆಯಲ್ಲಿಯೆ ಆತನ ಕೌಶಲ್ಯದ ರಹಸ್ಯ ಕಂಡುಬರುವದು , ಏಕೆಂದರೆ ಪ್ರತಿಯೊಬ್ಬ ಗ್ರಂಥಕಾರನು ಒಂದೇ ತೆರನಾಗಿ ಪ್ರಗತಿ ಅಥವಾ ಉನ್ನತಿಯ ಅರ್ಥವನ್ನು ಗ್ರಹಿಸುವದಿಲ್ಲವೆಂಬುದನ್ನು ಕುರಿತು ಹೇಳುವದು ಅಗತ್ಯವಾಯಿತು. ಒಂದು ಜನಾಂಗ ಇಂದು ಯಾವುದನ್ನು ಉನ್ನತಿಯೆಂದು ತಿಳಿಯುತ್ತಿದೆಯೊ ಇನ್ನೊಂದು ಸಮಾಜ ಅದನ್ನು ಅವನತಿ ಎಂದು ತಿಳಿಯುತ್ತದೆ. ಆದುದರಿಂದಲೇ ಸಾಹಿತಿಯಾದವನು ತನ್ನ ಕಲೆಯನ್ನು ಯಾವುದಾದರೊಂದು ಉದ್ದೇಶ್ಯದ ಆಧೀನತೆಗೆ ಒಳಪಡಿಸಲು ಬಯಸುವುದಿಲ್ಲ- ಸಾಹಿತಿಯು ವಿಚಾರದಲ್ಲಿ ಮನೋಭಾವಗಳನ್ನು ವ್ಯಕ್ತ-ಗೊಳಿಸುವದೆ ಒಂದು ಕಲೆ. ವ್ಯಕ್ತಿ ಅಥವಾ ಸಮಾಜದ ಮೇಲೆ ಅವು ಹೇಗೆ ಪರಿಣಾಮಕಾರಿ ಆಗುವುದೆಂಬುದನ್ನು ಆತನು ವಿಚಾರಿಸಕೂಡದು.

ಯಾವ ಸ್ಥಿತಿಯಿಂದ ದೃಢತೆ ಮತ್ತು ಕಾರ್ಯಶಕ್ತಿಗಳು ಉತ್ಪನ್ನವಾಗುವವೊ, ನಮ್ಮ ದುಃಖಾವಸ್ಥೆಯ ಸಂಪೂರ್ಣ ಅನುಭವ ಉಂಟಾಗುವುದೋ ಆ ಸ್ಥಿತಿಯೇ ಉನ್ನತಿಯೆಂದು ನಮ್ಮ ಅಭಿಪ್ರಾಯ. ಈ ರೀತಿಯ ಉನ್ನತಿಯಿಂದ ನಾವು ನಮ್ಮ ಆಂತರಿಕ ಅಥವಾ ಬಾಹ್ಯವಾದ ಯಾವ ಕಾರಣದಿಂದ ಇಷ್ಟೊಂದು ನಿರ್ಜೀವ ಮತ್ತು ಸತ್ವಹೀನವಾದ ಅವಸ್ಥೆಗೆ ಬಂದಿರುವೆವು ಎಂಬುದನ್ನು ಚನ್ನಾಗಿ ತಿಳಿದುಕೊಂಡು ಅದನ್ನು ದೂರೀಕರಿಸಲು ಶಕ್ಯವಿದ್ದ ಪ್ರಯತ್ನ ಮಾಡೋಣ.

ಇಂದು ನಮಗೆ ಸಂಸಾರದ ನಶ್ವರತೆಯನ್ನು ಅಸಾರತೆಯನ್ನು ಬೋಧ ಮಾಡುವ ಕವಿತೆಗಳಿಂದ ಏನೂ ಪ್ರಯೋಜನವಾಗಬೇಕಾದದ್ದು ಇಲ್ಲ. ಇಂಥವು ಗಳಿಂದ ನಮ್ಮ ಹೃದಯದ ಮೇಲೆ ನಿರಾಶೆಯ ಭಾವವು ಪ್ರತಿಬಿಂಬಿತವಾಗಿ ನಮ್ಮಲ್ಲಿಯ ಕಾರ್ಯ ಶಕ್ತಿಯು ಕುಂಠಿತವಾಗುವದು. ಇತ್ತೀಚೆಗಿನ ಮಾಸಪತ್ರಿಕೆಗಳಲ್ಲಿ ತುಂಬಿ ತುಂಬಿ ಬರುತ್ತಿರುವ ಅರ್ಥವಿಹೀನವಾದ ಪ್ರೇಮ ಕಥೆಗಳಿಂದಲೂ ನಮಗೆ ಇಂದು ಉಪಯೋಗವಿಲ್ಲ. ಇಂಥವುಗಳಿಂದ ನಮ್ಮಲ್ಲಿ ಎಳ್ಳಷ್ಟು ಜಾಗ್ರತಿ ಹುಟ್ಟಲಾರದು. ನಾವು ತರುಣ ತರುಣಿಯರ ಪ್ರೇಮದ ಕಥೆಯನ್ನು ಹೇಳಿಬಿಡುವ ಮಾತ್ರದಿಂದ ನಮ್ಮ ಸೌಂದರ್ಯ ಪ್ರೇಮದ ಮೇಲೆ ಯಾವ ಪರಿಣಾಮವೂ ಆಗಲಾರದು. ಕೇವಲ ಆ ಪ್ರೇಮಿಗಳ ವಿರಹ ವ್ಯಥೆಯ ಬಗ್ಗೆ ನಾವು ಕೂಡ ಶೋಕಿಸಬಹುದು ಇಷ್ಟೆ, ಇದರಿಂದ ನಮ್ಮಲ್ಲಿ ಮಾನಸಿಕ ಅಥವಾ ಭಾವಗತ ಅನುಭೂತಿಯು ಗತಿಶೀಲವಾಗಲಾರದು. ಇಂಥ ಮಾತುಗಳಿಂದ ಹಿಂದೊಂದು ಕಾಲಕ್ಕೆ ಭಾವಾವೇಶವಾಗುತ್ತಿದ್ದರೂ ಇರಬಹುದು, ಆದರೆ ಇಂದಿನ ಜಗತ್ತಿನಲ್ಲಿ ಅದೆಲ್ಲವೂ ನಿರರ್ಥಕ. ಕೇವಲ ಭಾವೋತ್ತೇಜಕ ಕಲೆಯ ಕಾಲವು ಈಗ ಉಳಿದಿಲ್ಲ. ಇಂದು ನಮಗೆ ಕರ್ತೃತ್ವದ ಸಂದೇಶವನ್ನು ಬೀರುವ ಕಲೆಯ ಆವಶ್ಯಕತೆ ಇರುವದು. ಜೀವನದ ರಹಸ್ಯವನ್ನು ಹುಡುಕುವುದಾದರೆ ಅದು ಸಂಘರ್ಷವಿಲ್ಲದೆ ಸಿಗಲಾರದು. ಈ ತೆರನಾದ ಸಂಘರ್ಷವು ವ್ಯಕ್ತಿಗತ ದೃಷ್ಟಿ-ಕೋಣವನ್ನು ಇಟ್ಟುಕೊಂಡರೆ ಎಂದೂ ಸಾಧ್ಯವಿಲ್ಲ.

## ೮. ಸಾಹಿತ್ಯದಿಂದುಂಟಾಗುವ ಆನಂದ

ಇನ್ನುಳಿದ ವಸ್ತುಗಳಂತೆ ಕಲೆಯನ್ನೂ ಕೂಡ ಉಪಯೋಗಿತೆಯ ದೃಷ್ಟಿಯಿಂದ ತೂಗಿ ನೋಡುವುದರಲ್ಲಿ ನಾವು ಸ್ವಲ್ಪೂ ಸಂಕೋಚಪಡುವದಿಲ್ಲ. ಮನುಷ್ಯನಲ್ಲಿಯ ಸೌಂದರ್ಯವೃತ್ತಿಯನ್ನು ಪುಷ್ಟಗೊಳಿಸುವದೆ ನಿಜವಾದ ಕಲೆಯ ಉದ್ದೇಶ್ಯವಾಗಿದೆ. ಮತ್ತು ಆಧ್ಯಾತ್ಮಿಕ ಆನಂದವನ್ನು ಕೊಡುವ ಕೀಲಿಕೈ ಆಗಿದೆಯೆಂಬುದರಲ್ಲಿ ಸಂದೇಹವಿಲ್ಲ; ಆದರೆ ಯಾವ ಆಧ್ಯಾತ್ಮಿಕ ಮತ್ತು ಮಾನಸಿಕ ಆನಂದವು ತನ್ನ ಉಪಯೋಗಿತೆಯ ಅಂಶವನ್ನು ಇಟ್ಟುಕೊಳ್ಳದೇ ಇರುವುದಿಲ್ಲ. ಆನಂದವೂ ಒಂದು ಉಪಯೋಗಿತಾಯುಕ್ತವಸ್ತುವು.

ಉಪಯೋಗಿತೆಯ ದೃಷ್ಟಿಯಿಂದ ಒಂದೇ ವಸ್ತುವಿನಿಂದ ಕೆಲವೊಂದು ಸಲ ಸುಖವೂ ಆಗಬಹುದು ಕೆಲವೊಂದು ಸಲ ದುಃಖವೂ ಆಗಬಹುದು. ಆಕಾಶದಲ್ಲಿ ಹಬ್ಬಿರುವ ಕೆಂಪುಬಣ್ಣವು ಅತಿಶಯವಾಗಿ ಸುಂದರವಾಗಿ ಕಂಡುಬಂದರೂ ಅದೇ ಆಷಾಢಮಾಸದಲ್ಲಿ ಒಂದು ವೇಳೆ ಆಕಾಶದಲ್ಲಿ ಕಂಡುಬರುವುದಾದರೆ ನಮಗೆ ಅದು ಸುಖವನ್ನುಂಟುಮಾಡಲಾರದು ಯಾಕಂದರೆ ಆ ಸಮಯದಲ್ಲಿ ಅತಿ ಕಪ್ಪಾದ ಮೋಡಗಳನ್ನು ನೋಡುವದರಿಂದಲೆ ನಮಗೆ ಆನಂದ. ಹೂವುಗಳನ್ನು ನೋಡುವ ಮಾತ್ರದಿಂದ ನಮಗೆ ಬಹಳ ಆನಂದ ಹುಟ್ಟುವದು, ಯಾಕಂದರೆ ಅವುಗಳಿಂದ ನಮ್ಮಲ್ಲಿ ಫಲದ ಆಶೆ ಅಂಟಿಕೊಳ್ಳುವದು ಪ್ರಕೃತಿಯೊಡನೆ ನಮ್ಮ ಜೀವನದ ತಾನವನ್ನು ಒಟ್ಟುಗೂಡಿಸಿ ನಾವು ಆತ್ಮಿಕ ಆನಂದವನ್ನು ಪಡೆಯುತ್ತೇವೆ, ಏಕೆಂದರೆ ಅದರಿಂದ ನಮ್ಮ ಜೀವನವು ಪ್ರಫುಲ್ಲಿತವಾಗುತ್ತದೆ ಮತ್ತು ಪುಷ್ಟವಾಗುತ್ತದೆ. ಸ್ವಾಭಾವಿಕ ಬೆಳವಣಿಗೆ ಮತ್ತು ವಿಕಾಸಗಳೇ ಪ್ರಕೃತಿಯ ನಿಯಮ. ಭಾವ, ಅನುಭವ ಮತ್ತು ವಿಚಾರಗಳಿಂದ ನಮಗೆ ದೊರೆಯುವ ಆನಂದವು ಈ ವೃದ್ಧಿ ಮತ್ತು ವಿಕಾಸಕ್ಕೆ ಸಹಾಯಕ. ತನ್ನ ಕಲೆಯಿಂದ ಸೌಂದರ್ಯವನ್ನು ಸೃಷ್ಟಿಸಿ ಪರಿಸ್ಥಿತಿಯನ್ನು ವಿಕಾಸಕ್ಕೆ ಉಪಯೋಗಿಯಾಗಿ ಮಾಡಿಕೊಡುವುದೆ ಕಲಾಕಾರನ ಮುಖ್ಯ ಕೆಲಸವಾಗಿದೆ.

ಸೌಂದರ್ಯವೆಂಬ ವಸ್ತುವೂ ಕೂಡ ಇನ್ನುಳಿದ ವಸ್ತುಗಳಂತೆ ಸಾಪೇಕ್ಷವಾದದ್ದು ಆಗಿದೆ. ಒಬ್ಬ ಸಿರಿವಂತನಾದ ಮನುಷ್ಯನಿಗೆ ಸುಖಮಯವಾಗಿ ಪರಿಣಮಿಸಿದ ವಸ್ತುವು ಮತ್ತೆ ಬೇರೆಯವರಿಗೆ ತದ್ವಿರುದ್ಧವಾಗಿ ಕಾಣಬಹುದು. ಒಬ್ಬ ಸಿರಿವಂತ ಮನುಷ್ಯನು ಸುರಭಿತ ಸುರಮ್ಯ ಉದ್ಯಾನದಲ್ಲಿಯ ಸುಮಧುರ ಪಕ್ಷಿಗಳ ಕಿಲಕಿಲಾಟವನ್ನು ಕೇಳಿ ಸ್ವರ್ಗೀಯ ಆನಂದವನು ಪಡೆಯಬಹುದಾದರೆ ಒಬ್ಬ ತತ್ವ ಜಿಜ್ಞಾಸುವಾದ ಮನುಷ್ಯನು ಇದನ್ನು ತೀರ ನಿರರ್ಥಕ ಮತ್ತು ನಿಃಸಾರವಾಗಿ ತಿಳಿಯಬಹುದು.

## ೯. ಸಾಹಿತ್ಯದಲ್ಲಿ ಧಾರ್ಮಿಕ ಭಾವನೆ

ಎಲ್ಲ ಜನರಲ್ಲಿ ಸಮತೆ, ಸಭ್ಯತೆ ಮತ್ತು ಪ್ರೇಮಗಳು ಮೊದಲಿನಿಂದಲೂ ನಮ್ಮ ಸಾಮಾಜಿಕ ಜೀವನದಲ್ಲಿ ಆದರ್ಶ ಗುಣಗಳಾಗಿ ಪರಿಗಣಿಸಲ್ಪಟ್ಟವೆ.

ನಮ್ಮ ಧರ್ಮ ಪ್ರವರ್ತಕ ಆಚಾರ್ಯರೆಲ್ಲರೂ ಧಾರ್ಮಿಕ ಮತ್ತು ನೈತಿಕ ತಳಹದಿಯ ಮೇಲೆ ಈ ಎಲ್ಲ ಆದರ್ಶಗುಣಗಳನ್ನು ಕಟ್ಟಲು ಪ್ರಯತ್ನಿಸಿದರು ಮತ್ತು ಅವರು ಅದರಲ್ಲಿ ವಿಫಲರಾದರು. ಗೌತಮ ಬುದ್ಧ, ಮಹಾತ್ಮಾ ಏಸೂ ಕ್ರೈಸ್ತ, ಹಜರತ ಮುಹಮ್ಮದ ಮೊದಲಾದ ಸಂದೇಶವಾಹಕರೆಲ್ಲರೂ ಧರ್ಮಪ್ರವರ್ತಕರೆಲ್ಲರೂ ನೀತಿಯ ತಳಹದಿಯ ಮೇಲೆಯೆ ಸಮಾನತೆಯ ಕಟ್ಟಡವನ್ನು ಕಟ್ಟಿದ್ದುಂಟು. ಆದರೂ ಇವರಲ್ಲಿ ಯಾರಿಗೂ ಸಫಲತೆಯು ಉಂಟಾದಂತಿಲ್ಲ. ಆದರೆ, ದೊಡ್ಡವರು ಚಿಕ್ಕವರು ಎಂಬ ಭಾವ ಇಂದು ಇರುವಷ್ಟು ಉಗ್ರರೂಪವನ್ನು ಹಿಂದೆಂದೂ ತಾಳಿದ್ದಿಲ್ಲ ಎಂದರೆ ತಪ್ಪಾಗಲಾರದು.

ಒಂದು ಸಲ ಪರೀಕ್ಷಿಸಿ ನೋಡಿದ್ದನ್ನು ಇನ್ನೊಂದು ಸಲ ಪರೀಕ್ಷಿಸುವದು ಮೂರ್ಖತನದ ಮಾತಾಗಿದೆ. ಈ ಗಾದೆಯ ಮಾತಿನಂತೆ ನಾವು ಈಗಲೂ ಧರ್ಮದ ಮತ್ತು ನೀತಿಯ ಸೆರಗನ್ನು ಹಿಡಿದುಕೊಂಡು ಸಮಾನತೆಯ ಉಚ್ಚ ಮಟ್ಟವನ್ನು ಮುಟ್ಟಲು ಅಪೇಕ್ಷೆಪಟ್ಟರೆ ಅದರಲ್ಲಿ ಖಂಡಿತವಾಗಿ ಸಫಲತೆಯು ಸಿಕ್ಕಲಾರದು. ನಮ್ಮ ಈ ಸ್ವಪ್ನವು ಉತ್ತೇಜಿತವಾದ ಮಿದುಳಿನ ಸೃಷ್ಟಿಯು ಎಂದು ಬಗೆದು ಅದನ್ನು ಮರೆತುಬಿಡಬೇಕೇ? ಹಾಗಾದಲ್ಲಿ ಮನುಷ್ಯನ ಉನ್ನತಿಗೂ ಪೂರ್ಣತೆಗೂ ಯಾವ ಆದರ್ಶವೂ ಉಳಿಯದಂತಾಗುವುದು. ಹೀಗಾಗುವದಕ್ಕಿಂತ ಮನುಷ್ಯನ ಅಸ್ತಿತ್ವವೇ ಇಲ್ಲದಂತಾಗುವುದು ಒಳ್ಳೆಯದು. ನಾವು ಸಭ್ಯತೆಯ ಬುನಾದಿ ಕಾಲದಿಂದ ಯಾವ ಆದರ್ಶವನ್ನು ರಕ್ಷಿಸಿಕೊಂಡು ಬಂದಿರುವೆವೋ, ಆ ಯಾವ ಆದರ್ಶದ ಸಲುವಾಗಿ ಮನುಷ್ಯನು ಇಷ್ಟೊಂದು ಬಲಿದಾನಗಳನ್ನು ಕೊಟ್ಟಿರುವನೊ, ಯಾವ ಆದರ್ಶವು ಪರಿಣತಾವಸ್ಥೆಗೆ ಬರಬೇಕೆಂತಲೆ ಧರ್ಮದ ಆವಿರ್ಭಾವವಾಯಿತೊ, ಯಾವ ಆದರ್ಶದ ಇತಿಹಾಸವು ಮಾನವ ಜನಾಂಗದ ಇತಿಹಾಸವಾಗಿ ಪರಿಣಮಿಸಿದೆಯೊ ಅದೇ ಆದರ್ಶವೆ ಇಂದು ನಮ್ಮೆಲ್ಲರಿಗೆ ಮಾನ್ಯವಾದ ಆದರ್ಶವೆಂದು ಭಾವಿಸಿ ಅದನ್ನೆ ನಾವಿಂದು ಶಾಶ್ವತ ಸತ್ಯವೆಂದು ತಿಳಿದು ಉನ್ನತಿಯ ದಿಶೆಯಲ್ಲಿ ಹೆಜ್ಜೆಯನ್ನಿಕ್ಕಬೇಕು. ಸಮಾನತೆಯು ಕೇವಲ ನೈತಿಕ ಆಧಾರಗಳ ಮೇಲೆ ಮಾತ್ರ ಉಳಿಯದೆ ಹೆಚ್ಚಾಗಿ ತನ್ನ ನೈಜವಾದ ಗಟ್ಟಿಯಾದ ರೂಪದಲ್ಲಿ ಉಳಿಯುವಂತೆ ಹೊಸ ಸಂಘಟನೆಯನ್ನು ಸರ್ವಾಂಗಪೂರ್ಣವಾಗಿ ಮಾಡುವು

ದಾದರೆ ನಮ್ಮ ಸಾಹಿತ್ಯವು ಅದೇ ಆದರ್ಶವನ್ನು ತನ್ನೆದುರಿನಲ್ಲಿ ಇಟ್ಟುಕೊಳ್ಳ ಬೇಕಾಗುವದು.

## ೧೦. ಇಂದಿನ ಸೌಂದರ್ಯ ದೃಷ್ಟಿ

ಇಂದು ಸೌಂದರ್ಯವನ್ನು ಪರೀಕ್ಷಿಸುವ ಒರೆಗಲ್ಲನ್ನು ನಾವು ಬದಲಿಸ ಬೇಕಾಗಿದೆ. ಇಂದಿನ ತನಕ ನಾವು ಸಿರಿವಂತಿಕೆ ಮತ್ತು ಭೋಗವಿಲಾಸಿತೆಗಳ ಆಧಾರದಿಂದ ಸೌಂದರ್ಯವನ್ನು ಅಳೆಯುತ್ತಿದ್ದೆವು. ನಮ್ಮ ಕಲಾಕಾರರೆಲ್ಲರೂ ಸಿರಿವಂತಿಕೆಗೆ ಮಾರು ಹೋಗಿದ್ದರು. ಅವರ ಲಾಂಗೂಲ-ಚಾಲನ ಮಾಡು ವದರಲ್ಲಿಯೆ ತಮ್ಮ ಅಸ್ತಿತ್ವವನ್ನು ಕಂಡಿದ್ದರು. ಆದುದರಿಂದಲೆ ಸಿರಿವಂತ ಜನರ ಸುಖ-ದುಃಖ, ಆಶೆನಿರಾಶೆ, ಸ್ಪರ್ಧೆ-ಪ್ರತಿಸ್ಪರ್ಧೆಗಳ ಏರಾಟದ ವ್ಯಾಖ್ಯೆ ಕಲೆಯ ಉದ್ದೇಶ್ಯವಾಗಿ ಪರಿಣಮಿಸಿತು. ಈ ಕಾರಣದಿಂದ ಕಲಾಕಾರರ ದೃಷ್ಟಿಯು ಕೇವಲ ಅಂತಃಪುರ ಮತ್ತು ರಾಜ ಮಹಲುಗಳ ಮೇಲೆ ಇದ್ದಿತೇ ಹೊರತು ಗುಡಿಸಲು ಮತ್ತು ಮುರಕ ಗೋಡೆಗಳ ಮೇಲೆ ಬೀಳಲಿಲ್ಲ. ಅವೆಲ್ಲವುಗಳನ್ನು ಮನುಷ್ಯತ್ವಕ್ಕೆ ಅತೀತವೆಂದು ತಿಳಿಯುತ್ತಿ ದ್ದರು. ಅವುಗಳ ಉಪಹಾಸಮಾಡುವವಕ್ಕೆ ಮಾತ್ರ ಆಗಾಗ ಅವುಗಳ ಚರ್ಚೆ ಮಾಡಲ್ಪಡುತ್ತಿತ್ತು. ಹಳ್ಳಿಯ ಜನರ ವಿಚಿತ್ರ ವೇಷಭೂಷಗಳನ್ನು ಅವರ ರೀತಿ ಪದ್ಧತಿಗಳನ್ನು ಚೇಷ್ಟೆಮಾಡಲು ಕೆಲವು ಸಂದರ್ಭದಲ್ಲಿ ವರ್ಣಿಸಿ ದ್ದುಂಟು. ಅಲ್ಲಲ್ಲಿ ಅವರ ಪಾತ್ರಗಳಿಗಾಗಿ ಉಪಯೋಗಿಸಿದ ಹರಕು ಮುರಕು ಭಾಷೆಯೆ ಇದಕ್ಕೆ ನಿದರ್ಶನವಾಗಿದೆ. ಅವರೂ ಮನುಷ್ಯರು, ಅವರಿಗೂ ಮನುಷ್ಯ ಹೃದಯ ಇದೆ ಎಂಬ ಮಾತು ಆಗಿನ ಕಲಾಕಾರರ ಕಲ್ಪನೆಗೆ ಬಂದಂತೆ ತೋರಲಿಲ್ಲ. ಸಂಕುಚಿತ ಸೌಂದರ್ಯ ಪೂಜೆಗೆ, ಒಂದು ವಿಶಿಷ್ಟ ಶಬ್ದ ಯೋಜನೆಗೆ, ಒಂದು ವಿಶಿಷ್ಟ ಭಾವ-ನಿಬಂಧನೆಗೆ ಕಲೆ ಎಂಬ ಹೆಸರು ಹಿಂದಿನಿಂದಲೂ ಬಂದಿದೆ, ಇಂದೂ ಕೂಡ ಇದೆ. ಈ ತರಹದ ಕಲೆಗೆ ಒಂದು ವಿಶಿಷ್ಟವಾದ ಆದರ್ಶವಿಲ್ಲ. ಜೀವನದ ಯಾವುದಾದರೂ ಉಚ್ಚತಮವಾದ ಉದ್ದೇಶ್ಯವೂ ಇಲ್ಲ. ಭಕ್ತಿ, ವೈರಾಗ್ಯ, ಪ್ರಪಂಚವ್ಯಾಪಿಯಾದ ನಿರಾಶಾ ಭಾವ ಇವೇ ಅವರ ಉಚ್ಚಮಟ್ಟದ ಕಲ್ಪನೆಗಳು. ನಮ್ಮ ಹಿಂದಿನ ಕಲಾವಿದರ ಜೀವನದ ಕೊನೆಯ ಉದ್ದೇಶ್ಯವೂ ಇದುವೇ ಆಗಿದ್ದಿತು. ಜೀವನ ಸಂಗ್ರಾಮ

ದಲ್ಲಿಯೆ ಸೌಂದರ್ಯದ ಉತ್ಕರ್ಷವನ್ನು ನೋಡುವಷ್ಟು ವ್ಯಾಪಕ ದೃಷ್ಟಿ ಅವರದಾಗಿರಲಿಲ್ಲ. ಉಪವಾಸ ಮತ್ತು ಹರಕು ಬಟ್ಟೆಗಳಲ್ಲಿಯೂ ನಗ್ನತೆಯಲ್ಲಿಯೂ ಕೂಡ ಸೌಂದರ್ಯದ ಅಸ್ತಿತ್ತ್ವವನ್ನು ಕಾಣಲು ಅವರೆಂದೂ ಒಪ್ಪಲಿಲ್ಲ. ಸುಂದರ ಸ್ತ್ರೀಯು ಅವರಿಗೆ ಸೌಂದರ್ಯ ಸಾಮುಗ್ರಿಯು. ಹೊಲದ ಬದುವಿನಲ್ಲಿ ಮಗುವನ್ನು ಮಲಗಿಸಿ ಬೆವರು ಸುರಿಯುವಂತೆ ದುಡಿಯುತ್ತಿರುವ ಸ್ತ್ರೀಯು ಹಿಂದಿನ ಕಲಾಕಾರರಿಗೆ ಸೌಂದರ್ಯ ಸಾಮುಗ್ರಿ ಆಗದೇ ಹೋದಳು. ಬಣ್ಣಗೊಟ್ಟ ತುಟಿಗಳಲ್ಲಿ, ಕೆನ್ನೆಗಳಲ್ಲಿ ರೂಪ-ಗರ್ವ ಮತ್ತು ನಿಷ್ಠುರತೆಯನ್ನು ಕಂಡರೇ ಹೊರತು ಕೆದರಿದ ಕೂದಲುಗಳಲ್ಲಿ, ಮುದುಡಿ ಮುದುಡಿಯಾದ ತುಟಿಗಳಲ್ಲಿ, ಬಾಡಿಹೋದ ಕಪೋಲಗಳಲ್ಲಿ ತ್ಯಾಗ, ಶ್ರದ್ಧೆ ಮತ್ತು ಕಷ್ಟ ಸಹಿಷ್ಣುತೆಯು ನೋಟವನ್ನು ಅವರೆಂದೂ ನೋಡಲಿಲ್ಲ.

ನಮ್ಮ ಕಲೆಯು ಯೌವನದ ಪ್ರೇಮದಲ್ಲಿ ಹುಚ್ಚವಾಗಿದೆ ಮತ್ತು ಯೌವನವು ಎದೆಯ ಮೇಲೆ ಕೈಯಿಟ್ಟುಕೊಂಡು ಕವಿತೆಯನ್ನು ಓದುವದಕ್ಕೆ, ನಾಯಿಕೆಯ ನಿಷ್ಠುರತೆಗಾಗಿ ಅಳುವುದಕ್ಕೆ, ಅಥವಾ ಆಕೆಯ ರೂಪ-ಗರ್ವ ಮತ್ತು ಹೆಮ್ಮೆ-ಕೋಪಗಳ ಬಗೆಗೆ ತಲೆತುರಿಸುತ್ತ ಕುಳ್ಳಿರುವದಕ್ಕೆ ಇಲ್ಲ. ಆದರ್ಶವಾದ, ಧೈರ್ಯ, ಕಠಿಣತೆಗಳನ್ನು ಎದುರಿಸುವ ಇಚ್ಛೆ, ಆತ್ಮತ್ಯಾಗ ಇವೆ ಮೊದಲಾದವುಗಳು ನಿಜವಾದ ಯೌವನದ ಲಕ್ಷಣಗಳು. ಈ ವಿಚಾರ ನಮ್ಮ ಮನಸ್ಸನ್ನಾವರಿಸುವುದು ನಮ್ಮಲ್ಲಿ ಸೌಂದರ್ಯದ ಕಲ್ಪನೆಯು ವ್ಯಾಪಕವಾದಾಗ ಮತ್ತು ಅದರ ವಿಸ್ತೃತಿ ಪ್ರಪಂಚದ ಪರಿಧಿಯನ್ನು ಮುಟ್ಟಿದಾಗ. ಒಂದು ವಿಶೇಷ ವರ್ಗಕ್ಕೆ ಮಾತ್ರ ಅದು ಪರಿಮಿತವಾಗಿರದೆ ಅದು ಭೂಮಂಡಲ ವಾಯುಮಂಡಲದಲ್ಲೆಲ್ಲ ಸಂಚರಿಸುವದು ಆಗಬೇಕು. ಹೀಗಾದಾಗ ನಾವು ಜಗತ್ತಿನಲ್ಲಿ ಕುತ್ಸಿತ ವಸ್ತುವನ್ನು ನೋಡಿದೊಡನೆ ಅದನ್ನು ದೂರೀಕರಿಸಲು ಪ್ರಯತ್ನಿಸುತ್ತೇವೆ. ಸಾವಿರಾರು ಜನರು ಕೆಲವೇ ಜನರ ದಾಸ್ಯದಲ್ಲಿರುವದನ್ನೂ ನೋಡಿ ನಾವು ಸಹಿಸುವದಿಲ್ಲ. ಆಗ ಕಾಗದಗಳ ಮೇಲೆ ವಾಕ್ಯಸೃಷ್ಟಿಯನ್ನು ಮಾತ್ರ ಮಾಡಿ ತೃಪ್ತರಾಗದೆ ಸೌಂದರ್ಯ, ಆತ್ಮಗೌರವ ಮತ್ತು ಮನುಷ್ಯತ್ವಕ್ಕೆ ಬಾಧೆ ಬರದಂತಹ ವಿಧಾನದ ಸೃಷ್ಟಿಯನ್ನು ಮಾಡತೊಡಗುವೆವು.

## ೧೧. ಸಾಹಿತಿಯ ಕರ್ತವ್ಯ.

ಸಭೆಯನ್ನಲಂಕರಿಸುವದು, ಮನೋರಂಜಕ ಸಾಮಗ್ರಿಗಳನ್ನು ಸಂಗ್ರಹಿಸುವುದು ಅಷ್ಟೇ ಸಾಹಿತಿಯ ಕೆಲಸವಲ್ಲ; ಇದರ ದರ್ಜೆಯನ್ನು ಇಷ್ಟು ಕೆಳಗಿಳಿಸಬೇಡಿರಿ. ಸಾಹಿತ್ಯದ ಉದ್ದೇಶ್ಯವು ದೇಶಭಕ್ತಿ ಮತ್ತು ರಾಜನೀತಿಯ ಹಿಂದೆ ಇರುವ ಸತ್ಯವನ್ನಲ್ಲ, ಅವುಗಳ ಮುಂದೆ ಹೋಗುವ ದಿವ್ಯ ಸತ್ಯವನ್ನು ತೋರಿಸುವುದಾಗಿದೆ ಸಮಾಜದಲ್ಲಿ ಸಾಹಿತಿಗಳಿಗೆ ಅರ್ಥಾತ್ ಭಾರತದ ಸಾಹಿತಿಗಳಿಗೆ ಯಾವದೂ ಸ್ಥಾನವಿರುವದಿಲ್ಲವೆಂಬುದರ ಬಗೆಗೆ ದೂರು ಇದೆ. ಇನ್ನುಳಿದ ಸಭ್ಯ ದೇಶಗಳಲ್ಲಿ ಸಾಹಿತಿಗಳು ಸಮಾಜದ ಸಮ್ಮಾನಿತ ಸದಸ್ಯರಾಗಿ, ದೊಡ್ಡ ಸಿರಿವಂತರಾಗಿ, ಮಂತ್ರಿಮಂಡಲದ ಸದಸ್ಯರಾಗಿ ಸಮ್ಮಾನಿಸಲ್ಪಡುವರು. ಆದರೆ ಹಿಂದುಸ್ತಾನವು ಮಾತ್ರ ಇದಕ್ಕೆ ಹೊರತಾಗಿ ಇರುವ ದೇಶ. ಇದಕ್ಕೆ ಮುಖ್ಯ ಕಾರಣ ಹಿಂದುಸ್ತಾನದ ಸಾಹಿತಿಗಳು ಸಿರಿವಂತರ ಯಾಚಕರಾಗಿ, ಸಮಾಜದಲ್ಲಿ ನಡೆಯುತಿರುವ ಚಳವಳಿ ಮತ್ತು ಕ್ರಾಂತಿಗಳಿಂದ ನಿರ್ಲಿಪ್ತರಾಗಿ ಇರುವದೆ ಆಗಿರುವದು. ಸಾಹಿತಿಗಳು ತಮ್ಮದೆ ಒಂದು ಜಗತ್ತನ್ನು ಕಲ್ಪಿಸಿಕೊಂಡು ಅದರಲ್ಲಿಯೆ ಅಳುತ್ತಲೊ, ನಗುತ್ತಲೊ ಅವರು ಇರುವರು ಹೀಗಿರುವಾಗ ಸಾಹಿತಿಗಳಿಗೆ ಸಮಾಜದಲ್ಲಿ ಸ್ಥಾನವಿರದೆ ಇರುವದು ಆಶ್ಚರ್ಯವೇನೂ ಅಲ್ಲ. ಒಬ್ಬ ಸಾಹಿತಿಯಾಗಲು ಅನುಕೂಲವಾದ ಒಂದು ಅಭಿರುಚಿಯು ಇದ್ದರೆ ಸಾಕು, ಮಹಾತ್ಮನಾಗಲು ಕೇವಲ ಆಧ್ಯಾತ್ಮಿಕತೆಯ ಆವಶ್ಯಕತೆಯು ಇರುವಂತೆ.

ಸಾಹಿತಿಯು ಹುಟ್ಟಿನಿಂದಲೇ ಸಾಹಿತಿಯಾಗಿರುವನು. ಕೇವಲ ಅಭ್ಯಾಸದ ಬಲದಿಂದ ಯಾವನೊಬ್ಬನೂ ಸಾಹಿತಿಯಾಗಲಾರನು. ಆದರೆ ಶಿಕ್ಷಣ ಮತ್ತು ಜಿಜ್ಞಾಸೆಗಳಿಂದ ಸ್ವೈದತ್ತವಾದ ಈ ದೇಣಿಗೆಯನ್ನೂ ವೃದ್ಧಿಗೊಳಿಸಿದರೆ ನಾವು ಸಾಹಿತ್ಯದ ಹೆಚ್ಚು ಸೇವೆ ಮಾಡಿದಂತಾಗುವದು ಅರಿಸ್ಟಾಟಲ್ ಮತ್ತು ಮತ್ತೆ ಬೇರೆ ವಿದ್ವಾಂಸರು ಸಾಹಿತಿಗಳ ಸಲುವಾಗಿ ಬಹಳ ಕಠಿಣತರವಾದ ಕರಾರುಗಳನ್ನು ಹಾಕಿಕೊಟ್ಟಿದ್ದಾರೆ. ಅವರ ಮಾನಸಿಕ, ನೈತಿಕ, ಆಧ್ಯಾತ್ಮಿಕ ಮತ್ತು ಭಾಗವತ ಸಭ್ಯತೆಯ ಸಲುವಾಗಿ ಶಿಕ್ಷಣದ ಸಿದ್ಧಾಂತಗಳನ್ನು ಮತ್ತು ವಿಧಾನಗಳನ್ನು ಬೇರೆಯಾಗಿಯೆ

ಏರ್ಪಡಿಸಿದ್ದಾರೆ. ಆದರೆ ಇತ್ತೀಚೆಗೆ ಹಿಂದೀಯಲ್ಲಿ ಸಾಹಿತ್ಯಕಾರರಾಗುವದಕ್ಕಾಗಿ ಕೇವಲ ಪ್ರವೃತ್ತಿ ಇದ್ದರೆ ಸಾಕು. ಅವನು ರಾಜನೀತಿಯನ್ನಾಗಲಿ, ಸಮಾಜ ಶಾಸ್ತ್ರವನ್ನಾಗಲಿ ಮನೋವಿಜ್ಞಾನ ಶಾಸ್ತ್ರವನ್ನಾಗಲಿ ಅರಿಯದವನು ಇದ್ದರೂ ಇಂದು ಸಾಹಿತಿಯಾಗುತ್ತಾನೆ.

ಇಂದಿನ ಸಾಹಿತಿಯ ಆದರ್ಶವು ಬೇರೆಯಾಗಿ ಇರಬೇಕಾಗಿದೆ. ಈತನಿಗೆ ಎಲ್ಲ ವಿದ್ಯೆಗಳೂ ಅಂಗಭೂತವಾಗಿ ನಿಂತುಕೊಂಡು ಒಂದು ವಿಷಯದಲ್ಲಿ ಪ್ರವೃತ್ತಿಯನ್ನು ಹುಟ್ಟಿಸಬೇಕು. ಇಂದಿನ ಸಾಹಿತ್ಯದ ಪ್ರವೃತ್ತಿಯು ಕೇವಲ ವೈಯಕ್ತಿಕ ಮಹತ್ವವನ್ನಷ್ಟೆ ಅವಲಂಬಿಸಿದೆ. ವ್ಯಕ್ತಿಯು ಸಮಾಜಕ್ಕಿಂತ ಭಿನ್ನವಾಗಿ ಇರಲಾರ. ವ್ಯಕ್ತಿಯು ಇಂದು ಸಮಾಜದ ಮೇಲೆ ಅಧಿಕಾರ ಸೂತ್ರವನ್ನು ನಡೆಯಿಸಲಾರ. ಸಮಾಜದ ಅಸ್ತಿತ್ವದೊಡನೆಯೆ ಅವನ ಅಸ್ತಿತ್ವವಿದೆ. ಸಮಾಜದಿಂದ ಬೇರೆಯಾದರೆ ಅವನ ಬೆಲೆಯು ಶೂನ್ಯ ಸಮಾನ.

## ೧೨. ಸಾಹಿತಿಯ ಹೊಣೆಗಾರಿಕೆ

ಯಾರಿಗೆ ಉತ್ತಮವಾದ ಶಿಕ್ಷಣ ಸಿಕ್ಕಿದೆಯೊ ಯಾರಿಗೆ ಸುಸಂಸ್ಕೃತವಾದ ಮಾನಸಿಕ ಶಕ್ತಿ ಇದೆಯೊ ಅವರ ಮೇಲೆ ಸಮಾಜದ ಬಗೆಗೆ ಹೊಣೆ ಬಹಳವಾಗಿ ಇರುವದು. ಈ ತೆರನಾದ ಮಾನಸಿಕ ಬಂಡವಾಳಗಾರನಿಗೆ ನಾವು ಗೌರವ ಸಲ್ಲಿಸದೆ ಹೋದರೆ ಸಮಾಜವೆ ಕುಸಿದು ಬೀಳಬಹುದು. ಯಾರು ಸಮಾಜದ ದ್ರವ್ಯದಿಂದ ಉಚ್ಚ ಶಿಕ್ಷಣವನ್ನು ಪಡೆದು ಅದನ್ನು ಕೇವಲ ತಮ್ಮ ಸ್ವಾರ್ಥದಲ್ಲಿ ತೊಡಗಿಸುತ್ತಾರೆಯೊ ಅವರು ನಿಜವಾಗಿಯೂ ಕೃತಘ್ನರು.

ತನ್ನ ಲಾಭಕ್ಕಿಂತಲೂ ಸಮಾಜದ ಲಾಭದ ವಿಷಯದಲ್ಲಿ ಹೆಚ್ಚು ಲಕ್ಷ್ಯ ಪೂರೈಸುವದು, ತನ್ನ ವಿದ್ಯೆ ಮತ್ತು ಯೋಗ್ಯತೆಗಳಿಂದ ತನ್ನ ಸಮಾಜಕ್ಕೆ ಅಧಿಕಾಧಿಕ ಲಾಭ ದೊರಕಿಸಿಕೊಡಲು ಪ್ರಯತ್ನಿಸುವದು ಮಾನಸಿಕ ಬಂಡವಾಳಗಾರನ ಕರ್ತವ್ಯವಾಗಿದೆ. ಸಾಹಿತಿಯಾದವನು ಯಾವದೇ ವಿಭಾಗದಲ್ಲಿ ಪ್ರವೇಶ ಮಾಡಿದರೂ ಸರಿಯೆ, ವಿಶೇಷವಾಗಿ ಆ ವಿಭಾಗದ ಮತ್ತು ಇತರ ವಿಭಾಗಗಳ ಸರ್ವತೋಮುಖವಾದ ಪರಿಚಯವನ್ನು ಆತನು ಪಡೆದಿರಬೇಕು.

ಬೇರೆ ಬೇರೆ ರಾಷ್ಟ್ರಗಳ ಸಾಹಿತ್ಯ ಸಮ್ಮೇಳನಗಳ ರಿಪೋರ್ಟುಗಳ ಕಡೆಗೆ ದೃಷ್ಟಿ ಹೊರಳಿಸಿದರೆ ನಮಗೆ ಸಾಹಿತಿಗಳು ಶಾಸ್ತ್ರೀಯ, ಸಾಮಾಜಿಕ, ಐತಿಹಾಸಿಕ ಮತ್ತು ಮನೋವೈಜ್ಞಾನಿಕವಾದ ಎಲ್ಲ ಸಮಸ್ಯೆಗಳ ವಿಚಾರ-ವಿನಿಮಯ ಮಾಡಿದುದು ಕಾಣುವದು. ಆದರೆ ನಮ್ಮಲ್ಲಿಯ ಸಾಹಿತಿಗಳ ಜ್ಞಾನಸೀಮೆಯನ್ನವಲೋಕಿಸಿದರೆ ನಮಗೆ ನಾಚಿಕೆಯಾಗುವದು. ಆಶುಬುದ್ಧಿ ಮತ್ತು ಓಡುತ್ತಿರುವ ಲೇಖನಿಗಳು ಮಾತ್ರ ನಮ್ಮ ಸಾಹಿತ್ಯದ ರಚನೆಗೆ ಸಾಕೆಂದು ನಾವು ತಿಳಿದಿದ್ದೇವೆ. ಆದರೆ ಈ ವಿಚಾರಗಳೇ ನಿಜವಾಗಿಯೂ ನಮ್ಮ ಸಾಹಿತ್ಯದ ಅವನತಿಗೆ ಕಾರಣ. ನಾವು ನಮ್ಮ ಸಾಹಿತ್ಯದ ಅಳತೆ-ಗೋಲನ್ನು ಉಚ್ಚತರಗತಿಯದನ್ನಾಗಿ ಮಾಡುವದರಿಂದ ಮಾತ್ರ ಬಹು ಮೂಲ್ಯ ಸಮಾಜಸೇವೆಯು ಸಾಧ್ಯ. ಅವನಿರುವ ಸಮಾಜದಲ್ಲಿ ಅವನಿಗೆ ತಕ್ಕುದಾದ ಸ್ಥಳವು ದೊರೆಯಬೇಕು ಮತ್ತು ಅವರಿಗೆ ಜೀವನದ ಪ್ರತಿಯೊಂದು ಭಾಗದ ಸಮಾಲೋಚನೆ—ವಿವೇಚನೆ ಮಾಡಲು ಅವಕಾಶವು ದೊರೆಯಬೇಕು. ಬೇರೆ ಭಾಷೆಗಳ ಮತ್ತು ಸಾಹಿತ್ಯಗಳ ಎಂಜಲವನ್ನು ಭುಂಜಿಸಿ ಅಷ್ಟರಿಂದಲೆ ತೃಪ್ತರಾಗಿರಕೂಡದು, ನಮ್ಮ ಸ್ವಂತ ಬಂಡವಾಳ-ವನ್ನು ನಾವು ಬೆಳೆಯಿಸಬೇಕು.

ನಾವು ನಮ್ಮ ಅಭಿರುಚಿ ಮತ್ತು ಪ್ರವೃತ್ತಿಗೆ ತಕ್ಕಂತೆ ವಿಷಯವನ್ನು ಆರಿಸಿಕೊಳ್ಳಬೇಕು ಮತ್ತು ಆರಿಸಿದ ವಿಷಯದಲ್ಲಿ ಪರಿಪೂರ್ಣವಾದ ಅಧಿಕಾರ ಗಳಿಸತಕ್ಕದ್ದು. ಆರ್ಥಿಕ ಮುಗ್ಗಟ್ಟಿಗೆ ಒಳಗಾದ ಇಂದಿನ ನಮ್ಮ ಜೀವನದಲ್ಲಿ ಇದು ಬಹಳ ಕಠಿಣವಾದ ಕೆಲಸವೇನೊ ನಿಜ, ಆದರೆ ಯಾವಾಗಲೂ ನಮ್ಮ ಆದರ್ಶ ಉಚ್ಚವಾದದ್ದಿರಬೇಕು. ನಾವು ಪರ್ವತದ ಶಿಖರದ ವರೆಗೆ ಮುಟ್ಟಲು ಸಮರ್ಥರಾಗದೆ ಹೋದರೂ ಪ್ರಯತ್ನ ಮಾಡಿದರೆ ಮಧ್ಯದ ವರೆಗಾದರೂ ಹೋಗಬಹುದಲ್ಲವೆ? ಇದು ಕೆಳಗೆ ಬಿದ್ದಿರುವುದಕ್ಕಿಂತ ಉತ್ತಮವಲ್ಲವೆ? ನಮ್ಮ ಅಂತರಾಳವು ಪ್ರೇಮದ ಜ್ಯೋತಿಯಿಂದ ಬೆಳಗದರೆ, ಸೇವೆಯ ಆದರ್ಶ ನಮ್ಮ ಕಣ್ಣೆದುರು ಸ್ಥಿರವಾದರೆ ನಮಗೆ ಯಾವುದೂ ಅಸಾಧ್ಯವೆನಿಸಲಾರದು.

ಧನದ ಲೋಭ ಹೆಚ್ಚಾಗಿದ್ದವನಿಗೆ ಸಾಹಿತ್ಯ–ಮಂದಿರದಲ್ಲಿ ಸ್ಥಾನವಿಲ್ಲ. ಸಾಹಿತ್ಯಮಂದಿರದಲ್ಲಿ ಯಾರು ಸೇವೆಯಲ್ಲಿಯೆ ತಮ್ಮ ಜೀವನದ ಸಾರ್ಥಕತೆ-

ಯನ್ನು ತಿಳಿದಿರುವರೊ, ಯಾರ ಮನಸ್ಸಿನಲ್ಲಿ ನೋವಿನ ಅರಿವು ಮತ್ತು ಪ್ರೇಮದ ಹುರುಪು ಉಂಟೊ ಅಂಥ ಉಪಾಸಕರ ಆವಶ್ಯಕತೆಯೆ ಇಂದು ಇರುವುದು. ನಮ್ಮ ಸ್ಥಾನಮಾನಗಳು ನಮ್ಮ ಕೈಯಲ್ಲಿ ಇವೆ. ನಿಜವಾದ ಮನಸ್ಸಿನಿಂದ ನಾವು ಸಮಾಜದ ಸೇವೆ ಮಾಡಿದರೆ ಸನ್ಮಾನ, ಪ್ರತಿಷ್ಠೆ, ಪ್ರಸಿದ್ಧಿ ಎಲ್ಲವೂ ನಮ್ಮನ್ನು ಅರಸುತ್ತ ತಾವೇ ನಮ್ಮ ಚರಣಗಳ ಬಳಿಗೆ ಬರುವವು. ಇಷ್ಟಾದ ಮೇಲೆ ನಾವು ಮಾನ-ಪ್ರತಿಷ್ಠೆಗೆ ಚಿಂತಿಸುವುದೇಕೆ? ಅದು ಸಿಗದಿದ್ದರೆ ನಾವು ಅದೇಕೆ ನಿರಾಶರಾಗಬೇಕು? ಸೇವೆಯಿಂದ ದೊರಕುವ ಆಧ್ಯಾತ್ಮಿಕ ಆನಂದವೇ ನಮಗೆ ನಮ್ಮ ಪ್ರಯತ್ನದ ಪುರಸ್ಕಾರ. ಸಮಾಜದ ಮೇಲೆ ನಮ್ಮ ದೊಡ್ಡಿಸ್ತಿಕೆಯನ್ನು ಹೇರಲು, ದರ್ಪವನ್ನು ಬೀರಲು ನಾವೇಕೆ ಪ್ರಯತ್ನಿಸಬೇಕು? ಸಿರಿವಂತರ ಶ್ರೇಣಿಯಲ್ಲಿ ನಮ್ಮ ಎಣಿಕೆ ಇಲ್ಲವೆಂದು ನಾವೇಕೆ ನೊಂದುಕೊಳ್ಳಬೇಕು? ನಾವು ಸಮಾಜದ ಧ್ವಜವನ್ನು ಕೈಯಲ್ಲಿ ಹಿಡಿದು ಹೊರಟಿರುವ ಸ್ವಯಂಸೇವಕರು ಮತ್ತು ಸಾದಾ ಜೀವನದ ಜೊತೆಗೆ ಉಚ್ಚವಾದ ದೃಷ್ಟಿಯೇ ನಮ್ಮ ಜೀವನದ ಗುರಿ. ನಿಜವಾದ ಕಲಾಕಾರನು ಸ್ವಾರ್ಥಮಯ ಜೀವನವನ್ನು ಪ್ರೀತಿಸಲಾರ. ಅವನ ಮನಸ್ಸಿನ ಸಂತೋಷಕ್ಕೆ ತೋರಿಕೆಯು ಬೇಕಾಗಿಲ್ಲ—ಅದನ್ನು ಅವನು ತಿರಸ್ಕಾರದಿಂದ ಕಾಣುತ್ತಾನೆ.

ಯಾವ ಸಾಹಿತಿಯು ಸಿರಿವಂತರ ಸುಖಸಂತೋಷಗಳನ್ನೇ ಕಲ್ಪಿಸ ಬೇಕಾಗಿದೆಯೊ ಅಂಥವನ ರಚನಾ ಶೈಲಿಯೆ ಬೇರೆಯಾಗುವದು, ಯಾವನು ಸಾಮಾನ್ಯ ಜನತೆಯು ಬಗೆಗೆ ಬರೆಯುವನೋ ಅವನ ಶೈಲಿಯು ಸಾಮಾನ್ಯ ಜನರ ಭಾಷೆಯಲ್ಲಿ ಹೊರಹೊಮ್ಮುವದು. ಉಚ್ಚಮಟ್ಟದ ಸಾಹಿತ್ಯವು ತಯಾರಾಗುವಂತೆ ಮತ್ತು ಅಂಕುರಿಸುವಂತೆ ವಾಯುಮಂಡಲವನ್ನು ಸಿದ್ಧ-ಗೊಳಿಸುವುದೇ ನಮ್ಮ ಉದ್ದೇಶವಾಗಬೇಕು. ಇತ್ತೀಚಿಗೆ ನಮ್ಮ ಸಾಹಿತಿ ಗಳಲ್ಲಿ ಕರ್ಮ-ಶಕ್ತಿಯ ಅಭಾವವೇ ಕಂಡುಬರುವದು. ಇದೊಂದು ಇಂದು ನಮಗೆ ಕಟುತರ ಸತ್ಯವಾಗಿದೆ. ಇದುವರೆಗೆ ನಾವು ಕಲ್ಪಿಸಿದ ಸಾಹಿತ್ಯದ ಆದರ್ಶಕ್ಕೆ ಕರ್ಮ-ಶಕ್ತಿಯ ಆವಶ್ಯಕತೆಯು ಅಷ್ಟೊಂದು ಕಂಡು ಬಂದಿದ್ದಿಲ್ಲ. ಯಾಕಂದರೆ ಅದರ ಉದ್ದೇಶ್ಯವೆ ಬೇರೆಯಾಗಿದ್ದಿತು.

## ೧೩. ಇಂದಿನ ಸಾಹಿತ್ಯದ ಗುರಿ

ಏನೆ ಇರಲಿ, ಕೇವಲ ಮನೋರಂಜಕ ಸಾಮುಗ್ರಿಗಳ ಸಂಪಾದನೆ, ಜೋಗುಳ ಹಾಡಿ ಮಲಗಿಸುವದು, ಕೇವಲ ಕಣ್ಣೀರನ್ನು ಸುರಿಸಿ ಮನಸ್ಸು ಹಗುರುಮಾಡಿಕೊಳ್ಳುವದು ಇವೇ ಸಾಹಿತ್ಯದ ಲಕ್ಷ್ಯವಾಗಿರುವ ತನಕ ಕರ್ಮ ಶಕ್ತಿಯ ಆವಶ್ಯಕತೆ ಸಾಹಿತ್ಯಕ್ಕೆ ಇದ್ದಿರಲಿಲ್ಲ. ಆದರೆ ಇಂದು ನಾವು ಸಾಹಿತ್ಯವು ಕೇವಲ ಮನೋರಂಜನೆಯ ಸಾಮುಗ್ರಿಯೆಂದೂ ಮತ್ತು ಭೋಗ ವಿಲಾಸದ ವಸ್ತುವೆಂದೂ ತಿಳಿಯುವದಿಲ್ಲ. ಉಚ್ಚತಮವಾದ ವಿಚಾರಗಳಿರುವ, ಸ್ವತಂತ್ರತೆಯ ಭಾವವಿರುವ, ಸೌಂದರ್ಯದ ಸಾರವಿರುವ, ಸೃಜನದ ಸತ್ಯತೆಗಳ ಪ್ರಕಾಶವಿರುವ, ಮತ್ತು ನಮ್ಮಲ್ಲಿ ಗತಿ, ಸಂಘರ್ಷ, ಚಟುವಟಿಕೆಯನ್ನು ಹಬ್ಬಿಸುವ, ಹಾಗು ಎಚ್ಚರಗೊಳಿಸುವ ಸಾಹಿತ್ಯವೇ ನಿಜವಾದ ಸಾಹಿತ್ಯ.

—ಕೆ. ಟಿ. ಜೋಶಿ

# ಕಥೆಯ ಕಲೆ



ಇತಿಹಾಸದಲ್ಲಿ ಎಲ್ಲವೂ ಯಥಾರ್ಥವಾಗಿದ್ದರೂ ಅಸತ್ಯವಿದೆಯೆಂದೂ ಕಥಾ-ಸಾಹಿತ್ಯದಲ್ಲಿ ಎಲ್ಲವೂ ಕಾಲ್ಪನಿಕವಿದ್ದರೂ ಸತ್ಯವಿದೆಯೆಂದೂ ಒರ್ವ ವಿಮರ್ಶಕರು ಬರೆದಿದ್ದಾರೆ.

ಇತಿಹಾಸವು ಮೊದಲಿನಿಂದ ಕೊನೆಯ ವರೆಗೆ ಕೊಲೆ, ಕದನ ಹಾಗು ಮೋಸದ ಪ್ರದರ್ಶನವಾಗಿದೆಯಾದ್ದರಿಂದ ಅಸುಂದರವಾಗಿದೆ ಎಂಬುದು ಈ ಹೇಳಿಕೆಯ ಆಶಯವಲ್ಲದೆ ಮತ್ತೇನು ? ಲೋಭದ ಅತ್ಯಂತ ಕ್ರೂರ, ಅಹಂಕಾರದ ಅತ್ಯಂತ ನೀಚ, ಹೊಟ್ಟೆಕಿಚ್ಚಿನ ಅತ್ಯಂತ ಅಧಮ ಸಂಗತಿಗಳು ಅಲ್ಲಿ ತಮಗೆ ನೋಡಲು ದೊರೆಯುವವು ಮತ್ತು ತಾವು ವಿಚಾರಮಾಡ ತೊಡಗುವಿರಿ—'ಮನುಷ್ಯನು ಇಷ್ಟು ಅಮಾನುಷನೇ! ಅಲ್ಲಿ ಸ್ವಾರ್ಥಕ್ಕಾಗಿ ಸಹೋದರನು ಸಹೋದರನ ಕತ್ತನ್ನು ಕೊಯ್ದುಬಿಡುತ್ತಾನೆ ಮತ್ತು ಅರಸನು ಅಸಂಖ್ಯ ಪ್ರಜರ ಕೊಲೆಯನ್ನು ಮಾಡಿಬಿಡುತ್ತಾನೆ!' ಎಂದು. ಅದನ್ನು ಓದಿದಾಗ ಮನದಲ್ಲಿ ಗ್ಲಾನಿಯುಂಟಾಗುತ್ತದೆ, ಆನಂದವಾಗುವದಿಲ್ಲ. ಆನಂದವನ್ನು ಕೊಡಲಾರದ ವಸ್ತುವು ಸುಂದರವಾಗಲಾರದು, ಮತ್ತು ಸುಂದರವಾಗಲಾರದುದು ಸತ್ಯವೂ ಆಗಲಾರದು. ಆನಂದವಿದ್ದಲ್ಲಿಯೇ ಸತ್ಯದ ಅಸ್ತಿತ್ವ. ಸಾಹಿತ್ಯವು ಕಾಲ್ಪನಿಕ ವಸ್ತು, ಆದರೆ ಅದರ ಮುಖ್ಯ ಗುಣವು ಆನಂದವನ್ನು ದಾನಮಾಡುವುದಾಗಿದೆ, ಆದ್ದರಿಂದಲೇ ಅದು ಸತ್ಯವಾದುದು.

ಮನುಷ್ಯನು ಜಗತ್ತಿನಲ್ಲಿ ಯಾವ ಸತ್ಯ ಮತ್ತು ಸೌಂದರ್ಯವನ್ನು ಹೊಂದಿದ್ದಾನೋ, ಹೊಂದುತ್ತಿದ್ದಾನೋ ಅದಕ್ಕೆ ಸಾಹಿತ್ಯವೆಂದು ಹೇಳುತ್ತಾರೆ ಮತ್ತು ಕಥೆಯೂ ಸಾಹಿತ್ಯದ ಒಂದು ಭಾಗವಾಗಿದೆ.

ಮನುಷ್ಯಜಾತಿಗೆ ಮನುಷ್ಯನೇ ಅತ್ಯಂತ ಜಟಿಲ-ಕಠಿಣ ಒಗಟವಾಗಿದ್ದಾನೆ. ಅವನಿಗೇ ಅವನ ಅರಿವಾಗುವದಿಲ್ಲ. ಒಂದಿಲ್ಲೊಂದು ರೂಪದಲ್ಲಿ

ಅವನು ತನ್ನದೇ ವಿಮರ್ಶೆಯನ್ನು ಮಾಡುತ್ತಿರುತ್ತಾನೆ—ತನ್ನದೇ ಮನೋರಹಸ್ಯವನ್ನು ಹೊರಗೆಡಹುತ್ತಿರುತ್ತಾನೆ. ಮನುಷ್ಯನು ತನ್ನನ್ನು ತಾನು ಅರಿಯಬೇಕೆಂದೇ ಮಾನವ ಸಂಸ್ಕೃತಿಯ ವಿಕಾಸವಾಗಿದೆ. ಅಧ್ಯಾತ್ಮ ಮತ್ತು ತತ್ತ್ವಜ್ಞಾನದಂತೆ ಸಾಹಿತ್ಯವೂ ಇದೇ ಸತ್ಯದ ಶೋಧನೆಯಲ್ಲಿ ತೊಡಗಿದೆ ಆದರೆ ಅಂತರವಿಷ್ಟೇ—ಅವನು ಈ ಕಾರ್ಯದಲ್ಲಿ, ಈ ಉದ್ಯೋಗದಲ್ಲಿ ರಸವನ್ನು ಬೆರಸಿ ಅದನ್ನು ಆನಂದದಾಯಕವನ್ನಾಗಿ ಮಾಡುತ್ತಾನೆ. ಆದ್ದರಿಂದಲೇ ಅಧ್ಯಾತ್ಮವು ಮತ್ತು ತತ್ತ್ವಜ್ಞಾನವು ಕೇವಲ ಜ್ಞಾನಿಗಳಿಗಾಗಿ ಇವೆ., ಸಾಹಿತ್ಯವು ಸಮಸ್ತ ಮಾನವಕುಲಕ್ಕಾಗಿ ಇದೆ.

ನಾವು ಮೇಲೆ ಹೇಳಿದಂತೆ ಕಥೆಯು ಅಥವಾ ಆಖ್ಯಾಯಿಕೆಯು ಸಾಹಿತ್ಯದ ಒಂದು ಮುಖ್ಯ ಅಂಗವಾಗಿದೆ, ಇಂದಿನಿಂದಲ್ಲ, ಆದಿಕಾಲದಿಂದಲೇ. ಹಾಂ, ಇಂದಿನ ಆಖ್ಯಾಯಿಕೆ ಮತ್ತು ಪ್ರಾಚೀನ ಕಾಲದ ಆಖ್ಯಾಯಿಕೆಯಲ್ಲಿ ಸಮಯದ ಗತಿ ಮತ್ತು ರುಚಿಯ ಪರಿವರ್ತನದಿಂದ ಹೆಚ್ಚು-ಕಡಿಮೆಯಾಗಿ ಅಂತರವುಂಟಾಗಿದೆ. ಪ್ರಾಚೀನ ಆಖ್ಯಾಯಿಕೆಯು ಕುತೂಹಲ-ಪ್ರಧಾನವಾಗಿತ್ತು ಇಲ್ಲವೆ ಆಧ್ಯಾತ್ಮ-ವಿಷಯಕವಾಗಿತ್ತು. ಉಪನಿಷತ್ತು ಮತ್ತು ಮಹಾಭಾರತದಲ್ಲಿ ಆಧ್ಯಾತ್ಮಿಕ ರಹಸ್ಯಗಳನ್ನು ತಿಳಿಸುವುದಕ್ಕಾಗಿ ಆಖ್ಯಾಯಿಕೆಗಳ ಆಶ್ರಯವನ್ನು ಪಡೆಯಲಾಗಿದೆ. ಬೌದ್ಧ-ಜಾತಕಗಳೂ ಆಖ್ಯಾಯಿಕೆಗಳಲ್ಲದೆ ಮತ್ತೇನು ಇವೆ? ಬಾಯಬಲ್‌ದಲ್ಲಿಯೂ ದೃಷ್ಟಾಂತಗಳ ಹಾಗು ಆಖ್ಯಾಯಿಕೆಗಳ ಮುಖಾಂತರವಾಗಿಯೇ ಧರ್ಮದ ತತ್ತ್ವಗಳನ್ನು ತಿಳಿಸಿಕೊಡಲಾಗಿದೆ.—ಸತ್ಯವು ಈ ರೂಪದಲ್ಲಿ ಬಂದು ಸಾಕಾರವಾಗುತ್ತದೆ ಮತ್ತು ಆಗಲೇ ಜನತೆಯು ಅದನ್ನು ತಿಳಿದುಕೊಳ್ಳುತ್ತದೆ ಹಾಗೂ ಅದನ್ನು ವ್ಯವಹಾರದಲ್ಲಿ ತರುತ್ತದೆ.

ಇಂದಿನ ಆಖ್ಯಾಯಿಕೆಯು ಮನೋವೈಜ್ಞಾನಿಕ ವಿಶ್ಲೇಷಣವೂ ಜೀವನದ ಯಥಾರ್ಥ ಹಾಗೂ ಸ್ವಾಭಾವಿಕ ಚಿತ್ರಣವೂ ತನ್ನ ಧ್ಯೇಯವೆಂದು ತಿಳಿಯುತ್ತದೆ. ಅದರಲ್ಲಿ ಕಲ್ಪನೆಯ ಮಾತ್ರೆಯು ಕಡಮೆ ಮತ್ತು ಅನುಭೂತಿಯ—ಅನುಭವಗಳ ಮಾತ್ರೆಯು ಹೆಚ್ಚು ಇರುತ್ತದೆ. ಇಷ್ಟೇ ಅಲ್ಲ, ಆದರೆ ಅನುಭೂತಿಗಳೇ-ಅನುಭವಗಳೇ ರಚನಾತ್ಮಕ ಭಾವನೆಯಿಂದ ಅನುರಂಜಿತವಾಗಿ ಕಥೆಗಳಾಗಿ ಬಿಡುತ್ತವೆ.

ಆದರೆ ಕಥೆಯು ಜೀವನದ ಯಥಾರ್ಥ ಚಿತ್ರವೆಂದು ತಿಳಿಯುವದು ತಪ್ಪಾದೀತು. ಯಥಾರ್ಥ ಜೀವನದ ಚಿತ್ರವಂತೂ ಮನುಷ್ಯನೇ ಸ್ವತಃ ಆಗಬಲ್ಲನು, ಆದರೆ ಕಥೆಯ ಪಾತ್ರಗಳ ಸುಖ-ದುಃಖದಿಂದ ನಾವು ಪ್ರಭಾವಿತ ವಾಗುವಷ್ಟು ಯಥಾರ್ಥ ಜೀವನದಿಂದಾಗುವದಿಲ್ಲ— ಅದು ಜೀವನದ ಪರಿಧಿ ಯಲ್ಲಿ ಬರದಿರುವ ವರೆಗೆ. ಕಥೆಗಳ ಪಾತ್ರಗಳೊಡನೆ ಒಂದೆರಡು ನಿಮಿಷಗಳ ಪರಿಚಯದಿಂದ ಆತ್ಮೀಯತೆಯುಂಟಾಗುತ್ತದೆ ಮತ್ತು ನಾವು ಅವುಗಳೊಡನೆ ನಗತೊಡಗುತ್ತೇವೆ, ಅಳಲಾರಂಭಿಸುತ್ತೇವೆ. ಅವುಗಳ ಹರ್ಷ-ವಿಷಾದಗಳೇ ನಮ್ಮ ಹರ್ಷ ವಿಷಾದಗಳಾಗುತ್ತವೆ. ಇಷ್ಟೇ ಅಲ್ಲ, ಸಾಧಾರಣವಾಗಿ ಸುಖ-ದುಃಖಗಳ ಪರಿಣಾಮವಾಗದಂತಹ ಜನರೂ ಕಥೆಯನ್ನು ಓದಿ ನಗುವುದನ್ನು ಅಳುವುದನ್ನೂ ನೋಡುತ್ತೇವೆ. ಸ್ಮಶಾನದಲ್ಲಿ ಅಥವಾ ಸಮಾಧಿ-ಗೋರಿ-ಸ್ಥಾನದಲ್ಲಿಯೂ ಕಣ್ಣು ಒದ್ದೆಯಾಗದ ಜನರೂ ಕಾದಂಬರಿಯ ಮರ್ಮ-ಸ್ಪರ್ಶದ ಸ್ಥಳಗಳನ್ನು ತಲ್ಪಿದಾಗ ಕಂಬನಿಗರೆಯ ತೊಡಗುತ್ತಾರೆ.

ಬಹುಶಃ ಸ್ಥೂಲ ಪ್ರಾಣಿಗಳು ಕಥೆಯ ಸೂಕ್ಷ್ಮ ಚರಿತ್ರದ ಸನಿಹದ ವರೆಗೆ ತಲ್ಪುವಷ್ಟು ಸೂಕ್ಷ್ಮಮನದ ಸನಿಹದ ವರೆಗೆ ತಲ್ಪಲಾರರು ಎಂಬುದು ಇದಕ್ಕೆ ಕಾರಣವಾಗಿರಬಹುದು. ಒಬ್ಬ ಮನುಷ್ಯನ ಹೃದಯವನ್ನು ಎರಡನೆಯ ಮನುಷ್ಯನ ಹೃದಯದಿಂದ ದೂರವಿಡುವ ಜಡತ್ವದ ಪರದೆಯು ಕಥೆಯ ಚರಿತ್ರಗಳ-ಪಾತ್ರಗಳ ಮತ್ತು ಮನದ ನಡುವೆ ಇರುವುದಿಲ್ಲ ಮತ್ತು ಒಂದು ವೇಳೆ ನಾವು ಯಥಾರ್ಥವನ್ನು ಇದ್ದಕ್ಕಿದ್ದ ಹಾಗೆಯೇ ಚಿತ್ರಿಸಿ ಬಿಟ್ಟರೆ ಆದರಲ್ಲಿ ಕಲೆಯು ಎಲ್ಲಿ? ಕಲೆಯು ಕೇವಲ ಯಥಾರ್ಥದ ನಕಲಿನ ಹೆಸರು ಇರುವುದಿಲ್ಲ.

ಕಲೆಯೋ ಯಥಾರ್ಥವಾಗಿ ಕಾಣುತ್ತದೆ; ಆದರೆ ಯಥಾರ್ಥವಾಗಿರುವು ದಿಲ್ಲ. ಅದು ಯಥಾರ್ಥವಾಗಿರದಿದ್ದರೂ ಯಥಾರ್ಥದಂತೆ ಕಾಣುವದೇ ಅದರ ವೈಶಿಷ್ಟ್ಯ. ಅದರ ಅಳತೆಗೋಲೂ ಜೀವನದ ಅಳತೆಗೋಲಿಗಿಂತ ಬೇರೆ ಯಾಗಿದೆ. ಜೀವನದಲ್ಲಿ ಬಹುತರವಾಗಿ ನಮ್ಮ ಕೊನೆಯು ಅದು ಬೇಡಾದಾಗ ಆಗುತ್ತದೆ. ಜೀವನವು ಯಾರಿಂದಲೂ ಕೊಡಲ್ಪಡುವಂತಹದಲ್ಲ, ಅದರ ಸುಖ-ದುಃಖ, ಹಾನಿ-ಲಾಭ, ಜೀವನ-ಮರಣದಲ್ಲಿ ಯಾವ ಕ್ರಮವೂ—

ಯಾವ ಸಂಬಂಧವೂ ಗೊತ್ತಾಗುವುದಿಲ್ಲ—ಕನಿಷ್ಟಪಕ್ಷಕ್ಕೆ ಅದು ಮನುಷ್ಯನಿಗೆ ಅಜ್ಞೇಯವಾಗಿದೆ. ಆದರೆ ಕಥಾ ಸಾಹಿತ್ಯವು ಮನುಷ್ಯನಿಂದ ರಚಿತವಾದುದು ಮತ್ತು ಪರಿಮಿತಿಯುಳ್ಳುದು ಆಗಿರುವುದರಿಂದ ಸಂಪೂರ್ಣವಾಗಿ ನಮ್ಮ ಎದುರಿಗೆ ಬರುತ್ತದೆ, ಮತ್ತು ಅದು ನಮ್ಮ ಮಾನವೀ ನ್ಯಾಯಬುದ್ಧಿಯನ್ನು ಅಥವಾ ಅನುಭೂತಿಯನ್ನು ಉಲ್ಲಂಘಿಸಿದಲ್ಲಿ ನಾವು ಅದಕ್ಕೆ ದಂಡಿಸಲು ಸಿದ್ಧರಾಗುತ್ತೇವೆ. ಕಥೆಯಲ್ಲಿ ಯಾರಿಗಾದರೂ ಸುಖವುಂಟಾಗುತ್ತಿದ್ದಲ್ಲಿ ಅದರ ಕಾರಣವನ್ನು ಹೇಳಬೇಕಾಗುವುದು, ದುಃಖವುಂಟಾಗುತ್ತಿದ್ದರೆ ಅದರ ಕಾರಣವನ್ನೂ ಹೇಳಬೇಕಾಗುವುದು. ಮಾನವನ ನ್ಯಾಯ-ಬುದ್ಧಿಯು ಅದರ ಸಾವನ್ನು ಬೇಡದಿರುವ ತನಕ ಇಲ್ಲಿ ಯಾವ ಚರಿತ್ರವೂ ಸಾಯುವುದಿಲ್ಲ ರಚಿಸಿದವನು ಜನತೆಯ ನ್ಯಾಯಾಲಯದಲ್ಲಿ ತನ್ನ ಪ್ರತಿಯೊಂದು ಕೃತಿಯ ಬಗೆಗೆ—ರಚನೆಯ ಬಗೆಗೆ ಉತ್ತರವನ್ನು ಕೊಡಬೇಕಾಗುವುದು. ಕಲೆಯ ರಹಸ್ಯವೇ ಭ್ರಾಂತಿ, ಆದರೆ ಅದು ಯಥಾರ್ಥದ ಆವರಣವಿದ್ದ ಭ್ರಾಂತಿ-ಯಾಗಿದೆ.

ಕಾದಂಬರಿಗಳಂತೆಯೇ ಆಖ್ಯಾಯಿಕೆಯ ಕಲೆಯನ್ನು ನಾವು ಪಶ್ಚಿಮ-ದಿಂದ ತೆಗೆದುಕೊಂಡಿದ್ದೇವೆ—ಕನಿಷ್ಟಪಕ್ಷ, ಇದರ ಇಂದಿನ ವಿಕಸಿತ ರೂಪವಂತೂ ಪಶ್ಚಿಮದ್ದೇ ಇದೆ ಎಂಬುದನ್ನು ನಾವು ಒಪ್ಪಲು ಸಂಕೋಚಪಡಬಾರದು. ಅನೇಕ ಕಾರಣಗಳಿಂದಾಗಿ ಜೀವನದ ಇತರ ಪ್ರವಾಹಗಳಂತೆಯೇ ಸಾಹಿತ್ಯದಲ್ಲಿಯೂ ನಮ್ಮ ಪ್ರಗತಿಯು ನಿಂತುಹೋಯಿತು ಮತ್ತು ನಾವು ಪ್ರಾಚೀನದಿಂದ ತಿಲಮಾತ್ರವೂ ಅತ್ತ ಇತ್ತ ಸರಿಯುವುದು ನಿಷಿದ್ಧವೆಂದು ತಿಳಿಯುವೆವು. ಪ್ರಾಚೀನರು ಸಾಹಿತ್ಯಕ್ಕೆ ಹಾಕಿದ ಬಂಧನಗಳನ್ನು ಮೀರುವುದು ವರ್ಜಿತವಾಗಿತ್ತು, ಆದ್ದರಿಂದ ಕಾವ್ಯ, ನಾಟಕ, ಕಥೆ—ಯಾವುದರಲ್ಲಿಯೂ ಮುಂದೆ ಹೆಜ್ಜೆಯನ್ನಿಕ್ಕಲು ಅಸಮರ್ಥರಾದೆವು. ಯಾವುದೇ ವಸ್ತುವು ಬಹಳ ಸುಂದರವಾಗಿದ್ದರೂ ಅದರಲ್ಲಿ ನಾವೀನ್ಯವನ್ನು ತರದ ವರೆಗೆ ಅದು ಅರುಚಿಕರವಾಗುತ್ತದೆ. ಒಂದೇ ತರದ ನಾಟಕ, ಒಂದೇ ತರದ ಕಾವ್ಯವನ್ನು ಓದುತ್ತ ಓದುತ್ತ ಮನುಷ್ಯನು ಬೇಸರಿಯುತ್ತಾನೆ ಮತ್ತು ಅವನು ಅಷ್ಟೊಂದು ಸುಂದರವೂ ಉತ್ತಮವೂ ಆಗಿರದಿದ್ದರೂ ಒಂದು ಹೊಸ ವಸ್ತುವನ್ನು ಬಯಸುತ್ತಾನೆ. ನಮ್ಮಲ್ಲಿ ಈ ಇಚ್ಛೆಯು ಉತ್ಪನ್ನವಾಗಲಿಲ್ಲವೆಂದೂ ಅಥವಾ

ಅದು ಜಡಿಭೂತವಾಗುವಷ್ಟು ನಾವು ಅದನ್ನು ಹತ್ತಿಕ್ಕಿದೆವೆಂದೂ ಹೇಳ ಬಹುದು. ಪಶ್ಚಿಮವು ಮಾತ್ರ ಪ್ರಗತಿಯನ್ನು ಮಾಡುತ್ತಿತ್ತು—ಅದಕ್ಕೆ ನಾವೀನ್ಯವನ್ನು ತರುವ ಹಸಿವು ಇತ್ತು. ಸೀಮಾಬಂಧನಗಳು ಅಸಹ್ಯ ವಾಗಿದ್ದವು. ಜೀವನದ ಪ್ರತಿಯೊಂದು ವಿಭಾಗದಲ್ಲಿಯೂ ಈ ಅಸ್ಥಿರತೆಯು ಹಾಗೂ ಅಸಂತೋಷದ ಬೇಡಿಗಳಿಂದ ಮುಕ್ತವಾಗುವದನ್ನು ಇಚ್ಛಿಸಿತು ಅದರ ಪರಿಣಾಮವು ಆಗಿದೆ. ಸಾಹಿತ್ಯದಲ್ಲಿಯೂ ಅದು ಕ್ರಾಂತಿಯನ್ನು ಎಬ್ಬಿಸಿತು.

ಶೇಕ್ಸಪಿಯರನ ನಾಟಕಗಳು ಅನುಪಮವಾಗಿವೆ; ಆದರೆ ಇಂದು ಆ ನಾಟಕಗಳ ಯಾವ ಸಂಬಂಧವೂ ಜನತೆಯ ಜೀವನದೊಡನೆ ಇಲ್ಲವಾಗಿದೆ. ಇಂದಿನ ನಾಟಕಗಳ ಉದ್ದೇಶ್ಯವೂ ಬೇರೆಯಾಗಿದೆ, ಆದರ್ಶವೂ ಬೇರೆಯಾಗಿದೆ. ವಿಷಯವೂ ಬೇರೆಯಾಗಿದೆ ಮತ್ತು ಶೈಲಿಯೂ ಬೇರೆಯಾಗಿದೆ. ಕಥಾ-ಸಾಹಿತ್ಯದಲ್ಲಿಯೂ ವಿಕಾಸವಾಯಿತು ಮತ್ತು ಅದರ ವಿಷಯದಲ್ಲಿ ಅಷ್ಟೊಂದು ಪರಿವರ್ತನೆಯಾಗಿರದಿದ್ದರೂ ಶೈಲಿಯಲ್ಲಂತೂ ತೀರ ಬದಲಾವಣೆಯಾಗಿದೆ ಅಲಿಫಲೈಲಾ (ಒಂದು ಪ್ರೇಮಕತೆ) ಆ ಸಮಯದ ಆದರ್ಶವಾಗಿತ್ತು. ಅದರಲ್ಲಿ ಬಹುರೂಪತೆ ಇತ್ತು, ವೈಚಿತ್ರ್ಯವಿತ್ತು, ಕುತೂಹಲವಿತ್ತು. ರೋಮಾನ್ಸ್ (ರಮಣೀಯತೆ) ಇತ್ತು — ಆದರೆ ಅದರಲ್ಲಿ ಜೀವನದ ಸಮಸ್ಯೆಗಳಿದ್ದಿಲ್ಲ, ಮನೋವಿಜ್ಞಾನದ ರಹಸ್ಯಗಳಿದ್ದಿಲ್ಲ, ಅನುಭವಗಳ ಇಷ್ಟೊಂದು ಪ್ರಚುರತೆ ಇದ್ದಿಲ್ಲ, ಜೀವನವು ತನ್ನ ಸತ್ಯರೂಪದಲ್ಲಿ ಇಷ್ಟು ಸ್ಪಷ್ಟವಿದ್ದಿಲ್ಲ. ಅದರ ರೂಪಾಂತರವಾಯಿತು ಮತ್ತು ಕಥಾ ಮತ್ತು ನಾಟಕದ ನಡುವಿನ ವಸ್ತುವಾಗಿರುವ ಕಾದಂಬರಿಯ ಉದಯವಾಯಿತು. ಪ್ರಾಚೀನ ದೃಷ್ಟಾಂತಗಳು ಸಹ ರೂಪಾಂತರಿತವಾಗಿ ಕಥೆಯಾದುವು.

ಆದರೆ ನೂರು ವರುಷ ಮೊದಲು ಯುರೋಪಕ್ಕೂ ಈ ಕಲೆಯು ಗೊತ್ತಿರಲಿಲ್ಲ, ದೊಡ್ಡ ದೊಡ್ಡ ಉಚ್ಚಕೋಟಿಯ ದಾರ್ಶನಿಕ, ಐತಿಹಾಸಿಕ ಹಾಗು ಸಾಮಾಜಿಕ ಕಾದಂಬರಿಗಳು ಬರೆಯಲ್ಪಡುತ್ತಿದ್ದವು; ಆದರೆ ಚಿಕ್ಕ ಚಿಕ್ಕ ಕಥೆಗಳ ಕಡೆಗೆ ಯಾರ ಧ್ಯಾನವೂ ಹೋಗುತ್ತಿದ್ದಿಲ್ಲ. ಹಾಂ, ಅಪ್ಸರೆ-ಯರ, ಭೂತಗಳ ಕಥೆಗಳು ಬರೆಯಲ್ಪಡುತ್ತಿದ್ದವು; ಆದರೆ ಇದೇ ಒಂದು

ಶತಾಬ್ದಿಯಲ್ಲಿ ಅಥವಾ ಇದಕ್ಕೂ ಕಡಿಮೆ ಅವಧಿಯಲ್ಲಿಯೇ ಎನ್ನಿರಿ, ಚಿಕ್ಕ ಕಥೆಗಳು ಸಾಹಿತ್ಯದ ಅನ್ಯ ಎಲ್ಲ ಅಂಗಗಳ ಮೇಲೂ ವಿಜಯವನ್ನು ಸಂಪಾದಿಸಿವೆ ಮತ್ತು ಒಂದಾನೊಂದು ಕಾಲದಲ್ಲಿ ಕಾವ್ಯವೇ ಸಾಹಿತ್ಯಿಕ ಅಭಿವ್ಯಕ್ತಿಯ ವ್ಯಾಪಕ ರೂಪವಿದ್ದಂತೆ ಇಂದು ಕಥೆ ಇದೆ ಎಂದು ಹೇಳುವದು ತಪ್ಪಾಗಲಿಕ್ಕಿಲ್ಲ ಮತ್ತು ಇದಕ್ಕೆ ಈ ಗೌರವ ದೊರಕಿದುದೂ ಯುರೋಪದ ಅನೇಕ ಶ್ರೇಷ್ಠ ಕಲಾಕಾರರ ಪ್ರತಿಭೆಯಿಂದ. ಅವರಲ್ಲಿ ಬಾಲಜಾಕ ಮೋಪಾಸಾ, ಚೆಖಾವ, ಟಾಲಸ್ಟಾಯ್, ಪ್ಯಾಕ್ಷಿಮಗೋರ್ಕಿ ಮುಂತಾದವರು ಪ್ರಮುಖರಾಗಿದ್ದಾರೆ. ಹಿಂದೀಯಲ್ಲಿ ಇಪ್ಪತ್ತೈದು ಮೂವತ್ತುವರ್ಷಗಳ ಹಿಂದಿನ ತನಕ ಕಥೆಯ ಜನ್ಮನಾಗಿದ್ದಿಲ್ಲ. ಆದರೆ ಇಂದು ಎರಡು ಮೂರು ಕಥೆ-ಗಳಿಲ್ಲದ ಒಂದೂ ಪತ್ರಿಕೆಯಿಲ್ಲ—ಕೆಲವು ಪತ್ರಿಕೆಗಳಲ್ಲಿಯಂತೂ ಕೇವಲ ಕಥೆಗಳೇ ಕೊಡಲ್ಪಡುತ್ತವೆ.

ಕಥೆಗಳ ಈ ಪ್ರಾಬಲ್ಯಕ್ಕೆ ಇತ್ತೀಚಿನ ಜೀವನ ಸಂಗ್ರಾಮ ಮತ್ತು ಸಮಯಾಭಾವವೇ ಮುಖ್ಯ ಕಾರಣ. 'ಬೋಸ್ತಾನೆ ಖಯಾಲ' ಕೈಯಲ್ಲಿ ತೆಗೆದುಕೊಂಡು ಕುಳಿತಿರುವ ಮತ್ತು ಅದರ ಕುಂಜಗಳಲ್ಲಿ ಇಡಿ ದಿನ ವಿಹರಿಸುವ ಕಾಲವೂ ಈಗ ಉಳಿಯಲಿಲ್ಲ. ಈಗ ನಾವು ಮನೋರಂಜನಕ್ಕೂ ಸಮಯ ಸಿಗದಷ್ಟು ಜೀವನ ಸಂಗ್ರಾಮದಲ್ಲಿ ತನ್ಮಯರಾಗಿ ಬಿಟ್ಟಿದ್ದೇವೆ. ಒಂದು ವೇಳೆ ಸ್ವಲ್ಪ ಮನೋರಂಜನೆಯು ಆರೋಗ್ಯಕ್ಕೆ ಅನಿವಾರ್ಯವಾಗಿರ-ದಿದ್ದರೆ ನಾವು ಹುಚ್ಚರಾಗದೆ ನಿತ್ಯವೂ ಹದಿನೆಂಟು ಗಂಟೆ ಕೆಲಸವನ್ನು ಮಾಡಬಹುದಾಗಿತ್ತು ಮತ್ತು ಬಹುಶಃ ಮನೋರಂಜನೆಯ ಹೆಸರನ್ನು ಸಹ ಎತ್ತುತ್ತಿದ್ದಿಲ್ಲ. ಆದರೆ ಪ್ರಕೃತಿಯು ನಮಗೆ ವಿವಶ ಮಾಡಿದ್ದಾಳೆ, ಅಲ್ಪ ಸಮಯದಲ್ಲಿ ಸ್ವಲ್ಪ ಮನೋರಂಜನೆಯಾಗಬೇಕೆಂದು ನಾವು ಅಪೇಕ್ಷಿಸುತ್ತೇವೆ. ಆದ್ದರಿಂದಲೇ ದಿನದಿನಕ್ಕೂ ಸಿನೇಮಾ-ಗೃಹಗಳ ಸಂಖ್ಯೆಯು ಬೆಳೆಯುತ್ತಿದೆ. ತಿಂಗಳುಗಟ್ಟಲೆ ಒಂದು ಕಾದಂಬರಿಯನ್ನು ಓದಿ ಪಡೆಯುವಷ್ಟು ಆನಂದವನ್ನು ಎರಡು ಗಂಟೆಗಳಲ್ಲಿ ಪಡೆಯುತ್ತೇವೆ. ಕಥೆಗಂತೂ ಹತ್ತು ಹದಿನೈದು ನಿಮಿಷಗಳೇ ಸಾಕು, ಆದುದರಿಂದ ನಾವು ಕಥೆಯು ಸ್ವಲ್ಪೇ ಶಬ್ದಗಳಲ್ಲಿ ಹೇಳಿದುದು, ಅನಾವಶ್ಯಕವಾಗಿ ಒಂದೂ ಶಬ್ದ ಹಾಗು ವಾಕ್ಯ ಇರದಂತಹದು, ಮೊದಲನೆಯ ವಾಕ್ಯವೇ ಮನಸ್ಸನ್ನು ಆಕರ್ಷಿಸುವಂತಹದು

ಇದ್ದು ಕೊನೆಯುವರೆಗೂ ಮುಗ್ಧಮಾಡುವಂತಹದು ಮತ್ತು ಸ್ವಲ್ಪ ಚಟುವಟಿಕೆ, ಒಗರು, ತಾಜಾತನ, ಸ್ವಲ್ಪ ವಿಕಾಸವುಳ್ಳದು ಹಾಗೂ ಸ್ವಲ್ಪ ತತ್ತ್ವವುಳ್ಳದೂ ಇರಬೇಕೆಂದು ಅಪೇಕ್ಷಿಸುತ್ತೇವೆ. ತತ್ತ್ವರಹಿತ ಕಥೆಯಿಂದ ಒಂದು ವೇಳೆ ಮನೋರಂಜನೆಯು ಆದರೂ ಆಗಬಹುದು., ಆದರೆ, ಮಾನಸಿಕ ತೃಪ್ತಿಯು ಆಗುವುದಿಲ್ಲ. ಕಥೆಗಳಲ್ಲಿ ನಾವು ಉಪದೇಶಗಳನ್ನು ಅಪೇಕ್ಷಿಸುವು-ದಿಲ್ಲವೆಂಬುದೂ ನಿಜ, ಆದರೆ ವಿಚಾರಗಳನ್ನು ಉತ್ತೇಜಿತಗೊಳಿಸಲು, ಮನದ ಸುಂದರ ಭಾವಗಳನ್ನು ಜಾಗ್ರತಗೊಳಿಸಲು ಸ್ವಲ್ಪಿಲ್ಲ ಸ್ವಲ್ಪ ಸಾಮಗ್ರಿಯನ್ನು ಅವಶ್ಯವಾಗಿ ಬಯಸುತ್ತೇವೆ. ಮನೋರಂಜನ ಮತ್ತು ಮಾನಸಿಕ ತೃಪ್ತಿ, ಇವೆರಡರಲ್ಲಿ ಒಂದು ಅವಶ್ಯವಾಗಿ ಯಾವ ಕಥೆಯಲ್ಲಿ ದೊರಕುವುದೋ ಅದೇ ಯಶಸ್ವೀ ಕಥೆ.

ಒಂದು ಮನೋವೈಜ್ಞಾನಿಕ ಸತ್ಯವನ್ನು ಆಧರಿಸಿದ ಕಥೆಯೇ ಎಲ್ಲ ಕಥೆಗಳಿಗಿಂತ ಉತ್ತಮವಾದುದು. ಸಾಧು ಸ್ವಭಾವದ ತಂದೆಯು ದುಶ್ಚಟ-ಗಳುಳ್ಳ ತನ್ನ ಮಗನ ಸ್ಥಿತಿಯನ್ನು ಕಂಡು ದುಃಖಿತನಾಗುವುದು ಮನೋ-ವೈಜ್ಞಾನಿಕ ಸತ್ಯ. ಈ ಆವೇಗದಲ್ಲಿ ತಂದೆಯ ಮನೋವೇಗಗಳನ್ನು ಚಿತ್ರಿಸುವುದು ಮತ್ತು ತದನುಕೂಲವಾಗಿ ಅವನ ವ್ಯವಹಾರಗಳನ್ನು ಪ್ರದರ್ಶಿಸುವದು ಕತೆಯನ್ನು ಆಕರ್ಷಕವನ್ನಾಗಿ ಮಾಡಬಲ್ಲದು. ಕೆಟ್ಟ ಮನುಷ್ಯನು ತೀರ ಕೆಟ್ಟವನಾಗಿರುವುದಿಲ್ಲ, ಅವನಲ್ಲಿ ಎಲ್ಲಿಯೋ ದೇವತೆಯು ಅವಶ್ಯವಾಗಿ ಅಡಗಿರುತ್ತಾನೆ—ಇದು ಮನೋವೈಜ್ಞಾನಿಕ ಸತ್ಯ. ಆ ದೇವತೆಯನ್ನು ಹೊರತಂದು—ಪ್ರಕಟಗೊಳಿಸಿ ತೋರಿಸುವದು ಯಶಸ್ವೀ ಆಖ್ಯಾಯಿಕಾ-ಲೇಖಕನ ಕಾರ್ಯ. ಸಂಕಟಗಳ ಮೇಲೆ ಸಂಕಟಗಳು ಬಂದು ಬೀಳುವುದ-ರಿಂದ ಮನುಷ್ಯನು ಎಷ್ಟು ಸಾಹಸಿಯಾಗುತ್ತಾನೆ—ದೊಡ್ಡಕ್ಕಿಂತ ದೊಡ್ಡ ಸಂಕಟವನ್ನು ಎದುರಿಸಲು ಸಡ್ಡು ಹೊಡೆದು ಸಿದ್ಧನಾಗುತ್ತಾನೆ, ಅವನ ದುರ್ವಾಸನೆಯು ಓಡಿಹೋಗುತ್ತದೆ, ಅವನ ಹೃದಯದ ಒಂದು ಮೂಲೆ ಯಲ್ಲಿ ಅಡಗಿದ ರತ್ನಗಳು ಹೊರಬೀಳುತ್ತವೆ ಮತ್ತು ನಮ್ಮನ್ನು ಚಕಿತ ಗೊಳಿಸುತ್ತವೆ;—ಇದು ಮನೋವೈಜ್ಞಾನಿಕ ಸತ್ಯ. ಒಂದೇ ಘಟನೆಯು ಅಥವಾ ದುರ್ಘಟನೆಯು ಬೇರೆ ಬೇರೆ ಪ್ರಕಾರದ ಪ್ರಕೃತಿ ಸ್ವಭಾವದ ಮನುಷ್ಯರ ಮೇಲೆ ಬೇರೆ ಬೇರೆ ರೀತಿಯಾಗಿ ಪ್ರಭಾವವನ್ನುಂಟುಮಾಡುತ್ತದೆ.

ಇದನ್ನು ನಾವು ಕಥೆಯಲ್ಲಿ ಯಶಸ್ವಿಯಾಗಿ ತೋರಿಸಲು ಸಮರ್ಥರಾದರೆ ಕಥೆಯು ಆವಶ್ಯವಾಗಿ ಆಕರ್ಷಕವಾಗುತ್ತದೆ. ಯಾವುದೊಂದು ಸತ್ಯವನ್ನು ಸಮಾವೇಶ ಮಾಡುವುದೇ ಕಥೆಯನ್ನು ಆಕರ್ಷಕವನ್ನಾಗಿ ಮಾಡಲು ಎಲ್ಲಕ್ಕಿಂತ ಉತ್ತಮ ಸಾಧನವಾಗಿದೆ. ಜೀವನದಲ್ಲಿ ಇಂತಹ ಸಮಸ್ಯೆಗಳು ನಿತ್ಯವೂ ಎದುರಿಗೆ ಬಂದು ನಿಲ್ಲುತ್ತಿರುತ್ತವೆ ಮತ್ತು ಅವುಗಳಿಂದ ಉದ್ಭೂತವಾಗುವ ದ್ವಂದ್ವವು ಆಖ್ಯಾಯಿಕೆಯನ್ನು ಮೆರುಗಿಸುವುದು. ಸತ್ಯವಾದೀ ತಂದೆಗೆ ತನ್ನ ಮಗನು ಕೊಲೆ ಮಾಡಿದ್ದಾನೆಂದು ತಿಳಿಯುತ್ತದೆ. ಅವನು ಅವನನ್ನು ನ್ಯಾಯವೇದಿಕೆಯ ಮೇಲೆ ಬಲಿಕೊಟ್ಟು ಬಿಡಬೇಕೇ ಅಥವಾ ತನ್ನ ಜೀವನ ಸಿದ್ಧಾಂತಗಳ ಕೊಲೆಯನ್ನು ಮಾಡಿಬಿಡಬೇಕೇ? ಎಷ್ಟು ಭೀಷಣ ದ್ವಂದ್ವವಿದು! ಪಶ್ಚಾತ್ತಾಪವು ಇಂಥ ದ್ವಂದ್ವಗಳ ಅಖಂಡ ಬುಗ್ಗೆಯು—ಸೆಲೆಯು. ಒಬ್ಬ ಸೋದರನು ತನ್ನ ಇನ್ನೊಬ್ಬ ಸೋದರನ ಆಸ್ತಿಯನ್ನು—ಸಂಪತ್ತನ್ನು ಮೋಸದಿಂದ ಅಪಹರಿಸಿದ್ದಾನೆ, ಅವನು ಭಿಕ್ಷೆ ಬೇಡುವುದನ್ನು ನೋಡಿ ಕಪಟೀ—ಮೋಸಗಾರ ಸೋದರನಿಗೆ ಎಳ್ಳಷ್ಟೂ ಪಶ್ಚಾತ್ತಾಪವಾಗುವುದಿಲ್ಲವೇ? ಒಂದು ವೇಳೆ ಆಗದಿದ್ದರೆ ಅವನು ಮನುಷ್ಯನೇ ಅಲ್ಲ.

ಕಾದಂಬರಿಗಳಂತೆಯೇ ಕಥೆಗಳೂ ಕೆಲವು ಘಟನಾ-ಪ್ರಧಾನವಾಗಿರುತ್ತವೆ, ಕೆಲವು ಚರಿತ್ರ-ಪ್ರಧಾನವಾಗಿರುತ್ತವೆ ಚರಿತ್ರ-ಪ್ರಧಾನವಾದ ವಿಸ್ತೃತ ವಿಶ್ಲೇಷಣಕ್ಕೆ ಎಡೆಯಿರುವುದಿಲ್ಲ. ಇಲ್ಲಿ ನಮ್ಮ ಉದ್ದೇಶ್ಯವು ಸಂಪೂರ್ಣ ಮನುಷ್ಯನನ್ನು ಚಿತ್ರಿತಮಾಡುವುದಾಗಿರದೆ ಅವನ ಚರಿತ್ರದ ಒಂದು ಅಂಗವನ್ನು ಮಾತ್ರ ತೋರಿಸುವುದಾಗಿರುತ್ತದೆ. ನಮ್ಮ ಕಥೆಯಿಂದ ಹೊರಡುವ ಪರಿಣಾಮವು ಅಥವಾ ತತ್ತ್ವವು ಸರ್ವಮಾನ್ಯವಿರಬೇಕಾದುದು ಮತ್ತು ಅದರಲ್ಲಿ ಸ್ವಲ್ಪ ಸೂಕ್ಷ್ಮತೆಯಿರಬೇಕಾದುದು ಪರಮಾವಶ್ಯಕವಿದೆ. ನಮಗೆ ಸಂಬಂಧವಿದ್ದ ಸಂಗತಿಯಲ್ಲಿಯೇ ನಮಗೆ ಆನಂದವುಂಟಾಗುತ್ತದೆಯೆಂಬುದು ಒಂದು ಸಾಮಾನ್ಯ ನಿಯಮ. ಜೂಜು ಆಡುವವರಿಗೆ ಇರುವ ಉನ್ಮಾದ ಅಥವಾ ಉಲ್ಲಾಸವು ದರ್ಶಕನಿಗೆಂದೂ ಇರಲಾರದು. ನಮ್ಮ ಚರಿತ್ರಗಳು ಪಾಠಕನು ತಾನು ಅವುಗಳ ಸ್ಥಾನದಲ್ಲಿದ್ದೇನೆಂದು ತಿಳಿದುಕೊಳ್ಳುವಷ್ಟು ಸಜೀವ ಮತ್ತು ಆಕರ್ಷಕವಾಗಿದ್ದಾಗಲೇ ಕಥೆಯಲ್ಲಿ ಆನಂದವು ದೊರೆಯುತ್ತದೆ.

ಒಂದು ವೇಳೆ ಲೇಖಕನು ತನ್ನ ಪಾತ್ರಗಳ ಪ್ರತಿಯಾಗಿ ಈ ಸಹಾನುಭೂತಿಯನ್ನು ಹುಟ್ಟಿಸದೇ ಹೋದಲ್ಲಿ ಅವನು ತನ್ನ ಉದ್ದೇಶ್ಯದಲ್ಲಿ ಅಯಶಸ್ವಿಯಾಗುತ್ತಾನೆ.

ಈ ಸ್ವಲ್ಪ ದಿನಗಳಲ್ಲಿ ಹಿಂದೀ ಕಥೆಯ ಕಲೆಯು ಎಷ್ಟು ಪ್ರೌಢತೆಯನ್ನು ಪಡೆದಿದೆ ಎಂಬುದನ್ನು ಪಾಠಕರಿಗೆ ಹೇಳುವ ಆವಶ್ಯಕತೆಯಿಲ್ಲ. ಮೊದಲು ನಮ್ಮೆದುರಿಗೆ ಕೇವಲ ಬಂಗಲಾ-ಕಥೆಗಳ ನಮೂನೆ-ಮಾದರಿ ಇದ್ದಿತು. ಈಗ ನಾವು ಪ್ರಪಂಚದಲ್ಲಿ ಎಲ್ಲ ಪ್ರಮುಖ ಕಥಾ-ಲೇಖಕರ ರಚನೆಗಳನ್ನು ಕೃತಿಗಳನ್ನು ಓದುತ್ತೇವೆ, ಅವುಗಳ ಬಗೆಗೆ ವಿಚಾರ ಮಾಡುತ್ತೇವೆ ಮತ್ತು ಚರ್ಚೆ ಮಾಡುತ್ತೇವೆ, ಅವುಗಳ ಗುಣ-ದೋಷಗಳನ್ನು ತೆಗೆಯುತ್ತೇವೆ ಮತ್ತು ಅವುಗಳಿಂದ ಪ್ರಭಾವಿತರಾಗದೆ ಉಳಿಯಲಾರೆವು. ಈಗ ಹಿಂದೀ ಕಥಾಲೇಖಕರಲ್ಲಿ ಬೇರೆ ಬೇರೆ ವಿಷಯದಲ್ಲಿ, ದೃಷ್ಟಿಕೋಣದಲ್ಲಿ ಮತ್ತು ಶೈಲಿಯಲ್ಲಿ ವಿಕಾಸವಾಗತೊಡಗಿದೆ—ಕಥೆಯು ಜೀವನದ ಅತಿ ನಿಕಟದಲ್ಲಿ ಬಂದಿದೆ. ಅದರ ಕ್ಷೇತ್ರ ಈಗ ಅಷ್ಟೊಂದು ಉದ್ದ-ಅಗಲವಾಗಿಲ್ಲ. ಅದರಲ್ಲಿ ಅನೇಕ ರಸಗಳಿಗೆ, ಅನೇಕ ಚರಿತ್ರೆಗಳಿಗೆ ಮತ್ತು ಅನೇಕ ಘಟನೆಗಳಿಗೆ ಸ್ಥಾನವು ಇಲ್ಲ. ಅದು ಈಗ ಕೇವಲ ಒಂದು ಪ್ರಸಂಗದ, ಆತ್ಮದ ಒಂದು ಹೊಳಪಿನ ಸಜೀವ ಹಾಗೂ ಹೃದಯಸ್ಪರ್ಶಿ ಚಿತ್ರಣವಾಗಿದೆ. ಈ ಏಕ ತಥ್ಯತೆಯು ಅದರಲ್ಲಿ ಪ್ರಭಾವ, ಆಕಸ್ಮಿಕತೆ ಮತ್ತು ತೀವ್ರತೆಯನ್ನು ತುಂಬಿದೆ. ಈಗ ಅದರಲ್ಲಿ ವ್ಯಾಖ್ಯೆಯ ಅಂಶ ತೀರ ಕಡಿಮೆ, ಸಮವೇದನೆಯ ಅಂಶವು ಹೆಚ್ಚು ಇರುತ್ತದೆ. ಅದರ ಶೈಲಿಯೂ ಈಗ ಪ್ರವಾಹಮಯ-ವಾಗಿದೆ. ಲೇಖಕನೂ ತಾನು ಹೇಳಬೇಕಾದುದನ್ನು ಅತ್ಯಂತ ಸ್ವಲ್ಪ ಶಬ್ದಗಳಲ್ಲಿ ಹೇಳಬಯಸುತ್ತಾನೆ. ಅವನು ತನ್ನ ಚರಿತ್ರಗಳ ಮನೋಭಾವ-ಗಳ ವ್ಯಾಖ್ಯೆಯನ್ನು ಮಾಡುತ್ತ ಕುಳ್ಳಿರುವುದಿಲ್ಲ, ಕೇವಲ ಅವುಗಳತ್ತ ಬೆರಳುಮಾಡಿ ತೋರಿಸುತ್ತಾನೆ. ಒಮ್ಮೊಮ್ಮೆ ಸಂಭಾಷಣೆಗಳಲ್ಲಿ ಒಂದೆರಡೇ ಶಬ್ದಗಳಿಂದ ತನ್ನ ಕಾರ್ಯವನ್ನು ಸಾಧಿಸಿಕೊಳ್ಳುತ್ತಾನೆ. ಪಾತ್ರದ ಬಾಯಿಯಿಂದ ಒಂದು ಶಬ್ದವನ್ನು ಕೇಳಿ ನಾವು ಅದರ ಮನೋಭಾವನೆ-ಗಳನ್ನು ಪೂರ್ಣವಾಗಿ ಊಹಿಸಿಕೊಳ್ಳುತ್ತೇವೆ, ಪೂರ್ಣವಾಕ್ಯದ ಅವಶ್ಯ-ಕತೆಯೇ ಬೀಳುವದಿಲ್ಲ, ಇಂತಹ ಅನೇಕ ಪ್ರಸಂಗಗಳು ಇರುತ್ತವೆ. ಈಗ

ನಾವು ಕಥೆಯ ಬೆಲೆಯನ್ನು ಅದರ ಘಟನಾ-ವಿನ್ಯಾಸದಿಂದ ಕಟ್ಟುವುದಿಲ್ಲ, ಪಾತ್ರಗಳ ಮನೋಗತಿಯೇ ಸ್ವತಃ ಘಟನೆಗಳನ್ನು ಸೃಷ್ಟಿಸಲೆಂದು ಬಯಸುತ್ತೇವೆ. ಘಟನೆಗಳ ಸ್ವತಂತ್ರ ಮಹತ್ವವೇ ಈಗ ಉಳಿದಿರುವುದಿಲ್ಲ. ಅವುಗಳ ಮಹತ್ವವು ಕೇವಲ ಪಾತ್ರಗಳ ಮನೋಭಾವನೆಗಳನ್ನು ವ್ಯಕ್ತಮಾಡುವ ದೃಷ್ಟಿಯಿಂದಲೇ ಇರುತ್ತದೆ — ಶಾಲಿಗ್ರಾಮವು ಸ್ವತಂತ್ರ ರೂಪದಲ್ಲಿ ಕೇವಲ ಕಲ್ಲಿನ ಒಂದು ದುಂಡುಗಿನ ತುಂಡು ಇದ್ದು ಉಪಾಸಕನ ಶ್ರದ್ಧೆಯಿಂದ ಪ್ರತಿಷ್ಠಿತವಾಗಿ ದೇವತೆಯಾಗುವಂತೆ. ಸ್ಪಷ್ಟವಾಗಿ ಬಿಡಿಸಿ ಹೀಗೆ ಹೇಳಬಹುದು—ಕಥೆಯ ಆಧಾರವು ಈಗ ಘಟನೆಯಾಗಿರುವುದಿಲ್ಲ, ಆದರೆ ಅನುಭೂತಿಯಾಗಿರುತ್ತದೆ. ಇಂದು ಲೇಖಕನು ಕೇವಲ ಒಂದು ರೋಚಕ ದೃಶ್ಯವನ್ನು ನೋಡಿ ಕಥೆಯನ್ನು ಬರೆಯಲು ಕುಳಿತುಕೊಳ್ಳುವದಿಲ್ಲ. ಅವನ ಉದ್ದೇಶ್ಯವು ಸ್ಥೂಲ ಸೌಂದರ್ಯವಾಗಿರುವುದಿಲ್ಲ. ಅವನು ಸೌಂದರ್ಯದ ಮಿಂಚು ಇರುವಂತಹ ಪ್ರೇರಣೆಯನ್ನು ಬಯಸುತ್ತಾನೆ ಮತ್ತು ತನ್ಮೂಲಕ ಅವನು ಪಾಠಕನ ಸುಂದರ ಭಾವನೆಗಳನ್ನು ಸ್ಪರ್ಶಮಾಡಲು, ತಟ್ಟಲು ಅಪೇಕ್ಷಿಸುತ್ತಾನೆ.

ಅನುವಾದಕ :—**ಗುರುನಾಥ ಜೋಶಿ**

# ಕಾದಂಬರಿ



ಕಾದಂಬರಿಯ ಪರಿಭಾಷೆಯನ್ನು ವಿದ್ವಾಂಸರು ನಾನಾ ರೀತಿಯಲ್ಲಿ ಮಾಡಿದ್ದಾರೆ. ಆದರೆ ಯಾವ ವಿಷಯವು ಎಷ್ಟು ಸರಳವಿರುತ್ತದೆಯೋ ಅದರ ಪರಿಭಾಷೆಯು ಅಷ್ಟೇ ಕಠಿಣನವಾಗಿರುತ್ತದೆಂಬ ಒಂದು ನಿಯಮವಿದೆ. ಕವಿತೆಯ ಪರಿಭಾಷೆಯನ್ನು ಇಂದಿನವರೆಗೆ ಮಾಡಲಿಕ್ಕಾಗಿಲ್ಲ. ಎಷ್ಟು ವಿದ್ವಾಂಸರಿದ್ದಾರೆಯೋ ಅಷ್ಟೇ ಪರಿಭಾಷೆಗಳೂ ಇವೆ. ಇಬ್ಬರು ವಿದ್ವಾಂಸರ ಅಭಿಪ್ರಾಯಗಳು ಹೊಂದುವದಿಲ್ಲ. ಕಾದಂಬರಿಯ ವಿಷಯದಲ್ಲಿಯೂ ಈ ಮಾತನ್ನು ಹೇಳಬಹುದು. ಎಲ್ಲರೂ ಒಪ್ಪುವಂತಹ ಪರಿಭಾಷೆಯು ಇದರದೂ ಇರುವುದಿಲ್ಲ.

ಕಾದಂಬರಿಯು ಮಾನವ ಚರಿತ್ರದ ಚಿತ್ರ ಮಾತ್ರವೆಂದು ನಾನು ತಿಳಿಯುತ್ತೇನೆ. ಮಾನವ ಚರಿತ್ರದ ಮೇಲೆ ಪ್ರಕಾಶವನ್ನು ಹಾಕುವದು ಮತ್ತು ಅದರ ರಹಸ್ಯಗಳನ್ನು ಹೊರಗೆಡಹುವುದು ಕಾದಂಬರಿಯ ಮೂಲ ತತ್ತ್ವ.

ಯಾರೇ ಇರಲಿ, ಹೇಗೆ ಇಬ್ಬರು ಮನುಷ್ಯರ ಆಕಾರಗಳು ಹೋಲುವ ದಿಲ್ಲವೋ ಹಾಗೆಯೇ ಮನುಷ್ಯರ ಚರಿತ್ರಗಳೂ ಹೋಲುವುದಿಲ್ಲ. ಎಲ್ಲ ಮನುಷ್ಯರಿಗೂ ಕೈ, ಕಾಲು, ಕಣ್ಣು, ಕಿವಿ, ಮೂಗು, ಮುಖ ಇರುತ್ತವೆ,— ಆದರೆ ಇಷ್ಟು ಸಮಾನತೆಯಿದ್ದರೂ ಅವರಲ್ಲಿ ಹೇಗೆ ವಿಭಿನ್ನತೆಯು ಇರುತ್ತದೆಯೋ ಹಾಗೆಯೇ ಎಲ್ಲ ಮನುಷ್ಯರ ಚರಿತ್ರದಲ್ಲಿ ಸ್ವಲ್ಪ ಹೆಚ್ಚು-ಕಡಿಮೆ ಸಮಾನತೆಯು ಇದ್ದರೂ ಕೆಲವು ವಿಭಿನ್ನತೆಗಳು ಇರುತ್ತವೆ. ಇದೇ ಚರಿತ್ರ ಸಂಬಂಧವಾದ ಸಮಾನತೆ ಮತ್ತು ವಿಭಿನ್ನತೆಯನ್ನು — ಅಭಿನ್ನತ್ವದಲ್ಲಿ ಭಿನ್ನತ್ವವನ್ನು ಮತ್ತು ವಿಭಿನ್ನತ್ವದಲ್ಲಿ ಅಭಿನ್ನತ್ವವನ್ನು ತೋರಿಸುವುದು ಕಾದಂಬರಿಯ ಮುಖ್ಯ ಕರ್ತವ್ಯವಾಗಿದೆ.

ಸಂತಾನ-ಪ್ರೀತಿಯು ಮಾನ ಚರಿತ್ರದ ಒಂದು ವ್ಯಾಪಕ ಗುಣವು. ತನ್ನ ಸಂತಾನ ತನಗೆ ಪ್ರಿಯವಿಲ್ಲದ ಜೀವಿಯು ಯಾವುನಾದರೂ ಇದ್ದಾನೆಯೇ? ಆದರೆ ಈ ಸಂತಾನ-ಪ್ರೀತಿಯಲ್ಲಿಯೂ ಮಾತ್ರೆಗಳು ಇವೆ—ಅದರಲ್ಲಿಯೂ ಭೇದಗಳಿವೆ. ಒಬ್ಬನು ಸಂತಾನಕ್ಕಾಗಿ ಸತ್ತು ಸುಣ್ಣವಾಗುತ್ತಾನೆ, ಅದಕ್ಕಾಗಿ ಏನನ್ನಾದರೂ ಬಿಟ್ಟು ಹೋಗಲು ನಾನಾಬಗೆಯ ಕಷ್ಟ-ಗಳನ್ನು ಸಹಿಸುತ್ತಾನೆ, ಆದರೆ ಧರ್ಮ-ಭೀರುವಾಗಿರುವುದರಿಂದ ಅನುಚಿತ ರೀತಿಯಲ್ಲಿ ಧನ-ಸಂಚಯುವನ್ನು ಮಾಡುವುದಿಲ್ಲ. ಹಾಗೆ ಮಾಡಿದಲ್ಲಿ ಅದರ ಕೆಟ್ಟ ಪರಿಣಾಮವು ಸಂತಾನದ ಮೇಲೆ ಎಲ್ಲಿ ಆಗುವದೋ ಎಂದು ಸಂದೇಹ ಪಡುತ್ತಾನೆ. ಒಬ್ಬನು ಔಚಿತ್ಯದ ಬಗ್ಗೆ ಇನಿತೂ ವಿಚಾರಮಾಡುವುದಿಲ್ಲ—ಹೇಗಾದರೂ ಸರಿಯೇ, ಧನ-ಸಂಚಯ ಮಾಡುವುದೇ ತನ್ನ ಧ್ಯೇಯವೆಂದು ತಿಳಿಯುತ್ತಾನೆ, ಇದಕ್ಕಾಗಿ ಬೇರೆಯವರ ಕುತ್ತಿಗೆಯನ್ನು ಕೊಯ್ಯುವ ಪ್ರಸಂಗ ಬಂದರೂ ಅವನಿಗೆ ಪರವೆ ಇಲ್ಲ—ಅವನು ಸಂತಾನ ಪ್ರೀತಿಗಾಗಿ ತನ್ನ ಆತ್ಮದ ಬಲಿದಾನವನ್ನು ಮಾಡಿಬಿಡುತ್ತಾನೆ. ಮೂರನೆಯ ಬಗೆಯ ಸಂತಾನ ಪ್ರೀತಿಯೂ ಒಂದು ಇದೆ—ಇಲ್ಲಿ ಸಂತಾನದ ಚರಿತ್ರವು ಮುಖ್ಯ ಕಾರಣವಿರುತ್ತದೆ—ತಂದೆಯು ಸಂತಾನದ ಕುಚರಿತ್ರವನ್ನು ಕಂಡು ಅದರಿಂದ ಉದಾಸೀನನಾದಾಗ, ಅದಕ್ಕಾಗಿ ಏನನ್ನಾದರೂ ಬಿಟ್ಟುಹೋಗುವುದು ಅಥವಾ ಮಾಡಿಹೋಗುವುದು ವ್ಯರ್ಥವೆಂದು ತಿಳಿಯುತ್ತಾನೆ. ಒಂದುವೇಳೆ ತಾವು ವಿಚಾರಮಾಡಿದರೆ ಈ ಸಂತಾನ-ಪ್ರೀತಿಯ ಅಗಣಿತ ಭೇದಗಳು ತಮಗೆ ಕಂಡುಬರುವುವು ಇದೇ ರೀತಿಯಾಗಿ ಬೇರೆ ಮಾನವ ಗುಣಗಳ ಮಾತ್ರೆಗಳೂ—ಭೇದಗಳೂ ಇವೆ. ನಮ್ಮ ಚರಿತ್ರಾಧ್ಯಯನವು ಸೂಕ್ಷ್ಮ-ವಿದ್ದಷ್ಟೂ ವಿಸ್ತೃತವಿದ್ದಷ್ಟೂ ಯಶಸ್ವಿಯಾಗಿ ನಾವು ಚರಿತ್ರಗಳ ಚಿತ್ರಣವನ್ನು ಮಾಡಬಹುದು. ಮಗನು ಕೆಟ್ಟ ದಾರಿಯ ಮೇಲೆ ನಡೆಯುತ್ತಿರುವುದನ್ನು ಕಂಡು ತಂದೆಯು ಅವನ ಘಾತಕ ಶತ್ರುವೂ ಆಗಿಬಿಡುವಂತಹ ಸಂತಾನ ಪ್ರೀತಿಯ ದೆಸೆಯೂ ಒಂದಿದೆ. ತಂದೆಗಾಗಿ ಮಗನು ತುಪ್ಪದುಂಡೆಯಾಗುವಂತಹ ಸಂತಾನ ಪ್ರೇಮವೂ ಒಂದಿದೆ, ಆಗ ಮಗನ ವಕ್ರತನವು ಅದರ ಸ್ವಾದದಲ್ಲಿ ಬಾಧಕವಾಗುವುದಿಲ್ಲ. ಪುತ್ರ-ಪ್ರೇಮಕ್ಕೆ ವಶೀ-ಭೂತನಾಗಿ ಕುಡುಕ ಹಾಗು ಜೂಜುಗಾರ ತಂದೆಯು ತನ್ನ ಈ ಎಲ್ಲ

ದುಶ್ಕೃಟಗಳನ್ನು ತೋರಿದುಬಿಡುತ್ತಾನೆ, ಇಂತಹ ಸಂತಾನ-ಪ್ರಿತಿಯೂ ನೋಡಲು ದೊರೆಯುತ್ತದೆ.

ಇಲ್ಲಿ ಒಂದು ಪ್ರಶ್ನೆಯೇಳುತ್ತದೆ: ಕಾದಂಬರಿಕಾರನು ಈ ಚರಿತ್ರಗಳ ಅಧ್ಯಯನವನ್ನು ಮಾಡಿ, ಅದನ್ನು ಪಾಠಕರ ಎದುರಿಗೆ ಇಟ್ಟುಬಿಡಬೇಕು. ಆದರೆ ಅದರಲ್ಲಿ ತನ್ನ ಪರವಾಗಿ ಒಂದಿಷ್ಟು ಕತ್ತರಿಸಿ ಹೆಚ್ಚು-ಕಡಮೆ ಮಾಡ ಬಾರದೋ ಅಥವಾ ಒಂದು ಉದ್ದೇಶ್ಯದ ಪೂರ್ತಿಗಾಗಿ ಚರಿತ್ರಗಳಲ್ಲಿ ಸ್ವಲ್ಪ ಪರಿವರ್ತನೆಯನ್ನು ಮಾಡಬೇಕೋ ಹೇಗೆ?

ಇಲ್ಲಿಂದಲೇ ಕಾದಂಬರಿಗಳಲ್ಲಿ ಎರಡು ಭೇದಗಳಾಗಿವೆ—ಒಂದು ಆದರ್ಶವಾದಿ, ಇನ್ನೊಂದು ಯಥಾರ್ಥವಾದಿ.

ಯಥಾರ್ಥವಾದಿಯು ಚರಿತ್ರಗಳನ್ನು ಪಾಠಕನೆದುರಿಗೆ ಅವುಗಳ ಯಥಾರ್ಥವಾದ ನಗ್ನರೂಪದಲ್ಲಿ ಇಟ್ಟುಬಿಡುತ್ತಾನೆ. ಸಚ್ಚರಿತ್ರೆಯ ಪರಿಣಾಮವು ಕೆಟ್ಟದಾಗುತ್ತದೆಯೋ ಅಥವಾ ಕುಚರಿತ್ರೆಯ ಪರಿಣಾಮವು ಒಳಿತಾಗುತ್ತದೆಯೋ ಎಂಬುದರ ಕಡೆಗೆ ಅವನ ಲಕ್ಷ್ಯವಿರುವುದಿಲ್ಲ, ಅತ್ತ ಅವನ ಗಮನ, ಸಂಬಂಧ ಇರುವುದಿಲ್ಲ—ಅವನ ಚರಿತ್ರಗಳು ತಮ್ಮ ನಿರ್ಬಲತೆಗಳನ್ನು ಅಥವಾ ವಿಶೇಷತೆಗಳನ್ನು ತೋರಿಸುತ್ತ ತಮ್ಮ ಜೀವನ-ಲೀಲೆಯನ್ನು ಮುಗಿಸಿಬಿಡುತ್ತವೆ. ಪ್ರಪಂಚದಲ್ಲಿ ಸದಾಕಾಲವೂ ಒಳ್ಳೆಯದರ ಫಲವು ಒಳ್ಳೆಯದು, ಕೆಟ್ಟದರ ಫಲವು ಕೆಟ್ಟದು ಆಗುವುದಿಲ್ಲ, ಆದರೆ ಅವಕ್ಕೆ ವಿರುದ್ಧವಾಗಿ ಆಗುತ್ತದೆ— ಚಾರಿತ್ರ್ಯವಂತರು ಪೆಟ್ಟುಗಳನ್ನು ತಿನ್ನುತ್ತಾರೆ, ಯಾತನೆಗಳನ್ನು ಅನುಭವಿಸುತ್ತಾರೆ, ಸಂಕಟಗಳನ್ನು ಸಹಿಸು ತ್ತಾರೆ, ಅಪಮಾನಿತರಾಗುತ್ತಾರೆ—ಅವರಿಗೆ ಒಳ್ಳೆಯತನದ ಫಲವು ವಿಪ ರೀತವಾಗಿ ದೊರೆಯುತ್ತದೆ., ಕೆಟ್ಟ ಜನರು ಆನಂದದಿಂದ ಲೋಲಾಡುತ್ತಾರೆ, ಜೈನಿ ಹೊಡೆಯುತ್ತಾರೆ, ಹೆಸರು ಗಳಿಸುತ್ತಾರೆ, ಯಶಸ್ವಿಗಳಾಗುತ್ತಾರೆ— ಅವರಿಗೆ ಕೆಟ್ಟದರ ಫಲವು ವಿಪರೀತವಾಗಿ ದೊರೆಯುತ್ತದೆ. (ಪ್ರಕೃತಿಯ ನಿಯಮವು ವಿಚಿತ್ರವಾಗಿದೆ!) ಯಥಾರ್ಥವಾದಿಯು ಅನುಭವದ ಬೇಡಿಗಳಲ್ಲಿ ಬಿಗಿಯಲ್ಪಟ್ಟಿರುತ್ತಾನೆ. ಏಕೆಂದರೆ ಪ್ರಪಂಚದಲ್ಲಿ ಕೆಟ್ಟ ಚರಿತ್ರವುಳ್ಳವರದೇ ಪ್ರಾಧಾನ್ಯವಿರುತ್ತದೆ—ಎಷ್ಟರವರೆಗೆ ಇರುವುದೆಂದರೆ, ಅತ್ಯಂತ ಉಜ್ವಲ

ಚರಿತ್ರದಲ್ಲಿಯೂ ಸಲ್ಪಿಲ್ಲ ಸ್ವಲ್ಪ ಕಲಂಕದ ಕಲೆಗಳು ಇರುತ್ತವೆ. ಆದುದರಿಂದ ಯಥಾರ್ಥವಾದವು ನಮ್ಮ ದುರ್ಬಲತೆಗಳ, ನಮ್ಮ ವಿಷಮತೆಗಳ ಮತ್ತು ನಮ್ಮ ಕ್ರೂರತೆಗಳ ನಗ್ನ ಚಿತ್ರವಾಗಿರುತ್ತದೆ ಮತ್ತು ಈ ರೀತಿಯಾಗಿ ಯಥಾರ್ಥವಾದವು ನಮ್ಮನ್ನು ನಿರಾಶಾವಾದಿಯನ್ನಾಗಿ ಮಾಡುತ್ತದೆ, ಮಾನವ-ಚರಿತ್ರದ ಮೇಲಿಂದ ನಮ್ಮ ವಿಶ್ವಾಸವು ಹಾರಿಹೋಗುತ್ತದೆ, ನಮಗೆ ನಮ್ಮ ಸುತ್ತಲೂ ಕೆಟ್ಟದೇ ಕೆಟ್ಟದು ದೃಷ್ಟಿಗೆ ಬೀಳತೊಡಗುತ್ತದೆ.

ಸಮಾಜದ ಕೆಟ್ಟ ರೀತಿಯ ಕಡೆಗೆ ಸಮಾಜದ ಗಮನವನ್ನು ಸೆಳೆಯಲು ಯಥಾರ್ಥವಾದವು ಅತ್ಯಂತ ಉಪಯೋಗಿಯಾದುದೆಂಬುದರಲ್ಲಿ ಸಂದೇಹವಿಲ್ಲ. ಏಕೆಂದರೆ ಇದರ ಹೊರತಾಗಿ ನಾವು ಕೆಟ್ಟದನ್ನು ತೋರಿಸುವಲ್ಲಿ ಅತ್ಯುಕ್ತಿಯನ್ನು ಮಾಡುವ ಹಾಗು ಚರಿತ್ರವು ವಾಸ್ತವವಾಗಿ ಇರುವುದಕ್ಕಿಂತ ಹೆಚ್ಚು ಕೆಟ್ಟದು—ಕಪ್ಪಾದುದು ಎಂದು ತೋರಿಸುವ ಸಂಭವವಿರುತ್ತದೆ. ಆದರೆ, ಅದು ದುರ್ಬಲತೆಗಳ ಚಿತ್ರಣ ಮಾಡುವಾಗ ಶಿಷ್ಟತೆಯ ಸೀಮೆಯನ್ನು ಉಲ್ಲಂಘಿಸಿದಲ್ಲಿ ಆಪತ್ತಿ-ಜನಕವಾಗುತ್ತದೆ. ಮಾನವ ಸ್ವಭಾವವು ಯಾವ ಛಲ, ಕ್ಷುದ್ರತನ ಮತ್ತು ಕಪಟದಿಂದ ಮುತ್ತಲ್ಪಟ್ಟಿರುವುದೋ ಅದರದೇ ಪುನರಾವೃತ್ತಿಯು ಅದರ ಚಿತ್ತಕ್ಕೆ ಪ್ರಸನ್ನತೆಯನ್ನುಂಟುಮಾಡಲಾರದು, ಇದೇ ಆದರ ವೈಶಿಷ್ಟ್ಯ. ಆದು ಸ್ವಲ್ಪ ಸಮಯವಾದರೂ ಸರಿಯೆ, ಕುತ್ಸಿತ ಭಾವನೆಗಳಿಂದ ಮುಕ್ತಿ ದೊರೆಯುವ, ತಾನು ಚಿಂತೆಯಲ್ಲಿ ಬಿದ್ದಿದ್ದೇನೆಂಬುದು ಮರೆತು ಹೋಗುವಂತಹ, ತನಗೆ ಸಜ್ಜನರ, ಸಹೃದಯಿಗಳ, ಉದಾರ ಜೀವಿಗಳ ದರ್ಶನದ ಲಾಭವು ದೊರೆಯುವಂತಹ ಹಾಗು ಛಲ ಮತ್ತು ಕಪಟ, ವಿರೋಧ ಮತ್ತು ವೈಮನಸ್ಯದ ಇಷ್ಟು ಪ್ರಾಧಾನ್ಯವಿರದ ಪ್ರಪಂಚಕ್ಕೆ ಹಾರಿಹೋಗಲು ಅಪೇಕ್ಷಿಸುತ್ತದೆ. ಯಾರೊಡನೆ ಇಪ್ಪತ್ತನಾಲ್ಕು ಗಂಟೆಯೂ ವ್ಯವಹಾರ ಮಾಡುತ್ತೇವೋ ಆವರದೇ ಸಂಬಂಧವು ಆಖ್ಯಾಯಿಕೆ—ಕಥೆಗಳಲ್ಲಿಯೂ ಬಂದರೆ ಅಂತಹ ಪುಸ್ತಕಗಳನ್ನು ಅದೇಕೆ ಓದಬೇಕು ಎಂಬ ವಿಚಾರವೂ ಮಾನವನ ಸ್ವಭಾವದಲ್ಲಿ ಅಂಕುರಿಸುತ್ತದೆ.

ಕತ್ತಲಮಯವಾದ ಸೆಕೆಯುಳ್ಳ ಕೋಣೆಯಲ್ಲಿ ಕೆಲಸವನ್ನು ಮಾಡಿ ಮಾಡಿ ದಣಿದಾಗ ಒಂದು ತೋಟಕ್ಕೆ ಹೋಗಿ ನಿರ್ಮಲ ಸ್ವಚ್ಛ ಗಾಳಿಯ

ಆನಂದವನ್ನು ಹೊಂದೋಣ ಎಂಬ ಇಚ್ಛೆಯುಂಟಾಗುತ್ತದೆ — ಇದೇ ಕೊರತೆಯನ್ನು ಆದರ್ಶವಾದವು ಈಡೇರಿಸುತ್ತದೆ. ಅದು ನಮಗೆ ಹೃದಯ ಪವಿತ್ರವಾಗಿರುವ, ಸ್ವಾರ್ಥ ಹಾಗು ವಾಸನಾಗಳಿಂದ ರಹಿತವಾಗಿರುವ, ಸಾಧು ಸ್ವಭಾವವುಳ್ಳ ಚರಿತ್ರಗಳೊಡನೆ ಪರಿಚಯುವನ್ನು ಮಾಡಿಸುತ್ತದೆ. ಇಂಥ ಚರಿತ್ರಗಳು ವ್ಯವಹಾರ-ಕುಶಲವಾಗಿರದಿದ್ದರೂ ಅವುಗಳ ಸರಳತೆಯು ಅವಕ್ಕೆ ಸಾಂಸಾರಿಕ ವಿಷಯುಗಳಲ್ಲಿ ಮೋಸಮಾಡುತ್ತದೆ, ಆದರೆ ಧೂರ್ತತನದಿಂದ ಬೇಸತ್ತ ಜೀವಿಗಳಿಗೆ ಇಂತಹ ಸರಳ, ಇಂತಹ ವ್ಯವಹಾರಿಕ ಜ್ಞಾನ-ರಹಿತ ಚರಿತ್ರಗಳ ದರ್ಶನದಿಂದ ಒಂದು ಬಗೆಯ ವಿಶೇಷ ಆನಂದವು ಉಂಟಾಗುತ್ತದೆ.

ಯಥಾರ್ಥವಾದವು ನಮ್ಮ ಕಣ್ಣುಗಳನ್ನು ತೆರೆದರೆ ಆದರ್ಶವಾದವು ನಮ್ಮನ್ನು ಎತ್ತಿ ಒಂದು ಮನೋರಮ ಸ್ಥಾನಕ್ಕೆ ಒಯ್ದು ಮುಟ್ಟಿಸುತ್ತದೆ. ಆದರೆ ಆದರ್ಶವಾದದಲ್ಲಿ ಈ ಗುಣವಿದ್ದರೂ ಸಿದ್ಧಾಂತಗಳ ಮೂರ್ತಿ ಮಾತ್ರವಾಗಿರುವ ಹಾಗು ಜೀವನವಿಲ್ಲದಿರುವ ಚರಿತ್ರಗಳನ್ನು ಚಿತ್ರಿತ ಮಾಡಿ ಕುಳಿತುಕೊಂಡು. ಬಿಟ್ಟೇವೋ ಎಂಬ ಸಂದೇಹವೂ ಅದರಲ್ಲಿ ಇದೆ. ಯಾವು-ದಾದರೂ ದೇವತೆಯನ್ನು ಬಯುಸುವದು ಕಷ್ಟವಲ್ಲ, ಆದರೆ ಆ ದೇವತೆಯಲ್ಲಿ ಪ್ರಾಣ-ಪ್ರತಿಷ್ಠೆಯನ್ನು ಮಾಡುವದು ಕಷ್ಟವಾದುದು.

ಆದ್ದರಿಂದ ಯಥಾರ್ಥವೂ ಆದರ್ಶವೂ ಸಮಾವೇಶವಾಗಿರುವ ಕಾದಂಬರಿಗಳೇ ಉಚ್ಚಕೋಟಿಯವೆಂದು ತಿಳಿಯಲ್ಪಡುತ್ತವೆ. ಅದಕ್ಕೆ ತಾವು 'ಆದರ್ಶೋನ್ಮುಖ ಯಥಾರ್ಥವಾದ' ಎಂದು ಅನ್ನಬಹುದು. ಆದರ್ಶವನ್ನು ಜೀವಂತಗೊಳಿಸುವುದಕ್ಕಾಗಿಯೇ ಯಥಾರ್ಥದ ಉಪಯೋಗವಾಗಬೇಕು ಮತ್ತು ಒಳ್ಳೆಯ ಕಾದಂಬರಿಯ ವೈಶಿಷ್ಟ್ಯವೂ ಇದೇ. ತನ್ನ ಸದ್ವ್ಯವಹಾರ ಮತ್ತು ಸದ್ವಿಚಾರದಿಂದ ಪಾಠಕನನ್ನು ಮೋಹಿಸುವ ಚರಿತ್ರಗಳನ್ನು ಸೃಷ್ಟಿಸುವುದೇ ಕಾದಂಬರಿಕಾರನ ಸರ್ವಶ್ರೇಷ್ಠ ವಿಭೂತಿಯಾಗಿದೆ. ಈ ಗುಣವಿಲ್ಲದ ಚರಿತ್ರಗಳ ಕಾದಂಬರಿಯು ಎರಡು ಕವಡೆಗಳ ಬೆಲೆಯುಳ್ಳದು.

ಚರಿತ್ರವನ್ನು ಉತ್ಕೃಷ್ಟ ಹಾಗೂ ಆದರ್ಶಯುಕ್ತವನ್ನಾಗಿ ಮಾಡಲು ಅದನ್ನು ನಿರ್ದೋಷವನ್ನಾಗಿ ಮಾಡುವದೇನೂ ಅಗತ್ಯವಿಲ್ಲ. ಏಕೆಂದರೆ ಅತ್ಯಂತ ಮಹಾ ಪುರುಷರಲ್ಲಿಯೂ ಸ್ವಲ್ಪಿಲ್ಲ ಸ್ವಲ್ಪ ದುರ್ಬಲತೆಗಳು ಇರುತ್ತವೆ.

ಚರಿತ್ರವನ್ನು ಸಜೀವಗೊಳಿಸುವುದಕ್ಕಾಗಿ ಅದರ ದುರ್ಬಲತೆಗಳನ್ನು ತೋರಿಸಿ-ದಲ್ಲಿ ಯಾವ ಹಾನಿಯೂ ಆಗುವುದಿಲ್ಲ. ಆದರೆ ಇವೇ ದುರ್ಬಲತೆಗಳು ಆ ಚರಿತ್ರವನ್ನು ಮನುಷ್ಯನನ್ನಾಗಿ ಮಾಡುತ್ತವೆ. ನಿರ್ದೋಷ ಚರಿತ್ರವು ದೇವತೆಯಾಗುವುದು ಮತ್ತು ನಾವು ಅದನ್ನು ಚೆನ್ನಾಗಿ ತಿಳಿದುಕೊಳ್ಳಲಾರೆವು. ಇಂಥ ಚರಿತ್ರದ ಯಾವ ಪರಿಣಾಮವೂ ನಮ್ಮ ಮೇಲೆ ಆಗುವುದಿಲ್ಲ. ನಮ್ಮ ಪ್ರಾಚೀನ ಸಾಹಿತ್ಯದ ಮೇಲೆ ಆದರ್ಶದ ಮುದ್ರೆಯು ಒತ್ತಿದೆ. ಅದು ಕೇವಲ ಮನೋರಂಜನೆಗಾಗಿ ಇದ್ದಿಲ್ಲ. ಮನೋರಂಜನೆಯೊಡನೆ ಆತ್ಮ ಪರಿಷ್ಕಾರವೂ ಅದರ ಮುಖ್ಯ ಉದ್ದೇಶ್ಯವಾಗಿತ್ತು. ಪಾಠಕರ ಮನಸ್ಸನ್ನು ಸಂತೋಷ ಗೊಳಿಸುವದಷ್ಟೇ ಸಾಹಿತ್ಯಕಾರನ ಕೆಲಸವಲ್ಲ, ಅದು ಭಟ್ಟಂಗಿಗಳ, ಕೋತಿ ಗಳನ್ನಾಡಿಸುವವರ, ವಿದೂಷಕರ ಮತ್ತು ಹಾಸ್ಯಗಾರರ ಕೆಲಸ. ಸಾಹಿತ್ಯ-ಕಾರನ ಸ್ಥಾನವು ಇದಕ್ಕಿಂತ ಎಷ್ಟೋ ಉಚ್ಚವಾದುದು. ಅವನು ನಮ್ಮ ಮಾರ್ಗದರ್ಶಕನು, ನಮ್ಮ ಮನುಷ್ಯತ್ವವನ್ನು ಎಚ್ಚರಿಸುವವನು, ನಮ್ಮಲ್ಲಿ ಸದ್ಭಾವನೆಗಳನ್ನು ತುಂಬುವವನು, ನಮ್ಮ ದೃಷ್ಟಿಯನ್ನು ವಿಶಾಲಗೊಳಿಸು ವವನು.—ಕನಿಷ್ಟಪಕ್ಷಕ್ಕೆ ಅವನದು ಇದೇ ಉದ್ದೇಶ್ಯವಾಗಿರಬೇಕು. ಈ ಮನೋರಥವನ್ನು ಈಡೇರಿಸುವುದಕ್ಕಾಗಿ ಅವನ ಚರಿತ್ರಗಳು Positive (ನೈಸರ್ಗಿಕ ಪ್ರಕಾಶದ—ಸತ್ಯದ)ವಾಗಿದ್ದು ಪ್ರಲೋಭನೆಗಳ ಎದುರಿಗೆ ತಲೆಬಾಗಿಸದವು, ಆದರೆ ಅವನ್ನು ಸೋಲಿಸುವಂತಹವೂ ವಾಸನೆಗಳ ಜಾಲದಲ್ಲಿ ಸಿಗದಂತಹವೂ, ಆದರೆ ಅವುಗಳ ದಮನಮಾಡುವಂತಹವೂ ಒಬ್ಬ ವಿಜಯಶಾಲಿ ಸೇನಾಪತಿಯಂತೆ ಶತ್ರುಗಳ ಸಂಹಾರ ಮಾಡಿ ವಿಜಯ ಧ್ವನಿಯನ್ನು ಮಾಡುತ್ತ ಹೊರಟಂತಹವೂ ಇರಬೇಕಾದುದು ಆವಶ್ಯಕ. ಇಂತಹ ಚರಿತ್ರಗಳ ಪರಿಣಾಮವೇ ನಮ್ಮ ಮೇಲೆ ಹೆಚ್ಚು ಆಗುತ್ತದೆ.

ಕೇವಲ ಕಲೆಯ ಪೂರ್ತಿಗಾಗಿ ರಚನೆಯನ್ನು ಮಾಡುವುದೇ ಸಾಹಿತ್ಯದ ಎಲ್ಲಕ್ಕೂ ಉಚ್ಚವಾದ ಆದರ್ಶ. 'ಕಲೆಗಾಗಿ ಕಲೆ' ಎಂಬ ಸಿದ್ಧಾಂತದ ಬಗೆಗೆ ಯಾರ ಆಕ್ಷೇಪವೂ ಇರಲಾರದು. ಮನುಷ್ಯನ ನೈಸರ್ಗಿಕ ಪ್ರವೃತ್ತಿಗಳನ್ನು ಅವಲಂಬಿಸಿದ ಸಾಹಿತ್ಯವು ಚಿರಾಯುವಾಗುತ್ತದೆ; ದ್ವೇಷ-ಪ್ರೇಮ, ಕ್ರೋಧ-ಲೋಭ, ಭಕ್ತಿ-ವಿರಾಗ, ದುಃಖ-ಲಜ್ಜೆ ಇವೆಲ್ಲವೂ ನಮ್ಮ ನೈಸರ್ಗಿಕ ಪ್ರವೃತ್ತಿಗಳು., ಇವುಗಳ ಕಾಂತಿಯನ್ನು ತೋರಿಸುವುದು ಸಾಹಿತ್ಯದ ಪರಮ

ಉದ್ದೇಶ್ಯವಾಗಿದೆ ಮತ್ತು ಉದ್ದೇಶ್ಯದ ಹೊರತು ಯಾವ ರಚನೆಯೂ ಕೃತಿಯೂ ಆಗುವುದು ಸಾಧ್ಯವಿಲ್ಲ.

ಸಾಹಿತ್ಯದ ಕೃತಿಯು ಯಾವುದಾದರೊಂದು ಸಾಮಾಜಿಕ, ರಾಜಕೀಯ ಮತ್ತು ಧಾರ್ಮಿಕ ಪ್ರಚಾರಕ್ಕಾಗಿ ರಚಿತವಾದಾಗ ಅದು ತನ್ನ ಉಚ್ಚಸ್ಥಾನ-ದಿಂದ ಕೆಳಗೆ ಬಿದ್ದುಬಿಡುತ್ತದೆ ಎಂಬುದರಲ್ಲಿ ಯಾವ ಸಂದೇಹವೂ ಇಲ್ಲ. ಆದರೆ ಇತ್ತೀಚಿಗೆ ಪರಿಸ್ಥಿತಿಗಳು ಕಲ್ಪನೆ ಮಾಡದಷ್ಟು ಮಿಂಚಿನ ವೇಗದಿಂದ ಬದಲಾಗುತ್ತಿರುವಾಗ, ಹೊಸ ಹೊಸ ವಿಚಾರಗಳು ಹುಟ್ಟುತ್ತಿರುವಾಗ ಬಹುಶಃ ಈಗ ಯಾವ ಲೇಖಕನೂ ಸಾಹಿತ್ಯದ ಆದರ್ಶವನ್ನು ಲಕ್ಷ್ಯ-ದಲ್ಲಿಟ್ಟುಕೊಳ್ಳಲಾರ. ಈ ಪರಿಸ್ಥಿತಿಗಳ ಪರಿಣಾಮವು ಲೇಖಕನ ಮೇಲೆ ಆಗದಿರುವುದು ಮತ್ತು ಅವನು ಅವುಗಳಿಂದ ಆಂದೋಲಿತನಾಗದಿರುವುದು ಅತ್ಯಂತ ಕಷ್ಟಸಾಧ್ಯವಾದುದೇ ಸರಿ. ಇದೇ ಕಾರಣದಿಂದಾಗಿ ಕೇವಲ ಭಾರತವರ್ಷದವರಷ್ಟೇ ಅಲ್ಲ, ಯುರೋಪದ ಮಹಾ–ಮಹಾ ವಿದ್ವಾಂಸರೂ ತಮ್ಮ ರಚನೆ–ಕೃತಿಯ ಮೂಲಕ 'ವಾದ'ದ ಪ್ರಚಾರ ಮಾಡುತ್ತಿದ್ದಾರೆ. ಇದರಿಂದ ತಮ್ಮ ರಚನೆಯು ಜೀವಂತವಾಗಿ ಉಳಿಯುವುದೋ ಅಥವಾ ಇಲ್ಲವೋ ಎಂಬುದನ್ನು ಕುರಿತು ಅವರು ಚಿಂತಿಸುವುದಿಲ್ಲ; ತಮ್ಮ ಮತದ, ಅಭಿಪ್ರಾಯದ ಪುಷ್ಟಿಯನ್ನು ಮಾಡುವುದೇ ಅವರ ಧ್ಯೇಯವಾಗಿದೆ., ಇದರ ಹೊರತಾಗಿ ಅವರಿಗೆ ಮತ್ತಾವ ಇಚ್ಛೆಯೂ ಇರುವುದಿಲ್ಲ. ಆದರೆ ಯಾವುದೊಂದು ವಿಚಾರದ ಪ್ರಚಾರಕ್ಕಾಗಿ ಬರೆಯಲ್ಪಡುವ ಕಾದಂಬರಿಯ ಮಹತ್ವವು ಕ್ಷಣಿಕವಾಗಿರುತ್ತದೆಂದು ಅದೇಕೆ ಒಪ್ಪಿಕೊಳ್ಳಬೇಕು ? ವ್ಹಿಕ್ಟರಹ್ಯೂಗೋನ 'ಲಾಮಿಜರಾಬಲ್', ಟಾಲಸ್ಟಾಯರ ಅನೇಕ ಗ್ರಂಥಗಳು, ಡಿಕೆನ್ಸರ ಅದೆಷ್ಟೋ ಕೃತಿಗಳು ವಿಚಾರ–ಪ್ರಧಾನವಾಗಿದ್ದರೂ ಉಚ್ಚ ಕೋಟಿಯ ಸಾಹಿತ್ಯಕೃತಿಗಳಾಗಿವೆ ಮತ್ತು ಇಂದಿನ ವರೆಗೂ ಅವುಗಳ ಆಕರ್ಷಣೆಯು ಕಡಿಮೆಯಾಗಿಲ್ಲ. ಈ ದಿನಗಳಲ್ಲಿಯೂ ಶಾ, ವೆಲ್ಸ ಮುಂತಾದ ದೊಡ್ಡ ದೊಡ್ಡ ಲೇಖಕರ ಗ್ರಂಥಗಳೂ ಪ್ರಚಾರದ್ದೇ ಉದ್ದೇಶ್ಯದಿಂದ ಬರೆಯಲ್ಪಡುತ್ತಿವೆ.

ಕುಶಲ ಸಾಹಿತ್ಯಕಾರನು ಮೂಲ ಪ್ರವೃತ್ತಿಗಳ ಸಂಘರ್ಷವನ್ನು ತೋರಿಸುವ ವಿಚಾರ–ಪ್ರಧಾನವಾದ ಕೃತಿಯನ್ನು ಅತ್ಯಂತ ಸುಂದರವಾಗಿ

ಅದೇಕೆ ರಚಿಸಬಾರದು ಎಂಬುದೇ ನಮ್ಮ ವಿಚಾರ. ದೇಶವು ಸುಖೀ-ಸಮೃದ್ಧವಾಗಿರುವಾಗ 'ಕಲೆಗಾಗಿ ಕಲೆ' ಎಂಬುದಕ್ಕೆ ಸಮಯವುಂಟು. ನಾವು ತರತರದ ರಾಜಕೀಯ ಮತ್ತು ಸಾಮಾಜಿಕ ಬಂಧನಗಳಲ್ಲಿ ಬಿಗಿಯಲ್ಪಟ್ಟಿರುವುದನ್ನು ನೋಡುತ್ತಿರುವಾಗ, ದೃಷ್ಟಿಹೋದತ್ತ ದುಃಖ ಮತ್ತು ಬಡತನದ ಭೀಕರ ದೃಶ್ಯಗಳೇ ಕಣ್ಣಿಗೆ ಬೀಳುತ್ತಿರುವಾಗ, ಸಂಕಟ-ವಿಪತ್ತುಗಳ ಕರುಣಕ್ರಂದನವು ಕೇಳಿಬರುತ್ತಿರುವಾಗ ವಿಚಾರಶೀಲ ಜೀವಿಯ ಹೃದಯ ತಲ್ಲಣಿಸದೇ ಇರುವುದು ಹೇಗೆ ಸಾಧ್ಯ, ಸಂಭವ? ನಿಜ, ಕಾದಂಬರಿಕಾರನು ತನ್ನ ವಿಚಾರಗಳನ್ನು ಪರೋಕ್ಷ ರೂಪದಿಂದ ವ್ಯಕ್ತಮಾಡಲು, ಮತ್ತು ಕಾದಂಬರಿಯ ಸ್ವಾಭಾವಿಕತೆಯಲ್ಲಿ ತನ್ನ ವಿಚಾರಗಳ ಸಮಾವೇಶದಿಂದ ವಿಘ್ನವುಂಟಾಗದಂತೆ ನೋಡಿಕೊಳ್ಳಲು ಅವಶ್ಯವಾಗಿ ಪ್ರಯತ್ನಿಸಬೇಕು; ಇಲ್ಲದೆ ಹೋದರೆ ಕಾದಂಬರಿಯು ನೀರಸವಾಗುವುದು.

ಡಿಕೆನ್ಸರು ಇಂಗ್ಲಂಡದ ಪ್ರಸಿದ್ಧ ಕಾದಂಬರಿಕಾರರಾಗಿ ಹೋಗಿದ್ದಾರೆ. ಪಿಕವಿಕ್ ಪೇಪರ್ಸ' ಎಂಬುದು ಅವರ ಒಂದು ಹಾಸ್ಯ-ರಸ ಪ್ರಧಾನವಾದ ಅಮರ ಕೃತಿಯು. ಪಿಕವಿಕ ಎಂಬ ಹೆಸರು ಒಂದು 'ಶಿಕರಮ್' ಗಾಡಿಯ ಪ್ರಯಾಣಿಕರ ಬಾಯಿಂದ ಡಿಕೆನ್ಸರ ಕಿವಿಗೆ ಬಿದ್ದಿತು. ಸರಿ, ಹೆಸರಿಗೆ ತಕ್ಕಂತೆ ಚರಿತ್ರ, ಆಕಾರ, ವೇಷ—ಎಲ್ಲವುಗಳ ರಚನೆಯಾಯಿತು. 'ಸಾಯಿಲಸ ಮಾರ್ನರ' ಎಂಬುದೂ ಒಂದು ಪ್ರಸಿದ್ಧ ಇಂಗ್ಲಿಷ ಕಾದಂಬರಿ. ಜಾರ್ಜ ಇಲಿಯಟ್ಟ ಬರೆದಿದ್ದಾರೆ—'ಇದರ ಲೇಖಿಕೆಯು ತನ್ನ ಬಾಲ್ಯದಲ್ಲಿ ಹೊತ್ತು ಮಾರುವ ಒಬ್ಬ ನೇಕಾರನ ಬೆನ್ನಮೇಲೆ ಬಟ್ಟೆಯ ಥಾನುಗಳನ್ನು ನೋಡಿದ್ದಳು, ಆ ಚಿತ್ರವು ಆಕೆಯ ಹೃದಯಪಟದ ಮೇಲೆ ಮೂಡಿತ್ತು ಮತ್ತು ಸಮಯಕ್ಕೆ ಸರಿಯಾಗಿ ಅದು ಕಾದಂಬರಿಯ ರೂಪದಲ್ಲಿ ಪ್ರಕಟವಾಯಿತು.' 'ಸ್ಕಾರಲೆಟ್ ಲೆಟರ' ಎಂಬುದು ಸಹ ಹಾಥರ್ನ ಅವರ ಅತ್ಯಂತ ಸುಂದರ ಹಾಗು ಮರ್ಮಸ್ಪರ್ಶೀ ಕೃತಿಯು. ಈ ಪುಸ್ತಕದ ಬೀಜಾಂಕುರವು ಅವರಿಗೆ ಒಂದು ಹಳೆಯ ದಾವೆಯ ಉದಾಹರಣೆಯಲ್ಲಿ ದೊರಕಿತು. ಭಾರತ-ವರ್ಷದಲ್ಲಿ ಇನ್ನೂ ಕಾದಂಬರಿಕಾರರ ಜೀವನ ಚರಿತ್ರಗಳು ಬರೆಯಲ್ಪಟ್ಟಿರುವುದಿಲ್ಲ. ಆದ್ದರಿಂದ ಭಾರತೀಯ ಕಾದಂಬರೀ ಸಾಹಿತ್ಯದಿಂದ ಯಾವುದಾದರೂ

ಉದಾಹರಣೆಯನ್ನು ಕೊಡುವುದು ಕಠಿಣ. 'ರಂಗಭೂಮಿ*ಯ ಬೀಜಾಂ-ಕುರವು ನಮ್ಮ ಊರಲ್ಲಿರುತ್ತಿದ್ದ ಓರ್ವ ಕುರುಡ ಭಿಕ್ಷುಕನಿಂದ ನಮಗೆ ದೊರೆಯಿತು. ಒಂದು ಸ್ವಲ್ಪ, ಹಾಗು ಚಿಕ್ಕ ಸಂಕೇತವು, ಚಿಕ್ಕ ಬೀಜವು ಲೇಖಕನ ಮಿದುಳಿಗೆ ಹೋಗಿ ವಿಶಾಲವಾದ ವೃಕ್ಷವಾಗುತ್ತದೆ, ಅದನ್ನು ನೋಡಿ ಜನರು ಆಶ್ಚರ್ಯಪಡತೊಡಗುತ್ತಾರೆ. 'ಎಮ್ ಎಂಡ್ರೂಜ್ ಹಿಮ್' ಎಂಬುದು ರಡ್ಯಾರ್ಡ್ ಕಿಪ್ಲಿಂಗರ ಒಂದು ಉತ್ಕೃಷ್ಟ ಕಾವ್ಯಕೃತಿ. ಒಂದು ದಿನ ರಾತ್ರಿ ಒಬ್ಬ ಇಂಜನಿಯರರು ತಮ್ಮ ಜೀವನ–ಕಥೆಯನ್ನು ಹೇಳಿದ್ದರು ಮತ್ತು ಅದೇ ಕಾವ್ಯಕ್ಕೆ ಆಧಾರವಾಯಿತು ಎಂದು ಕಿಪ್ಲಿಂಗರು ಒಂದು ಟಿಪ್ಪಣಿಯಲ್ಲಿ ಬರೆದಿದ್ದಾರೆ. ತಮ್ಮ ಕಾದಂಬರಿಗಳಿಗೆ ಪಾತ್ರಗಳು ತಮ್ಮ ನೆರೆಹೊರೆಯವರಲ್ಲಿ ದೊರೆತವೆಂದು ಮತ್ತೋರ್ವ ಪ್ರಸಿದ್ಧ ಕಾದಂಬರಿಕಾರರು ಹೇಳಿದ್ದಾರೆ. ಅವರು ಗಂಟೆಗಟ್ಟಲೆ ತಮ್ಮ ಕಿಡಕಿಯ ಬಳಿಯಲ್ಲಿ ಕುಳಿತು ಜನರು ಬರ–ಹೋಗುವುದನ್ನು ಸೂಕ್ಷ್ಮ ದೃಷ್ಟಿಯಿಂದ ನೋಡುತ್ತಿದ್ದರು ಮತ್ತು ಅವರ ಮಾತುಗಳನ್ನು ಲಕ್ಷಗೊಟ್ಟು ಕೇಳುತ್ತಿದ್ದರು. 'ಜೇನ ಆಯರ್' ಎಂಬುದನ್ನೂ ಕಾದಂಬರಿ ಪ್ರೇಮಿಗಳು ಅವಶ್ಯ ಓದಿರಬಹುದು. ಇಬ್ಬರು ಲೇಖಿಕೆಯರಲ್ಲಿ ಕಾದಂಬರಿಯ ನಾಯಿಕೆಯು ರೂಪವತಿಯಾಗಿರ ಬೇಕೋ ಇರಬಾರದೋ ಎಂಬ ಬಗೆಗೆ ಚರ್ಚೆಯಾಗುತ್ತಿತ್ತು. 'ಜೇನ ಆಯರ್'ದ ಲೇಖಿಕೆಯು 'ನಾಯಿಕೆಯು ರೂಪತಿಯಾಗಿರದ್ದರೂ ಆಕರ್ಷಕ ಳಾಗುವಂತಹ ಕಾದಂಬರಿಯನ್ನು ನಾನು ಬರೆಯುವೆನು' ಎಂದು ನುಡಿದಳು. ಈ ನುಡಿಯ ಫಲವೇ 'ಜೇನ ಆಯರ್.'

ಬಹುತರವಾಗಿ ಲೇಖಕರಿಗೆ ಪುಸ್ತಕಗಳಿಂದ ತಮ್ಮ ಕೃತಿಗಳಿಗೆ ಅಂಕುರಗಳು ದೊರೆಯುತ್ತವೆ. ಹಾಲ್ ಕೇನ್ ಅವರ ಹೆಸರನ್ನು ಪಾಠಕರು ಕೇಳಿರಬಹುದು. ಇವರ ಒಂದು ಉತ್ತಮ ಕೃತಿಯ ಅನುವಾದವು ಹಿಂದೀ-ಯಲ್ಲಾಗಿದೆ—'ಅಮರಪುರಿ' ಎಂಬ ಹೆಸರಿನಲ್ಲಿ. ಅವರು ತಮಗೆ ಬಾಯಿ-ಬಲ್‌ದಿಂದ ವಸ್ತುಗಳು ದೊರಕುತ್ತವೆಂದು ಬರೆದಿದ್ದಾರೆ. ಮೆಟರಲಿಂಕ ಎಂಬವರು ಬೆಲ್ಜಿಯಮ್‌ದ ಜಗದ್ವಿಖ್ಯಾತ ಪ್ರಸಿದ್ಧ ನಾಟಕಕಾರರು.

* 'ರಗಭೂಮಿ' ಕಾದಂಬರಿಯು ಪ್ರೇಮಚಂದರ ಪ್ರಸಿಪ್ಧ ಬೃಹತ್ ಕಾದಂಬರಿ.

ಅವರಿಗೆ ಬೆಲ್ಜಿಯಮ್‌ದ ಶೆಕ್ಸಪಿಯರ್ ಎಂದು ಅನ್ನುತ್ತಾರೆ. ಅವರ ಒಂದು 'ಮೋನಾ ಬೋನ' ಎಂಬ ನಾಟಕಕ್ಕೆ ಬ್ರೌನಿಂಗನ ಒಂದು ಕವಿತೆಯಿಂದ ಪ್ರೇರಣೆಯು ದೊರಕಿತ್ತು ಮತ್ತು 'ಮೇರಿ ಮಗ್ದಾಲೀನ' ಎಂಬುದಕ್ಕೆ ಒಂದು ಜರ್ಮನ್ ನಾಟಕ ಪ್ರೇರಕವಾಗಿತ್ತು. ಶೆಕ್ಸಪಿಯರನ ನಾಟಕಗಳ ಮೂಲಸ್ಥಾನದ ಸಂಶೋಧನೆಯನ್ನು ಮಾಡಿ ಮಾಡಿ ಎಷ್ಟೋ ವಿದ್ವಾಂಸರು 'ಡಾಕ್ಟರ' ಪದವಿಯನ್ನು ಸಂಪಾದಿಸಿದ್ದಾರೆ. ಸದ್ಯದ ಎಷ್ಟೋ ಕಾದಂಬರಿಕಾರರೂ ನಾಟಕಕಾರರೂ ಶೆಕ್ಸಪಿಯರನಿಂದ ಸಹಾಯವನ್ನು ಪಡೆದಿದ್ದಾರೆ, ಇದರ ಸಂಶೋಧನೆಯನ್ನು ಮಾಡಿ ಅನೇಕರು 'ಡಾಕ್ಟರ' ಪದವಿಯನ್ನು ಸಂಪಾದಿಸಬಹುದು. 'ತಿಲಸ್ಮ ಹೋಶರುಬಾ' ಎಂಬುದೊಂದು ಫಾರಸಿಯ ದೊಡ್ಡ ಗ್ರಂಥ, ಅದನ್ನು ರಚಿಸಿದವರು ಅಕಬರನ ದರಬಾರದಲ್ಲಿದ್ದ ಫೈಜೀ ಎಂಬವರು ಎಂದು ಹೇಳುತ್ತಾರೆ. ಆದಾಗ್ಯೂ ಇದನ್ನು ಒಪ್ಪುವುದು ಸಂದೇಹಾಸ್ಪದವಾದುದು. ಈ ಗ್ರಂಥದ ಅನುವಾದವು ಉರ್ದೂದಲ್ಲಿಯೂ ಆಗಿದೆ. ಇದು ಕನಿಷ್ಟ ೨೦೦೦೦ ಪುಟಗಳ ಪುಸ್ತಕವಾಗುವುದು. ಸ್ವರ್ಗೀಯ ಬಾಬೂ ದೇವಕೀನಂದನ ಖತ್ರೀ ಅವರು ತಮ್ಮ 'ಚಂದ್ರಕಾಂತಾ ಸಂತತಿ' ಎಂಬ ಕೃತಿಗೆ ಬೀಜಾಂಕುರವನ್ನು 'ತಿಲಸ್ಮ ಹೋಶರುಬಾ'ದಿಂದ ಪಡೆದಿರ-ಬಹುದೆಂದು ಊಹಿಸಬಹುದಾಗಿದೆ.

ಪ್ರಪಂಚದ ಸಾಹಿತ್ಯದಲ್ಲಿ ಇಂತಹ ಎಷ್ಟೋ ಕಥೆಗಳು ಇವೆ, ಅವುಗಳ ಮೇಲೆ ಸಾವಿರಾರು ವರ್ಷಗಳಿಂದ ಲೇಖಕರು ಆಖ್ಯಾಯಿಕೆಗಳನ್ನು ಬರೆಯುತ್ತ ಬಂದಿದ್ದಾರೆ. ಮತ್ತು ಬಹುಶಃ ಸಾವಿರಾರು ವರ್ಷಗಳ ವರೆಗೆ ಬರೆಯುತ್ತ ಹೋಗಬಹುದು ನಮ್ಮ ಪೌರಾಣಿಕ ಕಥೆಗಳ ಮೇಲೆ ಅವೆಷ್ಟು ನಾಟಕಗಳು ಮತ್ತು ಕಥೆಗಳು ಬರೆಯಲ್ಪಟ್ಟಿರುವುವೋ ಏನೊ. ಯುರೋಪ-ದಲ್ಲಿಯೂ ಗ್ರೀಸದ ಪೌರಾಣಿಕ ಗಾಥೆಗಳು ಕವಿ–ಕಲ್ಪನೆಗೆ ಅಶೇಷ ಆಧಾರ-ವಾಗಿವೆ. 'ಇಬ್ಬರು ಸೋದರರ ಕಥೆ'ಯು ಮೊದಲು ಇಜಿಪ್ತದ ಮೂರು ಸಾವಿರ ವರುಷ ಹಳೆಯ ಲೇಖಗಳಿಂದ ಪತ್ತೆಯಾಗಿತ್ತು, ಅದರ ಸಮಾ-ವೇಶವು ಫ್ರಾನ್ಸದಿಂದ ಭಾರತವರ್ಷದ ವರೆಗೆ, ಒಂದು ಡಜನ್ ಪ್ರಸಿದ್ಧ ಭಾಷೆಗಳ ಸಾಹಿತ್ಯದಲ್ಲಿ ಆಗಿದೆ. ಇನ್ನೂ ಹೇಳುವುದಾದರೆ, ಆ ಕಥೆಯ ಒಂದು ಘಟನೆಯು ಬಾಯಿಬಲ್‌ದಲ್ಲಿ ತದ್ರೂಪದಲ್ಲಿ ದೊರೆಯುತ್ತದೆ.

ಆದರೆ ಲೇಖಕರು ಆಲಸ್ಯದಿಂದಲೋ ಕಲ್ಪನಾಶಕ್ತಿಯ ಅಭಾವ-ದಿಂದಲೋ ಪ್ರಾಚೀನ ಕಥೆಗಳ ಉಪಯೋಗವನ್ನು ಮಾಡಿಕೊಳುತ್ತಾರೆಂದು ತಿಳಿಯುವುದು ತಪ್ಪಾದೀತು. ನಿಜವಾದ ಮಾತೆಂದರೆ–ಹಳೆಯ ಕಥಾನಕದಲ್ಲಿ ದೊರೆಯುವ ಆ ರಸ ಆ ಆಕರ್ಷಣ, ಹೊಸ ಕಥಾನಕದಲ್ಲಿ ದೊರೆಯುವದಿಲ್ಲ. ನಿಜ ಆದರೆ ಅವುಗಳ ಕಲೇವರವು ನವೀನವಾಗಿರಬೇಕು. 'ಶಕುಂತಲಾ'ದ ಮೇಲೆ ಯಾರಾದರೂ ಒಂದು ಕಾದಂಬರಿಯನ್ನು ಬರೆದರೆ ಅದು ಎಷ್ಟು ಮರ್ಮಸ್ಪರ್ಶೀ ಆದೀತೆಂಬುದನ್ನು ಹೇಳುವುದು ಅವಶ್ಯವಿಲ್ಲ

ರಚನಾಶಕ್ತಿಯು ಸ್ವಲ್ಪ ಹೆಚ್ಚುಕಡಮೆಯಾಗಿ ಎಲ್ಲ ಜೀವಿಗಳಲ್ಲಿಯೂ ಇರುತ್ತದೆ. ಅಭ್ಯಾಸವಿದ್ದವರು ಹಿಂಜರಿಯುವುದಿಲ್ಲ—ಕೈಯಲ್ಲಿ ಲೆಕ್ಕಣಿಕೆಯನ್ನು ಹಿಡಿದೊಡನೆ ಬರೆಯತೊಡಗುತ್ತಾರೆ., ಆದರೆ ಹೊಸ ಲೇಖಕರು ಏನಾದರೂ ಬರೆಯುವ ಮುನ್ನ ಸಮುದ್ರದಲ್ಲಿ ಹಾರಿಕೊಳ್ಳಲು ಹೋದವರಂತೆ ಸ್ವಲ್ಪ ಹಿಂಜರಿಯುತ್ತಾರೆ. ಬಹುತರವಾಗಿ ಒಂದು ತುಚ್ಛ ಘಟನೆಯು ಅವರ ಮಿದುಳಿನ ಮೇಲೆ ಪ್ರೇರಕವಾಗುತ್ತದೆ. ಒಬ್ಬರ ಹೆಸರನ್ನು ಕೇಳಿ, ಒಂದು ಕನಸನ್ನು ಕಂಡು, ಒಂದು ಚಿತ್ರವನ್ನು ನೋಡಿ ಅವರ ಕಲ್ಪನೆಯು ಜಾಗೃತವಾಗುತ್ತದೆ. ಯಾರ ಮೇಲೆ ಯಾವ ಪ್ರೇರಣೆಯ ಪ್ರಭಾವವು ಹೆಚ್ಚು ಬೀಳುತ್ತದೆಂಬುದು ಆ ವ್ಯಕ್ತಿಯನ್ನು ಅವಲಂಬಿಸಿದೆ. ಒಬ್ಬರ ಕಲ್ಪನೆಯು ದೃಶ್ಯವಿಷಯಗಳಿಂದ ಜಾಗೃತವಾದರೆ, ಒಬ್ಬರದು ಗಂಧದಿಂದ. ಒಬ್ಬರದು ಶ್ರವಣದಿಂದ, ಒಬ್ಬರದು ಹೊಸ ಸುರಮ್ಯಸ್ಥಾನದ ಪ್ರವಾಸದಿಂದ ಜಾಗೃತವಾಗುತ್ತದೆ ಮತ್ತು ಸಾಕಷ್ಟು ಸಹಾಯವು ಆ ವಿಷಯದಿಂದ ದೊರೆಯುತ್ತದೆ. ನದಿಯ ದಂಡೆಯ ಮೇಲೆ ಒಬ್ಬರೇ ತಿರುಗಾಡುವದರಿಂದ ಹೆಚ್ಚಾಗಿ ವಿಶೇಷವಾಗಿ ಹೊಸ-ಹೊಸ ಕಲ್ಪನೆಗಳು ಜಾಗೃತವಾಗುತ್ತವೆ.

ಈಶ್ವರದತ್ತ ಶಕ್ತಿಯು ಮುಖ್ಯ ವಸ್ತುವು. ಎಲ್ಲಿಯ ವರೆಗೆ ಈ ಶಕ್ತಿಯು ಇರುವುದಿಲ್ಲವೋ ಅಲ್ಲಿಯವರೆಗೆ ಉಪದೇಶ, ಶಿಕ್ಷಣ, ಅಭ್ಯಾಸ ಎಲ್ಲವೂ ನಿಷ್ಫಲ. 'ಆದರೆ ಈ ಶಕ್ತಿಯು ಯಾರಲ್ಲಿದೆ ಮತ್ತು ಯಾರಲ್ಲಿ ಇಲ್ಲ ಎಂಬುದು ಗೊತ್ತಾಗುವುದು ಹೇಗೆ? ಇದಕ್ಕೆ ಪ್ರಮಾಣಗಳು ದೊರೆಯಲು ಅನೇಕ ವರ್ಷಗಳು ತಗಲುತ್ತವೆ ಮತ್ತು ಬಹಳಷ್ಟು ಪರಿಶ್ರಮವು ನಷ್ಟ

ವಾಗುತ್ತದೆ. ಅಮೇರಿಕೆಯ ಒಬ್ಬ ಪತ್ರ ಸಂಪಾದಕರು ಇದನ್ನು ಪರೀಕ್ಷಿಸುವ ಒಂದು ಹೊಸ ಪದ್ಧತಿಯನ್ನು ಹುಡುಕಿ ತೆಗೆದಿದ್ದಾರೆ. ತಂಡೋಪತಂಡ ಯುವಕರಲ್ಲಿ ಯಾರು ರತ್ನ ಮತ್ತು ಯಾರು ಪಾಷಾಣ ಎಂಬುದನ್ನು ಕಂಡು ಹಿಡಿಯುವುದಕ್ಕಾಗಿ ಅವರು ಉಮೇದವಾರರ ಕೈಯಲ್ಲಿ ಒಬ್ಬ ಪ್ರಸಿದ್ಧ ವ್ಯಕ್ತಿಯ ಹೆಸರನ್ನು ಬರೆದುಕೊಡುತ್ತಾರೆ ಮತ್ತು ಆ ಹೆಸರಿನ ಬಗೆಗೆ ಕೂಡಲೇ ಅನೇಕ ಪ್ರಶ್ನೆಗಳನ್ನು ಕೇಳತೊಡಗುತ್ತಾರೆ—"ಆಕೆಯ ಕೂದಲಿದ ಬಣ್ಣವಾವುದು? ಆಕೆಯ ಬಟ್ಟೆಗಳು ಹೇಗಿವೆ? ಎಲ್ಲಿರುತ್ತಾಳೆ, ಆಕೆಯ ತಂದೆ ಯಾವ ಕೆಲಸವನ್ನು ಮಾಡುತ್ತಾನೆ? ಆಕೆಯ ಜೀವನದ ಮುಖ್ಯ ಅಭಿಲಾಷೆಯೇನು?" ಇತ್ಯಾದಿ. ಒಂದು ವೇಳೆ ಯುವಕನು ಈ ಪ್ರಶ್ನೆ-ಗಳಿಗೆ ಸಂತೋಷಜನಕ ಉತ್ತರಗಳನ್ನು ಕೊಡದೇ ಹೋದರೆ ಅವನು ಅಯೋಗ್ಯನೆಂದು ಅವನನ್ನು ಬೀಳ್ಕೊಡುತ್ತಾರೆ. ನಿರೀಕ್ಷಣ ಶಕ್ತಿಯು ಇಷ್ಟು ಶಿಥಿಲವಿದ್ದವನು ಅವರ ದೃಷ್ಟಿಯಲ್ಲಿ ಕಾದಂಬರಿಕಾರನಾಗಲಾರ ಈ ಪರೀಕ್ಷಾ-ಕ್ರಮದಲ್ಲಿ ನಾವಿನ್ಯವೇನೋ ಅವಶ್ಯವಾಗಿ ಇದೆ, ಆದರೆ ಭ್ರಾಮಕತೆಯ ಮಾತ್ರೆಯೂ ಕಡಮೆ ಇಲ್ಲ.

ಲೇಖಕರ ಬಳಿಯಲ್ಲಿ ಒಂದು ಟಿಪ್ಪಣಿ ಪುಸ್ತಕವಿರುವದು ಆವಶ್ಯಕ. ಈ ಪಂಕ್ತಿಗಳ ಲೇಖಕನು ಎಂದೂ ಟಿಪ್ಪಣಿ ಪುಸ್ತಕವನ್ನಿಟ್ಟಿಲ್ಲ, ಇದರ ಆವಶ್ಯ-ಕತೆಯನ್ನು ಒಪ್ಪುತ್ತಾನೆ ಯಾವುದಾದರೂ ಒಂದು ಹೊಸ ವಸ್ತು ಒಂದು ವಿಲಕ್ಷಣ ಮೂರ್ತಿ, ಒಂದು ಸುರಮ್ಯ ದೃಶ್ಯವನ್ನು ನೋಡಿ ಅವನ್ನು ಟಿಪ್ಪಣಿ ಪುಸ್ತಕದಲ್ಲಿ ಬರೆದಿಟ್ಟಿದ್ದರೆ ಬಹಳ ಉಪಯೋಗವಾಗುತ್ತದೆ ಯುರೋಪ-ದಲ್ಲಿ ಲೇಖಕರ ಹತ್ತಿರ, ಅವರ ಮಸ್ತಿಷ್ಕವು ಪ್ರತಿಯೊಂದು ಬಗೆಯ ವಸ್ತು-ಗಳನ್ನು ಬೇರೆ ಬೇರೆ ಖಾನೆಗಳಲ್ಲಿ ಸಂಗ್ರಹಿಸಿ ಇಟ್ಟುಕೊಳ್ಳುವಷ್ಟು ಯೋಗ್ಯ-ವಾಗುವ ತನಕ ಒಂದು ಟಿಪ್ಪಣಿ ಪುಸ್ತಕವು ಅವಶ್ಯವಾಗಿ ಇದ್ದೇ ಇರುತ್ತದೆ. ಅನೇಕ ವರ್ಷಗಳ ಅಭ್ಯಾಸದ ನಂತರ ಈ ಯೋಗ್ಯತೆಯು ಬರುತ್ತದೆ ಎಂಬು-ದರಲ್ಲಿ ಸಂದೇಹವಿಲ್ಲ. ಆದರೆ ಆರಂಭಕಾಲದಲ್ಲಿ ಒಂದು ಟಿಪ್ಪಣಿ ಪುಸ್ತಕ-ವನ್ನಿಟ್ಟುಕೊಳ್ಳುವದು ಅತ್ಯಂತ ಆವಶ್ಯಕ. ಒಂದು ವೇಳೆ ಲೇಖಕನು ತಾನು ಚಿತ್ರಿಸುವ ದೃಶ್ಯಗಳು ಸಜೀವವಾಗಬೇಕೆಂದೂ ತಾನು ಮಾಡುವ ವರ್ಣನೆಗಳು ಸ್ವಾಭಾವಿಕವಾಗಿರಬೇಕೆಂದೂ ಬಯಸುತ್ತಿದ್ದರೆ ಅವನು

ಅನಿವಾರ್ಯವಾಗಿ ಟಿಪ್ಪಣಿ ಪುಸ್ತಕದಿಂದ ನೆರವನ್ನು ತೆಗೆದುಕೊಳ್ಳಬೇಕಾಗುವುದು. ಒಬ್ಬ ಕಾದಂಬರೀಕಾರರ ನಮೂನೆಯನ್ನು ನೋಡಿರಿ—

'ಅಗಸ್ಟ ೨೧, ೧೨ ಗಂಟೆ ಹಗಲು, ಒಂದು ದೋಣಿಯ ಮೇಲೆ ಒಬ್ಬ ಮನುಷ್ಯ, ಶ್ಯಾಮವರ್ಣ, ಬಿಳಿಕೂದಲು, ಕಣ್ಣು ಓರೆಯಾದುವು, ರೆಪ್ಪೆಗಳು ಭಾರವಾದವು, ತುಟಿಗಳು ಮೇಲಕ್ಕೆದ್ದುವು ಮತ್ತು ದಪ್ಪವಾದುವು, ಮೀಸೆ ಹುರಿಕಟ್ಟಾದುವು—ನಿಮಿರಿ ನಿಂತುವು.

'ಸಪ್ಟಂಬರ ೧, ಸಮುದ್ರದ ದೃಶ್ಯ, ಮೋಡಗಳು ಕಪ್ಪು ಮತ್ತು ಬಿಳಿಯುವು, ನೀರಲ್ಲಿ ಸೂರ್ಯನ ಪ್ರತಿಬಿಂಬ, ಕಪ್ಪು, ಹಸಿರು, ಹೊಳಪುಳ್ಳದು, ತರಂಗಗಳು ಬಿರುಗುಳ್ಳವು, ಅವುಗಳ ಮೇಲ್ಭಾಗ ಬೆಳ್ಳಗೆ, ತರಂಗಗಳ ಶಬ್ದ, ತರಂಗಗಳ ತುಂತುರಗಳಿಂದ ಇಬ್ಬನಿ ಹಾರಿದಂತೆ.'

ಇದೇ ಮಹಾಶಯರನ್ನು ತಮಗೆ ಕಥೆಗಳಿಗಾಗಿ ವಸ್ತುಗಳು ಎಲ್ಲಿ ದೊರೆಯುತ್ತಿವೆ ಎಂದು ಕೇಳಲು ಅವರು ಉತ್ತರಿಸಿದರು—'ನಾಲ್ಕು ಕಡೆಗೆ. ಲೇಖಕನು ತನ್ನ ಕಣ್ಣುಗಳನ್ನು ತೆರೆದಿಟ್ಟುಕೊಂಡಿದ್ದರೆ ಅವನಿಗೆ ಗಾಳಿಯಲ್ಲಿ ಕಥೆಗಳು ದೊರೆಯಬಹುದು. ರೈಲುಗಾಡಿಯಲ್ಲಿ, ದೋಣಿಗಳಲ್ಲಿ ಸಮಾಚಾರ-ಪತ್ರಿಕೆಗಳಲ್ಲಿ, ಮನುಷ್ಯನ ವಾರ್ತಾಲಾಪದಲ್ಲಿ ಮತ್ತು ಸಾವಿರಾರು ಸ್ಥಳಗಳಿಂದ ಸುಂದರವಾದ ಕಥೆಗಳನ್ನು ಕಟ್ಟಬಹುದು, ಸಿದ್ಧಗೊಳಿಸಬಹುದು. ಅನೇಕ ವರ್ಷಗಳ ಅಭ್ಯಾಸದ ನಂತರ ನೋಡುವ ದೃಷ್ಟಿಯು ತಾನೇ ಸ್ವಾಭಾವಿಕವಾಗುತ್ತದೆ. ದೃಷ್ಟಿಯು ತಂತಾನೇ ತನಗೆ ಬೇಕಾದ ವಿಷಯವನ್ನು ಆರಿಸಿ ತೆಗೆದುಕೊಳ್ಳುತ್ತದೆ.' ಎರಡು ವರುಷಗಳ ಮೊದಲು ನಾನು ನನ್ನೊಬ್ಬ ಮಿತ್ರನೊಡನೆ ತಿರುಗಾಡಲು ಹೋಗಿದ್ದೆ. ಮಾತು ಮಾತಿನಲ್ಲಿ ಒಂದು ಚರ್ಚೆಯು ಎದ್ದಿತು—'ಒಂದು ವೇಳೆ ಇಬ್ಬರ ಹೊರತಾಗಿ ಪ್ರಪಂಚದ ಎಲ್ಲ ಮನುಷ್ಯರು ಕೊಲ್ಲಲ್ಪಟ್ಟರೆ ಏನಾಗುವುದು?' ಎಂದು. ಈ ಅಂಕುರದಿಂದ ನಾನು ಅನೇಕ ಸುಂದರ ಕತೆಗಳನ್ನು ಯೋಚಿಸಿ ತೆಗೆದೆ.

ಕಾದಂಬರಿಗಳಿಗೆ ಪುಸ್ತಕಗಳಿಂದ ಸಾಮಗ್ರಿಯನ್ನು ತೆಗದುಕೊಳ್ಳದೇ ಜೀವನದಿಂದಲೇ ತೆಗೆದುಕೊಳ್ಳಬೇಕೆಂಬ ವಿಷಯದಲ್ಲಿ ಕಾದಂಬರೀ ಕಲೆಯ ಸರ್ವ ವಿಶಾರದರು ಏಕಮತದವರು, ಒಮ್ಮತದವರು ಆಗಿದ್ದಾರೆ. ವಾಲಟರ

ವೆಸೆಂಟ ಅವರು ತಮ್ಮ 'ಕಾದಂಬರೀ—ಕಲಾ' ಎಂಬ ಪುಸ್ತಕದಲ್ಲಿ ಹೀಗೆ ಬರೆದಿದ್ದಾರೆ—

'ಕಾದಂಬರಿಕಾರನು ತನಗೆ ಬೇಕಾಗುವ ಸಾಮುಗ್ರಿಯನ್ನು ಗೂಡಿನಲ್ಲಿ ಕಪಾಟಿನಲ್ಲಿ ಇಟ್ಟ ಪುಸ್ತಕಗಳಿಂದಲ್ಲ, ನಿತ್ಯವೂ ಸುತ್ತಲೂ ದೊರೆಯುತ್ತಿರುವ ಮನುಷ್ಯರ ಜೀವನದಿಂದ ತೆಗೆದುಕೊಳ್ಳಬೇಕು. ಹೆಚ್ಚು ಜನರು ತಮ್ಮ ಕಣ್ಣುಗಳಿಂದ ಕೆಲಸವನ್ನೇ ತೆಗೆದುಕೊಳ್ಳುವದಿಲ್ಲವೆಂದು ನನಗೆ ಪೂರ್ಣ ನಂಬಿಗೆ ಇದೆ ಮನುಷ್ಯರಲ್ಲಿದ್ದ ಒಳ್ಳೆಯ ನಮೂನೆಗಳೆಲ್ಲವನ್ನೂ ಕುರಿತು ಪೂರ್ವಕಾಲದ ಲೇಖಕರು ಬರೆದುಬಿಟ್ಟರು, ಈಗ ನಮಗೇನು ಉಳಿದಿದೆ ಎಂದು ಕೆಲವರಿಗೆ ಶಂಕೆಯುಂಟಾಗುತ್ತದೆ. ಇದು ಸತ್ಯ., ಆದರೆ ಮೊದಲು ಯಾರಾದರೂ ಮುದುಕರು, ಜಿಪುಣರು, ಮುಂಗಾಲಪುಟಿಗೆಯ ಯುವಕರು, ಜೂಜುಗಾರರು, ಕುಡುಕರು, ವಿಲಾಸಿನಿ ಯುವತಿಯರು ಮುಂತಾದವರ ಚಿತ್ರಣವನ್ನು ಮಾಡಿದ್ದರೆ ಈಗ ಅದೇ ವರ್ಗದ ಬೇರೆ ಚರಿತ್ರಗಳು ಸಿಗುವು ದಿಲ್ಲವೇನು ? ಪುಸ್ತಕಗಳಲ್ಲಿ ನವೀನ ಚರಿತ್ರಗಳು ಸಿಗಲಿಕ್ಕಿಲ್ಲ; ಆದರೆ ಜೀವನದಲ್ಲಿ ನವೀನತೆಯ ಅಭಾವವು ಎಂದೂ ಉಂಟಾಗಿಲ್ಲ.'

ಹೆನ್ರೀ ಜೇಮ್ಸರು ಈ ವಿಷಯದಲ್ಲಿ ಪ್ರಕಟಮಾಡಿದ ವಿಚಾರಗಳನ್ನು ನೋಡಿರಿ—

'ಲೇಖಕನ ಬುದ್ಧಿಯು ಕಲ್ಪನಾ-ಕುಶಲವಾಗಿದ್ದರೆ ಅದು ಸೂಕ್ಷ್ಮತಮ ಭಾವಗಳಿಂದ ಜೀವನವನ್ನು ವ್ಯಕ್ತಗೊಳಿಸುತ್ತದೆ, ಅದು ವಾಯುವಿನ ಸ್ಪಂದನಕ್ಕೂ ಜೀವನವನ್ನು ಕೊಡಬಲ್ಲದು. ಆದರೆ ಕಲ್ಪನೆಗೆ ಸ್ವಲ್ಪ ಆಧಾರವು ಅವಶ್ಯವಾಗಿ ಬೇಕು. ತರುಣ ಲೇಖಿಕೆಯೊಬ್ಬಳು ಎಂದೂ ಸೈನಿಕ ಜೀವನವನ್ನು ನೋಡದೆ ಇದ್ದಾಗ ತಮಗೆ ಸೈನಿಕ ಜೀವನದಲ್ಲಿ ಕೈಹಾಕಬಾರದೆಂದು ಹೇಳಿದರೆ ಅದರಲ್ಲಿ ಅನೌಚಿತ್ಯವೇನೂ ಇಲ್ಲ. ನಾನು ಒಬ್ಬ ಇಂಗ್ಲಿಷ ಕಾದಂಬರಿಕಾರರನ್ನು ಬಲ್ಲೆ, ಅವರು ತಮ್ಮದೊಂದು ಕಥೆಯಲ್ಲಿ ಫ್ರಾನ್ಸದ ಪ್ರೊಟೆಸ್ಟಂಟ ಯುವಕರ ಜೀವನದ ಒಳ್ಳೆಯ ಚಿತ್ರವನ್ನು ಚಿತ್ರಿಸಿದ್ದರು. ಅದನ್ನು ಕುರಿತು ಸಾಹಿತ್ಯಿಕ ಪ್ರಪಂಚದಲ್ಲಿ ಬಹಳ ಚರ್ಚೆಯಾಯಿತು. ಆಗ ಅವರು ಜನರನ್ನು ಕೇಳಿದರು—'ನಿಮಗೆ ಈ ಸಮಾಜದ ನಿರೀಕ್ಷಣೆಯನ್ನು

ಮಾಡುವ ಇಂತಹ ಸಂಧಿಯು ಎಲ್ಲಿ ದೊರಕಿತು ? (ಫ್ರಾನ್ಸ ರೋಮನ್ ಕೆಥೊಲಿಕ್ ದೇಶವು ಮತ್ತು ಸಾಮಾನ್ಯವಾಗಿ ಅಲ್ಲಿ ಪ್ರೊಟೆಸ್ಟಂಟರು ಕಾಣುವುದಿಲ್ಲ. ) ಒಂದು ಬಾರಿ, ಕೇವಲ ಒಂದು ಬಾರಿ ಅನೇಕ ಪ್ರೊಟೆಸ್ಟಂಟ ಯುವಕರು ಕುಳಿತುಕೊಂಡುದನ್ನು ಅವರು ನೋಡಿದ್ದರೆಂದು ತಿಳಿದು ಬಂದಿತು. ಸರಿ, ಒಂದು ಬಾರಿ ನೋಡಿದುದೇ ಅವರಿಗೆ ಸುವರ್ಣ-ವಾಯಿತು ಕಲ್ಪನೆಯು ಕಟ್ಟುವ ವಿಶಾಲಭವನಕ್ಕೆ ಆಧಾರವು ದೊರೆತಂತಾ-ಯಿತು. ಒಂದು ಇಂಚಿನಿಂದ ಒಂದು ಯೋಜನದ ಸಮಾಚಾರವನ್ನು ಅರಿಯುವ ಮತ್ತು ಶಿಲ್ಪಿಗೆ ಅತ್ಯಂತಮಹತ್ವದ ಈಶ್ವರದತ್ತ ಶಕ್ತಿಯು ಅವರಲ್ಲಿ ಇತ್ತು.

ಶ್ರೀ. ಜಿ. ಕೆ. ಚೆಸ್ಟರಟನ್ ಅವರು ಪತ್ತೆದಾರಿ ಕಥೆಗಳನ್ನು ಬರೆಯುವದರಲ್ಲಿ ಪ್ರವೀಣರು. ಇಂಥ ಕಥೆಗಳನ್ನು ಬರೆಯಲು ಅವರು ಹೇಳಿದ ನಿಯಮವು ಅತ್ಯಂತ ಬೋಧಪ್ರದವಾಗಿದೆ. ನಾವು ಅದರ ಆಶಯವನ್ನು ಇಲ್ಲಿ ಕೊಡುತ್ತೇವೆ.

'ಕಥೆಯಲ್ಲಿದ್ದ ರಹಸ್ಯವನ್ನು ಅನೇಕ ಭಾಗಗಳಲ್ಲಿ ಹಂಚಬೇಕು. ಮೊದಲು ಒಂದು ಚಿಕ್ಕ ಸಂಗತಿಯು ಹೊರಬೀಳಬೇಕು, ನಂತರ ಅದಕ್ಕಿಂತ ದೊಡ್ಡ ಸಂಗತಿಯು ಮತ್ತು ಕೊನೆಯಲ್ಲಿ ಇಡಿಯ ಗುಟ್ಟು ಹೊರಬೀಳಬೇಕು. ಪ್ರತಿಯೊಂದು ಭಾಗದಲ್ಲಿ ಪಾಠಕನ ಇಚ್ಛೆಯು ಎಲ್ಲವನ್ನೂ ಅರಿಯಲು ಆತುರ ಪಡುತ್ತ ಹೋಗುವಂತೆ ಸ್ವಲ್ಪಿಲ್ಲ ಸ್ವಲ್ಪ ರಹಸ್ಯದ ಉದ್ಘಾಟನೆಯನ್ನು ಅವಶ್ಯವಾಗಿ ಮಾಡಬೇಕು. ಈ ತರದ ಕಥೆಗಳನ್ನು ಬರೆಯುವಾಗ ಕಥೆಯ ಕೊನೆಯಲ್ಲಿ ಗುಟ್ಟನ್ನು ರಟ್ಟುಮಾಡುವುದಕ್ಕಾಗಿ ಯಾವ ಹೊಸ ಪಾತ್ರವನ್ನು ತರದಿರುವುದರ ಕಡೆಗೆ ಗಮನವನ್ನು ಕೊಡುವದು ಅತ್ಯವಶ್ಯವಾಗಿದೆ. ಪತ್ತೆದಾರಿ ಕಥೆಗಳಲ್ಲಿ ಇದೇ ದೊಡ್ಡ ದೋಷವಿದೆ ಚರಿತ್ರವು—ಪಾತ್ರವು ಅಪರಾಧಿಯೆಂದು ಇನಿತೂ ಸಂದೇಹವುಂಟಾಗದಂತೆ ಸಿದ್ಧವಾಗುವುದರಲ್ಲಿಯೇ ಮೋಜು ಇದೆ.'

ಕಾದಂಬರೀ ಕಲೆಯಲ್ಲಿಯೂ ಲೇಖಕರು ಯಾವುದನ್ನು ಬರೆಯಬೇಕು ಮತ್ತು ಯಾವುದನ್ನು ಬಿಡಬೇಕು ಎಂಬುದೇ ಅತ್ಯಂತ ಮಹತ್ವವಾದುದು. ಪಾಠಕರು ಕಲ್ಪನಾಶೀಲರು, ಆದುದರಿಂದ ಅವರು ತಾವು ಸುಲಭವಾಗಿ

ಕಲ್ಪಿಸಬಹುದಾದ ವಿಷಯವನ್ನು ಓದಲಪೇಕ್ಷಿಸುವುದಿಲ್ಲ. ಇದೂ ಅಲ್ಲದೆ ಲೇಖಕನೂ ಎಲ್ಲವನ್ನೂ ಹೇಳಿಬಿಡಬೇಕು ಮತ್ತು ತಮ್ಮ ಕಲ್ಪನೆಗೆ ಏನನ್ನೂ ಬಿಡಬಾರದೆಂದೂ ಅವರು ಅಪೇಕ್ಷಿಸುವುದಿಲ್ಲ. ಅವರು ಕಥೆಯ ರೂಪರೇಷೆಯನ್ನು—ಮಾನಚಿತ್ರವನ್ನು ಮಾತ್ರ ಬಯಸುತ್ತಾರೆ ಮತ್ತು ಆದರಲ್ಲಿ ತಾವು ತಮ್ಮ ಅಭಿರುಚಿಗೆ ತಕ್ಕಂತೆ ಬಣ್ಣವನ್ನು ತುಂಬಿಕೊಳ್ಳಲು ಅಪೇಕ್ಷಿಸುತ್ತಾರೆ. ಆದುರಿಂದ ಪಾಠಕರು ಸ್ವತಃ ಯಾವ ಸಂಗತಿಗಳನ್ನು ಯೋಚಿಸಿಕೊಳ್ಳಬಲ್ಲರು ಮತ್ತು ಯಾವ ಮಾತುಗಳನ್ನು ತಾನು ಬರೆದು ಸ್ಪಷ್ಟಗೊಳಿಸಬೇಕು ಎಂಬುದನ್ನು ಊಹಿಸುವವನೇ ಕುಶಲ ಲೇಖಕನು. ಕಥೆಯಲ್ಲಾಗಲೀ ಕಾದಂಬರೀಯಲ್ಲಾಗಲೀ ಪಾಠಕರ ಕಲ್ಪನೆಗೆ ಎಷ್ಟು ಹೆಚ್ಚು ಸಾಮುಗ್ರಿಯನ್ನು ಒದಗಿಸಲಾಗುವುದೋ ಅಷ್ಟೇ ಆ ಕಥೆಯು ಇಲ್ಲವೆ ಕಾದಂಬರಿಯು ರೋಚಕವಾಗುವುದು. ಒಂದು ವೇಳೆ ಲೇಖಕನು ಬೇಕಾದುದಕ್ಕಿಂತ ಕಡಮೆ ಹೇಳಿದರೆ ಆ ಕಥೆಯು ಸಾರಹೀನವಾಗುತ್ತದೆ ಮತ್ತು ಹೆಚ್ಚು ಹೇಳಿದರೆ ಕಥೆಯಲ್ಲಿ ಆನಂದವುಂಟಾಗುವುದಿಲ್ಲ. ಯಾವುದಾದರೊಂದು ಚರಿತ್ರದ ರೂಪರೇಷೆಯನ್ನಾಗಲೀ ದೃಶ್ಯವನ್ನಾಗಲೀ ಚಿತ್ರಿಸುವಾಗ ಅದರ ಚೇಹರೆ-ಪಟ್ಟಿ ಕೊಡುವುದು ಅಗತ್ಯವಿಲ್ಲ. ಮೂರು ನಾಲ್ಕು ಮಾತುಗಳಲ್ಲಿ ಮುಖ್ಯ ಮುಖ್ಯ ಸಂಗತಿಗಳನ್ನು ಹೇಳಿದರೆ ಸಾಕು. ಒಂದು ದೃಶ್ಯವನ್ನು ನೋಡಿದೊಡನೆ ಅದನ್ನು ವರ್ಣಿಸತೊಡಗಿದಲ್ಲಿ ಬಹಳಷ್ಟು ಅನಾವಶ್ಯಕ ಮಾತುಗಳು ಬರುವ ಸಂಭವವಿರುತ್ತದೆ. ಕೆಲವು ದಿನಗಳ ನಂತರ ಅನಾವಶ್ಯಕ ಸಂಗತಿಗಳು ಮಿದುಳಿನಿಂದ ತಮ್ಮಷ್ಟಕ್ಕೆ ತಾವೇ ಮಾಯವಾಗಿ ಹೋಗುತ್ತವೆ ಮತ್ತು ಮುಖ್ಯ ಸಂಗತಿಗಳೇ ಸ್ಮೃತಿಯಲ್ಲಿ ಅಂಕಿತವಾಗಿ ಉಳಿದಿರುತ್ತವೆ. ಆಗ ಆ ದೃಶ್ಯವನ್ನು ವರ್ಣಿಸಿದಲ್ಲಿ ಅನಾವಶ್ಯಕ ಮಾತುಗಳು ಬರುವುದಿಲ್ಲ ಆವಶ್ಯಕ ಮತ್ತು ಅನಾವಶ್ಯಕ ಕಥನದ ಒಂದು ಉದಾಹರಣೆಯನ್ನು ಕೊಟ್ಟು ನಾವು ನಮ್ಮ ಆಶಯವನ್ನು ಸ್ಪಷ್ಟಮಾಡ ಬಯಸುತ್ತೇವೆ:—

ಇಬ್ಬರು ಸಂಜೆಯ ಕಾಲದಲ್ಲಿ ಭೆಟ್ಟಿಯಾಗುತ್ತಾರೆ. ಅನುಕೂಲತೆಯ ದೃಷ್ಟಿಯಿಂದ ನಾವು ಅವರಿಗೆ 'ರಾಮ' ಮತ್ತು 'ಶ್ಯಾಮ' ಎಂದು ಕರೆಯುವಾ-

ರಾಮ—ಗುಡ್ ಈವನಿಂಗ ಶ್ಯಾಮ, ಆನಂದದಿಂದ ಇರುವಿಯಲ್ಲವೇ ?

ಶ್ಯಾಮು—ಹಲೋ ರಾಮು, ನೀನು ಇವೊತ್ತು ಮರೆತು ಎತ್ತ ಹೊರಟೆ?

ರಾಮು—ಹೇಳು ಏನು ಸಮಾಚಾರ ? ನೀನಂತೂ ಬಹಳ ಅಪರೂಪ-ಆಗಿಬಿಟ್ಟಿದ್ದೀಯಾ.

ಶ್ಯಾಮು—ನಾನು ಅಪರೂಪವಾಗಿಲ್ಲ, ಹಾಂ, ನೀನು ಮಾತ್ರ ಅತ್ತಿಯ ಹೂವು ಆಗಿ ಬಿಟ್ಟಿರುವಿ ಕಾಣೋ.

ರಾಮು—ಸಂಗೀತಾಲಯದ ಕಡೆಗೆ ಬರುವಿಯಾ ?

ಶ್ಯಾಮು—ಹೂಂ, ನಡೆ.

ಲೇಖಕನು ಮಕ್ಕಳಿಗಾಗಿ ಕಥೆಯನ್ನು ಬರೆಯುತ್ತಿದ್ದಿಲ್ಲವಾದರೆ ನಮಸ್ಕಾರದ ಒಂದೆರಡು ಸ್ಥೂಲಮಾತುಗಳನ್ನು ಆಡಿಸಿ ಇಷ್ಟೇ ಬರೆದು ಬಿಡುವ—

'ನಮಸ್ಕಾರದ ನಂತರ ಇಬ್ಬರೂ ಮಿತ್ರರು ಸಂಗೀತಾಲಯದ ದಾರಿಯನ್ನು ಹಿಡಿದರು.'

## ಕಾದಂಬರಿಯ ವಿಷಯ

ಕಾದಂಬರಿಯ ಕ್ಷೇತ್ರವು ಅದರ ವಿಷಯದ ದೃಷ್ಟಿಯಿಂದ ಬೇರೆ ಲಲಿತ ಕಲೆಗಳಿಗಿಂತ ಎಷ್ಟೋ ಪಟ್ಟು ವಿಸ್ತೃತವಾಗಿದೆ. ವಾಲ್ಟರ ಬೆಸೆಂಟರು ಈ ವಿಷಯವನ್ನು ಕುರಿತು ಕೆಳಗಿನಂತೆ ತಮ್ಮ ವಿಚಾರಗಳನ್ನು ವ್ಯಕ್ತ ಗೊಳಿಸಿದ್ದಾರೆ—

'ಕಾದಂಬರಿಯ ವಿಷಯದ ವಿಸ್ತಾರವು ಮಾನವ ಚರಿತ್ರಕ್ಕಿಂತ ಇನಿತೂ ಕಡಮೆ ಇರುವುದಿಲ್ಲ. ಅದರ ಸಂಬಂಧವು ಅದರ ಚರಿತ್ರಗಳ ಕರ್ಮ ಮತ್ತು ವಿಚಾರ, ಅವುಗಳ ದೇವತ್ವ ಮತ್ತು ಪಶುತ್ವ ಹಾಗು ಅವುಗಳ ಉತ್ಕರ್ಷ ಮತ್ತು ಅಪಕರ್ಷಗಳೊಡನೆ ಹೊಂದಿಕೊಂಡಿದೆ. ಮನೋಭಾವಗಳ ವಿವಿಧ ರೂಪಗಳೂ ಬೇರೆ ಬೇರೆ ಸ್ಥಿತಿಗಳಲ್ಲಿಯ ಅವುಗಳ ವಿಕಾಸವೂ ಕಾದಂಬರಿಯ ಮುಖ್ಯ ವಿಷಯಗಳಾಗಿವೆ.'

ಈ ವಿಷಯ ವಿಸ್ತಾರವೇ ಕಾದಂಬರಿಗೆ ಪ್ರಪಂಚ-ಸಾಹಿತ್ಯದಲ್ಲಿ ಒಂದು ಪ್ರಧಾನ ಪದವನ್ನು ಕೊಟ್ಟಿದೆ. ತಮಗೆ ಇತಿಹಾಸದಲ್ಲಿ ಪ್ರೀತಿಯಿದ್ದರೆ ತಾವು ಅದರಲ್ಲಿ ಅತ್ಯಂತ ಆಳವಾದ ಐತಿಹಾಸಿಕ ತತ್ವಗಳ ನಿರೂಪಣೆಯನ್ನು ಮಾಡಬಹುದು, ತಮಗೆ ತತ್ತ್ವಜ್ಞಾನದಲ್ಲಿ ಅಭಿರುಚಿಯಿದ್ದರೆ ದಾರ್ಶನಿಕ ತತ್ತ್ವಗಳ ವಿವೇಚನೆಯನ್ನು ಮಾಡಬಹುದು. ತಮ್ಮಲ್ಲಿ ಕವಿತ್ವ-ಶಕ್ತಿಯಿದ್ದರೆ ಕಾದಂಬರಿಯಲ್ಲಿ ಅದಕ್ಕೂ ಅವಕಾಶ-ಸ್ಥಳ ಉಂಟು. ಸಮಾಜ, ನೀತಿ, ವಿಜ್ಞಾನ, ಸಂಶೋಧನೆ ಮುಂತಾದ ಎಲ್ಲ ವಿಷಯಗಳಿಗೂ ಕಾದಂಬರಿಯಲ್ಲಿ ಸ್ಥಾನವುಂಟು. ಇಲ್ಲಿ ಲೇಖಕನಿಗೆ ತನ್ನ ಲೆಕ್ಕಣಿಕೆಯ ಪ್ರತಿಭೆಯನ್ನು ತೋರಿಸಲು ಸಿಗುವಷ್ಟು ಆಸ್ಪದವು ಸಾಹಿತ್ಯದ ಇನ್ನಾವ ಅಂಗದಲ್ಲಿಯೂ ದೊರೆಯದು; ಆದರೆ ಕಾದಂಬರಿಕಾರನಿಗೆ ಯಾವ ಬಂಧನವೂ ಇಲ್ಲವೆಂದು ಇದರ ತಾತ್ಪರ್ಯವಲ್ಲ. ಕಾದಂಬರಿಯ ವಿಷಯ ವಿಸ್ತಾರವೇ ಕಾದಂಬರಿಕಾರನನ್ನು ಬೇಡಿಗಳಿಂದ ಬಿಗಿದುಬಿಡುತ್ತದೆ. ಒಂದು ಉದ್ದ-ಅಗಲವಾದ ಮಾರ್ಗರಹಿತ ಬೈಲಿನಲ್ಲಿ ತಿರುಗಾಡುವವರಿಗೆ ತಮ್ಮ ಗುರಿಯನ್ನು ಮುಟ್ಟಲು ಆಗುವಷ್ಟು ಕಷ್ಟ ಸಂಕೀರ್ಣ, ಹಾಗು ಇಕ್ಕಟ್ಟಾದ ಬೀದಿಯಿಂದ ಹೋಗುವವರಿಗೆ ಆಗುವುದಿಲ್ಲ.

ಕಾದಂಬರಿಕಾರನಲ್ಲಿ ಇರಬೇಕಾದ ಮುಖ್ಯಗುಣವೆಂದರೆ ಅವನ ಸೃಜನಶಕ್ತಿ. ಇದು ಅವನಲ್ಲಿ ಇಲ್ಲದಿದ್ದರೆ ಅವನು ತನ್ನ ಕಾರ್ಯದಲ್ಲಿ ಯಶಸ್ವಿಯಾಗಲಾರ. ಅವನಲ್ಲಿ ಯಾವುದೇ ಬಗೆಯ ಅಭಾವಗಳು, ಕೊರತೆಗಳು ಇದ್ದರೂ ನಡೆದೀತು, ಆದರೆ ಕಾಲ್ಪನಿಕ ಶಕ್ತಿಯ ಪ್ರಖರತೆಯು ಅವಶ್ಯವಾಗಿ ಬೇಕು. ಈ ಶಕ್ತಿಯು ಇದ್ದರೆ ಅವನು ತಾನು ಪ್ರತ್ಯಕ್ಷ ಅನುಭವಿಸಿದ ಎಷ್ಟೋ ದೃಶ್ಯ, ಪರಿಸ್ಥಿತಿ ಮತ್ತು ಮನೋಭಾವಗಳನ್ನು ಚಿತ್ರಿಸಬಲ್ಲ. ಈ ಶಕ್ತಿಯ ಅಭಾವವು ಅವನಲ್ಲಿದ್ದರೆ. ಅವನು ಎಷ್ಟೇ ದೇಶಾಟನ ಮಾಡಿದ್ದರೂ ಎಷ್ಟೇ ವಿದ್ವಾಂಸನಿದ್ದರೂ ಅವನ ಅನುಭವದ ಕ್ಷೇತ್ರವು ವಿಸ್ತೃತವಾಗಿದ್ದರೂ ಅವನ ಕೃತಿಯಲ್ಲಿ ಸರಸತೆಯು ಬರಲಾರದು. ಮಾನವ ಚರಿತ್ರದ ಎಷ್ಟೋ ರಹಸ್ಯಗಳನ್ನು ಮನೋರಂಜಕ, ಸೂಕ್ಷ್ಮ ಮತ್ತು ಪರಿಣಾಮಕಾರೀ ಶೈಲಿಯಲ್ಲಿ ವರ್ಣಿಸುವ ಶಕ್ತಿಯು ಅನೇಕ ಲೇಖಕರಲ್ಲಿ ಕಂಡು ಬರುತ್ತದೆ, ಆದರೆ ಕಲ್ಪನಾಶಕ್ತಿಯ ಅಭಾವದಿಂದಾಗಿ ಅವರು ತಮ್ಮ

ಚರಿತ್ರಗಳಲ್ಲಿ ಜೀವವನ್ನು ತುಂಬಲಾರರು, ಜೀವಂತವಿರುವ ಜಾಗ್ರತ ಚಿತ್ರಗಳನ್ನು ಚಿತ್ರಿಸಲಾರರು. ಅಂಥವರ ಕೃತಿಗಳನ್ನು ನಾವು ಓದಿದಾಗ ನಾವು ಒಂದು ನಿಜವಾದ ಸಂಗತಿಯನ್ನು ಕಾಣುತ್ತಿದ್ದೇವೆಂಬ ಭಾವನೆಯು ಉಂಟಾಗುವುದಿಲ್ಲ.

ಕಾದಂಬರಿಯ ರಚನಾ-ಶೈಲಿಯು ಸಜೀವವೂ ಪರಿಣಾಮಕಾರಿಯೂ ಆಗಿರಬೇಕೆಂಬುದರಲ್ಲಿ ಸಂಶಯವಿಲ್ಲ. ಆದರೆ ನಾವು ಶಬ್ದಗಳ ಒಂದು ಜಾಲ ವನ್ನು ರಚಿಸಿ ಅದರಲ್ಲಿ ಒಂದು ಗೂಢ ಆಶಯವು ಅಡಕವಾಗಿದೆಯೆಂಬ ಭ್ರಮೆಯಲ್ಲಿ ಪಾಠಕರನ್ನು ಬಿಡಬೇಕೆಂಬುದು ಇದರ ಆಶಯವಲ್ಲ. ನಾವು ಒಬ್ಬ ಮನುಷ್ಯನ ಠೀವಿ, ಆಡಂಬರವನ್ನು ನೋಡಿ ಅವನ ವಾಸ್ತವಿಕಸ್ಥಿತಿಯ ಬಗೆಗೆ ತಪ್ಪುತಿಳುವಳಿಕೆಯನ್ನು ಮಾಡಿಕೊಳ್ಳುವಂತೆ ಕಾದಂಬರಿಗಳ ಶಾಬ್ದಿಕ ಆಡಂಬರವನ್ನು ಕಂಡು ಅದರಲ್ಲಿ ಒಂದು ಮಹತ್ವವು ಅಡಗಿದೆಯೆಂದು ತಿಳಿಯತೊಡಗುತ್ತೇವೆ. ಇಂತಹ ಲೇಖಕರಿಗೆ ಅಲ್ಪಾವಧಿಯವರೆಗೆ ಯಶಸ್ಸು ದೊರೆಯಬಹುದು, ಆದರೆ ಜನತೆಯು ಗೂಢತೆಯ ವೈಶಿಷ್ಟ್ಯವಿರದ, ಸರಳತೆಯ ವೈಶಿಷ್ಟ್ಯವಿರುವ ಕಾದಂಬರಿಗಳನ್ನೇ ಆದರಿಸುತ್ತದೆ.

ಕಾದಂಬರಿಕಾರನಿಗೆ ತನ್ನ ಕಥೆಯನ್ನು ಘಟನಾ-ವೈಚಿತ್ರ್ಯದಿಂದ ರೋಚಕವಾಗಿ ಮಾಡಲು ಅಧಿಕಾರವಿದೆ, ಆದರೆ ಅದಕ್ಕೆ ಒಂದು ನಿಯಮ ವಿದೆ—ಪ್ರತಿಯೊಂದು ಘಟನೆಯೂ ವಾಸ್ತವಿಕತೆಯ ಪಡಿಯಚ್ಚಿಗೆ ನಿಕಟ ವಾಗಿರಬೇಕು. ಇಷ್ಟೇ ಅಲ್ಲ, ಅದು ವಾಸ್ತವಿಕತೆಯೊಡನೆ ಒಂದಾಗಿ ಕಥೆಯ ಅಂಗವಾಗಿರಬೇಕು, ಇಲ್ಲದೇ ಹೋದರೆ ಅದು ಭಾಗಗಳು ಬಿಡಿಬಿಡಿಯಾಗಿ ಇರುವ ಮನೆಯಂತಾಗುವುದು, ಪಕಳೆಗಳು ಬೇರೆ ಬೇರೆಯಾದ ಹೂವಿನಂತಾ ಗುವದು. ಲೇಖಕನು ತನ್ನ ಮುಖ್ಯ ವಿಷಯದಿಂದ ದೂರ ಸರಿದು ಹೋಗಿ ಬೇರೆ ಪ್ರಶ್ನೆಯ ಚರ್ಚೆಯನ್ನು ಮಾಡತೊಡಗಿದರೆ ಪಾಠಕರಿಗೆ ದೊರೆಯು ತ್ತಿರುವ ಆನಂದದಲ್ಲಿ ವಿಘ್ನವನ್ನು ತಂದೊಡ್ಡಿದಂತಾಗುವದು. ಕಾದಂಬರಿಯಲ್ಲಿ ಕಥೆಯ ಮಾಧುರ್ಯವನ್ನು ಹೆಚ್ಚಿಸುವ, ವಸ್ತುವಿಕಾಸಕ್ಕೆ ಸಹಾಯಕ ವಾಗುವ ಅಥವಾ ಚರಿತ್ರಗಳ ಗುಪ್ತ ಮನೋಭಾವನೆಗಳನ್ನು ಪ್ರದರ್ಶಿಸುವ ಘಟನೆಗಳೂ ವಿಚಾರಗಳೂ ಬರಬೇಕು. ಹಳೆಯ ಕಥೆಗಳಲ್ಲಿ ಘಟನೆಗಳ

ಚಮತ್ಕಾರವನ್ನು ತೋರಿಸುವುದೇ ಲೇಖಕನ ಉದ್ದೇಶ್ಯವಾಗಿತ್ತು. ಆದ್ದರಿಂದ ಅವನು ಒಂದು ಕಥೆಯಲ್ಲಿ ಅನೇಕ ಉಪಕಥೆಗಳನ್ನು ಬೆರಸಿ ತನ್ನ ಉದ್ದೇಶ್ಯವನ್ನು ಈಡೇರಿಸಿಕೊಳ್ಳುತ್ತಿದ್ದನು. ಸದ್ಯದ ಕಾದಂಬರಿಗಳಲ್ಲಿ ಲೇಖಕನ ಉದ್ದೇಶ್ಯವು ಮನೋಭಾವಗಳನ್ನು, ಪಾತ್ರಗಳ-ಚರಿತ್ರಗಳ ರಹಸ್ಯಗಳನ್ನು ಹೊರಗೆಡಹುವುದಾಗಿರುತ್ತದೆ. ಆದ್ದರಿಂದ ಅವನು ತನ್ನ ಚರಿತ್ರಗಳನ್ನು ಸೂಕ್ಷ್ಮ ದೃಷ್ಟಿಯಿಂದ ಅವಲೋಕಿಸಬೇಕು. ಚರಿತ್ರಗಳ ಯಾವ ಭಾಗವೂ ಅವನ ದೃಷ್ಟಿಯಿಂದ ತಪ್ಪಿಸಿಕೊಂಡು ಉಳಿಯಬಾರದು. ಇಂಥ ಕಾದಂಬರಿಯಲ್ಲಿ ಉಪಕಥೆಗಳಿಗೆ ಎಡೆಯಿರುವದಿಲ್ಲ.

ಪ್ರಪಂಚದ ಪ್ರತಿಯೊಂದು ವಸ್ತುವೂ ಕಾದಂಬರಿಗೆ ಉಪಯುಕ್ತ ವಿಷಯವಾಗಬಹುದೆಂಬುದು ಸತ್ಯವಾದುದು. ಪ್ರಕೃತಿಯ ಪ್ರತಿಯೊಂದು ರಹಸ್ಯವು, ಮಾನವ ಜೀವನದ ಪ್ರತಿಯೊಂದು ಸಮಸ್ಯೆಯು ಸುಯೋಗ್ಯ ಲೇಖಕನೊಬ್ಬನ ಲೆಕ್ಕಣಿಕೆಯಿಂದ ಹೊರಬಿದ್ದಾಗ ಅದು ಸಾಹಿತ್ಯದ ಒಂದು ರತ್ನವಾಗುತ್ತದೆ, ಇದರೊಡನೆಯೇ ವಿಷಯದ ಮಹತ್ವವೂ ಅದರ ಆಳವೂ ಕಾದಂಬರಿಯು ಯಶಸ್ವಿಯಾಗುವುದಕ್ಕೆ ಬಹಳ ನೆರವಾಗುತ್ತವೆ. ನಮ್ಮ ಚರಿತ್ರನಾಯಕನು ಉಚ್ಚತರಗತಿಯ ವ್ಯಕ್ತಿಯೇ ಆಗಿರಬೇಕೆಂಬ ನಿರ್ಬಂಧವೇನೂ ಇಲ್ಲ. ಹರ್ಷ-ಶೋಕ, ಪ್ರೇಮ-ಅನುರಾಗ ಈರ್ಷ್ಯೆ-ದ್ವೇಷ ಮನುಷ್ಯ ಮಾತ್ರರಲ್ಲಿ ವ್ಯಾಪ್ತವಾಗಿವೆ. ಪಾಠಕರ ಹೃದಯದ ಮೇಲೂ ಪರಿಣಾಮಕಾರಿಯಾಗುವಂತೆ ಹೃತ್ತಂತ್ರಿಗಳ ಮೇಲೆ ಪೆಟ್ಟನ್ನು ಹಾಕಿ ಝುಂಕಾರವನ್ನು ಹುಟ್ಟಿಸಬೇಕು. ತನ್ನ ಪಾತ್ರಗಳಲ್ಲಿರುವ ಭಾವಗಳನ್ನೇ ಪಾಠಕರ ಹೃದಯದಲ್ಲಿಯೂ ಜಾಗೃತಗೊಳಿಸುವುದು ಯಶಸ್ವೀ ಕಾದಂಬರಿಕಾರನ ಮುಖ್ಯ ಲಕ್ಷಣ. ಪಾಠಕರು ಕಾದಂಬರಿಯನ್ನು ಓದುತ್ತಿದ್ದೇವೆಂಬುದನ್ನು ಮರೆತುಬಿಡಬೇಕು-ಅವರ ಮತ್ತು ಪಾತ್ರಗಳ ನಡುವೆ ಆತ್ಮೀಯತೆಯ ಭಾವವು ಒಡಮೂಡಬೇಕು.

ಸಾಮಾನ್ಯ ಸ್ಥಿತಿಯಲ್ಲಿ, ವಿಶೇಷರೀತಿಯಲ್ಲಿ ಪೆಟ್ಟು ಹಾಕದ ಹೊರತು ಮನುಷ್ಯನ ಸಹಾನುಭೂತಿಯು ಜಾಗ್ರತವಾಗುವುದಿಲ್ಲ. ನಮ್ಮ ಹೃದಯದ ಆಳದಲ್ಲಿ ಇರುವ ಭಾವಗಳು ಸಾಮಾನ್ಯಸ್ಥಿತಿಯಲ್ಲಿ ಆಂದೋಲಿತವಾಗುವುದಿಲ್ಲ.

ನಮ್ಮ ಅಂತಃಕರಣವನ್ನು ಅಲುಗಾಡಿಸುವ, ನಮ್ಮ ಭಾವಗಳ ಆಳದ ವರೆಗೆ ಮುಟ್ಟುವ ಸೋಂಕುವ ಘಟನೆಗಳನ್ನು ನಾವು ಇದಕ್ಕಾಗಿ ಕಲ್ಪಿಸ-ಬೇಕಾಗುವದು. ಒರ್ವ ಅಬಲೆಯ ಪರಾಧೀನಸ್ಥಿತಿಯ ಅನುಭವ ಮಾಡಿಸಲು ಶಕುಂತಲೆಯು ದುಷ್ಯಂತನ ದರಬಾರದಲ್ಲಿ ನಿಂತಾಗ್ಯೂ ಅವನು ಅವಳನ್ನು ಗುರುತಿಸದೆ ಉಪೇಕ್ಷಿಸುವ ಘಟನೆಗಿಂತ ಹೆಚ್ಚು ಪರಿಣಾಮಕಾರಿಯಾದ ಘಟನೆಯು ಇನ್ನಾವುದಿದೆ ? ಇತ್ತೀಚೆಗಿನ ಕಾದಂಬರಿಗಳಲ್ಲಿ ಆಳವಾದ ಭಾವಗಳನ್ನು ಸ್ಪರ್ಶಿಸುವ ವಿಷಯವು ಬಹಳ ಕಡಿಮೆ ದೊರೆಯುತ್ತಿರುವುದು ವಿಷಾದದ ಸಂಗತಿ. ಹೆಚ್ಚು ಕಾದಂಬರಿಗಳು ಆಳವಾದ ಮತ್ತು ಪ್ರಚಂಡವಾದ ಭಾವನೆಗಳನ್ನು ಪ್ರದರ್ಶಿಸುವದಿಲ್ಲ. ನಾವು ಪ್ರತಿನಿತ್ಯದ ಸಾಮಾನ್ಯ ಮಾತು-ಗಳಲ್ಲಿಯೆ ತೊಡಕಿಕೊಂಡಿರುತ್ತೇವೆ.

ಕಾದಂಬರಿಯಲ್ಲಿ ಮಾನವೀಯ ದೌರ್ಬಲ್ಯಗಳ ಮತ್ತು ಕುವಾಸನೆಗಳ, ಅಶಕ್ತತೆಗಳ ಮತ್ತು ಅಪಕೀರ್ತಿಗಳ ವಿಶದಪೂರ್ವಕ ವರ್ಣನೆಯಿರುವುದು ವಾಂಚನೀಯವೋ ಅವಾಂಛನೀಯವೋ ಎಂಬ ವಿಷಯದಲ್ಲಿ ಇನ್ನೂವರೆಗೆ ಮತಭೇದವಿದೆ. ಆದರೆ ಈ ವಿಷಯಗಳಲ್ಲಿಯೇ ತನ್ನನ್ನು ಬಂಧಿಸಿಕೊಳ್ಳುವ ಲೇಖಕನು ಜೀವನ ಸಂಗ್ರಾಮದಲ್ಲಿ ಒಬ್ಬ ಮನುಷ್ಯನ ಆಂತರಿಕ ಸ್ಥಿತಿಯನ್ನೂ ಸತ್ ಮತ್ತು ಅಸತ್‌ದ ಹೋರಾಟದಲ್ಲಿ ಕೊನೆಗೆ ಸತ್ಯದ ವಿಷಯವನ್ನೂ ಮಾರ್ಮಿಕವಾದ ರೀತಿಯಲ್ಲಿ ತೋರಿಸುವ ಕಲಾವಿದನ ಮಹಾನತೆಯನ್ನು ಪಡೆಯಲಾರನು. ನಮ್ಮ ದೃಷ್ಟಿಯನ್ನು ಕತ್ತಲೆಯ ಕಡೆಗೇ ಕೇಂದ್ರೀಕರಿಸು ವದು ಯಥಾರ್ಥವಾದದ ಆಶಯವಲ್ಲ. ಕತ್ತಲಲ್ಲಿ ಮನುಷ್ಯನಿಗೆ ಕತ್ತಲೆಯು ಹೊರತಾಗಿ ಮತ್ತೇನು ಹೊಳೆಯಬಲ್ಲದು ? ನಿಸ್ಸಂದೇಹವಾಗಿ ಒಮ್ಮೊಮ್ಮೆ ವ್ಯಂಗ್ಯಬಾಣ ಬಿಡುವುದು ಮತ್ತು ಚುಚ್ಚುಮದ್ದನ್ನು ಕೊಡುವದು ಅವಶ್ಯ-ವಾಗುತ್ತದೆ; ಆದರೆ ಚುಚ್ಚುಮದ್ದಿನಿಂದ ದೈಹಿಕ ವ್ಯಥೆಯು ಕಡಮೆ ಯಾದೀತೇ ಹೊರತು ಮಾನಸಿಕವ್ಯಥೆಯು ಸಹಾನುಭೂತಿ ಮತ್ತು ಉದಾರ-ತನದಿಂದಲೇ ಶಾಂತವಾಗಬಲ್ಲದು. ಒಬ್ಬರನ್ನು ಕೀಳವೆಂದು ಬಗೆದು ನಾವು ಅವರನ್ನು ಶ್ರೇಷ್ಠರನ್ನಾಗಿ ಮಾಡಲಾರೆವು; ಆದರೆ ಅವರನ್ನು ಇನ್ನಷ್ಟು ಕೀಳದರ್ಜೆಗೆ ಎಸೆದು ಬಿಡುವೆವು. ಹೇಡಿಗೆ ' ನೀನು ಹೇಡಿ ಇರುವೆ ' ಎಂದು ಹೇಳಿದರೆ ಅವನು ಶೂರನಾಗಲಾರ. ಅವನಲ್ಲಿ ಸಾಹಸ, ಬಲ, ಧೈರ್ಯ—

ಎಲ್ಲವೂ ಇವೆ. ಕೇವಲ ಅವನನ್ನು ಎಚ್ಚರಿಸುವುದು ಅಗತ್ಯವಿದೆ ಎಂಬದನ್ನು ತೋರಿಸಬೇಕಾಗುವದು. ಸಾಹಿತ್ಯದ ಸಂಬಂಧವು ಸತ್ಯವೂ ಸುಂದರವೂ ಆಗಿದೆಯೆಂಬುದನ್ನು ನಾವು ಮರೆಯಕೂಡದು.

ಆದರೆ ಇತ್ತೀಚೆಗೆ ಕುಕರ್ಮ, ಕೊಲೆ, ಕಳವು, ದರೋಡೆಗಳಿಂದ ತುಂಬಿದ ಕಾದಂಬರಿಗಳ ಮಹಾಪೂರವೇ ಬಂದಂತಾಗಿದೆ. ಇಷ್ಟು ಕುರುಚಿ-ಪೂರ್ಣವಾದ ಕಾದಂಬರಿಗಳಿಂದ ಪೂರ್ಣತುಂಬಿದ ಕಾಲವು ಸಾಹಿತ್ಯದ ಇತಿಹಾಸದಲ್ಲಿ ಇದ್ದುದು ಕಾಣುವುದಿಲ್ಲ. ಪತ್ತೇದಾರಿ ಕಾದಂಬರಿಗಳಲ್ಲಿ ಇಷ್ಟು ಆನಂದವು ಆದೇಕೆ ಬರುತ್ತದೆ? ಬಹುಶಃ ಈ ವ್ಯಾವಸಾಯಿಕ ಶಾಂತಿಯ ಯುಗದಲ್ಲಿ ಮನುಷ್ಯನ ಕುತೂಹಲ ಪ್ರೇಮವನ್ನು ಸಂತುಷ್ಟ-ಗೊಳಿಸುವ ಮತ್ತು ಮನಸ್ಸಿನಲ್ಲಿ ಹುರುಹುರು ಹುಟ್ಟಿಸುವ ಘಟನೆಗಳ ಅಭಾವ ವಿರುವುದೇ ಇದಕ್ಕೆ ಕಾರಣವಾಗಿರಬಹುದು. ಅಥವಾ ಮನುಷ್ಯನ ಧನ-ದಾಸೆಯು ಕಾದಂಬರಿಯ ಪಾತ್ರಗಳು ಧನಲೋಭದಿಂದ ಕೆಟ್ಟ ಕೃತ್ಯವೆಸಗುವ ದನ್ನು ನೋಡಿ ತೃಪ್ತಿ ಹೊಂದುತ್ತಿರುವುದೂ ಇದಕ್ಕೆ ಕಾರಣವಾಗಿರಬಹುದು. ಇಂಥ ಕಾದಂಬರಿಗಳಲ್ಲಿ ಒಬ್ಬನು ಲೋಭದ ಪಾಶಕ್ಕೆ ಸಿಕ್ಕು ಒಬ್ಬ ಸಿರಿವಂತ ನನ್ನು ಕೊಲ್ಲುವದು, ಅಥವಾ ಅವನನ್ನು ಯಾವುದಾದರೊಂದು ಸಂಕಟದಲ್ಲಿ ನೂಕಿ ಅವನಿಂದ ಮನಬಂದಷ್ಟು ಧನ ಸೆಳೆಯುವುದು, ನಂತರ ಗುಪ್ತಚಾರರು ಬರುವದು, ವಕೀಲರು ಬರುವದು, ಅಪರಾಧಿಯು ಬಂಧಿತನಾಗುವುದು, ಅವನಿಗೆ ಶಿಕ್ಷೆಯಾಗುವುದು ಇವೇ ಮುಂತಾದ ಘಟನೆಗಳು ಹೆಚ್ಚಾಗಿರುತ್ತವೆ. ಇಂತಹ ರುಚಿಯುಳ್ಳ ಜನರಿಗೆ ಪ್ರೇಮ, ಅನುರಾಗ, ಅಥವಾ ತ್ಯಾಗದ ಕತೆಗಳಲ್ಲಿ ಆನಂದವು ದೊರೆಯಲಾರದು. ಭಾರತದಲ್ಲಿಯಂತೂ ಆ ವ್ಯವಸಾಯಿಕ ಉನ್ನತಿಯಾಗಿಲ್ಲ; ಆದರೂ ಇಂತಹ ಕಾದಂಬರಿಗಳು ಬಹಳವಾಗಿ ಬರತೊಡಗಿದವು. ಇಂಥ ಕಾದಂಬರಿಗಳು ಈ ದೇಶದಲ್ಲಿಯೂ ಹೆಚ್ಚು ಖರ್ಚಾಗದಿರವೆಂಬುದು ನನ್ನ ಊಹೆ. ರಶಿಯದ ಕಾದಂಬರಿಕಾರರಾದ ಮೆಕ್ಸಿಮ್ ಗೋರ್ಕಿ ಅವರ ಶಬ್ದಗಳಲ್ಲಿ ಹೀಗೆ ಹೇಳಬಹುದು—ಈ ಕುರುಚಿಯ ಪರಿಣಾಮವು ಕುಕರ್ಮ ಪ್ರವೃತ್ತಿಯನ್ನು ದೃಢಪಡಿಸುವ ವಾತಾವರಣದ ನಿರ್ಮಾಣವನ್ನು ಮಾಡುತ್ತದೆ. ಮಾನವನ ಹೃದಯಲ್ಲಿ ಕೋಮಲ ಭಾವಗಳಿಗೆ ಸ್ಥಾನವೇ ಉಳಿದಿರುವುದಿಲ್ಲವೇನೋ ಎನ್ನುವಷ್ಟು

ಪಶುಪ್ರವೃತ್ತಿಗಳು ಅವನಲ್ಲಿ ಪ್ರಬಲವಾಗುತ್ತ ಸಾಗಿರುವುವು ಎಂಬುದು ಇದರಿಂದ ಸ್ಪಷ್ಟವಾಗುತ್ತದೆ.

ಕಾದಂಬರಿಯು ಚರಿತ್ರಗಳ ಚಿತ್ರಣವು ಎಷ್ಟು ಸ್ಪಷ್ಟವಾದುದು, ಎಷ್ಟು ಆಳವಾದುದು ಮತ್ತು ವಿಕಾಸಗೊಂಡುದು ಆದೀತೋ ಅಷ್ಟೇ ಪರಿಣಾಮವು ಓದುಗರ ಮೇಲೆ ಆಗುವುದು. ಇದು ಲೇಖಕನ ರಚನಾ-ಶಕ್ತಿಯನ್ನು ಅವಲಂಬಿಸಿದೆ ಹೇಗೆ ಯಾವನಾದರೂ ಮನುಷ್ಯನನ್ನು ನೋಡುತ್ತಲೇ ಅವನ ಮನೋಭಾವಗಳನ್ನು ನಾವು ಅರಿಯಲಾರೆವೋ. ಅವುಗಳ ಪರಿಚಯವು ನಮಗೆ ಆಗುವದಿಲ್ಲವೋ ಮತ್ತು ಅವನ ಸಂಬಂಧವು ಹೆಚ್ಚು ಹೆಚ್ಚಾಗಿ ಬಂದಂತೆ ಅವನ ಮನೋರಹಸ್ಯಗಳು ಗೊತ್ತಾಗುವವೋ ಹಾಗೆಯೇ ಕಾದಂಬರಿಯ ಚರಿತ್ರಗಳೂ ಲೇಖಕನ ಕಲ್ಪನೆಯಲ್ಲಿ ಪೂರ್ಣವಾಗಿ ಮೂಡುವುದಿಲ್ಲ, ಆದರೆ ಅವುಗಳಲ್ಲಿ ಕ್ರಮಶಃ ವಿಕಾಸವಾಗುತ್ತ ಬರುತ್ತದೆ. ಓದುಗರಿಗೆ ಪರಿವರ್ತನೆಯಾದುದು ಗೊತ್ತಾಗದ ಹಾಗೆ ಈ ವಿಕಾಸವು ಗುಪ್ತವಾಗಿ—ಅಸ್ಪಷ್ಟವಾಗಿ ಆಗುತ್ತದೆ. ಒಂದು ವೇಳೆ ಪಾತ್ರಗಳಲ್ಲಿ ಯಾವುದಾದರೂ ಪಾತ್ರದ ವಿಕಾಸವು ನಿಂತು ಹೋದರೆ ಅದನ್ನು ತೆಗೆದು ಹಾಕಿ ಬಿಡಬೇಕು, ಏಕೆಂದರೆ ಪಾತ್ರಗಳ ವಿಕಾಸದ ವಿಷಯವೇ ಕಾದಂಬರಿ. ಅದರಲ್ಲಿ ವಿಕಾಸದೋಷವಿದ್ದರೆ ಕಾದಂಬರಿಯು ಶಕ್ತಿಗುಂದುವುದು. ಮೊದಲು ಇದ್ದ ರೀತಿಯಲ್ಲೇ ಪಾತ್ರಗಳು ಕೊನೆಯ ವರೆಗೆ ಇದ್ದರೆ, ಅವುಗಳ ಬಲಬುದ್ಧಿ-ಭಾವಗಳಲ್ಲಿ ವಿಕಾಸವಾಗದಿದ್ದರೆ ಅವು ಅಯಶಸ್ವೀ ಪಾತ್ರಗಳು.

ಈ ದೃಷ್ಟಿಯಿಂದ ನಾವು ಇಂದಿನ ಹಿಂದೀ ಕಾದಂಬರಿಗಳನ್ನು ನೋಡಿದರೆ ನಿರಾಶೆಯಾಗುತ್ತದೆ. ಅನೇಕ ಚರಿತ್ರಗಳು-ಪಾತ್ರಗಳು ಅನೇಕ ಕೆಲಸಗಳನ್ನು ಮಾಡುತ್ತಿರುವಂತೆ ಕಂಡರೂ ಮೊದಲು ಮಾಡಿದ ಕಾರ್ಯಗಳನ್ನೇ ಅವು ಕೊನೆಯಲ್ಲಿಯೂ ಮಾಡುತ್ತವೆ.

ಒಂದು ಕಾದಂಬರಿಯನ್ನು ಸುರುವು ಮಾಡುವಾಗ ಅದರ ಪಾತ್ರಗಳ ಒಂದು ಮಾನಸಿಕ ಚಿತ್ರವನ್ನು ಮಾಡಿಕೊಂಡಿದ್ದರೆ ಅವುಗಳ ವಿಕಾಸವನ್ನು ತೋರಿಸಲು ಸುಲಭವಾಗುವುದು. ವಿಕಾಸವು ಪರಿಸ್ಥಿತಿಗೆ ಅನುಸಾರವಾಗಿ ಸ್ವಾಭಾವಿಕವಾಗಿರಬೇಕೆಂದು ಹೇಳುವುದು ಅವಶ್ಯವಿಲ್ಲ—ಅರ್ಥಾತ್ ಪಾಠಕನೂ

ಲೇಖಕನೂ ಈ ವಿಷಯದಲ್ಲಿ ಒಂದೇ ವಿಚಾರದವರಾಗಿರಬೇಕು. ಇಂಥ ಪರಿಸ್ಥಿತಿಯಲ್ಲಿ ಹೀಗಾಗಬಾರದಾಗಿತ್ತು ಎಂದು ಓದುಗರ ಅಭಿಪ್ರಾಯ-ವಾದರೆ ಲೇಖಕನು ತನ್ನ ಪಾತ್ರಗಳನ್ನು ಅಂಕಿತಗೊಳಿಸುವಲ್ಲಿ ಆಯಶಸ್ವಿ-ಯಾಗಿದ್ದಾನೆಂದು ಇದರಿಂದ ಅರ್ಥವಾಗಬಹುದು. ಪಾತ್ರಗಳಲ್ಲಿ ಒಂದಿಲ್ಲೊಂದು ವೈಶಿಷ್ಟ್ಯವು ಇರಬೇಕು. ಯಾವ ರೀತಿಯಲ್ಲಿ ಪ್ರಪಂಚದೊಳಗೆ ಇಬ್ಬರು ಒಂದೇ ತೆರನಾಗಿ ಇರುವುದಿಲ್ಲವೋ ಹಾಗೆಯೇ ಕಾದಂಬರಿಯಲ್ಲಿಯೂ ಇರಬಾರದು. ಕೆಲವರು ಸಂಭಾಷಣೆಯಿಂದ ಅಥವಾ ಹಾವ–ಭಾವದಿಂದ ವೈಶಿಷ್ಟ್ಯವನ್ನು ವ್ಯಕ್ತಗೊಳಿಸುತ್ತಾರೆ ಆದರೆ ಪಾತ್ರಗಳಲ್ಲಿ ಇದ್ದ ಅಂತರವೇ ನಿಜವಾದ ಅಂತರ.

ಕಾದಂಬರಿಯಲ್ಲಿ ವಾರ್ತಾಲಾಪವು ಅಧಿಕವಿದ್ದಷ್ಟೂ ಮತ್ತು ಲೇಖಕ-ನಿಂದ ಕಡಿಮೆ ಹೇಳಲ್ಪಟ್ಟದ್ದೂ ಇದ್ದರೆ ಕಾದಂಬರಿಯು ಅಷ್ಟೇ ಸುಂದರವಾಗುವದು. ವಾರ್ತಾಲಾಪವು ಕೇವಲ ರೂಢಿಗತವಾಗಿದ್ದುದು ಇರಬಾರದು. ಯಾವುದೇ ಪಾತ್ರದ ಬಾಯಿಂದ ಹೊರಬಿದ್ದ ಪ್ರತಿಯೊಂದು ವಾಕ್ಯವು ಅದರ ಮನೋಭಾವಗಳನ್ನು ಮತ್ತು ಚಾರಿತ್ರ್ಯವನ್ನು ವ್ಯಕ್ತಗೊಳಿಸುವಂತಹದಾಗಿರಬೇಕು. ಸಂಭಾಷಣೆಯು ಸ್ವಾಭಾವಿಕವೂ ಪರಿಸ್ಥಿತಿಗೆ ಅನುಗುಣವಾಗಿಯೂ ಸರಳ ಹಾಗೂ ಸೂಕ್ಷ್ಮವೂ ಆಗಿರುವುದು ಆವಶ್ಯಕವಾದುದು ನಮ್ಮ ಕಾದಂಬರಿಗಳಲ್ಲಿ ಬಹುತರವಾಗಿ ಲೇಖಕನ ಶೈಲಿಯಲ್ಲಿಯೇ ಸಂಭಾಷಣೆಯನ್ನು ಮಾಡಿಸಲಾಗುತ್ತಿದೆ. ಶಿಕ್ಷಿತ ವರ್ಗವು ಎಲ್ಲ ಕಡೆಗೂ ಒಂದೇ ತರಹದ್ದು ಇದೆ., ಹೌದು, ಬೇರೆ ಬೇರೆ ಜಾತಿಗಳ ನಾಲಿಗೆಯಲ್ಲಿ ಅದರ ರೂಪವು ಸ್ವಲ್ಪಿಲ್ಲ ಸ್ವಲ್ಪ ಬದಲಾಗುತ್ತಿದೆ. ಬಂಗಾಲೀ, ಮಾರವಾಡೀ ಮತ್ತು ಆಂಗ್ಲೋ ಇಂಡಿಯನ್ ಜನರು ಆಗಾಗ್ಗೆ ಬಹಳ ಶುದ್ಧ ಹಿಂದೀಯನ್ನು ಮಾತನಾಡುವುದು ಕಂಡು ಬರುತ್ತದೆ; ಆದರೆ ಇದು ಅಪವಾದವೇ ಹೊರತು ನಿಯಮವಲ್ಲ; ಆದರೆ ಹಳ್ಳಿಗರ ಸಂಭಾಷಣೆಯು ನಮ್ಮನ್ನು ದ್ವಂದ್ವದಲ್ಲಿ ನೂಕಿಬಿಡುತ್ತದೆ. ಬಿಹಾರದ ಗ್ರಾಮ್ಯಭಾಷೆಯು ದಿಲ್ಲಿಯ ಅಕ್ಕಪಕ್ಕದ ಜನರಿಗೆ ಅಪರೂಪವಾಗಿಯೇ ತಿಳಿದೀತು.

ವಾಸ್ತವಿಕವಾಗಿಯೂ ಯಾವುದೇ ಕೃತಿಯಿರಲಿ, ಅದು ಬರೆಹಗಾರನ ಮನೋಭಾವಗಳ, ಅವನ ಚರಿತ್ರದ, ಅವನ ಜೀವನಾದರ್ಶದ, ಅವನ

ಸಿದ್ಧಾಂತದ–ದರ್ಶನದ ದರ್ಪಣವಾಗಿರುತ್ತದೆ. ಲೇಖಕನ ಹೃದಯದಲ್ಲಿ ದೇಶಭಕ್ತಿಯು ತುಂಬಿದ್ದರೆ ಅವನ ಪಾತ್ರಗಳಲ್ಲಿ, ಘಟನೆಗಳಲ್ಲಿ ಮತ್ತು ಪರಿಸ್ಥಿತಿಗಳಲ್ಲಿ ಅದು ವ್ಯವೆತ್ತು ನಿಂತುದು ಗೋಚರವಾಗುತ್ತದೆ. ಲಹರೀ ಮತ್ತು ಆನಂದೀ ಲೇಖಕನ ಕೃತಿಯಲ್ಲಿ ಜಗತ್ತಿನ ಗತಿಯು ಲಕ್ಷವಿಲ್ಲದ ಲಹರೀ-ಆನಂದೀ ಸ್ವಭಾವದ ಪಾತ್ರಗಳೇ ದೊರೆಯುವವು; ಅವನು ಪತ್ತೇದಾರಿ ಮತ್ತು ಇಂದ್ರಜಾಲದ ಕಥೆಗಳನ್ನೇ ಹೆಚ್ಚಾಗಿ ಬರೆಯುತ್ತಾನೆ. ಲೇಖಕನು ಆಶಾವಾದಿಯಾಗಿದ್ದರೆ ಅವನ ಕೃತಿಯಲ್ಲಿಯೂ ಆಶಾವಾದವು ಹೊರಚಿಮ್ಮು ವುದು, ಅವನು ಶೋಕವಾದಿಯಾಗಿದ್ದರೆ ಅದೆಷ್ಟು ಪ್ರಯತ್ನಪಟ್ಟರೂ ಅವನು ತನ್ನ ಪಾತ್ರಗಳ ಹೃದಯದಲ್ಲಿ ಜೀವಕಳೆಯನ್ನು ತುಂಬಲಾರ. 'ಆಜಾದ ಕಥಾ' ಪುಸ್ತಕವನ್ನೇ ತೆಗೆದುಕೊಳ್ಳಿರಿ. ಅದರ ಲೇಖಕನು ನಗುವ–ನಗಿಸುವ ಮತ್ತು ಜೀವನವು ಗಂಭೀರ ವಿಚಾರಕ್ಕಾಗಿ ಇಲ್ಲವೆನ್ನುವ ಜೀವಿಯಾಗಿದ್ದನೆಂಬುದು ಕೂಡಲೇ ಕಂಡು ಬರುವುದು. ಅವನು ಜೀವನದ ಪ್ರಶ್ನೆಗಳನ್ನು ಎತ್ತಿದ ಕಡೆಯಲ್ಲೆಲ್ಲ ಅವನ ಶೈಲಿಯು ಶಿಥಿಲವಾಗಿ ಹೋಗಿದೆ.

ಯಾವ ಕಾದಂಬರಿಯನ್ನು ಓದಿ ಮುಗಿಸಿದ ಬಳಿಕ ಓದುಗರಿಗೆ ಉತ್ಕರ್ಷದ ಅನುಭವವಾಗುವುದೋ ಮತ್ತು ಅವರಲ್ಲಿ ಸದ್ಭಾವಗಳು ಜಾಗ್ರತವಾಗುವುವೋ ಅದೇ ಯಶಸ್ವಿಯಾದ ಕಾದಂಬರಿಯು. ಭಾವಗಳು ಆಳವಾಗಿಯೂ ಪ್ರಖರವಾಗಿಯೂ ಇರುವ—ಜೀವನದಲ್ಲಿ ಮೂರ್ಖನಾಗಿ ಪೆದ್ದನಾಗಿ ಅಲ್ಲ— ಸ್ವಾರನಾಗಿ ಮುನ್ನಡೆಯುವ, ಉದ್ಯೋಗವನ್ನು ಮಾಡುವ ಮತ್ತು ವಿಫಲನಾಗುವ, ಏಳಲು ಪ್ರಯತ್ನಿಸುವ ಮತ್ತು ಬೀಳುವ, ವಾಸ್ತವ ಜೀವನದ ಆಳಗಳಲ್ಲಿ ಮುಳುಗಿರುವ ಮತ್ತು ಜೀವನದ ಉಚ್ಚ–ನೀಚಗಳನ್ನು ಕಂಡ, ಸಂಪತ್ತು ಮತ್ತು ವಿಪತ್ತುಗಳನ್ನು ಎದುರಿಸಿದ, ಮುಖವಲ್ಲಿನ ಮೆತ್ತನ್ನ ಹಾಸಿಗೆಯ ಮೇಲೆ ಹಾಯಾಗಿ ಮಲಗಿ ಜೀವನವನ್ನು ಕಳೆಯದ ಲೇಖಕನೇ ಪ್ರಕಾಶ, ಜೀವನ ಮತ್ತು ಆನಂದವನ್ನು ಕೊಡಬಲ್ಲ ಕಾದಂಬರಿ-ಗಳನ್ನು ರಚಿಸಬಲ್ಲನು.

ಕಾದಂಬರಿಯನ್ನು ಓದುವ ಪಾಠಕರ ರುಚಿಯೂ ಕೂಡ ಈಗ ಬದಲಾಗುತ್ತಲಿದೆ. ಈಗ ಅವರಿಗೆ ಲೇಖಕನ ಕೇವಲ ಕಲ್ಪನೆಗಳನ್ನು

ಓದುವುದರಿಂದ ಸಂತೋಷವಾಗುವುದಿಲ್ಲ. ಕಲ್ಪನೆಯು ಏನೇ ಇದ್ದರೂ ಅದು ಕಲ್ಪನೆಯೇ. ಅದು ಯಥಾರ್ಥದ ಸ್ಥಾನವನ್ನು ತೆಗೆದುಕೊಳ್ಳಲಾರದು. ಅನುಭೂತಿ ಅನುಭವಗಳ ಆಧಾರದ ಮೇಲೆ ನಿಂತ ಕಾದಂಬರಿಗಳಿಗೇ ಉಜ್ವಲವಾದ ಭವಿಷ್ಯತ್ತು ಕಾದಿದೆ

ಇದರ ಆಶಯವಿಷ್ಟೇ—ಭವಿಷ್ಯದಲ್ಲಿ ಕಾದಂಬರಿಗಳಲ್ಲಿ ಕಲ್ಪನೆಯು ಕಡಮೆ, ಸತ್ಯವು ಹೆಚ್ಚು ಇರುವುದು; ನಮ್ಮ ಪಾತ್ರಗಳು ಕಲ್ಪಿತವಿರವು, ಆದರೆ ವ್ಯಕ್ತಿಗಳ ಜೀವನದ ಆಧಾರದ ಮೇಲೆ ನಿಂತಿರುವವು. ಕೆಲವೊಂದು ಸೀಮೆಯು ವರೆಗೆ ಈಗಲೂ ಹೀಗೇ ಇದೆ: ಆದರೆ ಹೆಚ್ಚಾಗಿ ನಾವು ಬಯಸು ವಂಥ ಸ್ವಾಭಾವಿಕ ಕೊನೆಗೆ ಅನುಗುಣವಾಗಿಯೇ ಪರಿಸ್ಥಿತಿಗಳ ಕ್ರಮವನ್ನು ಕಟ್ಟುತ್ತೇವೆ ನಾವು ಸ್ವಾಭಾವಿಕತೆಯ ಸೋಗನ್ನು ಎಷ್ಟು ಸೌಂದರ್ಯ ದಿಂದ ತುಂಬುವವೋ ಅಷ್ಟೇ ಸಫಲರಾಗುವೆವು; ಆದರೆ ಭವಿಷ್ಯದಲ್ಲಿ ಪಾಠಕರು ಈ ಸೋಗಿನಿಂದ ಸಂತುಷ್ಟರಾಗರು.

ಮುಂದಿನ ಕಾಲದ ಕಾದಂಬರಿಯು ದೊಡ್ಡ ಮನುಷ್ಯನದೇ ಇರಲಿ, ಚಿಕ್ಕ ಮನುಷ್ಯನದೇ ಇರಲಿ, ಜೀವನ-ಚರಿತ್ರವಾಗುವುದೆಂದು ಹೇಳಬಹು ದಾಗಿದೆ. ಅದರ ಹಿರಿಮೆ-ಕಿರಿಮೆಯ ನಿರ್ಣಯವನ್ನು ಅದು ಎದುರಿಸಿ ವಿಜಯಶಾಲಿಯಾದ ಕಠಿಣ ಪರಿಸ್ಥಿತಿಗಳಿಂದ ಮಾಡಬೇಕಾಗುವುದು. ಹಾಂ, ಕಾದಂಬರಿಯೆಂದು ಎಣಿಸುವ ಹಾಗೆ ಆ ಚರಿತ್ರವನ್ನು ಬರೆಯಬೇಕಾಗುವುದು. ಈಗ ನಾವು ಸುಳ್ಳನ್ನು ಸತ್ಯವಾಗಿ ಮಾಡಿ ತೋರಿಸಲು ಅಪೇಕ್ಷಿಸುತ್ತೇವೆ, ಭವಿಷ್ಯದಲ್ಲಿ ಸತ್ಯವನ್ನು ಸುಳ್ಳಾಗಿ ತೋರಿಸಲಾಗುವದು. ಒಬ್ಬ ಒಕ್ಕಲಿಗನ ಚರಿತ್ರವಿದ್ದರೆ ಅಥವಾ ದೇಶಭಕ್ತನ ಚರಿತ್ರವಿದ್ದರೆ ಅದರ ಆಧಾರವು ಯಥಾರ್ಥದ ಮೇಲೆ ನಿಲ್ಲುವುದು. ಆಗ ಈ ಕಾರ್ಯವು ಈಗಿರುವುದಕ್ಕಿಂತ ಕಠಿನವಾಗುವುದು; ಏಕೆಂದರೆ ಅನೇಕ ಜನರ ಅಂತರ್ಯವನ್ನು ಅರಿತಿರುವ ಗೌರವವನ್ನು ಪಡೆದವರು ಬಹಳ ಕಡಿಮೆ ಇದ್ದಾರೆ.

ಅನುವಾದಕ:— **ಗುರುನಾಥ ಜೋಶಿ**

# ಜೀವನದಲ್ಲಿ ಸಾಹಿತ್ಯದ ಸ್ಥಾನ



ಸಾಹಿತ್ಯದ ಆಧಾರವೇ ಜೀವನ. ಈ ಆಧಾರದ ಮೇಲೆಯೇ ಸಾಹಿತ್ಯದ ಕಟ್ಟಡವು ನಿಲ್ಲುವುದು. ಅದರ ಅಂತಸ್ತುಗಳು, ಮಿನಾರಗಳು ಮತ್ತು ಗುಮ್ಮಟಗಳು ಸಿದ್ಧವಾಗುವವು., ಆದರೆ ತಳಹದಿಯು ಮಣ್ಣಿನ ಕೆಳಗೆ ಹುದುಗಿ ಬಿದ್ದಿದೆ. ಅದನ್ನು ನೋಡುವುದಕ್ಕೂ ಮನಸ್ಸು ಬಯಸದು. ಜೀವನವು ಪರಮಾತ್ಮನ ಸೃಷ್ಟಿ; ಆದುದರಿಂದ ಅದು ಅನಂತ, ಅಬೋಧ ಮತ್ತು ಅಗಮ್ಯ. ಸಾಹಿತ್ಯವು ಮನುಷ್ಯನ ಸೃಷ್ಟಿ., ಆದುದರಿಂದ ಅದು ಸುಬೋಧ, ಸುಗಮ್ಯ ಮತ್ತು ಮೇರೆಗಳಿಂದ ಪರಿಮಿತ. ಜೀವನವು ತನ್ನ ಕಾರ್ಯಗಳ ಬಗೆಗೆ ಪರಮಾತ್ಮನಿಗೆ ಉತ್ತರದಾಯಿಯಾಗಿರುವುದೋ ಇಲ್ಲವೋ ಎಂಬುದು ನಮಗೆ ಗೊತ್ತಿಲ್ಲ; ಆದರೆ ಸಾಹಿತ್ಯವು ಮಾತ್ರ ಮನುಷ್ಯನೆದುರಿಗೆ ಉತ್ತರವನ್ನೀಯ-ಬೇಕಾಗುವುದು. ಇದಕ್ಕೋಸುಗ ಕಾನೂನುಗಳಿವೆ, ಅವುಗಳಿಂದಾಗಿ ಅದು ಅತ್ತಿತ್ತ ಸರಿದಾಡಲಾರದು. ಜೀವನದ ಉದ್ದೇಶ್ಯವು ಆನಂದ. ಮನುಷ್ಯನು ಜೀವನದುದ್ದಕ್ಕೂ ಆನಂದದ ಶೋಧದಲ್ಲಿರುವನು. ಅದು ಒಬ್ಬರಿಗೆ ರತ್ನ-ದ್ರವ್ಯದಲ್ಲಿ, ಒಬ್ಬರಿಗೆ ತುಂಬಿದ ಪರಿವಾರದಲ್ಲಿ, ಒಬ್ಬರಿಗೆ ಭವ್ಯ ಭವನದಲ್ಲಿ, ಒಬ್ಬರಿಗೆ ಐಶ್ವರ್ಯದಲ್ಲಿ ದೊರೆಯುತ್ತದೆ., ಆದರೆ ಸಾಹಿತ್ಯದ ಆನಂದವು ಈ ಆನಂದಕ್ಕಿಂತ ಉಚ್ಚವಾದುದು, ಪವಿತ್ರವಾದುದು. ಏಕೆಂದರೆ ಅದರ ಆಧಾರವು ಸೌಂದರ್ಯವು ಮತ್ತು ಸತ್ಯವು. ವಾಸ್ತವಿಕವಾಗಿ ನಿಜವಾದ ಆನಂದವು ಸೌಂದರ್ಯದಿಂದ ಮತ್ತು ಸತ್ಯದಿಂದ ದೊರೆಯುತ್ತದೆ; ಅದೇ ಆನಂದವನ್ನು ತೋರಿಸುವುದು, ಅದೇ ಆನಂದವನ್ನು ಹುಟ್ಟಿಸುವುದು ಸಾಹಿತ್ಯದ ಉದ್ದೇಶ್ಯ. ಐಶ್ವರ್ಯ ಅಥವಾ ಭೋಗದ ಆನಂದದಲ್ಲಿ ಗ್ಲಾನಿಯು ಅಡಗಿದೆ. ಅದರಿಂದ ಅರುಚಿಯೂ ಉಂಟಾಗಬಹುದು, ಪಶ್ಚಾತ್ತಾಪವೂ ಆಗಬಹುದು; ಆದರೆ ಸೌಂದರ್ಯದಿಂದ ದೊರೆಯುವ ಆನಂದವು ಅಖಂಡವಾಗಿದೆ, ಅಮರ-ವಾಗಿದೆ.

ಸಾಹಿತ್ಯದಲ್ಲಿ ಒಂಬತ್ತು ರಸಗಳು ಇವೆಯೆಂದು ಹೇಳಲಾಗಿವೆ. ಭೀಭತ್ಸದಲ್ಲಿಯೂ ಆನಂದವಿದೆಯೇ ಎಂಬುದೊಂದು ಪ್ರಶ್ನೆ. ಹಾಗಿಲ್ಲದಿದ್ದಲ್ಲಿ ಅದರ ಎಣಿಕೆ ರಸಗಳಲ್ಲಿ ಅದೇಕೆ ಆಗುತ್ತಿತ್ತು ? ಹೌದು. ಇದೆ, ಭೀಭತ್ಸದಲ್ಲಿಯೂ ಸೌಂದರ್ಯವಿದೆ ಮತ್ತು ಸತ್ಯವಿದೆ ಭಾರತೇಂದು ಅವರು ಮಾಡಿದ ಶ್ಮಶಾನದ ವರ್ಣನೆಯು ಅದೆಷ್ಟು ಭೀಭತ್ಸವಾಗಿದೆ! ಪ್ರೇತಗಳು ಮತ್ತು ಪಿಶಾಚಿಗಳು ಅರ್ಧಸುಟ್ಟ ಮಾಂಸವನ್ನು ಜಗಿಯುವದು ಎಲುವು-ಗಳನ್ನು ಕಟಕಟಮಾಡುತ್ತ ತಿನ್ನುವುದು ಭೀಭತ್ಸದ ಪರಾಕಾಷ್ಠೆಯಾಗಿದೆ. ಆದರೆ ಅದು ಭೀಭತ್ಸವಿದ್ದಾಗ್ಯೂ ಸುಂದರವಿದೆ.. ಏಕೆಂದರೆ ಅದರ ಸೃಷ್ಟಿಯು ನಂತರ ಬರುವ ಸ್ವರ್ಗೀಯ ದೃಶ್ಯಗಳ ಆನಂದವನ್ನು ತೀವ್ರಗೊಳಿಸುವು-ದಕ್ಕಾಗಿಯೇ ಆಗಿದೆ. ಸಾಹಿತ್ಯವು ಪ್ರತಿಯೊಂದು ರಸದಲ್ಲಿ ಸೌಂದರ್ಯವನ್ನು ಅರಸುತ್ತದೆ—ಅರಸನ ಅರಮನೆಯಲ್ಲಿ, ಬಡವನ ಗುಡಿಸಲದಲ್ಲಿ ಬೆಟ್ಟದ ತುದಿಯಲ್ಲಿ, ಹೊಲಸು ಕಾಲುವೆಗಳಲ್ಲಿ, ಉಷೆಯ ಹೊಂಬಣ್ಣದಲ್ಲಿ, ಶ್ರಾವಣ-ಭಾದ್ರಪದದ ಅಂಧಕಾರದ ರಾತ್ರಿಯಲ್ಲಿ. ಆದರೆ, ಸೌಂದರ್ಯವು ಬಡವನ ಗುಡಿಸಲಿನಲ್ಲಿ ಮೂರ್ತಿಮತ್ತಾಗಿ ಕಾಣುವಷ್ಟು ಅರಮನೆಯಲ್ಲಿ ಕಾಣುವದಿಲ್ಲ; ಅರಮನೆಯಲ್ಲಿ ಕಷ್ಟಪಟ್ಟು ಹುಡಿಕಿದರೂ ಅದು ದೊರೆಯುವುದು ಅಪರೂಪವೇ ಎಲ್ಲಿ ಮಾನವನು ತನ್ನ ನೈಜ, ಯಥಾರ್ಥ, ಅಕೃತ್ರಿಮ ರೂಪದಲ್ಲಿರುವನೋ ಅಲ್ಲಿಯೇ ಆನಂದವಿದೆ. ಆನಂದವು ಕೃತ್ರಿಮತೆಯಿಂದ, ಆಡಂಬರದಿಂದ ಹರದಾರಿಗಟ್ಟಲೆ ದೂರ ಓಡಿಹೋಗುತ್ತದೆ. ಕೃತ್ರಿಮದೊಡನೆ ಸತ್ಯದ ಸಂಬಂಧವೇನು ? ಆದ್ದರಿಂದ ಸಾಹಿತ್ಯದಲ್ಲಿ ಕೇವಲ ಒಂದು ರಸ ಮತ್ತು ಶೃಂಗಾರ ಇದೆಯೆಂದು ನಮ್ಮ ವಿಚಾರ. ಒಂದು ರಸವು ಸಾಹಿತ್ಯಿಕ-ದೃಷ್ಟಿಯಿಂದ ರಸವಿರುವುದಿಲ್ಲ ಮತ್ತು ಶೃಂಗಾರವಿಹೀನ ಮತ್ತು ಅಸುಂದರ-ವಿರುವ ಯಾವ ಕೃತಿಯು ಗಣನೆಯೂ ಸಾಹಿತ್ಯದಲ್ಲಾಗಲಾರದು. ವಾಸನಾ-ಪ್ರಧಾನವಾದ, ಕುತ್ಸಿತ ಭಾವಗಳನ್ನು ಉದ್ದೀಪ್ತಗೊಳಿಸುವ ಉದ್ದೇಶ್ಯವಿದ್ದ, ಕೇವಲ ಬಾಹ್ಯ ಜಗತ್ತಿನೊಡನೆ ಸಂಬಂಧವಿಡುವ ಯಾವ ಕೃತಿಯೂ ಸಾಹಿತ್ಯವಲ್ಲ. ಪತ್ತೇದಾರಿ ಕಾದಂಬರಿ ಅದ್ಭುತವಾಗಿರುತ್ತದೆ, ಆದರೆ ಅದರಲ್ಲಿ ಸೌಂದರ್ಯದ ಸಮಾವೇಶವಾದಾಗ ನಾವು ಅದಕ್ಕೆ ಸಾಹಿತ್ಯವೆಂದು ಅನ್ನುವೆವು. ಕೊಲೆಗಡಕನ ಪತ್ತೆ ಮಾಡುವದಕ್ಕಾಗಿ ಸತತ ಉದ್ಯೋಗ

ನಾನಾಬಗೆಯ ಕಷ್ಟಗಳ ಸಹನೆ, ನ್ಯಾಯ-ಮರ್ಯಾದೆಯ ರಕ್ಷಣೆ ಮೊದಲಾದವು ಅದ್ಭುತರಸದ ಕೃತಿಯನ್ನು ಸುಂದರಮಾಡುತ್ತವೆ.

ಸತ್ಯದೊಡನೆ ಆತ್ಮದ ಸಂಬಂಧವು ಮೂರು ಪ್ರಕಾರದ್ದಿದೆ. ಒಂದನೆಯದು ಜಿಜ್ಞಾಸೆಯ ಸಂಬಂಧ, ಎರಡನೆಯದು ಪ್ರಯೋಜನದ ಸಂಬಂಧ, ಮೂರನೆಯದು ಆನಂದದ ಸಂಬಂಧ. ಜಿಜ್ಞಾಸೆಯ ಸಂಬಂಧವು ದರ್ಶನ ಶಾಸ್ತ್ರದ ವಿಷಯವು, ಪ್ರಯೋಜನದ ಸಂಬಂಧವು ವಿಜ್ಞಾನದ ವಿಷಯವು ಮತ್ತು ಆನಂದದ ಸಂಬಂಧವು ಸಾಹಿತ್ಯದ ವಿಷಯವು ಸತ್ಯವು ಆನಂದದ ಸೆಲೆಯಾದಲ್ಲಿಯೇ ಸಾಹಿತ್ಯವುಂಟಾಗುತ್ತದೆ. ಜಿಜ್ಞಾಸೆಯ ಸಂಬಂಧವು ವಿಚಾರದೊಡನೆ ಇದ್ದರೆ ಪ್ರಯೋಜನದ ಸಂಬಂಧವು ಬುದ್ಧಿಯೊಡನೆ ಇರುತ್ತದೆ. ಆನಂದದ ಸಂಬಂಧವು ಮನೋಭಾವಗಳೊಡನೆ ಇರುತ್ತದೆ. ಸಾಹಿತ್ಯದ ವಿಕಾಸವು ಮನೋಭಾವಗಳ ಮುಖಾಂತರವಾಗಿಯೇ ಆಗುತ್ತದೆ. ಒಂದು ದೃಶ್ಯವನ್ನೊ ಒಂದು ಘಟನೆಯನ್ನೊ ಅಥವಾ ಒಂದು ಕಾಂಡವನ್ನೊ—ಈ ಮೂರನ್ನೂ—ಬೇರೆ ಬೇರೆ ದೃಷ್ಟಿಗಳಿಂದ ನೋಡುತ್ತೇವೆ. ಹಿಮಾಚ್ಛಾದಿತ ಪರ್ವತದ ಮೇಲೆ ಕಂಗೊಳಿಸುವ ಉಷೆಯ ದೃಶವು ದಾರ್ಶನಿಕನಿಗೆ ಆಳವಾದ ಚಿಂತನೆಯ ವಸ್ತುವಾದರೆ ವೈಜ್ಞಾನಿಕನಿಗೆ ಸಂಶೋಧನೆಯ ವಸ್ತುವಾಗಿದೆ ಮತ್ತು ಸಾಹಿತಿಗೆ ವಿಹ್ವಲತೆಯ ವಸ್ತುವಾಗಿದೆ. ವಿಹ್ವಲತೆಯು ಒಂದು ಪ್ರಕಾರದ ಆತ್ಮ ಸಮರ್ಪಣವು. ಅಲ್ಲಿ ನಾವು ಭಿನ್ನತ್ವವನ್ನು ಅನುಭವಿಸುವುದಿಲ್ಲ. ಅಲ್ಲಿ ಉಚ್ಚ—ನೀಚ, ಒಳಿತು—ಕೇಡು ಮುಂತಾಗಿ ಭೇದವಿಲ್ಲ. ಶ್ರೀರಾಮಚಂದ್ರನು ಶಬರಿಯ ಎಂಜಲದ ಬೋರೆಹಣ್ಣುಗಳನ್ನು ಏಕೆ ತಿನ್ನುತ್ತಾನೆ? ಕೃಷ್ಣಪರಮಾತ್ಮನು ವಿದುರನ ಶೋಕವು ನಾನಾ ವ್ಯಂಜನಗಳಿಗಿಂತಲೂ ರುಚಿಕರವು ಎಂದು ಏಕೆ ತಿಳಿಯುತ್ತಾನೆ? ಏಕೆಂದರೆ ಅವರು ಪಾರ್ಥಕ್ಯವನ್ನು ಅಳಿಸಿಬಿಟ್ಟಿದ್ದಾರೆ. ಅವರ ಆತ್ಮವು ವಿಶಾಲವಿದೆ. ಅದರಲ್ಲಿ ಸಮಸ್ತ ಜಗತ್ತಿಗೆ ಸ್ಥಾನವಿದೆ. ಆತ್ಮವು ಆತ್ಮನೊಡನೆ ಬೆರೆತು ಹೋಗಿದೆ. ಯಾರ ಆತ್ಮವು ಎಷ್ಟು ವಿಶಾಲವಿರುವುದೋ ಅಷ್ಟು ಅವನು ಮಹಾಪುರುಷನು. ಜಡಜಗತ್ತಿನೊಡನೆಯೂ ತಮ್ಮ ಆತ್ಮದ ಮಿಳನವನ್ನು ಮಾಡಬಲ್ಲಂಥ ಮಹಾಪುರುಷರೂ ಆಗಿಹೋಗಿದ್ದಾರೆ.

ನೋಡೋಣ ಬನ್ನಿ, ಜೀವನವೆಂದರೇನೆಂಬುದನ್ನು? ಜೀವನವೆಂದರೆ

ಕೇವಲ ಬದುಕುವುದು, ಉಣ್ಣುವುದು ಮತ್ತು ಸಾಯುವದು ಅಲ್ಲ. ಇಷ್ಟೇ ಇದ್ದರೆ ಅದು ಪಶುಜೀವನ. ಮಾನವಜೀವನದಲ್ಲಿಯೂ ಈ ಎಲ್ಲ ಪ್ರವೃತ್ತಿಗಳು ಇರುತ್ತವೆ; ಏಕೆಂದರೆ ಮಾನವನೂ ಪಶುವೇ. ಆದರೆ ಇವುಗಳಿಗಿಂತ ಮತ್ತೂ ಒಂದಿಷ್ಟು ಇರುತ್ತದೆ. ಅವುಗಳಲ್ಲಿ ಕೆಲವು ಪ್ರಕೃತಿಯೊಡನೆ ಇರುವ ಸ್ನೇಹದಲ್ಲಿ ಬಾಧಕವಾಗುತ್ತವೆ. ಆದರೆ ಕೆಲವು ಈ ಸ್ನೇಹಕ್ಕೆ ಸಹಾಯಕವಾಗುತ್ತವೆ. ಪ್ರಕೃತಿಯೊಡನೆ ಸಾಮಂಜಸ್ಯವನ್ನು ಬೆಳೆಸುವ ಪ್ರವೃತ್ತಿಗಳು ವಾಂಛನೀಯವಾಗಿವೆ. ಸಾಮಂಜಸ್ಯದಲ್ಲಿ ವಿಘ್ನವನ್ನು ತಂದೊಡ್ಡುವಂತಹವು ದೂಷಿತವಾಗುತ್ತವೆ. ಅಹಂಕಾರ, ಕೋಪ ಅಥವಾ ದ್ವೇಷ ಇವು ನಮ್ಮ ಮನಸ್ಸಿನ ಬಾಧಕ ಪ್ರವೃತ್ತಿಗಳು ಇವನ್ನು ನಾವು ತಡೆಯದಿದ್ದರೆ ಇವು ನಮ್ಮನ್ನು ನಿಸ್ಸಂದೇಹವಾಗಿಯೂ ನಾಶದ ಕಡೆಗೆ, ಪತನದ ಕಡೆಗೆ ಒಯ್ಯುವವು; ಆದ್ದರಿಂದ ನಾವು ಅವುಗಳ ಕಡಿವಾಣವನ್ನು ಬಿಗಿಹಿಡಿಯಬೇಕಾಗುವುದು, ಅವನ್ನು ಸಂಯಮದಲ್ಲಿಡಬೇಕಾಗುವದು, ಅವು ಎಲ್ಲೆಮೀರಿ ಹೋಗದಂತೆ ಮಾಡಬೇಕಾಗುವುದು. ಅವುಗಳ ಮೇಲೆ ಕಠೋರನಿಯಂತ್ರಣವನ್ನು ಇಟ್ಟಷ್ಟೂ ನಮ್ಮ ಜೀವನವು ಮಂಗಲಮಯವಾಗುತ್ತದೆ.

'ನೀನು ಕೆಟ್ಟ ಹುಡುಗ, ನಾವು ನಿನ್ನ ಕಿವಿ-ಹಿಂಡುವೆವು' ಎಂದು ಹೇಳುವದು ವ್ಯರ್ಥವೇ ಆಗುತ್ತದೆ., ಆದರೆ ಅದು ಆ ಪ್ರವೃತ್ತಿಯನ್ನು ಮತ್ತಿಷ್ಟು ಹಟದ ಕಡೆಗೆ ಒಯ್ದು ಅದನ್ನು ಪುಷ್ಟಗೊಳಿಸುತ್ತದೆ. ಬಾಲಕನಲ್ಲಿ ಸದ್ವೃತ್ತಿಗಳನ್ನು ಉತ್ತೇಜಿತಗೊಳಿಸುವುದು ಅಥವಾ ದೂಷಿತ ವೃತ್ತಿಗಳನ್ನು ಸ್ವಾಭಾವಿಕ ರೂಪದಲ್ಲಿ ಶಾಂತವಾಗುವಂತೆ ಮಾಡುವುದು ಅವಶ್ಯವಿರುತ್ತದೆ. ಇದೇ ರೀತಿಯಾಗಿ ಮನುಷ್ಯನಿಗೂ ಆತ್ಮವಿಕಾಸಕ್ಕೋಸ್ಕರ ಸಂಯಮವು ಅವಶ್ಯವಿರುತ್ತದೆ. ಸಾಹಿತ್ಯವೇ ಮನೋವಿಕಾರಗಳ ರಹಸ್ಯವನ್ನು ಬಿಚ್ಚಿ ಸದ್ವೃತ್ತಿಗಳನ್ನು ಜಾಗೃತಗೊಳಿಸುತ್ತದೆ.

ಯಾವ ರೀತಿಯಲ್ಲಿ ಮಕ್ಕಳನ್ನು ಪ್ರೀತಿಯಿಂದ ವಶಪಡಿಸಿಕೊಳ್ಳುವುದು ಸುಲಭಸಾಧ್ಯವೊ ಬೆದರಿಕೆಯಿಂದ ಸಾಧ್ಯವಿಲ್ಲವೋ ಅದೇ ರೀತಿಯಲ್ಲಿ ಸತ್ಯವನ್ನು ರಸಗಳ ಮುಖಾಂತರವಾಗಿ ಸುಲಭವಾಗಿ ಪ್ರಾಪ್ತಮಾಡಿಕೊಳ್ಳುವುದು ಸುಲಭಸಾಧ್ಯವು, ಜ್ಞಾನ ಮತ್ತು ವಿವೇಕದಿಂದ ಪ್ರಾಪ್ತಮಾಡಿ

ಕೊಳ್ಳುವುದು ಸಾಧ್ಯವಿಲ್ಲ. ಪ್ರೇಮದಿಂದ ಕಠೋರಕ್ಕಿಂತ ಕಠೋರ ವ್ಯಕ್ತಿಯನ್ನೂ ಮೃದುವಾಗಿ ಮಾಡಬಹುದೆಂಬುದು ಯಾರಿಗೆ ಗೊತ್ತಿಲ್ಲ? ಸಾಹಿತ್ಯವು ಮಿದುಳಿನ ವಸ್ತುವಲ್ಲ. ಹೃದಯದ ವಸ್ತುವು. ಜ್ಞಾನ ಮತ್ತು ಉಪದೇಶವು ಅಸಫಲವಾದಲ್ಲಿ ಸಾಹಿತ್ಯವು ಸಫಲವಾಗುತ್ತದೆ. ಇದೇ ಕಾರಣದಿಂದಾಗಿ ನಾವು ಉಪನಿಷತ್ತುಗಳ ಮತ್ತು ಇತರ ಧರ್ಮ-ಗ್ರಂಥಗಳ ಸಾಹಿತ್ಯವ ಸಹಾಯವನ್ನು ತೆಗೆದುಕೊಳ್ಳುತ್ತಿರುವುದು ಕಂಡುಬರುತ್ತದೆ! ಮನುಷ್ಯನ ಮೇಲೆ ಹೆಚ್ಚಿನ ಪರಿಣಾಮವು ಮಾನವ ಜೀವನದ ಸುಖ ದುಃಖದ ವರ್ಣನೆಯಿಂದ ಆಗಬಲ್ಲದೆಂಬುದನ್ನು ನಮ್ಮ ಧರ್ಮಾಚಾರ್ಯರು ಕಂಡರು ಮತ್ತು ಅವರು ಮಾನವ ಜೀವನದ ಕಥೆಗಳನ್ನು ರಚಿಸಿದರು; ಅವು ಇಂದಿಗೂ ನಮಗೆ ಆನಂದದ ವಸ್ತುಗಳಾಗಿವೆ. ಬೌದ್ಧರ ಜಾತಕ-ಕಥೆಗಳು, ತೌರೇಹ, ಕುರಾಣ, ಬಾಯಿಬಲ್ ಇವೆಲ್ಲವೂ ಮಾನವೀ ಕಥೆಗಳ ಸಂಗ್ರಹ ಮಾತ್ರ-ವಾಗಿವೆ. ಆ ಕಥೆಗಳ ಮೇಲೆಯೇ ನಮ್ಮ ಹಿರಿಯ ಧರ್ಮಗಳು ನಿಂತಿವೆ. ಆ ಕಥೆಗಳೇ ಧರ್ಮದ ಆತ್ಮವಾಗಿವೆ. ಆ ಕಥೆಗಳನ್ನು ತೆಗೆದುಬಿಟ್ಟರೆ ಆ ಧರ್ಮದ ಅಸ್ತಿತ್ವವೇ ಅಳಿದುಹೋಗುವುದು. ಆ ಧರ್ಮಾಚಾರ್ಯರು ಅಕಾರಣವಾಗಿಯೇ ಮಾನವ ಜೀವನದ ಕಥೆಗಳ ಆಶ್ರಯವನ್ನು ತೆಗೆದು ಕೊಂಡರೇನು? ಇಲ್ಲ, ಹೃದಯದ ಮುಖಾಂತರವಾಗಿಯೇ ಜನತೆಯ ಆತ್ಮದ ವರೆಗೂ ತಮ್ಮ ಸಂದೇಶವನ್ನು ಮುಟ್ಟಿಸಬಹುದೆಂಬುದನ್ನು ಅವರು ಅರಿತರು. ಅವರು ಸ್ವತಃ ವಿಶಾಲ ಹೃದಯದ ಮನುಷ್ಯರಿದ್ದರು. ಅವರು ಮಾನವ-ಜೀವನದೊಡನೆ ತಮ್ಮ ಆತ್ಮವನ್ನು ಬೆರಸಿದ್ದರು. ಸಮಸ್ತ ಮಾನವ ಕುಲದೊಡನೆ ಅವರ ಜೀವನದ ಸಾಮಂಜಸ್ಯವಿತ್ತು, ಎಂದ ಬಳಿಕ ಅವರು ಮಾನವ-ಜೀವನದ ಉಪೇಕ್ಷೆಯನ್ನೆಂತು ಮಾಡಬಲ್ಲರು?

ಆದಿಕಾಲದಿಂದಲೂ ಮನುಷ್ಯನಿಗೆ ಎಲ್ಲರಿಗಿಂತ ಸಮೀಪದ ಜೀವಿಯೆಂದರೆ ಮನುಷ್ಯನೇ ಆಗಿದ್ದಾನೆ. ನಾವು ಯಾರ ಸುಖ ದುಃಖದ ಮರ್ಮ-ವನ್ನು, ಅಳು–ನಗುವಿನ ಮರ್ಮವನ್ನು ತಿಳಿಯಬಲ್ಲೆವೋ ಅವರೊಡನೆಯೇ ನಮ್ಮ ಆತ್ಮವು ಹೆಚ್ಚು ಬೆರೆಯುತ್ತದೆ. ವಿದ್ಯಾರ್ಥಿಗೆ ವಿದ್ಯಾರ್ಥಿಜೀವನ-ದೊಡನೆ, ಒಕ್ಕಲಿಗನಿಗೆ ಕೃಷಕ-ಜೀವನದೊಡನೆ ಇರುವಷ್ಟು ಅಭಿರುಚಿಯು ಇತರರೊಡನೆ ಇರುವದಿಲ್ಲ., ಆದರೆ ಸಾಹಿತ್ಯ–ಜಗತ್ತಿನಲ್ಲಿ ಪ್ರವೇಶಿಸಿ-

ದೊಡನೆಯೇ ಈ ಭೇದವು ಅಳಿಸಿಹೋಗುತ್ತದೆ, ಈ ಪಾರ್ಥಕ್ಯವು ನಶಿಸಿ-ಹೋಗುತ್ತದೆ. ನಮ್ಮ ಮಾನವತೆಯೇ ವಿಶಾಲವಾಗಿ ವಿರಾಟವಾಗಿ ಸಮಸ್ತ ಮಾನವಕುಲದ ಮೇಲೆ ಅಧಿಕಾರವನ್ನು ಸ್ಥಾಪಿಸುತ್ತದೆ. ಮಾನವ-ಕುಲ-ವಷ್ಟೇ ಅಲ್ಲ, ಚರ-ಅಚರ. ಜಡ ಚೇತನ ಎಲ್ಲವೂ ಅದರ ಅಧಿಕಾರದ ಕಕ್ಷೆಯಲ್ಲಿ ಬರುತ್ತವೆ. ಆದಕ್ಕೇ ವಿಶ್ವದ ಆತ್ಮದ ಮೇಲೆ ಸಾರ್ವಭೌಮಾಧಿ-ಕಾರವು ದೊರಕುತ್ತದೆ. ಶ್ರೀರಾಮಚಂದ್ರ ರಾಜನಿದ್ದು, ಆತನ ದುಃಖದಿಂದ ಅರಸನು ಪ್ರಭಾವಿತನಾಗುವಷ್ಟೇ ಬಡವನೂ ಪ್ರಭಾವಿತನಾಗುತ್ತಾನೆ. ಪಶುಗಳಲ್ಲಿ, ಇಟ್ಟಂಗಿ-ಕಲ್ಲುಗಳಲ್ಲಿ, ಗಿಡಗಂಟಿಗಳಲ್ಲಿ ವಿಶ್ವದ ಆತ್ಮದ ದರ್ಶನ ಮಾಡಿಸುವ ಐಂದ್ರಜಾಲಿಕ ಕಟ್ಟಿಗೆಯಾಗಿದೆ ಸಾಹಿತ್ಯ. ಮಾನವ ಹೃದಯದ ಜಗತ್ತು ಈ ಪ್ರತ್ಯಕ್ಷ ಜಗತ್ತಿನಂತೆ ಇಲ್ಲ. ನಾವು ಮನುಷ್ಯರಾದ್ದರಿಂದ ಮಾನವ ಜಗತ್ತಿನ ಜೀವಿಗಳಲ್ಲಿ ನಮ್ಮನ್ನು ನಾವು ಹೆಚ್ಚಾಗಿ ಕಾಣುತ್ತೇವೆ. ಮಾನವ ಕುಲದ ಸುಖ-ದುಃಖ ಮತ್ತು ಹರ್ಷ-ವಿಷಾದಗಳಿಂದ ಹೆಚ್ಚು ವಿಚಲಿತರಾಗುತ್ತೇವೆ; ಆದರೆ ನಾವು ನಮ್ಮ ಅತ್ಯಂತ ಸಮೀಪದ ಬಂಧು ಬಾಂಧವರೊಡನೆಯೂ ಇಷ್ಟು ಸಾಮೀಪ್ಯವನ್ನಿಟ್ಟುಕೊಂಡಿರುವುದಿಲ್ಲ. ಏಕೆಂದರೆ ನಾವು ಆದರ ಒಂದೊಂದು ವಿಚಾರವನ್ನು, ಒಂದೊಂದು ಉದ್ಗಾರ ವನ್ನು ಬಲ್ಲೆವು, ಅದರ ಮನಸ್ಸು ನಮ್ಮೆದುರಿಗೆ ಕನ್ನಡಿಯಂತೆ ತೆರೆದಿದೆ. ಅದರ ಅಂತಃಕರಣದಲ್ಲಿ ಸ್ವಾತಂತ್ರ್ಯದಿಂದ ಸಂಚರಿಸಬಲ್ಲಷ್ಟು ಸ್ವಾತಂತ್ರ್ಯ-ದಿಂದ ಸಂಚರಿಸಲು ನಮಗೆ ಜೀವನದಲ್ಲಿ ಜೀವಿಗಳು ಎಲ್ಲಿ ದೊರೆಯುತ್ತಾರೆ ? ಭಾವಗಳಲ್ಲಿ ವ್ಯಾಪಕತೆ ಪಡೆಯುವುದೂ ಆ ಭಾವಗಳು ಪ್ರತಿಯೊಬ್ಬ ಜೀವಿಗೂ ತನ್ನವೆನಿಸುವಷ್ಟು ವಿಶ್ವದ ಆತ್ಮದೊಡನೆ ಸಮರಸತೆ ( Harmony ) ಯನ್ನು ಪಡೆಯುವುದೂ ಒಳ್ಳೆಯ ಸಾಹಿತ್ಯಕಾರನ ಲಕ್ಷಣ.

ಸಾಹಿತ್ಯಕಾರನು ವಿಶೇಷವಾಗಿ ತನ್ನ ದೇಶ ಮತ್ತು ಕಾಲದಿಂದ ಪ್ರಭಾವಿತವಾಗುತ್ತಾನೆ. ದೇಶದಲ್ಲಿ ಒಂದು ತರಂಗವೆದ್ದಾಗ ಸಾಹಿತ್ಯಕಾರನು ಅದರಿಂದ ಅವಿಚಲಿತನಾಗದೆ ಉಳಿಯುವುದು ಅಸಂಭವಾಗುತ್ತದೆ. ಅವನ ವಿಶಾಲ ಆತ್ಮವು ತನ್ನ ದೇಶಬಾಂಧವರ ಕಷ್ಟದಿಂದ ಕಳವಳಗೊಳ್ಳುತ್ತದೆ ಮತ್ತು ತೀವ್ರ ಕಳವಳವಾದಾಗ ಅವನು ಅತ್ತುಬಿಡುತ್ತಾನೆ., ಆದರೆ ಅವನ ರೋದನದಲ್ಲಿಯೂ ವ್ಯಾಪಕತೆಯಿರುತ್ತದೆ. ಅವನು ಸ್ವದೇಶದವನಾಗಿದ್ದೂ

ಸಾರ್ವಭೌಮಿಕನಾಗಿರುತ್ತಾನೆ. 'ಟಾಮ ಕಾಕಾನ ಕುಟೀರ'ವು ಗುಲಾಮ-ಗಿರಿಯ ರೂಢಿಯಿಂದ ಕಳವಳಗೊಂಡ ಹೃದಯದ ಕೃತಿಯು. ಈಗ ಆ ರೂಢಿಯಿರದಿದ್ದರೂ ಆದರಲ್ಲಿ ವ್ಯಾಪಕತೆಯು ಇರುವುದರಿಂದ ಅದನ್ನು ನಾವು ಓದಿ ಮುಗ್ಧರಾಗುತ್ತೇವೆ. ನಿಜವಾದ ಸಾಹಿತ್ಯವು ಎಂದೂ ಹಳೆಯದಾಗುವುದಿಲ್ಲ ಅದು ಸದಾ ಹೊಸತಾಗಿಯೇ ಇರುತ್ತದೆ. ದರ್ಶನ ಮತ್ತು ವಿಜ್ಞಾನಗಳು ಸಮಯದ ಗತಿಗೆ ಅನುಸಾರವಾಗಿ ಬದಲಾಗುತ್ತಿರುತ್ತವೆ, ಆದರೆ ಸಾಹಿತ್ಯವು ಹೃದಯದ ವಸ್ತುವಾಗಿರುತ್ತದೆ ಮತ್ತು ಮಾನವ-ಹೃದಯದಲ್ಲಿ ಬದಲಾವಣೆಗಳು ಆಗುವುದಿಲ್ಲ. ಆದಿಕವಿ ವಾಲ್ಮೀಕಿಯ ಸಮಯದಲ್ಲಿ ಇದ್ದ ಹಾಗೆಯೇ ಹರ್ಷ-ವಿಸ್ಮಯ, ಕ್ರೋಧ-ದ್ವೇಷ, ಆಸೆ-ಭಯಗಳು ಇಂದಿಗೂ ಇದ್ದು ನಮ್ಮ ಮನಸ್ಸಿನ ಮೇಲೆ ಪರಿಣಾಮವನ್ನು ಮಾಡುತ್ತವೆ ಮತ್ತು ಇವು ಅನಂತದ ವರೆಗೆ ಬಹುಶಃ ಇರುವುವು. ರಾಮಾ-ಯಣದ ಕಾಲದ ಕಾಲವು ಈಗ ಇಲ್ಲ; ಮಹಾಭಾರತದ ಕಾಲವೂ ಭೂತ-ಕಾಲವಾಗಿ ಹೋಯಿತು, ಆದರೆ ಈಗಲೂ ಈ ಗ್ರಂಥಗಳು ಇವೆ. ಸಾಹಿತ್ಯವೇ ನಮ್ಮ ನಿಜವಾದ ಇತಿಹಾಸ. ಏಕೆಂದರೆ ಅದರಲ್ಲಿ ನಮ್ಮ ದೇಶ ಮತ್ತು ಕಾಲದ ಚರಿತ್ರವು ಇರುವಂತೆ ಶುದ್ಧ ಇತಿಹಾಸದಲ್ಲಿ ಇರಲಾರದು. ಘಟನೆ-ಗಳ ಸೂಚಿಯೇ ಇತಿಹಾಸವಲ್ಲ, ಅರಸರ ಯುದ್ಧಗಳೂ ಇತಿಹಾಸವಲ್ಲ. ಜೀವನದ ಬೇರೆ ಬೇರೆ ಅಂಗಗಳ ಪ್ರಗತಿಯ ಹೆಸರೇ ಇತಿಹಾಸ ಮತ್ತು ಜೀವನದ ಮೇಲೆ ಹೆಚ್ಚು ಪ್ರಕಾಶವನ್ನು ಸಾಹಿತ್ಯಕ್ಕಿಂತ ಬೇರೆ ಯಾವ ವಸ್ತುವು ಹಾಕಬಲ್ಲದು? ಏಕೆಂದರೆ ಸಾಹಿತ್ಯವು ತನ್ನ ದೇಶ-ಕಾಲದ ಪ್ರತಿಬಿಂಬವಾಗಿರುತ್ತದೆ.

ಜೀವನದಲ್ಲಿ ಸಾಹಿತ್ಯದ ಉಪಯೋಗದ ಬಗೆಗೆ ಆಗಾಗ್ಗೆ ಸಂದೇಹ-ವನ್ನು ವ್ಯಕ್ತಪಡಿಸಲಾಗುತ್ತದೆ. ಸ್ವಭಾವದಿಂದ ಒಳ್ಳೆಯವರಿದ್ದವರು ಏನೂ ಕಲಿಯದಿದ್ದರೂ ಒಳ್ಳೆಯವರೇ ಇರುತ್ತಾರೆ; ಸ್ವಭಾವದಿಂದ ಕೆಟ್ಟವರಿದ್ದವರು ಎಷ್ಟೇ ಕಲಿತರೂ ಕೆಟ್ಟವರೇ ಇರುತ್ತಾರೆಂದು ಹೇಳಲಾಗುತ್ತದೆ. ಈ ಹೇಳಿಕೆಯಲ್ಲಿ ಸತ್ಯಾಂಶವು ಬಹಳ ಕಡಮೆ ಇದೆ. ಇದನ್ನು ಸತ್ಯವೆಂದು ಒಪ್ಪಿದರೆ ಮಾನವ-ಚರಿತ್ರವನ್ನು ಬದಲು ಮಾಡಬೇಕಾಗುವುದು. ಸುಂದರ ವಿದ್ದುದರ ಕಡೆಗೆ ಮನುಷ್ಯನು ಸ್ವಾಭಾವಿಕವಾಗಿ ಆಕರ್ಷಿತನಾಗುತ್ತಾನೆ.

ನಾವೆಷ್ಟೇ ಪತಿತರಾದಾಗ್ಯೂ ಅಸುಂದರತೆಯ ಕಡೆಗೆ ನಾವು ಆಕರ್ಷಿತರಾಗುವುದಿಲ್ಲ. ನಾವು ಎಷ್ಟೇ ಕೆಟ್ಟ ಕೆಲಸವನ್ನು ಮಾಡಿದರೂ ನಮ್ಮ ಮನಸ್ಸಿನ ಮೇಲೆ ಕರುಣೆ, ದಯೆ, ಪ್ರೇಮ ಮತ್ತು ಭಕ್ತಿಯ ಪರಿಣಾಮವಾಗದೇ ಇರುವುದು ಅಸಂಭವ. ನಾದಿರಶಾಹನಕಿಂತ ನಿರ್ದಯೀ ಮನುಷ್ಯನು ಯಾವನಾಗಬಲ್ಲನು ? ನಾದಿರಶಾಹನೆಂದರೆ ದಿಲ್ಲಿಯಲ್ಲಿ ಹತ್ಯಾಕಾಂಡವನ್ನು ಮಾಡಿದ ನಾದಿರಶಾಹನೆಂದು ನಮ್ಮ ಆಶಯ. ಒಂದು ವೇಳೆ ದಿಲ್ಲಿಯಲ್ಲಿ ನಡೆದ ಹತ್ಯಾಕಾಂಡವೂ ಸತ್ಯ ಸಂಗತಿಯಾಗಿದ್ದರೆ ನಾದಿರಶಾಹನು ನಿರ್ದಯಿ ಮನುಷ್ಯನೆಂಬುದರಲ್ಲಿ ಯಾವ ಸಂದೇಹವೂ ಇರದು. ಆಗ ಅವನು ಯಾವ ಕಾರಣದಿಂದ ಹತ್ಯಾಕಾಂಡವನ್ನು ನಿಲ್ಲಿಸುವ ಆಜ್ಞೆಯನ್ನು ಕೊಟ್ಟಿದ್ದನೆಂಬುದು ತಮಗೆ ಗೊತ್ತಿದೆಯೇನು ? ದಿಲ್ಲಿಯ ಬಾದಶಾಹನ ವಜೀರನು ಒಬ್ಬ ರಸಿಕ ಮನುಷ್ಯನಾಗಿದ್ದನು. ನಾದಿರಶಾಹನ ಕ್ರೋಧವು ಏನು ಮಾಡಿದರೂ ಶಾಂತವಾಗುತ್ತಿಲ್ಲ ಮತ್ತು ದಿಲ್ಲಿ ನಿವಾಸಿಗಳ ರಕ್ತದ ನದಿಯು ಹರಿಯುತ್ತಲಿದೆ ಹಾಗು ಬಾದಶಾಹನ ಅತ್ಯಂತ ಸಮೀಪದ ಅಧಿಕಾರಿಗಳಿಗೂ ಎದುರಿಗೆ ಹೋಗುವ ಧೈರ್ಯವಾಗುತ್ತಿಲ್ಲ ಎಂಬುದು ಅವನಿಗೆ ಮನವರಿಕೆಯಾದೊಡನೆ ಅವನು ಪ್ರಾಣವನ್ನು ಅಂಗೈಯಲ್ಲಿ ಹಿಡಿದುಕೊಂಡು ನಾದಿರಶಾಹನ ಹತ್ತಿರಕ್ಕೆ ಹೋದನು ಮತ್ತು ಈ ಪದ್ಯವನ್ನು ಅಂದನು.—

‘ ಕಸೆ ನ ಮಾಂದ ದೀಗರ ಬ ತೆಗೆ ನಾಜ ಕುಶೀ |
ಮಗರ್ ಕಿ ಜಿಂದಾ ಕುನೀ ಖಲ್ಕ ರಾ ವ ಬಾಜ ಕುಶೀ | ’

ಇದರ ಅರ್ಥವು ಹೀಗಿದೆ— ‘ ನಿನ್ನ ಪ್ರೀತಿಯ ಖಡ್ಗವು ಈಗ ಯಾರನ್ನೂ ಜೀವಂತ ಉಳಿಸುವುದಿಲ್ಲ. ನೀನು ಹೆಣಗಳನ್ನು ಪುನಃ ಜೀವಂತಗೊಳಿಸಬೇಕು ಮತ್ತು ಪುನಃ ಕೊಲ್ಲಲು ಪ್ರಾರಂಭಿಸಬೇಕು. ಇದರ ಹೊರತು ನಿನಗೆ ಈಗ ಬೇರೆ ಯಾವ ಉಪಾಯವೂ ಉಳಿದಿಲ್ಲ.’ ಇದು ಫಾರಸಿಯ ಒಬ್ಬ ಪ್ರಸಿದ್ಧ ಕವಿಯ ಶೃಂಗಾರ ರಸದ ಬಗೆಗೆ ಇದ್ದ ಪದ್ಯ. ಆದರೆ ಈ ಕವಿತೆಯನ್ನು ಆಲಿಸಿದೊಡನೆ ಕೊಲೆಗಡುಕನ ಹೃದಯದಲ್ಲಿ ಮನುಷ್ಯನು ಜಾಗೃತನಾದನು. ಈ ಪದ್ಯವು ಅವನ ಹೃದಯದ ಕೋಮಲ ಭಾಗವನ್ನು ಸ್ಪರ್ಶಿಸಿತು ಮತ್ತು ಅವನು ಕೂಡಲೇ ಹತ್ಯಾಕಾಂಡವನ್ನು

ನಿಲ್ಲಿಸಿಬಿಟ್ಟನು. ನೆಪೋಲಿಯನ್ನನ ಜೀವನದ ಒಂದು ಘಟನೆಯೂ ಪ್ರಸಿದ್ಧವಿದೆ. ಅವನು ಒಬ್ಬ ಇಂಗ್ಲೀಷ ಅಂಬಿಗನು ಚಿಕ್ಕ ದೋಣಿಯಲ್ಲಿ ಕುಳಿತು ಕ್ಯಾಲೇದ ಸಮುದ್ರ ದಾಟುವದನ್ನು ನೋಡಿದನು. ಫ್ರೆಂಚರು ಅಂಬಿಗನನ್ನು ಹಿಡಿದು ನೆಪೋಲಿಯನ್ನನ ಮುಂದೆ ನಿಲ್ಲಿಸಿದರು. ಆಗ ನೆಪೋಲಿಯನ್ನನು ಅವನನ್ನು ಕೇಳಿದನು–'ನೀನು ಈ ಭಂಗುರ ದೋಣಿಯಲ್ಲಿ ಕುಳಿತು ಸಮುದ್ರವನ್ನು ಏಕೆ ದಾಟುತ್ತಿದ್ದಿ?' ಅಪರಾಧಿಯು ಉತ್ತರವಿತ್ತನು 'ಏಕೆಂದರೆ ನನ್ನ ಮುಪ್ಪಿನ ತಾಯಿ ಮನೆಯಲ್ಲಿ ಒಬ್ಬಳೇ ಇದ್ದಾಳೆ, ಆಕೆಯನ್ನು ಒಂದು ಬಾರಿ ನೋಡಲು ಅಪೇಕ್ಷಿಸುತ್ತಿದ್ದೆ.' ನೆಪೋಲಿಯನ್ನನ ಕಣ್ಣುಗಳಲ್ಲಿ ಕಂಬನಿಗಳು ತುಂಬಿ ಬಂದವು. ಮನುಷ್ಯನ ಕೋಮಲ ಭಾಗವು ಸ್ಪಂದಿತ-ವಾಯಿತು. ಅವನು ಆ ಅಂಬಿಗನನ್ನು ಒಂದು ಫ್ರೆಂಚ ಹಡಗದಲ್ಲಿ ಇಂಗ್ಲಂಡಕ್ಕೆ ಕಳುಹಿಸಿಕೊಟ್ಟನು. ಮನುಷ್ಯನು ಸ್ವಭಾವದಿಂದ ದೇವನಿಗೆ ಸಮಾನ. ಕಾಲದ ಛಲಪ್ರಪಂಚ ಇಲ್ಲವೆ ಪರಿಸ್ಥಿತಿಗೆ ವಶೀಭೂತನಾಗಿ ಅವನು ತನ್ನ ದೇವತ್ವವನ್ನು ಕಳೆದುಕೊಂಡು ಬಿಡುತ್ತಾನೆ. ಸಾಹಿತ್ಯವು ಇದೇ ದೇವತ್ವವನ್ನು ಅದರ ಸ್ಥಾನದಲ್ಲಿ ಪ್ರಸ್ಥಾಪಿಸಲು ಯತ್ನಮಾಡುತ್ತದೆ— ಉಪದೇಶಗಳಿಂದಲ್ಲ, ಬುದ್ಧಿಯ ಮಾತುಗಳಿಂದಲ್ಲ, ಭಾವಗಳನ್ನು ಸ್ಪಂದಿತ ಗೊಳಿಸಿ, ಮನಸ್ಸಿನ ಕೋಮಲ ತಂತಿಗಳನ್ನು ಮೀಟಿ, ಪ್ರಕೃತಿಯೊಡನೆ ಸಾಮಂಜಸ್ಯವನ್ನು ಹುಟ್ಟಿಸಿ. ನಮ್ಮ ಸಭ್ಯತೆಯೂ ಸಾಹಿತ್ಯದ ಆಧಾರದ ಮೇಲೆಯೆ ನಿಂತಿದೆ. ನಾವು ಈಗ ಇದ್ದ ಸ್ಥಿತಿಯೂ ಸಾಹಿತ್ಯದಿಂದಲೇ ನಿರ್ಮಿತವಾದುದು. ವಿಶ್ವದ ಆತ್ಮದೊಳಗೂ ರಾಷ್ಟ್ರದ ಅಥವಾ ದೇಶದ ಒಂದು ಆತ್ಮವಿರುತ್ತದೆ. ಈ ಆತ್ಮದ ಪ್ರತಿಧ್ವನಿಯೇ ಸಾಹಿತ್ಯ. ಯುರೋಪದ ಸಾಹಿತ್ಯವನ್ನು ಸ್ವಲ್ಪ ನೋಡಿರಿ. ತಮಗೆ ಅಲ್ಲಿ ಸಂಘರ್ಷವು ಕಾಣುವುದು. ಕೆಲವು ಕಡೆಯಲ್ಲಿ ಕೊಲೆಯ ಕಾಂಡಗಳ ಪ್ರದರ್ಶನವು, ಕೆಲವು ಕಡೆಯಲ್ಲಿ ಪತ್ತೆದಾರಿಯ ಅದ್ಭುತತೆ ತೋರುವುದು. ಇಡಿ ಸಂಸ್ಕೃತಿಯು ಉನ್ಮತ್ತ-ವಾಗಿ ಮಳಲು ಗಾಡಿನಲ್ಲಿ ನೀರನ್ನು ಹುಡುಕುವಂತೆ ತೋರುವದು. ಆ ಸಾಹಿತ್ಯದ ಪರಿಣಾಮವು ಇಷ್ಟೇ ಆಗುವುದು—ವೈಯಕ್ತಿಕ ಸ್ವಾರ್ಥ-ಪರಾಯಣತೆಯು ಬೆಳೆಯುವದು, ಅರ್ಥದಾಸೆಗೆ ಸೀಮೆಯೇ ಉಳಿಯುವುದಿಲ್ಲ. ದಿನಾಲು ದಂಗೆಗಳು ಮತ್ತು ದಿನಾಲು ಕದನಗಳು ಜರುಗುವುವು. ಪ್ರತಿಯೊಂದು

ವಸ್ತುವೂ ಸ್ವಾರ್ಥದ ತಕ್ಕಡಿಯಲ್ಲಿ ತೂಗಲ್ಪಡುತ್ತಿದೆ. ಇದರಿಂದ ಒಬ್ಬ ಯುರೋಪಿಯನ್ ಮಹಾತ್ಮನ ಉಪದೇಶವನ್ನು ಕೇಳಿದ ಬಳಿಕ ಆದರ ಹಿಂದೆ ಯಾವ ಸ್ವಾರ್ಥವಿದೆಯೋ ಏನೋ ಎಂಬ ಸಂದೇಹ ಬರತೊಡಗುತ್ತದೆ. ಸಾಹಿತ್ಯವು ಸಾಮಾಜಿಕ ಆದರ್ಶಗಳ ಜನಕ. ಆದರ್ಶವೇ ಭ್ರಷ್ಟವಾದರೆ ಸಮಾಜದ ಪತನಕ್ಕೆ ಬಹಳ ದಿನಗಳು ಬೇಕಾಗುವುದಿಲ್ಲ. ಹೊಸ ಸಂಸ್ಕೃತಿಯ ಜೀವನವು ೧೫೦ ವರ್ಷಗಳನ್ನು ಮಿಕ್ಕಿಲ್ಲ; ಆದರೆ ಇಷ್ಟೇ ಅವಧಿಯಲ್ಲಿ ಪ್ರಪಂಚವು ಇದಕ್ಕೆ ಬೇಸತ್ತಿದೆ; ಅದರ ಸ್ಥಾನದಲ್ಲಿ ಸ್ಥಾಪಿಸಲು ಯೋಗ್ಯವಾದ ಯಾವ ವಸ್ತುವೂ ಅದಕ್ಕೆ ದೊರೆಯದಾಗಿದೆ. ತಾನು ಹೋಗುತ್ತಿರುವ ಮಾರ್ಗವು ಸರಿಯಾದುದಿಲ್ಲವೆಂದು ತಿಳಿಯುತ್ತಿರುವ ದಾರಿಕಾರನಂತೆ ಅದರ ಸ್ಥಿತಿಯಾಗಿದೆ; ಆದರೆ ಅದು ಹಿಂತಿರುಗಿ ಬರಲು ಸಾಮರ್ಥ್ಯವಿಲ್ಲದಷ್ಟು ದೂರ ಹೋಗಿಬಿಟ್ಟಿದೆ. ಅದು ಮುಂದೆಯೇ ಹೋಗುವುದು ಮುಂದೆ ಉತ್ತುಂಗ ತರಂಗಗಳಿಂದ ಭೋರ್ಗರೆವ ಸಮುದ್ರವಿದ್ದರೂ ಅದಕ್ಕೆ ಚಿಂತೆ ಇಲ್ಲ. ಅದರಲ್ಲಿ ನಿರಾಶೆಯ ಹಿಂಸಕ ಬಲವಿದೆ. ಆಸೆಯ ಉದಾರಶಕ್ತಿಯು ಇಲ್ಲ. ಭಾರತೀಯ ಸಾಹಿತ್ಯದ ಆದರ್ಶವು ತ್ಯಾಗ ಮತ್ತು ಉತ್ಸರ್ಗ. ಯುರೋಪದ ವ್ಯಕ್ತಿಯು ಲಕ್ಷಾಧಿಪತಿಯಾಗಿ, ಆಸ್ತಿಯನ್ನು ಕೊಂಡು. ಕಂಪನಿಗಳಲ್ಲಿ ಪಾಲುಗಳನ್ನು ತೆಗೆದುಕೊಂಡು ಮತ್ತು ಉಚ್ಚ ಸಮಾಜಗಳಲ್ಲಿ ಬೆರೆತರೆ ತಾನು ಕೃತಾರ್ಥನಾದೆನೆಂದು ತಿಳಿಯುತ್ತಾನೆ. ಮಾಯಾ ಬಂಧನದಿಂದ ಮುಕ್ತವಾದಾಗ, ಭೋಗ ಮತ್ತು ಅಧಿಕಾರ ಮೋಹದಿಂದ ರಹಿತವಾದಾಗ ತಾನು ಕೃತಾರ್ಥನಾದೆನೆಂದು ಭಾರತೀಯ ವ್ಯಕ್ತಿಯು ತಿಳಿಯುತ್ತಾನೆ. ಯಾವುದೇ ರಾಷ್ಟ್ರವಿರಲಿ, ಅದರ ಅಮೂಲ್ಯ ಸಂಪತ್ತೆಂದರೆ ಅದರ ಸಾಹಿತ್ಯಿಕ ಆದರ್ಶಗಳು. ವ್ಯಾಸ ಮತ್ತು ವಾಲ್ಮೀಕಿಯು ಸೃಜಿಸಿದ ಆದರ್ಶಗಳು ಇಂದಿಗೂ ಭಾರತದ ಮಸ್ತಕವನ್ನು ಎದ್ದು ನಿಲ್ಲಿಸಿವೆ. ರಾಮನು ವಾಲ್ಮೀಕಿಯ ಪಡಿಯಚ್ಚಿನಲ್ಲಿ ಹೊಯ್ಯಲ್ಪಡದೇ ಹೋಗಿದ್ದರೆ ರಾಮನಾಗುತ್ತಿದ್ದಿಲ್ಲ. ಸೀತೆಯೂ ಅದೇ ಪಡಿಯಚ್ಚಿನಲ್ಲಿ ಹೊಯ್ಯಲ್ಪಟ್ಟದ್ದರಿಂದ ಸೀತೆಯಾದಳು. ನಾವೆಲ್ಲರೂ ಇಂತಹ ಚರಿತ್ರಗಳನ್ನು ನಿರ್ಮಾಣಮಾಡಲಾರೆವೆಂಬುದೂ ನಿಜ; ಆದರೆ ಧನ್ವಂತರಿಯು

ಒಬ್ಬನೇ ಆಗಿ ಹೋಗಿದ್ದರೂ ಪ್ರಪಂಚದಲ್ಲಿ ವೈದ್ಯರ ಆವಶ್ಯಕತೆಯು ಇದ್ದೇ ಇದೆ ಮತ್ತು ಇದ್ದೂ ಇರುವದು.

ಇಷ್ಟು ದೊಡ್ಡ ಹೊಣೆಗಾರಿಕೆಯು ಯಾವ ವಸ್ತುವಿನ ಮೇಲೆ ಇರುವುದೋ ಅದರ ನಿರ್ಮಾತೃಗಳ ಸ್ಥಾನವೂ ಕಡಮೆ ಹೊಣೆಗಾರಿಕೆಯು-ದಿರುವುದಿಲ್ಲ ಕೈಯಲ್ಲಿ ಲೆಕ್ಕಣಿಕೆಯನ್ನು ಹಿಡಿದೊಡನೆ ತಲೆಯ ಮೇಲೆ ದೊಡ್ಡ ಹೊಣೆಯು ಬೀಳುತ್ತದೆ. ಸಾಧಾರಣವಾಗಿ ಯೌವನದಲ್ಲಿ ನಮ್ಮ ದೃಷ್ಟಿಯು ಮೊದಲು ವಿಧ್ವಂಸದ ಕಡೆಗೆ ಹೋಗುತ್ತದೆ. ನಾವು ಸುಧಾರಣೆ ಮಾಡುವ ಗುಂಗಿನಲ್ಲಿ ಅಗಣಿತ ಬಾಣಗಳನ್ನು ಬಿಡತೊಡಗುತ್ತೇವೆ. ದೇವರ ಫೌಜದಾರರು ಆಗಿಬಿಡುತ್ತೇವೆ. ಕೂಡಲೇ ಕಣ್ಣುಗಳು ಕಪ್ಪು ಕಲೆಗಳ ಕಡೆಗೆ ಹೋಗುತ್ತವೆ. ಯಥಾರ್ಥವಾದದ ಪ್ರವಾಹದಲ್ಲಿ ಹರಿಯತೊಡಗು-ತ್ತೇವೆ. ಕೇಡುಗಳ ನಗ್ನ ಚಿತ್ರವನ್ನು ಚಿತ್ರಿಸುವಲ್ಲಿಯೇ ಕಲೆಯ ಧನ್ಯತೆ-ಯಡೆಯೆಂದು ತಿಳಿಯುತ್ತೇವೆ. ಒಂದು ಮನೆಯನ್ನು ಕೆಡವಿ ಅದರ ಸ್ಥಳ-ದಲ್ಲಿ ಹೊಸಮನೆಯನ್ನು ಕಟ್ಟಲಾಗುತ್ತದೆ ಎಂಬುದು ಸತ್ಯ. ಹಳೆಯ ಜಳ್ಳುಗಳನ್ನು ಹಾರಿಸುವುದು ಮತ್ತು ಬಂಧನಗಳನ್ನು ಕಿತ್ತೊಗೆಯುವದು ಅವಶ್ಯವಿದೆ., ಆದರೆ ಇದನ್ನು ಸಾಹಿತ್ಯವು ಮಾಡಲಾರದು. ಸಾಹಿತ್ಯದ ಗೊತ್ತುಗುರಿಗಳ, ನಿಯಮಗಳ ಪಾಲನೆಯನ್ನು ಮಾಡುವುದೇ ಸಾಹಿತ್ಯ. ನಾವು ಬಹುತರವಾಗಿ ಸಾಹಿತ್ಯದ ಮರ್ಮವನ್ನು ಅರಿಯದೇ ಬರೆಯ ತೊಡಗುತ್ತೇವೆ. ಬಹುಶಃ ನಾವು ಮೋಜಿನ, ಬಿಗುವಿನ ಖಡಕಾದ ಮತ್ತು ಓಜಪೂರ್ಣವಾದ ಭಾಷೆಯನ್ನು ಬರೆಯುವುದೇ ಸಾಹಿತ್ಯವೆಂದು ತಿಳಿಯು-ತ್ತೇವೆ. ಭಾಷೆಯು ಸಾಹಿತ್ಯದ ಒಂದು ಅಂಗ., ಆದರೆ ಸ್ಥಾಯೀ ಸಾಹಿತ್ಯವು ವಿಧ್ವಂಸಮಾಡುವುದಿಲ್ಲ, ನಿರ್ಮಾಣಮಾಡುತ್ತದೆ. ಅದು ಮಾನವ-ಚರಿತ್ರದ ಕಪ್ಪುಕಲೆಗಳನ್ನು ತೋರಿಸುವುದಿಲ್ಲ, ಉಜ್ವಲತನವನ್ನು ತೋರಿಸು-ತ್ತದೆ. ಮನೆಯನ್ನು ಕೆಡವುವವನು ಎಂಜಿನಿಯರನೆನಿಸಿಕೊಳ್ಳಲಾರ, ಎಂಜಿನಿ-ಯರನು ನಿರ್ಮಾಣವನ್ನೇ ಮಾಡುವವ. ಸಾಹಿತ್ಯವನ್ನು ತಮ್ಮ ಜೀವನದ ಧ್ಯೇಯವನ್ನಾಗಿ ಮಾಡಿಕೊಳ್ಳಲಿಚ್ಛಿಸುವ ಯುವಕರು ಅತ್ಯಂತ ಆತ್ಮ-ಸಂಯಮಿಗಳಾಗಿರುವುದು ಆವಶ್ಯಕ., ಏಕೆಂದರೆ ಅವರು ಒಂದು ದೊಡ್ಡ ಸ್ಥಾನಕ್ಕಾಗಿ ಸಿದ್ಧತೆಯನ್ನು ಮಾಡಿಕೊಳ್ಳುವರಾಗಿದ್ದಾರೆ ಮತ್ತು ಆ ಸ್ಥಾನವು

ನ್ಯಾಯಾಲಯದಲ್ಲಿ ವಾದಿಸುವ ಅಥವಾ ಕುರ್ಚಿಯ ಮೇಲೆ ಕುಳಿತು ನ್ಯಾಯ ನಿರ್ಣಯಮಾಡುವ ಸ್ಥಾನಕ್ಕಿಂತ ಉಚ್ಚವಾಗಿದೆ. ಅದಕ್ಕಾಗಿ ಕೇವಲ ಪದವಿ (ಡಿಗ್ರಿ) ಗಳು ಮತ್ತು ಉಚ್ಚಶಿಕ್ಷಣ ಅಷ್ಟೇ ಸಾಕಾಗುವುದಿಲ್ಲ., ಅದಕ್ಕೆ ಚಿತ್ತದ ಸಾಧನೆ, ಸಂಯಮ, ಸೌಂದರ್ಯ ಮತ್ತು ತತ್ತ್ವದ ಜ್ಞಾನ ಹೆಚ್ಚು ಬೇಕು. ಸಾಹಿತ್ಯಕಾರನು ಆದರ್ಶವಾದಿಯಾಗಬೇಕು. ಭಾವಗಳೂ ತುಂಬ ಪರಿಮಾರ್ಜಿತವಾಗಿರಬೇಕು. ನಮ್ಮ ಸಾಹಿತ್ಯ-ಸೇವಕರು ಈ ಆದರ್ಶ ವನ್ನು ತಲ್ಪದ ವರೆಗೆ ನಮ್ಮ ಸಾಹಿತ್ಯದಿಂದ ಮಂಗಲವನ್ನು ಆಸಿಸಲಾಗದು· ಅಮರ ಸಾಹಿತ್ಯದ ನಿರ್ಮಾತೃಗಳು ವಿಲಾಸಿ ಪ್ರವೃತ್ತಿಯ ಮನುಷ್ಯರಿದ್ದಿಲ್ಲ· ವಾಲ್ಮೀಕಿ ಮತ್ತು ವ್ಯಾಸರು ಇಬ್ಬರೂ ತಪಸ್ವಿಗಳಿದ್ದರು. ಸೂರದಾಸರೂ ತುಲಸೀದಾಸರೂ ವಿಲಾಸದ ಉಪಾಸಕರಿದ್ದಿಲ್ಲ. ಕಬೀರದಾಸರೂ ತಪಸ್ವಿಯೇ ಆಗಿದ್ದರು. ನಮ್ಮ ಸಾಹಿತ್ಯವು ಇಂದು ಉನ್ನತವಾಗಿಲ್ಲ ಇದಕ್ಕೆ ಕಾರಣ-ವೇನು ? ನಾವು ಸಾಹಿತ್ಯದ ನಿರ್ಮಾಣಕ್ಕಾಗಿ ಸಾಕಷ್ಟು ಸಿದ್ಧತೆಯನ್ನು ಮಾಡಿಲ್ಲವೆಂಬದೇ ಇದಕ್ಕೇ ಕಾರಣ. ಒಂದೆರಡು ಔಷಧಗಳ ಪ್ರಮಾಣ ಗಳನ್ನು ಪಾಠಮಾಡಿ ವೈದ್ಯರಾಗಿ ಕುಳಿತುಬಿಟ್ಟೆವು. ಸಾಹಿತ್ಯದ ಉತ್ಥಾನ-ದಲ್ಲಿಯೇ ರಾಷ್ಟ್ರದ ಉತ್ಥಾನವಿದೆ ಮತ್ತು ನಾವು ನಮ್ಮಲ್ಲಿ ನಿಜವಾದ ಸಾಹಿತ್ಯಸೇವಕರು ಹುಟ್ಟಲಿ, ಅವರು ನಿಜವಾದ ತಪಸ್ವಿಗಳೂ ನಿಜವಾದ ಆತ್ಮಜ್ಞಾನಿಗಳೂ ಆಗಲಿ ಎಂದು ಪರಮಾತ್ಮನಲ್ಲಿ ಬೇಡುತ್ತೇವೆ.

# ರಾಷ್ಟ್ರಭಾಷೆ*



ಪ್ರಿಯ ಮಿತ್ರರೆ,

ತಾವು ನನಗಿತ್ತ ಈ ಸನ್ಮಾನಕ್ಕಾಗಿ ನಾನು ತಮಗೆ ನೂರು ನಾಲಿಗೆಗಳಿಂದ ಧನ್ಯವಾದಗಳನ್ನು ಅರ್ಪಿಸಬಯಸುವೆ; ಏಕೆಂದರೆ ನಾನು ಯಾವುದಕ್ಕೆ ಯೋಗ್ಯನಿದ್ದಿಲ್ಲವೊ ಅದನ್ನು ನೀವು ನನಗೆ ಕೊಟ್ಟಿದ್ದೀರಿ. ನಾನು ಹಿಂದೀ ಸಾಹಿತ್ಯವನ್ನು ಓದಿಲ್ಲ, ಅದರ ವಿಕಾಸದ ಇತಿಹಾಸವನ್ನೂ ನಾನರಿಯೆ. ನೀವು ಆಮಂತ್ರಿಸಿದಿರಿ, ನಾನು ಬಂದೆ. ನಾನು ಮನಸ್ಸಿಗೆ ತೋಚಿದಂತೆ ಹೇಳುವೆನು. ಅದನ್ನು ಕೇಳಿರಿ, ಪ್ರಶಂಸಿಸಿರಿ, ಅದರಲ್ಲಿ ಇಲ್ಲದ ಅರ್ಥವನ್ನು ಹುಟ್ಟಿಸಿಕೊಳ್ಳಿರಿ, ಅಧ್ಯಾತ್ಮದ ಮತ್ತು ಸಾಹಿತ್ಯದ ತತ್ವವನ್ನು ಹುಡುಕಿಕೊಳ್ಳಿರಿ. 'ಹುಡುಕಿದವನಿಗೆ ಸಿಗುವುದು, ಆಳವಾಗಿ ನೋಡಿರಿ.'

ತಮ್ಮ ಸಭೆಯು ೧೫-೧೬ ವರುಷಗಳಲ್ಲಿ ಮಾಡಿದ ಅದ್ಭುತ ಕಾರ್ಯಕ್ಕಾಗಿ ತಮಗೆ ಅಭಿನಂದನೆಗಳು. ಸರಕಾರದ ಸಹಾಯಕ್ಕಾಗಿ ಅದರ ಮುಖ ನೋಡದೆ ಕಾರ್ಯ ಮಾಡಿದ್ದೀರಿ. ತಮ್ಮಲ್ಲಿ ಉತ್ಸಾಹದ ಬುಗ್ಗೆ ಇದೆ. ಇಲ್ಲಿ ಕಾಣುವಷ್ಟು ಸಂಗಠನೆ ಮತ್ತು ಇಷ್ಟು ಒಳ್ಳೆಯ ಕಾರ್ಯಕರ್ತರು ಸಿಗುವದು ಅಪರೂಪ. ಇಂಗ್ಲೀಷ ಭಾಷೆಯ, ಇಂಗ್ಲಿಷ ರಾಜ್ಯದ, ಇಂಗ್ಲಿಷ ನಡೆನುಡಿಯ ತಳಹದಿಯನ್ನು ಗಟ್ಟಿಮಾಡಿದ ಮಿದುಳುಗಳೇ ರಾಷ್ಟ್ರಭಾಷೆಯ ಉದ್ಧಾರಕ್ಕಾಗಿ ಸೊಂಟಕಟ್ಟಿಕೊಂಡು ಕಾರ್ಯಮಾಡುತ್ತಿರುವುದೂ ರಾಷ್ಟ್ರೀಯತ್ವದ ಅಲೆಗಳನ್ನು ಎಬ್ಬಿಸುತ್ತಿರುವುದೂ ಕಾಣಿಸುತ್ತಿದೆ. ತಮ್ಮಲ್ಲಿ ಅನೇಕರು ಹಿಂದೀಯಲ್ಲಿ ಅಸ್ಖಲಿತವಾಗಿ ಮಾತಾಡುವುದನ್ನೂ ಲೇಖ ಬರೆಯುವುದನ್ನೂ ನಮ್ಮವರು ನೋಡಿ ಬೆರಳು ಕಚ್ಚುತ್ತಾರೆ.

* ದಕ್ಷಿಣ ಭಾರತದ ಹಿಂದೀ ಪ್ರಚಾರ ಸಭೆಯ ಚತುರ್ಥ ಪದವೀದಾನ ಸಮಾರಂಭದಲ್ಲಿ ೨೮-೧೨-೧೯೩೪ರಂದು ಮಾಡಿದ ದೀಕ್ಷಾಂತ ಭಾಷಣದ ಭಾವಾನುವಾದ.

ಆದಾಗ್ಗೂ ಈ ಪ್ರಾಂತವು ಇನ್ನೂ ಇಂಗ್ಲಿಷ ಭಾಷೆಯ ಪ್ರಭುತ್ವದಿಂದ ಮುಕ್ತವಾಗಲು ಬಯಸುತ್ತಿಲ್ಲ. ರಾಷ್ಟ್ರಭಾಷೆಯ ಪ್ರೇಮವು ಗಂಟಲದ ವರೆಗೆ ಮಾತ್ರ ಬಂದಿದೆ. ಈ ಪ್ರೇಮವು ಹೃದಯದಲ್ಲಿ ಇಳಿದರೆ ಅದರ ವೇಗವು ಎಷ್ಟು ಹೆಚ್ಚಾದೀತೆಂಬುದನ್ನು ಊಹಿಸುವದು ಕಠಿನ. ನಮ್ಮ ದಾಸ್ಯದ ಅತ್ಯಂತ ಲಜ್ಜಾಸ್ಪದ, ವ್ಯಾಪಕ ಮತ್ತು ಕಠೋರ ಅಂಗವೆಂದರೆ ಇಂಗ್ಲೀಷ ಭಾಷೆಯ ಒಡೆತನ. ಅದರ ನಗ್ನ ರೂಪವು ಇಲ್ಲಿ ಕಂಡಷ್ಟು ಇನ್ನೆಲ್ಲಿಯೂ ಕಾಣುವುದಿಲ್ಲ. ಸಭ್ಯ ಜೀವನದ ಎದೆಯ ಮೇಲೆ ಅದು ಹೆಸರು-ಕಾಳುಗಳನ್ನು ಅರೆಯುವದು ಕಾಣುತ್ತದೆ. ಈ ಇಂಗ್ಲಿಷ ಭಾಷೆಯ ಒಡೆತನ-ವನ್ನು ಕಿತ್ತೊಗೆದರೆ ಪರಾಧೀನತೆಯ ಅರ್ಧ ಹೊರೆ ಇಳಿದಂತೆ. ಇಂಗ್ಲೀಷು ನಮ್ಮ ಪರಾಧೀನತೆಯ ಬೇಡಿ. ಅದು ನಮ್ಮ ಮನಸ್ಸನ್ನು ಮತ್ತು ಬುದ್ಧಿಯನ್ನು ಬಿಗಿದುಬಿಟ್ಟಿದೆ. ನಮ್ಮ ಸುಶಿಕ್ಷಿತ ಸಮಾಜವು ಈ ಬೇಡಿಯು ತನ್ನ ಕಂಠದ ಚಿನ್ನದ ಹಾರವೆಂದು ತಿಳಿಯುತ್ತಿದೆ. ಇದರಿಂದಾಗಿ ಹೊಟ್ಟೆಗೆ ಒಂದೆರಡು ರೊಟ್ಟಿ, ಒಂದಿಷ್ಟು ಸನ್ಮಾನ, ಒಂದಿಷ್ಟು ಅಧಿಕಾರ ಸಿಕ್ಕರೆ ಕೇಳುವುದೇನು! ಅಧಿಕಾರದ ಇಚ್ಛೆ ಪ್ರಾಣಿಮಾತ್ರಕ್ಕೆ ಇರುತ್ತದೆ. ಇಂಗ್ಲೀಷು ಇದರ ಬಾಗಿಲವನ್ನು ತೆಗೆದುಬಿಟ್ಟಿತು, ಶಿಕ್ಷಿತ ಸಮುದಾಯವು ಹಕ್ಕಿಯ ಹಿಂಡಿನಂತೆ ಬಾಗಿಲೊಳಕ್ಕೆ ಹೋಗಿ ಬಿಟ್ಟಿತು, ಅಲ್ಲಿ ಹರಡಿದ ಕಾಳುಗಳನ್ನು ತಿನ್ನತೊಡಗಿತು. ಅದು ಎಷ್ಟು ಚಡಪಡಿಸಿದರೂ ಬಯಸಿದರೂ ಅದಕ್ಕೆ ತೋಟದ ಗಾಳಿಯು ದೊರೆಯದಾಯಿತು! ಅದರ ರೆಕ್ಕೆಗಳು ನಿರ್ಜೀವವಾದವು, ಅವುಗಳಲ್ಲಿ ಹಾರುವ ಶಕ್ತಿ ಇಲ್ಲದಾಯಿತು, ಹೊರಗೆ ಈ ಕಾಳುಗಳು ಸಿಗುವವೋ ಇಲ್ಲವೋ ಎಂಬ ವಿಶ್ವಾಸವೂ ಇಲ್ಲದಾಯಿತು.

ಆದರೆ ಮಿತ್ರರೇ, ವಿದೇಶೀ ಭಾಷೆಯನ್ನು ಕಲಿತು ನಮ್ಮ ಬಡ ಸಹೋದರರಿಗೆ ದರ್ಪತೋರಿಸುವ ದಿನಗಳು ಭರದಿಂದ ಹೋಗತೊಡಗಿವೆ; ಪ್ರತಿಭೆಯ ಮತ್ತು ಬುದ್ಧಿಬಲದ ದುರುಪಯೋಗ ಮಾಡಿಕೊಂಡು ಶ್ರೀಮಂತಶಾಹಿಯನ್ನು ಸ್ಥಾಪಿಸಿಕೊಂಡಿದ್ದೆವು, ಜನತೆಯಿಂದ ದೂರಾಗಿದ್ದೆವು. ಆ ಸ್ಥಿತಿಯು ಬದಲಾಗುತ್ತಿದೆ. ಬುದ್ಧಿ–ಬಲವು ದೇವರ ಕೊಡುಗೆ. ಪ್ರಜರನ್ನು ಒದೆಯುವುದು, ಅವರ ರಕ್ತ ಕುಡಿಯುವದು ಅದರ ಧರ್ಮವಲ್ಲ ಪ್ರಜರ ಸೇವೆ ಮಾಡುವುದು ಬುದ್ಧಿ–ಬಲದ ಧರ್ಮ. ಇಂದು ಸುಶಿಕ್ಷಿತ ಸಮಾಜದ

ಮೇಲಿಂದ ಜನತೆಯ ವಿಶ್ವಾಸವು ಹಾರಿ ಹೋಗಿದೆ. ಜನತೆಯು ಶಿಕ್ಷಿತ ಸಮುದಾಯವು ವಿದೇಶಿಯೆಂದು ತಿಳಿಯುತ್ತದೆ. ಏಕೆ ? ಅದರ ಆಚಾರ–ವಿಚಾರ, ಮಾತುಕತೆ, ವೇಷ-ಭೂಷ, ಇರುವಿಕೆ ಮುಂತಾದವು ಜನತೆಯಕ್ಕಿಂತ ಬೇರೆಯಾಗಿವೆ. ಏತರಿಂದ ? ನಾವು ಇಂಗ್ಲೀಷ ಭಾಷೆಯ ಗುಲಾಮರಾಗಿರುವುದರಿಂದ. ಇಂಗ್ಲೀಷು ಇಲ್ಲದೆ ಕೆಲಸವೇ ನಡೆಯದೋ ಏನೋ ಎಂಬಂತಾಗಿದೆ. ಆದರೆ ಇಷ್ಟು ದಿನಗಳ ಅನುಭವದಿಂದ ನಮಗೆ ಇಷ್ಟಾದರೂ ಗೊತ್ತಾಗಬೇಕಾಗಿತ್ತು—ಈ ಡೋಣಿಯಲ್ಲಿ ಕುಳಿತು ನಾವು ದಡವನ್ನು ಕಾಣಲಾರೆಂಬುದು. ಹೋದ ವರುಷ ಇಂಟರ—ಯುನಿವ್ಹರ್ಸಿಟಿ ಕಮಿಶನ್ನಿನ ಸಭೆಯಲ್ಲಿ ಶಿಕ್ಷಣದ ಮಾಧ್ಯಮವು ಮಾತೃಭಾಷೆಯಾಗಬೇಕೆಂಬ ಗೊತ್ತುವಳಿಯು ಬಂದಿತ್ತು. ಬಹು ಜನರು ಅದನ್ನು ವಿರೋಧಿಸಿದರು. ಏಕೆ ? ಏಕೆಂದರೆ ನಮ್ಮ ಮಕ್ಕಳು ಇಂಗ್ಲಿಷ ಬರೆಹ, ಓದು ಮತ್ತು ಮಾತಿನಲ್ಲಿ ಹಿಂದೆ ಉಳಿಯುವರು; ಒಳ್ಳೆಯ ಇಂಗ್ಲೀಷನ್ನು ಮಾತನಾಡಲು ಬರೆಯಲು ಸಮರ್ಥರಾಗರು ಎಂಬ ವಿಚಾರ ಅವರಲ್ಲಿತ್ತು. ಆದರೆ ನೂರಾರು ವರುಷಗಳಿಂದ ಇಂಗ್ಲಿಷನ್ನು ತಪಸ್ಸು ಮಾಡಿ ಕಲಿತಾಗ್ಯೂ ಭಾರತವು ಇಂಗ್ಲಂಡಿನಲ್ಲಿ ಮೂರನೆಯ ವರ್ಗದ ಒಬ್ಬ ಇಂಗ್ಲಿಷ ಲೇಖಕನ ಪುಸ್ತಕಕ್ಕೆ ದೊರೆಯುವಷ್ಟು ಮನ್ನಣೆಯಾದರೂ ದೊರೆಯುವಂತಹ ಒಂದು ಇಂಗ್ಲಿಷ ಗ್ರಂಥವನ್ನು ಹೊರಗೆಡಹಲಿಲ್ಲ. ಪಂಡಿತ ಮದನಮೋಹನ ಮಾಲವೀಯರೊ ತೇಜಬಹಾದ್ದೂರ ಸಪ್ರೂ ಅವರೊ, ಸರಿಯಾಗಿ ನೆನಪಿಲ್ಲ, ತಾವು ಐವತ್ತು ವರ್ಷ ಕಷ್ಟದಿಂದ ಅಭ್ಯಾಸ ಮಾಡಿದ್ದರೂ ಇಂಗ್ಲಿಷನ್ನು ಮಾತನಾಡುವಾಗ ಎಲ್ಲಿ ತಪ್ಪಾಯಿತೋ ಎಂದು ಸಂಶಯ ಪಡುತ್ತಿದ್ದರಂತೆ. ಕಣ್ಣು ಕೆಡಸಿಕೊಂಡು, ರಕ್ತ ಸುಟ್ಟುಕೊಂಡು ಇಂಗ್ಲಿಷ ಅಭ್ಯಾಸ ಮಾಡಿದ್ದರೂ ಯುನಿವರ್ಸಿಟಿಯ ಪದವೀಧರರೂ ತಪ್ಪು ಭಾಷೆ ಬರೆಯುತ್ತಾರೆ. ವಿಚಾರಗಳನ್ನು ಸರಿಯಾಗಿ ಇಂಗ್ಲಿಷದಲ್ಲಿ ವ್ಯಕ್ತಮಾಡಲಾರರು. ಆದಾಗೂ ಇಂಗ್ಲಿಷು ಶಿಕ್ಷಣದ ಮಾಧ್ಯಮವಾಗಬೇಕೆಂದು ನಮ್ಮ ವಿದ್ವಾಂಸರ ಅಭಿಪ್ರಾಯ. ಜಪಾನ, ಚೀನ, ಇರಾಣ ಈ ರಾಷ್ಟ್ರಗಳಲ್ಲಿ ಶಿಕ್ಷಣದ ಮಾಧ್ಯಮವು ಇಂಗ್ಲೀಷು ಇಲ್ಲ. ಆದಾಗ್ಯೂ ಅವರು ಸಭ್ಯತೆಯಲ್ಲಿ ನಮಗಿಂತ ಎಷ್ಟೋ ಯೋಜನ ಮುಂದೆ ಹೋಗಿದ್ದಾರೆ. ಆದರೆ ಇಂಗ್ಲಿಷದ ಮಾಧ್ಯಮವನ್ನು ಬಿಟ್ಟರೆ ನಮ್ಮ

ಡೋಣಿಯೇ ಮುಳುಗಿ ಹೋಗುವುದು. ನಮ್ಮ ಮಾರವಾಡಿ ಬಂಧುಗಳು ವ್ಯಾಪಾರಕ್ಕಾಗಿ ಎಲ್ಲಿಗೂ ಹೋಗಲಿ, ವ್ಯಾಪಾರದಲ್ಲಿ ರಾಷ್ಟ್ರೀಯತ್ವವನ್ನು ಕಾಪಾಡಿದ್ದಾರೆ.

ಮಿತ್ರರೇ, ಬಹುಶಃ ನಾನು ವಿಷಯದಿಂದ ದೂರ ಹೋದೆನೆಂದು ತೋರುತ್ತದೆ. ನಾನು ಹೇಳಬೇಕಾದುದರ ಆಶಯವಿಷ್ಟೇ—ನಮ್ಮ ಎದುರಿಗೆ ಮಹಾನ್ ಕಾರ್ಯವಿದೆಯೆಂಬುದು ನಮಗೆ ಗೊತ್ತಾಗಬೇಕು. ಇಂಗ್ಲಿಷ ಭಾಷೆಯ ಆಳಿಕೆಯನ್ನು ಕಿತ್ತೊಗೆದು, ರಾಷ್ಟ್ರಭಾಷೆಯನ್ನು ಮಾಡಿಕೊಂಡ ದಿನವೇ ಸ್ವರಾಜ್ಯದ ದರ್ಶನವಾಗುವುದೆಂದು ತಿಳಿಯಿರಿ ಯಾವ ರಾಷ್ಟ್ರವೂ ವಿದೇಶೀ ಭಾಷೆಯ ಬಲದಿಂದ ಸ್ವಾತಂತ್ರ್ಯವನ್ನು ಗಳಿಸಿದ ಉದಾಹರಣೆಯು ನೆನಪಿಗೆ ಬರುವದಿಲ್ಲ. ರಾಷ್ಟ್ರದ ತಳಹದಿ ರಾಷ್ಟ್ರಭಾಷೆ ನದಿ ಗುಡ್ಡ, ಬೆಟ್ಟ ಮತ್ತು ಸಮುದ್ರಗಳು ರಾಷ್ಟ್ರವನ್ನು ಕಟ್ಟುತ್ತವೆಯೇ? ಚಿರಕಾಲದ ವರೆಗೆ ರಾಷ್ಟ್ರವನ್ನು ಒಂದು ಸೂತ್ರದಲ್ಲಿ ಕಟ್ಟುವುದು ಭಾಷೆಯ ಬಂಧನವೇ. ಭಾಷೆಯು ರಾಷ್ಟ್ರದ ಅಂಗಗಳನ್ನು ಬೇರ್ಪಡಿಸಗೊಡುವುದಿಲ್ಲ. ಇಂಗ್ಲಿಷರು ಬಂದಾಗ ರಾಷ್ಟ್ರಭಾವನೆಯು ಲೋಪವಾಗಿತ್ತು. ತಾತ್ಪರ್ಯವೆಂದರೆ, ಭಾರತ ದಲ್ಲಿ ರಾಜಕೀಯ ಚೈತನ್ಯವಿದ್ದಿಲ್ಲ. ಇಂಗ್ಲಿಷರ ರಾಜ್ಯವು ಬಂದು ನಮ್ಮನ್ನು ಒಂದು ರಾಷ್ಟ್ರವನ್ನಾಗಿ ಮಾಡಿತು. ಇಂಗ್ಲಿಷ ರಾಜ್ಯವು ಹೋದ ಬಳಿಕ ನಿಮ್ಮ ರಾಷ್ಟ್ರವು ಎಲ್ಲಿ ಉಳಿಯುವದು? ಒಂದೊಂದು ಪ್ರಾಂತವೂ ಒಂದೊಂದು ರಾಜ್ಯವಾಗುವ ಸಂಭವವಿಲ್ಲವೇ? ಪುನಃ ಅದೇ ವಿಚ್ಛೇದವು ಸುರುವಾಗದೇ? ನಾವು ಒಂದು ರಾಷ್ಟ್ರವಾಗಿ ಇರಬೇಕಾಗಿದ್ದರೆ ರಾಷ್ಟ್ರ ಭಾಷೆಯ ಆಶ್ರಯವನ್ನು ಹೊಂದಬೇಕಾಗುವದು ಮತ್ತು ಆ ರಾಷ್ಟ್ರ ಭಾಷೆಯ ಚಿಲಕತ್ತಿನಿಂದ ನಾವು ನಮ್ಮ ರಾಷ್ಟ್ರದ ಸಂರಕ್ಷಣೆಯನ್ನು ಮಾಡ ಬಲ್ಲೆವು. ನೀವು ಅದೇ ರಾಷ್ಟ್ರಭಾಷೆಯ ಭಿಕ್ಷುಗಳು. ಈ ಸಂಬಂಧದಿಂದ ನೀವು ರಾಷ್ಟ್ರನಿರ್ಮಾಣವನ್ನು ಮಾಡುತ್ತಿದ್ದೀರಿ. ರಾಷ್ಟ್ರಭಾಷೆಯ ಮುಖಾಂತರ ಬಂಧುತ್ವದ ಸೀಮೆಯನ್ನು ವಿಸ್ತೃತಗೊಳಿಸುತ್ತಿದ್ದೀರಿ. ಈ ಕಾರ್ಯವು ಪವಿತ್ರವಾದುದು, ಗೌರವಯುತವಾದುದು.

ರಾಷ್ಟ್ರಭಾಷೆಯ ವಿಷಯವಾಗಿ ಒಂದೆರಡು ಮಾತುಗಳನ್ನು ಹೇಳು-ವುದು ಅವಶ್ಯವಿದೆ. ಇದರ ಬಗೆಗೆ ಅನೇಕರು ಅನೇಕ ರೀತಿಯಾಗಿ

ಹೇಳಿದ್ದಾರೆ. ರಾಷ್ಟ್ರಭಾಷೆಗೆ ಹಿಂದೀ ಎನ್ನಿರಿ, ಹಿಂದುಸ್ತಾನೀ ಎನ್ನಿರಿ, ಅಥವಾ ಉರ್ದೂ ಎನ್ನಿರಿ. ಆದರೆ ವಸ್ತುವು ಒಂದೇ. ಹೆಸರಿನ ಬಗ್ಗೆ ನಮ್ಮ ವಾದವಿಲ್ಲ. ದೇವರು ಒಬ್ಬನೇ. ದೇವರೆಂದರೂ ಅವನೇ, ಖುದಾ ಎಂದರೂ ಅವನೇ ರಾಷ್ಟ್ರಭಾಷೆಯಲ್ಲಿ ಎರಡಕ್ಕೂ—ಇಬ್ಬರಿಗೂ ಸಮಾನ ರೂಪದಲ್ಲಿ ಸನ್ಮಾನಯುಕ್ತ ಸ್ಥಾನವು ದೊರೆಯಬೇಕು. ಒಂದು ವೇಳೆ ಸಾಕಷ್ಟು ಜನರು ದೇವರಿಗೆ 'ಗಾಡ್' (God) ಎಂದು ಅನ್ನಬೇಕೆಂದು ಹೇಳಿದರೆ ಅದನ್ನೂ ರಾಷ್ಟ್ರಭಾಷೆಯು ಸ್ವಾಗತಿಸುವದು. ಜೀವಿತ ಭಾಷೆಯು ಜೀವಿತ ದೇಹದಂತೆ ಸಿದ್ಧವಾಗುತ್ತಿರುತ್ತದೆ. 'ಶುದ್ಧ ಹಿಂದೀ' ಎಂಬುದು ನಿರರ್ಥಕ ಶಬ್ದ ಭಾರತವು ಶುದ್ಧ ಹಿಂದೂ ಆಗಿದ್ದರೆ ಅದರ ಭಾಷೆಯೂ ಶುದ್ಧ ಹಿಂದೀ ಆಗುತ್ತಿತ್ತು. ಮುಸಲ್ಮಾನರು, ಕ್ರಿಶ್ಚಿಯನ್ನರು, ಪಾರಸಿಗಳು ಮುಂತಾದವರು ಇರುವ ತನಕ ನಮ್ಮ ಭಾಷೆಯೂ ವ್ಯಾಪಕವಿರುವುದು ಒಂದು ವೇಳೆ ಹಿಂದೀಯು ಪ್ರಾಂತೀಯ ಭಾಷೆಯಾಗಿ, ಕೇವಲ ಹಿಂದೂಗಳ ಭಾಷೆಯಾಗಿ ಇರಲು ಅಪೇಕ್ಷಿಸಿದರೆ ಅದನ್ನು ಶುದ್ಧಗೊಳಿಸಬಹುದು. ಅದರ ಅಂಗಗಳನ್ನು ಭಂಗಗೊಳಿಸಿ ಪೂರ್ಣ ಪರಿವರ್ತನ ಮಾಡಬೇಕಾಗಬಹುದು. ಆಗ ಅದು ಪ್ರೌಢನಿಂದ ಶಿಶುವಾಗುವದು, ಇದು ಅಸಂಭವವೂ ಇದೆ, ಹಾಸ್ಯಾಸ್ಪದವೂ ಇದೆ ನಾವು ನೋಡು ನೋಡುತ್ತಿರುವಾಗಲೇ ಅನೇಕ ವಿದೇಶೀ ಶಬ್ದಗಳು ಭಾಷೆಯಲ್ಲಿ ಬಂದವು, ಅವನ್ನು ನಾವು ತಡೆಯಲಾರೆವು. ಅವನ್ನು ತಡೆಯುವ ಪ್ರಯತ್ನವೂ ವ್ಯರ್ಥವೇ ಸರಿ. ವಿದೇಶೀ ಶಬ್ದಗಳನ್ನು ಹೀಗೆ ತಡೆಯು-ವದು ಭಾಷೆಯ ವಿಕಾಸದಲ್ಲಿ ಅಡ್ಡಿಯಾಗುವುದು. ಗಿಡಗಳು ನೇರವಾಗಿ ಬೆಳಯುವುದಕ್ಕೆ, ಸುಂದರವಾಗುವುದಕ್ಕೆ ಒಂದು ಕಟ್ಟಿಗೆಯ ಆಧಾರವನ್ನು ಕೊಡಲಾಗುತ್ತದೆ. ಕುರುಚಿಯನ್ನು ಹುಟ್ಟಿಸುವಂಥ ಶಬ್ದಗಳ ಪ್ರಯೋಗ-ವನ್ನು ವಿದ್ವಾಂಸರು ಮಾಡದಂತೆ ನಿಯಂತ್ರಿಸಬಹುದು, ಆದರೆ ಈ ನಿಯಂತ್ರಣವು ಪುಸ್ತಕಕ್ಕೆ ಮಾತ್ರ ಅನ್ವಯಿಸುವುದು. ಮಾತನಾಡುವ ಭಾಷೆಯ ಮೇಲೆ ನಿಯಂತ್ರಣವಿಡುವುದು ಕಷ್ಟವೇ ಸರಿ. ವಿದ್ವಾಂಸರ ಮಿದುಳೂ ಒಂದು ವಿಚಿತ್ರವಾದ ವಸ್ತು. ಅವರು ಎಷ್ಟು ತಿಂಗಳುಗಳಿಂದ ವ್ಯವಹಾರದಲ್ಲಿರುವ ವಿದೇಶೀ ಶಬ್ದಗಳನ್ನು ಅಂಗೀಕರಿಸಬೇಕೆಂಬುದನ್ನು ಕುರಿತು ಚರ್ಚೆ ಮಾಡತೊಡಗಿದ್ದಾರೆ. ಹೀಗೆ ಮಾಡುವದರಿಂದ ಭಾಷಾ

ಸುಂದರಿಯನ್ನು ಮುಚ್ಚಿದ ಕೋಣೆಯೊಳಗಿಟ್ಟು ಆಕೆಯ ಸತೀತ್ವವನ್ನು ರಕ್ಷಿಸಿದಂತಾಗುತ್ತದೆ. ಆದರೆ ಅದಕ್ಕಾಗಿ ಆಕೆಯ ಜೀವನದ ಬೆಲೆಯನ್ನೇ ಕೊಡಬೇಕಾಗುತ್ತದೆ. ಭಾಷಾಸುಂದರಿಯ ಸತೀತ್ವವೂ ಸ್ವಾಸ್ಥ್ಯವೂ ಚೆನ್ನಾಗಿ ಉಳಿಯುವಂತೆ ಆಕೆಯ ಆತ್ಮವನ್ನು ಬಲಿಷ್ಠ ಮಾಡಿರಿ.

ಅತ್ಯಂತ ಹೆಚ್ಚು ಜನರಿಗೆ ನಮ್ಮ ಭಾಷೆಯು ತಿಳಿಯುವಂತೆ ಆಗ-ಬೇಕೆಂಬುದೇ ಆದರ್ಶವಾಗಬೇಕು. ಈ ಆದರ್ಶವನ್ನು ಎದುರಿಗೆ ಇಟ್ಟು-ಕೊಂಡರೆ ನಾವು ಬರೆಯುವಾಗ ಶಬ್ದ-ಚಾತುರ್ಯದ ಮೋಹದಲ್ಲಿ ಬೀಳುವುದಿಲ್ಲ. ಫಾರಸೀ ಶಬ್ದಗಳ ಮಿಶ್ರಣದಿಂದ ಭಾಷೆಯು ಕಠಿಣವಾಗುವುದೆಂಬ ತಿಳಿವಳಿ-ಕೆಯು ತಪ್ಪಾದುದು. ಪಂಡಿತರಿಗೂ ಕಬ್ಬಿಣದ ಕಡಲೆಯಂತಾಗುವ ಹಿಂದೀ ಶಬ್ದಗಳನ್ನೇ ಉಪಯೋಗಿಸುವುದರಿಂದಲೂ ಪ್ರಯೋಜನವಿಲ್ಲ. ಆರಬಿಯದೇ ಆಗಲಿ, ತುರ್ಕಿಯದೇ ಆಗಲಿ, ಫಾರಸಿಯದೇ ಆಗಲಿ, ಬಳಕೆಯಲ್ಲಿ ಬಂದ ಶಬ್ದವು ಹಗುರಾಗಿಯೇ ಇರುತ್ತದೆ ಎಂಬುದನ್ನು ಕುರಿತು ಚರ್ಚೆ ಅನವಶ್ಯಕ. ಹಿಂದೀ ಮತ್ತು ಉರ್ದೂಭಾಷೆಗಳ ನಡುವೆ ಇಷ್ಟೇಕೆ ಸವತಿ ಮತ್ಸರ? ಒಂದು ಸಮುದಾಯಕ್ಕೆ 'ಉರ್ದೂ' ಹೆಸರು ಪ್ರಿಯವಾಗಿದ್ದರೆ ಇರಲಿ, ಇನ್ನೊಂದು ಸಮುದಾಯಕ್ಕೆ 'ಹಿಂದೀ' ಹೆಸರು ಪ್ರಿಯವಾಗಿದ್ದರೆ ಅದೂ ಇರಲಿ, ಅದಕ್ಕಾಗಿ ಜಗಳ ಬೇಡ. ಒಂದು ವಸ್ತುವಿಗೆ ಎರಡು ಹೆಸರು ಕೊಟ್ಟು ಜಗಳಾಡುವುದೇಕೆ? ಉರ್ದೂದಲ್ಲಿ ಆರಬೀ ಶಬ್ದಗಳನ್ನು ಹೆಚ್ಚು ತುಂಬಿದರೆ ಸಾಮಾನ್ಯ ಜನತೆಗೆ ಅದು ತಿಳಿಯುವುದಿಲ್ಲ, ಅದರಂತೆಯೇ ಹಿಂದೀಯಲ್ಲಿ ಸಂಸ್ಕೃತ ಶಬ್ದಗಳನ್ನು ಅತಿಯಾಗಿ ತುಂಬಿದರೆ ಅದೂ ಜನತೆಗೆ ತಿಳಿಯುವುದಿಲ್ಲ. ಹಿಂದೀಯ ಸೇವೆಯನ್ನು ಮುಸಲ್ಮಾನರೂ ಮಾಡಿದ್ದಾರೆ, ಉರ್ದೂದ ಸೇವೆಯನ್ನು ಹಿಂದೂಗಳೂ ಮಾಡಿದ್ದಾರೆ. ಹಿಂದೀಯ ಸಾಹಿತ್ಯಿಕ ಬೀಜವನ್ನು ಬಿತ್ತಿದ ಪ್ರಥಮ ಕವಿ ಅಮೀರ ಖುಸರೋ ಎಂಬವನು ಎಂಬುದು ನಿಮಗೆ ಗೊತ್ತಿದೆಯೇನು? ಅತ್ಯಂತ ಕಡಮೆಯೆಂದರೆ ಐದುನೂರು ಮುಸಲ್ಮಾನ ಕವಿಗಳು ತಮ್ಮ ಕವನಗಳಿಂದ ಹಿಂದೀಯ ಸಿರಿವಂತಿಕೆಯನ್ನು ಹೆಚ್ಚಿಸಿದ್ದಾರೆಂಬುದು ನಿಮಗೆ ಗೊತ್ತಿದೆಯೇನು? ಅಕಬರ, ಜಹಾಂಗೀರ ಮತ್ತು ಔರಂಗಜೇಬ ಈ ಮೂವರೂ ಬಾದಶಾಹರಿಗೆ ಹಿಂದೀ ಕವಿತೆಯ

ಮೇಲೆ ಪ್ರೇಮವಿತ್ತು. ಔರಂಗಜೇಬನೇ ಮಾವಿನಹಣ್ಣುಗಳಿಗೆ 'ರಸನಾ-ವಿಲಾಸ' ಮತ್ತು 'ಸುಧಾ–ರಸ' ಎಂದು ಹೆಸರಿಟ್ಟಿದ್ದನು. ಈಗಲೂ ಅನೇಕ ಮುಸಲ್ಮಾನ ಕವಿಗಳು ಹಿಂದೀ ಬರೆಯುತ್ತಾರೆ. ಹಿಂದೀಯಲ್ಲಿ ಸಾವಿರಾರು ಶಬ್ದಗಳು, ಸಾವಿರಾರು ಧಾತುಗಳು ಅರಬ್ಬಿ ಮತ್ತು ಫಾರಸಿಯಿಂದ ಬಂದಿವೆ ಮತ್ತು ಅವು ಮಾವನ ಮನೆಗೆ ಬಂದು ಮನೆಯ ದೇವಿಯಾಗಿವೆಯೆಂಬುದು ನಿಮಗೆ ಗೊತ್ತಿದೆಯೇನು? ಇದು ಗೊತ್ತಿದ್ದೂ ನೀವು ಹಿಂದೀಯನ್ನು ಉರ್ದೂದಿಂದ ಬೇರೆ ಎಂದು ತಿಳಿಯುತ್ತಿದ್ದರೆ ನೀವು ದೇಶದೊಡನೆಯೂ ನಿಮ್ಮೊಡನೆಯೂ ಅನ್ಯಾಯ ಬಗೆದಂತೆಯೆ ಸರಿ. ಒಂದು ಮೋಜಿನ ಸಂಗತಿ-ಯೆಂದರೆ, 'ಹಿಂದೀ' ಎಂಬುದು ಮುಸಲ್ಮಾನರು ಕೊಟ್ಟ ಹೆಸರು ಮತ್ತು ಸುಮಾರು ಐವತ್ತು ವರುಷಗಳ ಹಿಂದಿನ ವರೆಗೆ ಇಂದು ಯಾವುದಕ್ಕೆ ಉರ್ದೂ ಎನ್ನುತ್ತಿದ್ದಾರೆಯೋ ಅದಕ್ಕೆ ಮುಸಲ್ಮಾನರು ಹಿಂದೀ ಎನ್ನುತ್ತಿದ್ದರು. 'ಹಿಂದೀ'ಯು ಒಂದು ಸ್ವಾಭಾವಿಕ ಹೆಸರು ಎಂಬುದು ನಿಮಗೆ ಗೊತ್ತಿಲ್ಲವೇ? ಇಂಗ್ಲಂಡದವರು ಇಂಗ್ಲಿಶ್, ಫ್ರಾನ್ಸದವರು ಫ್ರೆಂಚ್, ಜರ್ಮನಿಯವರು ಜರ್ಮನ್, ತುರ್ಕಸ್ತಾನದವರು ತುರ್ಕೀ ಮಾತಾಡುವಂತೆ ಹಿಂದುಸ್ತಾನ-ದವರು ಹಿಂದೀ ಏಕೆ ಮಾತಾಡಬಾರದು? ಉರ್ದೂ ಅಂತ್ಯಾನುಪ್ರಾಸದಲ್ಲಿ ಬರುವುದಿಲ್ಲ, ಪಲ್ಲವಿಯಲ್ಲಿಯೂ ಬರುವುದಿಲ್ಲ, ಛಂದಸ್ಸಿನಲ್ಲಿಯೂ ಬರುವುದಿಲ್ಲ, ಗೌರವ-ಭಾರತದಲ್ಲಿಯೂ ಬರುವುದಿಲ್ಲ. ಹಿಂದುಸ್ತಾನದ ಹೆಸರನ್ನು ಉರ್ದೂ ಸ್ತಾನವೆಂದು ಇಟ್ಟರೆ ಉರ್ದೂ ಎಂಬುದು ಬರಬಹುದೋ ಏನೋ. ಈ ಚರ್ಚೆಯೇನೇ ಇದ್ದರೂ ಎರಡೂ ಭಾಷೆಗಳಲ್ಲಿ ಒಂದು ಸಾಮಾನ್ಯ ಉಪ-ಯೋಗೀ ಶಬ್ದಕೋಶವು ಸಿದ್ಧವಾದರೆ ಜಗಳವು ಮುಗಿಯಬಹುದು. ನನ್ನ ಮಿತ್ರನಾದ ಶ್ರೀ. ರಾಮನರೇಶ ತ್ರಿಪಾಠಿಯವರು ಸ್ವಲ್ಪ ಮಟ್ಟಿಗೆ ಈ ಕೊರತೆಯನ್ನು ಹೋಗಲಾಡಿಸಿದ್ದಾರೆ.

ರಾಷ್ಟ್ರಭಾಷೆಯು ನಮ್ಮ ಕೊರತೆಗಳನ್ನು ಎಷ್ಟರ ಮಟ್ಟಿಗೆ ತುಂಬಿ ಕೊಡುವದೆಂಬುದು ಒಂದು ಪ್ರಶ್ನೆ ಇದೆ. ಕಥೆ, ಕಾದಂಬರಿ, ಯಾತ್ರಾ ವರ್ಣನೆ, ವೃತ್ತಪತ್ರಲೇಖ, ವಿಮರ್ಶೆಗಳು ಗೂಢವಾಗಿರದಿದ್ದರೆ ರಾಷ್ಟ್ರ-ಭಾಷೆಯನ್ನು ಅಧ್ಯಯನಮಾಡಿ ಬರೆಯಬಹುದು. ಆದರೆ ಸಾಹಿತ್ಯದಲ್ಲಿ ಇಷ್ಟೇ ವಿಷಯಗಳು ಇಲ್ಲ. ತತ್ತ್ವಜ್ಞಾನ ಮತ್ತು ವಿಜ್ಞಾನದ ಅನಂತ

ಶಾಖೆಗಳೂ ಇವೆ. ಅವುಗಳನ್ನೂ ರಾಷ್ಟ್ರ ಭಾಷೆಯಲ್ಲಿ ತರವುದಿದೆ. ಸಾಧಾರಣ ವಿಷಯಗಳನ್ನು ಸರಳವಾದ ಶಬ್ದಗಳಲ್ಲಿ ಬರೆಯಬಹುದು. ವಿವೇಚನಾತ್ಮಕ ವಿಷಯಗಳನ್ನು ಬರೆಯುವಾಗ, ಕಾದಂಬರಿಯಲ್ಲಿ ವಿಷಯವು ಮನೋವೈಜ್ಞಾನಿಕವಾದಾಗ ಸಂಸ್ಕೃತ ಅಥವಾ ಫಾರಸಿ-ಅರಬ್ಬಿ ಶಬ್ದಗಳಿಗೆ ಶರಣು ಹೋಗಬೇಕಾಗುವದು. ರಾಷ್ಟ್ರಭಾಷೆಯು ಪ್ರಪಂಚದ ಇತರ ಭಾಷೆಗಳಂತೆ ಸರ್ವಾಂಗ-ಪೂರ್ಣವಿಲ್ಲದಿದ್ದರೆ ಅದನ್ನು ಸರ್ವಾಂಗ-ಪೂರ್ಣ ಮಾಡುವದು ನಮ್ಮ ಹೊಣೆಯಾಗಿದೆ. ಕಠಿಣ ವಿಷಯಗಳನ್ನು ಸರಳವಾದ ಶಬ್ದಗಳಲ್ಲಿ ಹಿಂದೀಯಲ್ಲೂ ಉರ್ದೂದಲ್ಲೂ ಬರೆಯುವುದು ಕಠಿಣವಾಗಿಯೇ ಇದೆ. ಏಕೆಂದರೆ ಸರಳ ಶಬ್ದಗಳು ಸಿಗುವುದಿಲ್ಲ ಸಿಕ್ಕರೂ ಅವನ್ನು ಉಪಯೋಗಿಸಿದಾಗ ಭಾಷೆಯ ರೂಪವೂ ಒಮ್ಮೊಮ್ಮೆ ಕೆಟ್ಟು ಹೋಗುತ್ತದೆ. ಜನತೆಯಲ್ಲಿ ಭಾಷೆಯ ಜ್ಞಾನವು ಕಡಮೆ ಇರುವುದೂ ಸಾಮಾನ್ಯ ಜನತೆಗೆ ತಿಳಿಯುವಂತಹ ಸರಳ ಶಬ್ದಗಳ ಸಂಖ್ಯೆಯು ಕಡಮೆ ಇರುವುದೂ ಇದಕ್ಕೆ ಕಾರಣ ಜನತೆಯಲ್ಲಿ ಶಿಕ್ಷಣವು ಚನ್ನಾಗಿ ಪ್ರಸಾರ ವಾಗದ ತನಕ, ವ್ಯವಹಾರಿಕ ಶಬ್ದಾವಲಿಯು ಬೆಳೆಯದ ತನಕ ಸಾಮಾನ್ಯ ಜನತೆಗೆ ತಿಳಿಯುವಂತೆ ತಾತ್ವಿಕ ವಿವೇಚನೆಯನ್ನು ಮಾಡುವುದು ದುಸ್ತರ. ಈ ಕೊರತೆಯನ್ನು ನೀಗುವುದಕ್ಕಾಗಿ ರಾಷ್ಟ್ರಭಾಷೆಯ ಶಬ್ದಕೋಶವನ್ನು ಬೆಳೆಸುತ್ತ ಅದರಲ್ಲಿಯ ಶಬ್ದಗಳನ್ನು ಉಪಯೋಗಿಸುವುದರಿಂದ ಅವು ಸ್ವಲ್ಪ ಅವಧಿಯಲ್ಲಿ ಸರಳವೆನಿಸುವವು. ಭಾಷೆಯ ವಿಸ್ತಾರದ ಕ್ರಿಯೆಯು ಸಾವಕಾಶವಾಗಿಯೇ ನಡೆಯುವುದು. ಇನ್ನೂ ಒಂದು ಪ್ರಯತ್ನವನ್ನು ಮಾಡುವದು ಅವಶ್ಯವಿದೆ- ರಾಷ್ಟ್ರಭಾಷೆಯ ಆವಶ್ಯಕತೆಯನ್ನು ಒಪ್ಪುವ ಪ್ರಾಂತೀಯ ಭಾಷೆಗಳ ವಿದ್ವಾಂಸರ ಒಂದು ಮಂಡಳವನ್ನು ನಿಯಮಿಸಿ ರಾಷ್ಟ್ರಭಾಷೆಯ ಗತಿಯನ್ನು ತೀವ್ರಗೊಳಿಸುವ ಕಾರ್ಯವನ್ನು ಅದಕ್ಕೆ ಒಪ್ಪಿಸಬೇಕು. † ಆದರೆ ಇನ್ನೂ ನಮ್ಮ ವಿದ್ವಾಂಸರು ಇಂಗ್ಲಿಷದಲ್ಲಿಯೇ ಗುಂಗಾಗಿದ್ದಾರೆ. ಜನತೆಯು ಮುದ್ದಿನಿಂದ ಜಗತ್ತಿನ ಜ್ಞಾನ-ವಿಜ್ಞಾನದ ವಿಷಯಗಳನ್ನು ಕಲಿತು ಜನತೆಯ

---

† ಈ ಕಾರ್ಯವು ಈಗ ದೇವನಾಗರ, ರಾಷ್ಟ್ರಭಾರತಿ ಎಂಬ ಪತ್ರಿಕೆಗಳ ಸಂಸ್ಥೆಗಳ ಮುಖಾಂತರ ಸಾಗಿದೆ.

ಕಡೆಗೆ ಕಣ್ಣುಮುಚ್ಚಿಕೊಂಡು ಕುಳಿತಿದ್ದಾರೆ. ಅವರ ಜಗತ್ತೇ ಬೇರೆಯಾಗಿದೆ, ಹೊಟ್ಟೆಯ ಪ್ರಶ್ನೆಯನ್ನು ಮಾತ್ರ ವಿಚಾರಿಸುವ ಮನೋವೃತ್ತಿಯನ್ನು ಇಟ್ಟುಕೊಂಡವರಾಗಿದ್ದಾರೆ. ಅವರಲ್ಲಿ ರಾಷ್ಟ್ರೀಯ ಪ್ರವೃತ್ತಿ ಮತ್ತು ಜನತೆಯ ಪ್ರತಿಯಾಗಿ ಕರ್ತವ್ಯ ಬುದ್ಧಿ ಜಾಗೃತವಾಗಿದ್ದರೆ ನಮ್ಮ ಕೆಲಸ ಹಗುರಾಗುತ್ತಿತ್ತು. ಯಾವ ದೇಶದ ಮಿದುಳು ವಿದೇಶೀ ಭಾಷೆಯಲ್ಲಿಯೇ ವಿಚಾರಮಾಡುವುದೋ, ಒರೆಯುವದೋ ಆ ದೇಶಕ್ಕೆ ಪ್ರಪಂಚವು ರಾಷ್ಟ್ರವೆಂದು ತಿಳಿಯದಿದ್ದರೆ ಅನ್ಯಾಯ ಮಾಡಿದಂತೇನು ? ರಾಷ್ಟ್ರಭಾಷೆಯು ಎಲ್ಲಿಯ ವರೆಗೆ ಇಲ್ಲವೋ ಅಲ್ಲಿಯ ವರೆಗೆ ಅದು ರಾಷ್ಟ್ರವೇ ಅಲ್ಲ. ಎರಡರಲ್ಲಿಯೂ, ಕಾರಣ—ಕಾರ್ಯದ ಸಂಬಂಧವಿದೆ. ರಾಜನೀತಿಯಲ್ಲಿ ನಿಪುಣರಾದ ಇಂಗ್ಲಿಷರಿಗೆ ಭಾರತವು ರಾಷ್ಟ್ರ ಎಂದು ಕಣ್ಣಲ್ಲಿ ಮಣ್ಣು ತೂರಿ ಮೋಸಮಾಡುವುದು ಸಾಧ್ಯವಿಲ್ಲ, ಅವರಿಗೆ ನಮ್ಮ ಪೊಳ್ಳುತನದ—ಜಳ್ಳುತನದ ಅರಿವು ಇದೆ.

ರಾಷ್ಟ್ರಭಾಷೆಯ ಪ್ರಚಾರವು ಹೇಗೆ ಮುಂದುವರಿಯಬೇಕು ಎಂಬುದೂ ಒಂದು ಪ್ರಶ್ನೆ. ನಮ್ಮ ನಾಡಿನ ಮುಖಂಡರು ಇತ್ತ ಅಲಕ್ಷ ಮಾಡಿದ್ದಾರೆಂದು ವಿಷಾದದಿಂದ ಹೇಳಬೇಕಾಗಿದೆ. ಅವರಿಗೆ ಇದರ ಮಹತ್ವ ಅಷ್ಟು ಇಲ್ಲವೋ ಏನೋ; ಇದ್ದಿದ್ದರೆ ತಮ್ಮ ಕಾರ್ಯಕ್ರಮದಲ್ಲಿ ಇದಕ್ಕೆ ಮೊದಲ ಸ್ಥಾನವನ್ನು ಕೊಡುತ್ತಿದ್ದರು. ಒಂದು ಭಾಷೆಯಲ್ಲಿ ಮಾತನಾಡಲು ಬಂದಾ ರಾಷ್ಟ್ರದಲ್ಲಿ ಸಂಘಟನೆ, ಐಕ್ಯ ಮತ್ತು ಏಕಾತ್ಮಭಾವವನ್ನು ಹುಟ್ಟಿಸಿ ಶಕ್ತಿಯನ್ನು ಸಂಪಾದಿಸಬಹುದು ಮತ್ತು ಸ್ವರಾಜ್ಯದ ಸ್ಥಾಪನೆ ಹಾಗು ರಕ್ಷಣೆಯನ್ನು ಮಾಡಬಹುದು. ಇಂಗ್ಲಿಷದಲ್ಲಿ ನಿಮ್ಮ ಮಸ್ತಿಷ್ಕದ ತಿರುಳನ್ನೇ ತೆಗೆದಿಟ್ಟರೂ ನಿಮ್ಮ ವಾಣಿಯಲ್ಲಿ ರಾಷ್ಟ್ರದ ಬಲವು ಬಾರದು, ರಾಷ್ಟ್ರದ ಬಲವು ಬಾರದಿದ್ದರೆ ನಿಮ್ಮನ್ನು ಯಾರೂ ಮಾತನಾಡಿಸುವುದಿಲ್ಲ. ಆದುದರಿಂದ ರಾಷ್ಟ್ರಭಾಷಾ ಪ್ರಚಾರದ ಕಾರ್ಯವು ತುಚ್ಛವೆಂದು ತಿಳಿಯಬೇಡಿರಿ.

ಪ್ರತಿವರ್ಷ ರಾಷ್ಟ್ರಕ್ಕೆ ಅವಶ್ಯವಿಲ್ಲದ ಅನೇಕ ಶಾಖೆಗಳು ತೆರೆಯಲ್ಪಡುತ್ತವೆ. ಇವೂ ಈ ಮೊದಲು ಇದ್ದುವೂ ದಾಸ್ಯದ ಕಾರಖಾನೆಗಳಾಗಿವೆ. ಇವು ಮಕ್ಕಳನ್ನು ಸ್ವಾರ್ಥ, ಆಡಂಬರ, ಅಕರ್ಮಣ್ಯತನದ ದಾಸರನ್ನಾಗಿ

ಮಾಡಿಬಿಡುತ್ತಿವೆ ಮತ್ತು ಇಲ್ಲಿ ಶಿಕ್ಷಣವೂ ಬಹು ತುಟ್ಟಿಯಾಗಿದೆ. ಇಂತಹ ಶಿಕ್ಷಣದ ಪೇಟೆಯ ಬೆಲೆಯು ಶೂನ್ಯಕ್ಕೆ ಸಮಾನವಾಗಿದೆ. ಆದಾಗ್ಯೂ ನಾವು ಇಂತಹ ಶಾಲೆಗಳ ಕಡೆಗೇ ಕುರಿಗಳಂತೆ ಓಡಿಹೋಗುತ್ತಿದ್ದೇವೆ. ಇಂಗ್ಲಿಷ ಶಿಕ್ಷಣ ಪಡೆಯುವುದು ಇಂಗ್ಲಿಷ ಶಿಷ್ಟತೆಯನ್ನು ಪಡೆಯಲು ಅಲ್ಲ. ಅದರ ಉದ್ದೇಶ್ಯವು ಉದರ. ಶಿಷ್ಟತೆಗಾಗಿ ನಾವು ಇಂಗ್ಲಿಷದ ಎದುರಿಗೆ ಕೈಯೊಡ್ಡುವುದು ಅವಶ್ಯವಿಲ್ಲ. ನಮ್ಮಲ್ಲಿ ಶಿಷ್ಟತನದ ಅಭಾವವೂ ಇಲ್ಲ. ಅದು ಬೇಕಾದಷ್ಟಕ್ಕಿಂತ ಹೆಚ್ಚೇ ಇದೆ. ಶಿಷ್ಟತೆಯನ್ನು ಕಲಿಯುವದಕ್ಕಾಗಿ ಇಂಗ್ಲಿಷದ ದಾಸ್ಯವನ್ನು ವಹಿಸುವುದು ಅಗತ್ಯವಿಲ್ಲ. ನಮ್ಮಲ್ಲಿ ಅತ್ಯಂತ ಉಚ್ಚ ಶಿಕ್ಷಣವು ರಾಷ್ಟ್ರಭಾಷೆಯಲ್ಲಿ ಸುಗಮವಾಗಿ ದೊರೆಯುವ ವಿದ್ಯಾಲಯಗಳು ತೆರೆಯಲ್ಪಡಬೇಕು. ಇಂಥ ಒಂದಾದರೂ ವಿದ್ಯಾಲಯವು ಕೇಂದ್ರದಲ್ಲಿ ಸ್ಥಾಪಿತವಾಗಬೇಕು. ಇಂಥ ವಿದ್ಯಾಲಯವನ್ನು ತೆರೆಯುವಂಥವನು ಹುಟ್ಟದಿರುವುದು ಖೇದದ ಸಂಗತಿಯಾಗಿದೆ.* ಇಂಥ ವಿದ್ಯಾಲಯದ ಸ್ಥಾಪನೆಯಿಂದಲೂ, ಭಾರತದ ಭಿನ್ನ ಭಿನ್ನ ಭಾಷೆಗಳಲ್ಲಿ ಹೊರಡುವ ಪತ್ರಗಳಲ್ಲಿ ರಾಷ್ಟ್ರಭಾಷೆಗೆ ಒಂದೆರಡು ಸ್ತಂಭ ( ಕಾಲಮ್ )ಗಳನ್ನು ಕೊಡುವುದು ಉಚಿತವಾಗಿದೆ. ಈ ನಮ್ಮ ಪ್ರಾರ್ಥನೆಯು ಮಾನ್ಯವಾದರೆ ಬಹಳ ಲಾಭವಾಗಬಹುದು. ರಾಷ್ಟ್ರಭಾಷೆಯು ಇಂಗ್ಲಿಷದ ಸ್ಥಾನವನ್ನು ತೆಗೆದುಕೊಳ್ಳುವ ಮತ್ತು ನಮ್ಮ ವಿದ್ವಾಂಸರು ರಾಷ್ಟ್ರಭಾಷೆಯಲ್ಲಿ ತಮ್ಮ ಕೃತಿಗಳನ್ನು ಬರೆಯುವ ಮತ್ತು ದಕ್ಷಿಣ ಭಾರತದಲ್ಲಿ ಹಿಂದೀಯಲ್ಲಿ ಉತ್ತಮ ಕೃತಿಗಳು ಪ್ರಕಟವಾಗಬೇಕೆಂಬ, ಉತ್ತಮ ಪತ್ರಿಕೆಗಳು ಹೊರಡಬೇಕೆಂಬ, ಪ್ರಪಂಚದ ಸಾಹಿತ್ಯದಲ್ಲಿ ರಾಷ್ಟ್ರಭಾಷೆಗೂ ಗೌರವದ ಸ್ಥಾನವು ದೊರೆಯುವಂತಾಗಬೇಕೆಂಬ ಸ್ವಪ್ನವನ್ನು ನಾನು ಕಾಣುತ್ತಿದ್ದೇನೆ.† ಇದರ ನಿರ್ಣಯವು ರಾಷ್ಟ್ರಭಾವನೆಯ ಕೈಯಲ್ಲಿದೆ.

ಹಿಂದೀ ಮತ್ತು ಉರ್ದು ಸಾಹಿತ್ಯದ ವಿವೇಚನೆಯನ್ನು ಮಾಡುವುದಕ್ಕೆ ಇದು ಪ್ರಸಂಗವೂ ಅಲ್ಲ, ಸಮಯವೂ ಅಲ್ಲ. ನಮ್ಮ ಹೊಸ ಸಾಹಿತ್ಯವು

* ಈಗ ಆಗ್ರಾ ವಿಶ್ವವಿದ್ಯಾಲಯವು 'ಹಿಂದೀ ವಿದ್ಯಾಪೀಠ' ಎಂಬ ಹೊಸ ಶಿಕ್ಷಣ ಸಂಸ್ಥೆಯನ್ನು ಸ್ಥಾಪಿಸಿದೆ ಮತ್ತು ಕೆಲವು ಪತ್ರಿಕೆಗಳೂ ಈ ಕಾರ್ಯ ಪ್ರಾರಂಭಿಸಿವೆ.

† ಪ್ರೇಮಚಂದರ ಈ ಸ್ವಪ್ನವು ಹೂಬಿಡತೊಡಗಿದೆ.

ಇತರ ಪ್ರಾಂತೀಯ ಸಾಹಿತ್ಯಗಳಂತೆ ಸಂಪನ್ನವಾಗಿಲ್ಲ. ೩೦ ೨ ವೇಳೆ ಎಲ್ಲ ಪ್ರಾಂತಗಳ ಸಾಹಿತ್ಯವು ಹಿಂದೀಯಲ್ಲಿ ಬಂದರೆ ಅದಕ್ಕೆ ಸಂಪನ್ನ ಸಾಹಿತ್ಯವೆಂದು ಹೇಳಬಹುದು. ಬಂಗಲಾ ಸಾಹಿತ್ಯದ ಸಾಕಷ್ಟು ರತ್ನಗಳನ್ನು ನಾವು ಹಿಂದೀಗೆ ತೆಗೆದುಕೊಂಡಿದ್ದೇವೆ; ಗುಜರಾತಿ, ಮರಾಠಿ ಸಾಹಿತ್ಯದಿಂದಲೂ ಸ್ವಲ್ಪ ತೆಗೆದುಕೊಂಡಿದ್ದೇವೆ. ತಮಿಳು, ತೆಲುಗು, ಕನ್ನಡ ಆದಿ ಭಾಷೆಗಳಿಂದ ಇನ್ನೂ ಸಾಹಿತ್ಯವನ್ನು ತೆಗೆದುಕೊಂಡಿಲ್ಲ.* ಬೇಗನೇ ನಾವು ಈ ಸಾಹಿತ್ಯಗಳ ಭಂಡಾರದ ಮೇಲೆ ಕೈಯನ್ನಿಡುವೆವು ನಮಗೆ ನಮ್ಮವರು ಸಹಾಯ ಮಾಡಿದಲ್ಲಿ, ನಮ್ಮ ಪ್ರಾಚೀನ ಸಾಹಿತ್ಯವು ಎಲ್ಲವೂ ಕಾವ್ಯಮಯವಾಗಿದೆ, ಆದರಲ್ಲಿ ಶೃಂಗಾರ ಮತ್ತು ಭಕ್ತಿಯೇ ಹೆಚ್ಚು. ಭಕ್ತಕವಿಗಳಲ್ಲಿ ತುಳಸೀದಾಸ, ಸೂರದಾಸ, ಮೀರಾ ಅವರ ಅಧ್ಯಯನ ಮಾಡಿರಿ; ಜ್ಞಾನವು ಬೇಕಾಗಿದ್ದರೆ ಕಬೀರದಾಸರ ಅಧ್ಯಯನ ಮಾಡಿರಿ. ಶೃಂಗಾರರಸವೂ ಹೆಚ್ಚಾಗಿರುವ ಕಾವ್ಯಗಳು ಅನೇಕ ಕವಿಗಳಿಂದ ಬರೆಯಲ್ಪಟ್ಟಿವೆ. ಅವು ಕವಿಗಳ ಒಡೆಯರನ್ನು ಸಂತುಷ್ಟಗೊಳಿಸುವದಕ್ಕಾಗಿ ಬರೆದುವಾಗಿವೆ. ಉರ್ದೂ ಕವಿಗಳೂ ಹಾಗೆಯೆ ಮಾಡಿದ್ದಾರೆ. ಆಧುನಿಕ ಹಿಂದೀ ಮತ್ತು ಉರ್ದೂ ಸಾಹಿತ್ಯಗಳು ಪ್ರಾಚೀನ ಪರಂಪರೆಯ ಸಂಬಂಧವನ್ನು ಹರಿದುಬಿಟ್ಟಿವೆ. ಇಂದಿನ ಹಿಂದೀ ಕವಿತೆಯಲ್ಲಿ ಭಾವಗಳ ಆಳ, ಆತ್ಮಾನುಭೂತಿ, ಅನುಭವಗಳು ಪ್ರಾಚೀನ ಹಿಂದೀ ಕವನಗಳಗಿಂತಲೂ ಹೆಚ್ಚು ಗೋಚರಿಸುತ್ತವೆ ಸಮಯದ ಪ್ರಭಾವವು ಕಾವ್ಯದ ಮೇಲಾಗಿದೆ. ಹೆಚ್ಚಾಗಿ ನಿರಾಶಾವಾದದ ರೋದನವು ಕಂಡರೂ ಕವಿಯು ಅದರಿಂದ ದುಃಖಗೊಳ್ಳುವುದಿಲ್ಲ; ಅವನು ತನ್ನ ಧೈರ್ಯ ಮತ್ತು ಸಂತೋಷದ ಎಲ್ಲೆಯನ್ನು ವಿಸ್ತರಿಸಿದ್ದಾನೆ.

ದುಃಖದ ವಿಲಾಸವು ಬೇಕಾಗಿದ್ದರೆ ಮಹಾದೇವಿ, 'ಪ್ರಸಾದ,' ಪಂತ, ಸುಭದ್ರಾ, 'ಲಲೀ,' 'ದ್ವಿಜ' 'ಮಿಲಿಂದ' 'ನವೀನ' ಮಾಖನಲಾಲ ಚತುರ್ವೇದಿ ಮುಂತಾದವರ ಕವನಗಳನ್ನೂ ಕಾವ್ಯಾನಂದವು ಬೇಕಾಗಿದ್ದರೆ

* ಚಂದ್ರಗುಪ್ತ ಸುಪುತ್ರರಾದ ಶ್ರೀ. ಶ್ರೀಪತರಾಯರು 'ಗಲ್ಪ ಸಂಸಾರ ಮಾಲೆ'ಯನ್ನು ಹೊರಡಿಸಿ ಆದರಲ್ಲಿ ದಕ್ಷಿಣ ಭಾರತದ ಸಾಹಿತ್ಯದ ಉತ್ತಮ ಕತೆಗಳನ್ನು ಆಯ್ದು ಪ್ರಕಟಿಸಿದ್ದಾರೆ. ಈ ಮಾಲೆಯಲ್ಲಿ ಕನ್ನಡದ ೧೪ ಕತೆಗಳು ೬ನೆಯ ಭಾಗದಲ್ಲಿ ಬಂದಿವೆ. ಶ್ರೀ. ಗುರುನಾಥ ಜೋಶಿ ಅವರು ಅದರ ಸಂಪಾದಕರು.

ಮೈಥಿಲೀ ಶರಣಗುಪ್ತ, ತ್ರಿಪಾಠಿ ಮುಂತಾದವರ ಕವನಗಳನ್ನೂ ಓದಿರಿ. ನಾಟಕಗಳಲ್ಲಿ ಪ್ರೀತಿಯಿದ್ದರೆ ಲಕ್ಷ್ಮೀನಾರಾಯಣ ಮಿಶ್ರ, ಪ್ರಸಾದ ಮತ್ತು ಪ್ರೇಮೀ ಅವರ ನಾಟಕಗಳನ್ನು ಓದಿರಿ. ಉರ್ದೂ ನಾಟಕಗಳಲ್ಲಿ 'ತಾಜ' ಅವರು ಬರೆದ 'ಅನಾರಕಲೀ' ಉತ್ತಮವಾಗಿದೆ. ಹಾಸ್ಯರಸವು ಬೇಕಾಗಿದ್ದರೆ ಅನ್ನಪೂರ್ಣಾನಂದರ ಕೃತಿಗಳನ್ನು ಓದಿರಿ. ರಾಷ್ಟ್ರಭಾಷೆಯ ಒಳ್ಳೆಯ ನಮೂನೆಯು ಬೇಕಾಗಿದ್ದರೆ ಜಿ. ಪಿ. ಶ್ರೀವಾಸ್ತವರ ಹಾಸ್ಯರಸಭರಿತ ನಾಟಕಗಳನ್ನು ನೋಡಿರಿ. ಉಮ್ಮರ ಖಯ್ಯಾಮನ ತತ್ವಾನಂದವು ಬೇಕಾಗಿದ್ದರೆ 'ಬಚ್ಚನ' ಅವರ 'ಮಧುಶಾಲಾ'ಕ್ಕೆ ಹೋಗಿರಿ. ಕಥಾ ಸಾಹಿತ್ಯದಲ್ಲಿ ಪ್ರಸಾದ, ಕೌಶಿಕ, ಜೈನೇಂದ್ರ, ಭಾರತೀಯ, ಅಜ್ಞೇಯ, ವಿಶ್ವೇಶ್ವರ ಮುಂತಾದವರ ರಚನೆಗಳಲ್ಲಿ ವಾಸ್ತವಿಕ ಜೀವನವನ್ನು ಕಾಣುವಿರಿ. ಹಿಂದೀ ಕಾದಂಬರಿ ಪ್ರಪಂಚದ ಬಗೆಗೆ ಹೆಚ್ಚಿಗೇನು ಹೇಳಲಿ ? ಉರ್ದೂದಲ್ಲಿಯೂ ಶರರ, ಮಿರ್ಜಾರುಸವಾ, ಸಜ್ಜಾದ ಹುಸೇನ ಮುಂತಾದವರು ಒಳ್ಳೆಯ ಕಾದಂಬರಿಕಾರರು. ಒಂದು ಯುಗದಲ್ಲಿ ಆದ ಈ ಉನ್ನತಿಯಿಂದ ನಾವು ನಾಚಿಕೆ ಪಡಬೇಕಾಗಿಲ್ಲ.

ಮಿತ್ರರೇ, ನಾನು ತಮ್ಮ ಬಹಳ ಸಮಯವನ್ನು ತೆಗೆದುಕೊಂಡೆ. ಆದರೆ ಇನ್ನೂ ಒಂದು ಮಾತು ಇದೆ. ಅದನ್ನು ಇಲ್ಲಿ ಎತ್ತಲು ಭಯವೆನಿಸುತ್ತದೆ. ಅದಕ್ಕಾಗಿ ಈ ವರೆಗೆ ಅದನ್ನು ಮುಂದೂಡುತ್ತ ಬಂದೆ. ಆದರೆ ಅದರ ಬಗೆಗೂ ಹೇಳುವದು ಅವಶ್ಯವೆನಿಸುತ್ತದೆ. ಆ ಮಾತು ಎಂದರೆ ರಾಷ್ಟ್ರಲಿಪಿಯ ಪ್ರಶ್ನೆ. ಮಾತನಾಡುವ ಭಾಷೆಯು ಒಂದಾಗಬಹುದು, ಆದರೆ ಲಿಪಿಯು ಒಂದೇ ಹೇಗೆ ಆಗಬಲ್ಲದು ? ಹಿಂದೀ ಮತ್ತು ಉರ್ದೂ ಲಿಪಿಯಲ್ಲಿ ಪೂರ್ವ-ಪಶ್ಚಿಮದಷ್ಟು ಅಂತರವು ಇದೆ. ಮುಸಲ್ಮಾನರಿಗೆ ಫಾರಸಿ ಲಿಪಿಯು ಪ್ರಿಯವಾಗಿದ್ದರೆ ಹಿಂದೂಗಳಿಗೆ ನಾಗರೀ ಲಿಪಿಯು ಪ್ರಿಯವಾಗಿದೆ. ನಾವು ನಮ್ಮ ರಾಷ್ಟ್ರಭಾಷೆ ಮತ್ತು ರಾಷ್ಟ್ರಲಿಪಿಯ ಪ್ರಚಾರವನ್ನು ಮಿತ್ರಭಾವದಿಂದ ಮಾಡಬೇಕಾಗಿದೆ. ಇದರ ಮೊದಲನೆಯ ಹೆಜ್ಜೆಯಾಗಿ ನಾವು ನಾಗರೀ ಲಿಪಿಯ ಸಂಘಟನೆಯನ್ನು ಮಾಡಬೇಕು. ಬಂಗಲಾ, ಗುಜರಾತಿ, ತಮಿಳ ಮುಂತಾದವೂ ನಾಗರೀ ಲಿಪಿಯನ್ನು ಸ್ವೀಕರಿಸಿದರೆ ರಾಷ್ಟ್ರೀಯ ಲಿಪಿಯ ಪ್ರಶ್ನೆಯು ಬಹುಮಟ್ಟಿಗೆ ಬಿಟ್ಟಂತಾಗುವುದು.

ಹಿಂದೀ (ನಾಗರೀ) ಲಿಪಿಯನ್ನು ಕಲಿಯುವದೂ ಸುಲಭ. ಇಡೀ ದೇಶವೇ ನಾಗರೀಲಿಪಿಯನ್ನು ಅಂಗೀಕರಿಸಿದರೆ ಮುಸಲ್ಮಾನರೂ ಆ ಲಿಪಿಯನ್ನು ಸ್ವೀಕರಿಸುವ ಸಂಭವವಿದೆ. ರಾಷ್ಟ್ರೀಯ ಚೈತನ್ಯವು ಅವರಿಗೂ ಬಹಳ ದಿನ ಪ್ರತ್ಯೇಕವಾಗಿ ಇರಗೊಡಲಾರದು. ಮುಸಲ್ಮಾನರಿಗೆ ಅವರ ವರ್ತಮಾನ-ಪತ್ರಗಳು ಮತ್ತು ಪುಸ್ತಕಗಳು ಓದಲ್ಪಡಬೇಕೆಂಬ ಇಚ್ಛೆಯು ಆಗದೇನು ? ಉರ್ದೂ ಲಿಪಿಯನ್ನು ನಾವು ನಾಶಮಾಡಹೋಗುವುದಿಲ್ಲ ಮತ್ತು ಯಾವ ಲಿಪಿಯನ್ನೂ ನಾವು ನಾಶಮಾಡಲಿಚ್ಛಿಸುವುದಿಲ್ಲ. ಅಂತಪ್ರಾಂತೀಯ ವ್ಯವಹಾರವು ನಾಗರೀಲಿಪಿಯಲ್ಲಿ ಆಗಬೇಕೆಂದು ಅಪೇಕ್ಷಿಸುತ್ತೇವೆ. ಮುಸಲ್ಮಾನರಲ್ಲಿ ರಾಜಕೀಯ ಜಾಗ್ರತಿಯೊಡನೆ ಈ ಪ್ರಶ್ನೆಯೂ ತಾನೇ ಬಿಡಿಸಲ್ಪಡುವುದು. ಯು. ಪಿ. ಯಲ್ಲಿ ಶಾಲೆಗಳಲ್ಲಿ ಉರ್ದೂ ಬಾಲಕರಿಗೆ ಹಿಂದೀ ಲಿಪಿಯಲ್ಲಿ ಮತ್ತು ಹಿಂದೀ ಬಾಲಕರಿಗೆ ಉರ್ದೂ ಲಿಪಿಯಲ್ಲಿ ಸಾಮಾನ್ಯ ಪುಸ್ತಕಗಳನ್ನೂ ಪತ್ರಗಳನ್ನೂ ಓದಲಿಕ್ಕೆ ಬರುವಷ್ಟು ಕಲಿಸಬೇಕೆಂಬ ಆಂದೋಲನವು ನಡೆದಿದೆ. ಈ ಆಂದೋಲನವು ಯಶಸ್ವಿಯಾದರೆ ಪ್ರತಿಯೊಬ್ಬ ಬಾಲಕನಿಗೆ ಹಿಂದೀ ಮತ್ತು ಉರ್ದೂ ಎರಡೂ ಲಿಪಿಗಳ ಪರಿಚಯವಾಗುವುದು ಮತ್ತು ಭಾಷೆಯು ಒಂದು ಆದ ಬಳಿಕ ಹಿಂದೀಯು ತನ್ನ ಪೂರ್ಣತೆಯಿಂದ ಸರ್ವಮಾನ್ಯವಾಗುವುದು ಮತ್ತು ರಾಷ್ಟ್ರೀಯ ಯೋಜನೆಗಳಲ್ಲಿ ಅದರ ಉಪಯೋಗವು ಆಗತೊಡಗುವುದು. ಜನತೆಯಲ್ಲಿ ರಾಷ್ಟ್ರ ಹಿತದ ಸಲುವಾಗಿ ಚಿಕ್ಕ ಪುಟ್ಟ ಸ್ವಾರ್ಥಗಳನ್ನು ಬಲಿದಾನ ಮಾಡಲು ಕಲಿಯುವಂತೆ ರಾಷ್ಟ್ರೀಯ ಚೈತನ್ಯವನ್ನು ಸಜೀವಗೊಳಿಸುವದು ನಮ್ಮ ಕಾರ್ಯ. ಆದರೆ ಈ ಕಾರ್ಯದಲ್ಲಿ ಅನೇಕ ವಿಘ್ನಗಳು ಬರಬಹುದು. ಅವಕ್ಕೆ ಅಂಜಿ ಹಿಂದೆ ಸರಿಯಬಾರದು. ಸೈನಿಕನು ಕಾದಾಡುತ್ತಾನೆ, ಅವನಿಗೆ ಸೋಲು-ಗೆಲವಿನ ಪರವೆ ಇಲ್ಲ. ಬಹುಜನಕ್ಕಾಗಿ ತನ್ನ ಜೀವನದ ಹೋಮವನ್ನು ಮಾಡುವುದೇ ಅವನ ಜೀವನದ ಧ್ಯೇಯ. ತಮಗೆ ತಮ್ಮೆದುರಿಗೆ ವಿಘ್ನಗಳ, ಕಠಿನ ಪ್ರಸಂಗಗಳ ಸೈನ್ಯವೇ ಬಂದು ನಿಲ್ಲಬಹುದು. ತಮ್ಮ ಕಡೆಗೆ ಉಪೇಕ್ಷೆಯ ಭಾವವೂ ಉಂಟಾಗುವ ಪ್ರಸಂಗವೂ ಬರಬಹುದು. ಜನರು ತಮಗೆ ಹುಚ್ಚರೆಂದೂ ಭ್ರಮಿಷ್ಠರೆಂದೂ ಅನ್ನಬಹುದು. ಅನ್ನಲಿ, ತಮ್ಮ ಸಂಕಲ್ಪವು ಸತ್ಯವಿದ್ದರೆ ತಮ್ಮಲ್ಲಿ ಪ್ರತಿಯೊಬ್ಬನೂ ಒಂದೊಂದು

ಸೇನೆಯ ನಾಯಕನಾಗುವನು. ಜನರು ತಮ್ಮಲ್ಲಿ ಶ್ರದ್ಧೆ-ವಿಶ್ವಾಸವಿಡುವಂತೆ ತಮ್ಮ ಜೀವನಸವಾಗಬೇಕು. ತಾವು ತಮ್ಮ ಮಿಂಚನ್ನು ಉಳಿದವರಲ್ಲಿಯೂ ತುಂಬಿರಿ : ಪ್ರತಿಯೊಂದು ಪಂಥದ ವಿಜಯವು ಅದರ ಪ್ರಚಾರಕರ ಆದರ್ಶ-ಜೀವನವನ್ನೇ ಅವಲಂಬಿಸಿರುತ್ತದೆ. ತಾವು ತಮ್ಮ ಜೀವನವನ್ನು ಅಯೋಗ್ಯ-ವನ್ನಾಗಿ ಮಾಡಗೊಡದೇ ಆದರ್ಶ-ಜೀವನವನ್ನಾಗಿ ಮಾಡಿಕೊಳ್ಳುವಿರೆಂಬ ಭರವಸೆಯು ನನಗೆ ಇದೆ.

**—ಗುರುನಾಥ ಜೋಶಿ**

# ಪ್ರೇಮಚಂದ ಬಾಲ ಸಾಹಿತ್ಯ

## ನಾಯಿಯ ಕಥೆ



ಅನುವಾದಕರು :

ಶ್ರೀ. ಬಾಳಾಚಾರ್ಯ ಅವಧಾನಿ

# ನಾಯಿಯ ಕಥೆ



ಬಾಲಕರೇ, ನೀವು ರಾಜರ ಮತ್ತು ವೀರರ ಎಷ್ಟೋ ಕಥೆಗಳನ್ನು ಕೇಳಿರಬಹುದು. ಆದರೆ ಯಾವದೊಂದು ನಾಯಿಯ ಜೀವನದ ಕಥೆಯನ್ನು ಕೇಳಿರಲಿಕ್ಕಿಲ್ಲ. ನಾಯಿಯ ಜೀವನದಲ್ಲಿ ಕೇಳುವಂಥ ಸಂಗತಿಗಳಾದರೂ ಯಾವವಿವೆ ? ಅದು ದೇವತೆಗಳೊಡನೆ ಯುದ್ಧಮಾಡಲಾರದು. ಅಪ್ಸರೆಯರ ದೇಶಕ್ಕೆ ಹೋಗಲಾರದು. ಮಹಾಯುದ್ಧಗಳನ್ನು ಗೆಲ್ಲಲಾರದು. ಅದಕ್ಕಾಗಿ ಎಲ್ಲಿಯಾದರೂ ನನ್ನ ಕಥೆಯನ್ನು ಒಗೆಯಬಹುದೆಂಬ ಭಯವಿದೆ. ಆದರೆ ದೊಡ್ಡವರ ಜೀವನದಲ್ಲಿಯೂ ಸಂಭವಿಸದಂಥ ಸಂಗತಿಗಳು ನನ್ನ ಜೀವನದಲ್ಲಿ ಆಗಿವೆಯೆಂದು ವಿಶ್ವಾಸದಿಂದ ಹೇಳುತ್ತೇನೆ. ಆದುದರಿಂದ ನಾನು ನನ್ನ ಕಥೆಯನ್ನು ಹೇಳುತ್ತಲಿದ್ದೇನೆ ನೀವು ನಾಯಿಯನ್ನು ಹೊಡೆದೋಡಿಸದಂತೆ ನನ್ನ ಕಥೆಯನ್ನು ಒಗೆಯಬೇಡಿರಿ. ಇದರಿಂದ ನಿಮಗೆ ಎಷ್ಟೋ ವಿಷಯಗಳು ಗೊತ್ತಾಗುವವು. ಒಳ್ಳೆಯ ವಿಷಯಗಳು ಸಿಕ್ಕಲ್ಲಿ ನೀವು ಅವುಗಳನ್ನು ತಿಳಿದುಕೊಳ್ಳಿರಿ.

ನಾನು ಹುಟ್ಟಿದಾಗ ನನ್ನ ಕಣ್ಣು ಮತ್ತು ಕಿವಿಗಳು ಬಂದಾಗಿದ್ದವು. ವಾದ್ಯಗಳು ಬಾರಿಸಿದ್ದವೋ ಇಲ್ಲವೋ ಎಂಬುದನ್ನು ಹೇಳಲಾರೆ. ಏನೂ ಕೇಳಿದ್ದಿಲ್ಲ. ನಾನು ಮಲಗಿಕೊಂಡ ಹಾಸಿಗೆಯು ಬಹಳ ಮೆತ್ತನ್ನದಿತ್ತು. ಚಳಿಯು ಹತ್ತುತ್ತಿರಲಿಲ್ಲ. ನನ್ನ ಜನ್ಮವು ಯಾವದೊಂದು ದೊಡ್ಡ ಮನೆತನದಲ್ಲಿ ಆಗಿದೆಯೆಂದು ಅನಿಸುತ್ತಿತ್ತು. ಒಂದು ಒಲೆಯ ಬೆಚ್ಚಗಿನ ಬೂದಿಯ ಮೇಲೆ ತಾಯಿಯನ್ನು ತಬ್ಬಿಕೊಂಡು ಮಲಗಿದ್ದುದನ್ನು ನನ್ನ ಕಣ್ಣುಗಳು ತೆರೆದ ಮೇಲೆ ಕಂಡೆನು. ನಾಲ್ವರು ಅಣ್ಣತಮ್ಮಂದಿರಲ್ಲಿ ಮೂವರು ಕೆಂದು ಬಣ್ಣದವರು, ನಾನೊಬ್ಬನು ಕಪ್ಪು ಬಣ್ಣದವನು. ಆದರಲ್ಲಿ ಎಲ್ಲರಕ್ಕಿಂತ ಸಣ್ಣವನು ಮತ್ತು ಅಶಕ್ತನು ನಾನೇ.

ಹಸಿವನ್ನು ಆರಿಸಿಕೊಳ್ಳುವದಕ್ಕಾಗಿ ಹೊರಗೆ ಯಾವಾಗಲೂ ಅಡ್ಡಾಡುತ್ತಿದ್ದುದರಿಂದ ತಾಯಿಯು ನಮ್ಮೊಡನೆ ಬಹಳ ಹೊತ್ತು ಇರುತ್ತಿದ್ದಿಲ್ಲ.

ಅವಳು ಇಡೀ ರಾತ್ರಿ ಎಚ್ಚರವಿದ್ದು ಊರನ್ನು ರಕ್ಷಿಸುತ್ತಿದ್ದಳು. ಯಾವನೊಬ್ಬ ಅಪರಿಚಿತ ಮನುಷ್ಯನು ಊರಲ್ಲಿ ಬಂದರೆ ಕೇಳುವದೇನು? ಎರಡನೇ ಊರಿನ ನಾಯಿಗಳು ಬಂದುದನ್ನು ಕಂಡರೆ ಅವುಗಳನ್ನು ದೂರದಿಂದಲೇ ಕೂಗಿ ಓಡಿಸುತ್ತಿದ್ದಳು. ಹೊಲದಲ್ಲಿ ಯಾವದೊಂದು ಹೋರಿಯು ತುಡುಗು ಮೇಯಲು ಹೊಕ್ಕರೆ ಅದನ್ನು ದೂರದ ವರೆಗೆ ಹೊಡೆದೋಡಿಸುತ್ತಿದ್ದಳು. ಆದರೆ ಇಷ್ಟೆಲ್ಲ ಮಾಡುತ್ತಿದ್ದರೂ ಊರಲ್ಲಿ ಯಾರೂ ತಿನ್ನಲಿಕ್ಕೆ ಒಂದು ತುಂಡು ರೊಟ್ಟಿಯನ್ನು ಕೊಡುತ್ತಿದ್ದಿಲ್ಲ. ಪಾಪ, ಹೊಟ್ಟೆ ಹಸಿವಿನಿಂದ ಸುಟ್ಟು ಸುಣ್ಣಾಗುತ್ತಿದ್ದಳು. ಇದಲ್ಲದೆ ಅವಳಿಗೆ ನಮ್ಮ ಚಿಂತೆಯೂ ಒಂದಿತ್ತು. ಆದುದರಿಂದ ಹೊಟ್ಟೆ ಹಸಿದಾಗ ಯಾವದೊಂದು ಮನೆಯನ್ನು ಹೊಕ್ಕು ಸಿಕ್ಕಿದುದನ್ನು ದೋಚಿಕೊಂಡು ಬರುತ್ತಿದ್ದಳು. ಇದನ್ನು ನೋಡಿ-ದೊಡನೆ ಜನರು ಹೊಡೆಯಲು ಬೆನ್ನಟ್ಟುತ್ತಿದ್ದರು ತಮ್ಮ ತಮ್ಮ ಮನೆಯ ಬಾಗಿಲನ್ನು ಹಾಕಿಕೊಳ್ಳುತ್ತಿದ್ದರು

ಒಂದು ದಿನ ಬಹಳ ಚಳಿ ಬಿತ್ತು. ಮೋಡಗಳು ಕವಿದು ತಣ್ಣಗಿನ ಹವೆಯು ಬೀಸಲಾರಂಭಿಸಿತು. ನಮ್ಮಲ್ಲಿಯ ಇಬ್ಬರಿಗೆ ಚಳಿಯನ್ನು ತಡೆಯ-ಲಿಕ್ಕಾಗದೇ ಸತ್ತುಹೋದರು. ನಾವಿಬ್ಬರೇ ಉಳಿದೆವು. ತಾಯಿಯು ಬಹಳೇ ದುಃಖಪಟ್ಟುಕೊಂಡು ಅತ್ತಳು. ಆದರೆ ಏನು ಮಾಡುವಳು? ಇಷ್ಟಾದರೂ ಊರಿನವರಿಗೆ ಎಳ್ಳಷ್ಟೂ ದಯೆ ಬರಲಿಲ್ಲ. ಮನುಷ್ಯರು ಎಷ್ಟು ಸ್ವಾರ್ಥಿಗಳು ಮತ್ತು ನಿರ್ದಯಿಗಳು ಇರುವರೆಂಬುದನ್ನು ಮೊದಲು ಬಾರಿ ನಾನು ಕಂಡೆನು.

ಒಮ್ಮೆ ಊರಲ್ಲಿ ಉತ್ಸವವಿತ್ತು. ಒಬ್ಬ ವ್ಯಾಪಾರಸ್ಥನ ಮನೆಯಲ್ಲಿ ಬ್ರಾಹ್ಮಣರಿಗೆ ಊಟವಿತ್ತು. ಸಾವಿರಾರು ಜನರು ಕಲೆತಿದ್ದರು. ರುಚಿಯಾದ ಪುರಿಗಳು ಸಿದ್ಧವಾಗುತ್ತಿದ್ದವು. ಮೇಲಿಂದ ಮೇಲೆ ತಾಯಿಯು ಅತ್ತಕಡೆಗೆ ಹೋಗುತ್ತಿದ್ದಾಗ ಜನರು ಬೆದರಿಸಿ ಓಡಿಸುತ್ತಿದ್ದರು. ಒಂದು ತುಂಡನ್ನು ಅವಳಿಗೆ ಕೊಟ್ಟು ಕಳಿಸಬೇಕೆಂಬ ದಯೆಯು ಯಾರಿಗೂ ಬರುತ್ತಿರಲಿಲ್ಲ. ಒಂದು ತುಣುಕು ಕೊಟ್ಟಿದ್ದರೆ ಅವರಿಗೇನೂ ಕಡಿಮೆಯಾಗುತ್ತಿದ್ದಿಲ್ಲ. ತಿಳಿಹೇಳುವವರಾರು? ಅಡಿಗೆಯು ಸಿದ್ಧವಾದ ಮೇಲೆ ಅಂಗಳದಲ್ಲಿ ಎಲೆಗಳನ್ನು

ಹಾಕಲಾಯಿತು. ಜನರು ತಮ್ಮ ತಮ್ಮ ಆಸನಗಳ ಮೇಲೆ ಕುಳಿತುಕೊಂಡರು. ಬಡಿಸಲಾಯಿತು. ಆ ವೇಳೆಗೆ ತಾಯಿಯು ಅಲ್ಲಿಗೆ ಹೋದಳು. ನಾವಿಬ್ಬರೂ ಅವಳೊಂದಿಗಿದ್ದೆವು. ಬಾಗಿಲಲ್ಲಿಯೇ ಒಬ್ಬನು ಬೆದರಿಸಿದನು. ತಾಯಿಯು ಓಡಿಹೋಗದೆ ಬಾಲನನ್ನು ಅಲ್ಲಾಡಿಸುತ್ತ ಅಲ್ಲಿಯೇ ಕುಳಿತಳು ಆ ಮನುಷ್ಯನು ಕೆಲಸಕ್ಕಾಗಿ ಮನೆಯ ಒಳಗೆ ಹೋದನು. ಆಗ್ಗೆ ತಾಯಿಯು ಮೆಲ್ಲನೆ ಅಂಗಳದೊಳಗೆ ಹೋದಳು. ಅವಳನ್ನು ನೋಡಿದೊಡನೆಯೇ ಸುತ್ತುಕಡೆಯಿಂದ ಹಚ್, ಹಚ್ ಎಂಬ ಗದ್ದಲವು ಪ್ರಾರಂಭವಾಯಿತು. ತಾಯಿಯು ಗಾಬರಿಗೊಂಡಳು. ಇಬ್ಬರು ಮೂವರು ಕೋಲನ್ನು ತೆಗೆದು-ಕೊಂಡು ಬಂದರು. ತಾಯಿಗೆ ಅಂಗಳದೊಳಗಿಂದ ಹೊರಗೆ ಹೋಗಲು ಸ್ವಲ್ಪ ಹಾದಿಯು ದೊರೆತಿದ್ದರೆ ಓಡಿ ಹೋಗುತ್ತಿದ್ದಳು. ಆದರೆ ಜನರು ಬಡಿಗೆ ತೆಗೆದುಕೊಂಡು ನಿಂತಿದ್ದರು. ಆದುದರಿಂದ ಅವಳು ಕುಳಿತ ಜನರೊಳಗಿಂದ ಓಡಿ ಮೋರಿಯೊಳಗಿಂದ ಹೊರಗೆ ಬಂದಳು

ಆದರೆ ಒಂದು ಮೋಜು, ತಮಾಷೆಯಾಯಿತು ತಾಯಿಯು ಹೊರಗೆ ಬರುತ್ತಲೇ ಊಟಕ್ಕೆಕುಳಿತವರೂ ಎದ್ದುಬಿಟ್ಟರು. ಏಕೆ ಗೊತ್ತೇ? ತಾಯಿಯು ಅಲ್ಲಿಂದ ಹಾಯ್ದು ಹೋದುದರಿಂದ ಎಲ್ಲವೂ ಮೈಲಿಗೆಯಾಯಿತು! ಮುಂದೇನು ಮಾಡಬೇಕೆಂದು ವಿಚಾರ ನಡೆಯಿತು. ಆದರೆ ಆ ಬಡಪಾಯಿ ವ್ಯಾಪಾರಿಯು ಬಿಕ್ಕಿ ಬಿಕ್ಕಿ ಅಳತೊಡಗಿದನು. ಇದರಲ್ಲಿ ಏನಿದೆ, ನಾಯಿಯು ಎಲೆಯಲ್ಲಿ ಬಾಯಿಯನ್ನು ಹಾಕಿಲ್ಲ, ಕೇವಲ ಹಾಯ್ದು ಹೋದುದರಿಂದ ಏನಾಯಿತು ಎಂದು ಅವರಲ್ಲಿಯ ಕೆಲವರು ಹೇಳಿದರು. ಅವರಲ್ಲಿಯೇ ಕೆಲ ಕುಲೀನರು ನಾಯಿಯು ಅಲ್ಲಿ ಹಾಯ್ದು ಹೋಗುವದರಿಂದಲೇ ಎಲ್ಲವೂ ಭ್ರಷ್ಟವಾಯಿತೆಂದರು. ಇದರಿಂದ ಕೊನೆಗೆ ಈ ಕುಲೀನರ ಮಾತೇ ಗೆದ್ದಿತು. ಆ ಮೇಲೆ ಎಲ್ಲ ಅಡಿಗೆಯನ್ನು ಅಸ್ಪೃಶ್ಯರಿಗೆ ಹಾಕಲಾಯಿತು. ಆ ದಿನ ಮಾತ್ರ ತಾಯಿಯು ಹೊಟ್ಟೆತುಂಬ ಊಟಮಾಡಿದಳು. ಇಂಥ ಸುಖವು ಅವಳಿಗೆ ಜೀವನದಲ್ಲಿಯೇ ದೊರೆತಿದ್ದಿಲ್ಲ.

ಆದರೆ ಅವಳ ಜೀವನದಲ್ಲಿ ಸುಖವನ್ನೇ ಬರೆದಿದ್ದಿಲ್ಲ. ಊಟಮಾಡಿ ಸ್ವಲ್ಪ ಮಲಗಿದ್ದಳೋ ಇಲ್ಲವೊ ಅಷ್ಟರಲ್ಲಿ ಆ ವ್ಯಾಪಾರಿಯು ಬಡಿಗೆಯನ್ನು

ತೆಗೆದುಕೊಂಡು ಬಂದು ಹೊಡೆಯುತೊಡಗಿದನು. ಓಡಿಹೋಗಲು ಸಮಯವೇ ದೊರೆಯಲಿಲ್ಲ ಗಟ್ಟಿಯಾಗಿ ಚೀರತೊಡಗಿದಳು. ಅವಳ ಈ ವಿಲಾಪಕ್ಕೆ ಕಲ್ಲುಗಳು ಕೂಡ ಕರಗುವಂತಿದ್ದವು. ಆದರೆ ಈ ನಿರ್ದಯೀ ಮನುಷ್ಯನಿಗೆ ಸ್ವಲ್ಪಾದರೂ ದಯೆ ಬರಲಿಲ್ಲ. ನಾನು ಮನಸ್ಸಿನಲ್ಲಿಯೇ ಸಿಡಿಮಿಡಿಗೊಂಡೆನು. ನಾನೇನಾದರೂ ಮಾಡುವಂತಿದ್ದರೆ ಇವನಿಗೆ ಮೋಜನ್ನು ತೋರಿಸುತ್ತಿದ್ದೆನು. ಆದರೆ ಏನು ಮಾಡಬಲ್ಲೆ. ಈ ಕೂಗಾಟವನ್ನು ಕೇಳಿ ಜನರು ಕೂಡಿದರು. "ಹಸಿವೆಯಾದಾಗ್ಗೆ ಮನುಷ್ಯನ ಬುದ್ಧಿಯೇ ತಾಳ್ಮೆಯಲ್ಲಿರುವದಿಲ್ಲ. ಹೋಗಲಿಬಿಡಿರಿ, ಇದಂತೂ ಪಶು. ಇದಕ್ಕೇನು ತಿಳಿಯುವದು ? ಆದದ್ದು ಆಗಿಹೋಯಿತು. ಇದನ್ನು ಹೊಡೆದಾದರೂ ಬರುವದೇನು ? " ಎಂದು ಕೂಡಿದ ಜನರು ತಿಳಿಹೇಳಿದರು. ಆಗ್ಗೆ ಅವರ ಮಾತುಗಳು ಅವನ ಮನಸ್ಸಿಗೆ ನಾಟಿದವು. ಇದರಿಂದ ತಾಯಿಯ ಜೀವವು ಉಳಿಯಿತು.

ಅದೇ ದಿನ ಸಂಜೆಗೆ ಒಬ್ಬ ದಾರಿಕಾರನು ಊರಿಗೆ ಬಂದನು. ಅವನು ಒಂದು ಗಿಡದ ಬುಡದಲ್ಲಿ ಒಲೆ ಹೊತ್ತಿಸಿ ಒಂದು ಪಾತ್ರೆಯಲ್ಲಿ ಬೇಳೆ ಕುದಿಯಲು ಇಟ್ಟನು. ಇತ್ತಕಡೆಗೆ ಹಿಟ್ಟನ್ನು ನಾದತೊಡಗಿದನು. ಹಿಟ್ಟು ನಾದುವದಾದಮೇಲೆ ಒಲೆಯ ಮೇಲಿಂದ ಬೇಳೆಯನ್ನು ಇಳಿಸಿದ್ದನು ಮತ್ತು ಎದುರಿಗಿರುವ ಬಾವಿಗೆ ನೀರು ತರಲು ಹೋದನು. ಆ ನಾದಿದ ಹಿಟ್ಟನ್ನು ಎಲೆಯ ಮೇಲೆ ಇಡಲಾಗಿತ್ತು. ಇಷ್ಟರಲ್ಲಿ ತಾಯಿಯು ತಿರುಗಾಡುತ್ತ ಅಲ್ಲಿಗೆ ಬಂದಳು. ಆ ಹಿಟ್ಟನ್ನು ನೋಡಿ, ಹಾದಿಕಾರನು ತಿಂದುಂಡು ಎಂಜಲವನ್ನು ಇಟ್ಟಿದ್ದಾನೆಂದು ತಿಳಿದು ಬಾಯಿಯಲ್ಲಿ ತೆಗೆದುಕೊಂಡು ಓಡಿದಳು, ದಾರಿಕಾರನು ಬಾವಿಯ ಮೇಲಿಂದಲೇ ಹಚ್, ಹಚ್ ಎನ್ನುತ್ತಿದ್ದಾಗಲೇ ಇವಳು ನೋಡದಲೆ ಹೊರಟುಬಿಟ್ಟಳು. ಅವನು ತಲೆಯ ಮೇಲೆ ಕೈಯಿಟ್ಟು ಕುಳಿತುಕೊಂಡು ಅಳತೊಡಗಿದನು. ಮೂರು ದಿನಗಳಿಂದ ಹಸಿವು, ದಣಿವಿಕೆ. ಇಂತಹದರಲ್ಲಿ ದೇವರ ಈ ಆಟ. 'ನಿನ್ನದೇನು ನಾಲ್ಕಾರಾಣೆ ಹಾನಿಯಾಗಿರ ಬಹುದು. ಆದರೆ ನಿನ್ನಿನ ದಿನ ಸಾವಿರಾರು ರೂಪಾಯಿಗಳ ಹಾನಿಯಾಗಿದೆ' ಎಂದು ಇಬ್ಬರು ಮೂವರು ತಿಳಿಹೇಳಿದರು.

'ಇದು ಇಂಥ ಕೆಟ್ಟ ಕೆಲಸಕ್ಕಾಗಿ ಕೂತಿದೆ ಎಂಬುದೇನು ಬಲ್ಲೆ' ಎಂದು ದಾರಿಕಾರನು ( ಯಾತ್ರಿಕನು ) ಹೇಳಿದನು.

ಇಂದಿನ ನಿನ್ನ ಆಹಾರವು ಇವರ ಭಾಗ್ಯದಲ್ಲಿ ಬರೆದಿತ್ತೆಂದೂ, ರಾಜನ ಮುದ್ರೆ ಪ್ರತಿ ಆಣೆಯ ಮೇಲಾದರೆ ದೇವರ ಮುದ್ರೆ ಪ್ರತಿ ಕಾಳಿನ ಮೇಲೆ ಇರುತ್ತದೆ. ಮತ್ತೆ ಅಡಿಗೆ ಮಾಡಿ ಊಟಮಾಡೆಂದು ಒಬ್ಬ ಮುದುಕ ಗೌಡನು ಹೇಳಿದನು.

ಆ ಯಾತ್ರಿಕನು ಮತ್ತೆ ಒಲೆಹೊತ್ತಿಸಿ ಅಡಿಗೆ ಮಾಡತೊಡಗಿದನು. ಆ ಮುದಕನು ಅಲ್ಲಿಯೇ ಕೂತನು 'ನೀವು ಹೇಳಿದ ಗಾದೆಯು ನನಗೆ ಚನ್ನಾಗಿ ಅರ್ಥವಾಗಲಿಲ್ಲ' ಎಂದು ಯಾತ್ರಿಕನು ಕೇಳಿದನು.

ಗೌಡ:— ಈ ಗಾದೆಯನ್ನ ಉಚ್ಚಾರ ಮಾಡುತ್ತ ಒಬ್ಬ ಭಿಕ್ಷುಕನು ಮನೆಮನೆ ಭಿಕ್ಷೆಬೇಡುತ್ತಿದ್ದ—'ರಾಜನ ಮುದ್ರೆಯು ಪ್ರತಿ ಆಣೆಯ ಮೇಲೆ, ದೇವರ ಮುದ್ರೆಯು ಪ್ರತಿ ಕಾಳಿನ ಮೇಲೆ.' 'ಭಿಕ್ಷುಕನೇ, ಈ ಮಾತಿನ ಅರ್ಥ ಆಗಲೊಲ್ಲದು. ಕಾಳುಗಳ ಮೇಲೆ ಹೇಗೆ ಮುದ್ರೆ?' ಎಂಬುದು ತಿಳಿಯಲಾರದೆಂದು ಒಬ್ಬ ಧನಿಕನು ಕೇಳಿದನು. 'ಇಲ್ಲ ಮಗುವೇ, ಭಗವಾನನು ಕೊಡಬೇಕೆಂದು ಇಚ್ಛಿಸಿದವಗೆ ಕಾಳು ದೊರೆಯುವುದು. ಎರಡನೆಯವನಿಗೆ ಎಂದೂ ಸಿಗಲಾರದು. ಇದನ್ನು ನಿನ್ನ ಮನಸ್ಸಿಗೆ ಬಂದಾಗ ಪರೀಕ್ಷಿಸಬಹುದು

ಧನಿಕ:— ಆಗಲಿ, ನಾನು ಈಗಲೇ ಪರೀಕ್ಷಿಸುವೆನು. ಇದು ಸರಿ ಎಂದು ಸಿದ್ಧವಾದರೆ ನಾನು ನಿನ್ನ ಗುಲಾಮನಾಗಿ ಕೆಲಸ ಮಾಡುವೆನು.

ಧನಿಕನು ಕೈಯಲ್ಲಿ ಒಂದು ಜೋಳದ ಕಾಳನ್ನು ತೆಗೆದುಕೊಂಡು ಇಂತೆಂದನು, ನೋಡು. ಇದನ್ನು ನಾನು ಬಾಯಲ್ಲಿ ಹಾಕಿಕೊಳ್ಳುವೆನು. ಇದರ ಮೇಲೆ ದೇವರ ಮುದ್ರೆ ಇದ್ದರೆ ಇದನ್ನು ಎರಡನೆಯವರಿಗೆ ಕೊಡಲಿ.

ಹೀಗೆ ಹೇಳುತ್ತ ಆ ಕಾಳನ್ನು ತನ್ನ ಬಾಯಲ್ಲಿ ಹಾಕಿಕೊಳ್ಳಲು ತೂರಿದನು. ಆದರೆ ಅದು ಬಾಯಲ್ಲಿ ಬೀಳದೆ ಕೆಳಗೆ ಬಿತ್ತು. ಅದನ್ನು ಒಂದು ಪಕ್ಷಿಯು ಬಂದು ಎತ್ತಿಕೊಂಡು ಹೋಯಿತು.

ಧನಿಕನು ಚಕಿತನಾದನು. ಒಳ್ಳೇದು. ಯಾವನೂ ಯಾರಿಗೂ ಉಣ್ಣಲು ಕೊಡಲಾರನು. ಯಾರೂ ಯಾರ ಭಾಗವನ್ನೂ ಉಣ್ಣಲಾರರು. ಎಲ್ಲರಿಗೂ ಊಟ ಕೊಡುವವನು ದೇವರು.

೨

ನಾವಿಬ್ಬರೂ ಅಣ್ಣ ತಮ್ಮಂದಿರು ಸ್ವಲ್ಪ ದೊಡ್ಡವರಾದ ಮೇಲೆ ಹುಡುಗರು ನಮ್ಮನ್ನು ಆಡಿಸತೊಡಗಿದರು. ನಾನು ಬಹಳೇ ಸುಂದರನಿದ್ದೆನು. ನನ್ನನ್ನು ಒಬ್ಬ ಪಂಡಿತನ ಮಗನು ಕರೆದುಕೊಂಡು ಹೋದನು. ನನ್ನ ತಮ್ಮನನ್ನು ಒಬ್ಬ ಡಫಾಲಿಯ (ಡಫಲಿ ಬಾರಿಸುವ ಮುಸ್ಲಿಮರ ಜಾತಿಯ) ಹುಡುಗನು ಕರೆದುಕೊಂಡು ಹೋದನು ನಾನು ಪಂಡಿತನ ಮನೆಯಲ್ಲಿಯೂ ನನ್ನ ತಮ್ಮನು ಡಫಾಲಿಯ ಮನೆಯಲ್ಲಿಯೂ ಪೋಷಿತರಾಗತೊಡಗಿದೆವು. ಅವನನ್ನು ಜಕಿಯಾ ಎಂದೂ ನನ್ನನ್ನು ಕಲ್ಲೂ ಎಂದು ಕರೆಯತೊಡಗಿದರು.

ಚಳಿಗಾಲವಿತ್ತು. ಹುಡುಗರೆಲ್ಲರೂ ಬಿಸಿಲು ಕಾಸುತ್ತ ಕುಳಿತಾಗ ನಮ್ಮನ್ನು ಅವರು ತೊಡೆಯಮೇಲೆ ತೆಗೆದುಕೊಂಡು ಮುದ್ದಿಸುತ್ತಿದ್ದರು. ಕೆಲವರು 'ನಮ್ಮ ಹುಡುಗನೆಂದೂ ಕೆಲವರು ನಮ್ಮ ಕೂಸೆಂದೂ' ಅನ್ನುತ್ತಿದ್ದರು. ಅವರಲ್ಲೊಬ್ಬನು ನಮ್ಮ ಕಿವಿಹಿಡಿದು ಎತ್ತಿ, ಕಳ್ಳನಿದ್ದಾನೊ ರಾಜನೊ ನೋಡಿರೆಂದು ಹೇಳುತ್ತಿದ್ದನು ನೋವು ತಾಳುವವರೆಗೆ ನಾನು ಮಾತನಾಡುತ್ತಲೇ ಇರಲಿಲ್ಲ. ಆಗ ಎಲ್ಲರೂ ಇವನು ಕಳ್ಳನಿರುವನೆಂದು ಹೇಳುತ್ತಿದ್ದರು. ಆದರೆ ನೋವನ್ನು ಸಹಿಸಲಾರದೆ ಒದರುತ್ತಿದ್ದಾಗ ರಾಜನೆಂದು ಹೇಳತೊಡಗುತ್ತಿದ್ದರು ಈ ತರದ ಆಟವನ್ನು ದಿನಾಲು ಎಷ್ಟೋ ಬಾರಿ ಆಡುತ್ತಿದ್ದರು. ಮತ್ತೊಬ್ಬನು ನಮ್ಮ ಮುಂದಿನ ಎರಡು ಕಾಲುಗಳನ್ನು ಎತ್ತಿಹಿಡಿದು , ನನ್ನ ಕೂಸು ಎರಡು ಕಾಲುಗಳಿಂದಲೇ ನಡೆಯುತ್ತದೆಂದು ತೋರಿಸುತ್ತಿದ್ದನು. ಆದರೆ ಕಾಲುಗಳು ನೋಯುತ್ತಿದ್ದರೂ ನಾವೇನು ಮಾಡಬಲ್ಲೆವು. ದೊಡ್ಡ ಹುಡುಗರು ಆಗಾಗ್ಗೆ ಸಣ್ಣ ಮಕ್ಕಳನ್ನು ನನ್ನ ಬೆನ್ನಿನ ಕೂಡ್ರಿಸಿ 'ನಮ್ಮ ಸಣ್ಣ ಮಗುವು ಆನೆಯ ಮೇಲೆ ಕೂತಿದೆ' ಎಂದು ಅನ್ನುತ್ತಿದ್ದರು ಆದರೆ ಆ ಮಗುವಿನ ಭಾರವನ್ನು ತಾಳುವದು ಹೇಗೆ? ಕೂಗಿಕೊಂಡಾಗ ಜೀವ ಉಳಿಯುತ್ತಿತ್ತು. ಕೆಲವು ಹುಡುಗರು ಕೊರಳಲ್ಲಿ ಹಗ್ಗಕಟ್ಟಿ ಓಡಿಸುತ್ತಿದ್ದರು. ಅವರಷ್ಟು ವೇಗದಿಂದ ಹೇಗೆ ಓಡಬಲ್ಲೆ. ಆದರೂ ಅವರು ತಮ್ಮ ಆಟದ ಭರದಲ್ಲಿ ನಮ್ಮನ್ನು ಎಳೆದುಕೊಂಡು ಹೋಗುತ್ತಿದ್ದರು. ನಮ್ಮ ದೇಹವೆಲ್ಲವೂ ನೋವಾಗುತ್ತಿತ್ತು. ಅವರಲ್ಲಿ ನಮಗೆ

ನೆರವನ್ನು ನೀಡುವಂಥವರಾದರೂ ಯಾರು? ಆಗಾಗ್ಗೆ ಅಲ್ಲಿಯೇ ಸಮೀಪ ದಲ್ಲಿದ್ದ ಒಂದು ನೀರಿನ ಗುಂಡಿಯಲ್ಲಿ ಹಾಕಿ ನಾನು ಈಜುವದನ್ನು ನೋಡು- ತ್ತಿದ್ದರು. ಹೊರಗೆ ಬರಲು ಒದ್ದಾಡುತ್ತಿರುವಾಗ ಕಲ್ಲೂ ಹೇಗೆ ಈಜು- ತ್ತಿರುವನು ನೋಡಿರೆಂದು ಹೇಳುತ್ತ ಎಲ್ಲ ಹುಡುಗರೂ ಖೊಳ್ಳೆಂದೂ ನಗುತ್ತಿದ್ದರು. ಆಗ್ಗೆ ನಾನು ಮುಳುಗುತ್ತ ಏಳುತ್ತ ಜೋರಿನಿಂದ ಹೇಗಾ- ದರೂ ಮಾಡಿ ದಂಡೆಗೆ ಬರುತ್ತಿದ್ದೆ. ಚಳಿಯಿಂದ ನಡುಗುತ್ತಿದ್ದೆ. ಸ್ವಲ್ಪ ಬಿಸಿಲು ಕಾಸಿ ಬೆಚ್ಚಗಾಗುವದರೊಳಗೆ ಮತ್ತೊಬ್ಬನು ಈಸಲ ನನ್ನ ಸರತಿ ಇರುವದೆಂದು ಹೇಳುತ್ತಲಿದ್ದ. ಅದನ್ನು ಕೇಳುತ್ತಲೇ ನನ್ನ ಪ್ರಾಣವೇ ಹಾರಿಹೋಗುವಂತಿತ್ತು. ಆದರೆ ಓಡಿ ಹೋಗುವದಾದರೂ ಎಲ್ಲಿಗೆ? ಮತ್ತೆ ಅಷ್ಟರಲ್ಲೇ ಯಾರೋ ನೀರಿನಲ್ಲಿ ಒಗೆದುಬಿಡುತ್ತಿದ್ದರು. ನನಗೆ ಆಗ ಎಷ್ಟು ಸಿಟ್ಟು ಬರುತ್ತಿತ್ತೆಂಬುದನ್ನು ಹೇಳಲಿ? ಯಾರಾದರೂ ಈ ದುಷ್ಟ ಹುಡುಗರನ್ನು ಇದರಂತೆ ನೀರಿನಲ್ಲಿ ಮುಳುಗಿಸಿದರೆ ಅವರ ಕಣ್ಣುಗಳು ತೆರೆಯುವವೆಂದು ನನ್ನ ಮನಸ್ಸಿಗೆ ಅನಿಸುತ್ತಿತ್ತು. ನಮ್ಮಿಬ್ಬರಲ್ಲಿ ಒಬ್ಬರೂ ಸುಖಿಯಾಗಿದ್ದಿಲ್ಲ. ಆದರೆ ಜಕಿಯಾನ ಸ್ಥಿತಿಯು ನನಗಿಂತಲೂ ಉತ್ತಮ ವಿತ್ತು. ಪಂಡಿತರ ಮನೆಯಲ್ಲಿ ನನಗೆ ಒಣಗಿದ ಊಟವು, ಅದೂ ಪ್ರಮಾಣ ದಲ್ಲಿ ಕಡಿಮೆ ದೊರೆಯುತ್ತಿತ್ತು. ಇದರಿಂದ ನಾನು ಎರಡನೆಯವರ ಬಾಗಿಲಿಗೆ ಹೋಗುವ ಪ್ರಸಂಗ ಬರುತ್ತಿತ್ತು.

ಡಫಾಲಿಯು ಮಾಂಸಾಹಾರಿ ಇದ್ದನು. ಇದರಿಂದ ಅವನ ಮನೆಯಲ್ಲಿ ಅದೇ ಆಹಾರವಿರುತ್ತಿತ್ತು. ತಮ್ಮನಾದ ಜಕಿಯಾನಿಗೆ ಸಾಕಷ್ಟು ಆಹಾರ ದೊರೆಯುತ್ತಿತ್ತು. ಎರಡನೆಯವರ ಬಾಗಿಲಿಗೆ ಆಹಾರಕ್ಕಾಗಿ ಅವನಿಗೆ ಹೋಗುವ ಪ್ರಸಂಗ ಬರುತ್ತಿರಲಿಲ್ಲ. ಅವನಿಗೆ ನಿಶ್ಚಿಂತತೆಯಿಂದ ಹೊಟ್ಟೆ ತುಂಬ ಆಹಾರ ದೊರೆಯುತ್ತಿದ್ದುದರಿಂದಲೂ ಅವನು ಆರೋಗ್ಯವಂತನೂ ಬಲಿಷ್ಠನೂ ಆಗತೊಡಗಿದನು. ನಾನು ಹಸಿವೆಯಿಂದ ಬಳಲುತ್ತಿರುವಾಗ ನನಗೇನಾದರೂ ಅಲ್ಪಸ್ವಲ್ಪ ಸಿಗಬಹುದೆಂದು ಭಾವಿಸಿ ಆ ಕಡೆಗೆ ಹೋಗು- ತ್ತಿದ್ದೆನು. ಜಕಿಯಾನೂ ಒಂದೇ ರಕ್ತದಿಂದ ಹುಟ್ಟಿದ ನನ್ನ ತಮ್ಮನಿರುವದ- ರಿಂದ ಅವನನ್ನು ಕೇಳಿಕೊಂಡರೆ ಏನಾದರೂ ದೊರೆಯಬಹುದೆಂದು ವಿಚಾರ ಮಾಡುತ್ತಿದ್ದೆನು. ಆದರಿಂದ ಅವನಿಗೆ ಹಾನಿಯಂತೂ ಇಲ್ಲ. ನಾನೇನೂ

ಅವನ ಆಹಾರದಲ್ಲಿ ಪಾಲನ್ನು ಇಚ್ಛಿಸುತ್ತಿದ್ದಿಲ್ಲ. ಅವನ ಎಂಜಲವಾದರೂ ಸಾಕೆಂದು ಭಾವಿಸುತ್ತಿದ್ದೆ. ಆದರೆ ಅವನು ನನ್ನನ್ನು ನೋಡಿದೊಡನೆ ನಾನೊಬ್ಬ ವೈರಿಯಿರುವೆನೆಂದು ತಿಳಿದು ನನ್ನ ಮೇಲೆ ಕೂಗುತ್ತ ಏರಿ ಬರುತ್ತಿದ್ದನು. ನನಗಿಂತ ಬಲಿಷ್ಠನಿರುವದರಿಂದ ನಾನು ಅವನನ್ನು ಎದುರಿಸಲು ಅಸಮರ್ಥ ನಿದ್ದೆ. ನನ್ನನ್ನು ತನ್ನ ಹಲ್ಲುಗಳಿಂದ ಕಡಿಯುತ್ತ ಕೆಳಗೆ ಕೆಡವಿ ತನ್ನ ಉಗರು ಗಳಿಂದ ಚೂರಿಕೊಳ್ಳುತ್ತಿದ್ದ. ಜೋರಾಗಿ ಒದರುತ್ತ ಬಾಲವನ್ನು ಮುದಡಿಸಿ ಕೊಂಡಾಗ ನನ್ನ ಜೀವವು ಉಳಿದಂತಾಗುತ್ತಿತ್ತು. ಎದ್ದು ಓಡಬೇಕೆನ್ನು ತ್ತಿರುವಾಗ ಪಂಡಿತರ ಹೇಡಿ ನಾಯಿಯು ಓಡುತ್ತಿದೆಯೆಂದು ಘಘಾಲಿಯು ಹೇಳುತ್ತಿದ್ದನು. ಅದರಿಂದ ನನಗೆ ಬಹಳ ದುಃಖವಾಗುತ್ತಿತ್ತು. ನಾನು ಹೋಗಿ ಮತ್ತೆ ಒಳ್ಳೇ ಚಟುವಟಿಕೆಯಿಂದ ಜಕಿಯಾನೊಡನೆ ಕಾದುತ್ತಿರುವಾಗ ಹಸಿವೆಯು ಪರಿವೇ ನನಗಾಗುತ್ತಿರಲಿಲ್ಲ. ನನ್ನ ಚಟುವಟಿಕೆಯನ್ನು ನೋಡಿ ನೆರೆದಿದ್ದ ಜನರು 'ವಾಹ ಕಲ್ಲೂ, ವಾಹ ಕಲ್ಲೂ' ಎಂದೂ ಹುರುಪುಕೊಡು-ತ್ತಿದ್ದರು. ಇದರಿಂದ ಮತ್ತಷ್ಟು ಉತ್ಸಾಹಿತನಾಗಿ ಮತ್ತಷ್ಟು ಜೋರಿನಿಂದ ಹೊಡೆದಾಡುತ್ತಿದ್ದೆ. ಕೊನೆಗೆ ನನಗೆ ಓಡಿ ಹೋಗಲೇಬೇಕಾಗುತಿತ್ತು. ಆವಾಗ ಎಲ್ಲರೂ ಚಪ್ಪಾಳೆ ಇಕ್ಕಿ ನಗೆಯಾಡುತ್ತಿದ್ದರು. ನಿರುತ್ಸಾಹಿಯಾಗಿ ಬಂದ ಮೇಲೆ ನೋಡಿದರೆ ದೇಹವೆಲ್ಲವೂ ರಕ್ತಮಯವಾಗಿರುತ್ತಿತ್ತು. ಎಷ್ಟೋ ತಿಂಗಳುಗಳ ಮೇಲೆ ಗಾಯುಗಳು ಮಾಯುತ್ತಿದ್ದವು. ಗಾಯುಗಳು ಮಾಯ-ವಾದ ಮೇಲೆ ನನ್ನನ್ನು ಸಲಹಿದ ಪಂಡಿತರ ಕೆಟ್ಟ ಹೆಸರನ್ನು ಕಳೆಯಲು ಮತ್ತೆ ಹೋಗಿ ಜಕಿಯಾನೊಡನೆ ಸ್ಪರ್ಧಿಸಬೇಕೆಂದು ಮನಸ್ಸಿನಲ್ಲಿ ಬರುತ್ತಿತ್ತು. ಆದರೆ ನನ್ನ ಅಸಮರ್ಥತೆಯನ್ನು ನೋಡಿ ಸುಮ್ಮನಿರಬೇಕಾಗುತ್ತಿತ್ತು.

ಒಂದು ದಿನ ಜೀವದ ಹಂಗುದೊರೆದು ಜಕಿಯಾನೊಡನೆ ಕಾದುತ್ತಿದ್ದೆ. ಅವನಾದರೂ ಒಳ್ಳೇ ಉತ್ಸಾಹದಿಂದ ನನ್ನೊಡನೆ ಕಾದುತ್ತಿದ್ದ. ಆವಾಗ್ಗೆ ಪಂಡಿತರು ಅಲ್ಲಿಗೆ ಬಂದರು. ಅವರು ಬರುತ್ತಲೇ 'ಹೇಡಿ ಕಲ್ಲೂ, ಹೇಡಿ ಕಲ್ಲೂ' ಎಂದೂ 'ಜಕಿಯಾನನ್ನು ಎದುರಿಸಲಾರ' ಎಂದೂ ಜನರು ಆಡಿಕೊಳ್ಳು ತ್ತಿದ್ದರು. ಇದರಿಂದ ಪಂಡಿತರ ಮುಖವು ನಿಸ್ತೇಜಿತವಾಗಿದ್ದನ್ನು ನೋಡಿ, ಇಂದು ನನ್ನ ಪ್ರಾಣ ಹೋದರೂ ಚಿಂತೆಯಿಲ್ಲ, ಜಕಿಯಾನನ್ನು ಹೊಡೆದು ಕೆಳಗೆ

ಅಪ್ಪಳಿಸಬೇಕೆಂದು ನಿಶ್ಚಯ ಮಾಡಿದೆನು. ಎಷ್ಟೋ ಸಾಹಸದಿಂದ ಹೊಡ ದಾಡಿದೆ ಎಷ್ಟೋ ಪೇಚುಗಳನ್ನು ಹಾಕಿದೆ ಇದರಿಂದ ಜಕಿಯಾನು ಮಾತ್ರ ಒದ್ದಾಡ ತೊಡಗಿದನು. ಇಂದು ಮಾತ್ರ ಕಲ್ಲೂನು ಅದ್ಭುತ ಕಾರ್ಯಮಾಡಿದ ನೆಂದು ನೋಡಿದವರು ಹೇಳತೊಡಗಿದರು. ಮಾಲಿಕನನ್ನು ನೋಡುವದರಿಂದ ಎಲ್ಲರ ಎದೆಯೂ ಉಬ್ಬುವದು ಸರಿ ಇದೆ ಜಕಿಯಾನು ತನ್ನ ಮಾಲಕನನ್ನು ನೋಡಿ ಕೆಳಗೆ ಅಪ್ಪಳಿಸುತ್ತಿದನು. ಆದರೆ ಇಂದು ಕಲ್ಲೂನೂ ಪಂಡಿತನನ್ನು ಕಂಡು ಜಕಿಯಾನನ್ನು ಉರುಳಿಸಿದನು ಎಂದು ಕೂಡಿದವರು ಅನ್ನ ತೊಡಗಿದರು. ಮಾನವನ್ನು ಕಾಯ್ದನೆಂದು ಪಂಡಿತರ ಮುಖ ಅರಳಿದುದನ್ನು ನಾನು ನೋಡಿದೆನು. ಇದರಿಂದ ಅವರು ನನಗೆ ಕೊಡತಕ್ಕ ಆಹಾರವನ್ನು ಹೆಚ್ಚಿಸಿದರು. ಅತ್ತ ಕಡೆಗೆ ಡಫಾಲಿಯು ಜಕಿಯಾನ ಮೇಲೆ ಮತ್ತಷ್ಟು ದಯೆ ತೋರತೊಡಗಿದನು.

ಒಂದು ದಿನ ತಾಯಿಯು ಡಫಾಲಿಯ ಬಾಗಿಲಿಗೆ ಬಂದಳು, ಆಗ ಅಲ್ಲಿ ಜಕಿಯಾ ಇದ್ದಿರಲಿಲ್ಲ. ಡಫಾಲಿಯು ತಾಯಿಯ ದೀನ ಸ್ಥಿತಿಯನ್ನು ನೋಡಿ ಒಂದು ತುಂಡು ರೊಟ್ಟಿಯನ್ನು ಎಸೆದನು. ತಾಯಿಯು ಅದನ್ನು ತೆಗೆದು-ಕೊಳ್ಳಲು ಮುಂದೆ ಹೋಗುತ್ತಲೇ ಜಕಿಯಾ ಬಂದನು. ತಾಯಿಯ ಮೇಲೆ ಮುಗಿದೇ ಬಿದ್ದನು. ಅಕಸ್ಮಾತ್ತಾಗಿ ನಾನೂ ಅಲ್ಲಿಗೆ ಬಂದೆ. ಜಕಿಯಾನಿಂದ ಹೇಗೋ ತಪ್ಪಿಸಿಕೊಂಡು ತಾಯಿಯು ನನ್ನೊಡನೆ ಹೋರಾಡತೊಡಗಿದಳು. ನಾನು ಅವಳನ್ನು ಎದುರಿಸಲು ಇಚ್ಛಿಸುತ್ತಿದ್ದಿಲ್ಲ ಆದರೆ ಅವಳು ತನ್ನ ಎಲ್ಲ ಶಕ್ತಿಯಿಂದ ನನ್ನ ಮೇಲೆ ಏರಿಬಂದಳು. ಆವಾಗ್ಗೆ ನನಗೆ ಬಹಳೇ ನಗೆ ಬಂದಿತು. ಹೊಟ್ಟೆಗಾಗಿ ಜನರು ತನ್ನವರನ್ನು ಮರೆತುಬಿಡುತ್ತಾರೆ. ಇಲ್ಲ ವಾದರೆ ತನ್ನ ತಾಯಿ ಮತ್ತು ತನ್ನ ಒಡಹುಟ್ಟಿದ ತಮ್ಮ ಏಕೆ ಶತ್ರುಗಳಾಗು-ತ್ತಿದ್ದರು. ಇದಂತೂ ನಮ್ಮಂಥ ಪಶುಗಳ ಮಾತಾಯಿತು. ಮನುಷ್ಯರ-ದಂತೂ ದೇವರಿಗೇ ಗೊತ್ತು.

೩

ಪಂಡಿತರ ಮನೆಯಲ್ಲಿ ಸಾಕಷ್ಟು ಧಾನ್ಯವಿತ್ತು. ಮನೆ ಮಾತ್ರ ಗಟ್ಟಿ ಮುಟ್ಟಾದುದಲ್ಲ. ಇಲಿಗಳು ಮಾತ್ರ ತಮ್ಮ ವಾಸಸ್ಥಾನವನ್ನು ಮಾಡಿ-

ಕೊಂಡಿದ್ದವು. ಅವುಗಳ ಉಪದ್ರವದಿಂದ ಮನೆಯವರು ಬಹಳೇ ಬೇಸತ್ತಿದ್ದರು ಇಲಿಬಲಿಯನ್ನಿಟ್ಟು ಅವುಗಳೆಲ್ಲವನ್ನು ಕೊಂದುಬಿಡಬೇಕೆಂದು ಇಚ್ಛಿಸುತ್ತಿದ್ದರು. ಇಲಿಯು ಗಣೇಶನ ವಾಹನವಿದೆ. ಆದಕ್ಕಾಗಿ ಕೊಲ್ಲಬಾರದೆಂದು ಎಷ್ಟು ಧಾನ್ಯತಿನಬಹುದೆಂದು ಪಂಡಿತರು ಹೇಳುತ್ತ ಮಾತನ್ನು ಹೊಡೆದು ಹಾಕುತ್ತಿದ್ದರು. ಇಲಿಗಳು ತಿಂದಷ್ಟು ಧಾನ್ಯದ ನಾಲ್ಕು ಪಟ್ಟು ಧಾನ್ಯವನ್ನು ಗಣೇಶನು ಕೊಡುವನೆಂಬ ವಿಶ್ವಾಸವು ಪಂಡಿತರದಿತ್ತು. ಯಾರಾದರೂ ಇಲಿಬಲೆಯನ್ನು ಉಪಯೋಗಿಸುವದನ್ನು ಕಂಡರೆ ಅವರಿಗೆ ಎಷ್ಟೋ ಉಪದೇಶಮಾಡುತ್ತಿದ್ದರು.

ದೇವತೆಗಳ ಭಕ್ತಿಯ ಚರ್ಚೆಯು ನಡೆಯುವ ಮೊದಲು ಪಂಡಿತರ ಹೆಸರನ್ನು ತೆಗೆದುಕೊಳ್ಳುವಷ್ಟು ಅವರ ಪ್ರಭಾವವು ಜನರ ಮೇಲಾಗಿತ್ತು. ಎಂಥ ಸಜ್ಜನರು, ಇಷ್ಟು ಹಾನಿಯಾಗುತ್ತಿದ್ದರೂ ಇಲಿಗಳನ್ನು ಕೊಲ್ಲುವದಿಲ್ಲ ಇಲ್ಲವಾದರೆ ಜನರು ಮನುಷ್ಯನ ಪ್ರಾಣವನ್ನೆ ತೆಗೆದುಕೊಳ್ಳುತ್ತಿದ್ದರು.

ಇಲಿಗಳು ಕೇವಲ ಧಾನ್ಯವನ್ನು ಊಟಮಾಡಿಕೊಂಡು ಹೋಗುವವರೆಗೆ ಪಂಡಿತರು ತಮ್ಮ ಪ್ರತಿಜ್ಞೆಗನುಸಾರ ತಾಳಿಕೊಂಡರು ಆದರೆ ಅವು ಉಡುತೊಡುವ ಬಟ್ಟೆಗಳನ್ನು ಕಡಿಯತೊಡಗಿದ ಮೇಲೆ ಅವರ ಕಣ್ಣುಗಳು ತೆರೆದವು. ಚಳಿಗಾಲದ ಬಟ್ಟೆಗಳನ್ನು ಕೆಲವು ಪೆಟ್ಟಿಗೆಗಳಲ್ಲಿ ಇಟ್ಟಿದ್ದರು, ಕೆಲವನ್ನು ಕೋಲುಗಳ ಮೇಲೆ ತೂಗುಹಾಕಿದ್ದರು ಬೇಸಿಗೆಯಲ್ಲಿ ಯಾರೂ ಅವುಗಳ ಕಡೆಗೆ ಲಕ್ಷ್ಯವನ್ನು ಕೊಟ್ಟಿದ್ದಿಲ್ಲ. ಮಳೆಗಾಲದಲ್ಲಿ ಅವುಗಳನ್ನು ಬಿಸಿಲಲ್ಲಿ ಹಾಕಲು ತೆಗೆದು ನೋಡಿದಾಗ ಅವು ಇಲಿಗಳಿಂದ ಕಡಿಯಲ್ಪಟ್ಟಿದ್ದವು. ಇಲಿಗಳು ಕಟ್ಟಿಗೆಯ ಪೆಟ್ಟಿಗೆಯನ್ನು ಕೂಡ ಕಡಿದಿದ್ದವು. ಪಂಡಿತರಿಗೆ ಸಿಟ್ಟು ಬಂದಿತು. ಇಲಿಗಳು ಪ್ರತಿಯೊಂದರಲ್ಲಿ ಎಷ್ಟೋ ಛಿದ್ರಗಳನ್ನು ಮಾಡಿದ್ದವು. ನೂರು ಇನ್ನೂರು ರೂಪಾಯಿ ಬೆಲೆ ಬಾಳುವ ವಸ್ತ್ರಗಳು ಹಾಳಾಗಿದ್ದವು. ಇನ್ನು ಇಲಿಗಳ ಸರ್ವ ನಾಶವನ್ನೆ ಮಾಡುವೆನೆಂದು ಪಂಡಿತರು ನಿಶ್ಚಯಮಾಡಿದರು. ಅಂದಿನಿಂದಲೇ ಒಂದು ಬೆಕ್ಕನ್ನು ಸಾಕಿದರು ಮತ್ತು ಇಲಿಬಲೆಯನ್ನೂ ತಂದರು—ಆಮೇಲೇನು? ದಿನಾಲು ಇಲಿಗಳು ಬೀಳತೊಡಗಿದವು. ನನಗಾದರೂ ವಿನೋದದ ಸಾಮಗ್ರಿಯು ದೊರೆತಂತಾಯಿತು. ಹೇಳಬೇಕೆಂದರೆ

ನಾನು ಪೂರ್ಣ ಬ್ರಾಹ್ಮಣನಾಗಿದ್ದೆನು. ಏಕೆಂದರೆ ನನಗೆ ಬ್ರಾಹ್ಮಣರ ಅನ್ನ ನೀರೂ ದೊರೆಯುತ್ತಿತ್ತು. ಮಾಂಸದ ರುಚಿಯಂತೂ ಇದ್ದೇ ಇರಲಿಲ್ಲ. ಆದರೆ ಬೇಟೆಯಾಡುವದು ಮೋಜು ಎನಿಸುತ್ತಿತ್ತು. ಮೋಜು ಏಕೆನಿಸ ಬಾರದು? ಇದು ನನ್ನ ವಂಶದ ಮಾತಿತ್ತು.

ಪಂಡಿತರು ಬಲೆಯ ಬಾಗಿಲನ್ನು ತೆರೆವಾಗ ಕಲ್ಲೂ ಕಲ್ಲೂ ಎಂದು ನನ್ನನ್ನು ಕರೆಯುತ್ತಿದ್ದರು. ಎಲ್ಲಿದ್ದರೂ ನಾನು ಬಾಣದಂತೆ ಸರ್ ಎಂದು ಬಂದುಬಿಡುತ್ತಿದ್ದೆ. ಆ ವೇಳೆಯ ನನ್ನ ಆಟವು ನೋಡುವಂತಹದಿರುತ್ತಿತ್ತು. ಇಲಿಗಳನ್ನು ಆಡಾಡಿಸುತ್ತ ಕೊಂದುಹಾಕುತ್ತಿದ್ದೆ. ಆದರೆ ತಿನ್ನುತ್ತಿದ್ದಿಲ್ಲ.

ಆದರೆ ತಮ್ಮ ಜಕಿಯಾನು ಪಕ್ಕಾ ಮುಸಲ್ಮಾನನಾಗಿದ್ದನು. ದಿನಾಲು ಮಾಂಸ ತಿನ್ನುತ್ತಿದ್ದನು. ಅವನೂ ಈ ಶಿಕಾರಿಯಲ್ಲಿ ಭಾಗ ವಹಿಸುತ್ತಿದ್ದನು ತಾಯಿಯೂ ಕೂಡ ಬರುತ್ತಿದ್ದಳು. ಆವಾಗ್ಗೆ ಅವರ ಹೊಟ್ಟೆ ತುಂಬ ಊಟ ದೊರೆಯತೊಡಗಿತು. ಮನಸ್ಸಿನಲ್ಲಿಯೇ ನಮಗೆ ಆಶೀರ್ವಾದ ಕೊಡತೊಡಗಿದಳು. ಅವಳಿಗೆ ಕಳೆದುಕೊಂಡ ಹಿಂದಿನ ಮಕ್ಕಳ ನೆನಪಾಗುತ್ತಿತ್ತೋ ಏನೊ ಅವು ಬದುಕಿದ್ದರೆ ಅವಳ ಸೇವೆಯನ್ನು ಮಾಡುತ್ತಿದ್ದವು. ಒಂದೆರಡು ಇಲಿಗಳನ್ನು ಹೊಟ್ಟೆಯಲ್ಲಿ ಇಟ್ಟುಕೊಳಲೇ ಎಂದು ತಮ್ಮನ ಮನಸ್ಸಿನಲ್ಲಿ ಬರುತ್ತಿತ್ತು. ಆದರೆ ನಾನು ಮಾತ್ರ ವಾಸನೆಯನ್ನು ಕೂಡ ತೆಗೆದುಕೊಳ್ಳುತ್ತಿದ್ದಿಲ್ಲವೆಂದು ಕಾಲಭೈರವನ ಪ್ರತಿಜ್ಞೆ ಮಾಡಿ ಹೇಳುತ್ತೇನೆ. ಆಗ್ಗೆ ಇಲಿಗಳ ನಾಶವನ್ನು ನಿರ್ದಯವಾಗಿ ಮಾಡುತ್ತಿದ್ದೆವು. ಇವುಗಳಲ್ಲಿ ಪ್ರಾಣವೂ ಇರುವುದೆಂಬುದರ ಅರಿವು ಕೂಡ ಇರುತ್ತಿರಲಿಲ್ಲ. ತಮ್ಮ ವಿನೋದಕ್ಕಾಗಿ ಹುಡುಗರು ಕೊಡುತ್ತಿರುವ ಕಷ್ಟವು ನಿರ್ದಯತೆಯದು ಇರಲಾರದೆಂದು ನಾನು ಭಾವಿಸುತ್ತಿದ್ದೇನೆ. ವಿನೋದದಲ್ಲಿ ಇವುಗಳ ಪರಿವೆಯೇ ಇರದು. ಸ್ವಲ್ಪೇ ಸಮಯದಲ್ಲಿ ಇಷ್ಟು ಇಲಿಗಳ ನಾಶಮಾಡುವದನ್ನು ನೋಡಿ ಪಂಡಿತರು ಸಂತೋಷ ಹೊಂದುತ್ತಿದ್ದರು. ಈಗ ಆ ಗಣೇಶನು ಎಲ್ಲಿ ಹೋದನು. ಇಲಿಗಳು ಗಣೇಶನ ವಾಹನವೀಗ ಇರಲಿಲ್ಲವೇ, ಇವುಗಳ ನಾಶದಿಂದ ಗಣೇಶನು ಸಿಟ್ಟಿಗೆದ್ದು ಇವರನ್ನು ದಂಡಿಸಲಿಕ್ಕಿಲ್ಲವೇ, ಇವರದು ಎಂಥ ತಿಳುವಳಿಕೆ? ಎಂದು ಪಂಡಿತರನ್ನು ಕಂಡಾಗ ನನಗೆ ನಗುಬರುತ್ತಿತ್ತು. ಯಾವ ವಿಷಯದಿಂದ ಜನರಿಗೆ ಹಾನಿಯು ಕಡಿಮೆಯಾಗಿ ತಮ್ಮ ಪ್ರತಿಷ್ಟೆಯು

ಬೆಳೆಯುವದೋ ಅದನ್ನು ಜನರು ಸಂತೋಷದಿಂದ ಸಹನಮಾಡುತ್ತಾರೆ. ಆದರೆ ಹಾನಿಯು ಹೆಚ್ಚಾಗುತ್ತಿದ್ದಾಗ ಮಾತ್ರ ಅವರ ಪ್ರತಿಜ್ಞೆಯು ಹಾಳಾಗಿ ಹೋಗುತ್ತದೆಂದು ಸ್ಪಷ್ಟವಾಗಿ ತಿಳಿದುಬರುತ್ತಿದೆ.

೪

ಹುಡುಗರು ನಮ್ಮನ್ನು ನೀರಿನ ಕುಂಡದಲ್ಲಿ ಒಗೆದು ಆಡಿಸುತ್ತಿದ್ದ ಕುಂಡದಲ್ಲಿಯೇ ಜನರು ಸ್ನಾನಮಾಡುತ್ತಿದ್ದರು, ಬಟ್ಟೆ ಒಗೆಯುತ್ತಿದ್ದರು. ಬಹಳ ಆಳವಾದ ಕುಂಡವಿತ್ತು. ಇದರಿಂದ ೧೨ ತಿಂಗಳೂ ನೀರಿರುತ್ತಿತ್ತು. ಅದು ಗಟ್ಟಿಮುಟ್ಟಾಗಿ ಕಟ್ಟಿರದಿದ್ದರೂ ಅದರಲ್ಲಿ ಸ್ವಚ್ಛ ನೀರಿರುತ್ತಿತ್ತು. ಪಂಡಿತರ ಹೆಂಡತಿಯು ಆ ಕುಂಡದ ಕಡೆಗೆ ಹೋಗಬೇಡಿರಿ, ಎಲ್ಲಿಯಾದರೂ ಮುಳುಗೀರಿ ಎಂದು ತಮ್ಮ ಮಕ್ಕಳನ್ನು ಆಗಾಗ್ಗೆ ಎಚ್ಚರಿಸುತ್ತಿದ್ದಳು. ಸಾಮಾನ್ಯವಾಗಿ ಎಲ್ಲ ತಂದೆ ತಾಯಿಗಳು ತಮ್ಮ ಮಕ್ಕಳಿಗೆ ಈ ತರಹದ ಎಚ್ಚರಿಕೆ ಕೊಡುತ್ತಿದ್ದರು. ಹುಡುಗರು ಕೇಳುವರೇ! ತಂದೆ ತಾಯಿಗಳ ಕಣ್ಣು ತಪ್ಪಿಸಿ ಈ ಕುಂಡದ ಮೇಲೆ ಬಂದು ಅದರಲ್ಲಿ ಕಲ್ಲನ್ನೆಸೆಯುತ್ತ, ಕಪ್ಪೆಗಳನ್ನು ಹೊಡೆಯಲು ಗುರಿಯಿಡುತ್ತ, ವಯಸ್ಸಾದ ಹುಡುಗರು ಅದರಲ್ಲಿ ಜಿಗಿದು ಈಜಾಡುತ್ತ ಇರುತ್ತಿದ್ದರು.

ಸುದೈವಿ ಹುಡುಗರನ್ನು ತಡೆಯಬಲ್ಲವರಾರು? ಊರೊಳಗಿನ ಕೆಲ ಹುಡುಗರು ಈಜಾಡುತ್ತಿದ್ದರು. ಪಂಡಿತರ ಚಿಕ್ಕ ಹುಡುಗನೂ ಅಲ್ಲಿಗೆ ಬಂದನು. ಸ್ವಲ್ಪ ಸಮಯ ದಂಡೆಯ ಮೇಲೆ ನಿಂತ ನಂತರ ನಾನೂ ಏಕೆ ಈಜಬಾರದೆಂಬ ಭಾವನೆಯು ಅವನ ಮನದಲ್ಲಿ ಬಂದಿತು. ಸ್ವಲ್ಪ ಮುಂದಕ್ಕೆ ಸರಿದನೋ ಇಲ್ಲವೋ ಅಷ್ಟರಲ್ಲಿ ಕಾಲುಜಾರಿ ಮುಳುಗತೊಡಗಿದನು.

ಹುಡುಗನು ಮುಳುಗಿದ, ಮುಳುಗಿದ ಎಂದು ಎಲ್ಲ ಹುಡುಗರು ಕೂಗ ತೊಡಗಿದರು. ಆದರೆ ಯಾರಿಗೂ ಹೊರತೆಗೆಯುವ ಸಾಹಸವಿದ್ದಿಲ್ಲ. ಯಾವನಾದರೂ ವಯಸ್ಕನಿದ್ದರೆ ಪ್ರಯತ್ನ ಮಾಡುತ್ತಿದ್ದ. ಮುಳುಗುವವನನ್ನು ತೆಗೆಯಲು ಎಲ್ಲರೂ ಅಂಜುತ್ತಿದ್ದರು. ಸಾಮಾನ್ಯವಾಗಿ ಮುಳುಗುವವನು ತೆಗೆಯುವವನು ಇಬ್ಬರೂ ಕೂಡಿಯೇ ಮುಳುಗುವಷ್ಟು ಗಟ್ಟಿಯಾಗಿ ಪರಸ್ಪರರು ತೆಕ್ಕೆಮುಕ್ಕಿ ಬೀಳುವ ಸಂಭವವಿರುತ್ತದೆ. ಇಂಥ ಕೆಲಸಕ್ಕೆ ಸ್ವಲ್ಪ

ತಿಳುವಳಿಕೆಯುಳ್ಳವನ ಅವಶ್ಯಕತೆ ಇರುವದು. ಅದೇ ಸಮಯಕ್ಕೆ ಪಂಡಿತರ ಹಿರಿ ಹುಡುಗನು ಆಕಸ್ಮಾತ್ತಾಗಿ ಸ್ನಾನಕ್ಕೆಂದು ಬರುತ್ತಲಿದ್ದನು. ತಮ್ಮನು ಮುಳುಗುತ್ತಿರುವದನ್ನು ಕಂಡು ಕೂಡಲೇ ಜಿಗಿದನು ಕಿರಿಯ-ವನು ಹಿರಿಯುವನನ್ನು ಗಟ್ಟಿಯಾಗಿ ಹಿಡಿದನು. ಆದುದರಿಂದ ಇಬ್ಬರೂ ಮುಳುಗತೊಡಗಿದರು. ಆದರೆ ಹುಡುಗರು ಮತ್ತಷ್ಟು ಕೂಗತೊಡಗಿದರು. ತಕ್ಷಣ ಪಂಡಿತರ ಮಕ್ಕಳು ರಾಮೂ ಮತ್ತೂ ಶ್ಯಾಮೂ ಇಬ್ಬರೂ ಮುಳುಗು-ತ್ತಿದ್ದಾರೆ, ಹೊರಗೆ ತೆಗೆಯಿರಿ, ನಡೆಯಿರಿ, ಇಲ್ಲವಾದರೆ ಇಬ್ಬರೂ ಬದುಕ-ಲಾರರು ನಡೆಯಿರಿ ಎಂದು ಊರತುಂಬ ಗದ್ದಲವಾಯಿತು. ಸ್ವಲ್ಪ ಹೊತ್ತಿನಲ್ಲಿ ಹೊಂಡದ ದಂಡೆಯ ಮೇಲೆ ಗಂಡಸರು ಹೆಂಗಸರು ಕೂಡಿದರು. ಆದರೆ ಜಿಗಿದು ತೆಗೆಯಲು ಎಲ್ಲರೂ ಹಿಂದು ಮುಂದು ನೋಡುತ್ತಿದ್ದರು. ಇಷ್ಟರಲ್ಲಿ ನಾನೂ ಅಲ್ಲಿಗೆ ಬಂದೆ. ಎಲ್ಲ ವಿಷಯವೂ ತಿಳಿಯಿತು. ಕೂಡಲೇ ಬಾಣದಂತೆ ನೀರಿನಲ್ಲಿ ಧುಮುಕಿದೆ. ಅಷ್ಟರಲ್ಲಿ ಅವರಿಬ್ಬರು ಬಹುಶಃ ಮುಳುಗಿದ್ದರು. ಆದರೆ ಸ್ವಲ್ಪ ಸ್ವಲ್ಪ ಕೂದಲು ಕಂಡುಬರುತ್ತಿತ್ತು. ಹಲ್ಲು ಗಳಿಂದ ಅವರಿಬ್ಬರ ಕೂದಲುಗಳನ್ನು ಹಿಡಿದು ಸಂಕೇತ ಮಾಡುತ್ತ ದಂಡೆಗೆ ಎಳೆದು ತಂದೆ. ನನ್ನ ಈ ಸಾಹಸವನ್ನು ನೋಡಿ ಜನರು ಬೆರಗಾದರು. ಪಂಡಿತರು ತಮ್ಮ ಯಾವದೋ ಕೆಲಸಕ್ಕಾಗಿ ಹೊರಗೆ ಹೋಗಿದ್ದರು. ಆಕಸ್ಮಿಕ ವಾಗಿ ಅವರೂ ಅದೇ ವೇಳೆಗೆ ಅಲ್ಲಿಗೆ ಬಂದಿದ್ದರು, ಹಾಗೂ ಜನರ ಗದ್ದಲ-ವನ್ನು ನೋಡಿ ಹೊರಗೇ ಇದ್ದರು. ಒಂದು ಕ್ಷಣದಲ್ಲಿ ಅವರಿಗೆ ಎಲ್ಲ ವಿಷಯ-ಗಳೂ ತಿಳಿದುಬಂದುವು. ಆಮೇಲೆ ಅವರು ನನ್ನನ್ನು ಎತ್ತಿಕೊಂಡು ತಬ್ಬಿಕೊಂಡರು. ಪಂಡಿತರು ಬರುವ ಮೊದಲೇ ಜನರು ಆ ಇಬ್ಬರು ಹುಡುಗರ ಹೊಟ್ಟೆಯೊಳಗಿಂದ ನೀರನ್ನು ಹೊರಗೆ ತೆಗೆದಿದ್ದರು. ಅವರು ಆರೋಗ್ಯವಾಗಿದ್ದರು. ಈಗ ಊರ ತುಂಬ ನನ್ನದೇ ಮಾತಾಯಿತು. ಈ ನಾಯಿಯು ಪೂರ್ವ ಜನ್ಮದಲ್ಲಿ ದೇವತೆ ಇದ್ದಿರಬೇಕು. ಅಪ್ಪಿ–ತಪ್ಪಿ ನಾಯಿಯ ಜನ್ಮ ಪಡೆದಿದೆ. ಮಹಾದೇವರ ಕರುಣೆ ಇದೆ. ಸಂತೋಷ-ವಾಗಿರಲೆಂದು ದೇವರಿಚ್ಛೆ ಇದ್ದೇ ಇದೆ. ಅಂದಿನಿಂದ ಪಂಡಿತರು ನನ್ನನ್ನು ತಮ್ಮ ಜೀವಕ್ಕಿಂತ ಹೆಚ್ಚು ಪ್ರೀತಿಸತೊಡಗಿದರು. ನನಗೆ ಉಣ್ಣು ತಿನ್ನುವು ದಕ್ಕಾಗಿ ಎರಡನೆಯವರ ಕಡೆಗೆ ಹೋಗುವ ಪ್ರಸಂಗವೇ ಬರುತ್ತಿರಲಿಲ್ಲ.

ಆಗ್ಗೆ ಜಕಿಯಾನು ಬಂದಿದ್ದನು. ಅವನ ಮೂರ್ಖತೆಯನ್ನು ನೋಡಿರಿ ನಾನು ಮುಳುಗುತ್ತಿರುವ ಹುಡುಗರನ್ನು ಹೊರಗೆ ಎಳೆದು ತರುತ್ತಿರುವಾಗ ಅವನು ಹೊರಗೆ 'ಹಾವ್. ಹಾವ್' ಎಂದು ಕೂಗಿಕೊಳ್ಳುತ್ತಿದ್ದನು. ಜನರು ಅದನ್ನು ನೋಡಿ ಕಲ್ಲು ಹೊಡೆದು ಓಡಿಸುತ್ತಿದ್ದರು. ಇತ್ತ ಗಾಬರಿಯಿಂದ ಮುಳುಗುತ್ತಿದ್ದ ಹುಡುಗರನ್ನು ಬದುಕಿಸುವ ಯತ್ನ ನಡೆದಿತ್ತು. ಅತ್ತ ಇದು ವ್ಯರ್ಥವಾಗಿ ಕೂಗಿಕೊಳ್ಳುತ್ತಿತ್ತು ಡಫಾಲಿಯು ಇದನ್ನು ಕಂಡು ಸಿಟ್ಟಿಗೆದ್ದನು. ಏಕೆ ಸಿಟ್ಟಾಗಬಾರದು? ನನ್ನ ನಾಯಿಯು ಎಂದಾವರೂ ನನ್ನ ಹೆಸರನ್ನು ಮುಂದಕ್ಕೆ ತರುವದೆಂಬ ಆಶೆಯಿತ್ತು. ಅದಕ್ಕೆ ಆವನು ತಿನ್ನುಣ್ಣುವದರಲ್ಲೇನೂ ಕಡಿಮೆ ಮಾಡಿದ್ದಿಲ್ಲ. ಆದರೆ ಅಂದು ಜಕಿಯಾನ ವಿಷಯದಲ್ಲಿ ಎಲ್ಲರ ಬಾಯಿಂದಲೂ ತಿರಸ್ಕಾರದ ಮಾತುಗಳಿದ್ದವು ಅಂದಿನಿಂದ ಅವನು ನನ್ನನ್ನು ಹೆಚ್ಚು ಪ್ರೇಮದಿಂದ ಏಕೆ ಕಾಣತೊಡಗಿದನೆಂಬುದು ತಿಳಿಯದು. ನೋಡಿದಲ್ಲಿಂದ ನನ್ನನ್ನು ಎತ್ತಿಕೊಂಡು ಎಷ್ಟೋ ಹೊತ್ತಿನವರೆಗೆ ಮೈದಡವುತ್ತಿದ್ದನು. ಇದಕ್ಕೆ ನಾನು ಧನ್ಯವಾದ ಅರ್ಪಿಸಲು ಇಚ್ಛಿಸುತ್ತಿದ್ದೆ. ಆದರೆ ಮೂಕಪ್ರಾಣಿಯಾದ ನಾನು ಬಾಲ ಅಲ್ಲಾಡಿಸುವದರ ಬದಲು ಏನು ಮಾಡಬಲ್ಲೆ. ಈಗ ಜಕಿಯಾನ ಬಗ್ಗೆ ಅವನ ಆದರವು ಕಡಿಮೆಯಾಗತೊಡಗಿತು. ನಾನು ನನ್ನ ತಮ್ಮನೊಡನೆ ವೈರ ಸಾಧಿಸಲು ಇಚ್ಛಿಸುತ್ತಿದ್ದಿಲ್ಲ. ಅವನು ಮಾತ್ರ ನನ್ನನ್ನು ತನ್ನ ಶತ್ರು ಎಂದು ಭಾವಿಸಿದ್ದನು. ನೋಡಿದಲ್ಲಿ ಸಿಟ್ಟಿಗೇಳುತ್ತಿದ್ದ. ಅವನು ಬಲಿಷ್ಠನಿದ್ದುದರಿಂದ ನಾನು ಸೋಲಬೇಕಾಗುತ್ತಿತ್ತು.

೫

ಪಂಡಿತರು ತಾವು ತಂದುದರಲ್ಲಿ ತಮ್ಮ ಮಕ್ಕಳಂತೆ ನನಗೂ ಒಂದು ಪಾಲನ್ನಿಡುತ್ತಿದ್ದರು. ನಾನೂ ಯಾವಾಗಲೂ ಅವರ ಜೊತೆಯಾಗಿಯೇ ಇರುತ್ತಿದ್ದೆ. ತಮ್ಮ ಕೆಲಸಕ್ಕಾಗಿ ಅವರು ಹೊರಗೆ ಹೋಗುತ್ತಿದ್ದರೆ ನನಗೆ ಬಹಳ ದುಃಖವಾಗುತ್ತಿತ್ತು. ಅವರು ಮರಳಿ ಬರುತ್ತಲೇ ಬಾಲವಲ್ಲಾಡಿಸುತ್ತ ಕುಣಿಯುತ್ತಿದ್ದೆ. ಇದರಿಂದ ಅವರೂ ಸಂತೋಷವಾಗಿರುತ್ತಿದ್ದರು.

ಒಮ್ಮೆ ಪಂಡಿತರ ಒಟಗಡಲೆಯ ಹೊಲದಲ್ಲಿ ಕುರಿಗಳು ಹೊಕ್ಕವು. ಪಂಡಿತರು ನೋಡಿ ಬೆದರಿಸಿದರು. ಕೆಲವು ದಿನಗಳ ಮೇಲೆ ಮತ್ತೆ ಆ ಕುರಬನು ಕುರಿಗಳನ್ನು ಆ ಹೊಲದಲ್ಲಿ ಹೊಡೆಯುವ ಕುಚೇಷ್ಟೆ ಮಾಡಿದನು. ಆವರು ಅವನನ್ನು ಬೆದರಿಸಿವರಲ್ಲದೆ ಎರಡು ಮೂರು ಏಟನ್ನೂ ಕೊಟ್ಟು ಬಿಟ್ಟರು. ಇದರಿಂದ ಆ ಕುರಬನು ಇಂಥ ಕೆಲಸವನ್ನು ಇನ್ನು ಮುಂದೆ ಮಾಡಲಾರನೆಂದು ನಾನು ತಿಳಿದೆನು. ಆದರೆ ಎರಡು ಮೂರು ದಿನಗಳ ನಂತರ ಪಂಡಿತರ ಹೊಲಕ್ಕೆ ಮತ್ತೆ ತನ್ನ ಕುರಿಗಳನ್ನು ಕುರುಬನು ಹೊಡೆದನು. ಪಂಡಿತರು ಬಹಳ ಕುಪಿತರಾದರು. ಅವರು ಅವನನ್ನು ನೆಲಕ್ಕೆ ಕೆಡಹಿ ಚನ್ನಾಗಿ ಥಳಿಸಿದರು. ನಾನೂ ಸಿಟ್ಟಿಗೆದ್ದು ಚನ್ನಾಗಿ ಕಚ್ಚಿದೆನು ಮತ್ತು ಚಿವುಟಿದೆನು.

ಆ ದಿನ ಕುರುಬನು ಹೊರಟು ಹೋದನು. ಮರುದಿನದಿಂದ ನನ್ನನ್ನು ಹುಡುಕತೊಡಗಿದನು. ಪಂಡಿತರ ಜೊತೆಗೆ ನಾನಿದ್ದಾಗ ದುರುಗುಟ್ಟುತ್ತ ಹೋಗುತ್ತಿದ್ದನು. ನನ್ನೊಬ್ಬನನ್ನೇ ಕಂಡರೆ ಅವಶ್ಯವಾಗಿ ಹೊಡೆಯುವನೆಂದು ಊಹಿಸಿದ್ದೆನು ಆದಕ್ಕಾಗಿ ಪಂಡಿತರನ್ನು ಯಾವಾಗಲೂ ಬಿಟ್ಟು ಇರುತ್ತಿದ್ದಿಲ್ಲ.

ಕುರುಬರವನ ಕುರಿಗಳು ಎಂದೂ ಇವರ ಹೊಲದಲ್ಲಿ ಬರಲಿಲ್ಲ. ಆದರೆ ಕುರುಬನು ಸೇಡು ತೀರಿಸಿಕೊಳ್ಳುವ ಯೋಚನೆಯಲ್ಲಿದ್ದನು.

ಪಂಡಿತರ ಕಬ್ಬಿನ ಬೆಳೆಯು ಬಹಳೇ ಚನ್ನಾಗಿತ್ತು. ಇದರಿಂದ ಈಸಲ ಪಂಡಿತರು ಗೆಲ್ಲುವರೆಂದು ಜನರು ಆಗಾಗ್ಗೆ ಹೇಳುತ್ತಲಿದ್ದರು. ಈ ಹೊಲಕ್ಕೆ ಬೆಂಕಿ ಇಟ್ಟರೆ ಎಲ್ಲವೂ ಹಾಳಾಗುವದೆಂದು ಕುರುಬನು ಹೇಳಿದನು. ಅರ್ಧ ರಾತ್ರಿಗೆ ಸರಿಯಾಗಿ ಹೊಲಕ್ಕೆ ಬಂದನು. ಇಲ್ಲಿಯೂ ನನ್ನ ಪಹರೆ ಇರುವದೆಂದು ಹುಡುಗನಿಗೇನು ಗೊತ್ತು. ಬೆಂಕಿಯ ಕಿಡಿಯನ್ನು ಕಬ್ಬಿನ ಹೊಲದಲ್ಲಿ ಒಗೆದು ಓಡಿ ಹೋಗುತ್ತಿರುವಾಗಲೇ ನಾನು ಹಾರಿ ಅವನ ಕಾಲನ್ನು ಹಿಡಿದೆನು. ಗಾಬರಿಯಾಗಿ ಬಿದ್ದನು. ಗಾಬರಿ ಏಕಾಗಬಾರದು. ಕಳ್ಳರ ಧೈರ್ಯವೆಷ್ಟು! ಹುಡುಗನು ಓಡಿಹೋಗುವ ಯತ್ನ ಮಾಡಿದನು. ಆದರೆ ಸಾಧಿಸಲಿಲ್ಲ. ಹೊಲವು ಊರಿನಿಂದ ಹೊಲವು ಸ್ವಲ್ಪ ದೂರದಲ್ಲಿದ್ದುದು

ನೆಟ್ಟಗಿತ್ತು. ಒಮ್ಮೆಲೇ ಬೆಂಕಿಯು ಹೊತ್ತಿತು. ಕೂಡಲೇ ಜನರು ಕೂಡಿದರು. ಕುರುಬನ ಕಾಲನ್ನು ಹಿಡಿದುದನ್ನು ನೋಡಿ ಇದೇ ಈ ದುಷ್ಟನ ಕೆಲಸವೆಂದು ತಿಳಿದರು. ಬಂದವನು ಕುರುಬನನ್ನು ಹೊಡೆದುಕೊಂಡು ಬೆಂಕಿ ನಂದಿಸಲು ಹೋಗುತ್ತಿದ್ದನು. ಈ ದುಷ್ಟ ಹುಡುಗನ ಅವಸ್ಥೆಯು ಸಾಯು ವಂತಾಯಿತು ಇಷ್ಟಾದರೂ ಜನರಿಗೆ ಸಮಾಧಾನವಾಗಲಿಲ್ಲ ಇವನನ್ನು ಪೋಲೀಸ ಚಾವಡಿಗೆ ತೆಗೆದುಕೊಂಡು ನಡೆಯಿರೆಂದು ವಿಚಾರಮಾಡಿದರು. ಆದರೆ ಪಂಡಿತರು ಅವನನ್ನು ಹಾಗೆಯೇ ಬಿಟ್ಟುಕೊಟ್ಟರು. ದೇವರ ಮನಸ್ಸಿಗೆ ಬಾರದಿರುವವರೆಗೆ ಮನುಷ್ಯನೇನೂ ಮಾಡಲಾರನೆಂದು ಹೇಳಿದರು.

ಪಂಡಿತರ ಇಂಥ ವ್ಯವಹಾರವನ್ನು ನೋಡಿ ಜನರು ಬೆರಗಾದರು. ಏಕೆಂದರೆ ಈ ಸ್ಥಿತಿಯಲ್ಲಿ ಇಂಥ ದುಷ್ಟನನ್ನು ಶಿಕ್ಷಿಸಲಾರದೇ ಯಾರೂ ಬಿಡುತ್ತಿದ್ದಿಲ್ಲ. ಎಲ್ಲ ಕಬ್ಬಿನ ಬೆಳೆಯು ಸುಟ್ಟು ಹೋಗಿ ಕುರುಬ ಹುಡುಗನು ಹಿಡಿಯಲ್ಪಟ್ಟಿದ್ದರೆ ಪಂಡಿತರು ಎಂದಿಗೂ ಅವನನ್ನು ಜೀವಂತ ಬಿಡುತ್ತಿದ್ದಿಲ್ಲವೆಂದು ಹೇಳುತ್ತೇನೆ. ಆದರೆ ಇದು ದಯಾಳುಗಳ ಕಾಲವಿತ್ತು. ಯಾಕೆ ಕ್ಷಮಿಸಲಾರರು. ಹೆಸರಿಗಂತೂ ಪಂಡಿತರು, ಬ್ರಾಹ್ಮಣರಿದ್ದರು. ಆದರೆ ಅವರ ಮನೆಯ ಎದುರು ಬಂದ ಭಿಕ್ಷುಕರಿಗೆ ಮಾತ್ರ ಏನೂ ದೊರೆಯುತ್ತಿದ್ದಿಲ್ಲ.

ಅಂದಿನಿಂದ ಪಂಡಿತರು ನನ್ನನ್ನು ಮತ್ತಷ್ಟು ಪ್ರೀತಿಸತೊಡಗಿದರು. ಊರಿನವರೆಲ್ಲರ ಮೇಲೆಯೂ ನನ್ನ ಪ್ರಭಾವವು ಕೂತಿತು ಆದರೆ ಈ ನಾಯಿಯ ಕೊನೆ ಎಂತು ಮಾಡಲಿ ಎಂಬುದನ್ನು ಮಾತ್ರ ಆ ನರಪಿಶಾಚಿಯು ಚಿಂತಿಸುತ್ತಿದ್ದನು. ಹಗಲು ರಾತ್ರಿ ನನ್ನನ್ನು ಹೊಡೆವ ಯೋಚನೆಯಿಂದಲೇ ಹುಡುಕುತ್ತ ತಿರುಗುತ್ತಿದ್ದನು. ಆದರೆ ದೇವರ ದಯದಿಂದ ನನ್ನ ಕೂದ-ಲೆಳೆಯನ್ನೂ ಕೂಡ ಕೊಂಕಿಸಲಾರದಾದನು.

ಕೊನೆಗೆ ಅವನಿಗೊಂದು ಹಂಚಿಕೆಯು ಹೊಳೆಯಿತು. ಅವನು ಜಕಿಯಾನಿಗೆ ಚನ್ನಾಗಿ ತಿನಿಸತೊಡಗಿದನು. ಆ ಸಮಯದಲ್ಲಿ ಆ ಡಫಾಲಿ ಯುವನು ಜಕಿಯಾನನ್ನು ತನ್ನ ಮನೆಯಿಂದ ಹೊರಗೆ ಹಾಕಿಯೇಬಿಟ್ಟಿದ್ದನು. ಆಗಾಗ್ಗೆ ಉಳಿದ ನಾಯಿಗಳಿಗೆ ಒಂದು ತುಂಡನ್ನೆಸೆಯುವಂತೆ ಅದಕ್ಕೂ

ಎಸೆಯುತ್ತಿದ್ದನು. ಒಂದು ದಿನ ರಾತ್ರಿ ಪಹರೆ ಮಾಡುತ್ತ ಒಬ್ಬ ಪೋಲೀಸಿನವನು ಡಫಾಲಿಯ ಮನೆಯೆದುರು ಬಂದನು. ಅಂದು ಜಕಿಯಾನು ಅವನನ್ನು ಕಚ್ಚಿದ್ದನು. ಪೋಲೀಸಿನವನು ಡಫಾಲಿಯವನಿಗೆ ಬಹಳ ಪೀಡಿಸಿದ್ದನು. ಅಂದಿನಿಂದ ಜಕಿಯಾನನ್ನು ಅವನು ತಿರಸ್ಕಾರ ಮಾಡಿದನು. ಜಕಿಯಾನು ತಮ್ಮ ಮನೆಯ ಎದುರು ಇರಬಾರದೆಂಬುದೇ ಅವನ ಇಚ್ಛೆಯಾಗಿತ್ತು. ಆದರೂ ಬಹಳ ದಿನಗಳಿಂದ ಪ್ರೀತಿಸುತ್ತ ಬಂದುದರಿಂದ ಸ್ವಲ್ಪಾದರೂ ತಿನ್ನಲಿಕ್ಕೆ ಕೊಡಬೇಕಾಗುತ್ತಿತ್ತು.

ಜಕಿಯಾನು ಬಲಿಷ್ಠನೇನೋ ಇದ್ದನು. ಆದರೆ ಒಳ್ಳೆ, ಕೆಟ್ಟದರ ಅರಿವಿದ್ದಿಲ್ಲ. ಮನಬಂದಾಗ ಕೆಟ್ಟ ರೀತಿಯಿಂದ ಕೂಗುತ್ತಿದ್ದನು. ಆಗಾಗ್ಗೆ ಗುಡಿಯಲ್ಲಿ ಎಲಬುಗಳನ್ನು ಇಟ್ಟು ಬರುತ್ತಿದ್ದನು. ಇದರಿಂದ ಊರಿನವರೆಲ್ಲರೂ ಕುಪಿತರಾಗುತ್ತಿದ್ದರು. ಬಲಶಾಲಿಯಾಗಿರುವದೊಂದೇ ಗುಣವಿತ್ತು. ಏನು ಶಕ್ತಿಯೋ ಏನೋ, ಎರಡನೆ ಊರಿನ ನಾಯಿಯು ಬಂದು ಅವನನ್ನು ನೋಡಿದರೆ ಹೇಡಿಯಂತಾಗುತ್ತಿತ್ತು. ಮೊದಲು ಹೊಲಗಳನ್ನು ಚಲ್ಲಾಪಿಲ್ಲಿಯಾಗಿ ಮಾಡುತ್ತಿದ್ದ ಜಿಂಕೆಗಳು ಈಗ ಊರಲ್ಲಿಯೇ ಬರುವ ಯೋಚನೆ ಮಾಡುತ್ತಿದ್ದಿಲ್ಲ. ಒಂದು ಕೋತಿಯು ಊರಲ್ಲಿ ಬಹಳ ಉಪದ್ರವ ಕೊಡುತ್ತಿತ್ತು. ಹುಡುಗರ ಕೈಯೊಳಗಿನ ರೊಟ್ಟಿಯನ್ನು ಕಸಿದುಕೊಂಡು ಹೋಗುತ್ತಿತ್ತು. ದಾರಿಯಲ್ಲಿ ಹೋಗುತ್ತಲಿದ್ದ ಹೆಂಗಸರನ್ನು ಅಡ್ಡಗಟ್ಟಿ ಅವರಲ್ಲಿದ್ದುದನ್ನು ಕಸಿದುಕೊಳ್ಳದೆ ಬಿಡುತ್ತಿದ್ದಿಲ್ಲ. ಜನರಿಗೆ ದಾರಿಯಲ್ಲಿ ಹೋಗುವದೇ ಕಷ್ಟವಾಗಿತ್ತು. ಊರೊಳಗಿನ ಮನೆಯ ಮೇಲಿನ ಹಂಚುಗಳೆಲ್ಲವನ್ನೂ ನಾಶಮಾಡುತ್ತಿತ್ತು. ಆಗ ಆ ಕೋತಿಯು ಪುನಃ ಊರಲ್ಲಿ ಮುಖ ತೋರಿಸದಂತೆ ಜಕಿಯಾನು ಬೆದರಿಸಿದ್ದನು.

ನನ್ನೊಡನೆ ಸೇಡನ್ನು ತೀರಿಸಿಕೊಳ್ಳಬೇಕೆಂಬ ಲವಲವಿಕೆಯಿಂದಲೇ ಆ ಕುರುಬ ಹುಡುಗನು ಜಕಿಯಾನನ್ನು ತಿನ್ನುಣ್ಣಿಸಿ ಸಾಕುತ್ತಿದ್ದನು. ಜಕಿಯಾನೂ ಪ್ರತಿಭಾಶಾಲಿ ಇದ್ದನು. ಯಾವಾಗಲೂ ಮೀನ ಮಾಂಸಾಹಾರ ಸೇವಿಸುತ್ತಿದ್ದನು. ಅಂಥವನು ಒಣಹಿಟ್ಟಿನ ಮೇಲೆ ಹೇಗೆ ಜೀವಿಸಬಲ್ಲನು. ಕುರುಬರವನ ಕಣ್ಣು ತಪ್ಪಿಸಿ ಕುರಿಗಳನ್ನು ಸುಲಿಯುತ್ತಿದ್ದನು. ಇದರಿಂದ ಒಂದು ದಿನ ಕುರುಬನು ರೊಚ್ಚಿಗೆದ್ದು ಚನ್ನಾಗಿ ಹೊಡೆದನು. ಅಲ್ಲಿಂದ ಅವನು

ಕಾಲು ಕಿತ್ತಿದನು. ಅವನನ್ನಾರೂ ಕೇಳುತ್ತಿದ್ದಿಲ್ಲ. ತನ್ನವನು ಎಂದು ಹೇಳುವವರು ಯಾರೂ ಇದ್ದಿದ್ದಿಲ್ಲ. ಆದರೆ ಡಫಾಲಿಯವನ ನಾಯಿ ಎಂದೇನೋ ಹೇಳುತ್ತಿದ್ದರು. ಅವನಿಗೂ ಅದಕ್ಕೂ ಏನೂ ಸಂಬಂಧ ಇದ್ದಿದ್ದಿಲ್ಲ.

ಪ್ರಾಣವು ಹೋಗಲಿ ಅಥವಾ ಬಿಡಲಿ, ಹೇಗಾದರೂ ಮಾಡಿ ನನ್ನನ್ನು ಜೀವಂತ ಹೊಡೆಯಬೇಕೆಂದು ಕುರುಬನು ನಿಶ್ಚಯ ಮಾಡಿದನು. ಒಂದು ದಿನ ಆ ದುಷ್ಟನು ಜೀವದಹಂಗುದೊರೆದು ಹೊಡೆದನು. ಆ ಪ್ರಸಂಗವೇ ಹೀಗಿತ್ತು. ಪಂಡಿತರು ಗುಡಿಯಲ್ಲಿ ಪೂಜೆ ಮಾಡುತ್ತಿದ್ದರು. ನಾನು ಅಲ್ಲಿಯೇ ಕೆಳಗೆ ಕೂತುಕೊಂಡು ತೂಕಡಿಸುತ್ತಿದ್ದೆ. ಪಂಡಿತರು ಕಣ್ಣು ಮುಚ್ಚಿ ದೇವರ ಧ್ಯಾನ ಮಾಡುತ್ತಿದ್ದರು. ತನ್ನ ಪೂರ್ಣ ಶಕ್ತಿಯಿಂದ ಬಡಿಗೆಯಿಂದೇನೋ ಹೊಡೆದನು. ಚೀರಿಚಿಕೊಳ್ಳುವಷ್ಟು ಪೆಟ್ಟು ಜೋರಿನಿಂದ ತಾಕಿತು. ಆಮೇಲೆ ನಾನೆಲ್ಲಿರುವೆನೆಂಬುದು ಕೂಡ ನನಗೆ ಗೊತ್ತಾಗಲಿಲ್ಲ. ಎಚ್ಚರವಾದಮೇಲೆ ನೋಡಿದಾಗ ನಾನು ದನದ ಆಸ್ಪತ್ರೆಯಲ್ಲಿದ್ದೆನು. ಕೆಲವು ದಿನಗಳಲ್ಲಿ ಗುಣಹೊಂದಿ ಆಸ್ಪತ್ರೆಯಿಂದ ಮರಳಿ ಬಂದೆ. ಸೊಂಟದಲ್ಲಿಯ ಶಕ್ತಿಯು ಕಡಿಮೆಯಾಗಿತ್ತು. ಪೂರ್ವದಿಕ್ಕಿನ ಹವೆಯು ಬೀಸುತ್ತಿದ್ದಾಗ ಪ್ರಾಣ ಹೋದಂತಾಗುತ್ತಿತ್ತು. ನನ್ನ ಚೀರುವಿಕೆಯನ್ನು ಕೇಳಿ ಪಂಡಿತರು ಪೂಜೆ ಬಿಟ್ಟು ಹೊರಗೆ ಓಡಿ ಬಂದರು, ಕುರುಬರವನು ಎರಡನೇ ಹೊಡೆತ ಹಾಕಲಿರುವದನ್ನು ನೋಡಿ ಓಡಿ ಹೋಗಿ ಹಿಡಿದು ಚನ್ನಾಗಿ ಥಳಿಸಿದರು. ಆಮೇಲೆ ಅವನನ್ನು ಕೈದು ಮಾಡಿಸಿ ೬ ತಿಂಗಳ ಶಿಕ್ಷೆ ಮಾಡಿಸಿದರೆಂದು ಹಿಂದುಗಡೆ ನನಗೆ ತಿಳಿದು ಬಂದಿತು. ಜೇಲಿನಲ್ಲಿ ಆಗುವ ಸುಗತಿ ದುರ್ಗತಿಯನ್ನು ಅವನೇ ಅನುಭವ ಪಡೆಯುವನು ಎಂದು ತಮ್ಮ ಮಿತ್ರರೆದುರು ಪಂಡಿತರು ಹೇಳುತ್ತಿದ್ದುದನ್ನು ನಾನು ಕೇಳುತ್ತಿದ್ದೆ. ಆವಾಗಿನಿಂದ ಪಂಡಿತರ ಬಗ್ಗೆ ಬಹಳೇ ಅಭಿಮಾನವಾಯಿತು. ಪಂಡಿತರು ಇರುವ ವರೆಗೆ ನನಗೇನೂ ಕಷ್ಟವಾಗಲಾರದೆಂದು ವಿಶ್ವಾಸವಿತ್ತು. ನಾನೂ ಒಬ್ಬ ಮನುಷ್ಯನೇಕಾಗಲಿಲ್ಲವೆಂದು ಪಶ್ಚಾತ್ತಾಪ ಪಡುತ್ತಿದ್ದೆ.

ನನ್ನ ತಾಯಿಯ ಸ್ಥಿತಿಯು ದಿನದಿನಕ್ಕೂ ಕೆಡುತ್ತಲಿತ್ತು. ಹಸಿವು, ಚಿಂತೆ ಹಾಗೂ ಹೊಡೆತಗಳಿಂದ ಅವಳು ಹುಚ್ಚಿಯಾಗಿದ್ದಳು, ಒಳ ಮನೆಯಲ್ಲಿ ಮಲಗಿರುತ್ತಿದ್ದಳು. ನಾನೊಮ್ಮೆ ಅವಳನ್ನು ನೋಡಲು ಹೋದೆ

ನಾನು ಓಡಿ ಹೋಗದಿದ್ದರೆ ಕಡಿದು ತಿಂದುಬಿಡುತ್ತಿದ್ದಳೊ ಏನೋ ಎನ್ನುವಷ್ಟು ವೇಗದಿಂದ ನನ್ನ ಮೇಲೆ ಹರಿಹಾಯ್ದು ಜಿಗಿದಳು. ಅಲ್ಲಿಂದ ಜನರು ಹಾಯುವ ವನ್ನು ಬಿಟ್ಟುಬಿಟ್ಟರು. ಆಕಸ್ಮಿಕವಾಗಿ ಅದೇ ದಿನ ಶಿಕ್ಷೆಯನ್ನನುಭವಿಸಿ ಬರುತ್ತಿದ್ದನು. ಅದೇ ದಿನ ದಾರಿಯಲ್ಲಿ ಒಮ್ಮೆಲೆ ತಾಯಿಯು ಸಿಕ್ಕಳು. ಹಾಗೂ ಅವನು ತಪ್ಪಿಸಿಕೊಳ್ಳಲು ಪ್ರಯತ್ನ ಪಟ್ಟರೂ ಅವಳು ಕಚ್ಚಿದಳು. ಅವಳ ಹಲ್ಲುಗಳು ಬಹಳೇ ವಿಷಪೂರಿತವಾಗಿದ್ದವು. ಆದರಿಂದ ಆ ಕುರುಬ ರವನು ಎರಡು ಮೂರು ದಿನಗಳಲ್ಲಿಯೇ ಮರಣ ಹೊಂದಿದನು. ತನ್ನ ವೈರಿ ಯಾಗಿದ್ದರೂ ಕೂಡ ಅವನು ಮರಣಹೊಂದಿದರೆ ಸಂತೋಷಪಡುವದು ಅನುಚಿತವು. ನಾನು ಜಿಗದಾಡತೊಡಗಿದೆ. ಕುರುಬನು ತೀರಿಹೋದುದರಿಂದ ನನಗೆ ಬಹಳೇ ಸಂತೋಷವಾಯಿತು. ಈಗ ನನಗಾರೂ ಶತ್ರುಗಳಿರಲಿಲ್ಲ.

ಆದರೆ ಈ ಸಂತೋಷವೂ ಬಹಳ ದಿನ ಉಳಿಯಲಿಲ್ಲ. ಕುರುಬರವನು ತೀರಿಹೋದ ಎರಡು ಮೂರು ದಿನಗಳ ನಂತರ ನನ್ನ ತಾಯಿಗೆ ಪೋಲಿಸಿನವನು ಗುಂಡು ಹೊಡೆದು ಕೊಂದನು. ಕುರುಬನ ಮರಣದಿಂದ ನನಗಾದ ಆನಂದವೇ ಈ ತಾಯಿಯ ಮರಣದಿಂದ ದುಃಖವನ್ನು ತಂದೊಡ್ಡಿತು. ಎಷ್ಟೋ ದಿನಗಳ ವರೆಗೆ ದುಃಖಿಸುತ್ತಲೇ ಇದ್ದೆ. ತಾಯಿಯ ಮರಣದಿಂದಾಗುವ ಮಾರ್ಮಿಕ ದುಃಖವು ಆಗದ ಮನುಷ್ಯನು ಸಂಸಾರದಲ್ಲಿ ಯಾರಿದ್ದಾರೆ?

ಈಗ ಜಕಿಯಾನ ಹೊರತಾಗಿ ಸಂಬಂಧಿಕರಾರೂ ಇದ್ದಿದ್ದಿಲ್ಲ. ನಾವಿಬ್ಬರೂ ಹೇಗೆ ಮರಣಹೊಂದುವೆವೆಂಬುದನ್ನು ನೋಡೋಣವೆಂದು ಆಗಾಗ್ಗೆ ವಿಚಾರ ಮಾಡುತ್ತಿದ್ದೆ. ತಿನ್ನುಣ್ಣುವದರಿಂದ ನಾನು ಸುಖಿ ಮತ್ತು ಜಕಿಯಾ ದುಃಖಿ ಇದ್ದರೂ ಹೇಳಿಕೊಳ್ಳುವದಕ್ಕೆ ನನಗೊಬ್ಬ ತಮ್ಮನಿದ್ದಾನೆಂಬುದು ಮಾತ್ರ ಸಂತೋಷಕರವಾದುದಿತ್ತು. ಎಂದಾದರೂ ಅವನ ದಿನಗಳೂ ತಿರುಗುವವು. ಮೊದಲು ಅವನು ಸುಖ ಅನುಭೋಗಿಸಿದನು. ನಾನು ದುಃಖಬಟ್ಟೆನು. ಈಗ ನಾನು ಸುಖಿ ಈಗ ಅವನು ದುಃಖಿ. ಎಲ್ಲ ದಿನಗಳು ಎಲ್ಲರಿಗೂ ಯಾವಾಗಲೂ ಸಮವಾಗಿರಲಾರವು.

ಎಂದಾದರೂ ಜಕಿಯಾ ಪಂಡಿತರ ಮನೆ ಎದುರುಬಂದಾಗ ನಾನೇನೂ ಸಿಟ್ಟಿಗೇಳುತ್ತಿದ್ದಿಲ್ಲ, ಇವನೇನಾದರೂ ಸೇಡು ತೀರಿಸಿಕೊಳ್ಳಬಲ್ಲನೆಂದು ಅವ

ನಿಗೆ ಭಯವಾಯಿತು, ಅವನು ನಿಶ್ಚಿಂತನಾಗಿ ತಿನ್ನಲೆಂದು ನಾನು ಅಲ್ಲಿಂದ ಕಾಲ್ದೆಗೆಯುತ್ತಿದ್ದೆ. ಎಂದಾದರೂ ನನಗೆ ಹೆಚ್ಚು ಆಹಾರವು ದೊರೆತಾಗ ನಾನು ಬಾಯಲ್ಲಿಟ್ಟುಕೊಂಡು ಜಕಿಯಾನ ಕಡೆಗೆ ಒರುತ್ತಿದ್ದೆ. ತೋರಿಕೆಗೆ ಅವನು ಸಂತೋಷ ಪ್ರದರ್ಶಿಸುತ್ತಿದ್ದನು. ಆದರೆ ಮನಸ್ಸಿನಲ್ಲಿ ಹೊಟ್ಟೆಕಿಚ್ಚು ಪಡುತ್ತಿದ್ದನು.

೬

ಕೃಷ್ಣಪಕ್ಷವಿತ್ತು. ಪಂಡಿತರ ಮನೆಯವರೆಲ್ಲರು ತಮ್ಮ ನೆಂಟರ ಮನೆಗೆ ಹೋಗಿದ್ದರು. ಮನೆಯಲ್ಲಿ ನಾನು ಮತ್ತು ಪಂಡಿತರು ಇಬ್ಬರೇ ಇದ್ದೆವು, ಪಂಡಿತರು ಗಾಢ ನಿದ್ರೆಯಲ್ಲಿದ್ದರು. ಆದರೆ ನನಗೆಲ್ಲಿ ನಿದ್ದೆ? ಮೇಲಿಂದಮೇಲೆ ಮನೆಯ ಸುತ್ತಲೂ ಕಾವಲ ತಿರುಗುತ್ತಿದ್ದೆ. ಇಂದು ಇಲ್ಲಿ ಶಾಂತವಿದೆಯೆಂದು ಕಳ್ಳರು ತಿಳಿದಿದ್ದರು. ಮನೆಯ ಆಳುಮನುಷ್ಯನಿಂದ ಎಲ್ಲ ಗುಟ್ಟನ್ನು ತಿಳಿದುಕೊಂಡಿದ್ದರು. ಕಾಲು ಸಪ್ಪಳವನ್ನು ಕೇಳಿ ಮನೆಯ ಹಿಂಬದಿಗೆ ಹೋದೆ. ಬಾಗಿಲು ತೆರೆದಿತ್ತು. ಮತ್ತು ಕೆಲವು ಜನರು ಅಲ್ಲಿಯೇ ನಿಂತು ಜಾಗರೂಕತೆಯಿಂದ ಅತ್ತಿತ್ತ ನೋಡುತ್ತ ಪಿಸುಗುಟ್ಟುತ್ತಿದ್ದರು. ನನಗೆ ಅವರ ಮಾತುಗಳು ಕೇಳಬರುತ್ತಿದ್ದಿಲ್ಲ. ಅಲ್ಲಿಂದ ಸ್ವಲ್ಪ ದೂರದಲ್ಲೇ ಇದ್ದೆ. ಮನೆಯೊಳಗಿಂದ ಒಬ್ಬ ಮನುಷ್ಯನು ಪೆಟ್ಟಿಗೆ, ತಂಬಿಗೆ ಮುಂತಾದವು ಗಳನ್ನು ತಂದು ಹೊರಗಿರುವವರಕಡೆಗೆ ಕೊಡುತ್ತಿರುವುದನ್ನು ಕಂಡೆನು. ಈಗ ಎಲ್ಲ ಸಂಗತಿಗಳೂ ನನಗೆ ಗೊತ್ತಾದವು. ಬಹಳ ಗಟ್ಟಿಯಾಗಿ ಕೂಗ ತೊಡಗಿದೆ. ಇದಕ್ಕೆ ಕಳ್ಳರು ನನ್ನಮೇಲೆ ಕಲ್ಲನ್ನೆಸೆಯತೊಡಗಿದರು. ಆದರೆ ಆ ಕಲ್ಲುಗಳಕಡೆಗೆ ನನ್ನ ಲಕ್ಷವೇ ಇದ್ದಿದ್ದಿಲ್ಲ ನನ್ನ ಒಡೆಯನ ಮನೆಯು ಲೂಟಿಯಾಗುತ್ತಿದೆ ಹೇಗೆ ಸಹಿಸಲಿ, ಓಡುತ್ತ ಜಗುಲಿಯಲ್ಲಿ ಮಲಗಿಕೊಂಡ ಪಂಡಿತರಕಡೆಗೆ ಹೋದೆ. ಹಲ್ಲುಗಳಿಂದ ಅವರ ಚಾದರನ್ನು ಜಗ್ಗತೊಡಗಿ ದೆನು. ಇದಕ್ಕೆ ಅವರು ಸಿಟ್ಟಾಗಿ ಎರಡುಮೂರು ಏಟನ್ನೇ ಕೊಟ್ಟರು. ಆದರೆ ನಾನು ಬಿಡಲಿಲ್ಲ. ಮತ್ತೆ ಚಾದರನ್ನು ಜಗ್ಗಿ ಗಟ್ಟಿಯಾಗಿ ಕೂಗತೊಡಗಿದೆನು. ಪಂಡಿತರ ನಿದ್ರೆ ಮುಗಿಯಿತು, ಮನೆ ಲೂಟಿಯಾಗುತ್ತಿದೆಂಬುವದನ್ನು ಹೇಗೆ ತಿಳಿಸಲಿ. ಮನೆಯ ಹಿಂಬದಿಗೆ ಮೇಲಿಂದಮೇಲೆ ಹೋಗಿ ಮತ್ತೆ ಅವರೆದುರು

ಬಂದು ಜೋರಾಗಿ ಒದರಹತ್ತಿದೆ. ಇದರಿಂದ ಪಂಡಿತರು ಮನೆಯ ಹಿಂಬದಿಗೆ ಹೋಗಿ ತಮ್ಮ ಮನೆ ಲೂಟಿಯಾಗುತ್ತಿರುವದನ್ನು ನೋಡಲಿ ಮತ್ತು ಅದನ್ನು ತಡೆಯುವ ಯತ್ನ ಮಾಡಲಿ ಎಂಬುದೇ ನನ್ನ ಇಚ್ಛೆಯಾಗಿದ್ದಿತು. ನನ್ನ ಚಪಲತೆಯಿಂದ ಸಾಮಾನುಗಳನ್ನು ತೆಗೆದುಕೊಂಡು ಹೋಗಬೇಕೆನ್ನುವ ಸಾಹಸವು ಕಳ್ಳರಿಗಾಗಲಿಲ್ಲ. ನಾನು ದಾರಿಯನ್ನು ಅಡ್ಡಗಟ್ಟಿದ್ದೆನು. ಬೆಳಗಾಗುವದಕ್ಕೆ ಸ್ವಲ್ಪೇ ಸಮಯವಿತ್ತು. ಆದುದರಿಂದ ಆ ಎಲ್ಲ ಸಾಮಾನುಗಳನ್ನು ಸಮೀಪದಲ್ಲಿರುವ ಹೊಂಡದಲ್ಲಿ ಬಚ್ಚಿಡುತ್ತಿದ್ದರು. ಮರುದಿನ ರಾತ್ರಿಯಲ್ಲಿ ಎಲ್ಲವುಗಳನ್ನು ತೆಗೆದುಕೊಂಡು ಹೋಗಬೇಕೆನ್ನುವ ಉದ್ದೇಶವಿತ್ತು. ಹೊಂಡದಲ್ಲಿ ಸಾಮಾನುಗಳನ್ನು ಯಾರು ಹುಡುಕುತ್ತಾರೆ?

ಇಂದು ಪಂಡಿತರ ಬುದ್ಧಿಗೇನು ಆಗಿದೆ ಎಂದು ನನಗೆ ಕೋಪ ಬಂದಿತು, ನನ್ನ ಸಂಕೇತವು ಅವರಿಗೇಕೆ ತಿಳಿಯುಲೊಲ್ಲದು. ಅಲ್ಲಿದ್ದ ಸರಕುಗಳು ಇನ್ನೂ ಎಲ್ಲಿಯೂ ಹೊರಗೆ ಹೋಗಿರಲಿಲ್ಲವೆಂಬುದೇ ಸಂತೋಷದ ಸಂಗತಿಯು. ಕೊನೆಗೆ ನನಗೊಂದು ಉಪಾಯವು ಹೊಳೆಯಿತು. ಪಲ್ಲಂಗಿನ ಬುಡಕ್ಕೆ ಲಾಠಿಯು ಬಿದ್ದಿತ್ತು. ಅದನ್ನು ಬಾಯಲ್ಲಿ ತೆಗೆದುಕೊಂಡು ಮನೆಯ ಹಿಂಬದಿಗೆ ಹೊರಟೆ. ನನ್ನ ಸಂಕೇತವು ಪಂಡಿತರಿಗೆ ಅರ್ಥವಾಯಿತು. ಕಳ್ಳರು ಎಲ್ಲ ಸಾಮಾನುಗಳನ್ನು ತೆಗೆದುಕೊಂಡು ಹೋಗುತ್ತಿದ್ದುದನ್ನು ನೋಡಿದರು. ಬಹಳೇ ಅಂಜಿದರು. ಕಳ್ಳರು, ಕಳ್ಳರು. ಎಂಬ ಶಬ್ದಗಳು ಮಾತ್ರ ಅವರ ಬಾಯಿಂದ ಹೊರಬಿದ್ದವು.

ಕಳ್ಳರು ಎಂಬ ಶಬ್ದಗಳನ್ನು ಕೇಳುತ್ತಲೇ ಹಿಡಿಯಿರಿ, ಹಿಡಿಯಿರಿ, ಬಂದೆವು, ಬಂದೆವು ಎಂಬ ಕೂಗು ಸುತ್ತಲಿಂದ ಕೇಳಬಂದಿತು. ಸ್ವಲ್ಪ ವೇಳೆಯಲ್ಲಿಯೇ ಎಲ್ಲ ಜನರು ಲಾಠಿಗಳೊಂದಿಗೆ ಬಂದು ಕೂಡಿದರು. ಆದರೆ ಕಳ್ಳರ ಪತ್ತೆ ಹತ್ತಲಿಲ್ಲ.

ಕಳ್ಳರು ಏನೇನು ತೆಗೆದುಕೊಂಡು ಹೋದರೆಂಬುದರ ಚಿಂತೆಯು ಪ್ರಾರಂಭವಾಯಿತು. ಪಂಡಿತರಿಗೆ ಪ್ರಜ್ಞೆಯೇ ಇರಲಿಲ್ಲ. ಪ್ರಜ್ಞೆ ಬಂದಮೇಲೆ ಪಂಡಿತರು ಮನೆಯ ಒಳಗೆ ಹೋಗಿ ನೋಡಿದರು. ಅಲ್ಲೇನಿದೆ. ಎಲ್ಲವೂ ಮಾಯವಾಗಿದ್ದವು. ತಲೆಗೆ ಸಿಡಿಲು ಬಡಿದಂತಾಯಿತು. ಬಂಧುವೇ, ಸಣ್ಣ

ಮನಸ್ಸು ಮಾಡಬೇಡಿ. ಹಣ-ಕಾಸು ಕೈಗೊಳಗಿನ ಹೊಲಸು. ಇದು ಹೋದರೇಕೆ ಚಿಂತೆ ಎಂದು ಜನರು ಅವರನ್ನು ಸಂಭಾಳಿಸುತ್ತ ತಿಳಿ ಹೇಳ ತೊಡಗಿದರು. ಆದರೆ ಪಂಡಿತರು ಮಾತ್ರ ಬರಿ ಉಸುರ್ಗರೆಯುತ್ತಿದ್ದರು. ನನ್ನಕಡೆಗೆ ಯಾರ ದೃಷ್ಟಿಯೂ ಇರಲಿಲ್ಲ. ನಾನು ಓಡುತ್ತೋಡುತ್ತ ಮೊಂಡದಕಡೆಗೆ ಹೋಗುತ್ತಿದ್ದೆ. ಹಾಗೂ ಜೋರಾಗಿ ಕೂಗುತ್ತಿದ್ದೆ. ಮತ್ತೆ ತಿರುಗಿ ಬಂದು ಪಂಡಿತರ ಕಾಲುಗಳಮೇಲೆ ಮುಖವನ್ನಿಟ್ಟು ಬಾಲವನ್ನು ಅಲ್ಲಾಡಿಸುತ್ತಿದ್ದೆ. ಆದರೆ ಪಂಡಿತರು ತಮ್ಮ ಕಾಲುಗಳನ್ನು ಹಿಂದಕ್ಕೆ ಎಳೆದು ಕೊಳ್ಳುತ್ತಿದ್ದರು. ಕಾಲನ್ನು ಎಳೆದುಕೊಳ್ಳುವದೇನು ವಿಶೇಷವಾದುದಿದ್ದಿಲ್ಲ. ಆದರೆ ನಡುನಡುವೆ ಸಿಟ್ಟಿಗೆದ್ದು ನನಗೆ ಹೊಡೆದೂಬಿಡುತ್ತಿದ್ದರು. ನಾನು ಮಾತ್ರ ನನ್ನ ಕೆಲಸವನ್ನು ಮಾಡುತ್ತಲೇ ಇದ್ದೆ. ಇಷ್ಟು ಹೊತ್ತಾದರೂ ನನ್ನ ಈ ಸಂಕೇತವು ತಿಳಿಯಲಾರದೇ?

ಎಲ್ಲತರಹದ ಜನರಿದ್ದರು. ಪಂಡಿತರಿಗೆ ಸಮಾಧಾನ ಹೇಳುವವರು ಕೆಲವರಾದರೆ ಚೇಷ್ಟೆ ಮಾಡಬೇಕೆಂದು ಯೋಚಿಸುವವರು ಕೆಲವರು. ತಮ್ಮ ಗಳಿಕೆಯಲ್ಲಿಯ ಕೆಲವು ಭಾಗವನ್ನು ದಾನಧರ್ಮಕ್ಕಾಗಿ ಅವಶ್ಯ ಕೊಡಬೇಕು. ಎಲ್ಲವನ್ನೂ ತಾವೇ ಉಪಭೋಗ ಮಾಡಬೇಕೆನ್ನುವವರ ಸ್ಥಿತಿ ಹೀಗೆಯೇ ಆಗುವದೆಂದು ಹೇಳುತ್ತಿದ್ದರು. ಪಂಡಿತರೇ, ಪೋಲೀಸರಿಗೆ ಇವರದೂರು ಕೊಡಿರೆಂದು ಶಾನುಭೋಗನು ತಿಳಿಸಿದನು. ಏನ್ರೀ, ಪೋಲೀಸರ ಕಪಟವು ಹೆಚ್ಚು. ಅವರಾದರೂ ಬಂದು ಸಿಕ್ಕವರನ್ನು ದೋಚಿಕೊಳ್ಳುವವರೇ, ನಾನಾದರೂ ಇಷ್ಟು ವರ್ಷಗಳಿಂದ ಪೋಲೀಸರಿಗೆ ಕಳವುಗಳ ದೂರು ಕೊಟ್ಟಿದ್ದೇನೆ. ಆದರೆ ಕಳವಾಗಿ ಹೋದ ಸಾಮಾನುಗಳು ಸಿಕ್ಕೇಇಲ್ಲ ಎಂದು ಗೌಡನು ಸೂಚಿಸಿದನು.

ಪಂಡಿತರು ಹೃದಯವನ್ನು ಕಲ್ಲುಮಾಡಿ ಹೇಳಿದರು—ಗೌಡರೇ, ನೀವು ಸರಿಯಾಗಿ ಹೇಳಿದಿರಿ. ಭಾಗ್ಯವೇ ಕಸಿದುಕೊಂಡು ಹೋದಮೇಲೆ ಅವು ದೊರೆಯುವದೆಂತು? ಅಲ್ಲಿ ಈ ತರಹದ ಚರ್ಚೆಯು ನಡೆದೇ ಇತ್ತು. ಆದರೆ ನಾನು ನನ್ನ ಕೆಲಸವನ್ನು ಮಾಡುತ್ತಲೇ ಇದ್ದೆ” ನನ್ನ ಈ ತಡೆಯನ್ನು ನೋಡಿ ಅವರಲ್ಲಿಯ ಕೆಲವರು ಪಂಡಿತರ ನಾಯಿಯೂ ಗಾಬರಿಯಾಗಿದೆ ನೋಡಿರೆಂದು ಹೇಳಿದರು. ಪಂಡಿತರು ತಿಳುವಳಿಕೆಯುಳ್ಳವರಿರುವದರಿಂದ

ಶಾಂತರಾಗಿದ್ದಾರೆ. ಇಲ್ಲವಾದರೆ ತಿಳುವಳಿಕೆಯಿಲ್ಲದ ನಾಯಿಯು ಹುಚ್ಚಾಗಿದೆ ಈ ಮಾತು ಕೇಳಿ ನನಗೆ ನಗೆಬರುತ್ತಿತ್ತು, ತಿಳುವಳಿಕೆ ಇಲ್ಲದವರು ಇವರೋ. ಅಥವಾ ನಾನೋ? ಎಷ್ಟೋ ಹೊತ್ತಿನಿಂದ ಸಂಕೇತ ಮಾಡುತ್ತಲೇ ಇದ್ದೇನೆ. ಇವರಾರಿಗೂ ತಿಳಿಯದು, ಆದರೂ ತಾವು ತಿಳುವಳಿಕೆಯುಳ್ಳವರೆಂದು ಹೇಳಿ ಕೊಳ್ಳುತ್ತಾರೆ. ಏನು ಹೇಳಲಿ, ನಾನೂ ಒಬ್ಬ ಮನುಷ್ಯನಾಗಿದ್ದರೆ ತೋರಿಸುತ್ತಿದ್ದೆ.

ಒಮ್ಮೆಲೇ ನನಗೊಂದು ಯುಕ್ತಿಯು ಹೊಳೆಯಿತು. ಗುಂಪನ್ನು ಸರಿ ಸುತ್ತ ನೀರಿನಲ್ಲಿ ಧುಮುಕಿದೆ. ಒಮ್ಮೆಯೇ ಮುಳುಗಿ ತಳಕ್ಕೆ ಹೋದೆನು. ಅಕಸ್ಮಾತ್ತಾಗಿ ಒಂದು ಬಟ್ಟಲವು ಬಾಯಿಯಲ್ಲಿ ಹಿಡಿದು ಹೊರಗೆ ತಂದೇ ಆಗ ನನ್ನ ಮಾತು ಅವರಿಗೆ ತಿಳಿಯಿತು. ಆಮೇಲೇನು! ಕೆಲವು ಜನರು ಹೊಂಡದಲ್ಲಿ ಹಾರಿ ಸ್ವಲ್ಪ ಸಮಯದಲ್ಲಿ ಎಲ್ಲ ಸಾಮಾನುಗಳನ್ನು ಹೊರಗೆ, ತಂದು ಹಾಕಿದರು. ಪಂಡಿತರು ಬಹಳೇ ಸಂತೋಷಪಟ್ಟು ಮೇಲಿಂದಮೇಲೆ ನನ್ನನ್ನು ತಬ್ಬಿಕೊಳ್ಳಹತ್ತಿದರು. ನಾಯಿಗಳಲ್ಲಿ ಈ ತರಹದ ತಿಳುವಳಿಕೆಯು ಳ್ಳದ್ದು ಕಂಡುಬರುದದಿಲ್ಲ, ಇದು ಪೂರ್ವಜನ್ಮದಲ್ಲಿ ಪಂಡಿತನಾಗಿಯೇ ಹುಟ್ಟಿರಬೇಕು. ಯಾವದೋ ಪಾಪ ಪ್ರಾಯಶ್ಚಿತವಾಗಿ ಈ ನಾಯಿಯಾಗಿ ಹುಟ್ಟಿಬಂದಿದೆ ಎಂದು ಎಲ್ಲರೂ ಹೇಳುತ್ತಿದ್ದರು.

ಪುರಾತನಕಾಲದಲ್ಲಿ ಪಶುಗಳು ಕೂಡ ಮನುಷ್ಯರಂತೆ ಮಾತನಾಡುತ್ತಿದ್ದವು, ಹಾಗೂ ಮನುಷ್ಯರ ಮಾತುಗಳನ್ನು ತಿಳಿದುಕೊಳ್ಳುತ್ತಿದ್ದವು ಎಂದು ಒಬ್ಬನು ಹೇಳಿದನು.

ಇದಕ್ಕೆ ಗೌಡನು ಉತ್ತರಿಸಿದುದೇನಂದರೆ ಸತ್ಯವಾದ ಮಾತು. ರಾಮಾಯಣದಲ್ಲಿ ಹೀಗೆ ಬರೆದಿದೆ. ಶ್ರೀರಾಮಚಂದ್ರನಿಗೆ ಒಂದು ನಾಯಿಯು ತನ್ನ ಕಥೆಯನ್ನು ಹೇಳಿತ್ತು. ಒಂದುದಿನ ಶ್ರೀರಾಮಚಂದ್ರನ ದರಬಾರವು ನಡೆದಾಗ ದೊಡ್ಡವರು ಸಣ್ಣವರು, ಬಡವ–ಶ್ರೀಮಂತ ಎಲ್ಲರೂ ಮನ ಬಿಚ್ಚಿ ತಮ್ಮತಮ್ಮ ಸಮಾಚಾರವನ್ನು ಹೇಳುತ್ತಿದ್ದರು. ಅದೇ ಸಮಯಕ್ಕೆ ಒಂದು ನಾಯಿಯು ಬಂದು ಕೈಮುಗಿಯುತ್ತ ಇದುರಿಗೆ ನಿಂತಿತು.

ರಾಮಚಂದ್ರ:— ನಿನಗೇನು ಹೇಳುವದಿದೆ?

ನಾಯಿಯು:— ಭಗವಂತನೇ, ಇಂದು ನನ್ನ ಜೀವನದ ಕೊನೆಯ ದಿನ ವಿದೆ. ಆದುದರಿಂದ ತಮ್ಮ ಎದುರಿಗೆ ತಮ್ಮ ಪ್ರಜೆಗಳಿಗೆ ನನ್ನ ಅನುಭವದ ಕೆಲವು ಉಪಾಯಗಳನ್ನು ಹೇಳುವದು ಉಚಿತವೆಂದು ತಿಳಿದಿದ್ದೇನೆ. ಅವುಗ ಳಿಂದ ಅವರು ತಮ್ಮ ಜೀವನದಲ್ಲಿ ಅವಗುಣಗಳಿಂದ ಅಲಿಪ್ತರಾಗಿರಲಿ.

ನಾಯಿಯ ಸುವಿಚಾರಗಳನ್ನು ಕೇಳಿ ಎಲ್ಲರೂ ದಂಗುಬಡಿದರು, ದರಬಾರದಲ್ಲಿ ಶಾಂತಿಯು ಆವರಿಸಿತು.

ನಿನ್ನ ವಿಚಾರವು ಸತ್ಯವಾದುದು. ಇದರಂತೆ ಎಲ್ಲರೂ ತಮ್ಮ ತಮ್ಮ ಜ್ಞಾನೋಪದೇಶವನ್ನು ಇತರರಿಗೆ ಮಾಡಿದರೆ ದೊಡ್ಡ ಉಪಕಾರವಾಗುವದು. ನೀನು ಇಂದೆಯೇ ಮರಣ ಹೊಂದುವಿ ಎಂಬುದು ನಿನಗೆ ಹೇಗೆ ತಿಳಿಯಿತು. ಇದನ್ನು ಮೊದಲು ನೀನು ಹೇಳು. ಎಂದು ನಾಯಿಗೆ ಶ್ರೀರಾಮಚಂದ್ರನು ಕೇಳಿದನು.

ನಾಯಿಯು:— ಮಹಾರಾಜರೆ, ಇದನ್ನು ನಾನು ತಿಳಿಸಲಿಚ್ಛಿಸಿದ್ದಿಲ್ಲ. ನೀವು ಕೇಳಿದುದರಿಂದ ಹೇಳಲೇಬೇಕಾಯಿತು. ಕರ್ಮದಂತೆ ಫಲವೆಂಬುದು ನನಗೆ ಖಚಿತವಾಗಿದೆ. ಗುಣ ಎಂಬ ಹೆಸರಿನ ಬ್ರಾಹ್ಮಣನ ಮಗನನ್ನು ಕರೆದು ನಿರಪರಾಧಿಯಾದ ನನ್ನನ್ನು ಏಕೆ ಹೊಡೆದನೆಂದು ದಯವಿಟ್ಟು ವಿಚಾ ರಿಸಿರಿ. ಅಷ್ಟರಲ್ಲಿ ಕೊಡಿಸಿದರೆ ನಾನು ಕೂತುಕೊಂಡು ಮಾತನಾಡುವೆನು. ನನ್ನ ಟೊಂಕವು ಮುರಿದುದರಿಂದ ನಾನು ನಿಲ್ಲಲಾರೆನು. ಬಹಳೇ ಪೆಟ್ಟು ತಾಕಿದೆ. ಆದುದರಿಂದ ನನ್ನ ಮೃತ್ಯುವು ಇಂದೆಯೇ ಆಗುವುದೆಂದು ನನ್ನ ನಂಬಿಕೆ.

ಸ್ವಲ್ಪ ಹೊತ್ತಿಗೆ ಪೋಲೀಸರು ಅಪರಾಧಿಯನ್ನು ತಂದು ನಿಲ್ಲಿಸಿದರು. ನೀನು ನಾಯಿಯನ್ನು ಏಕೆ ಹೊಡೆದೆ ಎಂದು ಕೇಳಿದ್ದಕ್ಕೆ ಅವನು ನಮಸ್ಕಾರ ಮಾಡುತ್ತ ಹೇಳಿದನು. ದೀನರಕ್ಷಕನೆ, ನಾನು ನನ್ನ ದಾರಿ ಹಿಡಿದು ಹೋಗು ತ್ತಿದ್ದೆ. ನಡುರಸ್ತೆಯಲ್ಲಿ ಈ ನಾಯಿಯು ಕೂತಿತ್ತು. ಅತ್ತ ಸರಿಯಲು ನಾನು ಎಷ್ಟೋ ಸಾರೆ ಕೇಳಿದೆ. ಆದರೆ ಇದು ಸರಿಯಲಿಲ್ಲ. ಇದರಿಂದ ಕುಪಿತನಾಗಿ ಲಾಠಿಯಿಂದ ಚೆನ್ನಾಗಿ ಬಡಿದೆನು.

ಶ್ರೀರಾಮಚಂದ್ರ:— ಈ ನಾಯಿಯು ನಡುಬೀದಿಯಲ್ಲಿ ಕೂತಿದ್ದರೆ ನೀನು ರಸ್ತೆಯ ಬದಿಯಿಂದ ಏಕೆ ಹೋಗಬಾರದಾಗಿತ್ತು ?

ಗುಣ:— ಭಗವಾನ, ನನ್ನಿಂದ ಅಪರಾಧವಾಯಿತು.

ಶ್ರೀರಾಮಚಂದ್ರ:— ಸಿಟ್ಟು ಬಂದರೆ ಸೊಂಟ ಮುರಿಯುವಷ್ಟು ಜೋರಾಗಿ ಏಕೆ ಹೊಡೆದೆ?

ಗುಣ:— ಮಹಾರಾಜರೆ, ನಾನು ನನ್ನ ಅಪರಾಧವನ್ನು ಒಪ್ಪಿಕೊಳ್ಳುತ್ತೇನೆ. ತಮಗೆ ಉಚಿತವೆನಿಸಿದ ದಂಡನೆಯನ್ನು ಮಾಡಬಹುದು.

ನೀನು ಇವನಿಗೆ ಯಾವ ಶಿಕ್ಷೆಯನ್ನು ಕೊಡಬೇಕೆಂದು ಬಯಸುವಿ ಎಂದು ಶ್ರೀರಾಮಚಂದ್ರನು ನಾಯಿಯನ್ನು ಕೇಳಿದನು.

ನಾಯಿಯು:— ತಮಗೆ ಉಚಿತವೆನಿಸಿದುದನ್ನು ಕೊಡಬಹುದು.

ಶ್ರೀರಾಮಚಂದ್ರ:— ಇದರ ನಿರ್ಣಯವನ್ನು ನಿನಗೇ ಬಿಟ್ಟು ಕೊಡುತ್ತೇನೆ.

ನಾಯಿಯು:— ಹಾಗಾದರೆ ಇವನನ್ನು ಒಂದು ಆನೆಯ ಮೇಲೆ ಕುಳ್ಳಿರಿಸಿ ಅವನ ಮನೆಗೆ ಕಳಿಸಬೇಕು. ಮತ್ತು ನಗರದಲ್ಲಿಯ ರಾಜ ಮಂದಿರದ ಮಠಾಧಿಪತಿಯನ್ನು ಮಾಡಬೇಕು.

ಈ ಮಾತುಗಳನ್ನು ಕೇಳಿ ಎಲ್ಲರೂ ಅಚ್ಚರಿಗೊಂಡರು. ಇದು ಶಿಕ್ಷೆಯೋ ಅಥವಾ ಬಹುಮಾನವೋ! ಶ್ರೀರಾಮಚಂದ್ರನಿಗೂ ಇದರ ರಹಸ್ಯ ಅರ್ಥವಾಗಲಿಲ್ಲ. ನಿನಗೆ ಅಸಭ್ಯ ವ್ಯವಹಾರ ಮಾಡಿದವನಿಗೆ ಇಂಥ ಬಹುಮಾನ ಮಾಡುತ್ತಿರುವೆಯಲ್ಲ! ಎಂದು ಕೇಳಿದನು.

ನಾಯಿಯು:— ಭಗವಾನ್, ಇದು ಪುರಸ್ಕಾರವೆಂದು ತಿಳಿಯಬೇಡಿರಿ. ಇದು ಘೋರ ದಂಡನೆಯು. ಈ ಬ್ರಾಹ್ಮಣ ಹುಡುಗನು ಒಳ್ಳೇ ಆಚರಣೆಯವನಾಗಿದ್ದರೆ ದೇವತಾಮನುಷ್ಯನಾಗುತ್ತಿದ್ದ. ಆದರೆ ಮಠಾಧಿಪತಿಯಾದ ಮೇಲೆ ಇವನು ನಾಯಿಯಾಗುವನು.

ಶ್ರೀರಾಮಚಂದ್ರ:— ಅದು ಹೇಗೆ?

ನಾಯಿಯು:— ಇದೇ ನನಗಾದುದು. ಇದರ ಕಥೆಯನ್ನು ತಮ್ಮ ಮುಂದೆ ನಿವೇದಿಸುವ ಕುರಿತು ಬಂದಿದ್ದೇನೆ. ಇದಕ್ಕೂ ಮೊದಲು ನಾನು ಬ್ರಾಹ್ಮಣ ಕುಲದಲ್ಲಿ ಜನ್ಮವೆತ್ತಿದ್ದೆನು. ನನ್ನ ತಂದೆಯವರೂ ಮಠಾಧಿಪತಿ

ಯಾಗಿದ್ದರು. ಎಂದಾದರೂ ಶ್ರೀಮಂತ ವ್ಯಕ್ತಿಯು ಮಂದಿರಕ್ಕೆ ಬಂದರೆ ದೇವರಿಗೆ ಅಲಂಕಾರ ಮಾಡುತ್ತಿದ್ದರು. ಯಾರೂ ಬರದೇ ಇದ್ದ ದಿನ ಗುಡಿಯ ಬಾಗಿಲವನ್ನು ಕೂಡ ತೆರೆಯುತ್ತಿದ್ದಿಲ್ಲ. ಹೀಗೆಯೇ ಒಂದು ದಿನ ಒಬ್ಬ ಶ್ರೀಮಂತನು ದೇವರ ದರ್ಶನಕ್ಕಾಗಿ ಬಂದಿದ್ದನು. ಆ ದಿನ ತಂದೆ ಯವರು ನಾನಾತರದ ಪಕ್ವಾನ್ನಗಳನ್ನು ಮಾಡಿಸಿ ದೇವರ ನೈವೇದ್ಯಕ್ಕೆ ಒಯ್ದಿದ್ದರು. ಮರಳಿ ಅವರು ಮನೆಗೆ ಬಂದಾಗ ನಾನು ಅಳುತ್ತಿದ್ದೆ. ತಾಯಿಯು ಹಾಲು ಮತ್ತು ಅನ್ನವನ್ನು ಬೆರೆಸುತ್ತಿದ್ದಳು. ತಂದೆ ಯವರನ್ನು ನೋಡುತ್ತಲೇ ಇವರ ಕೈಯಿಂದಲೇ ಹಾಲೂ ಅನ್ನ ಉಣ್ಣುವೆ ನೆಂದು ಹಟ ಹಿಡಿದೆ. ತಂದೆಯವರು ನನ್ನನ್ನು ಬಹಳ ಪ್ರೀತಿಸುತ್ತಿದ್ದರು. ನನ್ನನ್ನು ಕೂಡಲೇ ತೊಡೆಯಮೇಲೆ ಕೂಡ್ರಿಸಿಕೊಂಡು ಉಣಿಸತೊಡಗಿದರು. ಆಗ್ಗೆ ಅವರು ದೇವರ ಪೂಜೆ ಮುಗಿಸಿಕೊಂಡು ಬಂದಿದ್ದರು. ಆದುದರಿಂದ ಅವರ ಉಗುರುಗಳಿಗೆ ತುಪ್ಪವು ಹತ್ತಿತ್ತು. ಬಿಸಿ ಹಾಲಿನ ಕಾವಿನಿಂದ ಅದು ಕರಗಿ ಅದರಲ್ಲಿ ಕೂಡಿತು. ಇದರಲ್ಲಿ ಸ್ವಲ್ಪ ತುಪ್ಪವು ಕೂಡಿರುವುದರಿಂದ ನನಗೆ ಇಂಥ ಘೋರ ಶಿಕ್ಷೆಯಾಗುವದೆಂದು ನನಗೇನು ಗೊತ್ತಿತ್ತು? ನಾನು ವೇದಗಳ ಅಭ್ಯಾಸ ಮಾಡಿದ್ದೆ. ಹಾಗೂ ಮಾಡಿಸಿದ್ದೆ. ಯಜ್ಞಗಳನ್ನು ಮಾಡಿಸಿದ್ದೆ. ನಿಷ್ಠೆಯಿಂದ ನನ್ನ ಧರ್ಮವನ್ನು ನಾನು ಪಾಲನೆ ಮಾಡುತ್ತ ಲಿದ್ದೆ. ಯಮರಾಜನೆದುರು ಹೋದಾಗ ಇವನು ಕಪಟಿ ಮಠಾಧಿಪತಿಯ ಮಗನಿದ್ದಾನೆ, ಅವನು ಗಳಿಸಿ ತಂದ ಅನ್ನ ಉಂಡಿದ್ದಾನೆ, ದೇವರಿಗೆ ಅರ್ಪಿ ಸಿದ ತುಪ್ಪವನ್ನು ಎಂಜಲು ಮಾಡಿದ್ದಾನೆ. ಇದರಿಂದ ಇವನು ನಾಯಿಯ ಜನ್ಮವನ್ನು ಹೊಂದಲಿ ಎಂದು ಅವನು ಹೇಳಿದನು. ನಾನು ಬಹಳೇ ಅತ್ತೆನು. ಆದರೆ ಯಾರೂ ನನ್ನ ದುಃಖವನ್ನು ಕೇಳಲಿಲ್ಲ. ನಾನು ಅದೇ ನಾಯಿಯು, ಇನ್ನು ಈ ಹುಡುಗನಿಗೆ ಕೊಟ್ಟುದುದು ದಂಡವೋ ಬಹುಮಾನವೊ ಎಂಬು ದನ್ನು ನೀವೇ ತಿಳಿದುಕೊಳ್ಳಿರಿ.

ಇಷ್ಟು ಹೇಳಿ ನಾಯಿಯು ಮೂರ್ಛೆಹೊಂದಿತು. ತಿರುಗಿ ಏಳಲಾರದಂತೆ ಧೊಪ್ಪನೆ ಕೆಳಗೆ ಬಿದ್ದುಬಿಟ್ಟಿತು.

ಬೆಳಗಾಗುತ್ತಲಿತ್ತು. ಎಲ್ಲರೂ ತಮ್ಮ ಮನೆಯ ದಾರಿ ಹಿಡಿದರು. ನಾಯಿಯ ಕಥೆಯನ್ನು ಕೇಳಿ ನನಗೆ ಬಹಳ ದುಃಖವಾಯಿತು. ಪಶುಗಳೊಡನೆ

ನ್ಯಾಯದಿಂದ ನಡೆಯುವದೊಂದು ಕಾಲವಿತ್ತು. ಪಶುಗಳ ಜ್ಞಾನದ ಪರಿವೆಯೇ ಇಲ್ಲದೊಂದು ಕಾಲವು ಈಗಿದೆ. ಇವರೊಂದಿಗೆ ಇದು ಪಶುವಾಗಿದ್ದರೂ ಕೂಡ ಇಂಥ ಧೂರ್ತ ಮಠಾಧಿಪತಿಗಿಂತ ನಾನು ಒಳ್ಳೆಯವನಿದ್ದೇನೆಂಬ ಸಂತೋಷವೂ ಆಯಿತು.

ಪಂಡಿತರು ಆ ದಿನದಿಂದ ನನ್ನನ್ನು ಹೆಚ್ಚು ಪ್ರೀತಿಸತೊಡಗಿದರು. ಕಂಡವರೊಡನೆ ನನ್ನ ಚರ್ಚೆಯನ್ನೇ ಮಾಡುತ್ತಿದ್ದರು. ಇದು ನಾಯಿಯಲ್ಲ ನನ್ನ ಪೂರ್ವಜನ್ಮದ ಸಂತತಿ ಇದೆ.

೭

ಅದೇ ಹೊತ್ತಿಗೆ ಅಡವೀ ಹಂದಿಗಳು ಊರನ್ನು ಮುತ್ತಿದವು. ಅವುಗಳ ಉಪಟಳದಿಂದ ಊರಿನಲ್ಲಿ ಹಾಹಾಕಾರವೆದ್ದಿತು. ಅವುಗಳು ಹತ್ತರದಲ್ಲಿದ್ದ ಹೊಲದಲ್ಲಿ ಹೊಕ್ಕು ನಾಶಮಾಡಿಯೇಬಿಡುತ್ತಿದ್ದವು. ಅವುಗಳನ್ನು ಎದುರಿಸುವ ಸಾಮರ್ಥ್ಯವು ಯಾರಿಗಿತ್ತು? ಸಾಯಂಕಾಲವಾದೊಡನೆ ದಾರಿಗಳು ಕಟ್ಟಾಗುತ್ತಿದ್ದವು. ಜೀವದ ಹಂಗುದೊರೆದಾದರೂ ಅವುಗಳ ಮೇಲೆ ಮುಗಿಬಿದ್ದು ಕಾದಲೇ ಎಂದು ಮನಸ್ಸಿನಲ್ಲಿ ಬರುತ್ತಿತ್ತು. ನನ್ನ ಸೊಂಟವು ಇನ್ನೂ ಗುಣವಾಗಿದ್ದಿಲ್ಲ. ಅಂಥ ಭಯಂಕರ ಹಿಂಸ್ರ ಪಶುಗಳೊಡನೆ ಹೇಗೆ ಕಾದಬಲ್ಲೆ? ನಿಃಸಹಾಯಕನಿದ್ದೆ. ಜಕೆಯಾನು ಬಲಿಷ್ಠನಿದ್ದನು ಅವನು ಸಾಹಸ ಮಾಡಿದರೆ ಅವುಗಳಲ್ಲಿ ಕೆಲವನ್ನು ಕೊಂದುಬಿಡಬಹುದಾಗಿತ್ತು. ಆದರೆ ಅವನೊಬ್ಬ ಹೇಡಿಯಿದ್ದನು. ಹಂದಿಗಳ ದರ್ಶನವಾದೊಡನೆ ಎಷ್ಟೋ ಮೈಲುಗಳ ವರೆಗೆ ಓಡಿ ಹೋಗಿ ಇಲ್ಲಿಯ ವರೆಗೆ ಅವು ಬರಲಾರವೆಂದು ತಿಳಿದಮೇಲೆ ಗಂಟಲು ಹರಿಯುವಷ್ಟು ಜೋರಾಗಿ ಕೂಗಿಕೊಳ್ಳುತ್ತಿದ್ದ. ಊರಲ್ಲಿ ಎಷ್ಟೋ ಸಾವಿರ ಜನರಿದ್ದಾರೆ. ಅವುಗಳನ್ನು ಹೊಡೆದೋಡಿಸುವ ಸಾಹಸವು ಮಾತ್ರ ಯಾರಲ್ಲಿಯೂ ಇದ್ದಿಲ್ಲ. ನಾಯಿಗಳನ್ನು ಹೊಡೆಯುವದಕ್ಕೆ ಮಾತ್ರ ತಮ್ಮ ಶಕ್ತಿ ಸಾಮರ್ಥ್ಯವನ್ನು ತೋರಿಸುತ್ತಿದ್ದರು. ಆದರೆ ಹಂದಿಗಳ ಎದುರಿಗೆ ಬೆಕ್ಕಾಗಿರುತ್ತಿದ್ದರು.

ಒಂದು ದಿನ ಜನರು ಪೋಲೀಸ ಚಾವಡಿಗೆ ಹೋಗಿ ದೂರು ಕೊಟ್ಟರು. ಚಾವಡಿಯ ಮುಖ್ಯ ಅಧಿಕಾರಿಯು ಹೆಸರಾಂತ ಬೇಟೆಗಾರನಿದ್ದನು. ಈ ಸಮಾಚಾರವು ತಿಳಿದೊಡನೆ ಕೆಲವು ನಾಯಿಗಳನ್ನು ಸಂಗಡ ತೆಗೆದುಕೊಂಡು

ಊರಲ್ಲಿ ಧಾವಿಸಿದನು. ಊರಿನವರು ಮೋಜನ್ನು ನೋಡಲು ಒಟ್ಟುಗೂಡಿ ದ್ದರು ಪಂಡಿತರೂ ಕೂಡ ನನ್ನನ್ನು ಕರೆದುಕೊಂಡು ಬಂದಿದ್ದರು. ಅವರ ಹುಡುಗನೂ ಹೊರಡುವ ಸಿದ್ಧತೆ ಮಾಡಿದ್ದನು. ಅವನನ್ನು ಸಂಗಡ ಕರೆದು ಕೊಂಡು ಹೋಗಲು ಪಂಡಿತರು ಒಪ್ಪಲಿಲ್ಲ! ಅಲ್ಲೇನು ಮಿಠಾಯಿಗಳನ್ನು ಹಂಚುವರೇನು? ಹೋಗಿ ತೆಗೆದುಕೊಂಡು ಬರಲಿಕ್ಕೆ ಎಂದು ಹೇಳಿದರು. ಎಲ್ಲಿಯಾದರೂ ಹಂದಿಗಳು ಎದುರಿಗೆ ಬಂದರೆ ಪ್ರಾಣ ಉಳಿಯಲಿಕ್ಕಿಲ್ಲ. ನಾನಂತೂ ಊರಿನ ನಾಯಕನಿದ್ದೇನೆ. ನನಗಂತೂ ಬಿಟ್ಟಿದ್ದಲ್ಲ. ನೀನು ತಿಳಿದೂತಿಳಿದೂ ನಿನ್ನ ಪ್ರಾಣವನ್ನು ಸಂಕಟದಲ್ಲೇಕೆ ಹಾಕುವೆ? ಈ ಮಾತು ಗಳನ್ನು ಕೇಳಿ ಹುಡುಗನು ಬೆದರಿ ಹೊರಡುವ ಹೆಸರನ್ನೇ ಎತ್ತಲಿಲ್ಲ.

ನಾನು ಸಿಪಾಯಿಯ ಸಮೀಪಕ್ಕೆ ಬಂದಾಗ ಮೊದಲು ಅವನೊಡನೆ ಬಂದ ನಾಯಿಗಳಮೇಲೆ ನನ್ನ ದೃಷ್ಟಿಯು ಬಿತ್ತು.

ಅವೆಲ್ಲವೂ ಒಂದು ಗಾಡಿಯಲ್ಲಿ ಕೂತಿದ್ದವು. ಜನರು ಅದಕ್ಕೆ ಮೋಟ ರೆಂದು ಹೇಳುತ್ತಿದ್ದರು. ನನ್ನ ಜಾತಿಯಲ್ಲಿಯೂ ಕೂಡ ಆಫೀಸರನ ಕೂಡ ಮೋಟರಿನಲ್ಲಿ ಕುಳಿತುಕೊಳ್ಳುವ ಭಾಗ್ಯವಾನ ಬಂಧುಗಳನ್ನು ನೋಡಿ ಹರ್ಷ ಭರಿತನಾದೆನು. ಎಲ್ಲರೂ ನಿರ್ಮಲರಾಗಿದ್ದರು. ಇಲ್ಲಿ ವರ್ಷದವರೆಗೆ ಸ್ನಾನ ಮಾಡುವ ಪ್ರಸಂಗವೇ ಇದ್ದಿದ್ದಿಲ್ಲ. ಬಾಲಗಳಲ್ಲಿ ಸಾವಿರಾರು ತೊನಸಿಗಳಿ ದ್ದುವು. ನನ್ನ ಈ ಬಂಧುಗಳನ್ನು ನೋಡಿ ನನಗೆ ಹಿಡಿಸಲಾರದಷ್ಟು ಆನಂದ ವಾಗುತ್ತಿತ್ತು. ಆದರೆ ಮೂರ್ಖ ಜಿಯೂನಿಗೆ ಎರಡನೆಯ ಕೆಲಸವಿಲ್ಲ ವೇನೋ ಎನ್ನುವಂತೆ ಅವರನ್ನು ನೋಡಿ ಒಂದೇಸವನೇ ಕೂಗುತ್ತಲೇ ಇದ್ದನು. ಊರ ಜನರು ತಡೆಯುತ್ತಿದ್ದರು, ಬೆದರಿಸುತ್ತಿದ್ದರು, ಕಲ್ಲು ಒಗೆದು ಹೊಡೆಯುತ್ತಿದ್ದರು. ಆದರೆ ಅವನು ಸುಮ್ಮನಾಗುತ್ತಿದ್ದಿಲ್ಲ. ಅವನ ಮನಸ್ಸಿ ನಲ್ಲೇನು ಇತ್ತೆಂಬುದು ತಿಳಿಯುತ್ತಿದ್ದಿಲ್ಲ. ಈ ಜನರು ಊರಿನ ಅಹಿತ ಮಾಡಲಿಕ್ಕೆ ಬಂದಿಲ್ಲವೆಂಬುದುಕೂಡ ಅವನ ಮನಸ್ಸಿನಲ್ಲಿ ಬರಲಿಲ್ಲ. ಇಲ್ಲದಿ ದ್ದರೆ ಜನರು ಅವನನ್ನು ಹೊಡೆದು ಹೊರಗೆ ಹಾಕುತ್ತಿದ್ದಿಲ್ಲವೇ? ಅವನ ಮೂರ್ಖತನವಲ್ಲದೇ ಮತ್ತೇನೆಂದು ಹೇಳಬೇಕು. ಒಬ್ಬರನ್ನೊಬ್ಬರು ಕಂಡರೆ ಇವನು ನನ್ನ ಶತ್ರುವೆಂದು ತಿಳಿದು, ಕೊಲ್ಲಲು ಓಡಿಹೋಗುವದೊಂದು ದೊಡ್ಡ ದೋಷವು ನಮ್ಮ ಜಾತಿಯಲ್ಲಿದೆ. ಇಂಥ ಮೂರ್ಖ ಬಂಧುಗಳನ್ನು

ಕಂಡು ನನಗೆ ಬಹಳ ಸಿಟ್ಟು ಬರುತ್ತದೆ. ಆದರೆ ನಾನು ಕೈದು ಮಾಡಿಸಿ ಕೊಳ್ಳಲ್ಪಡುವೆನು. ಇತರ ಪಶುಗಳನ್ನೂ ನೋಡಿದ್ದೇನೆ. ಅವೆಲ್ಲವೂ ಪ್ರೇಮ ದಿಂದ ಒಂದುಗೂಡುತ್ತವೆ, ಮಲಗುತ್ತವೆ ಮತ್ತು ತಮ್ಮತಮ್ಮಲ್ಲಿ ಯಾರೂ ಚಕಾರ ಶಬ್ದಗಳನ್ನೂ ಆಡುವದಿಲ್ಲ. ನಮ್ಮ ಜಾತಿಯಲ್ಲಿ ಈ ದುರಾಚರಣವು ಎಲ್ಲಿಂದ ಬಂದಿದೆ ಎಂಬುದು ತಿಳಿಯಲೊಲ್ಲದು. ಮನುಷ್ಯರಿಂದಲೇ ಇದು ಬಂದಿರಬೇಕೆಂದು ಅನುಮಾನ ಮಾಡಬಹುದು. ಏಕೆಂದರೆ ತಂದೆ ಮಕ್ಕಳಲ್ಲಿ, ಅಣ್ಣ-ತಮ್ಮಂದಿರಲ್ಲಿ ಹೊಡೆದಾಟವಾಗುತ್ತಿರುವದು ಮನುಷ್ಯರಲ್ಲಿ ಕಂಡುಬರು ತ್ತದೆ. ಅಣ್ಣನು ತಮ್ಮನ ಕೊಲೆ, ತಂದೆಯು ಮಗನ ಕೊಲೆ ಮಾಡುತ್ತಾರೆ. ಗೆಳೆಯ ಮತ್ತೊಬ್ಬ ಗೆಳೆಯನಿಗೆ ಹಾಗೂ ನೌಕರನು ಮಾಲಿಕನಿಗೆ ಮೋಸ ಮಾಡುತ್ತಾನೆ. ನಾವಂತೂ ಮನುಷ್ಯರ ಸೇವಕರಿದ್ದೇವೆ, ಅವರೊಡನೆಯೇ ಇರುತ್ತೇವೆ. ಅವರನ್ನು ನೋಡುತ್ತಲೇ ಈ ತರಹದ ದುರ್ವ್ಯವಹಾರವು ನಮ್ಮಲ್ಲಿ ಬಂದರೆ ಆಶ್ಚರ್ಯವಾಗಬೇಕಾಗಿಲ್ಲ. ನಮ್ಮ ಮಾಲಿಕನಿಗಾಗಿ ಪ್ರಾಣ ವನ್ನು ಕೊಡಲಿಕ್ಕೂ ಸಿದ್ಧರಿರುವೆಂಬುದೊಂದು ದೊಡ್ಡ ಗುಣವು ನಮ್ಮಲ್ಲಿದೆ. ಅವರ ಬೆವರು ಬಿದ್ದಲ್ಲಿ ನಾವು ನಮ್ಮ ರಕ್ತವನ್ನು ಹರಿಸುತ್ತೇವೆ ಮನುಷ್ಯರಲ್ಲಿ ಇಷ್ಟುಕೂಡ ಇಲ್ಲ. ಈ ಸಾಹೇಬರ ನಾಯಿಗಳು ನಾಯಿಗಳೇ. ಅವು ಏಕೆ ಕೂಗುವದಿಲ್ಲ, ಏಕೆ ಇಷ್ಟು ಸಭ್ಯ ಹಾಗೂ ಗಂಭೀರ ಇವೆ? ಯಾರೊಡನೆ ಇದ್ದರೂ ಅವರಲ್ಲಿ ಅವುಗಳ ಒಡಕು ಮೊದಲಾದವಿರುವದಿಲ್ಲ. ನನಗಂತೂ ಅವು ದೇವತೆಗಳಂತೆ ಕಾಣುತ್ತಿತ್ತು. ಅವುಗಳ ಮುಖದಮೇಲೆ ಎಷ್ಟು ಪ್ರಭೆ.

ಸಾಹೇಬರು ತಮ್ಮ ನಾಯಿಗಳ ಜೊತೆಗೆ ಹಂದಿಗಳ ಗುಂಪು ಇದ್ದಲ್ಲಿಗೆ ಬಂದರು. ಅವರು ಸೀಟಿ ಊದಿದಕೂಡಲೆ ಎಲ್ಲ ನಾಯಿಗಳು ಜಾಗೃತವಾದವು; ಅವುಗಳ ಕಣ್ಣುಗಳು ಹೊಳೆಯತೊಡಗಿದವು, ಮೂಗಿನ ಸೊಳ್ಳೆಗಳು ಬಡೆಯ ತೊಡಗಿದವು, ಎದೆಗಳು ಉಬ್ಬಿದವು. ತಮ್ಮ ಒಡೆಯನ ಆಜ್ಞೆಯನ್ನು ಪಡೆಯಲಿಕ್ಕೆ ಆತುರವಾಗಿರುವವೋ ಏನೊ ಎನ್ನುವಂತೆ ಇದ್ದವು. ಅವುಗಳ ಉತ್ಸಾಹವನ್ನು ತಡೆದರೂ ತಡೆಯುತ್ತಿದ್ದಿಲ್ಲ.

ಇಂದು ಶುಭವಿಲ್ಲವೆಂದು ಹಂದಿಗಳು ತಿಳಿದಿದ್ದವು. ಒಂದೂ ಹೊರ ಬಿದ್ದಿದ್ದಿಲ್ಲ. ಹಳ್ಳಿಯ ಜನರು ಒಟ್ಟುಗೂಡಿ ಕಬ್ಬಿನ ಹೊಲವನ್ನು ಹೊಕ್ಕು

ಗದ್ದಲ ಮಾಡತೊಡಗಿದಕೂಡಲೆ ಒಂದು ಹಂದಿಯು ಹೊರಬಿತ್ತು. ಜನ ಸಂದಣಿಯನ್ನು ನೋಡಿ ಗಾಬರಿಯಾಯಿತು. ಯಾವದೊಂದು ಮೂಲೆಯಿಂದ ಹೊರಗೆ ಓಡಿಹೋಗಲು ಆಸುವು ಇರುವದೇನೋ ಎಂದು ನೋಡುತ್ತಿತ್ತು. ಒಮ್ಮೆಲೇ ಅದರಮೇಲೆ ನಾಯಿಗಳು ಮುಗಿಬಿದ್ದವು. ಅದರಿಂದ ಅದು ಸತ್ತು ಹೋಯಿತು. ಅವುಗಳ ಪರಾಕ್ರಮನನ್ನು ನೋಡಿ ಜನರು ಭಲೆ, ಭಲೆ, ಎನ್ನತೊಡಗಿದರು. ನನ್ನ ಬಾಯಿಯಿಂದಲೂ ಶಾಬಾಶ ಬಂಧುಗಳೇ ನೀವೇ ನಿಜವಾದ ಪಿತರು ಎಂದು ಹೊರಟಿತು.

ಈಗ ನನ್ನಲ್ಲಿಯೂ ಉತ್ಸಾಹವು ಉಕ್ಕೇರಹತ್ತಿತು. ಒಂದಿಲ್ಲೊಂದು ದಿನ ಸಾಯಬೇಕು, ಇಂದು ಏನಾದರೊಂದು ಮಹತ್ಕಾರ್ಯ ಮಾಡಿ ತೋರಿಸ ಬೇಕು ಎಂದು ವಿಚಾರ ಮಾಡಿದೆ. ನಮ್ಮ ನಮ್ಮಲ್ಲಿ ಹೊಡೆದಾಡಿಯಾಗಲಿ ಅಥವಾ ಮನುಷ್ಯರಿಂದ ಲಾಠಿ ಹೊಡೆತ ತಿಂದು ಸಾಯುವದಾಗಲಿ ಪರಾಕ್ರಮ ವಲ್ಲ. ಮೈದಾನದಲ್ಲಿ ಸತ್ತರೆ ಹೆಸರಾದರೂ ಉಳಿಯುವದು. ಈ ಊರಲ್ಲಿ ಒಬ್ಬ ವೀರನಿದ್ದಾನೆಂದು ಈ ನಾಯಿಗಳಿಗೂ ಗೊತ್ತಾಗಲಿ, ಇಷ್ಟರಲ್ಲಿ ಎರಡ ನೆಯ ಹಂದಿಯು ಎದುರಿಗೆ ಹೊರಬರುವದು ಕಂಡಿತು. ವಿಲಾಯತಿಯ ನಾಯಿಗಳು ಓಡಿದವು. ಅವುಗಳೊಡನೆ ನಾನೂ ಹೋದೆ. ಬೇಟೆಗಾಗಿ ಮೊದಲು ನಾವೆಲ್ಲರೂ ಮುಟ್ಟೋಣವೆಂದು ಅವು ಇಚ್ಛಿಸುತ್ತಿದ್ದವು. ನಾನು ಮೊದಲು ಮುಟ್ಟಬೇಕೆಂದು ಇಚ್ಛಿಸುತ್ತಿದ್ದೆ. ಜೀವದ ಪರಿವೆಯಿಲ್ಲದೆ ಎಲ್ಲರೂ ಓಡಿದೆವು. ದೈವಯೋಗದಿಂದ ಹಂದಿಯಮೇಲೆ ನನ್ನದೇ ಮೊದಲು ಆಕ್ರಮಣವಾಯಿತು ಉಳಿದ ನಾಯಿಗಳು ಹಿಂದೆ ಬಿದ್ದವು. ಆದರೆ ಹಂದಿಯು ಮಾತ್ರ ಸ್ಥಿರವಾಗಿ ಎದ್ದುನಿಂತಿದ್ದರೆ ನಾನು ಓಡಿಹೋಗಬೇಕಾಗುತ್ತಿತ್ತು. ಆದರೆ ನಮ್ಮನ್ನು ನೋಡಿ ಅದು ಹಾಗೆಯೇ ಮುಂದೆ ಓಡತೊಡಗಿತು. ನಾವು ಹಿಂದಿನಿಂದ ಉಳಿದುಕೊಳ್ಳುತ್ತಲೇ ಇದ್ದೆವು. ನಾವೆಲ್ಲರೂ ಬೆನ್ನಟ್ಟಿ ಅದನ್ನು ಕೊಂದೇಬಿಟ್ಟೆವು. ನನ್ನಲ್ಲಿಯೂ ಸಾಹಸವಿದೆಯೆಂದು ಜನರಿಗೆ ಗೊತ್ತಾ ಯಿತು. ಸಾಹೇಬರು ಸಂತುಷ್ಟರಾಗಿ ನನ್ನನ್ನು ಕರೆದು ತಲೆಯನ್ನು ಚಪ್ಪರಿಸ ತೊಡಗಿದರು. ಪಂಡಿತರು ಕೂಡ ಸಾಹೇಬರ ಹತ್ತಿರವೇ ನಿಂತಿದ್ದರು. ನನ ಗಾಗುತ್ತಿರುವ ಸನ್ಮಾನವನ್ನು ನೋಡಿ ಹಿರಿಹಿರಿ ಹಿಗ್ಗಿದರು.

ಸಾಹೇಬ:— ಒಳ್ಳೇದು ಇದು ಯಾರ ನಾಯಿಯು?

ಪಂಡಿತರು:— ಕೈಮುಗಿಯುತ್ತ ರಾಯರೇ ಇದು ನನ್ನಲ್ಲಿಯೇ ಇರುತ್ತದೆ.

ಸಾಹೇಬ:— ನಿಮ್ಮ ನಾಯಿಯು ಬಹಳ ಪರಾಕ್ರಮಶಾಲಿಯಿದೆ.

ಪಂಡಿತರು:— ತಮ್ಮದೇ ಭಾಗ್ಯ.

ಮಾತುಗಳು ಮುಗಿಮುಗಿಯುವಷ್ಟರಲ್ಲಿ ಮೂರನೆಯ ಹಂದಿಯು ಹೊರಗೆ ಬಂದು ಸಾಹೇಬರಮೇಲೆ ಹಾರಿತು. ಸಾಹೇಬರ ಕೈಕಾಲ್ಲುಗಳಲ್ಲಿ ಉತ್ಸಾಹವು ತುಂಬಿದಂತಾಯಿತು. ಒಂದು ಕ್ಷಣ ತಡವಾಗಿದ್ದರೆ ಸಾಹೇಬರನ್ನು ಕೊಂದುಹಾಕುತ್ತಿತ್ತು. ಅವರ ಹತ್ತಿರ ಬಂದೂಕ ಇದ್ದರೂ ಅದನ್ನು ನಡಿಸಲಾರದಷ್ಟು ಗಾಬರಿಯಾಗಿದ್ದರು. ಈ ಪ್ರಸಂಗವು ಬಹಳ ಸೂಕ್ಷ್ಮವಾದುದಿತ್ತು. ಉಳಿದ ನಾಯಿಗಳೂ ದೂರವಿದ್ದವು. ಅಲ್ಲಿಯೇ ಸಮೀಪದಲ್ಲಿ ನಾನು ನಿಂತಿದ್ದೆನು. ಹಂದಿಯೊಂದಿಗೆ ಹೊಡೆದಾಡುವುದು ಪ್ರಾಣಕ್ಕೆ ಗಂಡಾಂತರ ತಂದುಕೊಂಡಂತೆಯೆ. ಆದರೆ ಸಾಹೇಬರ ಪ್ರಾಣ ರಕ್ಷಣೆ ಮಾಡುವದು ಅಗತ್ಯವಿತ್ತು. ನಾನು ಹಿಂದಕ್ಕೆ ಹಾರಿ ಹಂದಿಯ ಬಾಲವನ್ನು ಹಿಡಿದೆನು. ಅದು ಹಿಂದೆ ತಿರುಗುವುದರಲ್ಲಿತ್ತು. ಅಷ್ಟರಲ್ಲಿ ಸಾಹೇಬರು ಜಾಗರೂಕತೆಯಿಂದ ಬಂದೂಕನ್ನು ಹಾರಿಸಿದರು. ಹಂದಿಯೇನೋ ಕೆಳಗೆ ಸತ್ತು ಬಿದ್ದಿತು. ಆದರೆ ಅದು ನನಗೆ ಬಹಳಷ್ಟು ಗಾಯ ಮಾಡಿತ್ತು. ನಾನೆಲ್ಲಿದ್ದೇನೆಂಬುದು ತಿಳಿಯದಷ್ಟು ಎಚ್ಚರದಪ್ಪಿದ್ದೆ. ನಾನು ಮೆತ್ತನ್ನ ಗಾದಿಯ ಮೇಲೆ ಮಲಗಿದ್ದುದು ಹಾಗೂ ಇಬ್ಬರು ಮೂವರು ನನ್ನ ಗಾಯಗಳನ್ನು ತೊಳೆಯುತ್ತಿದ್ದುದನ್ನು ಎಚ್ಚರವಾದಮೇಲೆ ಕಂಡೆನು

೮

ಸ್ವಪ್ನದಲ್ಲಿಯೂ ಕೂಡ ವಿಚಾರ ಮಾಡದಂಥ ತಿನಿಸುಗಳು ಸಾಹೇಬರ ಬಂಗಲೆಯಲ್ಲಿ ತಿನ್ನಲು ದೊರಕತೊಡಗಿದವು. ಮೊದಲು ನನಗೆ ಆಗಾಗ್ಗೆ ಸೌಭಾಗ್ಯದಿಂದ ಎಲಬಿನ ತುಂಡು ದೊರೆಯುತ್ತಿತ್ತು. ಆದರೆ ಈಗ ಎರಡೂ ಹೊತ್ತು ಹಸಿ ಮಾಂಸವು ದೊರೆಯುತ್ತಿದೆ. ಆಗಾಗ್ಗೆ ಹಾಲೂ ದೊರೆಯುತ್ತಿದೆ. ಅಡಿಗೆಯವನು ದಿನಾಲು ಸಾಬೂನು ಹಚ್ಚಿ ಮೈ ತೊಳೆಯುತ್ತಿದ್ದನು. ಮೊದಲು ನನಗೆ 'ಸಾಬೂನ' ದ ಹೆಸರೇ ಗೊತ್ತಿದ್ದಿಲ್ಲ. ಏಕೆಂದರೆ ಪಂಡಿತರ

ಮನೆಯಲ್ಲಿ ಸಾಬೂನು ಉಪಯೋಗಿಸುವ ರೂಢಿಯೇ ಇದ್ದಿಲ್ಲ. ಸಾಹೇಬರು ಕಲ್ಲೂನೆಗೆ ಸೋಪು ಹಚ್ಚಿ ಸ್ನಾನ ಮಾಡಿಸೆಂದು ತಮ್ಮ ನೌಕರರಿಗೆ ಹೇಳಿದಾಗ ಅವರು ಒಂದು ತುಂಡನ್ನು ತಂದು ನನ್ನ ದುಂಡಗಾದ ಶರೀರದ ಮೇಲೆ ತಿಕ್ಕು ತ್ತಿದ್ದರು. ಆಗ್ಗೆ ನನ್ನ ಶರೀರದಿಂದ ಬೆಳ್ಳಗಿನ ಬುರುಗು ಹೊರಡುತ್ತಿತ್ತು. ಹಾಲಿನ ಬುರುಗಿನಂತೆಯೇ ಇರುತ್ತಿತ್ತು ಅದು. ಮನಸ್ಸಂತೋಷವಾಗುವಂಥ ಸುವಾ ಸನೆಯು ಆ ಬುರುಗಿನಿಂದ ಬರುತ್ತಿತ್ತು. ಸಾಯಂಕಾಲ ಸಾಹೇಬರು ನನ್ನನ್ನು ಮೋಟರ ಮೇಲೆ ಕೂಡಿಸಿಕೊಂಡು ತಿರುಗಾಡಲು ಕರೆದುಕೊಂಡು ಹೋಗು ತ್ತಿದ್ದರು. ಸಾಹೇಬರ ಹೆಂಡತಿಯೂ ಜೊತೆಗೆ ಇರುತ್ತಿದ್ದಳು. ಆಗ್ಗೆ ಅವರ ಮಾತುಗಳು ತಿಳಿಯುತ್ತಿರಲಿಲ್ಲ; ಮೇಲಿಂದ ಮೇಲೆ 'ಕಲ್ಲೂ' ಎಂದ ಹೆಸ ರನ್ನು ಕೇಳಿ ನನ್ನದೇ ಚರ್ಚೆಯು ನಡೆದಿದೆಯೆಂದು ತಿಳಿಯುತ್ತಿದ್ದೆ. ಸಾಹೇ ಬರ ಹೆಂಡತಿಯು ಆಗಾಗ್ಗೆ ನನ್ನನ್ನು ಎತ್ತಿಕೊಂಡು ತೊಡೆಯಮೇಲೆ ಕೂಡಿಸಿ ಕೊಳ್ಳುತ್ತಿದ್ದಳು ಮತ್ತು ಮುದ್ದಿಡುತ್ತಿದ್ದಳು. ನನಗಾಗುತ್ತಿದ್ದ ಆನಂದವನ್ನು ಹೇಳಲು ಶಕ್ಯನಲ್ಲ. ನಾನೂ ಬಾಲವನ್ನು ಅಲ್ಲಾಡಿಸುತ್ತ ಅವರ ಕುತ್ತಿಗೆಗ ಅಂಟಿಕೊಳ್ಳುತ್ತಿದ್ದೆ. ಅವರಿಗೆ ನಮ್ಮ ಮಾತುಗಳು ತಿಳಿಯುತ್ತಿದ್ದರೆ ಪ್ರೀತಿಸು ವದರಲ್ಲಿ ಮನುಷ್ಯರಿಗಿಂತ ಇವು ಕಡಿಮೆ ಇಲ್ಲವೆಂಬುದು ಅನಿಸುತ್ತಿತ್ತು.

ಕೆಲ ದಿನಗಳ ವರೆಗೆ ಪಂಡಿತರ ನೆನಪು ನನ್ನನ್ನು ಕಾಡಿಸುತ್ತಿತ್ತು. ಬರ ಬರುತ್ತ ಹಿಂದಿನ ಎಲ್ಲ ಸಂಗತಿಗಳೂ ಮರೆತುಹೋದವು. ಸುಖದಲ್ಲಿ ದುಃಖದ ಮಾತುಗಳು ಹೇಗೆ ಸ್ಮರಣೆಗೆ ಬರಬಲ್ಲವು ?

ಒಂದು ದಿನ ಸಂಜೆಗೆ ನಾನು ಆಡ್ಡಾಡಲು ಹೊರಟಾಗ ಪಂಡಿತರು ಬರುತ್ತಿರುವದನ್ನು ಕಂಡೆನು. ಪಂಡಿತರನ್ನು ನೋಡುತ್ತಲೇ ಕಳೆದ ದಿನಗಳ ಸ್ಮರಣೆಯಾಗಿ ಮೋಟರಿನಿಂದ ಹಾರಿದೆನು. ಬಾಲವನ್ನು ಅಲ್ಲಾಡಿಸುತ್ತ ಓಡಿಹೋಗಿ ಅವರ ಕಾಲುಗಳನ್ನು ಮೂಸತೊಡಗಿದೆನು. ಪಂಡಿತರು ನನ್ನ ತಲೆಯ ಮೇಲೆ ಕೈಯಾಡಿಸುತ್ತಿರುವಾಗ ಅವರು ಕಣ್ಣೀರು ಸುರಿಸುತ್ತಿರುವು ದನ್ನು ನೋಡಿದೆ. ಅವರ ಮುಖವು ಧೂಳಿನಿಂದ ತುಂಬಿತ್ತು. ತುಟಿಗಳು ಒಣಗಿದ್ದವು. ಕಾಲುಗಳಮೇಲೆ ಒಂದು ಮಣ ಧೂಳು ಇತ್ತು. ಸಾಹೇಬರ ಝಾಡುಮಾಲಿಯು ಕೂಡ ಧರಿಸದಂಥ ಹೊಲಸು ಬಟ್ಟೆಗಳು ಅವರ ಮೈಮೇ ಲಿದ್ದವು. ಅವರ ಮೇಲೆ ಕರುಣೆ ಹುಟ್ಟಿತು.

ಸಾಹೇಬರು:— ಚನ್ನಾಗಿದ್ದೀರಾ ಪಂಡಿತರೇ?

ಪಂಡಿತರು:— ತಮ್ಮ ದಯೆಯಿಂದ.

ಸಾಹೇಬರು:— ಏನು ಕೆಲಸವಿದೆ?

ಪಂಡಿತರು:— ಸಾಹೇಬರೇ, ಕಲ್ಲೂನನ್ನು ನೋಡಲು ಬಂದಿದ್ದೇನೆ. ಇವನು ಅಲ್ಲಿಂದ ಹೊರಟು ಬಂದಮೇಲೆ ನನ್ನ ದುರ್ದಿನಗಳು ಪ್ರಾರಂಭವಾದವು. ಇವನ ಸ್ಮರಣೆ ಇಲ್ಲವ ಒಂದು ಕ್ಷಣವೂ ಇಲ್ಲ. ಇವನಿದ್ದ ಸ್ಥಳವನ್ನು ನೋಡಿ ಅಳುತ್ತಿರುವೆ. ಇವನು ನನ್ನ ಮನೆಯ ರಕ್ಷಕನಾಗಿದ್ದನು. ನನ್ನನ್ನು ದಯೆ-ಯಿಂದ ಕಾಣಿರಿ.

ಸಾಹೇಬರು:— ಏನು ಇಚ್ಛಿಸುವಿರಿ?

ಪಂಡಿತರು:— ಕಲ್ಲೂನ ಭಿಕ್ಷೆ ಬೇಡುತ್ತಿರುವೆನು. ಅವನನ್ನು ನನಗೆ ಒಪ್ಪಿಸಿದರೆ ದೇವರು ನಿಮಗೆ ಕಲ್ಯಾಣ ಮಾಡುವನು. ಇವನನ್ನು ಬಿಟ್ಟು ನಾನಿರಲಾರೆ.

ಸಾಹೇಬರು:— ನೀವು ನನಗೆ ಮೋಸ ಮಾಡುತ್ತಿರುವಂತೆ ಕಾಣುತ್ತದೆ. ಈ ನಾಯಿಯನ್ನು ನಿಮಗೆ ನಾನು ಕೊಡಲಾರೆ. ಇದರ ಬದಲಾಗಿ ನನ್ನದೊಂದು ಬೇಕಾದ ವಿಲಾಯತಿಯ ನಾಯಿಯನ್ನು ತೆಗೆದುಕೊಂಡು ಹೋಗಬಹುದು.

ನಾನು ಈ ಸಮಯದಲ್ಲಿ ಚಿಂತೆಯಲ್ಲಿ ಉಳಿದೆ. ಪಂಡಿತರ ಪ್ರೇಮವನ್ನು ನೋಡಿ ಅವರೊಡನೆ ಹೋಗಬೇಕೆಂದು ಇಚ್ಛೆಯಾಗುತ್ತಿತ್ತು. ಆದರೆ ಸುಖದ ಈ ದಿನಗಳನ್ನು ನೆನೆದರೆ ಮನಸ್ಸು ಹಿಂಜರಿಯುತ್ತಿತ್ತು.

ಸಾಹೇಬರು ಇಲ್ಲವೆಂದ ಮೇಲೆ ಪಂಡಿತರು ನಿರಾಶರಾಗಿ ಹೇಳಿದರು 'ತಮ್ಮ ಮನಸ್ಸಿಗೆ ಬಂದಂತಾಗಲಿ, ಕಲ್ಲೂ ಇಲ್ಲವೆಂದಮೇಲೆ ವಿಲಾಯತಿ ನಾಯಿಯನ್ನು ತೆಗೆದುಕೊಂಡೇನು ಮಾಡಲಿ?'

ಇದನ್ನು ಹೇಳಿ ಪಂಡಿತರು ಅಳತೊಡಗಿದರು. ನಾನಿಲ್ಲಿದ್ದುಕೊಂಡೇ ಪಂಡಿತರ ಮನೆಯ ರಕ್ಷಣೆಗಾಗಿ ದಿನಾಲು ಹೋಗಿಬರುವನೆಂದು ಆವಾಗಲೇ ನಿಶ್ಚಯ ಮಾಡಿದೆನು. ಇಲ್ಲಿ ನಾಯಿಗಳ ಕೊರತೆ ಏನು?

ಸಾಹೇಬ:— ನೀವು ಈ ನಾಯಿಯನ್ನು ಬಹಳ ಪ್ರೀತಿಸುತ್ತಿರುವಿರೆಂಬುದನ್ನು ನಾನು ಬಲ್ಲೆ. ನಾವು ನಿಮಗೆ ಕೊಡುತ್ತಿದ್ದೆ, ನಾವು ಇಷ್ಟರಲ್ಲೇ ನಮ್ಮ ದೇಶಕ್ಕೆ ಮರಳಿ ಹೋಗತಕ್ಕವರಿರುವೆವು. ಇದನ್ನು ನಮ್ಮಸಂಗಡ ಒಯ್ಯುವೆವು. ಬೇಕಾದಷ್ಟು ಬೆಲೆಯನ್ನು ಕೇಳಬಹುದು.

ಪಂಡಿತರು ಇದಕ್ಕೆ ಉತ್ತರಿಸದೆ ನಮಸ್ಕಾರ ಮಾಡಿ ಮರುಳಿದರು. ಅಕಸ್ಮಾತ್ತಾಗಿ ಒಂದು ಸಂಗತಿಯು ಸ್ಮರಣೆಗೆ ಬಂದಿತು. ಮತ್ತೆ ತಿರುಗಿ ಬಂದು ಕೇಳಿದರು-ಸರಕಾರ, ವಿಲಾಯುತಿಯಿಂದ ಎಂದು ಹಿಂದಿರುಗುವಿರಿ?

ಸಾಹೇಬರು:— ಸರಿಯಾಗಿ ಹೇಗೆ ಹೇಳುವದು, ಬರುವದು ನಿಶ್ಚಿತವಾದಾಗ ನಿಮಗೆ ಅದರ ಸೂಚನೆಯನ್ನು ಕೊಡುವೆವು.

ಸಾಹೇಬರು ನನ್ನ ವಿಲಾಯತಿ ಯಾತ್ರೆಯ ಬಗ್ಗೆ ಹೇಳದಿದ್ದರೆ ಪಂಡಿತರೊಡನೆ ಅವಶ್ಯವಾಗಿ ಹೋಗುತ್ತಿದ್ದೆ. ಅವರ ದುಃಖವು ನನ್ನಿಂದ ನೋಡಲಾಗುತ್ತಿರಲಿಲ್ಲ. ಪಂಡಿತರು ನನ್ನನ್ನು ತಮ್ಮ ಪ್ರೇಮ ಪೂರ್ಣದೃಷ್ಟಿಯಿಂದ ನೋಡಿ ಹೊರಟರು, ನನಗೆ ಸಹಿಸುವದಾಗಲಿಲ್ಲ. ಸಾಹೇಬರ ಹೆಂಡತಿಯ ಪ್ರೇಮವು, ವಿಲಾಯತಿಯಾತ್ರೆ, ಸುಖವಾದ ಆಹಾರ ಇವೆಲ್ಲವು ನನಗೆ ತುಚ್ಛವೆನಿಸತೊಡಗಿದವು. 'ನೀನು ಎಷ್ಟು ಅವಿಶ್ವಾಸಿಯಿರುವಿ. ಸಣ್ಣವನಿದ್ದಾಗಿನಿಂದ ಕಾಪಾಡಿದನು, ಬ್ರಾಹ್ಮಣನಿದ್ದರೂ ಕೂಡ ತನ್ನ ತೊಡೆಯ ಮೇಲೆ ನಿನ್ನನ್ನು ತೆಗೆದುಕೊಂಡು ಉಣ್ಣಿಸುತ್ತಿದ್ದನು. ಎಂದೂ ನಿನ್ನನ್ನು ಬೆದರಿಸಿಲ್ಲ ಇಂಥವನನ್ನು ನೀನು ಕೇವಲ ನಿನ್ನ ಭೋಗವಿಲಾಸಕ್ಕಾಗಿ ತೊರೆಯುತ್ತಿರುವಿ ಎಂದು ಮನಸ್ಸು ಹೇಳತೊಡಗಿತು, ಮತ್ತೇನೂ ಹೊಳೆಯಲಿಲ್ಲ. ಕಟ್ಟೆಯ ಮೇಲಿಂದ ಜಿಗಿದು ಪಂಡಿತರ ಹಿಂದಿನಿಂದ ಹೊರಟೆ. ಇನ್ನೂ ೨೦ ಹೆಜ್ಜೆ ಕೂಡ ಹೋಗಿದ್ದಿಲ್ಲ. ಅಡುಗೆಯವನು ಬಂದು ನನಗೆ ಸರಪಳಿ ಕಟ್ಟಿದನು. ಅಲ್ಲಿಂದ ಹಾರಿ ಅವನನ್ನು ಕಚ್ಚುವಷ್ಟು ಆಗ ಕ್ರೋಧ ಬಂದಿತು. ಕೊರಳಲ್ಲಿ ಸರಪಳಿಯಿದ್ದುದರಿಂದ ಏನು ಮಾಡಬಲ್ಲೆ. ನಿರುಪಾಯ ದೃಷ್ಟಿಯಿಂದ ಪಂಡಿತರನ್ನು ನೋಡಿದೆ. ಪಂಡಿತರು ಮೇಲಿಂದಮೇಲೆ ನೋಡದಿರಲಿಲ್ಲ. ಜೋರಾಗಿ ಕೂಗತೊಡಗಿದೆ. ಸಾಹೇಬರು ಮತ್ತು ಅವರ ಹೆಂಡತಿಯು ನನ್ನ ಕೂಗಾಟ ಕೇಳಿ ಸಮಾಧಾನಮಾಡಲು ಯತ್ನಿಸಿದರು. ಅದರಿಂದ ನನ್ನ ಶಂಕೆಯು ದೂರ ಆಯಿತು. ಯಾರು ಹಾಡುತ್ತಿರುವರೆಂದು ನನಗೆ ತೋಚಲಿಲ್ಲ.

ಇದೇ ಪ್ರಕಾರ ಮತ್ತೊಂದು ಘಟನೆಯು ಸಂಭವಿಸಿತು. ಸಂಜೆಯಾದೊಡನೆ ದೀಪಗಳು ಕೋಣೆಯಲ್ಲಿ ತಮ್ಮಷ್ಟಕ್ಕೆ ತಾವೇ ಹತ್ತುತ್ತಿದ್ದವು. ಗೋಡೆಯ ಮೇಲೆ ಒಂದು ದುಂಡನ್ನ ಹಿತ್ತಾಳೆಯ ಡಬ್ಬಿ ಇದ್ದಂತಿತ್ತು. ಸಾಹೇಬರು ಮತ್ತು ಹೆಂಡತಿಯು ಆಗಾಗ್ಗೆ ಅದನ್ನು ಮುಟ್ಟುತ್ತಿದ್ದರು, ಕೋಣೆಯು ಪ್ರಕಾಶಮಾನವಾಗುತ್ತಿತ್ತು. ಇದನ್ನು ನೋಡಿ ನನಗೆ ಅಚ್ಚರಿಯಾಗುತ್ತಿತ್ತು. ನಾನೂ ಅವರಂತೆಯೇ ಆ ದೀಪದ ಗುಂಡಿಯನ್ನು ಒತ್ತುತ್ತಿದ್ದರೆ ಅವರು ಸಂತೋಷ ಹೊಂದಬಹುದು. ಅದು ಮೇಲೆ ಇದ್ದುದರಿಂದ ಅದನ್ನು ಮುಟ್ಟುವುದು ಹೇಗೆ. ಕೊನೆಗೆ ಅದನ್ನು ಮುಟ್ಟಲಾಗುವ ಒಂದು ಯುಕ್ತಿಯು ಹೊಳೆಯಿತು. ನನ್ನ ಎರಡು ಕಾಲುಗಳಿಂದ ಒಂದು ಕುರ್ಚಿಯನ್ನೆಳೆದುಕೊಂಡು ಗೋಡೆಯ ಹತ್ತಿರ ಹೋದೆ. ಅದರ ಎರಡು ಕೈಗಳಮೇಲೆ ನಿಂತು ಆ ಗುಂಡಿಯನ್ನು ಮುಟ್ಟಲಾಗಿ ನನ್ನ ಇಡೀ ದೇಹದಲ್ಲಿ ಬೆಂಕಿಯು ಹತ್ತಿತೆಂಬಂತೆ ಭಾಸವಾಯಿತು. ಕುರ್ಚಿಯ ಮೇಲಿಂದ ಜಿಗಿದು ಓಡಿದೆನು. ಸ್ವಲ್ಪ ಹೊತ್ತಿನ ಮೇಲೆ ಹೆದರಿಕೆಯು ದೂರಾಗಿ ಶಾಂತವಾದ ಮೇಲೆ ಈ ಗುಂಡಿಯಲ್ಲಿ ಒಂದು ತರದ ಜಾದೂ ಇದೆಯೆಂದು ಎನಿಸಿತು. ಸಾಹೇಬರು, ಅವರ ಹೆಂಡತಿಯು ಅದನ್ನು ಮುಟ್ಟಿದರೆ ಅವರಿಗೂ ಪೆಟ್ಟು ತಾಕುವದು. ಅವರೂ ಮುಟ್ಟಬಾರದೆಂದು ನಿಶ್ಚಯಮಾಡಿದೆನು. ಸಾಯಂಕಾಲ ಸಾಹೇಬರು ಅತ್ತ ಗುಂಡಿಯ ಕಡೆಗೆ ಹೋದಾಗ ನಾನು ಅವರೆದುರು ಹೋಗಿ ನಿಲ್ಲುತ್ತಿದ್ದೆ. ಅವರು ನನ್ನನ್ನು ಅಲ್ಲಿಂದ ದೂರ ಸರಿಸುತ್ತಿದ್ದರು. ಆದರೆ ನಾನು ಅವರನ್ನು ತಡೆಯುತ್ತಿದ್ದೆನು.

ಕೊನೆಗೆ ಅವರು ನನ್ನನ್ನು ಕಟ್ಟಿಹಾಕಿ ಗುಂಡಿಯನ್ನು ಒತ್ತಿದರು. ಕೋಣೆಯಲ್ಲಿ ಪ್ರಕಾಶವಾಯಿತು. ಆದರೆ ಅವರಿಗೇನೂ ಆಗಲಿಲ್ಲ.

ಕೆಲವು ದಿನಗಳ ನಂತರ ಆಕಾಶದಲ್ಲಿ ಮೋಡಗಳು ಆವರಿಸಿ ಬಿರುಗಾಳಿ ಬೀಸತೊಡಗಿತು. ಸ್ವಲ್ಪ ಸಮಯದಲ್ಲಿ ಆಕಾಶವು ಕೆಂಪಾಯಿತು. ಸಮುದ್ರದಲ್ಲಿಯ ತೆರೆಗಳು ಹೊರಗೆ ಬಂದು ಅಪ್ಪಳಿಸುವಷ್ಟು ಜೋರಾಗಿ ಬಿರುಗಾಳಿ ಬೀಸತೊಡಗಿತು. ಶರೆಕುಡುಕನು ಜೋಲಿ ಹೊಡೆಯುತ್ತ ಹೋಗುತ್ತಿರುವಂತೆ ಸಮುದ್ರದಲ್ಲಿ ನಮ್ಮ ಹಡಗವು ಕೆಳಮೇಲಾಗುತ್ತ ನಡೆದಿತ್ತು. ಕುಡುಕನು ಜೋಲಿಯಿಂದ ಬೀಳುತ್ತಲಿರುವಂತೆ ಹಡಗವು ಹೊರಳುವದೇನೋ ಎನ್ನು

ವಂತೆ ಹೊರಳಾಡತೊಡಗಿತು. ಜನರು ಬೆದರಿ ಅತ್ತಿತ್ತ ಓಡುತ್ತಿದ್ದರು. ಸಿಡಿಲು ನಮ್ಮ ತಲೆಯ ಮೇಲೆ ಬೀಳುವದೇನೋ ಎನ್ನುವಂತಿತ್ತು. ಭಯಂಕರ ದೃಶ್ಯವಾಗಿತ್ತು. ನನ್ನ ಜೀವನದಲ್ಲಿ ಇಂಥ ಬಿರುಗಾಳಿಯನ್ನು ನೋಡಿದ್ದಿಲ್ಲ. ಸಾವಿರಾರು ಮನೆಗಳು ಬಿದ್ದುದರಿಂದ ಎಷ್ಟೋ ಜನರು ಸತ್ತಿದ್ದರು. ಎಷ್ಟೋ ಗಿಡಗಳು ಉರುಳಿದ್ದವು. ಆದರೆ ಆ ಬಿರುಗಾಳಿಗಿಂತ ಸಮುದ್ರದ ಮೇಲಿನ ಬಿರುಗಾಳಿಯು ಬಹಳೇ ಘೋರವಾಗಿತ್ತು. ಇಷ್ಟು ಹೊತ್ತಿನವರೆಗೆ ಹಡಗದಲ್ಲಿ ಪ್ರಕಾಶವಿತ್ತು. ಒಮ್ಮೆಲೆ ದೀಪಗಳು ನಂದಿ ಕತ್ತಲೆಯಾಯಿತು. ಶ್ರಾವಣ ಭಾದ್ರಪದಗಳ ಕತ್ತಲೆಯ ದಿನಗಳಂತೆ ಹಗಲು ಕೂಡ ಅಷ್ಟು ಕಪ್ಪಾಗಿತ್ತು.

ಸುತ್ತಲೂ ಗಾಬರಿ ಎನಿಸುವಂತಿತ್ತು. ಕೆಲವರು ದೇವರ ಪ್ರಾರ್ಥನೆ ಮಾಡುತ್ತಿದ್ದರು. ಕೆಲವು ಸ್ತ್ರೀಯರು ತಮ್ಮ ಮಕ್ಕಳನ್ನು ತಬ್ಬಿಕೊಂಡು ಕೂತಿದ್ದರು. ಆ ಕತ್ತಲೆಯಲ್ಲಿ ಅವರ ಬೆದರಿಕೆಯು ಸ್ಪಷ್ಟವಾಗಿ ಕಾಣುತ್ತಿತ್ತು. ದೊಡ್ಡ ಸಂಕಟವು ಒದಗುವದೆಂದು ಎನಿಸುತ್ತಿತ್ತು.

ಹಡಗವು ಯಾವದೋ ಒಂದಕ್ಕೆ ಬಡಿದು ದೊಡ್ಡ ಸಪ್ಪಳವಾಯಿತು. ಹಡಗವು ಮುಳುಗುವದೆಂಬ ಯೋಚನೆ ಹುಟ್ಟಿತು. ಸಾಹೇಬರು ಅವರ ಹೆಂಡತಿಯು ಒಬ್ಬರನ್ನೊಬ್ಬರು ಗಟ್ಟಿಯಾಗಿ ಹಿಡಿದುಕೊಂಡು ಅಳುತ್ತಿದ್ದರು. ಹಡಗವು ಮುಳುಗುತ್ತಿರುವುದೆಂದು ಗೊತ್ತಾಯಿತು. ಎಲ್ಲರೂ ಮುಳುಗುವರು. ಹಡಗದ ಎದೆಯ ಮೇಲೆ ಸಮುದ್ರವು ಏರಿ ಕೂಡುವದು. ಹಡಗದ ಸೊಕ್ಕನ್ನು ಸಮುದ್ರವು ಮುರಿಯುತ್ತಿರುವಂತೆ ಎನಿಸುವಂತಿತ್ತು. ಹಡಗಕ್ಕೆ ಕಿವಿಗಳಿದ್ದರೆ ನಾನು ಹೇಳುತ್ತಿದ್ದೆ. ನಿನಗೆ ಎಷ್ಟು ಸೊಕ್ಕು ಇತ್ತು? ಅದು ಹೇಗೆ ಮುರಿಯಿತು? ನೀನೊಬ್ಬನೇ ಮುಳುಗುವದಲ್ಲದೆ ಸಾವಿರಾರು ಜನರನ್ನು ಮುಳುಗಿಸಿದೆ. ನನ್ನ ಸಾಹೇಬರು ಹಾಗೂ ಅವರ ಹೆಂಡತಿಗಾಗಿ ನನ್ನ ಹೃದಯವು ಗದ್ಗದಿಸಹತ್ತಿತು. ಅವರನ್ನು ಹೇಗೆ ಬದುಕಿಸಲಿ? ಅವರಿಬ್ಬರನ್ನೂ ನನ್ನ ಬೆನ್ನಿನಮೇಲೆ ಕೂಡ್ರಿಸಿಕೊಳ್ಳಲು ಬರುವಂತಿದ್ದರೆ ಕೂಡ್ರಿಸಿಕೊಂಡು ಹಾರುತ್ತಿದ್ದೆ. ಎಲ್ಲಿಯಾದರೂ ಮುಟ್ಟುತ್ತಿದ್ದೆ. ಹಡಗಿನ ಸೊಕ್ಕನ್ನು ಮುರಿದ ಆ ಗುಡ್ಡದ ಆಶ್ರಯವು ನಮಗೆ ದೊರೆಯಲಿಕ್ಕಿಲ್ಲವೇ? ಅವರಿಬ್ಬರನ್ನು ಎತ್ತಿಕೊಂಡು ಹೋಗಲಾರೆನೇ? ನನ್ನ ಒಡೆಯನಿಗೆ ಧೈರ್ಯಕೊಡಬೇಕೆನ್ನುತ್ತಿದ್ದೆ.

ನಾನು ಅವರ ಹತ್ತಿರ ಹೋಗಿ ಕೂ. ಕೂ. ಎನ್ನುತ್ತ, ಬಾಲವನ್ನು ಅಲ್ಲಾಡಿಸುತ್ತಿದ್ದೆ. ಆದರೆ ಗಾಬರಿಯಲ್ಲಿ ನನ್ನ ಯಾವ ಮಾತಿನ ಅರ್ಥವೂ ಅವರಿಗೆ ಆಗಲಿಲ್ಲ

ಪ್ರತಿ ಕ್ಷಣಕ್ಕೆ ಹಡಗವು ತಳಕಾಣುತ್ತಿತ್ತು. ಸ್ತ್ರೀಯರ ಮಕ್ಕಳ ಆರ್ತಧ್ವನಿಯನ್ನು ಕೇಳಿ ನನ್ನ ಹೃದಯವು ಒಡೆದುಹೋಯಿತು. ಮಳೆಯು ಭರದಿಂದ ಬೀಳತೊಡಗಿತು. ದೇವರೇ, ಇದೇನು? ಹಡಗವು ನೀರಲ್ಲಿ ಮುಳುಗಿತು. ನಾನು ನೀರಲ್ಲಿ ತೇಲಹತ್ತಿದೆನು. ನಮ್ಮ ಸಾಹೇಬರ ಅವರ ಹೆಂಡತಿಯ ಸುಳುವೇ ಹತ್ತಲಿಲ್ಲ. ಕಲವರು ಒಂದುಕಡೆಗೆ ತೇಲಿಹೋಗುತ್ತಿದ್ದರೆ ಮತ್ತೆ ಕೆಲವರು ಬೇರೆ ಕಡೆಗೆ. ನಾನು ಎಷ್ಟು ದೂರದ ವರೆಗೆ ತೇಲುತ್ತ ಹೋದೆನೆಂದು ಹೇಳಲಾರೆ. ಸಾಹೇಬ ಮತ್ತು ಅವರ ಹೆಂಡತಿಯ ಸ್ಮರಣೆ ಬಂದು ಅಳು ಬರುತ್ತಿತ್ತು. ಈಗಲೂ ಅವರನ್ನು ಕಂಡರೆ ಉಳಿಸಲು ಯತ್ನಿಸುವೆನೆಂದು ವಿಚಾರಮಾಡಿದೆ.

ಭಗವಾನನು ನನ್ನ ಬಿನ್ನಹವನ್ನು ಮನ್ನಿಸಿದನು. ಮಿಂಚಿದಾಗ ಒಬ್ಬ ಗಂಡಸು ಮತ್ತು ಒಬ್ಬ ಹೆಂಗಸು ಒಬ್ಬರಿಗೊಬ್ಬರು ಹೊಂದಿಕೊಂಡು ತೇಲುತ್ತಿರುವದನ್ನು ನೋಡಿದೆ. ಹೆಚ್ಚು ಭರದಿಂದ ಅವರ ಹತ್ತಿರ ಹೋದೆ. ನೋಡಿದರೆ ಅವರಿಬ್ಬರೂ ನನ್ನ ಯಜಮಾನರೇ ಇದ್ದರು. ನಾನೆಂದಿಗೂ ಬಲಿಷ್ಠನಿದ್ದಿದ್ದಿಲ್ಲ. ಆದರೆ ಆಗ್ಗೆ ಎಲ್ಲಿಯ ಶಕ್ತಿಯು ನನ್ನಲ್ಲಿ ಬಂದಿತೋ, ನನಗೆ ಗೊತ್ತಾಗಲಿಲ್ಲ. ಮಾಲಿಕನ ಕೈಯನ್ನು ಬಾಯಿಯಲ್ಲಿ ಹಿಡಿದುಕೊಂಡು ಹವೆಯ ಮುಖವಾಗಿ ಹೊರಟೆ. ಪ್ರಾಣವಿರುವ ವರೆಗೆ ಇವರನ್ನು ಬಿಡುವದಿಲ್ಲೆಂದು ಮನಸ್ಸಿನಲ್ಲಿ ನಿಶ್ಚಯಿಸಿದೆ. ಅವರಿಬ್ಬರೂ ಮೂರ್ಛೆ ಹೊಂದಿದ್ದರು. ಆದರೆ ಪ್ರಾಣವಿತ್ತು, ಶರೀರವು ಬೆಚ್ಚಗಿತ್ತು. ಹೇಗಾದರೂ ಬೆಳಗಾಗಲೆಂದು ದೇವರನ್ನು ಪ್ರಾರ್ಥಿಸುತ್ತಿದ್ದೆ. ರಾತ್ರಿ ಎಷ್ಟಿತ್ತೆಂಬುದು ಗೊತ್ತಿದ್ದಿಲ್ಲ. ಇಂಥ ಘೋರ ಅಂಧಕಾರದಲ್ಲಿ ಗೊತ್ತಾದರೂ ಹೇಗೆ ಆಗಬೇಕು. ಬಿರುಗಾಳಿಗೆ ಸಿಕ್ಕ ಎಲೆಯಂತೆ ತೆರೆಗಳ ಹೊಡೆತ ತಿನ್ನುತ್ತಿದ್ದೆ. ಒಮ್ಮೆ ಕೆಳಕ್ಕೆ ಹೋದರೆ ಮತ್ತೊಮ್ಮೆ ಮೇಲೆ. ಒಮ್ಮೆ ಪ್ರವಾಹಕ್ಕೆ ಹತ್ತುಮಾರು ಮುಂದೆ ಹೋದರೆ ಮತ್ತೊಂದು ಪ್ರವಾಹಕ್ಕೆ ೨೦ ಮಾರು ಹಿಂದೆ. ಇಂಥ ಬಿರುಗಾಳಿಯ ಎದುರಿಗೆ ನಾನೇನು ಮಾಡಬಲ್ಲೆ. ಹಾಗೂ ನನ್ನ ಸಾಮರ್ಥ್ಯವಾದರೂ ಎಷ್ಟು? ಆದರಲ್ಲಿಯೂ ಇಂಥ ಸಣ್ಣ

ಶರೀರಕ್ಕೆ ಜೀವದ ಹರಿವೆಯೇ ಇದ್ದಿಲ್ಲ. ಆದರೂ ಎಲ್ಲಿಯೂ ಮುಳುಗಬಹು-
ದೆಂಬ ಭಯವೂ ಆಗುತ್ತಿತ್ತು.

ಬೆಳಕೇ ಆಗಲೊಲ್ಲದು, ಭಯದಿಂದ ಸೂರ್ಯನು ಎಲ್ಲಿಯೋ ಅಡಗಿ-
ಕೊಂಡು ಕೂತಿರುವನೇನೋ ಎನ್ನುವಂತಿತ್ತು. ಇನ್ನು ಪ್ರಾಣವು ಉಳಿಯ-
ಲಾರದು ಎನ್ನುವಷ್ಟು ಶರೀರವು ಅಶಕ್ತವಾಯಿತು. ಇಬ್ಬರು ಮಾಲಿಕರ ನೆನ-
ಪಾಗದಿದ್ದರೆ ತೆರೆಗಳೊಡನೆ ಒಂದುಗೂಡಿ ಹೋಗಿಬಿಡುತ್ತಿದ್ದೆ. ಜಲಜಂತುಗಳ
ಭಯವು ಬಹಳವಿತ್ತು, ಜೀವವು ಕಣ್ಣಲ್ಲಿ ಉಳಿದಂತಿತ್ತು. ಈಗ ಸಾಯುವೆ-
ನೆಂದು ಕ್ಷಣಕ್ಷಣಕ್ಕೂ ಅನಿಸುತ್ತಿತ್ತು.

ಈ ಸ್ಥಿತಿಯು ಎಷ್ಟು ಹೊತ್ತಿನ ವರೆಗೆ ಇತ್ತೆಂದು ಈಗ ಹೇಳಲಾರೆ.
ಕನಿಷ್ಟ ನಾಲ್ಕೈದು ತಾಸಾದರೂ ಇರಬಹುದು. ಹವೆಯ ಭರಭರಾಟೆಯು
ಕಡಿಮೆಯಾಗತೊಡಗಿತು. ತೆರೆಗಳ ಪೆಟ್ಟುಗಳೂ ಕಡಿಮೆಯಾದವು. ಸ್ವಲ್ಪ
ಸ್ವಲ್ಪ ಪ್ರಕಾಶವೂ ಆಗತೊಡಗಿತು. ಧೈರ್ಯವೆನಿಸಹತ್ತಿತು. ಆಕಾಶ-
ದಲ್ಲಿಯ ಮೋಡಗಳು ದೂರವಾಗತೊಡಗಿದವು. ಸ್ವಲ್ಪ ದೂರದಲ್ಲಿ ಕುರಿಯ
ಹಿಂಡು ಕಾಣತೊಡಗಿತು. ಅವಶ್ಯವಾಗಿ ಯಾವದೊಂದು ದ್ವೀಪವಿರಬೇಕು.
ನನ್ನ ಮನಸ್ಸು ಪ್ರಸನ್ನವಾಗಿತ್ತು. ನಾನು ಆ ಕುರಿಗಳ ಕಡೆಗೆಯೆ ಹೊರಟೆ.
ನಮ್ಮ ಸಾಹೇಬರೂ ಹಾಗೂ ಅವರ ಹೆಂಡತಿಯು ಇಬ್ಬರೂ ರೇಶಿಮೆಯ ಬಟ್ಟೆ-
ಯಿಂದ ಬಿಗಿದು ಕಟ್ಟಿಕೊಂಡದ್ದುದನ್ನು ನೋಡಿದೆ. ಅದಕ್ಕಾಗಿಯೆ ಅವರಿಬ್ಬರು
ಹೊಂದಿಕೊಂಡಿದ್ದರು. ಒಮ್ಮೆಲೆ ನನಗೊಂದು ಸಣ್ಣ ನಾವು ಕಾಣಿಸಿತು.
ಅವುಗಳ ಮೇಲೆ ಭಯವಾಗುವಂಥ ಕಪ್ಪಾದ ಇಬ್ಬರು ಜನರು ಕೂತಿದ್ದರು.
ಅವರು ಕಪ್ಪು ವರ್ಣದವರಿದ್ದರು. ಮುಖಕ್ಕೆ ಕೆಂಪುಬಣ್ಣ ಬಳಕೊಂಡಿದ್ದರು.
ತಲೆಯ ಮೇಲೆ ಎಲೆಗಳ ಶಿರಸ್ತ್ರಾಣವಿದ್ದವು. ಅವರು ಕೇವಲ ಚರ್ಮದ
ಚಡ್ಡಿಯನ್ನು ಧರಿಸಿದ್ದರು. ಹತ್ತಿರ ಒಂದೊಂದು ಭಲ್ಲೆ ಇತ್ತು. ಆಗ
ಗಾಬರಿಯಾಗಿ ಕೂಗಿದೆ. ನಮ್ಮನ್ನು ನೋಡುತ್ತಲೇ ಅಲ್ಲಿಗೆ ಧಾವಿಸಿ ಬಂದು
ತಮ್ಮ ನಾವಿನಲ್ಲಿ ಕರೆದುಕೊಂಡರು. ಹೆದರಿಕೆಯಿಂದ ದುರ್ಬಲನಾಗಿದ್ದುದರಿಂದ
ಏನು ಮಾಡಬಲ್ಲೆ? ನಾವಿನಲ್ಲಿ ಕೂತಿದ್ದರೆ ಗಂಟೆ ಅರ್ಧಗಂಟೆಯಲ್ಲಿ ಮುಳುಗಿ
ಸಾಯುತ್ತಿದ್ದೆ. ಶಕ್ತಿಯ ಅಭಾವವೇ ಕಾರಣ. ಅವರು ತಮ್ಮ ಭಲ್ಲೆ-
ಯಿಂದ ಹೊಡೆಯಬಾರದೆಂದು ನಾವೆಯ ಒಂದು ಮೂಲೆಯಲ್ಲಿ ನಿಂತಿದ್ದೆ.

ಗಡ-ಗಡ ನಡುಗುತ್ತಿದ್ದೆ. ಇಷ್ಟು ಕಪ್ಪು ಬಣ್ಣದ ಜನರನ್ನು ನಾನು ನೋಡಿದ್ದೇ ಇಲ್ಲ. ನನ್ನನ್ನು ನಾವೆಯ ಮೇಲೆ ಕೂಡ್ರಿಸಿಕೊಂಡು ಗಿಡಗಳ ಗುಂಪಿನ ಕಡೆಗೆ ಒಯ್ದರು. ಅಲ್ಲಿ ಮನುಷ್ಯರ ವಸತಿ ಇರಬಹುದು. ಸ್ವಲ್ಪ ಸಮಯದ ಮೇಲೆ ಅಲ್ಲಿಗೆ ತಲುಪಿದೆವು. ಸಮುದ್ರದ ದಂಡೆಯ ಮೇಲೊಂದು ಎತ್ತರವಾದ ಸ್ಥಳವಿತ್ತು. ಅದರ ಮೇಲೆ ಗಿಡಗಳು ಕಾಣುತ್ತಿದ್ದವು. ಎತ್ತರವಾದ ಸ್ಥಳದ ಬುಡಕ್ಕೆ ನಾವು ನಿಂತಿತು. ಆ ನಾವನ್ನು ಒಂದು ಗಿಡಕ್ಕೆ ಕಟ್ಟಿ ಸಾಹೇಬ ಮತ್ತು ಅವರ ಹೆಂಡತಿಯನ್ನು ತೆಗೆದುಕೊಂಡು ನೆಲದ ಮೇಲೆ ಮಲ-ಗಿಸಿದರು. ಅವರನ್ನು ನೋಡುತ್ತಲೇ ಅಂತಹ ಎಷ್ಟೋ ಜನ ಸ್ತ್ರೀಯರು ಅಲ್ಲಿ ಒಂದುಗೂಡಿದರು. ಎಲ್ಲರೂ ಸಂತೋಷಭರಿತರಾಗಿ ಕೂಗತೊಡಗಿದರು. ಮತ್ತೆ ಅವರಿಬ್ಬರನ್ನೂ ಕರಕೊಂಡು ಊರಲ್ಲಿ ಹೊರಟರು. ಎಷ್ಟೋ ಜೋಪಡಿಗಳಿದವು. ಅದೇ ಅವರ ಸ್ಥಳವಾಗಿತ್ತು. ನಾವು ಅಲ್ಲಿ ಮುಟ್ಟಿದ ಕೂಡಲೇ ನಾವಿರಾರು ಜನರು ನನ್ನನ್ನು ಸುತ್ತುಗಟ್ಟಿ ಅವರಿಬ್ಬರನ್ನು ಅಲ್ಲಾಡಿಸಹತ್ತಿದರು ಕೆಲವರು ಮೂಗು ಒತ್ತುತ್ತಿದ್ದರು, ಕೆಲವರು ಎದೆಯ ಮೇಲೆ ಕುಳಿತು ಮುಂಡಿಗಳಿಂದ ಒತ್ತುತ್ತಿದ್ದರು. ಅಂಜುತ್ತ ನಿಂತಿದ್ದೆ. ಧ್ವನಿ ತೆಗೆಯುವ ಸಾಹಸವೇ ಇದ್ದಿಲ್ಲ. ಅವರೆಲ್ಲರೂ ಇವರಿಬ್ಬರನ್ನು ಕೊಲ್ಲುತ್ತಿದ್ದಿಲ್ಲ ಮಾತ್ರ. ಆದರೆ ಎಷ್ಟೋ ಹೊತ್ತಿನವರೆಗೆ ಈ ರೀತಿ ಹೊರಳಾಡಿಸುವದಾದಮೇಲೆ ಇವರಿಬ್ಬರಿಗೆ ಎಚ್ಚರ ಬಂದಿತು. ಕಣ್ಣುಗಳನ್ನು ತೆರೆದರು. ಕೈಕಾಲುಗಳನ್ನು ಅಲ್ಲಾಡಿಸತೊಡಗಿದರು. ಆದರೆ ಏಳಲು ಶಕ್ತಿ ಇದ್ದಿಲ್ಲ, ಆದರೆ ನನ್ನ ಸಂತೋಷವನ್ನು ಹತ್ತಿಕ್ಕಡಲಾರದಾದೆ. ಅವರ ಹತ್ತಿರ ಹೋಗಿ ಸೌಮ್ಯವಾಗಿ ಒದರತೊಡಗಿದೆ. ಆ ಕಪ್ಪು ಜನರು ಕುಣಿದಾಡಹತ್ತಿದರು. ಏಕೆ ಇಷ್ಟು ಹರ್ಷಭರಿತರಾಗಿದ್ದ-ರೆಂಬುದು ಮಾತ್ರ ಗೊತ್ತಾಗಲಿಲ್ಲ. ಅವರ ಕುಣಿತ ಮಾತ್ರ ತೀರ ಹೊಲಸಾಗಿತ್ತು. ಅವರ ಜಿಗದಾಟ ನೋಡಿ ನಗು ಬರುತ್ತಿತ್ತು.

ಬಹಳ ಹೊತ್ತಿನ ವರೆಗೆ ಸಂತೋಷದಿಂದ ಇರಲಾಗಲಿಲ್ಲ. ಸಾಹೇಬರು ಹಾಗೂ ಅವರ ಹೆಂಡತಿಯು ಮಾತನಾಡಲು ಪ್ರಾರಂಭಿಸಿದ ಕೂಡಲೇ ಅವ-ರನ್ನು ಒಂದು ಕೋಣೆಯಲ್ಲಿ ಕೈದುಮಾಡಿದರು. ಕೈದನ್ನೇ ಮಾಡುವದಿದ್ದರೆ ಅವರನ್ನು ಸಮುದ್ರದಲ್ಲಿ ಮುಳುಗಲಿಕ್ಕೆ ಏಕೆ ಕೊಡಬಾರದಾಗಿತ್ತು? ನಾವು ಮೂವರೂ ಆಹಾರವನ್ನೇ ಕಂಡಿದ್ದಿಲ್ಲ. ಹಸಿವೆಯಿಂದ ಬಳಲಿದ್ದೆವು. ಇವ

ರೆಲ್ಲರು ನಮಗೆ ಉಣ್ಣ ತಿನ್ನಲು ಕೊಡುವರೋ ಅಥವಾ ಅದೇ ಕೋಣೆಯಲ್ಲಿ ಬಂದಿಡುವರೋ? ನನಗೆ ತಿನ್ನಲೇನೂ ಅಲ್ಲಿ ಕೊರತೆ ಇರಲಿಲ್ಲ. ಅಲ್ಲಲ್ಲಿ ಮಾಂಸದ ತುಂಡುಗಳು ಬಿದ್ದಿದ್ದವು. ಎಲಬುಗಳ ರಾಶಿಯೇ ಇತ್ತು. ಈ ಅಡವಿಯ ಜನರು ಮಾಂಸಾಹಾರಿಗಳಿದ್ದರು. ಒಕ್ಕಲುತನದ ಸುಳಿವೇ ಇದ್ದಿದ್ದಿಲ್ಲ. ಒಂದು ಗಿಡದ ಬುಡಕ್ಕೆ ಬಿದ್ದ ಮಾಂಸದ ತುಂಡನ್ನು ನೋಡಿ ಅದನ್ನು ತಿನ್ನು ವದಕ್ಕೆ ಮನಸ್ಸು ಹರಿಯಿತು. ಸಾಹೇಬರು ಹಾಗೂ ಅವರ ಹೆಂಡತಿಯು ಹಸಿವೆ ಹಸಿವೆಯೆಂದು ಕಂಗೆಡುತ್ತಿರುವಾಗ ನಾನು ಉಣ್ಣುವದು ನೀಚ ಕೆಲಸ-ವೆಂದು ಬಗೆದೆ.

ಹಗಲು ಕಳೆಯತೊಡಗಿತು. ಶಕೆಯೂ ಇದ್ದಿದ್ದಿಲ್ಲ. ಸಾಹೇಬರು ಕೈದಿನಲ್ಲಿ ಕುಳಿತ ಕೋಣೆಯ ಎದುರಿಗಿನ ಗಿಡದ ಬುಡದಲ್ಲಿ ಕುಳಿತು ಈ ಜನರು ಹೇಗೆ ಹೊರಗೆ ಹಾಕುವರೆಂಬುದನ್ನು ನೋಡುತ್ತಿದ್ದರು. ತಿನ್ನಲು ಕೊಡುವರೋ ಇಲ್ಲವೊ ? ಮಧ್ಯಾಹ್ನವಾಯಿತು. ಸಾಯಂಕಾಲವಾಯಿತು. ಜೋಪಡಿಯ ಬಾಗಿಲ ತೆರೆಯಲೇ ಇಲ್ಲ. ಜೋಪಡಿಯ ಕಾವಲು ಮಾಡು-ತ್ತಿರುವರೇನೋ ಎನ್ನುವಂತೆ ಅವರಿಬ್ಬರೂ ಅದರ ಬಾಗಿಲಲ್ಲಿಯೇ ಕುಳಿತಿದ್ದರು. ಕತ್ತಲೆ ಕಳೆಯತೊಡಗಿತು. ಆದರೆ ಜೋಪಡಿಯ ಬಾಗಿಲನ್ನು ತೆರೆಯಲಾಗ ಲಿಲ್ಲ. ಹೇಗೆ ಆದರೂ ಒಮ್ಮೆ ಈ ಜೋಪಡಿಯಲ್ಲಿ ಹೋಗುವೆನೆಂದು ನಿಶ್ಚಯಮಾಡಿದೆನು. ಎಲ್ಲ ಜೋಪಡಿಗಳಲ್ಲಿ ಮಾಂಸವನ್ನು ಇಡಲಾಗಿತ್ತು. ಒಂದು ಜೋಪಡಿಯನ್ನು ಹೊಕ್ಕು ಒಂದು ಮಾಂಸದ ತುಂಡನ್ನು ಎತ್ತಿ-ಕೊಂಡು ಬಂದೆನು. ಮಾಂಸವನ್ನು ಡಬರಿಯಲ್ಲಿ ಬೇಯಿಸುತ್ತಿದ್ದಿಲ್ಲ. ಬೆಂಕಿಯ ಮೇಲೆ ಹುರಿಯುತ್ತಿದ್ದರು. ಒಂದು ದೊಡ್ಡ ತುಂಡನ್ನು ಎತ್ತಿ-ಕೊಂಡು ತಂದು ಎಲೆಯ ಬುಡದಲ್ಲಿ ಬಚ್ಚಿಟ್ಟೆ. ಸಾಹೇಬರ ಜೋಪಡಿಯಲ್ಲಿ ಹೇಗೆ ಹೋಗಲೆಂದು ಯೋಚಿಸತೊಡಗಿದೆ. ಇಬ್ಬರು ಯಮದೂತರಂತೆ ಬಾಗಿಲದಲ್ಲಿ ಕುಳಿತಿದ್ದರು. ಅವರು ಸರಿಯದ ಹೊರತು ಅಲ್ಲಿ ಹೋಗು-ವಂತಿದ್ದಿಲ್ಲ. ಬಾಗಿಲನ್ನು ಹೇಗೆ ತೆಗೆಯಬಲ್ಲೆ? ಅದರ ಎದುರೊಂದು ದೊಡ್ಡ ಕಲ್ಲನ್ನು ಇಡಲಾಗಿತ್ತು. ಅದನ್ನು ಹೇಗೆ ಸರಿಸಬಲ್ಲೆ?

ಇದನ್ನೇ ವಿಚಾರಮಾಡುತ್ತ ಬಹಳ ಹೊತ್ತು ಸರಿಯಿತು. ಶರೀರವು ಬಳಲಿತ್ತು. ಅದರಿಂದ ನಿದ್ರೆ ಬರತೊಡಗಿತು. ಮತ್ತೊಂದು ಕ್ಷಣಕ್ಕೆ ಬೆಚ್ಚಿ

ಬೀಳುತ್ತಿದ್ದೆ. ಹೀಗೆಯೇ ಅರ್ಧರಾತ್ರಿ ಕಳೆಯಿತು. ನರಿಗಳು ಒದರ ಹತ್ತಿದವು. ಆಗ್ಗೆ ನಾನು ಮೆಲ್ಲನೆ ಜೋಪಡಿಯ ಸಮೀಪಕ್ಕೆ ಹೋದೆ. ಆವರಿಬ್ಬರು ಯಮದೂತರು ಅಲ್ಲಿಯೇ ಬಿದ್ದಿದ್ದರು. ಗೊರಕಿ ಹೊಡೆಯು-ತ್ತಿದ್ದರು. ಇವರಿಂದ ಎರಡನೆಯರಿಗೆ ಎರಡು ಬೆಕ್ಕುಗಳು ಬಡಿದಾಡುತ್ತಿರು-ವವೋ ಏನೋ ಎಂದು ಎನಿಸುತ್ತಿತ್ತು. ಜೀವದ ಪರಿವೆಯಿಲ್ಲದೆ ಬಾಗಿಲದ ಸಮೀಪಕೆ ಇಟ್ಟಿರುವ ಕಲ್ಲನ್ನು ಸರಿಸತೊಡಗಿದೆ. ದೊಡ್ಡ ಬಂಡೆಗಲ್ಲಿತ್ತು. ಎಷ್ಟೋ ಬಲ ಹಾಕಿ ನಾನು ಕಲ್ಲನ್ನು ಸರಿಸತೊಡಗಿದರೂ ಅಲ್ಲಾಡಲೊಲ್ಲದು. ಸ್ವಲ್ಪ ಸಪ್ಪಳಾದರೆ ಇವರಿಬ್ಬರಿಗೂ ಎಚ್ಚರಾಗಬಹುದು, ಇವರು ನನ್ನನ್ನು ಜೀವದಿಂದ ಬಿಡಲಾರರು ಎಂಬ ಭಯವಿತು . ಈ ಕಲ್ಲನ್ನು ಹೇಗೆ ಸರಿಸುವರೆಂದು ವಿಚಾರ ಮಾಡತೊಡಗಿದೆ. ಅದನ್ನು ಎತ್ತಲು ಯತ್ನಿಸುತ್ತಿದ್ದೆ. ಬಂಡೆಗಲ್ಲನ್ನು ಉರುಳಿಸಬೇಕೆಂದು ಹೊಳೆಯಿತು. ಎಡಬದಿಗೊಂದು ವಸ್ತುವಿತ್ತು. ಆದರೆ ಅದು ಯಾವ ಬದಿಗೂ ಸರಿಯುತ್ತಿದ್ದಿಲ್ಲ. ನೆಟ್ಟಗೆ ಮುಂದಕ್ಕೆ ಹೋಯಿತು. ಮೆಲ್ಲನೆ ಬಾಗಿಲನ್ನು ತೆರೆದೆ. ಮಾಂಸದ ತುಂಡು ತೆಗೆದುಕೊಂಡು ಬಾಗಿಲೊಳಗೆ ಹೋದೆ. ಸಾಹೇಬರು ಅವರ ಹೆಂಡತಿಯು ಮೂರ್ಛೆಬಿದ್ದುದನ್ನು ಕಂಡೆ. ಅವರ ಕಾಲುಗಳನ್ನು ನೆಕ್ಕಿ ಎಬ್ಬಿಸಿದೆ. ಅವರಿಬ್ಬರು ಬೆದರಿ ಬಂದು ಮೂಲೆಯ ಕಡೆಗೆ ಓಡಿದರು, ನಾನು ಕೂ, ಕೂ, ಎಂದು ಧ್ವನಿಮಾಡಲಾಗಿ ನಾನು ಕಲ್ಲೂ ಎಂಬುದು ಗೊತ್ತಾಯಿತು. ನನ್ನನ್ನು ತಬ್ಬಿಕೊಂಡು ಪ್ರೀತಿಯಿಂದ ನನ್ನನ್ನು ಸವರಹತ್ತಿದರು. ಮಾಂಸದ ತುಂಡನ್ನು ಸಾಹೇಬರ ಕೈಗೆ ಹಾಕಿದೆನು. ಅದರ ವಾಸನೆಯು ಬಡಿಯುತ್ತಲೇ ಇಬ್ಬರೂ ಕೂಡಿಕೊಂಡು ತಿನ್ನತೊಡಗಿದರು. ಆಗ್ಗೆ ಆದ ಆನಂದದ ವರ್ಣನೆ ಮಾಡಲಾರೆ. ಅವರು ತಿನ್ನುತ್ತ ಪ್ರೀತಿಯಿಂದ ನೋಡತೊಡಗಿದರು. ತಿಂದಾದ ಮೇಲೆ ಉಳಿದುದರಲ್ಲಿಯ ಒಂದು ತುಂಡನ್ನು ನನಗೆ ಕೊಟ್ಟರು. ನಾನೂ ಅದನ್ನು ಅಲ್ಲಿಯೇತಿಂದೆ. ನೀರೆಲ್ಲಿಂದ ಬರಬೇಕು. ತಿಂದ ಮೇಲೆ ನೀರು ಕುಡಿಯುವ ಚಟವಿದ್ದಿದ್ದಿಲ್ಲ, ಆದರೆ ಮನುಷ್ಯರು ತಿನ್ನುತ್ತಿರುವಾಗಲೇ ಅಲ್ಪಸ್ವಲ್ಪ ಅವಶ್ಯ ಕುಡಿಯುತ್ತಿರುತ್ತಾರೆ. ಈ ಮಾತು ನೆನಪಿಗೆ ಬಂತು. ಹೊರಗೆ ಬಂದು ನೀರನ್ನು ಹುಡುಕತೊಡಗಿದೆ. ಈ ಜೋಪಡಿಗಷ್ಟೇ ಕಿಟಕಿಗಳಿದ್ದವು. ಮತ್ತಾವ ಜೋಪಡಿಗೆ ಕಿಟಕಿಗಳಿದ್ದಿಲ್ಲ. ಜೋಪಡಿಗಳು ತೆರೆದಿದ್ದವು. ಜನರು

ಬಾಗಿಲಲ್ಲಿ ಮಲಗಿದ್ದರು. ಅವುಗಳೊಂದರಲ್ಲಿ ಹೊಕ್ಕು ನೀರಿನ ಪಾತ್ರೆಗಳನ್ನು ನೋಡಿದೆ. ಮಣ್ಣಿನವಾಗಲಿ ಧಾತುಗಳವಾಗಲಿ ಪಾತ್ರೆಗಳಿದ್ದಿಲ್ಲ. ಪಶುಗಳ ತಲೆಬುರುಡೆಗಳಲ್ಲಿ ನೀರನ್ನಿಟ್ಟಿದ್ದರು. ಸಣ್ಣ ಬುರುಡೆಗಳಲ್ಲಿ ನೀರನ್ನು ತೆಗೆದುಕೊಂಡು ಕುಡಿಯುತ್ತಿದ್ದರು. ಅವುಗಳೊಂದರಲ್ಲಿ ನೀರನ್ನು ತುಂಬಿ ಬಾಯಿಯಲ್ಲಿ ಅದನ್ನು ಹಿಡಿದುಕೊಂಡು ಸಾಹೇಬರ ಕಡೆಗೆ ಬಂದೆನು. ಅವರಿಬ್ಬರೂ ನೀರನ್ನು ನೋಡಿದೊಡನೆಯೇ ಅದರ ಮೇಲೆ ಮುಗಿಬಿದ್ದರು. ಒಂದೇ ಉಸುರಿನಲ್ಲಿ ಎಲ್ಲವನ್ನು ಕುಡಿದರು. ಆ ಬುರುಡೆಯನ್ನು ತೆಗೆದು-ಕೊಂಡು ಹೋಗಿ ಮತ್ತೆ ನೀರು ತಂದೆನು. ಈ ರೀತಿ ಐದಾರು ಬಾರಿ ನೀರು ತಂದು ಕೊಟ್ಟ ಮೇಲೆ ಒಡೆಯರಿಬ್ಬರ ಬಾಯಾರಿಕೆಯು ಕಡಿಮೆಯಾಯಿತು ಇಬ್ಬರಿಗೂ ಉಣ್ಣಿಸಿ ಕುಡಿಸಿದ ಮೇಲೆ ಮೆಲ್ಲಗೆ ಹೊರಗೆ ಬಂದೆನು. ಬಾಗಿಲನ್ನು ಮುಚ್ಚಿ ಕಲ್ಲನ್ನು ಮೊದಲಿದ್ದಂತೆ ಸರಿಸಿಬಿಟ್ಟೆನು. ನಾನು ಇಚ್ಛೆಪಟ್ಟಿದ್ದರೆ ಮಾಲಕರನ್ನು ಹೊರಗೆ ತರುತ್ತಿದ್ದೆ ಆದರೆ ಹೋಗುವದೆಲ್ಲಿ? ಅಪರಿಚಿತ ದೇಶದಲ್ಲಿ ರಾತ್ರಿ ತಿರಗಾಡುವದೆಲ್ಲಿ? ಆ ಕಪ್ಪು ಮನುಷ್ಯನು ಮತ್ತೆ ಹಿಡಿಯುತ್ತಿದ್ದ. ಆದರೆ ಪ್ರಾಣವನ್ನೇ ತೆಗೆದುಕೊಳ್ಳುತ್ತಿದ್ದ. ಆದುದರಿಂದ ಈ ದೇಶವನ್ನು ನೋಡಿಕೊಂಡು ಹೊರಗೆ ಹೋಗತಕ್ಕ ಮಾರ್ಗವನ್ನು ಕಂಡು ಹಿಡಿಯುವ ವರೆಗೆ ಅವರು ಅಲ್ಲಿರುವದೇ ಒಳಿತೆಂದು ತಿಳಿದೆನು.

ಇದೇ ನನ್ನ ನಿತ್ಯಕರ್ಮವಾಯಿತು— ಹಗಲೆಲ್ಲ ಅತ್ತಿತ್ತ ತಿರುಗಾಡಿ ನೋಡುತ್ತಿರುವುದು, ರಾತ್ರಿ ಸಾಹೇಬರಿಗೆ ಉಣಿಸಿ ಕುಡಿಸುವದು ಹಾಗೂ ಮಲಗುವದು. ಯಾರೂ ನನ್ನನ್ನು ಹಿಡಿಯುತ್ತಿದ್ದಿಲ್ಲ ಯಾರೂ ನನ್ನನ್ನು ನೋಡುತ್ತಿದ್ದಿಲ್ಲ. ನಾನು ಇವತ್ತಿನ ವರೆಗೂ ತುಡುಗು ಮಾಡಿದ್ದಿಲ್ಲ. ಆದರೆ ಈ ಕಳವಿಗೆ ನಾನು ಪಾಪವೆಂದು ತಿಳಿದಿಲ್ಲ. ನಾನು ಹೀಗೆ ಮಾಡಿದ್ದಿಲ್ಲ-ವಾದರೆ ಸಾಹೇಬರು ಮತ್ತು ಅವರ ಹೆಂಡತಿಯು ಉಪವಾಸಬಿದ್ದು ಸಾಯುತ್ತಿದ್ದರು.

ಆ ಕಪ್ಪು ಮನುಷ್ಯರು ಅವರನ್ನು ಏಕೆ ಕೈದು ಮಾಡಿಟ್ಟಿದ್ದರೆಂಬುದು ನನಗೆ ತಿಳಿಯಲಿಲ್ಲ. ತಮ್ಮನ್ನು ಹಿಡಿದು ಹಾಕಲಿಕ್ಕೆ ಅವರು ಬಂದಿರ ಬೇಕೆಂದು ಅವರು ತಿಳಿದಿದ್ದರು ಅಥವಾ ಅವರನ್ನು ಹುಡುಕಲು

ಯಾರಾದರೂ ಬರಬಹುದೆಂದು ತಿಳಿದಿದ್ದರು. ಅವರಿಂದ ಒಳ್ಳೆ ಒಳ್ಳೆ ಸಾಮಾನುಗಳನ್ನು ಎತ್ತಬೇಕೆಂದಿದ್ದರು. ಸಾಹೇಬರು ಹಾಗೂ ಅವರ ಹೆಂಡತಿಯು ದೇವತೆಗಳಿರಬೇಕೆಂದು ಅವರ ಕೃತಿಯಿಂದ ತಿಳಿಯುತ್ತಿತ್ತು. ಆ ಜೋಪಡಿಯು ದೇವತೆಗಳ ಮಂದಿರವಿತ್ತು. ಏಕೆಂದರೆ ಅವರು ದಿನಾಲು ಪ್ರಾತಃಕಾಲ ಎಲ್ಲರೂ ಜೋಪಡಿಯ ಎದುರಿಗೆ ಒಮ್ಮೆಯಾದರೂ ಕುಣಿಯು-ತ್ತಿದ್ದರು. ಬಹುಶಃ ಇದೇ ಅವರ ಪೂಜೆ ಇದ್ದಿತು, ದೇವರಿಗೆ ಉಣ್ಣುವ ಕುಡಿಯುವ ಆವಶ್ಯಕತೆಯೇ ಇಲ್ಲವೆಂದು ಅವರ ವಿಚಾರವಿತ್ತು.

## ೧೦

ಆದೇಶದಲ್ಲಿ ಸುಮಾರು ಒಂದು ತಿಂಗಳು ಇದ್ದೆವು. ಆ ಅಡವಿಯ ಮನುಷ್ಯರು ಸಾಹೇಬರನ್ನು ಎಂದೂ ಹೊರಗೆ ತೆಗೆಯಲಿಲ್ಲ. ಮಾತನ್ನೇನು ಆಡುತ್ತಿದ್ದರು? ಈ ದೇವತೆಗಳನ್ನು ಹೊರಗೆ ತೆಗೆದರೆ ದೇಶಕ್ಕೆ ಎಂಥ ಆಪತ್ತು ಒದಗಬಹುದೆಂಬುದು ಗೊತ್ತಾಗದೆಂದು ತಿಳಿದಿದ್ದರು. ದೇವತೆಗಳು ಭಯಾನಕ ಜೀವ. ಅದರಿಂದ ಹಾನಿಯಾಗುವದೇ ಹೊರತು ಲಾಭವಾಗದೆಂದು ಭಾವಿಸಿದ್ದರು.

ಒಂದು ತಿಂಗಳಲ್ಲಿ ದೇಶವನ್ನು ಸುತ್ತಾಡಿ ಚನ್ನಾಗಿ ನೋಡಿಕೊಂಡೆನು. ಅದರ ಒಂದು ಬದಿ ಸಮುದ್ರವಿತ್ತು. ಪಶ್ಚಿಮಭಾಗಕ್ಕೆ ಬರ್ಫು ಹೆಪ್ಪುಗಟ್ಟಿದ ಒಂದು ಎತ್ತರವಾದ ಗುಡ್ಡವಿತ್ತು. ದಕ್ಷಿಣಕ್ಕೆ ಕಲ್ಲುಗಳುಳ್ಳ ಮೈದಾನವಿತ್ತು. ಅಲ್ಲಿ ಹುಲ್ಲಿನ ಹೊರತಾಗಿ ಮತ್ತೇನೂ ಇದ್ದಿದ್ದಿಲ್ಲ. ಇಲ್ಲಿಂದ ಓಡಿಹೋದರೂ ಹೋಗುವದೆಲ್ಲಿಗೆ? ನನಗೆ ಇದೇ ಚಿಂತೆಯು ಬಾಧಿಸುತ್ತಿತ್ತು. ಸಮುದ್ರದ ದಂಡೆಯ ಮೇಲೆ ಈ ಅಡವಿಯ ಜನರು ಬರುತ್ತ ಹೋಗುತ್ತಲೇ ಇದ್ದರು. ಆದುದರಿಂದ ಅತ್ತಕಡೆಗೆ ಹೋದರೆ ಮತ್ತೆ ಕೈದು ಮಾಡಲ್ಪಡುವ ಭಯವಿತ್ತು. ಎತ್ತರವಾದ ಗುಡ್ಡವನ್ನು ಹತ್ತುವದು ಕಠಿಣ ಕೆಲಸವಾಗಿತ್ತು. ಅದರ ಆಚೆಗೆ ಏನಿರುವದೆಂಬುದು ಯಾರಿಗೆ ಗೊತ್ತು? ಆಚೆಗೆ ಮುಟ್ಟುವದೂ ಅಸಂಭವವೆನಿಸುತ್ತಿತ್ತು. ಅದೇ ಮೈದಾನದ ಕಡೆಗೆ ಓಡಿ ಹೋಗುವ ಧಾರಿಯಿತ್ತು. ೨೫-೩೦ ಮೈಲು ಓಡಿ ಹೋದ ಮೇಲೆ ಬೇರೆ ಒಂದು ದೇಶವು

ಹತ್ತಬಹುದು. ಅಲ್ಲಿಯ ಜನರು ಇಲ್ಲಿಯಂತೆ ಕಾಡು ಜನರಾಗಿರಲಿಕ್ಕಿಲ್ಲ. ಇದನ್ನೇ ನಿಶ್ಚಯ ಮಾಡಿದೆ.

ಒಮ್ಮೆ ಒಂದು ದಿನ ಬಹಳ ಚಳಿ ಬಿದ್ದಿತ್ತು. ಸುತ್ತಲೂ ಇಬ್ಬನ್ನಿ ಬಿದ್ದಿತ್ತು. ಇಂದು ಸಾಹೇಬರ ಜೋಪಡಿಯ ಬಾಗಿಲಿನ ಕಾವಲುಗಾರರು ಥಂಡಿಗೆ ಬೆದರಿ ತಮ್ಮ ಜೋಪಡಿಯ ಒಳಗೆ ಮಲಗಿದ್ದರು. ಹೊರಗಾರೂ ಇದ್ದಿದ್ದಿಲ್ಲ. ಈ ಸುಸಮಯವನ್ನು ಕಳೆದುಕೊಳ್ಳಬಾರದೆಂದು ನಿಶ್ಚಯಿಸಿದೆ. ಇಂಥ ಸಮಯವು ಪುನಃ ದೊರೆಯಲಾರದು. ಎಲ್ಲ ಜನರು ಮಲಗಿದ ಮೇಲೆ ಜೋಪಡಿಯ ಎದುರಿನ ಕಲ್ಲನ್ನು ಉರುಳಿಸಿದೆ. ಆದರ ಬಾಗಿಲವನ್ನು ತೆರೆದು ಸಾಹೇಬರಿಬ್ಬರಿಗೂ ಹೊರಗೆ ಹೊರಡುವ ಸಂಕೇತವನ್ನು ಮಾಡಿದೆನು ಸಾಹೇಬರು ಅದನ್ನು ಚನ್ನಾಗಿ ತಿಳಿದುಕೊಂಡಿದ್ದರು. ಇಬ್ಬರೂ ಕೂಡಲೇ ಹೊರಡಲು ಎದ್ದುನಿಂತರು. ನಾನು ಮುಂದೆ ಮುಂದೆ ಹೊರಟೆ. ಎರಡು ದಿನಗಳ ಊಟವನ್ನು ತಂದು ಸಾಹೇಬರಿಗೆ ಮೊದಲೇ ಕೊಟ್ಟುಬಿಟ್ಟಿದ್ದೆ. ಅದರ ಚಿಂತೆ ಇದ್ದಿದ್ದಿಲ್ಲ. ನಾವು ಇಲ್ಲಿ ಇಲ್ಲದಿರುವವನ್ನು ನೋಡಿ ಎಲ್ಲಿಯಾದರೂ ಈ ಕಾಡು ಜನರು ಬೆನ್ನಟ್ಟುವರೆಂಬುದೇ ಭಯವಿತ್ತು. ಆದುದರಿಂದ ಇಡೀರಾತ್ರಿ ನಡೆಯ-ಲಿಕ್ಕಾದಷ್ಟು ನಡೆಯಲೇ ಬೇಕು. ಕಗ್ಗತ್ತಲೆಯಾಗಿತ್ತು. ಯಾವ ತೊಂದರೆಯೂ ಇಲ್ಲದೆ ನಾನು ನಡೆಯುತ್ತಿದ್ದೆ. ಸಾಹೇಬರ ಹೆಂಡತಿಯು ಅಲ್ಲಲ್ಲಿ ಕೂಡ್ರುತ್ತಿದ್ದಳು. ಆ ಮೇಲೆ ಸಾಹೇಬರು ಬಹಳ ಹೇಳಿದ ಮೇಲೆ ಮತ್ತೆ ಎದ್ದು ಹೊರಡುತ್ತಿದ್ದಳು.

ಕೊನೆಗೆ ಅವಳು ಸಿಟ್ಟಿಗೆದ್ದು 'ಹೀಗೆಯೇ ಎಷ್ಟು ಹೊತ್ತಿನ ವರೆಗೆ ಹೋಗುವದು' ಎಂದು ಕೇಳಿದಳು.

ಸಾಹೇಬರು:— ಶಕ್ಯವಾದಷ್ಟು ದೂರ ಹೋಗುವದು.

ಸಾಹೇಬರ ಹೆಂಡತಿ:— ಎಲ್ಲಿಯಾದರೂ ಉಳಿದುಕೊಳ್ಳಬಾರದೇಕೆ? ಬೆಳಗ್ಗೆ ಹೋದರಾಗಲಾರದೇ?

ಸಾಹೇಬರು:—ಬೆಳಗ್ಗೆ ಕೈದು ಮಾಡಲ್ಪಟ್ಟರೆ?

ಅವಳು ಇದಕ್ಕೆ ಉತ್ತರ ಕೊಡಲಿಲ್ಲ ಮತ್ತೆ ಹೊರಟಳು. ಇದಕ್ಕಿಂತ ಕೈದಾಗಿರುವದೇ ಮೇಲು. ಅಂದರೆ ಅಲ್ಲಿಯೇ ಸುಖವಾಗಿ ಬಿದ್ದಿರಬಹುದೆಂದು

ವಟಗುಡುತ್ತಿದ್ದಳು. ಇಲ್ಲಿ ಕರೆದುಕೊಂಡು ಬಂದು ಎಂಥ ಅಡವಿಯ ಪಾಲು ಮಾಡಿದಿರಿ? ನೀರಡಿಕೆಯಿಂದ ಸತ್ತು ಹೋಗಬಹುದು ಎಲ್ಲಿಯೂ ಜನರ ಬಿಡಾರವು ಇಲ್ಲೇ ಇಲ್ಲ. ಈ ರೀತಿ ನಾವು ಅರ್ಧ ಗಂಟೆ ಹೋಗಿರ. ಬಹುದು ಆದರೆ ಹಿಂದೆ ಬಹಳ ಜನರು ಗದ್ದಲ ಮಾಡುತ್ತಿರುವುದು ಕೇಳಿ-ಬಂದಿತು. ಸಾವಿರಾರು ಜನರು ಓಡಿ ಬರುತ್ತಿರುವದರ ಅರಿವಾಯಿತು, ನಾವು ಓಡಿ ಬರುತ್ತಿರುವ ಗುಟ್ಟು ರಟ್ಟಾಗಿ ಅದೇ ಜನರು ಹಿಡಿಯಲು ಬರುತ್ತಿರಬಹುದು. ಅವರೇ ನೀಚರು. ನಮ್ಮನ್ನು ಕೈದು ಮಾಡುವರು ಎಂದು ಸಾಹೇಬರು ತಮ್ಮ ಹೆಂಡತಿಗೆ ಹೇಳಿದರು.

ಹೆಂಡತಿಯು:— ಹೌದು. ಹಾಗೆಯೇ ಎನಿಸುವದು.

ಸಾಹೇಬರು:—ಬಡಪಾಯಿ ಕಲ್ಲೂನು ಇಲ್ಲಿಯ ವರೆಗೆ ಕರೆದುಕೊಂಡು ಬಂದನು. ನಮ್ಮ ಅದೃಷ್ಟವೇ ಹೀಗಿದ್ದರೆ ಅವನೇನು ಮಾಡಬಲ್ಲನು?

ಹೆಂಡತಿಯು:— ಎಲ್ಲಿಯಾದರೂ ಆಸರವು ದೊರೆಕೀತು. ನಾವೂ ಓಡೋಣ.

ಇಬ್ಬರೂ ಓಡಿದರು. ಒಂದೊಂದು ಹೆಜ್ಜೆ ನಡೆಯುವದೂ ಕಠಿಣ-ವೆನಿಸುತ್ತಿದ್ದರೂ ಅವಳು ಓಡತೊಡಗಿದಳು ಸಾಹಸದ ಸಾಮರ್ಥ್ಯವೆಷ್ಟು! ಪೂರ್ವ ದಿಕ್ಕಿನಲ್ಲಿ ಪ್ರಕಾಶವಾಗುತ್ತಿರುವುದು ಕಾಣಿಸಹತ್ತಿತು. ಇನ್ನು ಸ್ವಲ್ಪ ಹೊತ್ತಿಗೆ ಪೂರ್ಣ ಬೆಳಗಾಗುವುದು. ಆಗ್ಗೆ ನಾವು ಎಲ್ಲಿಗೆ ಹೋಗು-ತ್ತಿರುವೆಂಬುದಾದರೂ ಗೊತ್ತಾಗುವುದು. ಓಡುತ್ತಲೇ ಇದ್ದೆವು.

ಹೀಗೆ ಮತ್ತೆ ಅರ್ಧ ತಾಸು ಕಳೆಯಿತು. ನಸುಕು ಹರಿಯಿತು. ದಾರಿಯು ಚನ್ನಾಗಿ ಕಾಣತೊಡಗಿತು. ಆದರೆ ಬೆನ್ನಟ್ಟುವವರೂ ಕೂಡ ಸಮೀಪಿಸಿದ್ದರು. ಅವರ ಧ್ವನಿಯು ಸ್ಪಷ್ಟ ಕೇಳುತ್ತಿತ್ತು. ಸಮಪಾತಳಿ ಭೂಮಿ ಇದ್ದರೆ ಅವರು ಕಣ್ಣಿಗೆ ಕಾಣಲೂ ಬಹುದಿತ್ತು. ಎಲ್ಲರೂ ಬಂದು ಹಿಡಿದರೆ ನಾವು ರಕ್ಷಣೆಯನ್ನು ಹೇಗೆ ಮಾಡಿಕೊಳ್ಳುವುದೆಂದು ಯೋಚಿಸು-ತ್ತಿದ್ದೆ.

ಒಮ್ಮೆಲೆ ನಮಗೊಂದು ಗಂಭೀರವಾದ ಗುಹೆಯು ಕಾಣಿಸಿತು. ಈ ಗುಹೆಯಲ್ಲಿ ಅಡಗಿಕೊಂಡು ಅದರ ಬಾಯಿಗೆ ಹುಲ್ಲನ್ನು ಹೊಚ್ಚಿದರೆ ಆ ಕಪ್ಪು

ವರ್ಣದವರಿಂದ ನಮ್ಮ ಜೀವವು ಉಳಿಯಬಹುದು. ಒಂದು ವೇಳೆ ಹಿಡಿಯಲ್ಪಟ್ಟರೆ ಅದೇ ಕತ್ತಲೆ ಕೋಣೆಯಲ್ಲಿ ಕೊಳೆಯುತ್ತ ಬೀಳುವುದು. ಅವರಿಂದ ಪಾರಾದರೆ ಇಡೀ ಹಗಲು ಎಷ್ಟು ದೂರ ಹೋಗಬಹುದೆಂದು ಯೋಚಿಸುತ್ತಿದ್ದೆ.

ಯೋಚಿಸುತ್ತಲೇ ಆ ಗುಹೆಯನ್ನು ಹೊಕ್ಕೆನು. ಸಾಹೇಬರೂ ಅವರ ಹೆಂಡತಿಯೂ ನನ್ನ ಈ ಕಾರ್ಯದ ಅರ್ಥ ಮಾಡಿಕೊಂಡರು. ಅವರಿಬ್ಬರೂ ನನ್ನನ್ನು ಹಿಂಬಾಲಿಸಿದರು. ಇದರಲ್ಲಿ ಒಂದು ಸಿಂಹ ಅಥವಾ ಚಿರ್ಚಾಗಲೀ ಬಂದು ಕೂತಿರಬಹುದೆಂದು ಅಂಜುತ್ತಿದ್ದೆವು. ನಾನು ಮುಂದೆ ಇದ್ದೆ. ಸ್ವಲ್ಪ ದೂರ ಹೋಗಿದ್ದೆ, ಎರಡು ದೀಪಗಳು ಹಚ್ಚಿಟ್ಟವೆಯೋ ಏನೊ ಎನ್ನುವಂತೆ ಪ್ರಕಾಶ ಕಾಣಿಸತೊಡಗಿತು, ನಾನು ಜೋರಾಗಿ ಕೂಗಿ ಹಿಂದೆ ಸರಿದೆನು, ಎದುರಿಗೆ ನಿಜವಾಗಿಯೂ ಒಂದು ಸಿಂಹವು ಕೂತಿತ್ತು, ಈಗೇನು ಮಾಡಲಿ? ನನ್ನ ಸಾಹಸವೇ ಉಡುಗಿಹೋಯಿತು, ಅತ್ತ ಮುಂದೆಯೂ ಹೋಗಲಾರೆ, ಇತ್ತ ಹಿಂದೆಯೂ ಸರಿಯಲಾರೆ. ಅಲ್ಲಿಯೇ ಕಲ್ಲಿನ ಮೂರ್ತಿಯಂತೆ ನಿಂತುಬಿಟ್ಟೆ. ಸಾಹೇಬರೂ ಅವರ ಹೆಂಡತಿಯೂ ಮೂರ್ಛೆಹೋಗಿ ಬಿದ್ದುಬಿಟ್ಟರು. ನಾನಂತೂ ನಿಂತುಬಿಟ್ಟೆ, ಅವರಿಬ್ಬರ ಪ್ರಾಣವೇ ಹೋದಂತಾಯಿತು. ಈಗ ನಾನು ಸಚೇತನಾದೆ. ಹೆದರಿಕೆಯು ಕಡಿಮೆಯಾಗತೊಡಗಿತು. ಹೋಗಿ ಅವರಿಬ್ಬರನ್ನು ಮೂಸಿನೋಡಿದೆನು. ಅವರು ಸತ್ತಿದ್ದಿಲ್ಲ. ಜೀವ ಮಾತ್ರ ಇತ್ತು, ಈಗ ಏನು ಮಾಡಬೇಕೆಂದು ವಿಚಾರ ಮಾಡತೊಡಗಿದೆ. ಒಂದು ಆಪತ್ತಿನಿಂದ ಹೇಗೋ ಪಾರಾದೆವು. ಮತ್ತೊಂದು ಹೊಸ ಗಂಡಾಂತರವು ಬಂದಿತು. ಸಿಂಹವು ಮಾತ್ರ ತನ್ನ ಸ್ಥಳವನು ಬಿಟ್ಟಿರಲಿಲ್ಲ. ಜಿಗಿಯುವದಂತೂ ದೂರ ಉಳಿಯಿತು. ಸುಮ್ಮನೆ ನನ್ನೆಡೆಗೆ ನೋಡುತ್ತಿತ್ತು. ನನ್ನ ಹೆದರಿಕೆಯು ಹೋಗಹತ್ತಿದೆಯೆಂಬುದು ಮಾತ್ರ ಕಾಣಿಸತೊಡಗಿತು. ಅಂಜುತ್ತ ಅಂಜುತ್ತ ಒಂದು ಹೆಜ್ಜೆ ಮುಂದಿಟ್ಟೆ, ಆದರೂ ಸಿಂಹವು ಮಾತ್ರ ಅಲ್ಲಾಡಲಿಲ್ಲ. ನನಗೆ ಅದು ನರಳುತ್ತಿರುವುದು ಕೇಳಿತು. ಅದು ಅಸ್ವಸ್ಥ ಇರಬೇಕೆಂದು ಅನಿಸಿತು. ಇನ್ನೂ ಮುಂದಕ್ಕೆ ಹೋದ ಮೇಲೆ ಅದು ತನ್ನ ನೋವಿನ ಧ್ವನಿಯನ್ನು ತೆಗೆಯಿತು ಮತ್ತು ಮುಂದಿನ ಕಾಲನ್ನು ಎತ್ತಿತು. ಅದು ಬಹಳಷ್ಟು ಊತುಕೊಂಡಿತ್ತು. ಇದು

ನೋವಿನಿಂದಲೇ ಹೀಗೆ ಕೂತಿದೆಯೆಂದು ಎನಿಸಿತು. ಮೇಲಿಂದ ಮೇಲೆ ಬಾಲವನ್ನು ಅಲ್ಲಾಡಿಸುತ್ತ ಆಕಳಿಸುತ್ತಿತ್ತು. ನಮ್ಮಂತೆ ನರಳುತ್ತಿತ್ತು. ಇದರ ಕಾಲಲ್ಲಿ ಅವಶ್ಯವಾಗಿ ಮುಳ್ಳು ನೆಟ್ಟದೆ ನಾನು ಹೇಗೆ ತೆಗೆಯುವಲ್ಲೆ. ಹಲ್ಲುಗಳಾದರೂ ಸಿಂಹದಂತೆಯೇ ಇವೆ. ಇದಂತೂ ಏನೂ ಮಾಡಲಾರದು, ಇದನ್ನು ಹೀಗೆಯೇ ಇರಗೊಡಲೇ ಎಂದು ಮನಸ್ಸಿನಲ್ಲಿ ಬಂದಿತು ಮುಳ್ಳನ್ನು ತೆಗೆಯುತ್ತಲೇ ಇದು ಸ್ವಸ್ಥವಾಗಿ ಒಂದೇ ಹಾರಿಕೆಯ ಲ್ಲಿ ನಮ್ಮ ಮೂವರನ್ನೂ ನುಂಗಬಹುದೆಂಬ ಭಯವೂ ಬಂದಿತು. ಆದರೆ ಕರುಣೆ ಹುಟ್ಟಿತು ಎರಡನೆ-ಯವರ ಉಪಕಾರವನ್ನೆಂದಿಗೂ ನಾವಂತೂ ಮರೆಯುವದಿಲ್ಲ. ಇದಾದರೂ ನಮ್ಮ ಬಂಧುಬಳಗದ ಪ್ರಾಣಿಯೇ ಇದೆ.

ಹೀಗೆ ವಿಚಾರ ಮಾಡುತ್ತ ಇರುವಾಗ ಸಾಹೇಬರು ಎಚ್ಚರವಾಗು-ತ್ತಿರುವದನ್ನು ಕಂಡೆ. ಕಣ್ಣುಗಳು ತೆರೆಯಲಾಗಿದ್ದವು ನಾನು ಸಿಂಹದ ಹತ್ತಿರ ಕುಳಿತಿರುವದನ್ನು ನೋಡಿ ಸ್ವಲ್ಪ ಧೈರ್ಯ ಬಂದಿತು. ಅಲ್ಲಿಂದ ಓಡಿ ಹೋಗಲಿಲ್ಲ ಸಿಂಹವು ಅವರನ್ನು ನೋಡಿ ಮತ್ತಷ್ಟು ಬಾಲ ಅಲ್ಲಾಡಿಸುತ್ತ ಊದಿಕೊಂಡಿದ್ದ ಕಾಲನ್ನು ಎತ್ತಿ ತೋರಿಸುತ್ತಿತ್ತು. ಇದು ಕುಂಟ ಇರುವ-ದೆಂದು ಅವರಿಗೂ ಗೊತ್ತಾಯಿತು. ಸಾಹೇಬರು ತಮ್ಮ ಹೆಂಡತಿಯನ್ನು ಎಷ್ಟೋ ಸಾರೆ ಕುಲಕಾಡಿಸಿದರು. ಅವಳಿಗೆ ಎಚ್ಚರ ಬಂದ ಮೇಲೆ ಬಹಳ ಹೊತ್ತಿನ ವರೆಗೆ ಮಾತನಾಡುತ್ತಿದ್ದರು. ಸಾಹೇಬರು ಸಿಂಹದ ಹತ್ತಿರ ಹೋಗಿ ಕಾಲನ್ನು ಎತ್ತಿ ಮೆಲ್ಲಗೆ ಅದರ ಮುಳ್ಳನ್ನು ಹೊರತೆಗೆದರು ಅದರ ನೋವು ಕಡಿಮೆಯಾಗತೊಡಗಿತು. ಅದು ತನ್ನ ತಲೆಯನ್ನು ಅವರ ಪಾದಗಳ ಮೇಲೆ ಇಟ್ಟು ಬಾಲವನ್ನು ಅಲ್ಲಾಡಿಸತೊಡಗಿತು.

ಅಕಸ್ಮಾತ್ತಾಗಿ ಹೊರಗಿನ ಜನರು ಒದರುವ ಧ್ವನಿ ಕೇಳಿಸಿತು. ಆ ಜಂಗಲೀ ಜನರು ನಮ್ಮನ್ನು ಬೆನ್ನಟ್ಟುತ್ತ ಇಲ್ಲಿಗೇ ಬಂದಿದ್ದಾರೆಂದು ನನಗೆ ತಿಳಿಯಿತು. ಹೋಗಿ ಬಾಗಿಲಲ್ಲಿ ನಿಂತೆ. ಇಲ್ಲಿಯೇ ಸತ್ತರೂ ಚಿಂತೆಯಿಲ್ಲ. ಯಾರನ್ನೂ ಇಲ್ಲಿ ಬಿಡಗೊಡಲಾರೆ. ಬಾಗಿಲಿಗೆ ಬಂದೆನೊ ಇಲ್ಲವೊ ಅಷ್ಟರಲ್ಲಿ ಹತ್ತು ಹನ್ನೆರಡು ಕಾಡು ಜನರು ಮೋರೆಗೆ ಕೆಂಪು ಬಣ್ಣ ಬಳಿದುಕೊಂಡು ಕೈಯಲ್ಲಿ ಭಾಲೆಯನ್ನು ಹಿಡಿದುಕೊಂಡು ಬಂದುಬಿಟ್ಟರು. ನನ್ನನ್ನು ನೋಡಿ

ಚಪ್ಪಾಳೆ ಇಕ್ಕಿ ಸಂತೋಷಪಡಹತ್ತಿದರು. ಇನ್ನೆಲ್ಲಿ ಹೋಗಬಲ್ಲರು ? ಗೆದ್ದೆ-ವೆಂದು ಸಂತೋಷ ಹೊಂದುತ್ತಿದ್ದರು. ಇಬ್ಬರು ಮೂವರು ಗುಹಾಪ್ರವೇಶ ಮಾಡುವ ಪ್ರಯತ್ನ ಮಾಡತೊಡಗಿದರು. ಭಲ್ಲೆ ಢಾಲುಗಳ ಮುಂದೆ ನನ್ನದೇನು ಆಟ ? ಆಯಿತು. ನಿಂತು ಕೂಗತೊಡಗಿದೆ.

ಏನು ! ಆಕಾಶವು ಕಳಚಿತೆ ! ಏನು ಎರಡು ಗುಡ್ಡಗಳು ಹೊಡೆದಾಡ ತೊಡಗಿದವೊ ! ಇಡೀ ಗುಹೆಯು ಅಲ್ಲಾಡುವಷ್ಟು ಗರ್ಜನೆಯಾಯಿತು. ಇದು ಸಿಂಹದ ಗರ್ಜನೆ ಇತ್ತು. ಕಾಡು ಮನುಷ್ಯರನ್ನು ನೋಡಿ ಒಂದೇ ಹಾರಿಕೆಗೆ ಬಾಗಿಲಿಗೆ ಬಂದಿತು ಅವರಲ್ಲಿ, ಎಂಥ ಗೊಂದಲವು ಯ ಓಡಾಟ ಪ್ರಾರಂಭವಾಯಿತೆಂದು ಕೇಳುವಂತೆಯೇ ಇಲ್ಲ. ಭಲ್ಲೆಢಾಲುಗಳನ್ನು ಬಿಟ್ಟು-ಕೊಟ್ಟು ಒಬ್ಬರ ಮೇಲೊಬ್ಬರು ಬೀಳುತ್ತ ಎಡವುತ್ತ ಓಡಿಹೋದರು. ಆದರೆ ಒಬ್ಬನನ್ನು ಮಾತ್ರ ಸಿಂಹವು ಕೊಂದೇ ಬಿಟ್ಟಿತು. ನಮ್ಮೆದುರಿಗೇನೇ ತಿಂದು ಬಿಟ್ಟಿತು. ನನಗೆ ರೋಮಾಂಚಗಳೆದ್ದುವು. ಸಾಹೇಬರ ಹೆಂಡತಿಯಂತೂ ಕಣ್ಣುಮುಚ್ಚಿ ಕುಳಿತಳು ಇಲ್ಲಿಂದ ಹೇಗಾದರೂ ಪಾರಾಗಬೇಕೆಂದು ಯೋಚಿಸತೊಡಗಿದೆ. ಇಂಥ ಭಯಾನಕ ಪ್ರಾಣಿಯದೇನು ಭರವಸೆ ? ಇದು ಸ್ವಚ್ಛನಾಗಿ ಯಾವಾಗ್ಗೆ ಏನು ಮಾಡುವದೆಂಬುದೇನು ಗೊತ್ತು!

ಬಹಳ ಹೊತ್ತಿನ ವರೆಗೆ ಅಲ್ಲಿಯೇ ಕುಳಿತು ಬಿಟ್ಟೆ. ನಾನು ಹೊರಗೆ ಬಂದು, ಆ ಕಾಡು ಜನರಲ್ಲೊಬ್ಬನೂ ಇಲ್ಲದಿರುವುದನ್ನು ನೋಡಿ ಸಾಹೇಬರಿಗೆ ಹೊರಡುವ ಸಂಕೇತ ಮಾಡಿದೆ. ಇಬ್ಬರೂ ಅಂಜುತ್ತ ಅಂಜುತ್ತ ಅತ್ತ ಕಡೆಗೇ ಹೊರಟರು. ಸಿಂಹವು ಆಕಳಿನಂತೆ ತಲೆ ತಗ್ಗಿಸಿ ನಮ್ಮನ್ನು ನೋಡ ತೊಡಗಿತು. ಈ ಮಹಾಶಯನು ನಮ್ಮ ಮೇಲೆ ದಯೆತೋರಿ ನಮಗೆ ಹೋಗಗೊಡಲೆಂಬುದೇ ನನ್ನ ಹಾರೈಕೆ ಇತ್ತು.

ಸಾಯಂಕಾಲದಷ್ಟೊತ್ತಿಗೆ ಒಂದು ಅಡವಿಗೆ ಮುಟ್ಟಿದೆವು. ಏನೂ ತಿಳಿಯ ಲಾರದಂಥ ದಟ್ಟವಾದ ಅಡವಿ ಇತ್ತು. ಸಿಂಹದ ಹಿಂದೆ ಹಿಂದೆಯೇ ಹೋಗ ತೊಡಗಿದ್ದೆವು. ಒಮ್ಮೆಲೆ ಯಾವದೋ ಒಂದು ಸಪ್ಪಳವನ್ನು ಕೇಳಿ ಬೆರಗಾದೆ. ಮತ್ತೆ ಕಿವಿ ನಿಮಿರಿಸಿಕೊಂಡು ಮೆಲ್ಲಗೆ ಕೂಗತೊಡಗಿದೆ. ನನ್ನ ಪ್ರಾಣವೇ ಹಾರಿ ಹೋದಂತಾಯಿತು. ಸಾಹೇಬರೂ ಅವರ ಹೆಂಡತಿಯೂ ಒಂದು

ಗಿಡಕ್ಕೆ ಮರೆಯಾಗಿ ನಿಂತುಕೊಂಡಿದ್ದರು. ಆದರೆ ಮತ್ತೊಂದು ಸಿಂಹವು ನಮ್ಮನ್ನು ನೋಡಿತ್ತು. ಅದು ಜೋರಾಗಿ ಗರ್ಜನೆಮಾಡುತ್ತ ಸಾಹೇಬರು ನಿಂತೆಡೆಗೆ ಹೊರಟಿತು. ಆದರೆ ನಮ್ಮ ಸಿಂಹವು ಅದರ ಮೇಲೆ ಚಟ್ಟನೆ ಹಾರಿತು. ಎರಡೂ ಸಿಕ್ಕುಬಿದ್ದವು. ನಮ್ಮ ಪ್ರಾಣಗಳು ಹೋಗತೊಡಗಿದವು. ಎಲ್ಲಿಯಾದರೂ ನಮ್ಮ ಮಿತ್ರ ಸಿಂಹವನ್ನು ಕೊಂದರೆ ನಮ್ಮ ಬದುಕೆಲ್ಲಿ? ಮನಸ್ಸು ಮಾಡಿದರೆ ಓಡಿ ಹೋಗಬಹುದಾಗಿತ್ತು. ಆದರೆ ಸಾಹೇಬರಿಬ್ಬರನ್ನು ಬಿಟ್ಟು ಹೋಗುವದೆಂತು? ಗಿಡಗಳು ಸರಳವಾಗಿಯೂ ದಟ್ಟಾಗಿಯೂ ಇದ್ದವು. ಅವುಗಳ ಮೇಲೆ ಏರುವದು ಕಠಿಣವಿತ್ತು. ನಮ್ಮ ಸಿಂಹದ ಗೆಲುವಾಗಲೆಂದು ಪ್ರಾರ್ಥಿಸುತ್ತಿದ್ದೆವು. ಒಮ್ಮೆ ಇದು ಬೀಳುತ್ತಿತ್ತು. ಒಮ್ಮೆ ಅದು. ಆಗಾಗ್ಗೆ ಹಲ್ಲುಗಳಿಂದ ಅಥವಾ ಪಂಜರಗಳಿಂದ ಹೊಡೆದಾಡುತ್ತಿದ್ದವು. ಎರಡೂ ಪಂಜರಗಳಿಂದ ಹೊಡೆದಾಡುತ್ತಿರುವಾಗ ಎದ್ದುನಿಂತು ಒಂದಕ್ಕೊಂದು ನೂಕಾಡುತ್ತಿದ್ದವು. ಎರಡೂ ಪ್ರಾಣಿಗಳ ಬಾಯಿಂದಲೂ ಶರೀರದಿಂದಲೂ ರಕ್ತವು ಹರಿಯುತ್ತಿತ್ತು. ಕಣ್ಣುಗಳಿಂದ ಕಿಡಿಗಳು ಉದುರುತ್ತಿದ್ದುವು. ಗರ್ಜಿಸುತ್ತಿದ್ದುವು ನಾವು ಉಸಿರು ಬಿಗಿಹಿಡಿದು ಹೊಡೆದಾಟವನ್ನು ನೋಡುತ್ತಿದ್ದೆವು. ಬಹಳ ಹೊತ್ತಿನ ವರೆಗೆ ಹೊಡೆದಾಟವಾದ ಮೇಲೆ ನಮ್ಮ ಮಿತ್ರನ ಗೆಲುವಾಯಿತು. ಅದನ್ನು ಅಂಗಾತ ಕೆಡವಿ ಹೊಟ್ಟೆ ಹರಿದನು. ನಾವು ಮೂವರೂ ಹರ್ಷದಿಂದ ಕುಣಿಯತೊಡಗಿದೆವು. ಆದರೆ ನಮ್ಮ ಮಿತ್ರ ಸಿಂಹವು ಜರ್ಜರಿತವಾಗಿತ್ತು. ಇಡೀ ಶರೀರವು ಗಾಯಗೊಂಡಿತ್ತು. ಅಲ್ಲಿಯೇ ಮಲಗಿತು. ನಾವೂ ಅಲ್ಲಿಯೇ ರಾತ್ರಿ ಕಳೆದೆವು. ತಿನ್ನುವದಕ್ಕೇನೂ ದೊರೆಯಲಿಲ್ಲ ಸಾಹೇಬರಿಬ್ಬರೂ ಹಾದಿಯಲ್ಲಿ ಹಣ್ಣುಗಳನ್ನು ತಿಂದಿದ್ದರು ನನಗೆ ಹಣ್ಣಿನಿಂದೇನು ಪ್ರಯೋಜನ? ನನಗೆ ಬೇಟೆಯು ಬೇಕಿತ್ತು. ಆದರೆ ರಾತ್ರಿಯಲ್ಲಿ ಎಲ್ಲಿ ದೊರೆಯಬೇಕು? ನಾನು ಉಪವಾಸವೇ ಇದ್ದೆ.

ಮರುದಿನ ಸಮುದ್ರದ ದಂಡೆಗೆ ಮುಟ್ಟಿದೆವು. ಆದರೆ ವ್ಯಥೆಯಾಯಿತು. ನಾನು ಸಮುದ್ರದ ದಂಡೆಯಮೇಲೆ ಶಿಕಾರಿಗೆಂದು ಹೊರಟಾಗನಮ್ಮ ಮಿತ್ರ ಸಿಂಹವು ದಣಿವಿಕೆಯಿಂದ ಒಂದು ಕಲ್ಲಿನ ಮರೆಯಲ್ಲಿ ಬಿದ್ದು ನರಳುತ್ತಿತ್ತು. ಹೋಗಿ ನೋಡಿದೆ. ಅದರ ಕಣ್ಣುಗಳು ಜಡವಾಗಿದ್ದವು. ಸ್ವಲ

ಸಮಯದಲ್ಲಿ ಅದು ಪ್ರಾಣಬಿಟ್ಟಿತು ನಿನ್ನಿನ ಹೊಡೆದಾಟದಲ್ಲಿ ಬಹಳೇ ಗಾಯಗೊಂಡಿತ್ತು. ಬಹಳ ಹೊತ್ತಿನವರೆಗೆ ಅದರ ನಿರ್ಜೀವ ಶರೀರದ ಮೇಲೆ ಬಿದ್ದು ಅಳತೊಡಗಿದೆ ಸಾಹೇಬರಿಬ್ಬರೂ ಬಹಳೇ ದುಃಖಿತರಾಗಿದ್ದರು. ಸಮುದ್ರ ದಂಡೆಯನ್ನು ಮುಟ್ಟಿದುದರ ಸಂತೋಷದಲ್ಲಿ ಶೋಕವು ಮರೆತುಹೋಯಿತು.

ಇನ್ನೂ ಬೇಟೆ ಹುಡುಕುವುದರಲ್ಲಿಯೇ ಇದ್ದೆ. ಅಷ್ಟರಲ್ಲಿ ಏನೋ ಒಂದು ಘೋರಘೋರ ಎಂಬ ಶಬ್ದವಾಯಿತು ಇಂಥ ಶಬ್ದವನ್ನೆಂದಿಗೂ ಕೇಳಿದ್ದಿಲ್ಲ. ಭಕ್ ಭಕ್. ರೈಲಿನ ಸಪ್ಪಳ ಕೇಳಿದ್ದೆ. ಮೋಟಾರಿನ ಸಪ್ಪಳವನ್ನೂ ಕೇಳಿದ್ದೆ. ಈ ಶಬ್ದವು ಅವೆಲ್ಲವುಗಳಿಂದ ಭಿನ್ನವಾಗಿತ್ತು. ಆಕಾಶದ ಮೇಲೊಂದು ಯಂತ್ರವು ನಡೆಯುತ್ತಿದೆಯೊ ಏನೋ ಎನ್ನಿಸುವಂತಿತ್ತು. ಸಾಹೇಬರ ಹೆಂಡತಿಯು ಆ ಶಬ್ದದ ಜೊತೆಗೆ ಆಕಾಶದ ಕಡೆಗೆ ನೋಡತೊಡಗಿದಳು. ನಾನೂ ಮೇಲೆ ನೋಡಿದೆ. ಹದ್ದಿನಂತೆ ಹಾರುತ್ತಿರುವದನ್ನು ನೋಡಿದೆವು. ಸಾಹೇಬರು ತಮ್ಮ ಟೊಪ್ಪಿಗೆಯನ್ನು ಹವೆಯಲ್ಲಿ ಹಾರಿಸಿದರು ಅವರ ಹೆಂಡತಿಯೂ ತನ್ನ ಕೈ ವಸ್ತ್ರವನ್ನು ಅಲ್ಲಾಡಿಸಹತ್ತಿದಳು. ಇಬ್ಬರೂ ಚಪ್ಪಾಳೆ ಇಕ್ಕುತ್ತ ಕುಣಿಯತೊಡಗಿದರು. ಇವರೇಕೆ ಇಷ್ಟು ಆನಂದಭರಿತ-ರಾದರೆಂಬುದು ನನಗೆ ತಿಳಿಯಲೇ ಇಲ್ಲ. ಆದರೇನಿದೆ? ಆದರೆ ಆಕಾಶದ ಮೇಲೆ ಹಾರುತ್ತಿರುವ ಪಕ್ಷಿಯು ಕೆಳಗಿಳಿಯತೊಡಗಿತು. ಓಹ, ಎಂಥ ದೊಡ್ಡ ಪಕ್ಷಿಯು! ಇಷ್ಟು ಭೀಮಕಾಯ ಪಕ್ಷಿಯನ್ನು ನೋಡಿರಲಿಲ್ಲ. ವಿಚಿತ್ರ ವಸ್ತುಸಂಗ್ರಹಾಲಯದಲ್ಲಿ ಜಿರಾಫನ್ನು ನೋಡಿದ್ದೆ. ಆದರೆ ಇದು ಅದರ ಎದುರಿಗೆ ಸಣ್ಣ ಪಾರಿವಾಳದಂತಿತ್ತು. ನೋಡನೋಡುತ್ತ ಅದು ಕೆಳಗಿಳಿಯಿತು. ಅದರಲ್ಲಿಂದ ಇಬ್ಬರು ಹೊರಬಂದರು. ಜನರನ್ನು ಕೂಡಿಸಿಕೊಂಡು ಹವೆಯಲ್ಲಿ ನಡೆಯುವ ಒಂದು ಸಾಧನವಿದೆಯೆಂದು ಆಮೇಲೆ ನನಗೆ ಗೊತ್ತಾಯಿಯಿತು. ಅವರಿಬ್ಬರೂ ಸಾಹೇಬ ಮತ್ತು ಅವರ ಹೆಂಡತಿಯ ಕೈ ಕುಲಕಾಡಿಸಿದರು. ಸ್ವಲ್ಪ ಮಾತನಾಡಿ ಮತ್ತೆ ಅದೇ ವಾಹನದಲ್ಲಿ ಹೋಗಿ ಕುಳಿತರು. ಒಂದು ಕ್ಷಣ ಸಾಹೇಬರು ನನ್ನನ್ನು ತಮ್ಮ ತೊಡೆಯ ಮೇಲೆ ಕೂರಿಸಿಕೊಂಡರು. ಮುದ್ದಿಸುತ್ತ ಅದೇ ವಾಹನದಲ್ಲಿ ಕೂಡಿಸಿದರು. ಆಮೇಲೆ ಅವರಿಬ್ಬರೂ ಅದರೊಳಗೆ ಬಂದರು. ಅಂಜಿಕೆಯಿಂದ ನನ್ನ ಪ್ರಾಣವು

ಕ್ಷೀಣವಾಗುತ್ತಿತ್ತು. ನಾವೇನು ಹವೆಯಲ್ಲಿ ಹಾರುವೆವೇ ? ಈ ಯಂತ್ರವು ಕೆಟ್ಟರೆ ನಮ್ಮ ಎಲಬುಗಳ ಸುಳುವೇ ಹತ್ತಲಿಕ್ಕಿಲ್ಲ. ಆದರೆ ನಮ್ಮ ಸಾಹೇಬರು ನನ್ನ ತಲೆಯನ್ನು ಚಪ್ಪರಿಸುತ್ತ ಧೈರ್ಯಗೊಡುತ್ತಿದರು. ಕಡೆಗೆ ನಾಲ್ವರೂ ಮೇಜಿನ ಸುತ್ತ ಕೂತು ಊಟಮಾಡತೊಡಗಿದರು. ನನಗೂ ಮಾಂಸದ ತುಂಡನ್ನು ಕೊಟ್ಟರು. ಊಟ ಮಾಡುತ್ತಮಾಡುತ್ತ ನನ್ನ ಹೆದರಿಕೆಯು ಉಡುಗತೊಡಗಿತು. ಕಿವಿಯ ಪರದೆಗಳು ಹರಿಯುವಷ್ಟು ಗಟ್ಟಿಯಾದ ಸಪ್ಪಳವಾಗಹತ್ತಿತ್ತು. ಆ ವಾಹನವು ಆಗಾಗ್ಗೆ ಹೊಯ್ದಾಡುತ್ತಿತ್ತು. ಅದರಿಂದ ನನ್ನ ಹೃದಯವು ನಡಗುತ್ತಿತ್ತು. ಬಹಳ ಸಾರೆ ಹೊರಳಿತು. ಅದು ಬುಡಮೇಲಾಗುವದೆಂದು ಎನಿಸಿ ನಾನು ಕೂಗತೊಡಗಿದೆ. ಅಷ್ಟರಲ್ಲಿಯೇ ಮತ್ತೆ ಅದು ಸಂಭಾಳಿಸುತಿತ್ತು. ನಾವು ಒಂದು ಹಗಲು ಒಂದು ರಾತ್ರಿ ಆದಗಲ್ಲಿಯೇ ಇದ್ದೆವು. ಅದು ನಕ್ಷತ್ರಗಳಿಗೆ ತಾಕುವಷ್ಟು ಎತ್ತರ ಹಾರುತ್ತಿತ್ತು ಸಾಹೇಬರಿಬ್ಬರೂ ಮಲಗಿದ್ದರು. ಆದರೆ ನನಗೆಲ್ಲಿ ನಿದ್ದೆಯು ? ಈ ಸಂಕಟದಿಂದ ಪಾರಾಗಲೆಂದು ದೇವರ ಧ್ಯಾನವನ್ನು ಮಾಡುತ್ತಿದ್ದೆ.

ಎರಡನೆಯ ದಿನ ಬೆಳಗ್ಗೆ ಘೋರ ಬಿರುಗಾಳಿ ಬೀಸಹತ್ತಿತು. ಆ ಯಂತ್ರವು ತಿರುಗಣಿ ಮಡುವಿನಲ್ಲಿ ಸಿಕ್ಕ ನಾವಿನಂತೆ ಚಕ್ಕರ ಹೊಡೆಯಹತ್ತಿತು. ಸಿಡಿಲು ತಲೆಯ ಮೇಲೆಯೇ ಬಿತ್ತೋ ಏನೋ ಎನ್ನುವಷ್ಟು ಕಟ್ ಕಡಲ್ ಎಂದು ಗರ್ಜಿಸುತ್ತಿತ್ತು. ಕಣ್ಣು ಕಾಣದಷ್ಟು ಮಿಂಚು ಮಿಂಚುತ್ತಿತ್ತು. ಯಂತ್ರವು ಒಮ್ಮೆ ಬಲಕ್ಕೆ, ಒಮ್ಮೆ ಎಡಕ್ಕೆ ಹೊರಳುತ್ತಿತ್ತು. ಒಮ್ಮೊಮ್ಮೆ ಅದರ ಗಾಲಿಗಳು ನಿಲ್ಲುತ್ತಿದ್ದವು. ಕೆಳಗೆ ಉರುಳುವದೇನೋ ಎನಿಸುವಂತಿತ್ತು. ನಾಲ್ವರೂ ಬೆದರಿ ದೇವರನ್ನು ಪ್ರಾರ್ಥಿಸುತ್ತಿದ್ದರು. ಸಾಹೇಬರ ಹೆಂಡತಿಯು ವಸ್ತ್ರದಿಂದ ಮುಖಮುಚ್ಚಿ ಅಳತೊಡಗಿದ್ದಳು. ನಾನು ಬಹಳ ಗಾಬರಿಯಾಗಿದ್ದೆ. ಸಾಹೇಬರ ಹೆಂಡತಿಯು ಅಳುತ್ತಿರುವುದನ್ನು ಕಂಡು ನಗು ಬರುತ್ತಿತ್ತು. ಅವಳು ಅಳುವುದರಿಂದೇನು ಬಿರುಗಾಳಿಯು ನಿಲ್ಲಬಲ್ಲದೇ ? ಹೃದಯವನ್ನು ಕಲ್ಲುಮಾಡಿ ಬಂದಿರುವ ಸಂಕಟವನ್ನು ಎದುರಿಸಬೇಕಿತ್ತು. ಆದರೆ ತಿಳಿಸಿ ಹೇಳುವವರಾರು ?

ಮುಂದೆ ಒಂದು ತಾಸಿನಲ್ಲಿ ಬಿರುಗಾಳಿಯು ಶಾಂತವಾಯಿತು ಹಾಗೂ

ಯಂತ್ರವು ಮುಂದೆ ಎದುರಾಗಿ ಸಾಗತೊಡಗಿತು. ಮಾಧ್ಯಾಹ್ನವಾಗುವ ಹೊತ್ತಿಗೆ ಆ ಯಂತ್ರವು ಒಂದು ದೊಡ್ಡ ಬೈಲಿನಲ್ಲಿ ಇಳಿಯಿತು. ಅಲ್ಲಿ ಒಂದು ನಿಶಾನೆಯನ್ನು ಊರಿದ್ದರು ಹಾಗೂ ಅಂತಹವೇ ಕೆಲವು ಯಂತ್ರಗಳನ್ನು ಇಟ್ಟಿದ್ದರು. ಸಾಹೇಬರು ನನ್ನನ್ನು ಎತ್ತಿಕೊಂಡು ಕೆಳಗಿಳಿದರು. ಒಂದು ಮೋಟರಿನಲ್ಲಿ ಕುಳಿತುಕೊಂಡು ಹೊರಟರು. ಸಾಹೇಬರ ಬಂಗಲೆಯ ಕಡೆಗೆ ನಾವೆಲ್ಲರೂ ಹೋಗುತ್ತಿರುವದನ್ನು ನೋಡಿದೆ. ನನ್ನ ಸ್ನೇಹಿತರು ಹಳೆಯ ಆನೇ ಬೀದಿಗಳಲ್ಲಿ ತಿರುಗಾಡುತ್ತಿರುವದನ್ನು ಕಂಡೆ. ಅವರ ಹತ್ತಿರ ಹೋಗಿ ಅವರನ್ನು ತಬ್ಬಿಕೊಳ್ಳಲೇ, ಕ್ಷೇಮ ಸಮಾಚಾರವನ್ನು ವಿಚಾರಿಸಲೇ, ಹಾಗೂ ನನ್ನ ಯಾತ್ರೆಯ ಸಮಾಚಾರವನ್ನು ತಿಳಿಸಲೇ ಎಂದು ಮನಸ್ಸಿನಲ್ಲಿ ಬರುತ್ತಿತ್ತು. ಆದರೆ ಮೋಟರ ಹೋಗುತ್ತಲೇ ಇತ್ತು. ಒಂದು ಕ್ಷಣದಲ್ಲಿ ಬಂಗಲೆಗೆ ತಲುಪಿದೆವು.

ನಾನು ನಿದ್ರೆಯನ್ನೆ ಮಾಡಿದ್ದಿಲ್ಲ. ಅಷ್ಟರಲ್ಲಿ ಅಡಿಗೆಯವನು ಬಂದು ನನಗೆ ಸ್ನಾನ ಮಾಡಿಸತೊಡಗಿದನು. ಮತ್ತೆ ನನ್ನ ಕೊರಳಲ್ಲಿ ಒಂದು ರೇಶಿಮೆಯ ಪಟ್ಟಿಯನ್ನು ಕಟ್ಟಿದನು. ಜನರು ಸಾಹೇಬರ ಭೆಟ್ಟಿಗಾಗಿ ಬಂದು ಕುಳಿತುಕೊಳ್ಳುವ ಕೋಣೆಯಲ್ಲಿಯ ಒಂದು ಬೆಂಚಿನ ಮೇಲೆ ಕೂಡ್ರಿಸಿದನು. ಸಾಹೇಬರ ಹೆಂಡತಿಯು ಒಂದು ತಟ್ಟೆಯಲ್ಲಿ ನನ್ನ ಆಹಾರವನ್ನು ತೆಗೆದು-ಕೊಂಡು ಬಂದು ಕೈಯಿಂದ ತಿನಿಸತೊಡಗಿದಳು ಆಗ್ಗೆ ನನಗೆ ಆದ ಅಭಿ-ಮಾನದ ವರ್ಣನೆ ಮಾಡಲಾರೆ. ನನ್ನ ಸಮಾಜದವರು ಬಂದು ಇದನ್ನು ನೋಡಿ ನನಗಾಗಿ ಅಭಿಮಾನ ಪಡಲಿ ಎಂದು ಮನಸ್ಸಿನಲ್ಲಿ ಬರತೊಡಗಿತು. ನನ್ನಲ್ಲಿ ಅಂಥ ವೈಶಿಷ್ಟ್ಯವೇನೂ ಇಲ್ಲ. ಇಂದಿಗೂ ನಾನು ಅದೇ ಕಲ್ಲೂ, ದುರ್ಬಲ ಕಲ್ಲೂ ಇದ್ದೇನೆ. ಆದರೆ ನಾನು ನನ್ನ ಕರ್ತವ್ಯ ಮಾಡುವದರಲ್ಲಿ ಎಂದೂ ತಪ್ಪಿಲ್ಲ. ಸತ್ಯವನ್ನೆಂದಿಗೂ ಬಿಟ್ಟುಕೊಟ್ಟಿಲ್ಲ ಗೆಳೆತನವನ್ನು ಯಾವಾಗಲೂ ಕಾಪಾಡಿಕೊಂಡು ಬಂದೆನು. ಉಪಕಾರವನ್ನೆಂದಿಗೂ ಮರೆತಿಲ್ಲ. ಪ್ರಸಂಗ ಬಂದಾಗ ಧೈರ್ಯದಿಂದ ಸಂಕಟಗಳನ್ನು ಪ್ರಾಣದ ಹಂಗು ಇಲ್ಲದೆ ಎದುರಿಸಿದೆನು ನನಗೆ ಸತ್ಯವೆಂದು ತಿಳಿದುದನ್ನು ಕಾಪಾಡುವದರಲ್ಲಿ ಸಿದ್ಧ ನಿರುತ್ತಿದ್ದೆ. ಆದರಿಂದಲೇ ನಾನು ಇಂದು ಇಷ್ಟು ಆದರ ಹಾಗೂ ಸ್ನೇಹವನ್ನು ಪಡೆಯುತ್ತಿದ್ದೇನೆ.

ಮರುದಿನ ನನ್ನ ಕೋಣೆಯ ಬಾಗಿಲಿಗೆ ಪರದೆ ಹಾಕಿದ್ದನ್ನು ನೋಡಿ-ದೆನು ಮತ್ತು ಅಲ್ಲೊಬ್ಬ ಕಾವಲುಗಾರನು ಕೂತಿದ್ದಾನೆ. ಪಟ್ಟಣದೊಳಗಿನ ಪ್ರಮುಖ ಜನರು ನನ್ನನ್ನು ಕಾಣಲು ಬರುತ್ತಿದ್ದಾರೆ. ನನ್ನ ಮೇಲೆ ಹೂವಿನ ಮಳೆಗರೆಯುತ್ತಿದ್ದಾರೆ. ಸಭ್ಯಗೃಹಸ್ಥರು ಕೋಟು ಹಾಗೂ ಪ್ಯಾಂಟನು ಧರಿಸಿ, ಸ್ತ್ರೀಯರು ಗೌನು ಹಾಗೂ ಹ್ಯಾಟುಗಳಿಂದ ಸುಶೋಭಿತರಾಗಿ, ದೊಡ್ಡ ದೊಡ್ಡ ಸೇಠ ಸಾಹುಕಾರರು, ದೊಡ್ಡ ದೊಡ್ಡ ಮನೆತನದ ಮಹಿಳೆಯರು, ಸ್ಕೂಲ ಕಾಲೇಜದ ವಿದ್ಯಾರ್ಥಿಗಳು ಹಾಗೂ ಸೈನಿಕರು ಎಲ್ಲರೂ ಬಂದು ನನ್ನ ದರ್ಶನ ಪಡೆಯುತ್ತಿದ್ದಾರೆ. ನನ್ನನ್ನು ಹೊಗಳುತ್ತಿದ್ದಾರೆ. ಕೆಲವರು ಹಾರಗಳನ್ನು ಹಾಕುತ್ತಿದ್ದಾರೆ. ಕೆಲವರು ಕೈಮುಗಿಯುತ್ತಿದ್ದಾರೆ. ಇದೊಂದು ದೇವತೆ ಇದೆ, ಜಗತ್ತಿನ ಕಲ್ಯಾಣ ಮಾಡುವದಕ್ಕಾಗಿ ಈ ರೂಪ ತಾಳಿದೆ ಎಂದು ತಿಳಿದಿದ್ದರು. ಸಭ್ಯಗೃಹಸ್ಥರು ದೇವತೆಗಳೆಂದೇನೂ ತಿಳಿದಿದ್ದಿಲ್ಲ, ಆದರೆ ಅಸಾಮಾನ್ಯ, ಚಮತ್ಕಾರಿ ಪ್ರಾಣಿ ಇದೆಯೆಂದು ತಿಳಿದಿದ್ದರು. ಕೆಲವು ಮಹಿಳೆಯರು ನನ್ನ ಕಾಲುಗಳನ್ನು ಮುಟ್ಟಿ ನಮಸ್ಕಾರ ಮಾಡಿದರು, ಅವರ ಮೂರ್ಖತೆಯ ಬಗ್ಗೆ ನಗೆ ಬರುತ್ತಿತ್ತು. ಮನುಷ್ಯರಲ್ಲಿಯೂ ಕೂಡ ಇಂಥ ತಿಳುವಳಿಕೆಯುಳ್ಳವರೂ ಇದ್ದಾರೆಂದು ಎನಿಸತೊಡಗಿತು.

ಇಡೀ ದಿನ ಇದೇ ಸಂಭ್ರಮವು ನಡೆದಿತ್ತು. ಸಾಯಂಕಾಲ ನಾನು ನನ್ನ ಜನ್ಮಸ್ಥಳದ ಕಡೆಗೆ ಓಡಿದೆ. ನಾನು ಅಲ್ಲಿಗೆ ಮುಟ್ಟುತ್ತಲೇ ನನ್ನ ಬಂಧುಗಳದೊಂದು ಗುಂಪು ನನ್ನ ಮೇಲೆ ಮುಗಿಬಿದ್ದಿತು. ನಾನು ಅವುಗಳ ಎಲಬುಗಳನ್ನು ಕಸಿದುಕೊಳ್ಳಬಂದಿರುವೆನೆಂದು ಅವು ತಿಳಿದಿರಬೇಕು. ನಾನು ಅದೇ ಕಲ್ಲೂ ಇದ್ದೇನೆ, ಈಗ ನನ್ನ ಪೂಜೆ ಮಾಡುತ್ತಿದಾರೆಂಬುದು ಅವರಿಗೆ ಗೊತ್ತಿಲ್ಲ ನಾನು ಬಾಲವನ್ನು ಮುದುಡಿಸಿಕೊಂಡು ಹಲ್ಲುಗಳನ್ನು ತೆರೆದು ಪ್ರಾಣದಾನವನ್ನು ಬೇಡಿದೆನು. ಆದರೆ ಆ ನಿರ್ದಯಿಗಳಿಗೆ ನನ್ನ ಮೇಲೆ ಕರುಣೆ ಬರಲಿಲ್ಲ. ಇವರಿಗೆ ನನ್ನ ಗುರುತೇ ಹತ್ತಲಿಲ್ಲವೆಂದು ಗೊತ್ತಾಗುತ್ತಿತ್ತು. ನನ್ನ ಸುಖದುಃಖಗಳನ್ನು ಹೇಳಿಕೊಂಡು ಉಪದೇಶ ಮಾಡಲು ಬಂದಿದ್ದೆ. ನನಗೆ ಈ ಬಹುಮಾನವು ದೊರೆಯುಹತ್ತಿತು

ಆ ಮೇಲೆ ಅದೇ ವೇಳೆಗೆ ನನ್ನ ಹಳೆಯ ಯಜಮಾನರಾದ ಪಂಡಿತರು ತಮ್ಮ ಕೋಲನ್ನೂರುತ್ತ ಹೋಗುತ್ತಾ ಇದ್ದರು. ಅವರನ್ನು ನೋಡುತ್ತಲೇ ನನ್ನಲ್ಲಿ ನವಚೈತನ್ಯವು ಉತ್ಪನ್ನವಾಯಿತು. ಓಡುತ್ತ ಅವರ ಬಳಿಗೆ ಹೋಗಿ

ಬಾಲವನ್ನಲ್ಲಾಡಿಸ ತೊಡಗಿದೆ. ಪಂಡಿತರು ನನ್ನನ್ನು ಗುರುತಿಸಿ ತಲೆಯ ಮೇಲೆ ಕೈಯಾಡಿಸುತ್ತ 'ನೀನು ಬಲು ದೊಡ್ಡ ಖುಷಿಯಾಗಿರುವೆ ಕಲ್ಲೂ; ಪತ್ರಿಕೆಗಳಲ್ಲಿ ನಿನ್ನ ಹೊಗಳಿಕೆಯೇ ಆಗುತ್ತಿದೆ' ಎಂದು ಪ್ರಸನ್ನ ಚಿತ್ತದಿಂದ ಹೇಳಿದರು ಹಾಗು ಅವರು ತಮ್ಮ ಕೋಲಿನಿಂದ ಆ ದುಷ್ಟರನ್ನು ಹೊಡೆದು ಓಡಿಸಿದರು. ನಾನು ಪಂಡಿತರ ಹಿಂದಿನಿಂದಲೇ ಅವರ ಮನೆಗೆ ಬಂದು ತಲುಪಿದೆ. ಆಗಾಗ್ಗೆ ತಮ್ಮ ಜಕಿಯಾ ಹಾಗೂ ತಾಯಿಯು ನೆನಪಾಗುತ್ತಿತ್ತು. ಅವರಿಲ್ಲದೆ ಈಗ ಸಿಗುತ್ತಿರುವ ಆದರವು ತುಚ್ಛವೆನಿಸುತ್ತಿತ್ತು.

ಪಂಡಿತರ ಮನೆಯನ್ನು ಮುಟ್ಟಿದೊಡನೆ ಅವರಹೆಂಡತಿಯು ಓಡಿಬಂದು ನಮಸ್ಕಾರ ಮಾಡಿದಳು. ಸ್ವಲ್ಪ ವೇಳೆಯಲ್ಲಿ ಬೀದಿ ತುಂಬ ನಾನು ಬಂದ ಸಮಾಚಾರವು ಹಬ್ಬಿದೊಡನೆ ಜನರು ರ್ಶನಕ್ಕೆಂದು ಬಂದು ನನಗೆ ಧನ ಹಾಗೂ ಮಿಠಾಯಿಗಳನ್ನು ಆರ್ಪಿಸಿದರು. ಹೀಗೇಯೇ ಜನರ ದಟ್ಟಣಿಯು ಹೆಚ್ಚುತಿದ್ದುದನ್ನು ನೋಡಿ ಅಲ್ಲಿಂದ ಎದ್ದು ನೇರವಾಗಿ ನನ್ನ ಬಂಗಲೆಯ ಕಡೆಗೆ ಹೊರಟೆ.

ಅಂದಿನಿಂದ ಬಹಳಷ್ಟು ಪ್ರದರ್ಶನಗಳಲ್ಲಿ ಹೋಗಿದ್ದೇನು. ರಾಜರ ಅತಿಥಿಯಾಗಿದ್ದೇನು. ನನ್ನ ಬೆಲೆಯು ಒಂದು ಲಕ್ಷಕ್ಕೆ ಏರಿತ್ತೆಂದು ಕೇಳಿದೆನು. ಆದರೆ ಸಾಹೇಬರು ಎಷ್ಟು ಬೆಲೆ ಕೊಟ್ಟರೂ ನನ್ನನ್ನು ಬಿಡುಗಡೆ ಮಾಡಲು ಇಚ್ಛಿಸುತ್ತಿದ್ದಿಲ್ಲ. ನನ್ನ ಆದರವು ದಿನದಿನಕ್ಕೆ ವೃದ್ಧಿಯಾಗುತ್ತಿದೆ. ದಿನಾಲು ಸ್ನಾನಮಾಡಿಸಿ ಸ್ವಾದಿಷ್ಟ ಹಾಗೂ ಬಲವರ್ಧಕ ಆಹಾರ ಕೊಡುತ್ತಿದ್ದಾರೆ. ಮುಂಜಾನೆ ಸಾಯಂಕಾಲ ದಿನಾಲು ಇಬ್ಬರು ತಿರುಗಾಡಲು ನನ್ನನ್ನು ಕರೆದು ಕೊಂಡು ಹೋಗುತ್ತಾರೆ.

ಆದರೆ ಈ ಸನ್ಮಾನವು ನನಗೆ ಸೇರಲೊಲ್ಲದು. ಈ ದೊಡ್ಡಿಸ್ತಿಕೆಯು ನನಗೆ ಕೈದಿಗಿಂತ ಕಡಿಮೆಯದಿಲ್ಲ. ನಾನು ನಾಲ್ಕೂ ಸಿಟ್ಟು ಒಳ್ಳೆ ಅಭಿಮಾನದಿಂದ ತಿರುಗುತ್ತಿದ್ದ ಸ್ವಾತಂತ್ರ್ಯಕ್ಕಾಗಿ ಮನಸ್ಸು ಒದ್ದಾಡುತ್ತಿದೆ. ಮನುಷ್ಯನು ಸಾಧು ರೀತಿಯಲ್ಲಿ ಪುಕ್ಕಟೆಯಾಗಿ ದೊರಕುವ ವಸ್ತುವನ್ನು ಹೇಗೆ ಅಪಹರಿಸುತ್ತಾನೆಂಬುದು ತಿಳಿಯದು. ಸೇವೆ ಮಾಡುವುದರಲ್ಲಿ ದೊರೆಯುವ ಆನಂದವು ಪಡೆಯುವದರಲ್ಲಿಲ್ಲ, ಒಂದು ಶತಾಂಶವಾದರೂ ಇಲ್ಲ.

———

# ಮುನ್ನುಡಿ

ನಿಜವಾಗಿಯೂ ಇಂತಹ ಪುಸ್ತಕಕ್ಕೆ ಮುನ್ನುಡಿಯ ಅಗತ್ಯವೆ ಇಲ್ಲ. ಹಿಂದೀ ಭಾಷೆಯ ಸುಪ್ರಸಿದ್ಧ ಸಾಹಿತ್ಯಿಕರಾದ ಸ್ವರ್ಗೀಯ ಪ್ರೇಮಚಂದರ ಉತ್ತಮ ಕಾದಂಬರಿಯೊಂದರ ಅನುವಾದವಿದು. ಅನುವಾದಕರೂ ಕನ್ನಡ ಭಾಷೆಯಲ್ಲಿ ಪಳಗಿದ ಕೈಯವರು. ಇಂತಹ ಪುಸ್ತಕಕ್ಕೆ ಮುನ್ನುಡಿ ಬೇಕೆ? ಆದರೆ ನನ್ನ ಗೆಳೆಯರಾದ ಶ್ರೀಮಾನ್ ಬುರ್ಲಿಯವರು, ಮುನ್ನುಡಿ ಬರೆಯ ಬೇಕೆಂದು ನನಗೆ ಹೇಳಿದರು. ಅವರ ಹೇಳಿಕೆಯನ್ನು ಮೀರದವನಾಗಿ, ಇಲ್ಲಿ ನಾಲ್ಕು ಮಾತುಗಳನ್ನು ಬರೆಯಬೇಕೆಂದಿದ್ದೇನೆ

ದಿವಂಗತ ಪ್ರೇಮಚಂದರು ಭಾರತೀಯ ಸಮಾಜಜೀವನವನ್ನು ಸೂಕ್ಷ್ಮವಾಗಿ ಅಭ್ಯಾಸಿಸಿದವರು. ಆರ್ಥಿಕ ವೈಷಮ್ಯ, ಸಾಂಸ್ಕೃತಿಕ ವೈಷಮ್ಯ ಗಳ ಮೂಲಕ ನಮ್ಮ ಸಮಾಜ ಅವನತಿಗಿಳಿದಿರವುದನ್ನು ಕಂಡು, ಹೃದಯ-ಮನಸ್ಸುಗಳನ್ನು ಕದಡಿಕೊಂಡವರು. ಆದಕ್ಕಾಗಿ, ಜನಮನವನ್ನು ಜಾಗೃತ ಗೊಳಿಸುವ ಉದ್ದೇಶದಿಂದಲೆ ತಮ್ಮಲ್ಲಿರುವ ಸಾಹಿತ್ಯಶಕ್ತಿಯನ್ನು ಕೊನೆಯ ವರೆಗೂ ಬಳಸಿದವರು. ಸಮಾಜದಲ್ಲಿರುವ ಆರ್ಥಿಕವೈಷಮ್ಯವೊಂದನ್ನು ಹೊಡೆದುಹಾಕಿದರೆ, ಮಿಕ್ಕ ಸಮಸ್ಯೆಗಳೆಲ್ಲ ಅದರೊಂದಿಗೆ ಬಿಡುತ್ತ ಹೋಗುವು ವೆಂಬುದು ಪ್ರೇಮಚಂದರ ಅಭಿಮತವಾಗಿದೆ. ಆದರೆ ಆದಕ್ಕಾಗಿ ಅನುಸರಿಸ ಬೇಕಾದ ಮಾರ್ಗವು, ಇವರ ಅಪೇಕ್ಷೆಯಲ್ಲಿ, ಇಂದಿನ ರಾಜಕೀಯ ಕ್ಷೇತ್ರದಲ್ಲಿ ಕಾಣುತ್ತಿರುವ 'ಸೋಶಾಲಿಝಂ' 'ಕಮ್ಯುನಿಝಂ'ಗಳನ್ನು ಒಪ್ಪಿಕೊಂಡು ಹೊರಟುದಲ್ಲ. ಸಹೃದಯ ಸಾಹಿತ್ಯಿಕನ 'ಮಾನವಸಮತಾವಾದ'ದ ಮಾರ್ಗ ಇವರದು. ಇದೇ ಇವರ ಸಾಹಿತ್ಯದಲ್ಲಿ ಹಾಸುಹೊಕ್ಕಾಗಿ ರೂಪು ಗೊಂಡು ನಿಂತಿದೆ.

ಭಾರತದ ಸಮಾಜಯಂತ್ರವು ಶಿಥಿಲವಾಗುತ್ತ ಬಂದಂತೆ, ವ್ಯಕ್ತಿ ವ್ಯಕ್ತಿಗಳ ಮನಸ್ಸು-ಬುದ್ಧಿಗಳಲ್ಲಿಯೂ ಬದಲಾವಣೆಯಾಗುತ್ತ ಬಂದಿತು. ಅದರಲ್ಲಿಯೂ ಬ್ರಿಟಿಷರ ಕಾಲದ ರಾಜಕೀಯ ಜೀವನವೂ ಶಿಕ್ಷಣ ಪದ್ಧತಿಯೂ ನಮ್ಮ ಜನರಲ್ಲಿಯ ಸಾಮಾಜಿಕ ಬುದ್ಧಿಯನ್ನೆ ಹೊಡೆದುಹಾಕಿದುವು. ಸಿರಿವಂತರೆನಿಸಿಕೊಳ್ಳುವವರಲ್ಲಿ ಭೋಗಾಭಿಲಾಷೆಯೂ ಸ್ವಾರ್ಥವೃತ್ತಿಯೂ ಹೆಚ್ಚಿ ನಿಂತುವು.

ಕೊಡಬೇಕೆಂಬುವ ಸೌಮನಸ್ಯದ ಸ್ಥಳದಲ್ಲಿ ಕಸಿದುಕೊಳ್ಳಬೇಕೆನ್ನುವ ದುಷ್ಪ್ರವೃತ್ತಿ ತಲೆದೋರಿತು ಎಂತಲೆ ಅವಿಭಕ್ತ ಕುಟುಂಬವಲ್ಲಿಯ ಪರಸ್ಪರ ಸೌಹಾರ್ದ ಅಡಗಿಹೋಯಿತು ಜಮೀನದಾರ—ರೈತರಲ್ಲಿಯ ಆತ್ಮೀಯ ಭಾವ ಅಳಿದುಹೋಯಿತು. ಯಜಮಾನ–ಸೇವಕರಲ್ಲಿಯ ಸದ್ಭಾವ ನಷ್ಟ ನಷ್ಟವಾಯಿತು. ಬಲವಂತರು ಬಡವರನ್ನು ಪಶುಗಳಿಗಿಂತ ಕಡೆಯಾಗಿ ಕಾಣತೊಡಗಿದರು. ದುಡ್ಡು ಇದ್ದವನೇ ದೊಡ್ಡಪ್ಪನಾಗಿ ಕುಳಿತುಕೊಂಡ

ಹಳೆಯ ಕಾಲದಿಂದಲೂ ನಡೆದುಕೊಂಡು ಬಂದ ದೊಡ್ಡ ದೊಡ್ಡ ಮನೆತನಗಳಲ್ಲಿ ಅಜ್ಜನ ಔದಾರ್ಯ—ಆದರ್ಶ ಜೀವನಗಳು ತಂದೆಯಲ್ಲಿ ಉಳಿಯಲಿಲ್ಲ. ತಂದೆಯಲ್ಲಿದ್ದಂತಹ ಕುಟುಂಬ ಪ್ರೀತಿ, ಸ್ವಾರ್ಥತ್ಯಾಗಗಳು ಮಗನಲ್ಲಿ ಇಳಿಯಲಿಲ್ಲ. ಇದರ ದುಷ್ಪರಿಣಾಮದಿಂದ ಅಂತಹ ಮನೆತನಗಳು ತಮ್ಮ ಮೊದಲಿನ ಜೀವನ ಸೌಂದರ್ಯವನ್ನು ಕಳೆದ ಕೊಂಡುವಲ್ಲದೆ ಅಸಮಾಧಾನ–ದುಃಖಗಳ ಆಗರವಾದುವು. ಧರ್ಮ ಸಂಪ್ರದಾಯಗಳ ಶೈಥಿಲ್ಯವು ಈ ಅಸಮಾಧಾನ-ದುಃಖಗಳಿಗೆ ಇನ್ನಿಷ್ಟು ಪರಿಪೋಷಣೆಯನ್ನು ಕೊಟ್ಟುವು. ಪರಂಪರೆಯ ಧರ್ಮ ಭಾವನೆ ತರುಣರಿಗೆ ಒಪ್ಪಿಗೆಯಾಗಲಿಲ್ಲ; ತರುಣರ ಸ್ವೈರ ವಿಚಾರ ಹಿರಿಯರಿಗೆ ಸಮ್ಮತವಾಗಲಿಲ್ಲ.

ಈ ಕಾದಂಬರಿಯ ಹಿನ್ನೆಲೆಯಲ್ಲಿ ಇಂತಹ ವಿಷಮ ಪರಿಸ್ಥಿತಿಯೆ ಹೃದಯದ್ರಾವಕವೆನಿಸುವಂತೆ ಚಿತ್ರಿತವಾಗಿದೆ. ಪ್ರೇಮಚಂದರು ಕೇವಲ ಕಪ್ಪು-ಬೆಳ್ಪುಗಳಿಂದಲೆ ಮುಗಿಸುವ ವಾಸ್ತವ ಮಾರ್ಗದ ಚಿತ್ರಕಾರರಲ್ಲ. ಪರಿಣಾಮಕಾರಿಯೆನಿಸುವಂತೆ, ಔಚಿತ್ಯವನ್ನರಿತು ವಿವಿಧ ವರ್ಣಗಳ ಕುಸುರನ್ನು ತುಂಬಬಲ್ಲ ರಮ್ಯ ಮಾರ್ಗದ ಚಿತ್ರಕಾರರು. ಎಂತಲೇ ಇವರು ರೂಪಿಸಿದ ಹಿನ್ನೆಲೆಯು ರಂಜಕವೆನಿಸಿ, ಸಾಮಾನ್ಯ ವಾಚಕರ ಮನಸ್ಸನ್ನೂ ಚೆನ್ನಾಗಿ ಆಕರ್ಷಿಸಬಲ್ಲದು.

ಜಮೀನ್‌ದಾರಿಯ ಉತ್ತರದ ಪದ್ಧತಿಯು ಕನ್ನಡಿಗರಿಗೆ ಹೊಸತೆನಿಸಿದರೂ, ಜಮೀನುದಾರೀ ಮನೋವೃತ್ತಿ ಹೊಸದೇನೂ ಅಲ್ಲ. ನಮ್ಮ ನಾಡಿನಲ್ಲಿಯೂ ಈಗ ಮೂರು ತಲೆಮಾರುಗಳ ಹಿಂದೆ ಜಮೀನುದಾರ–ರೈತರಲ್ಲಿ ಅಖಂಡವಾದ ಆತ್ಮೀಯತೆಯಿದ್ದಿತು. ಆಗ ರೈತನ ಕಷ್ಟ-ನಷ್ಟ

ಗಳನ್ನು ಜಮೀನುದಾರ ನೋಡುತ್ತಿದ್ದ; ರೈತ ಅವನೊಡನೆ ಶ್ರದ್ಧೆ-ಸ್ನೇಹ ಗಳಿಂದ ನಡೆದುಕೊಳ್ಳುತ್ತಿದ್ದ. ಅವರ ಮುಂದಿನ ತಲೆಮಾರಿನಲ್ಲಿ ಜಮೀನ್ ದಾರರಲ್ಲಿ ಭೋಗದಾಶೆ ಹೆಚ್ಚಿತು; ತಮ್ಮ ಸುಖವನ್ನೆ ತಾವು ನೋಡುವುದ ರಲ್ಲಿ ರೈತರ ಸುಖ- ದುಃಖದ ವಿಚಾರವನ್ನೇ ಮರೆತರು. ಅದಕ್ಕೆ ಮುಂದಿನ ತಲೆಮಾರಿನವರು, ತಮ್ಮ ವಿಲಾಸ ಜೀವನಕ್ಕೆ ಹಣವು ಸಾಲದೆ, ಬಡವರೂ ಅಜ್ಞಾನಿಗಳೂ ಆದ ರೈತರನ್ನು ಒತ್ತಾಯದಿಂದ ಸುಲಿದುಕೊಳ್ಳಲು ತೊಡಗಿ ದರು. ಇದರಿಂದ ಜಮೀನ್‌ದಾರ್-ರೈತರಲ್ಲಿ ಎಣ್ಣೆಸೀಗೆಯ ಸಂಬಂಧ ಬೆಳೆಯಿತು. ಇದರಿಂದ ಜಮೀನ್‌ದಾರರೂ ಹಾಳಾದರು. ರೈತರೂ ಹಾಳಾದರು.

ಈ ಪರಿಸ್ಥಿತಿಯನ್ನು ಹೇಗೆ ಕಳೆಯಲು ಬಂದೀತೆಂಬುದನ್ನೇ ದಿ. ಪ್ರೇಮ ಚಂದರು ಈ ಕಾದಂಬರಿಯ ಮೂಲಕ ಬಿಡಿಸಿತೋರಿಸಿದ್ದಾರೆ. ಪ್ರಭಾ ಶಂಕರನಂತಹ ನಿಷ್ಕ್ರಿಯ ಉದಾರಿಗಳಿಂದಲೂ ಇದನ್ನು ಕಳೆಯಲಿಕ್ಕೆ ಸಾಧ್ಯ ವಿಲ್ಲ; ಜ್ಞಾನಶಂಕರನಂತಹ ಸ್ವಾರ್ಥ-ಧನಪಿಪಾಸೆಯಿಂದಲೂ ಸಾಧ್ಯವಿಲ್ಲ; ರೈತ ಮನೋಹರನಂತಹ ಹಿಂಸಾತ್ಮಕಬುದ್ಧಿಯಿಂದಲೂ ಸಾಧ್ಯವಿಲ್ಲ, ಅದ ಕ್ಕಾಗಿ ಮಾನವತೆಯ ಬೆಲೆಯನ್ನರಿತು ಸಮಾಜಕಲ್ಯಾಣಕ್ಕಾಗಿಯೆ ತನ್ನ ದೇಹವನ್ನು ಸವೆಯಿಸಬಲ್ಲ ಪ್ರೇಮಶಂಕರನಂತಹರೇ ಬೇಕು. ಪ್ರೇಮಚಂದರು ತಮ್ಮ ಉದ್ದೇಶಸಾಧನೆಗಾಗಿ ಸೃಷ್ಟಿಸಿದ ಈ ನಾಲ್ಕು ಪಾತ್ರಗಳೂ, ನಮ್ಮ ಇಂದಿನ ಸಮಾಜ ಪರಿಸ್ಥಿತಿಯ ಪ್ರತಿನಿಧಿಗಳಾಗಿರುವವು.

ನಮ್ಮ ನಾಡಿನಲ್ಲಿ ಹಳ್ಳಿಗೊಬ್ಬರು ಪ್ರೇಮಶಂಕರರು ಹುಟ್ಟಿದರೆ ಸಾಕು. ಪ್ರೀತಿ-ಸಹಾನುಭೂತಿಗಳಿಗೆ ತಮ್ಮನ್ನೆ ಮಾರಿಕೊಳ್ಳಲು ಸಿದ್ಧರಿರುವ ಅಜ್ಞಾನಿ-ಸಾಮಾನ್ಯ ಜನತೆಯೂ ಅವರ ಬೆನ್ನು ಹತ್ತುವದು; ಸಮಾಜ ಶಾಂತಿಯ ಬೆಲೆಯನ್ನರಿತ ಇರ್ಫಾನ ಅಲಿಯಂತಹ ವಕೀಲರೂ ಪ್ರಿಯನಾಥ ನಂತಹ ಡಾಕ್ಟರರೂ ಜ್ವಾಲಾಸಿಂಹರಂತಹ ಸುಸಂಸ್ಕೃತರೂ ಸಹಕಾರ ಕೊಡಲು ಮುಂದೆ ಬರುವರು. ಒಳ್ಳೆಯದನ್ನು ಮಾಡಬೇಕೆಂಬುದು ಎಲ್ಲರ ಮನಸ್ಸಿನಲ್ಲಿಯೂ ಇರುವುದು. ಆದರೆ ಒಳ್ಳೆಯ ಕೆಲಸವನ್ನು ಪ್ರಾರಂಭಿಸು ವದಕ್ಕೆ ಬೇಕಾದ ಧೈರ್ಯ ಬಹಳ ಜನರಲ್ಲಿ ಇರುವುದಿಲ್ಲ. ಎಂತಲೇ ಅವರು ಪರಿಸ್ಥಿತಿಯ ಪ್ರವಾಹದಲ್ಲಿ ಬಿದ್ದುಕೊಂಡು ಹೇಗಾದರೂ ಬದುಕಬೇಕೆಂದು

ಕೈಕಾಲು ಬಡಿಯುತ್ತ ಹೊರಟಿರುವರು. ತಮ್ಮ ಕೈಕಾಲು, ನೆರೆ-ಹೊರೆಯಲ್ಲಿ ತಮ್ಮಂತೆಯೆ ತೇಲುತ್ತ ಹೊರಟವರಿಗೆ ಬಡಿದು ನೋವಾದೀತೆಂಬ ಎಚ್ಚರವೂ ಅವರಿಗಿರುವುದಿಲ್ಲ. ಇನ್ನೊಬ್ಬರ ಧಡಪಡಿಕೆಯ ಏಟು ತಮಗೆ ಬಿದ್ದಾಗ ಮಾತ್ರ ನೊಂದುಕೊಳ್ಳುವರು; ಸಂತಪ್ತರಾಗುವರು. ಅಂತಹರಿಗೆಲ್ಲ ಬದುಕುವ ಸರಿಯಾದ ಶಾಂತಮಯಮಾರ್ಗವನ್ನು ತೋರಿಸಲು ಪ್ರೇಮಶಂಕರನಂತಹ ದಿವ್ಯ ವ್ಯಕ್ತಿಗಳು ಅಲ್ಲಲ್ಲಿ ಹುಟ್ಟಿ ಕಾರ್ಯಕ್ಕೆ ತೊಡಗಬೇಕು.

ಈ ಕಾದಂಬರಿಯಲ್ಲಿ ಬರುವ ವಿದ್ಯಾ, ಗಾಯತ್ರಿ, ಶ್ರದ್ಧಾ ಮೊದಲಾದ ಪಾತ್ರಗಳೂ ಮನೋಹರವಾಗಿವೆ. ಗಾಯತ್ರಿಯ ಪಾತ್ರವೆಂದರೆ ಮನೋವಿಶ್ಲೇಷಣೆಯ ಅಭ್ಯಾಸಕ್ಕೊಂದು ಉತ್ತಮವಾದ ಮಾದರಿಯಾಗಿದೆ.

ಇಂತಹದೊಂದು ಕಾದಂಬರಿಯನ್ನು ಅನುವಾದಿಸಿ ಕೊಟ್ಟ ಶ್ರೀ. ಮೇವುಂಡಿಯವರೂ, ಮಿಂಚಿನಬಳ್ಳಿಯ ಮುಖಾಂತರ ಬೆಳಕಿಗೆತಂದ ಶ್ರೀಮಾನ್ ಬುರ್ಲಿ ಬಿಂದುಮಾಧವಾಚಾರ್ಯರೂ ಕನ್ನಡಿಗರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

'ಜಯಂತಿ' ಕಾರ್ಯಾಲಯ,
ಧಾರವಾಡ
ತಾ॥ ೧೪-೮ ೧೯೫೪

**ಬೆಟಗೇರಿ ಕೃಷ್ಣಶರ್ಮ**

# ಪ್ರೇಮಾಶ್ರಮ

## ೧

ಸಂಜೆಯಾಗಿದೆ. ದನಕರುಗಳು ಮನೆಗೆ ಬಂದಿವೆ; ಮನೆಗಳೊಳಗಿಂದ ಹೊಗೆಯ ಮೋಡಗಳು ಹೊರಬೀಳುತ್ತಲಿವೆ. ಲಖನಪುರದಲ್ಲಿ ಅಂದು ಪರ-ಗಣೆಯ ಅಧಿಕಾರಿಯ ಪರಿಶೀಲನೆಯಿತ್ತು. ಊರಿನ ಹಿರಿಮಣಿಗಳು ಅವರ ಕುದುರೆಯ ಹಿಂದೆ ಹಿಂದೆ ಇಡೀ ದಿನ ಓಡುತ್ತಲೇ ಇದ್ದರು. ಸಂಜೆಯಾದ ಬಳಿಕ ಕೆರೆಯ ದಂಡೆಯ ಮೇಲೆ ಕುಳಿತು ಎಳನೀರು ಕುಡಿಯುತ್ತಲಿದ್ದರು. ಅಧಿಕಾರಿಯ ಬಗೆಗೆ ತಮ್ಮ ತಮ್ಮ ಅಭಿಪ್ರಾಯವನ್ನು ಪ್ರಕಟಗೊಳಿಸುತ್ತ-ಲಿದ್ದರು.

"ಅಧಿಕಾರಿ ಇಂಗ್ರೇಜಿ ಮನುಷ್ಯ; ಇಲ್ಲದೆ ಹೋಗಿದ್ದರೆ, ಈ ದೇಶದ ಅಧಿಕಾರಿಯಾಗಿದ್ದರೆ ನಮ್ಮನ್ನು ಅರಕೊಂಡು ಮುಕ್ಕುತ್ತಿದ್ದ." ಎಂದ ಮನೋಹರ.

ದುಖರನ ಭಗತನು ಅವನ ಮಾತನ್ನು ಅನುಮೋದಿಸಿದ: "ಪ್ರಭಾವಕ್ಕೆ ತಕ್ಕಹಾಗೆ ಇವರಿಗೆ ದೇವರು ಸ್ವಭಾವವನ್ನು ಕೊಟ್ಟಿದ್ದಾನೆ. ನ್ಯಾಯ ಇರುವುದು ಇವರಲ್ಲೇ. ಲಂಚ ಪಂಚದ ಉದ್ಯೋಗವೇ ಇಲ್ಲ. ಈವೊತ್ತು ಸಣ್ಣ ಸಾಹೇಬರು ಮಬ್ಬುಗತ್ತಲಿರುವಾಗಲೇ ಕುದುರೆ ಹತ್ತಿಕೊಂಡು ಹೊರಟು ಹೊತ್ತು ಮುಳುಗುವ ತನಕ ತಪಾಸಣೆ ಮಾಡಿದರು. ತಹಶೀಲದಾರರು, ಸಿರಸ್ತೆದಾರರು ಒಬ್ಬರೂ ಅವರ ಹತ್ತಿರ ಹಾಯುತ್ತಿರಲಿಲ್ಲ."

"ತಹಶೀಲದಾರ ಸಾಹೇಬರಂತೂ ಗೂಳಿ ಆಗಿದ್ದಾರೆ. ಎರಡೇ ವರುಷಗಳಲ್ಲಿ ಎಲ್ಲಿಂದ ಬಂತೋ ಈ ಕೊಬ್ಬು!" ಎಂದ ಒಬ್ಬ.

" ಲಂಚದ ದುಡ್ಡು ಮೈ ಉಬ್ಬಿಸುತ್ತಿದೆ. " ಎಂದ ಸುಕ್ಯಾ.

" ಕುಲಕರ್ಣಿಯರ ಮೈ ಏಕೆ ಉಬ್ಬಿಲ್ಲ– ಸಾಧಾರಣ ಇರುವ ಹಾಗೇ ಇದ್ದಾರೆ ? '' ಎಂದ ಮನೋಹರ.

" ಅವರೆಲ್ಲಿ ಹೊಡೆಯುತ್ತಾರೆ ನೂರು–ಸಾವಿರಗಟ್ಟಲೆ ದುಡ್ಡು ? ಬಹಳ ಹಿಡತ ಹೊಡತ ಮಾಡಿದರೆ ಎಲ್ಲೋ ನಾಲ್ಕಯ್ದು ರೂಪಾಯಿ ಸಿಕ್ಕೀತು. ಅವರ ಪಗಾರ ಲೆಕ್ಕ ನೋಡುವವರಿಗೇ ಹೋಗಿಬಿಡುತ್ತದೆ. ಹೀಗೇ ಕಿತ್ತು-ಕೊಂಡದ್ದರಲ್ಲಿಯೇ ಸಾಗಬೇಕು ಹೊಟ್ಟೆ— ಡೊಳ್ಳು ಬರುವುದು ಹೇಗೆ? ತಗಾವಿಯಲ್ಲಿ ನೋಡಲಿಲ್ಲವೇ, ತಹಸೀಲದಾರ ಸಾಹೇಬರು ಸಾವಿರಗಟ್ಟಲೆ ಹೊಡಕೊಂಡರು. " ಸುಕ್ಯಾ ಹೇಳಿದ.'

'' ನಾವೇ ಲಂಚ ಕೊಟ್ಟು ಕೊಟ್ಟು ಅವರಿಗೆ ಕೆಟ್ಟ ಚಟ ಕಲಿಸುವವರು. ನಾವೇ ಕೊಡದಿದ್ದರೆ ಅವರೇನು ಹೊಡೆಯುತ್ತಾರೆ ಮಣ್ಣು ? ಕೊಡುವವರು ಇದ್ದಮೇಲೆ ಯಾವ ಬಿಡುತ್ತಾನೆ ದುಡ್ಡು ? ಇಲ್ಲಿ ನಾವುನಾವೇ ಒಬ್ಬರ-ನ್ನೊಬ್ಬರು ತಿನ್ನಬೇಕೆನ್ನುತ್ತೇವೆ; ಇದರ ಫಲ ಮತ್ತಿನ್ನೇನು ಆಗುವುದು ? " ಎಂದ ಮನೋಹರ.

" ಅಲ್ಲೋ, ಇವರು ವಿಚಾರ ಮಾಡಬಾರದು?—ಈ ಬಡ ಮಂದಿಯೂ ತಮ್ಮ ಬಂಧುಗಳು; ದೇವರು ತಮಗೆ ವಿದ್ಯೆ ಕೊಟ್ಟಿದ್ದಾನೆ; ಇವರಮೇಲೆ ಲಕ್ಷ್ಯ ಇಡಬೇಕು ಅಂತ. ಈ ತಿಳಿದವರಿಗಿಂತ ನಾವು ಮೂರ್ಖರೇ ಪಾಡು."

" ಇದು ವಿದ್ಯೆಯ ದೋಷ ಅಲ್ಲ, ನಾಡಿನ ದುರ್ದೈವ. "

'' ವಿದ್ಯೆಯ ದೋಷವೂ ಅಲ್ಲ, ನಾಡಿನ ದುರ್ದೈವವೂ ಅಲ್ಲ, ನಮ್ಮ ನಮ್ಮೊಳಗಿನ ಒಡಕಿನ ಫಲ ಇದು. ವಿದ್ಯೆಯಿಂದ ಮತ್ತೇನಾಗದಿದ್ದರೂ ಎರಡನೆಯವರ ದುಡ್ಡು ಸೆಳಕೊಳ್ಳುವುದಂತೂ ಬರುತ್ತದೆ. ಮೂರ್ಖರಾಗಿ-ರುವುದರಿಂದ ತಮ್ಮ ದುಡ್ಡು ಕಳಕೊಳ್ಳಬೇಕಾಗುತ್ತದೆ. " ಮನೋಹರನೆಂದ.

" ಹಾಂ, ಇದು ನೀನೇನು ಹೇಳಿದೆ, ಬರಾಬರಿ. ನಮ್ಮ ದೊಡ್ಡ ಸರ-ಕಾರ ಇರುವತನಕ, ಎರಡೆರಡು ವರುಷದ ತೆರಿಗೆ ನಿಲ್ಲುತ್ತಿತ್ತು; ಆದರೂ ಗದರಿಸಿ ಬೆದರಿಸಿ ಬಿಟ್ಟುಬಿಡುತ್ತಿದ್ದರು; ಸಣ್ಣ ಸರಕಾರ ಧನಿಯರಾದ ಮೇಲೆ ದಬ್ಬಾಳಿಕೆಗೆ ಸೀಮೆಯೇ ಇಲ್ಲ. '' ಎಂದ ಸುಕ್ಯಾ.

"ಕಾರಕೂನ ಸಾಹೇಬರು ಹೇಳುತ್ತಿದ್ದರು— ಇನ್ನು ಈ ಊರಿನ ಪಾಳಿ ಅಂತ. ಏನೇನಾಗುತ್ತದೊ ನೋಡಿರಿ." ದುಖರನ ಹೇಳಿದ.

"ಆಗುವದಿನ್ನೇನು? ನೀವು ನನ್ನ ಹೊಲದಮೇಲೆ ಏರಿಬರುವುದು, ನಾವು ನಿಮ್ಮ ಹೊಲದಮೇಲೆ ಏರಿಹೋಗುವುದು. ಸರಕಾರಕ್ಕೆ ಚೌರ ಬೀಸುವುದು. ಎಲ್ಲರೂ ಪಣ ತೊಟ್ಟಾಗ ಸರಕಾರದ ಕಣ್ಣು ತೆರೆಯುತ್ತವೆ. ಆದರೆ ಹಾಗೆಲ್ಲಿ ಆಗುತ್ತದೆ? ಎಲ್ಲಕ್ಕೂ ಮುಂದೆ ಓಡುತ್ತಾನೆ ಸುಕ್ಖು." ಮನೋಹರ ನುಡಿದ.

"ಮನೋಹರ ಓಡುವುದಿಲ್ಲ ಎಂದು ಯಾರು ಹೇಳುವರು?" ಎಂದ ಸುಕ್ಖು.

"ನಾನು ಬೇಕಾದರೆ ಗಂಗಾಜಲ ಮುಟ್ಟುತ್ತೇನೆ, ಹೊಲದಮೇಲೆ ನಾನು ಹೋಗುವುದಿಲ್ಲ. ಹೋಗುತ್ತೇನಾದರೂ ಹೇಗೆ? ಬಂಡವಾಳವೊಂದು ಬೇಕಲ್ಲ. ಸುಗ್ಗಿ ಇದೆ ಇನ್ನೂ ಎಷ್ಟೋ ತಿಂಗಳು ದೂರ— ಮನೆಯೊಳಗೆ ಪಡಿ ಕಾಳಿಲ್ಲ. ಬೆಲ್ಲವೇನೋ ನೂರು ರೂಪಾಯಿಗೆ ಸ್ವಲ್ಪ ಹೆಚ್ಚು ಬಂದಿದೆ. ಆದರೆ ಎತ್ತು ನಿರುಪಯೋಗಿಯಾಗಿದೆ, ನೂರಾಅಯ್ವತ್ತಾದರೂ ರೂಪಾಯಿ ಬೇಕು— ಅಂದರೆ ಒಂದೆತ್ತು ಬರುತ್ತದೆ." ಎಂದು ಮನೋಹರ ಹೇಳಿದ.

ದುಖರನ ಹೇಳಿದ: "ಈಗಂತೂ—ಏನಾಗಿದೆಯೋ— ಒಕ್ಕಲುತನ-ದೊಳಗೆ ಚಾ ಉಳಿದಿಲ್ಲ. ಬೆಲ್ಲವನ್ನು ಬಿಸೇಸರ ಸೆಟ್ಟಿ ಆಲಿಮನೆಯಲ್ಲಿಯೇ ತೂಗಿಸಿಕೊಂಡು ಹೋದ. ಮಕ್ಕಳುಮರಿಗೆ ಕಾಕಂಬಿಯೂ ಉಳಿಯಲಿಲ್ಲ. ದೇವರು ಹೇಗೆ ಪಾರುಮಾಡುತ್ತಾನೋ, ನೋಡಬೇಕು."

ಅಷ್ಟೊತ್ತಿಗೆ ಗಿರಿಧರ ಮಹಾರಾಜನು ಬರುವುದು ಕಂಡಿತು. ಎತ್ತರದ ನಿಲುವು, ತುಂಬಿದ ಮೈಕಟ್ಟು, ಅಗಲಾದ ಎದೆ. ತಲೆಯ ಮೇಲೆ ಪಗಡಿ, ಮೈಯಲ್ಲಿ ಉದ್ದವಾದ ಅಂಗಿ. ದೊಡ್ಡದೊಂದು ಬಡಿಗೆಯನ್ನು ಹಿಡಿದು ಕೊಂಡು ಬಂದ. ಈ ಮಹಾಶಯ ಜಮೀನದಾರರ ಜವಾನ. ಇವನು ಬಾಯಿಂದ ಎಲ್ಲರಿಗೂ ಗೆಳೆಯ, ಹೃದಯದಿಂದ ಎಲ್ಲರಿಗೂ ಹಗೆ. ಜಮೀನ ದಾರರ ಹತ್ತಿರ ಅವರಂತೆ, ಒಕ್ಕಲುಗಳ ಹತ್ತಿರ ಅವರಂತೆ ಮಾತನಾಡು-ವವನು. ಆದುದರಿಂದ ಜನ ಅವನ ಹಿಂದೆ ಏನೇ ಆಡಲಿ ಮಾಡಲಿ, ಎದುರಿನಲ್ಲಿ

ಏನೂ ಎನ್ನುತ್ತಿರಲಿಲ್ಲ. ಗಿರಿಧರ ಬಂದೊಡನೆ ಎಲ್ಲರೂ ಮಂಚದಿಂದೆದ್ದು ನೆಲದಮೇಲೆ ಕುಳಿತರು.

“ಎತ್ತಲಾಗಿಂದ ಸವಾರಿ?” ಸುಕ್ಕು ಕೇಳಿದ.

ತನಗೆ ಜೀವನವೇ ಸಾಕಾಗಿದೆ ಎಂಬ ರೀತಿಯಲ್ಲಿ ಗಿರಿಧರ ಉತ್ತರವಿತ್ತ. “ಎಲ್ಲಿಂದ ಅಂತ ಏನು ಹೇಳಲಿ? ಜ್ಞಾನಬಾಬುಗಳ ದೆಸೆಯಿಂದ ಸಾಕು ಸಾಕಾಗಿದೆ. ತುಪ್ಪಕ್ಕಾಗಿ ಒಕ್ಕಲುಗಳೆಲ್ಲಾ ರೂಪಾಯಿ ಕೊಡಬೇಕೆಂದು ಅಪ್ಪಣೆಯಾಗಿದೆ. ರೂಪಾಯಿಗೆ ಸೇರು ದರ ಹಿಡಿಯಬೇಕು. ಇಡೀ ದಿನ ತಿರುಗುವುದೇ ತಿರುಗುವುದು.”

“ಆದರೆ ಪೇಟೆಯ ಧಾರಣೆ ಹತ್ತು ಚಟಾಕಿದೆ.” ಮನೋಹರನೆಂದ.

“ಅಣ್ಣಾ, ನಾನೇನು, ಒಡೆಯನ ಹೇಳಿಕೆ ಬಡಿಗನ ಮಾಟ ಅನ್ನುವ ಹಾಗೆ. ಪೇಟೆಯೊಳಗೆ ಚಟಾಕಿನಂತಿದ್ದರೂ ಏನು, ಸೇರಿನ ಹಾಗೆ ತಕ್ಕೊಳ್ಳಬೇಕೆಂದು ಹುಕುಮಾಗಿದೆ. ಈ ಊರಲ್ಲಿಯೂ ಐವತ್ತು ರೂಪಾಯಿ ಕೊಡಬೇಕಾಗಿದೆ. ನೀ ಎಷ್ಟು ತಕ್ಕೊಳ್ಳುತ್ತೀ ಸುಕ್ಕೂ, ಹೇಳು.”

ಸುಕ್ಕು ತಲೆ ತಗ್ಗಿಸಿಕೊಂಡು, “ಎಷ್ಟು ಕೊಡುತ್ತೀರೋ ಕೊಡಿರಿ. ನಿಮ್ಮ ಭೂಮಿಯಮೇಲೇ ಇದ್ದೇವೆ, ಓಡಿಹೋಗುವುದು ಎಲ್ಲಿ!” ಎಂದ.

“ನೀನು ದೊಡ್ಡ ಒಕ್ಕಲು, ಆಯ್ತು, ಹತ್ತು ರೂಪಾಯಿ ತಕ್ಕೋ. ಸುಖರನ ಭಗತ, ನಿನಗೆಷ್ಟು ಕೊಡಲಿ?”

“ಐದು ಕೊಡಿರಿ.”

“ಮತ್ತೆ ನಿನಗೆ ಮನೋಹರ?”

“ನಮ್ಮ ಮನೆಯೊಳಗೆ ತುಪ್ಪವೇ ಆಗುವುದಿಲ್ಲ. ಒಂದು ದುಡ್ಡಿನ ತುಪ್ಪ ನಾನು ಮಾರಿದ್ದೇನೆಂದು ಊರೊಳಗೆ ಯಾರಾದರೂ ಹೇಳಲಿ, ಅಯ್ವತ್ತು ರೂಪಾಯಿ ತಕ್ಕೊಳ್ಳಲಿಕ್ಕೂ ಸಿದ್ಧ!”

“ಅಲ್ಲೋ, ಅಯ್ದೂ ತಕ್ಕೊಳ್ಳುವುದಿಲ್ಲವೇ? ಆಯ್ತು ಭಗತನಷ್ಟು ತಕ್ಕೊ.”

“ಭಗತ ಎಮ್ಮೆ ಕಟ್ಟಿದ್ದಾನೆ, ತುಪ್ಪ ಮಾರುತ್ತಾನೆ, ಅವನು ಎಷ್ಟಾದರೂ ತಕ್ಕೊಳ್ಳಲಿ. ನಾನು ರೂಪಾಯಿ ತಕ್ಕೊಂಡರೆ ಪೇಟೆಯಲ್ಲಿ ಹತ್ತು ಚಟಾಕಿನಂತೆ ಕೊಂಡು ತರಬೇಕಾಗುತ್ತದೆ.”

"ಏನು ಬೇಕಾದ್ದು ಮಾಡು. ಸರಕಾರದ ಹುಕುಮು ನಡೆಸಲೇ ಬೇಕಲ್ಲವೆ? ಲಾಲಗಂಜದಲ್ಲಿ—ಇಡೀ ಊರೊಳಗೆ ಒಂದೂ ಎಮ್ಮೆಯಿಲ್ಲ—ಮೂವತ್ತು ರೂಪಾಯಿ ಕೊಟ್ಟು ಬಂದಿದ್ದೇನೆ. ಅವರು ಪೇಟೆಯಿಂದಲೇ ಕೊಂಡು ಕೊಡುತ್ತಾರೆ. ಚಾವಣಿಯಲ್ಲಿ ಇಪ್ಪತ್ತು ರೂಪಾಯಿ ಕೊಟ್ಟಿದ್ದೇನೆ—ಅಲ್ಲಿಯೂ ಯಾರ ಮನೆಯಲ್ಲಿಯೂ ಎಮ್ಮೆ ಇಲ್ಲ."

"ಅಂದರೆ ಹತ್ತಾರ ದುಡ್ಡಿದ್ದೀತು. ನಮ್ಮಲ್ಲಿ ಒಂದು ಕವಡೆಯೂ ಇಲ್ಲ."

"ಮನೋಹರ, ನೀನೇ ಓಡೋಡಿಕೋತ ತಂದು ಕೊಡುತ್ತೀ ತುಪ್ಪ—ಆದರೆ ನಾಲ್ಕು ಮಾತು ಅನ್ನಿಸಿಕೊಂಡು. ಜಮೀನದಾರರ ಊರೊಳಗೆ ಇದ್ದುಕೊಂಡು ಅವರ ಕೂಡ ಎಡವಟ್ಟತನ ಮಾಡಿದರೆ ನಡೆಯುವುದಿಲ್ಲ. ಈಗ ಕಾರಕೂನಸಾಹೇಬರು ಕರಸಿದರೆಂದರೆ, ಹಣವನ್ನೂ ಕೊಡುತ್ತೀ, ಮೇಲೆ ಕೈಕಾಲು ಬೀಳುತ್ತೀ. ನಾನು ಸರಳ ಮಾತಿನಿಂದ ಹೇಳಿದರೆ ಹುಬ್ಬುಗಂಟು ಹಾಕುತ್ತೀ."

ಮನೋಹರ ತಲೆ ಕಾಯ್ದು ಉತ್ತರವಿತ್ತ: "ಕಾರಕೂನ ಏನು ಹುಲಿಯಲ್ಲ, ಜಮೀನದಾರ ಏನು ಭೂತಲ್ಲ. ಇಲ್ಲಿ ಯಾರು ಅಂಜುವರಿಲ್ಲ. ಪೈಗೆ ಪೈ ಕಂದಾಯ ಚುಕ್ತಾ ಮಾಡುತ್ತೇವೆ ಅಂದಮೇಲೆ ಇಂಥ ಹಿಂಸೆ ಏಕೆ ಸಹಿಸಬೇಕು?"

"ಸರಕಾರವನ್ನು ನೀನಿನ್ನೂ ಅರಿತಿಲ್ಲ. ದೊಡ್ಡ ಸರಕಾರದ ಕಾಲ ಇಲ್ಲ ಈಗ. ಇವರ ಪಂಜರದೊಳಗೆ ಒಮ್ಮೆ ಸಿಕ್ಕಿಯೆಂದರೆ ಪಾರಾಗುವುದೇ ಸಾಧ್ಯವಿಲ್ಲ."

ಮನೋಹರನ ಕೋಪಾಗ್ನಿ ಮತ್ತಷ್ಟು ಪ್ರಜ್ವಲಿಸಿತು. ಅವನೆಂದ: "ಒಳ್ಳೇದು, ಹೋಗು, ತೋಫಿನ ಬಾಯಿಗೆ ಕೊಟ್ಟು ಹಾರಿಸಿರಿ."

ಗಿರಿಧರ ಮಹಾರಾಜ ಎದ್ದ. ಸುಕ್ಖೂ ಮತ್ತು ದುಖರನ ಇಬ್ಬರೂ—ಇನ್ನು ಮನೋಹರನೊಂದಿಗೆ ಕುಳಿತುಕೊಳ್ಳುವುದು ತರವಲ್ಲವೆಂದು—ಗಿರಿಧರನೊಡನೆ ಹೊರಟುಹೋದರು. ಮನೋಹರ ಅವರಿಬ್ಬರನ್ನೂ ತೀವ್ರ ದೃಷ್ಟಿಯಿಂದ ನೋಡಿ ಎಳನೀರು ಕುಡಿಯತೊಡಗಿದ.

## ಮಿಂಚಿನಬಳ್ಳಿ

## ೧

ಲಖನಪುರದ ಜಮೀನದಾರರ ಮನೆ—ಈಗ ದುರಸ್ತಿ ಕಾಣದೆ ಜೀರ್ಣವಾಗಿ ನಿಂತಿರುವುದು—ಕಾಶಿಯಲ್ಲಿ ಔರಂಗಾಬಾದಿನ ಬಳಿ. ಒಂದು ಕಾಲದಲ್ಲಿ ಈ ಮನೆತನ ನಗರದಲ್ಲಿ ಅತ್ಯಂತ ಪ್ರತಿಷ್ಠಿತವಾಗಿತ್ತು. ಸಿರಿವಂತಿಕೆಯ ಹೆಮ್ಮೆ, ಮನೆತನದ ಗೌರವದ ರಕ್ಷಣೆಗಾಗಿ ಅದೀಗ ನಿಕೃಷ್ಟಸ್ಥಿತಿಗೆ ಬಂದಿತ್ತು. ಪೇಟಿಯಲ್ಲಿ ದುಡ್ಡು ಅದ್ದೇಲಿಯ ಸಾಮಾನೂ ಉದ್ದರಿಯಾಗಿ ಹುಟ್ಟುತ್ತಿರಲಿಲ್ಲ. ಮಕ್ಕಳ ಮದುವೆ, ನೆಂಟರ ಆದರ, ಬರುಹೋಗುವವರ ಸತ್ಕಾರ—ಇತ್ಯಾದಿಗಳ ಆಡಂಬರ-ಸಡಗರಗಳಿಗಾಗಿ ಆಸ್ತಿಯ ಬಹುಭಾಗ ಒತ್ತಿ ಬಿದ್ದು, ಲಖನಪುರ ಇನ್ನು ನಾಲ್ಕು ಹಳ್ಳಿಗಳು ಮಾತ್ರ ಉಳಿದಿವೆ. ಆದಾಯ ಸುಮಾರು ನಾಲ್ಕು ಸಾವಿರಕ್ಕೆ ನಿಂತಿದೆ. ಆದರೂ ಲಾಲಾ ಜಟಾಶಂಕರರಿಗೆ ಮನೆ ಬಿಟ್ಟು ಹೊರಟರೆ ಪಲ್ಲಕ್ಕಿಯೇ ಆಗಬೇಕು.

ಲಾಲಾ ಜಟಾಶಂಕರರಿಗೆ ಭಾಗವತ-ಗೀತೆಗಳಲ್ಲಿ ಅತೀವ ಅನುರಾಗ. ಮನೆತನದ ಆಡಳಿತವನ್ನೆಲ್ಲ ತಮ್ಮ ಪ್ರಭಾಶಂಕರರೇ ನೋಡಿಕೊಳ್ಳುತ್ತಿದ್ದರು. ತಮ್ಮನ ಕೆಲಸದಲ್ಲಿ ಅವರು ಕೈಹಾಕುತ್ತಿರಲಿಲ್ಲ. ತಮ್ಮನೂ ತನಗೆಷ್ಟು ಕಷ್ಟವಾದರೂ ಅಣ್ಣನಲ್ಲಿ ದೂರಿಕೊಳ್ಳುತ್ತಿರಲಿಲ್ಲ. ಹೆಂಗುಸರಲ್ಲಿ 'ನೀನು-ನೀನು' 'ನಿನ್ನ-ನಿನ್ನ' ನಡೆಯುತ್ತಿದ್ದರೂ ಈ ಅಣ್ಣತಮ್ಮಂದಿರಮೇಲೆ ಏನೂ ಪರಿಣಾಮವಾಗುತ್ತಿರಲಿಲ್ಲ—ಅಷ್ಟು ಅವಿಚಲ ಪ್ರೀತಿ ಅವರಿಬ್ಬರಲ್ಲಿ.

ಜಟಾಶಂಕರರು ತೀರಿಕೊಂಡು ವರ್ಷವಾಗಿತ್ತು; ಅವರ ಹೆಂಡತಿ ಆ ಮೊದಲೇ ಹೋಗಿದ್ದರು. ಇಬ್ಬರು ಗಂಡುಮಕ್ಕಳು ಅವರಿಗೆ—ಪ್ರೇಮಶಂಕರ ಮತ್ತು ಜ್ಞಾನಶಂಕರ. ಇಬ್ಬರದೂ ಮದುವೆಯಾಗಿತ್ತು. ಪ್ರೇಮಶಂಕರ ನಾಲ್ಕಯ್ದು ವರುಷಗಳಿಂದ ಕಾಣೆಯಾಗಿದ್ದ; ಅವನ ಹೆಂಡತಿ ಶ್ರದ್ಧಾ ಮನೆಯಲ್ಲಿ ಅವನಿಗಾಗಿ ಕುದಿಯುತ್ತಾ ಇದ್ದಳು. ಜ್ಞಾನಶಂಕರ ಕಳೆದ ವರುಷ ಬಿ. ಎ. ಪದವಿ ಪಡೆದು, ಈಗ ಪೇಟೆಬಾರಿಸುವುದರಲ್ಲಿ ಮಗ್ನನಾಗಿರುತ್ತಿದ್ದ. ಅವನಿಗೊಬ್ಬ ಮಗನಿದ್ದ—ಮಾಯಾಶಂಕರ. ಲಾಲಾ ಪ್ರಭಾಶಂಕರರ ಹೆಂಡತಿ ಜೀವಿಸಿದ್ದಳು. ಅವರ ಮಗ ದಯಾಶಂಕರ

ಸಬ್ ಇನ್ಸ್‌ಪೆಕ್ಟರಾಗಿದ್ದ, ಮದುವೆಯೂ ಆಗಿತ್ತು. ಅವರ ಹೆಣ್ಣುಮಕ್ಕ-ಳಿಬ್ಬರು ಇನ್ನೂ ಕುಮಾರಿಯರಿದ್ದರು.

ಪ್ರೇಮಶಂಕರ ಬಿ. ಎ, ಆದಿಂದ ಅಮೇರಿಕೆಗೆ ಹೆಚ್ಚಿನ ಶಿಕ್ಷಣಕ್ಕಾಗಿ ಹೋಗಬಯಸಿದ; ಕಕ್ಕ ಒಪ್ಪಲಿಲ್ಲ; ಆಗವನು ಗೊತ್ತಿಲ್ಲದೆ ಹೋಗಿಬಿಟ್ಟ; ಮನೆಯವರೊಡನೆ ಪತ್ರಸಂಬಂಧವನ್ನೂ ಇಟ್ಟುಕೊಳ್ಳಲಿಲ್ಲ. ಅವನು ಹೋದಮೇಲೆ ಜ್ಞಾನಶಂಕರ ತಂದೆ-ಕಕ್ಕಂದಿರೊಡನೆ ಜಗಳಕ್ಕೆ ನಿಂತ. ಅವರ ದುಂದುಗಾರಿಕೆಯನ್ನು ಕಟುವಾಗಿ ಟೀಕಿಸತೊಡಗಿದ. "ನಮಗೆ ಅನ್ನಕ್ಕೂ ಅಭಾವವಾಗಬೇಕೆನ್ನುವಿರೇನು ನೀವು?" ಎನ್ನುತ್ತಿದ್ದ. "ತಮ್ಮಾ, ನಾವು ಇಷ್ಟು ದಿನ ಇದ್ದಹಾಗೇ ಇರುವವರು; ಇದಕ್ಕಿಂತ ಒಳ್ಳೆಯ ವ್ಯವಸ್ಥೆ ಸಾಧ್ಯ ವಿದ್ದರೆ ನೀ ಮಾಡಿಕೋ. ‹ನಾವೂ ನೋಡುತ್ತೇವೆ" ಎಂದು ಅವರೆನ್ನುವರು. ಅವನಾಗ ಕಾಲೇಜಿನಲ್ಲಿ ಓದುತ್ತಿದ್ದ; ಈ ಸೂಚನೆಗೆ ಅವನು ಸುಮ್ಮನಾಗುತ್ತಿದ್ದ. ಆದರೆ ಪದವೀಧರನಾಗಿ ಬಂದ ಬಳಿಕ—ಇತ್ತ ತಂದೆಯೂ ಸತ್ತಿದ್ದ-ಮನೆವಾಳ್ತೆಯಲ್ಲಿ ಕೈಹಾಕಲು ತೊಡಗಿದ. ಅದರ ಫಲವಾಗಿ ಕಳೆದ ಅರವತ್ತು ವರುಷಗಳಿಂದ ನಡೆದುಬಂದಿದ್ದ ಒಂದಿಕೆ-ಹೊಂದಿಕೆ ಬಹಳ ಸಡಿಲಾಗಿ-ಬಿಟ್ಟಿತು. ಕಕ್ಕ ಮಾಡುವುದು ಮಗನಿಗಾಗುತ್ತಿರಲಿಲ್ಲ, ಮಗನದು ಕಕ್ಕನಿಗಾಗುತ್ತಿರಲಿಲ್ಲ. ಯಾವಾಗಲೂ ಬಾಯಿಗಾಳಿಗ ನಡೆದಿರುತ್ತಿತ್ತು.

ಅಣ್ಣನ ಶ್ರಾದ್ಧಕ್ಕಾಗಿ ಪ್ರಭಾಶಂಕರರು ಎರಡು ಸಾವಿರ ರೂಪಾಯಿಗಳ ಅಂದಾಜು ಮಾಡಿದ್ದರು,—ಒಂದು ಸಾವಿರ ಬ್ರಾಹ್ಮಣ ಭೋಜನವಾಗಬೇಕು, ನಗರದ ಪ್ರತಿಷ್ಠಿತರನ್ನೆಲ್ಲ ಕರೆಯಬೇಕು, ಬೆಳ್ಳಿಯ ಪಾತ್ರೆ, ರತ್ನಗಂಬಳಿ, ಪಲ್ಲಂಗ, ವಸ್ತ್ರ ಮೊದಲಾದವುಗಳ ದಾನ ಕೊಡಬೇಕು ಇತ್ಯಾದಿ. ಇದು ಅಪವ್ಯಯ, ಮನೆಯ ಸ್ಥಿತಿ ಇಂತಿರುವಾಗ ಇದು ಅನುಚಿತ ವೆಚ್ಚ, ಈ ಕೆಲಸಕ್ಕೆ ಇನ್ನೂರು ರೂಪಾಯಿ ಎಂದರೆ ಹೆಚ್ಚಾಯ್ತು ಎಂದು ಜ್ಞಾನಶಂಕರನ ವಾದ. ಅವನ ಹೃದಯದಲ್ಲಿ ಭಾವೀ ಉನ್ನತಿಯ ಬಗ್ಗೆ ದೊಡ್ಡ ದೊಡ್ಡ ಆಸೆಗಳಿದ್ದವು. ತಮ್ಮ ಮನೆತನವನ್ನು ಮರಳಿ ಸಮೃದ್ಧಿ ಸಮ್ಮಾನಗಳ ಶಿಖರಕ್ಕೇರಿಸಬೇಕೆಂದು ಬಯಸುತ್ತಿದ್ದ. ಜೀವನ ಚೈನಿಯಿಂದ ಸಾಗ-ಬೇಕೆಂಬುದು ಅವನ ಧ್ಯೇಯವಾಗಿತ್ತು. ಅದಕ್ಕಾಗಿ, ಸದ್ಯಃಸ್ಥಿತಿಯಲ್ಲಿ ಮಿತವ್ಯಯದ ಹೊರತು ಬೇರೆ ಹಾದಿ ಜ್ಞಾನಶಂಕರನಿಗೆ ಕಾಣುತ್ತಿರಲಿಲ್ಲ.—ಸಣ್ಣ

ಪುಟ್ಟ ನೌಕರಿ ಅವನ ಮಾನಕ್ಕೆ ಸಾಲದು, ವಕೀಲಿಯಲ್ಲಿ ಮನಸ್ಸಿಲ್ಲ, ಉಚ್ಚಾಧಿಕಾರ ಸಿಕ್ಕುವಂತಿಲ್ಲ. ಪ್ರಭಾಶಂಕರರಾದರೋ ಜಿಲ್ಲಾಧೀಶರ ಕೃಪೆಯೇ ತಮಗೆ ಸಾಕು ಎಂದು ಬಗೆದಿದ್ದರು; ಮಗನಿಗೆ ಸಬ್‌ಇನ್ಸ್‌ಪೆಕ್ಟರಿಕೆ ದೊರಕಿಸಿ ಅದರ ಫಲವನ್ನೂ ಪಡೆದಿದ್ದರು. ಈ ಅಕರ್ಮಣ್ಯತೆಗಾಗಿ ಜ್ಞಾನಶಂಕರ ಆಗಾಗ ಕಕ್ಕನನ್ನು ದಟ್ಟಿಸುತ್ತಲೂ ಇದ್ದ. 'ನೀವು ನಿಮ್ಮ ಇಡೀ ಜೀವನ ಹಾಳು ಮಾಡಿದಿರಿ; ಲಕ್ಷಾವಧಿ ಸೊತ್ತನ್ನು ಭೋಗವಿಲಾಸದಲ್ಲಿ ತೂರಿಬಿಟ್ಟಿರಿ; ಯಾವಾಗಲೂ ಆತಿಥ್ಯ–ಸತ್ಕಾರ, ಮರ್ಯಾದಾ ರಕ್ಷಣೆಗೇ ಜೀವ ಕಳಕೊಳ್ಳುತ್ತಿದ್ದೀರಿ. ಈ ಉತ್ಸಾಹದ ಒಂದಂಶವನ್ನಾದರೂ ಅಧಿಕಾರಿ ವರ್ಗದ ಸೇವಾ–ಸತ್ಕಾರಗಳಲ್ಲಿ ಸಮರ್ಪಿಸಿದ್ದರೆ ಇಷ್ಟೊತ್ತಿಗೆ ನಾನು ಡಿಸ್ಟ್ರಿಕ್ಟ ಕಲೆಕ್ಟರಾಗುತ್ತಿದ್ದೆ' ಎನ್ನುತ್ತಿದ್ದ. ಈ ತಿರಸ್ಕಾರದಿಂದ ನೊಂದುಕೊಂಡು ಪ್ರಭಾಶಂಕರರು ಹೇಳುತ್ತಿದ್ದರು "ತಮ್ಮಾ, ಇಂಥ ಮಾತಾಡಿ ನನ್ನನ್ನು ಕುದಿಸಬೇಡ. ನಿನ್ನ ಜೀವ ಅಂದರೆ— ಕುದುರೆ–ಸಾರೋಟು, ಕುರ್ಚಿ–ಮೇಜು, ಕನ್ನಡಿ–ಚಿತ್ರ ಮುಂತಾದವು. ನಾವು ಹೆಚ್ಚೆಚ್ಚು ಒಳ್ಳೆಯದನ್ನು ಉಣ್ಣಬೇಕು, ಹೆಚ್ಚೆಚ್ಚು ಒಳ್ಳೆಯದನ್ನು ಉಡಬೇಕು ಎಂಬುದು ನಿನ್ನ ಅಪೇಕ್ಷೆ. ಆದರೆ ನಾವು ಉಣ್ಣುತಿನ್ನುವುದರಿಂದ ಮುಂದಿಗೇನು ಸುಖ? ಭೋಗವಿಲಾಸದಲ್ಲಿ ಜೀವನ ಕಳೆಯಲಿಲ್ಲ ನಾವು. ಕುಲಮರ್ಯಾದೆಯ ರಕ್ಷಣೆಯದು. ವಿಲಾಸಿತೆಯೆಂದರೆ ನೀನು ಬೆನ್ನು ಹತ್ತಿರುವೆಯಲ್ಲ, ಅದು. ಇದು ಆಸ್ತಿ ಕಾಯುವ ಲಕ್ಷಣವಲ್ಲ, ಹಾಳುಮಾಡುವ ಲಕ್ಷಣ. ಭೇದವಿಷ್ಟೇ: ನಾವು ಮುಂದಿಗಾಗಿ ಕಳೆದೆವು, ನೀನು ನಿನಗಾಗಿ ಕಳೆಯುತ್ತೀ."

ಇನ್ನೂ ಒಂದು ತೊಂದರೆಯೆಂದರೆ ಜ್ಞಾನಶಂಕರರ ಹೆಂಡತಿ ವಿದ್ಯಾವತಿಯೂ ಗಂಡನ ಈ ವಿಚಾರಗಳನ್ನು ಒಪ್ಪುತ್ತಿರಲಿಲ್ಲ; ಪ್ರಭಾಶಂಕರರ ಕಡೆಗೇ ಹೆಚ್ಚು ಒಲವು. ಸ್ವಾರ್ಥಕ್ಕಿಂತ ಪರಮಾರ್ಥದಲ್ಲಿ ಶ್ರದ್ಧೆ ವಿಶೇಷ. ಕಕ್ಕನೊಡನೆ ನಡೆಯುವ ಗಂಡನ ಜಗಳವನ್ನು ಕೇಳಿ ಅವಳಿಗೆ ದುಃಖವಾಗುತ್ತಿತ್ತು; ಅವಕಾಶ ದೊರೆತಾಗ ಅವರಿಗೆ ತಿಳಿಸಿ ಹೇಳಲು ಪ್ರಯತ್ನಿಸುತ್ತಿದ್ದಳು. ಆದರೆ, ಜ್ಞಾನಶಂಕರರು ಅವಳನ್ನು ಧಿಕ್ಕರಿಸಿಬಿಡುತ್ತಿದ್ದರು. ಇಷ್ಟು ಕಲಿತವರಾಗಿಯೂ ಹೆಂಡತಿಗೆ ಕಾಲೊಳಗಿನ ಕೆರವಿಗಿಂತ ಹೆಚ್ಚಿಗೆ ಮಾನ ಕೊಡುತ್ತಿರಲಿಲ್ಲ.

೩

ಮನೋಹರ ಉದ್ಧಟತನದ ಮಾತನ್ನೇನೋ ಆಡಿಬಿಟ್ಟ ನಿಜ. ಸಿಟ್ಟು ಶಾಂತವಾದಮೇಲೆ ತಾನು ತಪ್ಪು ಮಾಡಿದೆನೆಂದು ಅನಿಸಿತು ಅವನಿಗೆ. ಊರವರೆಲ್ಲ ತನ್ನ ಶತ್ರುಗಳೇ ಇದ್ದಾರೆ; ಅವರೀಗ ಊರ ಕಟ್ಟೆಯಮೇಲೆ ಕುಳಿತು ತನ್ನನ್ನು ಆಡಿಕೊಳ್ಳುತ್ತಿರಬಹುದು. ಗುಮಾಸ್ತ ಯಾವ ಉಪದ್ರವ ತರುತ್ತಾನೋ. ನನ್ನ ನಾಲಗೆಯೆ ನನಗೆ ಮುಳಿವಾಗಿದೆ ಎಷ್ಟು ಹಿಡಿತದಲ್ಲಿಟ್ಟುಕೊಳ್ಳಬೇಕೆಂದರೂ ನಿಲ್ಲುವುದಿಲ್ಲ. ಆಗುತ್ತಿತ್ತೇನು, ಉಳಿದದ್ದೆಲ್ಲ ಕೊಡುವುದಿರುವಲ್ಲಿ ಇನ್ನು ಹತ್ತು ರೂಪಾಯಿ ಆಗುತ್ತಿತ್ತು.

ಆದರೆ ಈ ವಿಚಾರ ಮತ್ತೆ ತಿರುಗಿತು. ನನಗೆ ಏನಾದರೂ ಸರಿ, ಆದರೆ ಒಬ್ಬರ ಗದರಿಕೆಯನ್ನು ಸಹಿಸಲಾರೆ, ಯಾರ ಮುಂದೂ ತಲೆ ತಗ್ಗಿಸಲಾರೆ. ಜಮೀನದಾರರಿಗೂ ಗೊತ್ತಾಗಲಿ—ಊರೊಳಗೆ ಎಲ್ಲರೂ ನಿರ್ಲಜ್ಜರೇ ಇಲ್ಲ ಎಂದು. ಯಾರಾದರೂ ವ್ಯಾಜ್ಯ ಹೂಡಿದರೆ ಕೋರ್ಟಿನಲ್ಲಿ ಜಜ್ಜರ ಮುಂದೆ ಎಲ್ಲಾ ಗುಟ್ಟು ಬಯಲಿಗೆಳೆದುಬಿಡುತ್ತೇನೆ, ಏನಾಗುತ್ತದೋ ನೋಡಿಬಿಡುವ.

ಈ ವಿಚಾರದಲ್ಲಿಯೇ ಅವನು ಊಟಕ್ಕೆ ಕುಳಿತ. ಬಡಿಸಿದ ಜವೆ-ಗೋದಿಯ ರೊಟ್ಟಿಗಳನ್ನು ಮುರಿಮುರಿದು ಅವನು ಕಹಿ ಔಷಧ ತಿನ್ನುತ್ತಿರುವನೋ ಎಂಬ ಹಾಗೆ ಬಾಯಿಗಿಟ್ಟುಕೊಳ್ಳುತ್ತ, ಆದರಷ್ಟೇ ರುಚಿಯಾಗಿ ತುತ್ತು ಜಗಿಯುತ್ತಿದ್ದ. ಅದನ್ನು ಕಂಡು ಹೆಂಡತಿ ವಿಲಾಸಿ, "ಯಾಕ, ಹಸಿವು ಇಲ್ಲೇನ?" ಎಂದು ಕೇಳಿದಳು.

"ಹಸಿವು ಯಾಕಿಲ್ಲ, ಉಣ್ಣಾಕ ಹತ್ತೀನಲ್ಲ."

"ತಿನ್ನೋದೇನಿಲ್ಲ, ತೂಕಡಿಸ್ತೀರೋ ಏನೊ! ಯಾರ ಸಂಗಾಟಾದ್ರೂ ಹಾಕ್ಯಾಟಗೀಕ್ಯಾಟ ಆಗೇತೇನು?"

ಅಷ್ಟರಲ್ಲಿ ಬಲರಾಜ ಬಂದ. ಹೃಷ್ಟಪುಷ್ಟವಾದ ಗಟ್ಟಿಮುಟ್ಟಾದ ಮೈಕಟ್ಟು, ಉಬ್ಬಿದ ಹರವಾದ ಎದೆ, ಕಣ್ಣುಗಳಲ್ಲಿ ತೇಜ ಹೊಳೆಯುತ್ತಿತ್ತು. ಕೊರಳಲ್ಲಿ ಬಂಗಾರದ ಯಂತ್ರ, ಬಲರಟ್ಟೆಯಲ್ಲಿ ಬೆಳ್ಳಿಯ ಒಂದು ಅನಂತ. ಅವನು ಮನೋಹರನ ಮಗ. ಹೊಗೆಯಿಂದ ಕಣ್ಣು ತಿಕ್ಕುತ್ತ ಬಲರಾಜ

ಎಂದ : "ಎಪ್ಪಾ, ಗಿರಿಧರ ಮಹಾರಾಜ ಇವತ್ತು ನಿನಮ್ಯಾಗ ಯಾಕ ಸಿಟ್ಟಿಗೆದ್ದಿದ್ದನಂತ? ಮಂದಿ ಅಂತಾರು, ಬಾಳ ಕಿಡಿ ಕಾರ್‍ತಿದ್ದನಂತ."

"ಏನಿಲ್ಲ. ಯಾರು ಹೇಳಿದರು ನಿನಗ?"

"ಎಲ್ಲರೂ ಅಂತಾರು. ನಿನ್ನ ತುಪ್ಪಾ ಬೇಡ್ತಿದ್ದನಂತ, ನೀ ನಂ ಹಂತ್ಯಾಕ ಇಲ್ಲ ಅಂದೆಂತ. ಈಟಕ್ಕೇ ಜಗಳಾತಂತ."

"ಜಗಳೆಲ್ಲೀದು ಬಂತು? ನೀ ತುಪ್ಪಾ ಕೊಡಾಕ ಬೇಕಂತ ಗಿರಿಧರ ಮಹರಾಜ ಅಂದ, ನಂತಾವ ಯಾವಾಗ ತುಪ್ಪಾಕ್ಕೈತಿ ಆವಾಗ ಕೊಡತೀನು. ಈಗಿಲ್ಲ ಅಂತ ನಾ ಹೇಳಿದೆ."

"ಯಾರು ಯಾಕ ನಮ್ಮನ್ನ ತುಪ್ಪಾ ಕೇಳ್ತಾರು? ಯಾರೇನ ಹೊಟ್ಟಿಗೆ ಹಾಕ್ತಾರs, ಏನು ಯಾರ ಮನಿಗೆ ಬೇಡಾಕ ಹೋಕ್ಕೇವೊ? ತಮ್ದು ಒಂದುಡ್ಡೂ ಬಿಡೋದಿಲ್ಲ; ನಾವ್ಯಾಕ ಅನ್ನಿಸಿಕೋಬೇಕು? ನಾ ಆಗಿದ್ದರ ತೋರಿಸ್ತಿದ್ದೆ ಎಲ್ಲಾ."

ಬಿಲಾಸಿ ತಿರಸ್ಕಾರಭಾವದಿಂದ ಮನೋಹರನ ಕಡೆ ನೋಡಿದಳು. "ಎಂತಾ ಸೊಬಾವ ನಿಮ್ದು—ಯಾವಾಗಿದ್ರೂ ಏನಾದ್ರೂ ಒಂದು ತಂಟೆ ತಗದೇ ಇರ್‍ತೀರಿ. ಊರ ಮಂದೀನೇ ತುಪ್ಪಾ ಕೊಡತ್ತೈತಿ ಅಂದಮ್ಯಾಕ, ನಾವೇನ ಊರು ಬಿಟ್ಟು ಹೊರ್‍ಯಾಕದೇವ? ಚಟಿಗ್ಯಾಗ ಒಂದೀಟು ಆಯ್ತಿ, ಮೂರು ನಾಕು ದಿಂದಾಗ ಇನ್ನೋಟು ಕೂಡಿಸಿಕೊಡ್ತೀನು. ಒಯ್ದು ತೂಗಿ ಬರ್‍ರಿ." ಎಂದಳು.

"ಯಾಕ ಕೊಟ್ಟು ಬರಬೇಕು? ಯಾರದೇನು ಅಂಜಿಕೆಯ್ತೆ?" ಎಂದ ಬಲರಾಜ.

"ಸುಮಾಕ ಕುಂದರು ಹೋಗಲಾ—ದೊಡ್ಡ ಸೂರನ್ಹಾಂಗ ಬಂದಾನು! ಜಮೀನದಾರರ ವೈರಾ ಕಟಿಕೊಂಡು ಊರಾಗ ಬಾಳೇವು ಮಾಡೋದು ಹಗರಲ್ಲ." ಎಂದು ನುಡಿದು ಬಿಲಾಸಿ ಮನೋಹರನಿಗೆ, "ನಾ ಹೇಳ್ತೀನು—ನಾಳೆ ಕಾರಕೂನರ ತಾವು ಹೋಗಿ ಹೇಳಿಕೊಂಡು ಬರ್‍ರಿ." ಎಂದಳು.

"ನಾ ಏನು ಇನ್ನ ಹೋಗಾವಲ್ಲ." ಎಂದ ಮನೋಹರ.

"ಹಾಂಗಾರ ನಾ ಹೋಕ್ಕೀನು."

" ನೀನೂ ಹೋಗಬ್ಯಾಡ. ನಮಗ ಕಾರಕೂನ ಏನ್ಮಾಡ್ತಾನು ? ಬಾಳ ಆದರ ನಮ್ಮ ಹೊಲಾ ಕಸಕೊಂಡಾನು. "

ಮನೋಹರ ಹೀಗೆ ದೊಡ್ಡ ದೊಡ್ಡ ಮಾತನಾಡಿದರೂ, ವಾಸ್ತವದಲ್ಲಿ ಎರಡನೆಯವರ ದೃಷ್ಟಿಯಲ್ಲಿ ಅಪಮಾನ ಆಗದ ಹಾಗೆ, ಕೆಟ್ಟು ಹೋದ ಕೆಲಸ ಸರಿ ಆಗುತ್ತಿದ್ದರೆ ಅದಕ್ಕೆ ಅವನ ಅಡ್ಡಿಯೇನೂ ಇರಲಿಲ್ಲ. ತಾನೇ ಹೋಗಿ ಕ್ಷಮೆ ಬೇಡುವುದು, ಒಮ್ಮೆ ಸಡ್ಡುಹೊಡೆದು ತಿರುಗಿ ಬಗ್ಗಿ ಹೋಗುವುದು ಎಂದರೆ ಅತ್ಯಂತ ಲಜ್ಜಾಸ್ಪದ. ಒದಗುವ ಹಾನಿಯ ಭಯಕ್ಕಿಂತಲೂ ಅವನನ್ನು ಶಾಂತಗೊಳಿಸುವಲ್ಲಿ ಬಲರಾಜನ ಉದ್ದಂಡತನ ಹೆಚ್ಚು ಸಫಲವಾಗಿತ್ತು.

ಮರುದಿನ ಮುಂಜಾನೆ ಬಿಲಾಸಿ ಚಾವಡಿಗೆ ಹೋಗಲು ಅಣಿಯಾದಳು. ಆದರೆ ಜೊತೆಗೆ ಬರಲು ಗಂಡನೂ ಒಪ್ಪಲಿಲ್ಲ, ಮಗನೂ ಒಪ್ಪಲಿಲ್ಲ. ಒಬ್ಬಳೇ ಹೋಗಲು ಧೈರ್ಯ ಸಾಲದು. ಅಷ್ಟರಲ್ಲಿಯೆ ಕಾದಿರಮಿಯಾ ಬಂದುದನ್ನು ಕಂಡು ಅವಳು ಸ್ವಲ್ಪ ಸೆರಗೆಳೆದುಕೊಂಡಳು. ಕಾದಿರ ಚಿಂತಾಯುಕ್ತ ಭಾವದಿಂದ ಎಂದ: " ನಿನ್ನೆ ಆಗಿತ್ತೇನು ನಿನಗೆ ? ಗಡಾನ ಹೋಗು, ಕಾರಕೂನ ಸಾಹೇಬರನ್ನ ಕೇಳಿಕೋ—ಇಲ್ಲದಿದ್ದರೆ ಏನೇನಾರ ಮಾಡಿ ಕೊಂಡು ಕುಂತಾನು. ನಿನಮ್ಯಾಗ ದೂರು ಹೇಳಾಕ ಅವ ಏನೋ ಧಣೇರ ತಾಕ ಹೋಕ್ಯಾನು ಅಂತಾ ಸುದ್ದಿ ಅಯ್ತು. ಸುಕ್ಖೂನೂ ಹೋಕ್ಯಾನಂತ ಸಂಗಾಟ. ಅವರಿಬ್ಬರಾಗೂ ಏನು ಮಸಲತ್ತಾಗೇತೋ ಯಾರ ಕಂಡಿದಾರು ? ನಡಿ, ಗಡಾನ ನಡಿ, ಇದಕಂತಾ ನಾ ಗಡಾನ ಓಡಿಬಂದೆ. "

" ಎಣ್ಣಾ. ನಾ ಏನು ಹೋಗಾಣಿಲ್ಲ ಬಿಡು. "

" ಇವರ ಕಡಗಕ್ಕೆ ಮಣ್ಣು ಹತ್ತೀತು. ನಡೀರಿ ನಾ ಬರ್ತೀನು. " ಎಂದಳು ಬಿಲಾಸಿ.

ಕಾದಿರ ಮತ್ತು ಬಿಲಾಸಿ ಚಾವಡಿಗೆ ನಡೆದರು. ಅಲ್ಲಿ ಬಹಳ ಜನ ನೆರೆದಿದ್ದರು—ಕಂದಾಯ ಕಟ್ಟುವುದಕ್ಕೆ ಕೆಲವರು, ತುಪ್ಪದ ರೂಪಾಯಿ ತಕ್ಕೊಳ್ಳಲು ಕೆಲವರು, ಮುಖಸ್ತುತಿ ಮಾಡುವುದಕ್ಕೆ ಕೆಲವರು, ಸುಮ್ಮನೆ ಮೋಜು ನೋಡುವುದಕ್ಕೆ ಕೆಲವರು. ಗುಲಾಮ ಗೌಸಖಾನ್—ದೊಡ್ಡ

ದೇಹದ, ನೆರಳುಬಣ್ಣದ, ಉದ್ದ ಗಡ್ಡದ, ಕಠೋರ ಮುಖಮುದ್ರೆಯ ಗುಮಾಸ್ತ—ಚೌಕಿಯ ಮೇಲೆ ಕುಳಿತಿದ್ದ; ಕೆಳಗೆ ಎಡಬಲದಲ್ಲಿ ಸಂಕ್ಪ ಮತ್ತು ದುಖರನ ಕುಳಿತಿದ್ದರು.

ಸಂಕ್ಪ, "ಕೂಲೀ ಆಳು ನಾವು, ಸೊಕ್ಕಿಲೆ ನಡೆಯೋದು ತೆಪ್ಪ. ಜಮೀನ್ದಾರರ ನೆಲದ ಮ್ಯಾಗ ಇರೋರು, ಅವರು ಕೊಟ್ಟದ್ದು ತಿಂದುಕೊಂಡು ಬದುಕಾವ್ರು, ಅವರ ಕೂಡ ಕೆಡಿಸಿಕೊಂಡು ಎಲ್ಲಿ ಹೋಗಾವ್ರು? ಯಾನಂತೀ ದುಖರನ?'' ಎಂದ.

"ಹೌದು ಖರೇ ಅಯ್ತಿ ಈ ಸೊಕ್ಕೇ ಮನಸೆನ್ನ ಕೆಡಸೂದು. ಈ ಗರೂದಿಂದಾನೇ ರಾವಣ ಹಾಳಾದ; ಜರಾಸಂದ ದುರೋದನ ಮಣ್ಣು ಮುಕ್ಕಿದ್ದೂ ಇದಕ್ಕೇ. ನಂನಿಮ್ಮಂತಾವರ ಪಾಡೇನು?" ದುಖರನ ಅನುಮೋದಿಸಿದ.

ಅಷ್ಟರಲ್ಲಿ ಕಾದಿರಮಿಯಾ—ಹಿಂದೆ ಬಿಲಾಸಿ—ಬಂದು, "ಖಾನ-ಸಾಹೇಬ ಮನೋಹರನ ಹೆಂಡತಿ ಬಂದಿದಾಳು—ಏಟು ರೂಪಾಯಿ ಕೊಡ್ತೀರೋ ತುಪ್ಪಕ್ಕೆ ಕೊಡ್ರಿ. ಪಾಪ, ಹೆದರಿಕೊಂಡು ಬರಾಕೇ ಒಲ್ಲಂತ ಕುಂತಿದ್ಲು." ಎಂದು ಅರಿಕೆ ಮಾಡಿದ.

"ಯಾಕ, ಆವ ಎಲ್ಲಿದಾನು ಮನೋಹರ? ಅವಗ ಬರಾಕ ನಾಚಿಕೆ ಆಕ್ಕೈತೇನು?" ಕಟುಸ್ವರದಿಂದ ಗೌಸಖಾನ ಕೇಳಿದ.

"ಸರಕಾರ, ಅವನ ಮಾತ ಮನಸಿನಾಗ ಹಿಡೀಬ್ಯಾಡ್ರಿ, ತಮ್ಮ ಸೇವಾ ಮಾಡಾಕ ನಾ ತಯಾರದೀನು'' ಎಂದು ಬಿಲಾಸಿ ದೀನವಾಣಿಯಿಂದ ನುಡಿದಳು.

"ಹಸೂದಂಥ ಮನಸ್ಯಾ. ನಿನ್ನೆ ಯಾವ ಬೂತ ಬಡಕೊಂಡಿತ್ತೋ ಏನಾಗಿತ್ತೋ!'' ಕಾದಿರನೆಂದ.

"ನೀ ವಕೀಲಿ ಮಾಡೋದು ಬೇಕಾಗಿಲ್ಲ. ನಾ ಏನು ಮಾಡಬೇಕಂಬೂದು ನಂಗೊತ್ತಾಕ್ಕಯ್ತಿ. ಹಿಂಗ ಡೊಗ್ಗಿ ನಡದರೆ ನನ್ನ ಗುಮಾಸ್ತಿಕಿ ನಡದ್ಹಾಂಗಾತು! ಇನ್ನ ಜಮೀನ್ದಾರರನ್ನ ಯಾರು ಕೇಳ್ತಾರು?" ಎಂದು ಗುಮಾಸ್ತ ತಟ್ಟೂ ಹತ್ತಿದ.

ಬಿಲಾಸಿ ಅವನೆದುರಿಗೆ ಕೈಮುಗಿದುಕೊಂಡು ನಿಂತು ಅತ್ತು ಗೋಗರೆದಳು. "ದಮ್ಮಯ್ಯ ನಮ್ಮನ್ನು ಕೊಲ್ಲಬ್ಯಾಡಿರಪ್ಪ! ನೀವೇ ಬೇಕಾದ ದಂಡಾ ಕಟ್ಟಿರಿ, ಬೇಕಾದ ಶಿಕ್ಷಾ ಕೊಡಿರಿ, ಧನೇರ ಮಟಾ ಈ ಮಾತು ವೈಬ್ಯಾಡಿರಿ." ಎಂದು ಅಂಗಲಾಚಿದಳು.

ಆದರೆ ಖಾನಸಾಹೇಬರು ಸುಕ್ಖುವಿಗೆ ಹಿಂದೆ ಬರುವುದಕ್ಕೆ ಹೇಳಿ ಕುದುರೆ ಬಿಟ್ಟರು. ಕಾದಿರಮಿಯಾ ಗಿರಿಧರನ ಕಿವಿಯಲ್ಲಿ ಮೆಲ್ಲನೆ ಹೇಳಿದ: "ಮಹಾರಾಜ, ಮನೋಹರಗೆ ಏನಾರ ದಾರೀ ತೆಗೀರಿ ಅವನ ಸೊಬಾವ ಗೊತ್ತಿಲ್ಲ ಅಯ್ತೆ. ಮನಸ್ಯಾ ಸಿಟ್ಟಿನಾವ, ಒಮ್ಮಾಕಿಲ ಡುರ್ ಅಂತಾನು, ಹಿಂದಾಕಡಸೆ ಕುಂತು ಅಳ್ತಾನು. ಪಾಪ, ಸತ್ತುಹೋಕ್ಕಾನು."

"ನಂಗೆ ಒಂದು ಹಂಚಿಕೆ ಹೊಳೀತಯ್ತೆ. ಮನೋಗ ಹೇಳು: ಧನೇರ ಕಡೇನೇ ಹೋಗಿ ಕೈಕಾಲು ಬೀಳ್ಲಿ. ಅಲ್ಲಿ ನಾನೂ ತೋಡೆ ಹೇಳ್ತಿನು. ಸತ್ತೇವಾಗಿ ಹೇಳಬೇಕಂದರ, ನಿಂ ಸಂಗಾಟ ಒಳ್ಳೇತನದಿಂದ ನಡಕೊಳ್ಳಾಕ ಮನಸಾಗೋದಿಲ್ಲ—ಪರಸಂಗದಾಗ ಜೀ ಅನ್ನೋದು, ಕೆಲಸಾದ ಮ್ಯಾಗ, ಹೊಳೀ ದಾಟಿದ ಮ್ಯಾಗ ಅಂಬಿಗಾನ ಮಿಂಡ ಆಗೋದು. ಆದರ ಅವರವರ ಕರ್ಮ ಅವರವರ ಸುತ್ತ ಇರ್ತಯ್ತೆ. ಹೋಗಿ ಅವನ್ನ ಕಳಿಸು."

ಕಾದಿರ, ವಿಲಾಸಿ ಮರಳಿ ಹೋದಾಗ ಮನೋಹರ ಭಯ–ಚಿಂತೆಗಳಿಂದ ಬೀದಿಯ ಕಡೆಗೆ ನೋಡುತ್ತ ಕುಳಿತಿದ್ದ. ಕಾದಿರಮಿಯಾ ಅಲ್ಲಿನ ಸಂಗತಿಯನ್ನೆಲ್ಲಾ ಹೇಳಿ ಗಿರಿಧರನ ಸಂದೇಶವನ್ನೂ ತಿಳಿಸಿದ. ಮನೋಹರ ಕ್ಷಣಹೊತ್ತು ಯೋಚಿಸಿ, "ಅಲ್ಲಿ ಹ್ವಾದರ ನನ್ನ ಗತಿ ಇನ್ನೋಟು ಕೆಟ್ಟಿs ಆಕ್ಕೈತಿ. ಈಗ ತೆಲೀಮ್ಯಾಗ ಬೀಳೋದು ಬಿದ್ದಯ್ತೆ, ಏನಾಕ್ಕಯ್ತೋ ಆಗಲಿ" ಎಂದ.

ವಿಲಾಸಿ ಕಾದಿರನ ಕಡೆ ಅತ್ಯಂತ ವಿನೀತಭಾವದಿಂದ ನೋಡಿ, "ದಾದಾ, ಅವರು ಬರಾಕಿಲ್ಲ, ಬಿಡಲಿ, ನಾನೇ ಬರ್ತೀನು ನಡೀರಿ ನಿಂ ಕೂಟ" ಎಂದಳು.

ಮನೋಹರ ಸುಮ್ಮನೆ ಕುಳಿತಿದ್ದ. ವಿಲಾಸಿ ಒಳಗೆ ಹೋಗಿ ಹೊರಡಲು ಅಣಿಯಾಗಿ ಬಂದಳು. ಅವಳನ್ನು ಕರೆದುಕೊಂಡು ಹೋಗಲು ಕಾದಿರನ

ಮನಸು ಹಿಂಜರಿಯುತ್ತಿತ್ತು. ಮನೋಹರ ಇನ್ನಾದರೂ ಎದ್ದು ಹೊರಡ ಬಹುದೆಂದು ಅವನು ಎಣಿಸಿದ್ದ. ಆದರೆ ಅವನು ಸ್ಥಳ ಬಿಟ್ಟು ಮಿಸುಕಲಿಲ್ಲ. ಕಾದಿರ ಮೆಲ್ಲಮೆಲ್ಲನೆ ದಾರಿ ಹಿಡಿದ. ವಿಲಾಸಿ ಮನೋಹರನ ಕಡೆ ಮತ್ತೆ ಮತ್ತೆ ಹೊರಳಿ ನೋಡುತ್ತ ಅವನ ಹಿಂದೆ ನಡೆದಳು. ಅವರು ಊರ ಹೊರಗೆ ಹೋದಮೇಲೆ ಮನೋಹರ ಏನೋ ಯೋಚಿಸಿಕೊಂಡು ಎದ್ದ. ತೀವ್ರಗತಿಯಿಂದ ಸಾಗಿ ಅವರನ್ನು ಸಂಧಿಸಿ ವಿಲಾಸಿಗೆ ಹೇಳಿದ: " ಹೋಗು ಮನ್ಯಾಗ ಕುಂತುಕೋ; ನಾ ಹೋಕ್ಕೀನು. "

೪

ಇದೀಗ ಆ ಜಿಲ್ಲೆಯ ಡೆಪುಟಿ ಕಲೆಕ್ಟರಾಗಿ ಬಂದಿದ್ದ ಬಾಬು ಜ್ವಾಲಾಸಿಂಹರು ಜ್ಞಾನಶಂಕರರ ಸಹಪಾಠಿ. ಎರಡು ಪ್ರಹರದವರೆಗೂ ಇಬ್ಬರಲ್ಲಿಯೂ ಮಾತುಕತೆ ನಡೆಯಿತು. ಎಲ್ಲರೂ ಲಾಟರಿ ಹೊಡೆದು ಕೊಂಡರು; ತನ್ನ ಭಾಗ್ಯವೇ ಹೀಗೆ, ಎಂದು ಜ್ಞಾನಶಂಕರರ ಹೃದಯ ಕುದಿಯುತ್ತಿತ್ತು. ಒಮ್ಮೆ ತನ್ನಮೇಲೆ, ಒಮ್ಮೆ ತಂದೆಯಮೇಲೆ, ಕಕ್ಕನ ಮೇಲೆ ಸಿಟ್ಟಾಗುತ್ತಿದ್ದರು. ಹಳೆಯ ಗೆಳೆತನದ ಸ್ಥಳವನ್ನು ಹೊಟ್ಟೆಕಿಚ್ಚು ಆಕ್ರಮಿಸುತ್ತಲಿತ್ತು. — ಜ್ವಾಲಾಸಿಂಹರ ಪದಚ್ಯುತಿಯ ಸಮಾಚಾರ ಯಾರಾದರೂ ಹೇಳಿದರೆ ಅವರಿಗೆ ಬಹುಶಃ ಹಾಯೆನಿಸುತ್ತಿತ್ತು. ಈ ಕ್ಷುದ್ರ ಭಾವವನ್ನು ಬಹುಪ್ರಯತ್ನದಿಂದ ತಡೆದಿಟ್ಟು ಮಾತನಾಡುತ್ತಿದ್ದರೂ ಅವರ ನುಡಿಯಲ್ಲಿ ಆದರ ವಾಸನೆ ಹೊರಡದೆ ಇರುತ್ತಿರಲಿಲ್ಲ.

ಜ್ಞಾನ:–ಅಧಿಕಾರ ಬಂದಿದೆ ಎಂದು ಹೆಮ್ಮೆಪಡಬೇಡಿರಿ, ವಾಸ್ತವದಲ್ಲಿ ನೀವು ಗುಲಾಮರಾಗಿದ್ದೀರಿ. ಇಲ್ಲಿ ಆತ್ಮದ ಸ್ವಾತಂತ್ರ್ಯಕ್ಕೆ ಎರವಾಗ ಬೇಕಾಗುತ್ತದೆ, ನ್ಯಾಯಸತ್ಯಗಳ ಕೊಲೆ ಮಾಡಬೇಕಾಗುತ್ತದೆ —ಇದೇ ನಿಮ್ಮ ಉನ್ನತಿಯ, ಸಂಮಾನದ ಸಾಧನ. ಇಂತಹ ಅಧಿಕಾರವನ್ನು ನಾನು ಧಿಕ್ಕರಿಸುತ್ತೇನೆ. ಸ್ವತಃ ದೇವರೇ ಮುಗಿಲಿಂದ ಇಳಿದು ಬಂದು ಅನ್ಯಾಯ ಮಾಡೆಂದು ಹೇಳಿದರೂ ತಿರಸ್ಕರಿಸುತ್ತೇನೆ ನಾನು.

ಈ ಮಾತು ಹೊಟ್ಟೆಯೊಳಗಿನ ಉರಿಯ ಕಿಡಿಗಳೆಂದು ಜ್ವಾಲಾಸಿಂಹರು ಅರಿತುಕೊಂಡರು. " ಇನ್ನೂ ದೂರದ ಮಾತನ್ನು ಆಡುತ್ತಿರುವಿರಿ ನೀವು.

ನಾಳೆ ನಿಯುಕ್ತರಾದಮೇಲೆ ಈ ಮಾತು ಮರೆತುಹೋಗುವುದು." ಎಂದರು.

ಜ್ಞಾನ— ಹಾಂ, ಬಹಳ ಸಂಭವವಿದೆ. ಏಕೆಂದರೆ ನಾನೂ ಮನುಷ್ಯನೇ. ಆದರೆ ದೈವಯೋಗದಿಂದ ನಾನು ಈ ಪರೀಕ್ಷೆಯಲ್ಲಿ ಬೀಳುವ ಸಂಭವವೇ ಇಲ್ಲ. ಒಂದು ವೇಳೆ ಹಾಗಾದರೂ ಆತ್ಮರಕ್ಷಣೆಯನ್ನೇ ಸರ್ವಶ್ರೇಷ್ಠವೆಂದು ತಿಳಿಯುತ್ತೇನೆ.

ಜಾಲಾ— ಸರಿ. ಆದರೆ ಇತರರು ಆತ್ಮವನ್ನು ನಿಮಗಿಂತ ಕಡಿಮೆ ಆದರಿಸುವರೆಂದು ಅನುಮಾನಿಸಲು ನಿಮಗೇನು ಅಧಿಕಾರವಿದೆ? ಪ್ರಪಂಚ ದಲ್ಲಿದ್ದುಕೊಂಡು ಮನುಷ್ಯ ಆತ್ಮದ ರಕ್ಷಣೆಯನ್ನು ಎಷ್ಟು ಮಾಡಬಲ್ಲನೋ ಅಧಿಕಾರ ಅವನನ್ನು ಅದರಿಂದ ವಂಚಿತಗೊಳಿಸಲಾರದೆಂದು ನನ್ನ ವಿಚಾರ. ವಕೀಲಿಕೆ ಇಲ್ಲವೆ ಡಾಕ್ಟರಿಕೆ ಆತ್ಮರಕ್ಷೆಗೆ ಒಳ್ಳೇ ಅನುಕೂಲವಾದುವೆಂದು ನೀವು ತಿಳಿಯುತ್ತಿದ್ದರೆ, ಅದು ತಪ್ಪು. ನಮ್ಮ ಕಕ್ಕ ವಕೀಲರಾಗಿದ್ದಾರೆ, ಅಣ್ಣ ಡಾಕ್ಟರಿದ್ದಾರೆ; ಆದರೆ ಅವರು ಕೇವಲ ಹಣಗಳಿಸುವ ಯಂತ್ರಗಳು. ಸತ್–ಅಸತ್ತುಗಳ ತಂಟೆಗೆ ಅವರೆಂದೂ ಹೋಗುವುದಿಲ್ಲ.

ಅಷ್ಟರಲ್ಲಿ ಗೌಸಖಾನ, ಗಿರಿಧರ ಮತ್ತು ಸುಕ್ಖು ಬಂದರು. ಗೌಸಖಾನ ಶರಣುಮಾಡಿ ನೆಲದಮೇಲೆ ಕುಳಿತ, ಉಳಿದಿಬ್ಬರು ನಿಂತೇ ಇದ್ದರು. ಪ್ರಭಾಶಂಕರರು ಪಡಸಾಲೆಯಲ್ಲಿ ಕುಳಿತಿದ್ದರು. "ಒಕ್ಕಲುಗಳಿಗೆ ತುಪ್ಪದ ರೂಪಾಯಿ ಹಂಚಿದಿರಾ?" ಎಂದು ಕೇಳಿದರು.

"ಹಾಂ ಸರಕಾರ, ಅಂತೂ ಇಂತೂ ಎಲ್ಲಾ ಕೊಟ್ಟಾಂಗಾತು. ಆದರ ಇಲಾಕೇದಾಗ ಕೆಲವರ ತುಂಟತನ ಹೆಚ್ಚಾಗೆಯ್ತಿ ಅವರನ್ನ ಹಾದೀಗೆ ತರದಿದ್ದರ ನಾಳೆ ನನ್ನ ವಜನಾನ ಉಳಿಯಾಣಿಲ್ಲ. ಜೀವಾದರೂ ಉಳಿದೀತೋ ಇಲ್ಲೋ! ಅವರೊಳಗ ಒಬ್ಬಾವ ಮನೋಹರ ಅಂತ ಅದಾನು. ಇಪ್ಪತ್ತು ಬಿಘೆ ಭೂಮಿ ಮಾಡತಾನು, ಒಟ್ಟು ಆಯ್ವತ್ತು ರೂಪಾಯಿ ತೆರಿಗೀ ಕೊಡ ತಾನು. ಅದನ್ನೇ ಮತ್ತೊಬ್ಬಗೆ ಕೊಟ್ಟಿದ್ದರೆ ನೂರಕ್ಕೇನು ಸಾವಿದ್ದಿಲ್ಲ." ಎಂದು ಗೌಸಖಾನ ಹೇಳಿದ. ಅಷ್ಟರೊಳಗೇ ಕಾದಿರಖಾನ ಮತ್ತು ಮನೋಹರ ಬಂದರು. "ಇಕಾ ನೋಡಿರಿ, ನಾ ಹೇಳ್ತಿದ್ದೆನಲ್ಲಾ, ಅವನೇ ಬಂದ." ಎಂದ.

ಜ್ಞಾನಶಂಕರರು ಮನೋಹರನ ಕಡೆ ಸಿಟ್ಟಿನಿಂದ ನೋಡಿದರು : “ ಯಾಕೋ ! ಉಪ್ಪುಂಡು ತಿರುಗಿ ಬೀಳುತೀಯಾ ? ನೂರು ರೂಪಾಯಿ ಗಾಗೋ ಜಮೀನು ಐವತ್ತು ರೂಪಾಯಿಗೆ ಮಾಡುತ್ತೀ, ಆದರೂ ಸ್ವಲ್ಪ ಕೈಬಿಡುವ ಪ್ರಸಂಗ ಬಂದರೆ ತಲೆಯೇ ತಿರುಗಿತೆ ? ನೀಚ, ನಮ್ಮ ಜನರ ಮೇಲೆ ಕೈ ಎತ್ತುವಷ್ಟು ಧೈರ್ಯ ಬಂದಿತೆ ? ” ಎಂದು ಗರ್ಜಿಸಿದರು.

ಮನೋಹರ ಕೈಲಾಗದ ಸಿಟ್ಟಿನಿಂದ ನಡುಗುತ್ತಿದ್ದ.—ತಾನು ತುಪ್ಪದ ರೂಪಾಯಿ ತೆಗೆದುಕೊಳ್ಳದಿದ್ದದ್ದು ಪಾಪವಲ್ಲ. ತೆಗೆದುಕೊಳ್ಳಬೇಕಿತ್ತು ನಿಜ—ಕಡ್ಡಾಯಕ್ಕಾಗಿ ಅಲ್ಲ, ಹಿರೇ ಸರಕಾರದ ದಯೆ ಇತ್ತು ತನ್ನಮೇಲೆ. ಅಂತಹ ದಯಾಳು ಧನಿಯ ಆತ್ಮಕ್ಕೆ ತಾನು ಕೃತಘ್ನನಾದೆನಲ್ಲ ಎಂದು ಅವನಿಗೆ ಎನಿಸುತ್ತಿತ್ತು. ಆದರೆ ಇದಕ್ಕೆ ಶಿಕ್ಷೆ ಬಯ್ಯುವುದು, ಅಪಮಾನ ಮಾಡುವುದು ಅಲ್ಲ. ಈ ವಿಚಾರದಲ್ಲಿ ಉತ್ತರ ಕೊಡುವುದಕ್ಕೆ ಅವನ ಮನಸು ವ್ಯಗ್ರವಾಯಿತು. ಅವನಿಗೆ ಮಾತನಾಡಲು ಅವಕಾಶ ಕೊಡದೆ ಕಾದಿರನೇ ಉತ್ತರವಿತ್ತ : “ ಸರಕಾರದ ಮಂದೀಮ್ಯಾಗ ಕೈ ಮಾಡ್ಲಾಕ ನಮ್ಮ ಸಗತೀ ನೂತೇ ಹುಜೂರ್ ? ಹಾಂ, ಕಲತಾವರಲ್ಲ ಓದ್ದೆವರಲ್ಲ, ಹುಂಬಜನ, ಮಾತಾಡಾಕೂ ಗೊತ್ತಾಗಾಣಿಲ್ಲ. ಹುಂಬಮಾತು ಬಂದು ಬಿಡತಾವು ಬಾಯಾಗ. ಆದ ತಪ್ಪು ಹೊಟ್ಯಾಗ ಹಕ್ಕೊಳ್ರಿ. ”

ಲಾಲಾ ಪ್ರಭಾಶಂಕರರ ಮನಸು ಕರಗಿತು. ಅವರು ಹೇಳಿದರು : “ ನೀವು ನಮ್ಮ ಹಳೆಯ ಒಕ್ಕಲುಗಳು. ಕುಳಗಳ ಮೇಲೆ ಬಲಾತ್ಕಾರ ಮಾಡುವ ವಾಡಿಕೆ ನಮ್ಮಲ್ಲಿಲ್ಲ—ನಿಮಗೆ ಗೊತ್ತಿಲ್ಲವೆ ? ಹೀಗೇ ಏನಾದ ರೊಂದು ಪ್ರಸಂಗದಲ್ಲಿ ನಿಮ್ಮಿಂದ ಬಿಟ್ಟಿ ತೆಗೆದುಕೊಳ್ಳುತ್ತೇವೆ ನೀವೂ ಸಂತೋಷದಿಂದ ಕೊಡುತ್ತ ಬಂದಿದ್ದೀರಿ. ಈಗಿನ ಕಾಲ ನಾಜೂಕು, ಇಂತಹ ಹುಡುಗರಿಂದ ನೀಗುವುದಿಲ್ಲ ಹೋಗು, ಇನ್ನುಮೇಲೆ ಇಂಥ ಕೆಲಸ ಮಾಡಬೇಡ—ಉಂಡು ಬಂದಿರಲಿಕ್ಕಿಲ್ಲ; ಹೊತ್ತು ಏರಿತು; ಇಲ್ಲಿಯೇ ಉಂಡು ಆರಾಮ ತಕ್ಕೊಂಡು, ಹೊತ್ತಿಳಿಸಿಕೊಂಡು ಹೋಗು. ”

ಜ್ಞಾನಶಂಕರರು ತೀವ್ರದೃಷ್ಟಿಯಿಂದ ಅವರ ಕಡೆ ನೋಡಿ, “ ನೀವೇಕೆ ನಡುವೆ ಮಾತನಾಡುತ್ತೀರಿ ? ಹೀಗೆ ನನ್ನ ಕೆಲಸದಲ್ಲಿ ಕೈಹಾಕಲಿಕೆ

ಹತ್ತಿದರೆ ನನ್ನಿಂದ ಇಲಾಖೆಯ ಆಡಳಿತ ಆದಂತೆಯೇ ಸರಿ. ನಿಮಗಿನ್ನು ಮಾತನಾಡುವ ಅಧಿಕಾರವಿಲ್ಲ.” ಎಂದರು.

ಪ್ರಭಾಶಂಕರರ ಹೃದಯಕ್ಕೆ ಪೆಟ್ಟಾಯಿತು. “ಮಗೂ, ಇಂಥ ಮಾತನಾಡಿ ಏಕೆ ಮನಸ್ಸನ್ನು ನೋಯಿಸುತ್ತೀ? ನಿನ್ನ ಪೂಜ್ಯ ತಂದೆಯೂ ನನ್ನ ಮಾತನ್ನು ಎಂದೂ ಅಲ್ಲಗಳೆಯಲಿಲ್ಲ. ನೀನು ಮಾತ್ರ ನನ್ನ ನಾಲಗೆ ಕಟ್ಟಬೇಕೆನ್ನುತ್ತೀ. ಆದರೆ ಅನ್ಯಾಯವನ್ನು ಕಂಡೂ ನಾನು ಬಾಯಿಮುಚ್ಚಿಕೊಂಡಿರುವದು ಶಕ್ಯವಿಲ್ಲ. ನಾನು ಇರುವವರೆಗೂ ಈ ಅಧಿಕಾರವನ್ನು ನೀನು ಕಿತ್ತುಕೊಳ್ಳಲಾರೆ” ಎಂದರು.

ಜ್ವಾಲಾಸಿಂಹರು ಸಾಂತ್ವನ ಹೇಳಿದರು: “ಇಲ್ಲ ಮಹಾಶಯರೆ, ನೀವು ಮನೆಯ ಯಜಮಾನರು; ಇವನು ನಿಮ್ಮ ತೊಡೆಯ ಮೇಲೆ ಬೆಳೆದ ಹುಡುಗ. ಇವನ ತಿಳಿಯದ ಮಾತನ್ನು ಮನಸಿನಲ್ಲಿ ಹಿಡಿಯಬೇಡಿರಿ. ನಿಮಗೆ ಅಧಿಕಾರ ಇಲ್ಲವೆಂದು ಹೇಳುವುದು ಇವನ ತಪ್ಪು.”

ಮಿತ್ರ ತನ್ನ ಮೇಲೆ ಸಾಧಿಸಿಕೊಂಡನೆಂದು ಜ್ಞಾನಶಂಕರರು ತಿಳಿದುಕೊಂಡರು. ತಾವು ವಿನಯ ಬಿಟ್ಟು ಆಡಿದ್ದಕ್ಕಾಗಿ ಅವರಿಗೆ ಖೇದವೆನಿಸಿತು. ಜ್ವಾಲಾಸಿಂಹನೆದುರಿನಲ್ಲಿ ತಮ್ಮ ಅಸಭ್ಯತನ ಪ್ರಕಟವಾಯಿತಲ್ಲ ಎಂಬುದೇ ಖೇದ ಅವರಿಗೆ. ಅವರೆಂದರು: “ಅಧಿಕಾರ ಎಂದರೆ ನೀವು ತಿಳಿದಿರುವ ಅರ್ಥದಲ್ಲಿ ನಾನೆನ್ನಲಿಲ್ಲ. ಇಲಾಖೆಯ ವ್ಯವಸ್ಥೆಯನ್ನು ನನಗೆ ಒಪ್ಪಿಸಿದ್ದೀರಿ, ಅದರಂತೆ ಮಾಡಗೊಡಿರಿ ಎಂಬುದೇ ನನ್ನ ಅಭಿಪ್ರಾಯ. ಈ ಶಬ್ದ ನನ್ನ ಬಾಯಿಂದ ಹಾಗೇ ಹೊರಟುಹೋಯಿತು. ಅದಕ್ಕಾಗಿ ನನಗೆ ಖೇದವಾಗುತ್ತದೆ. ಜ್ವಾಲಾಸಿಂಹ, ಕಕ್ಕನಲ್ಲಿ ನನಗೆ ತಂದೆಗಿಂತಲೂ ಹೆಚ್ಚಿನ ಆದರವಿದೆ. ಬಡವರಮೇಲೆ ಬಲಾತ್ಕಾರ ಮಾಡುವುದಕ್ಕೆ ನಾನು ಸ್ವತಃ ವಿರೋಧಿಯಾಗಿದ್ದೇನೆ. ಆದರೆ ದೀನಪಾಲನೆಯ ಭರದಲ್ಲಿ ಜಮೀನದಾರಿಯನ್ನೇ ಕಳೆದುಕೊಳ್ಳಬೇಕೆಂದು ಇದರರ್ಥವಲ್ಲ”

ತಾವಾಡಿದ ಅಪ್ರಿಯಕ್ಕಾಗಿ ಪ್ರಭಾಶಂಕರರು ನೊಂದುಕೊಂಡರು. ತಮ್ಮಣ್ಣನನ್ನು ಅವರು ದೇವಸಮಾನರೆಂದು ತಿಳದಿದ್ದರು. ಅವರ ಮಗನ ಬಗ್ಗೆ ವಿರೋಧ ತಳೆದುದಕ್ಕಾಗಿ ಮನಸು ಲಜ್ಜಿತವಾಯಿತು. “ತಮ್ಮಾ,

ಇದೆಲ್ಲಾ ನಿನಗೆ ತಿಳಿಯುವಷ್ಟು ಮುದುಕನಾದ ನನಗೆ ಹೇಗೆ ತಿಳಿಯುತ್ತದೆ? ನೀನು ಮನೆಯ ಯಜಮಾನ. ನಾನು ನಡುವೆ ಬಂದದ್ದು ತಪ್ಪು. ಒಂದು ತುಣುಕು ರೊಟ್ಟಿಯ ಹೊರತು ಯಾತರ ಆವಶ್ಯಕತೆಯೂ ನನಗಿಲ್ಲ. ನಿನಗೆ ಹೇಗೆ ಬೇಕೋ ಹಾಗೆ ಮನೆತನ ನಡೆಸಿಕೋ." ಎಂದರು.

ಕೆಲಹೊತ್ತು ಎಲ್ಲರೂ ಮೌನ ತಳೆದರು. ಕೊನೆಗೆ,

"ಹುಜೂರ, ಮನೋಹರನ ವಿಷಯ ಏನಪ್ಪಣೆಯಾಯ್ತು?" ಎಂದು ಗೌಸಖಾನ ಕೇಳಿದ.

"ಹೆಚ್ಚಿನ ಕಂದಾಯ ಎತ್ತಬೇಕು." ಎಂದರು ಜ್ಞಾನಶಂಕರರು.

"ಧನಿಯರೇ, ಬಾಳ ಬಡವದಾನು, ಸತ್ತೇ ಹೋಕ್ಕಾನು." ಎಂದ ಕಾದರ.

"ಮತ್ತೊಬ್ಬರ ಕಡೆಯಿಂದ ಸಾಗುವಳಿಗೆ ಹಿಡಿದ ಜಮೀನಿದ್ದರೆ ಕಸಿದು ಕೊಳ್ಳಬೇಕು."

'ಧನಿಯರೇ, ಬಡಪಾಯಿ ವೆರ್ತ ಸಾಯುತ್ತಾನೆ." ಕಾದಿರನೆಂದ.

"ಏನೂ ಅಡ್ಡಿಯಿಲ್ಲ, ಕುಳಗಳಿಗೆ ಕೊರತೆಯಿಲ್ಲ."

"ಸರಕಾರ!...."

"ಸಾಕು ಸುಮ್ಮನಿರು! ನಿನ್ನ ವಾದ ಬೇಕಿಲ್ಲ!"

"ಸರಕಾರ, ಒಂದೀಟು........"

"ಸಾಕು, ಮತ್ತೆ ಬಾಯಿ ತೆರೆಯಬೇಡ."

ಮನೋಹರ ಇದುವರೆಗೆ ಸುಮ್ಮನೆ ನಿಂತುಕೊಂಡಿದ್ದ. ಪ್ರಭಾಶಂಕರರ ಒಳ್ಳೆಯತನ ಅವನ ಮನವನ್ನು ಗೆದ್ದಿತ್ತು. ಜ್ಞಾನಶಂಕರರ ಕೊನೆಯ ಮಾತು ಅವನ ಆ ಭಾವಗಳನ್ನೆಲ್ಲ ಮೆಟ್ಟಿಬಿಟ್ಟಿತು. ಹೆಚ್ಚಾಗಿ, ಕಾದಿರ ಮಿಯಾನಿಗಾದ ಅಪಮಾನ ಅವನಿಗೆ ಅಸಹ್ಯವಾಯಿತು.

"ದಾದಾ, ದಯ ಧರ್ಮ ಎಲ್ಲಾ ಈ ದರಬಾರದಿಂದ ಹೊಂಟು ಹೋಗೆಯ್ತೆ ನಡೆ, ದೇವರ ಮನಸಿಗೆ ಬಂದದ್ದು ಆಕ್ಕಯ್ತೆ. ಹೊಟ್ಟೇ ಕೊಟ್ಟವ ಹೊಟ್ಟಿಗೂ ಕೊಡ್ತಾನು."

ಎನ್ನುತ್ತ ಮನೋಹರ ಕಾದಿರನ ಕೈಹಿಡಿದು ಚಾವಡಿಕೋಣೆಯಿಂದ ಅವನನ್ನು ಜಗ್ಗಿಕೊಂಡು ನಡೆದ. ಶಾಸನದ ಭಯ ಇಲ್ಲದಿದ್ದರೆ ಅವನನ್ನು

ಕೊಂದು ಹಾಕಬಹುದಾದಂತಹ ಸಿಟ್ಟು ಜ್ಞಾನಶಂಕರರಿಗೆ ಬಂದಿತ್ತು. ಅದನ್ನು ಅವನಮೇಲೆ ಕಾರಿಕೊಂಡು ಶಾಂತಗೊಳಿಸುವುದಕ್ಕೆ ಅವಕಾಶ ಸಿಕ್ಕದೆ ಅವರ ಮನಸು ಒಳಗೊಳಗೇ ಚಡಪಡಿಸಿತು.

ಜ್ವಾಲಾಸಿಂಹರು ಸ್ತಬ್ಧರಾಗಿ ಕುಳಿತಿದ್ದರು. ಜ್ಞಾನಶಂಕರರಲ್ಲಿ ಇಷ್ಟ ದಯಾಹೀನ ಸ್ವಾರ್ಥಪರತೆ ಎಲ್ಲಿಂದ ಬಂದಿತೆಂದು ಅವರಿಗೆ ಆಶ್ಚರ್ಯ ವಾಗಿತ್ತು. ಕೆಲವೇ ಕ್ಷಣಗಳ ಹಿಂದೆ ಇವರೇ, ನ್ಯಾಯದ ಮತ್ತು ಲೋಕ ಸೇವೆಯ ಮಹತ್ತ್ವವನ್ನು ಎಷ್ಟು ಬಣ್ಣಿಸುತ್ತ ಇದ್ದರು! ಇಷ್ಟರಲ್ಲಿಯೇ ಎಷ್ಟೊಂದು ವ್ಯತ್ಯಾಸ? ಮನೋಹರ ಹೋದಮೇಲೆ ಅವರು, "ಹೆಚ್ಚಿನ ಕಂದಾಯದ ಬಗ್ಗೆ ದಾವೆ ಮಾಡಿದರೆ ಅವನು ಪ್ರತಿವಾದ ಹೂಡಲಿಕ್ಕಿಲ್ಲವೆ? ಮತ್ತೆ ಒಬ್ಬ ಕುಳನ ಮೇಲೆಯೇ ಫಿರ್ಯಾದು ಮಾಡಲು ಬರುವುದಿಲ್ಲ." ಎಂದರು.

"ಹಾಂ, ಸರಿಯಾಗಿಯೇ ಹೇಳಿದಿರಿ. ಖಾನಸಾಹೇಬ, ಯಾರ ಕಂದಾಯ ಹೆಚ್ಚಿಸಬಹುದೋ ಅವರದೊಂದು ಪಟ್ಟಿಮಾಡಿರಿ. ಒಮ್ಮೆಲೆ ಇಡೀ ಊರ ಮೇಲೆ ದಾವೆ ಮಾಡಲು ಏನಡ್ಡಿ?" ಎಂದರು ಜ್ಞಾನಶಂಕರರು.

ಮನೋಹರನ ರಕ್ಷಣೆಗಾಗಿ ಅವರು ಈ ಶಂಕೆ ಎತ್ತಿದ್ದರು. ಅದರ ಪರಿಣಾಮ ವಿಪರೀತವಾದುದನ್ನು ಕಂಡು, ತಿರುಗಿ ಮಾತನಾಡಲಾರದೆ ಜ್ವಾಲಾಸಿಂಹರು ಅಲ್ಲಿಂದೆದ್ದರು.

೫

ತಿಂಗಳು ಕಳೆಯಿತು. ಗೌಸಖಾನ ಕುಳಗಳ ಯಾದಿ ಮಾಡಲಿಲ್ಲ, ಜ್ಞಾನಶಂಕರರೂ ತಿರುಗಿ ಕೇಳಲಿಲ್ಲ ಈಗವರು ಕಕ್ಕನಿಂದ ಹೇಗಾದರೂ ಬೇರೆಯಾಗಬೇಕೆಂಬ ಚಿಂತೆಯಲ್ಲಿದ್ದರು. ಅವರಿಗೆ ತಂದೆಯಮೇಲೆ ಸಿಟ್ಟು ಬರುತ್ತಿತ್ತು. ಈಗ ಮೂರು ವರುಷಗಳ ಹಿಂದೆಯೇ ಬೇರೆಯಾಗಿದ್ದರೆ ನಮಗೀ ಸ್ಥಿತಿ ಬರುತ್ತಿರಲಿಲ್ಲ. ಕಕ್ಕ ತಮಗೆ ಬಂದದ್ದಕ್ಕೆ ತಲೆ ಕೊಡುತ್ತಿದ್ದರು, ಉಣ್ಣುತ್ತಿದ್ದರು ಬೇಕಾದರೆ ಉಪವಾಸ ಇರುತ್ತಿದ್ದರು, ನಮಗೆ ಸಂಬಂಧವೇ ಇರುತ್ತಿರಲಿಲ್ಲ. ಒಂದುವೇಳೆ, ನಾವು ಸಹಾಯ ಮಾಡಿದ್ದರೆ

ಅವರು ಋಣವೆಂದು ತಿಳಿಯುತ್ತಿದ್ದರು. ಈಗ ಬಳಿದು ಸಾರಿಸಿ ಕೈ ಹೊಲಸು ಮಾಡಿಕೊಳ್ಳುವುದರ ಹೊರತು ಬಂದದ್ದೇನು? ಪ್ರಭಾಶಂಕರರು ಅನುಭವಸ್ಥರು. ಅಣ್ಣನ ಮಗನ ಭಾವವನ್ನು ಕಂಡು ಅವರ ಮನಸು ಕುಗ್ಗಿ ಹೋಗಿತ್ತು. ಅನುಚಿತ ಮಾತುಗಳನ್ನು ಕೇಳಿಯೂ ಕೇಳದಂತೆ ಇರುತ್ತಿದ್ದರು. ದಯಾಶಂಕರನು ಅವರಿಗೆ ನೆರವಾಗುವ ಬದಲು ಅವರಿಗೇ ಕೈಯೊಡ್ಡುತ್ತಿದ್ದ. ಆದುದರಿಂದ ಬಾಗಿಕೊಂಡಿರುವುದರಲ್ಲಿಯೇ ಅವರ ಹಿತವಿತ್ತು.

ಜ್ಞಾನಶಂಕರರ ದಂಭ ದ್ವೇಷಗಳು ಹೆಚ್ಚುತ್ತಿದ್ದವು. ಒಬ್ಬ ಆಳು ಕಕ್ಕನ ಕೆಲಸ ಮಾಡುತ್ತಿದ್ದರೆ, ಇನ್ನೊಬ್ಬನನ್ನು ತಮ್ಮ ಯಾವುದಾದರೂ ಕೆಲಸದಲ್ಲಿ ಬೇಕೆಂತಲೇ ತೊಡಗಿಸುವುದು; ಊಟಕ್ಕೆ ಹೋದರೆ, ಬಹಳ ಅಡಿಗೆಯನ್ನು ಎಂಜಲುಮಾಡಿ ಬಿಟ್ಟುಬಿಡುವುದು; ಎರಡು ನಾಯಿಗಳನ್ನು ಸಾಕಿದ್ದರು, ಅವನ್ನು ಬದಿಯಲ್ಲಿ ಕುಳ್ಳಿರಿಸಿಕೊಂಡು ಉಣಿಸುವುದು; ಪ್ರಭಾಶಂಕರರು ಏನಾದರೂ ಔಷಧ ತಂದರೆ, ತಾವೂ ಅಷ್ಟೇ ಬೆಲೆಯ ಔಷಧ ತರುವುದು—ತಂದು ಅಂಗಳಕ್ಕೆ ಚೆಲ್ಲಿದರೂ ಪರವಾ ಇಲ್ಲ! ಇಷ್ಟಕ್ಕೂ ಮನಸಿಗೆ ಶಾಂತಿಯಿಲ್ಲ. ಹೆಂಗುಸರಲ್ಲಿಯೂ ಜಗಳ ಏಳಲಿ ಎಂದು ಬಯಸುವರು. ವಿದ್ಯೆಯ ಉದಾರತನ ಅವರಿಗೆ ಅಸಹ್ಯವೆನಿಸುತ್ತಿತ್ತು.

ಈ ವಿರೋಧಾಗ್ನಿಗೆ ಪುಟ ಕೊಡುವ ಒಂದು ಘಟನೆ ಜರುಗಿತು. ದಯಾಶಂಕರ ತನ್ನ ರಾಜ್ಯದಲ್ಲಿ ಮೊದಲೇ ಸ್ವೇಚ್ಛಾಚಾರ ನಡೆಸಿದ್ದ. ಜ್ವಾಲಾಸಿಂಹರು ಮ್ಯಾಜಿಸ್ಟ್ರೇಟರಾಗಿ ಬಂದಬಳಿಕಂತೂ ಪೂರಾ ಬಾದಶಾಹನೇ ಆದ. ಒಮ್ಮೆ ಇಲಾಖೆಯಲ್ಲಿ ದೊಡ್ಡ ದರೋಡೆ ಘಟಿಸಿತು. ಅವನು ಅದರ ಶೋಧನೆಗಾಗಿ ಹೋದ. ಒಬ್ಬ ಜಮೀನುದಾರನ ಬಗ್ಗೆ ಸಂದೇಹ ಬಂದಿತು, ಕೂಡಲೆ ಅವನ ಮನೆಯ ಶೋಧನೆ ನಡೆಸಿದ. ಕೆಲವು ಕಳವಿನ ಸಾಮಾನು ಸಿಕ್ಕವು. ಕೂಡಲೆ ಅವನನ್ನು ಕೈಸೆರೆ ಹಿಡಿಯಲಾಯಿತು. ಜಮೀನುದಾರ ಏನೋ ಕಾಣಿಕೆಕೊಟ್ಟು ಪಾರಾದ. ಆದರೆ ಅಭಿಮಾನಿಯಾದ ಅವನಿಗೆ ಈ ಅಪಮಾನ ಸಹನವಾಗಲಿಲ್ಲ. ಮರುದಿನವೇ ಜ್ವಾಲಾಸಿಂಹರ ಕೋರ್ಟಿನಲ್ಲಿ ದಯಾಶಂಕರ ಫೌಜದಾರನ ಮೇಲೆ ಮೊಕದ್ದಮೆ ಹೂಡಿದ. ಇಲಾಖೆಯಲ್ಲಿ ಒಳಗೊಳಗೆ ಬೆಂಕಿ ಇತ್ತು, ಗಾಳಿ ತಾಗುತ್ತಲೆ ಭುಗಿಲೆಂದಿತು.

ನಾಲ್ಕೂ ಕಡೆಗಳಿಂದ ಸತ್ಯ-ಅಸತ್ಯ ಆಕ್ರೋಶ ಆರಂಭವಾಯಿತು. ಜ್ವಾಲಾ-ಸಿಂಹರು ವಿವಶರಾಗಿ ಪ್ರಕರಣವನ್ನು ವಿಚಾರಿಸಬೇಕಾಯಿತು. ಎಲ್ಲ ಗುಟ್ಟು ಹೊರಬಿದ್ದಿತು. ಅವರು ಪೋಲಿಸ್ ಅಧಿಕಾರಿಗಳಿಗೆ ವರದಿ ಮಾಡಿದರು. ದಯಾಶಂಕರನಿಗೆ ಸಸ್ಪೆಂಡಾಯಿತು. ಅವನು ಲಂಚ ತಿಂದ, ಕೃತಕ ಮೊಕದ್ದಮೆ ರಚಿಸಿದ ಆರೋಪಕ್ಕಾಗಿ ವಿಚಾರಣೆಗೆ ಗುರಿಯಾದ.

ಮಗನನ್ನು ಉಳಿಸಿಕೊಳ್ಳಲು ಪ್ರಭಾಶಂಕರರು ಮಾಡದ ಪ್ರಯತ್ನವಿಲ್ಲ. ಹಗಲಿರುಳೂ ಇದೇ ಚಿಂತೆ ಅವರಿಗೆ. ಪುತ್ರಪ್ರೇಮಕ್ಕಿಂತ ಹೆಚ್ಚಾಗಿ ಜನ-ನಿಂದೆಯ ಲಜ್ಜೆಯಿತ್ತು. ನಾಲ್ಕೂ ಕಡೆ ಎಡತಾಕಿ ದಣಿದರು. ಕೊನೆಗೆ ಒಂದು ದಿನ, "ಒಂದು ಸ್ವಲ್ಪ ಜ್ವಾಲಾಸಿಂಹರ ಕಡೆ ಹೋಗಿಬಂದರೆ—ಅವರು ನಿನ್ನ ಸ್ನೇಹಿತರು, ಸ್ವಲ್ಪ ಸಹಾನುಭೂತಿ ತೋರಿಯಾರು" ಎಂದು ಜ್ಞಾನಶಂಕರರಿಗೆ ಹೇಳಿದರು

"ಆದರೆ, ನಾನು ಹೇಳಿದರೆ ಅವರು ತಮ್ಮ ಸತ್ಯವನ್ನು ಬಿಟ್ಟಾರು ಎಂದು ಹೇಗೆ ಆಶಿಸುವಿರಿ ?" ಎಂದರು ಜ್ಞಾನಶಂಕರರು.

"ಮಿತ್ರರು ಹೇಳುವುದರಿಂದ ಒಳ್ಳೇ ಪರಿಣಾಮ ಆಗುತ್ತದೆ." ಪ್ರಭಾಶಂಕರರು ಸ್ವಲ್ಪ ಆಗ್ರಹಪೂರ್ವಕವಾಗಿ ನುಡಿದರು.

"ನಾನು ನನ್ನ ಕೀಳ್ತನ ತೋರಿಸಿಕೊಳ್ಳಲಾರೆ" ಎಂದು ಸಿಡುಕಿನಿಂದ ಜ್ಞಾನಶಂಕರರೆಂದರು

"ನಿನ್ನ ತಮ್ಮನ ಬಗ್ಗೆ ಶಿಫಾರಸು ಮಾಡುವುದಕ್ಕೆ ಅಪಮಾನವೆನಿಸುವುದೆ ?"

ಇದಕ್ಕೆ ಜ್ಞಾನಶಂಕರರು ಕಟುಭಾವದಿಂದಲೇ ಉತ್ತರವಿತ್ತರು: "ಶಿಫಾರಸು—ಅದು ಯಾವ ಕೆಲಸಕ್ಕಾಗಿಯೇ ಇರಲಿ—ಕೀಳಾದದ್ದೇ; ಅದೂ ಇಂತಹ ಪ್ರಕರಣದಲ್ಲಿ."

ಇಷ್ಟರಲ್ಲಿ ಪ್ರಭಾಶಂಕರರ ಹೆಂಡತಿ ಬಾಗಿಲಲ್ಲಿ ಬಂದುನಿಂತು ಹೇಳಿದಳು: "ಬಂದು ಸ್ವಲ್ಪ ಲಲ್ಲೂ (ದಯಾಶಂಕರ)ಗೆ ಸಮಾಧಾನ ಯಾಕೆ ಹೇಳೋದಿಲ್ಲ ?" ಅವನು ನಿನ್ನೆಯೂ ಉಂಡಿಲ್ಲ, ಇವತ್ತೂ ಇನ್ನೂ ಕೈಕಾಲು ಕೂಡ ತೊಳಕೊಂಡಿಲ್ಲ."

ಪ್ರಭಾಶಂಕರರು ಖಿನ್ನರಾಗಿ ಉತ್ತರವಿತ್ತರು: "ಎಷ್ಟಂತ ಹೇಳೋದು. ಹೇಳಿ ಹೇಳಿ ಸಾಕಾಯಿತು ನನಗೆ. ನನ್ನ ಈಗಿನ ಮನಃಸ್ಥಿತಿಯೆಂದರೆ ಹೇಳಲು ಬರುವಹಾಗಿಲ್ಲ. ಮಗೂ, ನನ್ನಮೇಲೆ ಕನಿಕರ ತೋರಿ ಈವೊತ್ತು ಡೆಪ್ಟಿಸಾಹೇಬರ ಕಡೆ ಹೋಗಿಬಾ. ನೀನು ಹೋಗುವುದರಿಂದ ಸ್ವಲ್ಪವಿಲ್ಲ ಸ್ವಲ್ಪ ಫಲ ದೊರೆಯುತ್ತದೆಂದು ನನ್ನ ಮನಸ್ಸು ಹೇಳುತ್ತಿದೆ "

ಜ್ಞಾನಶಂಕರರು ಜಾರಿಕೊಳ್ಳಲು ನೋಡುತ್ತಿರುವಾಗಲೇ ಕಕ್ಕಿ ಮಾತನಾಡಿದಳು. "ಸರಿ, ಈತ ಹೋದಂತಾಯಿತು. ಲಲ್ಲೂ ಅಂತಿದ್ದ: ಜ್ಞಾನೂ ಸುಮ್ಮನೆ ಹೋಗಿ ಏನಾದರೂ ಹೇಳಿದರೆ ಎಲ್ಲಾ ಕೆಲಸ ಆಗಿಬಿಡುತ್ತದೆ ಅಂತ. ಆದರೆ ಇವನಿಗೇನು ಅದರ ಪರವೆ? ಕೆಡಿಸುವುದಕ್ಕಾದರೆ ಬೇಕಾದರೆ ಓಡುತ್ತಿದ್ದ, ಉಳಿಸುವುದಕ್ಕೆ ಹೇಗೆ ಹೋದಾನು! ಮಾನ ಮುಕ್ಕಾದೀತು!"

ಮಾತು ಜ್ಞಾನಶಂಕರರ ಮರ್ಮಕ್ಕೆ ತಾಗಿತು. "ಕಕ್ಕಾ, ಕೇಳಿದಿರಾ ಇವರ ಮಾತು? ನಾನು ಇಷ್ಟು ನೀಚ ಇವರ ಪಾಲಿಗೆ." ಎಂದರು.

ಕಕ್ಕಿ ಮೋರೆ ಮುರಿದು ಉತ್ತರವಿತ್ತಳು: "ಇವರೇನು ಕೇಳುತ್ತಾರೆ, ಕಿವಿ ಉಂಟೇ? ಇಡೀ ಆಯುಷ್ಯ ಸೇವೆಯಲ್ಲೇ ಕಳೆಯಿತು, ಈಗಲೂ ಅದೇ ಅಭ್ಯಾಸವಾಗಿದೆ. ನಿಮ್ಮದೆಲ್ಲ ನನಗೆ ಗೊತ್ತು."

ಪ್ರಭಾಶಂಕರರು ನೊಂದುಕೊಂಡು, "ದೇವರಿಗಾಗಿ ಸುಮ್ಮನಿರು" ಎಂದರು.

ಅವಳು ಹುಬ್ಬೇರಿಸಿ, "ಏಕೆ, ಯಾರದೇನು ಹೆದರಿಕೆ? ಇತ್ತ ಜೀವದ ಸುತ್ತ ಉರುಲು ಬಂದಿದೆ, ಇವನು ತನ್ನ ಗರ್ವದಲ್ಲಿ ತಾನಿದ್ದಾನೆ. ಇಂಥವರ ಮೋರೆ ನೋಡುವುದೇ ಪಾಪ!" ಎಂದಳು.

ಪ್ರಭಾಶಂಕರರು ದೀನತೆಯಿಂದ ಮಗನ ಕಡೆ ನೋಡಿದರು. "ತಮ್ಮಾ ಇವಳಿಗೀಗ ತಲೆಯೆ ಸಮ ಇಲ್ಲ. ಇವಳ ಮಾತು ಹಚ್ಚಿಕೊಳ್ಳಬೇಡ." ಎಂದರು. ಈ ಮಾತು ಜ್ಞಾನಶಂಕರರ ಕಿವಿಯೊಳಗೆ ಹೊಗಲೇ ಇಲ್ಲ. ಕಕ್ಕಿಯ ಕಹಿ ಮಾತು ಅವರ ಹೃದಯವನ್ನು ಮಥಿಸುತ್ತಲಿತ್ತು. "ಅಂದರೆ, ನಾನು ನಿಮ್ಮೊಂದಿಗೆ ಇದ್ದು ಯಾವ ಸ್ವರ್ಗಸುಖ ಸುರಿಯುತ್ತಿದ್ದೇನೆ?" ಎಂದರು

“ನಿನ್ನ ಇಚ್ಛೆಯಾದರೂ ಏನು ಹೊರಗೆ ಹಾಕಿಬಿಡು. ನನ್ನವರು ತನ್ನವರು ಎಂಬುದು ಇಲ್ಲದಿದ್ದಮೇಲೆ, ಒಂದೇ ಮನೆಯಲ್ಲಿದ್ದ ಮಾತ್ರಕ್ಕೆ ಒಂದಾಗೋದು ಅಷ್ಟರಲ್ಲಿಯೇ ಇದೆ.” ಎಂದಳು ಕಕ್ಕಿ.

“ನಿಮ್ಮ ಇಚ್ಛೆ ಹೀಗಿದ್ದರೆ ಆಗಲಿ, ನನ್ನನ್ನು ಹೊರಗೆ ಹಾಕಿಬಿಡಿರಿ.” ಎಂದರು ಜ್ಞಾನಶಂಕರರು.

“ನಿಮ್ಮಿಚ್ಛೆ! ತಿಂಗಳಿಂದ ನಿನ್ನ ನೋಡುತ್ತಿದ್ದೇನೆ. ದೇವರು ಕಣ್ಣು ಕೊಟ್ಟಿದ್ದಾನೆ, ಬಿಸಿಲಿನಲ್ಲಿ ಕೂದಲು ಬೆಳ್ಳಗೆ ಮಾಡಿಲ್ಲ. ನಾವು ನಿನ್ನ ಕಣ್ಣಲ್ಲಿ ಮುಳ್ಳಿನಂತೆ ಚುಚ್ಚುತ್ತೇವೆ. ಈ ಜನ ನನ್ನ ಸರ್ವಸ್ವವನ್ನೂ ತಿನ್ನುತ್ತಾರೆ ಎಂದು ನಿನಗೆನಿಸುತ್ತದೆ ನಿನ್ನ ಮನಸ್ಸಿನಲ್ಲಿ ಒಂದು ವೇಳೆ ಇಷ್ಟು ಕೀಳುಭಾವನೆ ಬಂದಿದ್ದರೆ— ”

ಈ ಮಾತುಗಳನ್ನು ಕೇಳುವುದು ಪ್ರಭಾಶಂಕರರಿಂದ ಆಗಲಿಲ್ಲ. ಎದ್ದು ಹೊರಟುಹೋದರು. ಕದನಕಣದಲ್ಲಿ ಒಬ್ಬಳೇ ನಿಲ್ಲುವುದಕ್ಕಾಗದೆ ಅವಳೂ ಮನೆಯೊಳಕ್ಕೆ ತೆರಳಿದಳು. ಜ್ಞಾನಶಂಕರರು ಮಾತ್ರ ಅಲ್ಲಿಯೇ ಕುಳಿತರು. ಅವರ ಮನಸ್ಸಿನಲ್ಲಿ ಒಂದು ಬಗೆಯ ದಾಹವಾಗುತ್ತಲಿತ್ತು. ಇಷ್ಟು ನಿಷ್ಠುರತೆ! ಇಷ್ಟು ಕೃತಘ್ನತೆ! ನಾನು ಹೀನ, ನಾನು ವೈರಿ, ನನ್ನ ಮೋರೆ ನೋಡುವುದು ಪಾಪ! ಎಂಥ ಸೊಕ್ಕು! ಇದನ್ನು ಇಳಿಸದಿದ್ದರೆ ಹೇಳಿರಿ. ಪ್ರತಿಯೊಂದು ವಸ್ತು ಅರ್ಧರ್ಧ ಮಾಡಿ ತಕ್ಕೊಳ್ಳುತ್ತೇನೆ. ಮುದಿಕಿಯ ಹತ್ತಿರ ಖಂಡಿತ ದುಡ್ಡಿರಬೇಕು. ಅಪ್ಪ ಎಲ್ಲವನ್ನೂ ಇವರಿಗೇ ಒಪ್ಪಿಸಿಬಿಟ್ಟಿದ್ದ. ಹತ್ತಿಪ್ಪತ್ತು ಸಾವಿರ ಕಳ್ಳಗಂಟು ಮಾಡಿದ್ದಾರೆ. ಅದರದೇ ಈ ಸೊಕ್ಕು.

ಈ ಕುಕಲ್ಪನೆಗಳನ್ನು ಹೊತ್ತುಕೊಂಡು ಹೊರಗೆ ಬಂದಾಗ, ಕಕ್ಕ ಜ್ವಾಲಾಸಿಂಹರ ಕಚೇರಿಯಲ್ಲಿ ಸಿರಸ್ತೆದಾರನಾಗಿದ್ದ ಮುನ್ಷಿ ಈಜಾದ ಹುಸೇನನೊಂದಿಗೆ ಮಾತನಾಡುತ್ತಿದ್ದರು. ಆತ ಒಳ್ಳೇ ಮಾತುಗುಳಿ, ಚತುರ. “ನೀವೇನೂ ಗಾಬರಿಯಾಗಬೇಡಿ. ದೇವರ ಇಚ್ಛೆ ಇದ್ದರೆ ದಯಾಶಂಕರ ಬಾಬು ಕಲಂಕವಿಲ್ಲದೆ ಬಿಡುಗಡೆ ಹೊಂದುತ್ತಾರೆ. ಕೆಲಸದವಳ ಮೂಲಕ ಬೀಬಿಯನ್ನು ಚೆನ್ನಾಗಿ ಗಾಳಿತುಂಬಿಸಿ ಬಿಟ್ಟಿದ್ದೇನೆ; ಇನ್ಸ್‌ಪೆಕ್ಟರನ್ನು ಬಿಡುಗಡೆ ಮಾಡಿದ ಹೊರತು ಅವರು ಡಿಪ್ಟಿಸಾಹೇಬರ ಅಂಗಿಯ ಚುಂಗನ್ನೆ

ಬಿಡುವುದಿಲ್ಲ. ನೂರಿನ್ನೂರು ರೂಪಾಯಿ ಕೈಬಿಟ್ಟಾವು ಅಷ್ಟೆ, ಏನು ಮಹಾ; ಮಾನ ಉಳಿಯುತ್ತದೆ. ಎಂದು ಆತ ಹೇಳುತ್ತಿದ್ದ. ಅಕಸ್ಮಾತ್ ಜ್ಞಾನ ಶಂಕರರು ಬಂದುದರಿಂದ ಸ್ವಲ್ಪ ಕುಂಠಿತನಾದ.

" ರೂಪಾಯಿ ಎಷ್ಟು ಬೇಕೋ ತೆಗೆದುಕೊಳ್ಳಿರಿ. ನಿಮ್ಮ ಪ್ರಯತ್ನ ದಿಂದ ಕೆಲಸವಾದರೆ ಸಾಯುವವರೆಗೂ ನಿಮ್ಮ ಉಪಕಾರ ನೆನೆಯುವೆ " ಎಂದರು ಪ್ರಭಾಶಂಕರರು.

ಈಜಾದ ಹುಸೇನ ಜ್ಞಾನಶಂಕರರ ಕಡೆ ನೋಡುತ್ತ, " ಬಾಬು ಜ್ವಾಲಾಸಿಂಹರು ಗೆಳೆತನದ ಧರ್ಮ ಅಗತ್ಯವಾಗಿ ಕಾಯುತ್ತಾರೆ. ನಾಲಗೆ ಎಷ್ಟು ನಿಷ್ಠುರವಾಗಿದ್ದರೂ ಮನಸ್ಸಿನಲ್ಲಿ ನಿಮ್ಮ ಬಗ್ಗೆ ತುಂಬಾ ಪ್ರೀತಿಯಿದೆ. ಮೇಲೆ ನಾನೂ ಚೆನ್ನಾಗಿಯೆ ಬಣ್ಣ ಕೊಡುತ್ತಿರುತ್ತೇನೆ. ಮೊನ್ನೆ ನಿಮ್ಮ ಮಾತು ಬಂದಾಗ ನಾನು ಹೇಳಿದೆ: ಅವರು ಎರಡು ಮೂರು ದಿನಗಳಿಂದ ಅನ್ನನೀರು ಬಿಟ್ಟಿದ್ದಾರೆ ಎಂದು. ಕೇಳಿ ಅವರು ಸ್ವಲ್ಪ ಹೊತ್ತು ಚಿಂತಿಸಿ ಒಳಗೆದ್ದು ಹೋದರು. " ಎಂದ.

ಪ್ರಭಾಶಂಕರರು ಮುನ್ಷಿಯನ್ನು ಶ್ರದ್ಧಾಪೂರ್ಣ ದೃಷ್ಟಿಯಿಂದ ನೋಡಿ ದರು. ಜ್ಞಾನಶಂಕರರು ತುಚ್ಛಭಾವದಿಂದ ನೋಡಿ ಹೊರಟುಹೋದರು. ವಿದ್ಯಾವತಿ ಅವರಿಗಾಗಿ ಕಾದಿದ್ದಳು. " ನೀವು ಜ್ವಾಲಾಸಿಂಹರ ಕಡೆಗೆ ಹೋಗಬೇಕಾಗಿತ್ತು. ಕಕ್ಕನ ಮಾತು ನಡೆಸಿದಂತಾಗುತ್ತಿತ್ತು. ನಮ್ಮ ನಮ್ಮವರ ಪರೀಕ್ಷೆ ಆಗುವುದು ಇಂಥ ಪ್ರಸಂಗದಲ್ಲಿಯೇ " ಎಂದು ಆಕೆಯೆಂದಳು.

ಜ್ಞಾನಶಂಕರರು ಖಿನ್ನರಾಗಿ, " ನಿನ್ನ ಮಾತು ಕೇಳಿ, ನನ್ನದು ನಿನ್ನದು ಇಬ್ಬರದೂ ತಲೆ ಒಡೆದುಬಿಡಲೇ ಎನಿಸುತ್ತದೆ. ಈ ಈಜಾದ ಹುಸೇನ ನನ್ನ ಪರವಾಗಿ ಏನೇನೆಲ್ಲ ಹೇಳಿಬಿಟ್ಟಿದ್ದಾನೊ ಎಂದು ನಾಚಿಕೆಯಾಗುತ್ತದೆ. ಆದರೆ ನೀನು ನನಗೆ ಶಿಫಾರಸು ಮಾಡಲು ಬುದ್ಧಿ ಹೇಳುತ್ತೀ. ಈ ವಿಷಯ ದಲ್ಲಿ ನಾನು ಸರ್ವಥಾ ಸ್ವತಂತ್ರನಿದ್ದೇನೆ ಎಂದು ಜ್ವಾಲಾಸಿಂಹನಿಗೆ ತಿಳಿಸ-ಬೇಕೆನ್ನುತ್ತೇನೆ. ಆಚು ಇದೆಯೆಂದು ಅವನ ದೃಷ್ಟಿಯಲ್ಲಿ ಕೀಳನೆನಿಸಿ-ಕೊಳ್ಳುವುದು ನನಗೆ ಬೇಡ " ಎಂದರು.

“ ಅವರ ಕಡೆ ಇದನ್ನು ಹೇಳುವುದಕ್ಕಾಗಿ ಹೋಗುತ್ತೀರಾ ? ” ವಿಸ್ಮಿತಳಾಗಿ ವಿದ್ಯೆ ಕೇಳಿದಳು.

“ ಅವಶ್ಯವಾಗಿ ಒಬ್ಬರ ಮಾನಕ್ಕಾಗಿ ನನ್ನ ಪ್ರತಿಷ್ಠೆ ಕಳೆದುಕೊಳ್ಳಲೆ? ”

ವಿದ್ಯೆ ಚಿಂತಾಪೂರ್ಣ ನಯನಗಳಿಂದ ನೆಲ ನೋಡತೊಡಗಿದಳು. ಗಂಡನ ಸಣ್ಣ ಮನಸಿಗಾಗಿ ಅವಳಿಗೆ ಖೇದವಾಗುತ್ತಿತ್ತು. ಆದರೆ ಹೆಚ್ಚು ಮಾತನಾಡಿದರೆ ಅವರ ದುಷ್ಕಾಮನೆ ಎಲ್ಲಿ ಮತ್ತಷ್ಟು ಗಟ್ಟಿಯಾದೀತೋ ಎಂದು ಅಂಜಿ ಆಕೆ ಸುಮ್ಮನಾದಳು

ಮರುದಿನ ಮುಂಜಾನೆ ಒಂಬತ್ತು ಗಂಟೆಗೆ ಜ್ಞಾನಶಂಕರರು ಜ್ವಾಲಾಸಿಂಹರ ಮನೆಗೆ ಹೋದರು. ಅವರು ಪ್ರೇಮದಿಂದ ಬರಮಾಡಿಕೊಂಡು ಅಲ್ಲಿಲ್ಲಿಯ ಮಾತುಕತೆ ಆಡಿದರು. ತಮ್ಮ ತಮ್ಮನ ಬಗ್ಗೆ ಶಿಫಾರಸು ಮಾಡು ವುದಕ್ಕಾಗಿಯೇ ಇವರು ಬಂದಿದ್ದಾರೆ ಎಂದೇ ಅವರ ಭಾವನೆ. ಅಂತೆಯೇ ಆ ಪ್ರಕರಣದ ಪ್ರಸ್ತಾಪ ಬರದ ಹಾಗೆಯೆ ಮಾತು ಬೆಳೆಸಬೇಕೆಂದು ಅವರ ಮನಸು. ಅವರೆಂದರು : “ ಈಸಲ ನಮ್ಮ ಇಲಾಕೆಯಲ್ಲಿ ನೂರಾರು ಕಡೆ ನೆರೆಹಾವಳಿ ಆಗಿದೆ. ಜಮೀನುದಾರರು ಅರ್ಧ ತೆರಿಗೆ ಬಿಡಬೇಕೆಂದು ಕೇಳಿದ್ದಾರೆ; ಅದು ನ್ಯಾಯವೇ. ಆದರೆ ಈ ಅರ್ಜಿಗಳನ್ನು ಫೈಲು ಮಾಡ. ಬೇಕೆಂದೇ ಪ್ರಾಂತಾಧಿಕಾರಿಗಳ ವಿಚಾರವಿದ್ದಂತೆ ತೋರುತ್ತದೆ. ಈಗ ನಾನು ತಿಳಿದೂ ತಿಳಿಯದವನಂತೆ, ಸ್ವಚ್ಛಂದತೆಯಿಂದ ಪರಿಶೋಧನೆ ನಡೆಸಿದರೆ ಒದಿಕೆ ಬರುವುದು ಖಂಡಿತ ಜನ ಸಂದೇಹ ದೃಷ್ಟಿಯಿಂದ ನೋಡುತ್ತಾರೆ. ಈಗ ಇಲ್ಲಿಯ ವಾತಾವರಣ ವಿಲಕ್ಷಣವಾಗಿ ಕೆಟ್ಟಿದೆ. ಮನುಷ್ಯ ಈ ಅನ್ಯಾಯ ದಿಂದ ಏನು ಮಾಡಿಯೂ ಉಳಿದುಕೊಳ್ಳುವುದು ಸಾಧ್ಯವಿಲ್ಲ. ನಮ್ಮ ಸಹ ಕಾರಿ ವರ್ಗದವರ ಸ್ಥಿತಿಯನ್ನು ನೋಡಿದರೆ, ಕೆಲಸಕ್ಕೆ ಶರಣು ಹೊಡೆದು ಮನೆಯ ಹಾದಿ ಹಿಡಿಯಬೇಕು ಎಂದು ನನಗೆನಿಸುತ್ತದೆ. ಮನುಷ್ಯ ಎಷ್ಟು ಸ್ವಾರ್ಥಪ್ರಿಯ ಆಗಬಲ್ಲ, ಎಷ್ಟು ಸ್ತುತಿಪ್ರಿಯ ಆಗಬಲ್ಲ ಎಂಬುದಕ್ಕೆ ಇಲ್ಲಿಗಿಂತ ಒಳ್ಳೆಯ ಉದಾಹರಣೆ ಎಲ್ಲೂ ಸಿಕ್ಕಲಿಕ್ಕಿಲ್ಲ. ಅಧಿಕಾರ ಬಂದಿತೆಂದರೆ ಸಾಕು, ತಾನು ಅಧಿಕಾರಿ, ದೇಶಬಂಧುಗಳೊಡನೆ ತನ್ನ ಯಾವ ಸಂಬಂಧವೂ ಇಲ್ಲ ಎಂದೇ ತಿಳಿಯುತ್ತಾರೆ.

ಜ್ಞಾನಶಂಕರರೆಂದರು : "ನಿಮಗಿನ್ನೂ ನಿಮ್ಮ ಸಹವರ್ಗೀಯರ ಕಪಟ ನೀತಿಯ ಅನುಭವ ಮಾತ್ರ ಬಂದಿದೆ. ಕೆಲ ದಿನ ಹೋದರೆ ನಿಮ್ಮ ಕೈಕೆಳಗಿನವರ ನಡತೆಯನ್ನು ಕಂಡು ಬೆಪ್ಪಾಗುವಿರಿ. ನಿಮ್ಮ ಸಿರಸ್ತೆದಾರ ಈಜಾದ ಹುಸೇನ ಮಹಾಧೂರ್ತ, ಕೊಂಚ ಜೋಕೆಯಿಂದ ಇರಿ. ಇಂದೇ ಅವನ ಬಾಯಿಂದ ಕೆಲ ಮಾತು ಕೇಳಿದೆ. ನನಗೆನಿಸಿತು, ನಿಮ್ಮನ್ನು ವಂಚಿಸಲು ಹೊಂಚು ಹಾಕುತ್ತಿರಬೇಕು. ನನ್ನ ಪರವಾಗಿ ಅವನು ದಯಾಶಂಕರನ ವಿಷಯದಲ್ಲಿ ನಿಮ್ಮೆದುರು ಬಹುಶಃ ಶಿಫಾರಸು ಮಾಡಿದ್ದರೂ ಮಾಡಿರ ಬಹುದು. ಅವನು ನನ್ನ ತಮ್ಮನಾದರೂ ಅವನ ಬಗ್ಗೆ ನನಗೆ ಹೃತ್ಪೂರ್ವಕ ಸಹಾನುಭೂತಿ ಇದೆಯಾದರೂ, ಮಿತ್ರತ್ವದ ದುರುಪಯೋಗ ಮಾಡಿಕೊಂಡು ನ್ಯಾಯಕ್ಕೆ ಬಾಧಕನಾಗುವಂತಹ ಧಾರ್ಷ್ಟ್ಯ ನನಗಿಲ್ಲ. ಹೊಟ್ಟೆಯ ಮಗನೇ ಇರಲೊಲ್ಲನೇಕೆ, ದುಷ್ಕರ್ಮದ ಬೆನ್ನುಕಟ್ಟುವುದು ನನಗೆ ಸೇರುವುದಿಲ್ಲ ... "

ಈ ಮಹಾಶಯರ ಮನಸ್ಸು ಕಕ್ಕನ ವಿರುದ್ಧವಾಗಿದೆ, ಈ ನೀತಿ ಪರಾಯಣತೆ ಅದೇ ದ್ವೇಷದ ರೋಗ ಎಂದು ಜ್ವಾಲಾಸಿಂಹರು ತಿಳಿದು ಕೊಂಡರು. ಅವರ ದೃಷ್ಟಿಯಲ್ಲಿ ಜ್ಞಾನಶಂಕರರ ಪ್ರತಿಷ್ಠೆ ನಷ್ಟವಾಯಿತು. ಯಾವಾಗಲೂ ಸತ್ಯ-ನ್ಯಾಯಗಳ ಮಾತನಾಡುತ್ತ ತಿರುಗುವ ಇಂತಹ ದುಷ್ಟ ಪ್ರಕೃತಿಯ ಮರ್ಮಕ್ಕೆ ಪೆಟ್ಟುಹಾಕಲು ಒಳ್ಳೆಯ ಸಂದರ್ಭ ಸಿಕ್ಕಿತೆಂದು ಕೊಂಡು ಜ್ವಾಲಾಸಿಂಹರು ಉತ್ತರವಿತ್ತರು : "ನಿಮಗೆ ಹಾಗೆ ಭ್ರಮೆ ಆಗಿರಬೇಕು. ಈಜಾದ ಹುಸೇನ ಈ ವಿಷಯ ನನ್ನೊಂದಿಗೆ ಏನೂ ಮಾತನಾಡಿಲ್ಲ, ಅದರ ಅಗತ್ಯವೂ ಇರಲಿಲ್ಲ. ನಾನು ಮೊದಲೇ ತೀರ್ಪಿನಲ್ಲಿ ದಯಾಶಂಕರರು ನಿರ್ದೋಷಿಯೆಂದು ಬರೆದುಬಿಟ್ಟಿದ್ದೇನೆ. ನಾನು ಯಾರ ಮಾತನ್ನೂ ಕೇಳುವವನಲ್ಲ ಎಂದು ಎಲ್ಲರಿಗೂ ಗೊತ್ತಿದೆ. ಪಕ್ಷಪಾತ ರಹಿತ ನಾಗಿಯೇ ನಾನೀ ಗ್ರಹಿಕೆಗೆ ಬಂದಿದ್ದೇನೆ. ಇದನ್ನು ಕೇಳಿ ನಿಮಗೂ ಸಂತೋಷ ವಾಗುವುದೆಂದು ನಂಬಿದ್ದೇನೆ. "

ತನ್ನ ಮನೆಗೆ ಬೆಂಕಿ ಹತ್ತಿದ ಸುದ್ದಿ ಕೇಳಿದರೆ ಹೇಗೋ ಹಾಗೆ ಜ್ಞಾನ-ಶಂಕರರ ಮುಖ ಬೆಳ್ಳಗಾಯಿತು. ಹೃದಯದಲ್ಲಿ ಬಾಣ ನಟ್ಟಹಾಗಾಯಿತು. ಯಾವ ಮನೋರಥದಿಂದ ಅವರಿಲ್ಲಿಗೆ ಬಂದಿದ್ದರೋ ಅದು ಚೂರುಚೂರಾ ದುದರಿಂದ ಅತ್ಯಂತ ಖಿನ್ನರಾದರು. ಅಲ್ಲಿಂದ ಮರಳುವಾಗ ಅವರ ಮನಸ್ಸು

ಬಹಳ ಉದ್ವಿಗ್ನವಾಗಿತ್ತು. ಅವರು ಮನೆಗೆ ಬರುತ್ತಲೇ ತಮ್ಮ ಕೋಣೆಯಲ್ಲಿ ಕಕ್ಕನ ಚಿಕ್ಕಮಕ್ಕಳಿಬ್ಬರು ಪುಸ್ತಕಗಳನ್ನು ಕಿತ್ತಾಡುವುದನ್ನು ನೋಡಿದರು. ಅದೇನೊ ಮಾಮೂಲಿಯ ವಿಷಯವೇ. ಆದರೂ ಜ್ಞಾನಶಂಕರರು ಆ ಹುಡುಗರ ಮೇಲೆ ಉರಿದೆದ್ದು ಬಯ್ದು ಹೊರಗಟ್ಟಿದರು. ತತ್‌ಕ್ಷಣವೇ ಕಕ್ಕನಿಗೆ ಒಂದು ಚೀಟಿಯನ್ನು ಬರೆದರು.

"ಮಾನ್ಯವರರೇ, ತಮ್ಮ ಸುಪುತ್ರರು ನಾನಿಲ್ಲದಾಗ ನನ್ನ ಕೋಣೆಯಲ್ಲಿ ಗೊಂದಲಹಾಕುವುದು, ಅಲ್ಲಿಯ ವಸ್ತುಗಳನ್ನು ಕೆಡಿಸುವುದು ನನಗೆ ಅಸಹ್ಯವಾಗಿಬಿಟ್ಟದೆ. ಇಂದೇ ಮನೆಯ ಪಾಲಾಗಬೇಕು ಎಂದು ನನ್ನ ಅಪೇಕ್ಷೆ. ಮರೆತೂ ನನ್ನ ಮನೆಯಲ್ಲಿ ಕಾಲಿಡಕೂಡದೆಂದು ಹುಡುಗರಿಗೆ ತಾಕೀದು ಮಾಡಿರಿ. ಇಲ್ಲದೆ ಹೋದರೆ ನಾನು ಹುಡುಗರನ್ನು ಹೊಡೆದರೆ ನೀವಾಗಲಿ ಕಕ್ಕಿಯವರಾಗಲಿ ನನ್ನನ್ನು ದೂರಬೇಡಿರಿ. ನನಗೆ ಸಿಕ್ಕುವ ಪಾಲು ಗಾರ್ಹಸ್ಥ್ಯದ ಆವಶ್ಯಕತೆಗಳಿಗೆ ಅನುಕೂಲವಾಗಿರಬೇಕೆಂಬುದನ್ನು ಗಮನಿಸಬೇಕು. ವಿಶೇಷವಾಗಿ, ಇದಿಷ್ಟು ನನ್ನ ಭಾಗ ಎಂಬ ಹಾಗೆ ಹೋಗುವಾಗ ಬರುವಾಗ, ಕುಳಿತಾಗ ನಿಂತಾಗ ಉರಿನೋಟಕ್ಕೆ, ವ್ಯಂಗಬಾಣಗಳಿಗೆ ನಾನು ಗುರಿಯಾಗದ ಹಾಗೆ—ಪ್ರತ್ಯೇಕವಾಗಿರಬೇಕು."

ಕಾಗದಕ್ಕೆ ಮರುಗಳಿಗೆಯಲ್ಲಿಯೆ ಉತ್ತರ ಬಂದಿತು.

"ಮಗೂ, ನನ್ನ ಮಕ್ಕಳೆಂದರೆ ನಿನ್ನ ಮಕ್ಕಳೇ. ಅವರನ್ನು ದಂಡಿಸುವ ಅಧಿಕಾರ ನಿನಗಿದೆ. ಈ ಬಗ್ಗೆ ನಾನು ದೂರಿಲ್ಲ, ದೂರುವುದಿಲ್ಲ. ಇನ್ನು ಮನೆಯ ಪಾಲಿನ ವಿಷಯ. ಅದನ್ನು ನಿನಗೇ ಒಪ್ಪಿಸುತ್ತೇನೆ. ಬೇಕಾದ ಒಂದು ತುಂಡು ಕೊಡು, ನನ್ನ ಆಕ್ಷೇಪವಿಲ್ಲ. ಇಷ್ಟೇ, ನನಗೆ ಹೊರಗೆ ಕುಳಿತು ಕೊಳ್ಳುವುದು ಅಭ್ಯಾಸ, ಅದಕ್ಕಾಗಿ ಪಡಸಾಲೆಯಲ್ಲಿ ಒಂದು ಕೋಣೆಯನ್ನು ನನಗಾಗಿ ಕೊಡು, ಆಯ್ತು. ನಾನು ಜೀವಿಸಿರುವವರೆಗೆ ವಿಚ್ಛೇದ ಆಗ ಬಾರದು ಎಂದು ನನ್ನ ಅಭಿಲಾಷೆಯಿತ್ತು. ಆದರೆ ನಿನ್ನ ಇಚ್ಛೆ ಹೀಗಿದ್ದರೆ, ಇದರಿಂದಲೇ ನಿನಗೆ ಸುಖವಾಗುತ್ತಿದ್ದರೆ, ಉಪಾಯವಿಲ್ಲ."

ಜ್ಞಾನಶಂಕರರು ಚೀಟಿಯನ್ನು ಜೇಬಿನಲ್ಲಿಟ್ಟುಕೊಂಡು ನಕ್ಕರು ಮುದುಕ ಎಂತಹ ಧೂರ್ತ. ಈ ನಮ್ರತೆಯಿಂದಲೇ ಅಪ್ಪನನ್ನು ಮರುಳು

ಮಾಡಿದ್ದ. ಆದರೆ ಅಂತಹ ಹಸು ತಾನಲ್ಲ! ತನಗೆ ದೊರೆತ ಪಾಲು ಮಾಡುವ ಅಧಿಕಾರದಿಂದ ಲಾಭ ಪಡೆಯಬೇಕೆಂದು ಎಣಿಕೆಹಾಕಿಕೊಂಡು, ಅವರು ಹೆಂಗುಸರೊಡನೆ ವಿಚಾರಮಾಡುವುದಕ್ಕಾಗಿ ಒಳಗೆ ಹೋದರು. ಯಾವುದಕ್ಕೂ ಹೆಂಗುಸರ ಒಪ್ಪಿಗೆಯನ್ನು ಪಡೆಯುವ ಶಿಷ್ಟಾಚಾರವನ್ನು ಅವರು ತಪ್ಪುತ್ತಿರಲಿಲ್ಲ. ಆದರೆ ಯಾವಾಗಲೂ 'ವಿಟೋ' ಅಧಿಕಾರ ತಮ್ಮ ಕೈಲಿಟ್ಟುಕೊಂಡಿರುತ್ತಿದ್ದರು; ಅದರ ಬಲದಿಂದಲೇ ಒಪ್ಪಿಗೆ ಪಡೆಯುತ್ತಿದ್ದರು.

"ಇಂದು ಮುಂಜಾನೆ ಎಲ್ಲಿಗೆ ಹೋಗಿದ್ದಿರಿ?" ಒಳಗೆ ಹೋದೊಡನೆ ವಿದ್ಯೆ ಕೇಳಿದಳು.

"ಜ್ವಾಲಾಸಿಂಹರ ಕಡೆಗೆ ಹೋಗಿದ್ದೆ."

"ನಿಮ್ಮ ಈ ಮಾತು ನನಗೆ ಸರಿ ಅನಿಸೋದಿಲ್ಲ"

"ಯಾವ ಮಾತು?"

"ಇದೇ; ಮನೆಯ ಜನರಮೇಲೆ ಅಧಿಕಾರಿಗಳ ಹತ್ತಿರ ದೂರಿಕೊಳ್ಳೋದು. ಅಣ್ಣತಮ್ಮಂದಿರೊಳಗೆ ಜಗಳಾಗೋದು ಎಲ್ಲೂ ಉಂಟು. ಆದರೆ ಯಾರೂ ಹೀಗೆ ಬಂಧುಗಳ ಬೇರು ಕೊಯ್ಯುವುದಿಲ್ಲ"

ಜ್ಞಾನಶಂಕರರು ತುಟಿ ಕಚ್ಚಿ, "ನೀನು ನನ್ನನ್ನು ಇಷ್ಟು ಕೇಳನೆಂದು ಕಲಿದೆಯಾ?"

"ಒಳ್ಳೇದು. ನನ್ನ ಆಣೆಯಾಗಿಯೂ ಹೇಳಿರಿ, ಇದಕ್ಕಾಗಿ ಜ್ವಾಲಾಸಿಂಹರ ಕಡೆ ಹೋಗಿರಲಿಲ್ಲವೆ?" ದೃಢತೆಯಿಂದ ವಿದ್ಯೆ ಪ್ರಶ್ನಿಸಿದಳು.

"ಸಾಕು ಸುಮ್ಮನಿರು. ನಿನ್ನ ಇಂಥ ಮಾತಿನಿಂದ ಮೈಗೆ ಕಿಚ್ಚಿಟ್ಟ ಹಾಗಾಗುತ್ತದೆ. ನಿನಗೆ ಮಾತನಾಡುವುದಕ್ಕೆ ತಿಳಿವಳಿಕೆ ಯಾವಾಗ ಬರಬೇಕೋ ಕಾಣೆ. ಏನು, ಈವೊತ್ತು ಊಟ ಇಲ್ಲವೇನು? ಎರಡು ಪ್ರಹರ ಆಗುತ್ತ ಬಂತು." ಜ್ಞಾನಶಂಕರರು ಕಠೋರ ಸ್ವರದಲ್ಲಿ ನುಡಿದರು.

"ಈವೊತ್ತು ಅಡಿಗೆಯನ್ನೇ ಮಾಡಿಲ್ಲ. ನೀವು ಮನೆ ಪಾಲು ಮಾಡಲು ಕಕ್ಕಅವರಿಗೆ ಚೀಟಿ ಬರೆದಿದ್ದಿರಿ. ಆಗಿನಿಂದಲೂ ಅವರು ಅಳುತ್ತ ಕೂತಿದ್ದಾರೆ. ಅವರ ಈ ಅವಸ್ಥೆಯನ್ನು ಕಂಡರೆ ಯಾರ ಗಂಟಲೊಳಗೆ ತುತ್ತು

ಇಳಿದೀತು! ಮಗನಮೇಲೆ ಸಂಕಟ ಒಂದು ಕಡೆ, ಮನೆಯೊಳಗೆ ಈ ದ್ವೇಷ ಒಂದು ಕಡೆ ಬೇರೆ ಆಗೋ ಹುಚ್ಚು ಯಾಕೆ ಬಡಕೊಂಡಿತು ನಿಮಗೆ?"

"ಉಳಿದ ಅಲ್ಪ ಸ್ವಲ್ಪ ಉತ್ಪನ್ನವೂ ಈ ಭಟ್ಟಿಯೊಳಗೆ ಸುಟ್ಟುಹೋಗ ಬಾರದು ಅಂತ. ಮೊದಲು ಆರು ಸಾವಿರ ವರ್ಷಾ ಉತ್ಪನ್ನವಿದ್ದದ್ದು ಈಗ ಎರಡು ಸಾವಿರಕ್ಕೆ ಬಂದುಹತ್ತಿದೆ. ಈ ಜನ ಎಲ್ಲಾ ತಿಂದು ಸಾಫುಮಾಡಿ ಬಿಟ್ಟರು."

"ಇವರೇನೂ ಪರಕೀಯ ಮಂದಿಯಲ್ಲ."

"ದೊಡ್ಡ ಕುಬೇರನ ಮಗಳ ಹಾಗೆ ಮಾತನಾಡುತ್ತೀ ನೀನು. ನಿಮ್ಮಪ್ಪನ ಹತ್ತಿರ ಲಕ್ಷಾಂತರ ರೂಪಾಯಿ ಇದ್ದರೆ, ಅದರಲ್ಲಿ ಯಾಕೆ ನಮಗೆ ಸ್ವಲ್ಪ ಕೊಡಬಾರದು?"

## ೬

ಸಿಟ್ಟು ಇಳಿದಿಳಿದ ಹಾಗೆ ಪ್ರಭಾಶಂಕರರು ತಮ್ಮ ಕಟು ವಾಕ್ಯಗಳಿಗಾಗಿ ಲಜ್ಜಿತರಾದರು. ಹೆಂಡತಿಯ ತೀಕ್ಷ್ಣವಾದ ಮಾತುಗಳು ನೆನಪಾಗಿ ಅವರ ಗ್ಲಾನಿ ಮತ್ತಷ್ಟು ಹೆಚ್ಚುತ್ತಿತ್ತು. ಸಹೋದರನ ಪ್ರೇಮ ಅನುರಾಗಗಳಿಂದ ಅವರ ಹೃದಯ ತುಂಬಿತ್ತು. ಆತನ ಪ್ರಾಣಾಧಾರನಾದ ಮಗನ ಕೂಡ ತಮ್ಮ ಈ ನಡತೆ ಅತ್ಯಂತ ಕೃತಘ್ನತೆಯದೆಂದು ಅವರಿಗೆನಿಸುತ್ತಿತ್ತು. ರಾತ್ರಿ ಅವರು ಉಣ್ಣಲಿಲ್ಲ, ತಿನ್ನಲಿಲ್ಲ. ತಲೆನೋವೆಂದು ಮಲಗಿಬಿಟ್ಟರು. ಕೋಣೆ ಯಲ್ಲಿ ಮಸುಕು ಬೆಳಕಿತ್ತು. ಬಾಗಿಲಲ್ಲಿ ಅಣ್ಣ ಜಟಾಶಂಕರರು ನಿಂತಿದ್ದಂತೆ, ತಮ್ಮನ್ನು ತಿರಸ್ಕಾರ ದೃಷ್ಟಿಯಿಂದ ನೋಡುತ್ತಿದ್ದಂತೆ ಭಾಸವಾಯಿತು. ಅವರು ಗಾಬರಿಗೊಂಡು ಎದ್ದು ಕುಳಿತರು. ಉಸಿರು ವೇಗವಾಗಿ ಆಡುತ್ತಿತ್ತು. ಈಗಲೇ ಹೋಗಿ ಜ್ಞಾನಶಂಕರನ ಕ್ಷಮೆ ಬೇಡಬೇಕು ಎಂದೆನಿಸಿತು. ಆದರೆ ರಾತ್ರಿ ಬಹಳವಾಗಿತ್ತು. ಒಂದು ತಣ್ಣುಸಿರೆಳೆದುಕೊಂಡು ಮತ್ತೆ ಬಿದ್ದು ಕೊಂಡರು.

ಬೆಳಗಿನಲ್ಲೆದ್ದು ಹೊರಗೆ ಬಂದು ಅಂಗಳದಲ್ಲಿ ಎಡೆಯಾಡುತ್ತ, ಜ್ಞಾನಶಂಕರ ಏನು ಮಾಡುತ್ತಾನೆ ನೋಡೆಂದು ತೇಜಶಂಕರನನ್ನು ಕಳಿಸಿದರು.

ಅವರ ಕ್ಷಮೆ ಬೇಡಬೇಕೆಂದು ಇಚ್ಛೆ. ಆದರೆ ಜ್ಞಾನಶಂಕರರು ಕಾಲ್ಬಂಡಿ ಯನ್ನೇರಿ ಹೊರಹೊರಟುದನ್ನು ಕಂಡು ಅವರು ಸುಮ್ಮನಿರಬೇಕಾಯಿತು. ಹಕ್ಕಿಗಳ ಪಂಜರಗಳನ್ನು ಕೆಳಗಿಳಿಸಿಕೊಂಡು ಅವುಗಳಿಗೆ ಕಾಳು ತಿನಿಸತೊಡಗಿ ದರು. ಹತ್ತು ಗಂಟೆಗೆ ಸ್ನಾನ ಮಾಡಿ ರಾಮಾಯಣ ಓದುತ್ತ ಕುಳಿತರು. ಅಷ್ಟರಲ್ಲಿ ಆಳು ಬಂದು ಜ್ಞಾನಶಂಕರರ ಪತ್ರವನ್ನು ಅವರ ಮುಂದಿಟ್ಟ. ಅವರು ಓದಿದರು. ಒಂದೊಂದು ಶಬ್ದವೂ ನಿಗಿನಿಗಿ ಕಿಡಿ! ಹೃದಯ ಸುಡತೊಡ ಗಿತು.—ಇವನ ಲೇಖನಿಯಿಂದ ಇಂತಹ ಮಾತು ಹೇಗೆ ಬಂದವು? ಇವನು ನನ್ನ ಕೊರಳಿಗೆ ಚೂರಿ ಇಕ್ಕಿದ್ದರೂ ನಾನಿಷ್ಟು ದ್ವೇಷಿಸುತ್ತಿರಲಿಲ್ಲ. ಹುಡುಗರು ಹಾವಳಿ ಮಾಡಿದವು, ಜಬರಿಸಿದ, ಬಂತ್ದು, ಜಗಳ ಮುಗಿಯಿತು. ಕಡ್ಡಿಯನ್ನು ಯಾಕೆ ಗುಡ್ಡ ಮಾಡಿದ?—ಅಂತೂ ಕೂಡಿ ನಡೆಯುವುದಿಲ್ಲ ಎಂಬುದು ಸ್ಪಷ್ಟವಾದ ಹಾಗಾಯಿತು. ನಾನಾದರೂ ಎಲ್ಲಿಯತನಕ ಹತ್ತಿಡು ತ್ತೇನೆ? ಆಯ್ತು. ತನ್ನ ಮನಸಿಗೆ ಬಂದಂತೆ ಮಾಡಿಕೊಳ್ಳಲಿ. ನಾನು ಮಾತ್ರ ನನ್ನ ಬೆನ್ನಿಗೆ ಮಣ್ಣು ಹತ್ತುವಂತಹ ಕೆಲಸ ಮಾಡಬಾರದು. ಮನೆ ಪಾಲು ಮಾಡಲು ಹೇಳುತ್ತಾನೆ. ದುರ್ಭಾಗ್ಯ! ಒಂದು ಮನೆಯಲ್ಲಿ ಎರಡು ಒಲೆ ಹೊತ್ತಬೇಕು! ಆಗದಿದ್ದದ್ದು ಆಗಬಾರದ್ದು ಆಗಬೇಕು!—ಆದರೆ ಗತ್ಯಂತರ ಏನಿದೆ? ಎಂದುಕೊಂಡು ಪ್ರಭಾಶಂಕರರು ನಿನ್ನಿಚ್ಛೆಯಂತೆ ಮನೆ ಪಾಲುಮಾಡು ಎಂದು ಉತ್ತರ ಬರೆದರು.

ಹನ್ನೊಂದಕ್ಕೆ ಪ್ರತ್ಯುತ್ತರವೂ ಬಂದಿತು. ಜ್ಞಾನಶಂಕರರು ದಿವಾಣ-ಖಾನೆಯನ್ನು ತಮಗೆ ಆಯ್ದುಕೊಂಡಿದ್ದರು. ತಮ್ಮ ನಮ್ರತೆಯಿಂದ ಅವರ ಕೋಪ ಶಮನವಾಗುವುದೆಂದು ಬಗೆದಿದ್ದ ಪ್ರಭಾಶಂಕರರ ಮನಸು, ಆ ಆಶೆಗೆ ಪ್ರತಿಕೂಲವಾದ ನಿಶ್ಚಿತ ಪ್ರಸ್ತಾವದಿಂದ ಅತ್ಯಂತ ವಿಹ್ವಲವಾಯಿತು. ಬಂಧುಪ್ರೇಮಮಯವಾದ ಅವರ ಹೃದಯಕ್ಕೆ ಬಲವಾದ ಆಘಾತವಾಯಿತು. ದೀನಭಿಕ್ಷುಕರಂತೆ ಅವರು ಜ್ಞಾನಶಂಕರರ ಕಡೆಗೆ ಹೋಗಿ ಬೇಡಿಕೊಂಡರು. '' ದೇವರನ್ನು ನೆನೆದು ಮುದುಕನ ಬಗ್ಗೆ ಕನಿಕರ ತೋರು. ನನ್ನ ಆತ್ಮವನ್ನು ಈ ಪರಿ ನಿರ್ದಯವಾಗಿ ಹಿಂಸಿಸಬೇಡ. ಇಡೀ ಮನೆಯನ್ನು ನೀನು ತೆಗೆದುಕೋ; ನನ್ನ ಮಕ್ಕಳುಮರಿಗಾಗಿ ಬೇಕಾದ ಮೂಲೆಯಲ್ಲಿ ಸ್ವಲ್ಪ ಸ್ಥಳ ಕೊಡು, ಅಷ್ಟರಲ್ಲೇ ಇರುತ್ತೇವೆ. ನಾನು ಇರುವ ತನಕ ಹೀಗೆ ನಡೆಯಲಿ;

ಸತ್ತಮೇಲೆ ಏನಾದರೂ ಮಾಡು. ಒಂದೇ ಅಡಿಗೆ ನಡೆಯದಿದ್ದರೆ ಒಂದೇ ಮನೆಯಲ್ಲಾದರೂ ಇರೋಣ. ನಾವು ಅಣ್ಣತಮ್ಮಂದಿರು ರಾಮಲಕ್ಷ್ಮಣ-ರಂತೆ ಇದ್ದೆವೆಂಬುದು ಊರಲ್ಲಿ ಮನೆಮಾತಾಗಿತ್ತು. ಈಗ ಆ ಪ್ರೇಮ ಕೆಟ್ಟುಹೋಗಿದೆ, ಒಂದು ಮನೆಯಲ್ಲಿ ಕೂಡ ಇರದಂತಾಗಿದೆ ಎಂದು ಜನ ಆಡಿಕೊಳ್ಳುವಂತೆ ಮಾಡಬೇಡ. ನನ್ನ ಬೇಡಿಕೆಯನ್ನು ಮನ್ನಿಸು " ಮುಂತಾಗಿ ಚಾಲುವರಿದರು

ಈ ವಿನಯದ ಪರಿಣಾಮ ಎಷ್ಟು ಮಾತ್ರವೂ ಆಗಲಿಲ್ಲ. ಜ್ಞಾನ-ಶಂಕರರ ದೃಷ್ಟಿಯಲ್ಲಿ ಇದು ವಿಕೃತಭಾವುಕತೆ,—ಮಾನಸಿಕ ದೌರ್ಬಲ್ಯದ ಚಿಹ್ನ. ಅವರು ಹೇಳಿದರು : "ತಮ್ಮ ಅಪ್ಪಣೆ ನನಗೆ ಶಿರಸಾಮಾನ್ಯ. ಆದರೆ ಈ ಹಳೆಯ ಮನೆಯಲ್ಲಿ ಎರಡು ಕುಟುಂಬಗಳು ಇರುವುದು ಹೇಗೆಂಬುದನ್ನು ಯೋಚಿಸಿರಿ. ಅಡಿಗೆಮನೆ ಒಂದೇ ಇದೆ; ಬಚ್ಚಲಮನೆಯೂ ಒಂದೇ. ಮೇಲೆ ಮಲಗುವ ಕೋಣೆಗಳು ಮೂರು ಮಾತ್ರ ಇವೆ. ಈ ತೊಂದರೆ ದಿನಾಲು ಸೋಸುವುದು ಅಶಕ್ಯ. ಈ ಬದಲಾವಣೆಯಿಂದ ತಮ್ಮ ಕೋಮಲ ಆತ್ಮಕ್ಕೆ ದುಃಖವಾಗುವುದು ನಿಜ, ಆ ಬಗ್ಗೆ ನನಗೆ ಪೂರ್ಣ ಸಹಾನುಭೂತಿಯೂ ಇದೆ. ಆದರೆ ಭಾವುಕತನಕ್ಕೆ ಬಿದ್ದು, ನಮ್ಮ ಶಾರೀರಿಕ ಸುಖಶಾಂತಿಗಳ ಬಲಿದಾನ ಮಾಡುವುದು ನನಗಿಷ್ಟವಲ್ಲ."

ಇವನು ತನ್ನ ಮನಸಿಗೆ ಬಂದುದನ್ನು ಬಿಡುವವನಲ್ಲ ಎಂದು ಪ್ರಭಾ-ಶಂಕರರು ಅರಿತುಕೊಂಡರು. "ಮಗೂ, ನಾನು ಹಳೆಯ ಕಾಲದ ಮನುಷ್ಯ; ನಿನ್ನ ಈ ಹೊಸ ಹೊಸ ಮಾತು ನನಗೆ ತಿಳಿಯುವುದಿಲ್ಲ ಇದರಿಂದ ನಿನಗೆ ಕಷ್ಟವಾಗುತ್ತಿದ್ದರೆ ನಿನ್ನ ಇಷ್ಟದಂತೆ ಮಾಡಲು ನನ್ನ ಆಕ್ಷೇಪವಿಲ್ಲ. ಆದರೆ ಇಷ್ಟಾದರೂ ಮಾಡು—ಇನ್ನು ಮೂರು ನಾಲ್ಕು ದಿನ ತಡೆ. ಇಷ್ಟು ದಿನ ತಾಳಿಕೊಂಡಿದ್ದೀ, ಇನ್ನಷ್ಟು ತಾಳಿಕೊ. ಇಂದು ಲಲ್ಲುವಿನ ಮೊಕದ್ದಮೆಯು ತೀರ್ಪಾಗುತ್ತದೆ. ಈ ಧಗೆ ಒಂದಿಷ್ಟು ಶಾಂತವಾಗಲಿ." ಎಂದರು.

ಜ್ಞಾನಶಂಕರರ ಸ್ವಭಾವದಲ್ಲಿ ಆತ್ಮಶ್ಲಾಘನೆಯ ಅಂಶ ಹೆಚ್ಚಾಗಿತ್ತು. ಈ ಮಮತ್ವವೇ ಆತ್ಮಗೌರವವನ್ನು ಹೆಚ್ಚಿಸಿಕೊಳ್ಳುವುದಕ್ಕಾಗಿ ಒಮ್ಮೊಮ್ಮೆ ಅವರ ಧೂರ್ತತನವನ್ನು ಪ್ರಚೋದಿಸುತ್ತಿತ್ತು.—ವಿಶೇಷವಾಗಿ ಅದಕ್ಕೆ ಪ್ರಕಟವಾಗುವ ಸಂಧಿ ದೊರೆಯದಿದ್ದಾಗ. ಸಹಾನುಭೂತಿಯನ್ನು ತೋರುತ್ತ

ಅವರೆಂದರು : " ಈ ಬಗ್ಗೆ ನಿಶ್ಚಿಂತರಾಗಿರಿ. ದಯಾಶಂಕರ ಮುಕ್ತನಾಗುತ್ತಾನೆ, ಇಷ್ಟೇ ಅಲ್ಲ, ನಿರ್ದೋಷಿಯಾಗುತ್ತಾನೆ. ಈವೊತ್ತು ಬೆಳಿಗ್ಗೆ ಜ್ವಾಲಾಸಿಂಹನ ಕಡೆ ನಾನು ಹೋಗಿದ್ದೆ; ದೇವರು ನಮ್ಮ ಮಾನ ಕಾಯ್ದ. ನಾನು ನನ್ನೆದುರಿನಲ್ಲಿಯೇ–ಇದೇನು ಹೇಳುವಂತಹ ಮಾತಲ್ಲ— ತೀರ್ಪನ್ನು ಬರೆಯಿಸಿ ಓದಿಯೇ ಅವರನ್ನು ಬಿಟ್ಟೆ. "

ಪ್ರಭಾಶಂಕರರು ಶ್ರದ್ಧಾಪೂರ್ಣ ನೇತ್ರಗಳಿಂದ ಜ್ಞಾನಶಂಕರರನ್ನು ನೋಡಿದರು. ತಮ್ಮಣ್ಣನೇ ಎದುರು ಬಂದು ನಿಂತು ತಲೆಯಮೇಲೆ ಅಭಯ ಹಸ್ತವನ್ನಿಡುತ್ತಿದ್ದಾನೆಂದು ಅವರಿಗೆನಿಸಿತು. ವಯಸ್ಸಿನ ಆತಂಕವಿಲ್ಲದಿದ್ದರೆ ಅವರು ಜ್ಞಾನಶಂಕರರ ಪಾದಗಳ ಮೇಲೆ ಹಣೆಯಿಟ್ಟು ಕಂಬನಿಗಳಿಂದ ತೊಳೆದುಬಿಡುತ್ತಿದ್ದರು. ಇಂತಹ ದೇವಸಮನಾದ ಮನುಷ್ಯನನ್ನು ತಿರಸ್ಕರಿಸಿದೆನಲ್ಲಾ ಎಂದು ಅವರಿಗೆ ಕಳವಳವಾಯಿತು. " ತಮ್ಮಾ, ಈ ಸುದ್ದಿಯನ್ನು ಹೇಳಿ ನೀನು ನನಗೆ ಪ್ರಾಣದಾನ ಮಾಡಿದೆ, ಮನೆಯ ಮರ್ಯಾದೆ ಕಾಯ್ದೆ, ನಾನು ನಿನ್ನಿಂದ ಅತ್ಯಂತ ಅನುಗ್ರಹೀತನಾಗಿದ್ದೇನೆ. ನಿನಗೆ ಕಟು ಶಬ್ದ ಆಡಿದ್ದಕ್ಕಾಗಿ ದುಃಖವಾಗುತ್ತದೆ ಇದಕ್ಕಾಗಿ ದೇವರು ನನ್ನನ್ನು ಶಿಕ್ಷಿಸಲಿ. ಮುದುಕ ಸಿಡುಕತನದಿಂದ ಆಡಿದ ಮಾತುಗಳನ್ನು ಮನಸಿನಲ್ಲಿ ಹಿಡಿಯಬೇಡಪ್ಪ " ಎಂದರು

ಮಾತನಾಡುತ್ತಿದ್ದಂತೆ ಪ್ರಭಾಶಂಕರರ ಕೊರಳು ತುಂಬಿಬಂದಿತು. ಹೃದಯದಮೇಲೆ ಹೆಪ್ಪುಗಟ್ಟಿದ ಮಂಜು ಕರಗಿ, ಕಣ್ಣುಗಳಿಂದ ಕಂಬನಿಗಳುದುರತೊಡಗಿದವು. ಆದರೆ ಜ್ಞಾನಶಂಕರರ ಬಾಯಿಂದ ಸಾಂತ್ವನೆಯ ಒಂದು ಶಬ್ದವೂ— ಅಭಿನಯಕ್ಕಾಗಿ ಕೂಡ— ಹೊರಡಲಿಲ್ಲ. ಅಷ್ಟರಲ್ಲಿ ಸ್ನೇಹದ ಈಜಾದ ಹುಸೇನನು ಬರಲು ಪ್ರಭಾಶಂಕರರು ಆಸೆಗಣ್ಣಿನಿಂದ ಅವನ ಕಡೆ ನೋಡುತ್ತ, " ಏನು, ಕುಶಲವೇ ? " ಎಂದು ಕೇಳಿದರು.

" ಎಲ್ಲವೂ ದೇವರ ದಯ. ತನ್ನಿ, ಬಾಯಿ ಸವಿ ಮಾಡಿರಿ. ದೇವರು ಮಾನ ಕಾಯ್ದ. ನೀವು ಗೆದ್ದಿರಿ. ಯಾವ ಕಲಂಕವೂ ಇಲ್ಲದೆ ಬಿಡುಗಡೆ ಆಯಿತು. ಜ್ವಾಲಾಸಿಂಹರಿಂದ ಹೀಗಾದೀತು ಎಂಬ ಆಸೆ ಇದ್ದಿಲ್ಲ. "

" ಜ್ಞಾನೂ, ನಿನ್ನ ಸತ್ಪ್ರೇರಣೆಯ ಫಲ ಇದು. ಭಗವಂತ ನಿನಗೆ ಉದ್ದಂಡ ಆಯುಷ್ಯ ಕೊಡಲಿ. "

" ಖಂಡಿತ, ಖಂಡಿತವಾಗಿ ಈ ಗೆಲವು ನಿಮ್ಮದೇ. ನಾನೇ ನಿನ್ನೆ ತೀರ್ಪು ಬರೆದಿದ್ದೆ— ಪೂರಾ ನಮ್ಮ ವಿರುದ್ಧ. ಆದರೆ ಇಂದು ಅವರು ಹೇಳಿದ ತೀರ್ಪೇ ಬೇರೆಯಾಗಿತ್ತು. ಇದೆಲ್ಲಾ ತಾವು ಭೆಟ್ಟಿಯಾದದ್ದರ ಫಲ "

೭

ಇಲಾಕೆಯ ವ್ಯವಸ್ಥೆ ಲಾಲಾ ಪ್ರಭಾಶಂಕರರ ಕೈಯಲ್ಲಿದ್ದಾಗ ಗೌಸ ಖಾನನ ಅತ್ಯಾಚಾರವನ್ನು ತಡೆಯುತ್ತಿದ್ದರು. ಜ್ಞಾನಶಂಕರರ ಕೈಗೆ ಬಂದ ಮೇಲೆ, ಅವರ ಸ್ವಾರ್ಥಪರಾಯಣತೆ ಖಾನಸಾಹೇಬನಿಗೆ ತನ್ನ ಬಯಕೆ ಈಡೇರಿಸಿಕೊಳ್ಳಲು ಅನುವುಕೊಟ್ಟಿತು. ವರ್ಷದ ಕೊನೆಯಲ್ಲಿ ಅವನು ಅತಿ ನಿರ್ದಯತೆಯಿಂದ ತೆರಿಗೆ ಎತ್ತಿದ — ಒಂದು ಕವಡೆಯನ್ನೂ ಬಿಡಲಿಲ್ಲ. ಕೊಡದವರನ್ನು ಅಥವಾ ಕೊಡಲಾಗದವರನ್ನು ಕೋರ್ಟಿಗೆಳೆದು ಒಂದಕ್ಕೆ ಒಂದೂವರೆ ವಸೂಲು ಮಾಡಿದ. ಇನ್ನೊಬ್ಬರ ಮುಖಾಂತರ ಸಾಗು-ಮಾಡುತ್ತಿದ್ದ ಕುಳಗಳನ್ನು ಪೂರ್ಣ ಕಿತ್ತೊಗೆದು, ಆ ಭೂಮಿಗಳ ತೆರಿಗೆ ಹೆಚ್ಚಿಸಿ ಬೇರೆಯವರಿಗೆ ಕೊಟ್ಟ. ತಲೆ ತಲಾಂತರದಿಂದ ಮತ್ತು ಹನ್ನೆರಡು ವರುಷಗಳ ಕರಾರಿನಿಂದ ಸಾಗುಮಾಡುತ್ತಿದ್ದ ಒಕ್ಕಲಿಗರ ತೆರಿಗೆಯನ್ನೂ ಹೆಚ್ಚಿಸುವ ಉಪಾಯವನ್ನು ಯೋಚಿಸತೊಡಗಿದ. ಇಲಾಕೆಯ ತುಂಬ ಹಾಹಾಕಾರವೆದ್ದಿತು. ಕರವೃದ್ಧಿಯ ಪಿಶಾಚವನ್ನು ಶಾಂತಗೊಳಿಸುವುದಕ್ಕಾಗಿ ಜನರು ನಾನಾ ಪ್ರಕಾರದ ಅನುಷ್ಠಾನ ಮಾಡತೊಡಗಿದರು. ಬೆಳಗಿನಿಂದ ಸಂಜೆಯವರೆಗೂ ಖಾನಸಾಹೇಬನ ಒಡ್ಡೋಲಗ ನಡೆಯುತ್ತಿತ್ತು. ಅವನ ಎಡಗಡೆ ಮುನ್ಷಿ ಮೌಜೀಲಾಲ, ಪಟವಾರಿ, ಬಲಗಡೆ ಸುಕ್ಖು ಚೌಧರಿ. ಈ ಮಹಾಶಯರು ಊರಿನ ಮುಖ್ಯರು; ಎಲ್ಲರಿಗಿಂತ ದೊಡ್ಡ ಒಕ್ಕಲುಗಳು; ಸಮರ್ಥರು; ಒಕ್ಕಲಿಗರ ಮೇಲೆ ವರ್ಚಸ್ಸುಳ್ಳವರು. ಅಂತೆಯೆ ನೀತಿ ಕುಶಲನಾದ ಖಾನಸಾಹೇಬನು ಅವರನ್ನು ತನ್ನ ಮಂತ್ರಿಗಳನ್ನಾಗಿ ಮಾಡಿಕೊಂಡಿದ್ದ. ಈ ತ್ರಿಮೂರ್ತಿಗಳು ಇಡೀ ಇಲಾಕೆಯ ಭಾಗ್ಯವಿಧಾತ-ರಾಗಿದ್ದರು.

ಮೊದಲು ಖಾನಸಾಹೇಬ ಬಿಡುವಿನ ಸಮಯವನ್ನು ಭೋಗವಿಲಾಸ-ದಲ್ಲಿ ಕಳೆಯುತ್ತಿದ್ದ. ಈಗ ಆ ಸಮಯ ಕುರಾನಪಠನದಲ್ಲಿ ಕಳೆಯುವುದು.

ಭಿಕ್ಷುಕ ಫಕೀರರಿಗೆ ಮೊದಲು ಬಾಗಿಲಲ್ಲಿ ನಿಲ್ಲುವುದೂ ಅಸಾಧ್ಯವಾಗಿದ್ದ ಅವನ ಮನೆಯಲ್ಲಿ ಅಭ್ಯಾಗತರಿಗೆ ಔದಾರ್ಯಪೂರ್ಣ ಸತ್ಕಾರ ನಡೆಯ ತೊಡಗಿತು. ಹಲವು ಸಲ ವಸ್ತ್ರದಾನ ಕೂಡ ಆಗುತ್ತಿತ್ತು.

ಈ ಇಲಾಕೆ ವಿದ್ರೋಹಿ ಎಂದು ತಾನು ತಿಳಿದದ್ದು ತಪ್ಪು ಎಂದು ಈಗ ಖಾನಸಾಹೇಬನಿಗೆ ಗೊತ್ತಾಯಿತು. ಅವನ ಮನೆ ಚೌಕಟ್ಟಿನಲ್ಲಿ ಬಾಗದ ಕುಳ ಯಾವನೋ—ಅತಿವಿರಳ. ಊರಲ್ಲಿ ಹತ್ತು ಹನ್ನೆರಡು ಠಾಕುರರ ಮನೆಗಳಿದ್ದವು. ಅವರ ತೆರಿಗೆ ಬಹಳ ಕಷ್ಟದಿಂದ ವಸೂಲಾಗು-ತ್ತಿತ್ತು. ತೆರಿಗೆಹೆಚ್ಚಳದ ಸುದ್ದಿ ಕೇಳಿ ಅವರೂ ಮೆತ್ತಗಾದರು. ಡಪಟಸಿಂಹ ಅವರ ಮುಂದಾಳು. ಖಾನಸಾಹೇಬನಿಗೆ ಸಲಾಮು ಮಾಡಲು ದಿನಕ್ಕೆ ಹತ್ತೆಂಟು ಸಲ ಅವನು ಹೋಗುತ್ತಿದ್ದ. ದುಃಖರನ ಭಗತ ಶಿವಪೂಜೆಗೆ ಹೋಗುವಾಗ ಮೊದಲು ಚಾವಡಿಯ ದರ್ಶನ ಪರಮಕರ್ತವ್ಯವೆಂದು ತಿಳಿ-ಯುತ್ತಿದ್ದ. ಸರಿ, ಇಲಾಕೆಯಲ್ಲಿ ದ್ರೋಹಿ ಯಾರಾದರೂ ಇದ್ದರೆ ಒಬ್ಬ ಮನೋಹರ, ಇನ್ನೊಬ್ಬ ಅವನ ಬಂಧು ಕಾದಿರ. ಅವನು ಹೊಲದಿಂದ ಬಂದು ಕಾದಿರನ ಮನೆಗೆ ಹೋಗಿ ಕುಳಿತುಕೊಳ್ಳುವುದು ವಾಡಿಕೆ. ಅಲ್ಲಿ ತನ್ನ ಕಷ್ಟ ತೋಡಿಕೊಳ್ಳುತ್ತಿದ್ದ. ಅವರಿಬ್ಬರೂ ಜೊತೆಯಲ್ಲಿ ಕುಳಿತಿರುವುದನ್ನು ಕಂಡರೆ ಸುಕ್ಖು ಚೌಧರಿಗೆ ಮೈಮೇಲೆ ಹಾವು ಬಿದ್ದಹಾಗೆ ಆಗುತ್ತಿತ್ತು. ಇವರಿಬ್ಬರೂ ಏನು ಮಾತಾಡುತ್ತಿರಬಹುದು? ಬಹುಶಃ ತನ್ನ ಕೇಡನ್ನೇ ಬಗೆಯುತ್ತಿರಬಹುದು, ಎಂದು ಯೋಚಿಸುವ. ಅವನನ್ನು ಕಂಡೊಡನೆ ಇಬ್ಬರೂ ಸುಮ್ಮನಾಗುತ್ತಿದ್ದುದು ಅವನ ಸಂದೇಹವನ್ನು ಪುಷ್ಟೀಕರಿಸುತ್ತಿತ್ತು.

ಖಾನಸಾಹೇಬ ಅವರಿಬ್ಬರಿಗೂ ಒಂದೊಂದು ಹೆಸರಿಟ್ಟಿದ್ದ—ಕಾದಿರನಿಗೆ ಸೈತಾನ, ಮನೋಹರನಿಗೆ ಕಾಳಿಂಗ ಎಂದು. ಕಾಳಿಂಗನ ಅಂಜಿಕೆ ಅವನಿಗೆ ಅಷ್ಟಿರಲಿಲ್ಲ— ಒಂದು ಹೊಡೆತದಿಂದ ಅದನ್ನು ಮುಗಿಸಿಬಿಡಬಹುದು. ಸೈತಾನನಿಗೆ ಮಾತ್ರ ಬಹಳ ಅಂಜುತ್ತಿದ್ದ—ಅದನ್ನು ಹೊಡೆಯುವುದು ದುಸ್ತರವಾಗಿತ್ತು. ಆ ಭಾಗದಲ್ಲಿ ಕಾದಿರನಿಗೆ ಬಹಳ ಮಾನವಿತ್ತು. ಅವನು ಅತ್ಯಂತ ನೀತಿಕುಶಲ, ಉದಾರ, ಮತ್ತು ದಯಾಳು. ಅಲ್ಲದೆ ಗಿಡಮೂಲಿಕೆಗಳ ಜ್ಞಾನವೂ ಅವನಿಗಿತ್ತು. ಅಲ್ಲಿ ಹಕೀಮ, ವೈದ್ಯ, ಡಾಕ್ಟರು ಎಲ್ಲಾ ಅವನೇ.

ರೋಗನಿದಾನವಲ್ಲಿ ಅವನಿಗೆ ತಿಳಿವಳಿಕೆ ಚೆನ್ನಾಗಿತ್ತು. ಹೀಗಾಗಿ ಅವನಲ್ಲಿ ಜನರ ಶ್ರದ್ಧೆ ವಿಶೇಷ ಎಲ್ಲೆಲ್ಲಿ ಯಾರಿಂದಲೂ ನೆಟ್ಟಗಾಗದಿದ್ದ ಜಟಾ ಶಂಕರರ ನೇತ್ರರೋಗವನ್ನು ಕಾದಿರ ಒಂದು ವಾರದಲ್ಲಿ ಕಳೆದಿದ್ದ. ಖಾನ ಸಾಹೇಬನನ್ನು ಪ್ಲೇಗುಬೇನೆಯಿಂದ ಉಳಿಸಿದ್ದೂ ಅವನೇ. ಆ ಉಪಕಾರಕ್ಕಾಗಿ ಅಲ್ಲ—ಅವನ ಸರ್ವಪ್ರಿಯತೆಗಾಗಿ ಅವನ ವಿಷಯದಲ್ಲಿ ಖಾನಸಾಹೇಬ ಸಾಶಂಕನಾಗಿದ್ದ. ಈ ಸೈತಾನನನ್ನು ತನ್ನ ಪಂಜರದಲ್ಲಿ ಹಿಡಿಯುವುದು ಹೇಗೆಂದು ಅವನಿಗೆ ಹಗಲಿರುಳೂ ಯೋಚನೆಯಾಗಿತ್ತು.

ಆದರೆ ಕಾದಿರ ಮಾತ್ರ ನಿಶ್ಚಿಂತನಾಗಿ, ನಿಶ್ಶಂಕನಾಗಿ ತನ್ನ ಕೆಲಸ ತಾನು ನಡೆಸಿದ್ದ. ಜಮೀನುದಾರರೂ ಅವರ ಗುಮಾಸ್ತನೂ ತನ್ನ ಶತ್ರುಗಳಾಗುತ್ತಿದ್ದಾರೆ, ಅದರಿಂದ ತನ್ನ ಸರ್ವನಾಶವಾದೀತು ಎಂಬ ಭಯ ಅವನ ಮನಸಿನಲ್ಲಿ ಒಂದು ಕ್ಷಣವೂ ಉಂಟಾಗುತ್ತಿರಲಿಲ್ಲ. ಈಗಲೂ ಕೂಡ, ಖಾನಸಾಹೇಬನಿಗೆ ಜಡ್ಡುಗಿಡ್ಡಾದರೆ, ಆ ಸುದ್ದಿ ತಿಳಿದಾಕ್ಷಣ, ಅವನಿಗೆ ಔಷಧೋಪಚಾರ ಮಾಡಲು ಧಾವಿಸುತ್ತಿದ್ದ—ತುಂಬು ಮನಸಿನಿಂದ. ಅವನ ಹೃದಯದಲ್ಲಿ ರಾಗದ್ವೇಷಗಳಿಗೆ ಎಡೆಯಿಲ್ಲ. ತನ್ನ ವಿಷಯದಲ್ಲಿ ಎಂತೆಂತಹ ಸುಳ್ಳು ಆರೋಪಗಳು ಹರಡುತ್ತಿವೆ ಎಂಬುದರ ಪರಿವೆಯೂ ಅವನಿಗಿಲ್ಲ. ಅವನು ಊರಲ್ಲಿ ವಿದ್ರೋಹವಹ್ನಿಯನ್ನು ಭುಗಿಲೆನಿಸಬಹುದಿತ್ತು; ಖಾನ-ಸಾಹೇಬನ ಮತ್ತು ಅವನ ಜನರ ಸಮಾಚಾರ ತೆಗೆದುಕೊಳ್ಳಬಹುದಿತ್ತು; ಆ ಅನಿಷ್ಟಕ್ಕಾಗಿ ಆತುರರಾಗಿದ್ದ ಕೆಲ ಪ್ರಚಂಡ ನವತರುಣರೂ ಊರಲ್ಲಿದ್ದರು. ಕಾದಿರ ಅವರನ್ನು ಅಂಕೆಯಲ್ಲಿಟ್ಟಿದ್ದ. ದೀನರಕ್ಷಣೆ ಅವನ ಉದ್ದೇಶವಾಗಿದ್ದರೂ ಅದನ್ನು ಕ್ರೋಧ-ದ್ವೇಷಗಳನ್ನು ಉದ್ರೇಕಿಸಿ ಸಾಧಿಸುವುದು ಬೇಡ, ಸದ್ವ್ಯವಹಾರದಿಂದ ಹಾಗೂ ಸತ್ಯಪ್ರೇರಣೆಯಿಂದ ಆಗಬೇಕು.

ಮನೋಹರನ ಸ್ಥಿತಿ ಇದಕ್ಕೆ ವಿಪರೀತವಾಗಿತ್ತು. ಜ್ಞಾನಶಂಕರರಿಂದ ಕಟುವಾಕ್ಯಗಳನ್ನು ಆಡಿಸಿಕೊಂಡು ಬಂದಂದಿನಿಂದ ಅವನ ಮನದಲ್ಲಿ, ತಲೆಯಲ್ಲಿ ವಿಕೃತಭಾವನೆಗಳೇ ಗುನುಗುತ್ತಿದ್ದವು. ಅವು ಒಂದು ಕ್ಷಣವೂ ಮರೆಯುತ್ತಿರಲಿಲ್ಲ. ಹೆಂಟೆಗೆ ಕಲ್ಲಿನ ಉತ್ತರ ಕೊಡಬೇಕೆಂಬುದು ಅವನ ವಿಚಾರ. ಬಲಿಷ್ಠರ ಹಗೆ ತನ್ನ ಜೀವಕ್ಕೇ ಮುಳುವು ಎಂಬುದನ್ನು ಅವನು

ತಿಳಿದಿರಲಿಲ್ಲವೆಂದಲ್ಲ. ತನ್ನ ಗುಡಿಸಲಿಗೆ ಬೆಂಕಿ ಹತ್ತಿರುವಾಗ ಅದನ್ನು ಆರಿಸಲು ಅಸಮರ್ಥನಾಗಿ ಗುಡಿಸಲಿನ ಉಳಿದ ಭಾಗಕ್ಕೂ ಕೊಳ್ಳಿಯಿಡಲು ಯೋಚಿಸುವ ಮನುಷ್ಯನಂತೆ, ರೋಗ ಅಸಾಧ್ಯವೆಂದು ತಿಳಿದಾಗ ಪಥ್ಯಾಪಥ್ಯವನ್ನು ಧಿಕ್ಕರಿಸುವ ರೋಗಿಯಂತೆ ಮನೋಹರನ ಸ್ಥಿತಿಯಾಗಿತ್ತು. ಚಾವಡಿಯ ಮುಂದೆ ಹಾಯುವಾಗ ಸೆಟೆದುಕೊಂಡು ಹೋಗುತ್ತಿದ್ದ. ಅವನು ತನ್ನ ಮಂಚದಮೇಲೆ ಕುಳಿತಿದ್ದಾಗ, ಖಾನಸಾಹೇಬನಾಗಲಿ ಗಿರಿಧರನಾಗಲಿ ಬರುತ್ತಿರುವುದನ್ನು ಕಂಡರೆ, ಎದ್ದು ಶರಣು ಎನ್ನುವ ಬದಲು ಕಾಲುಚಾಚಿ ಒರಗುತ್ತಿದ್ದ. ಶ್ರಾವಣದಲ್ಲಿ ಅವನ ತೋಟದ ಮಾವಿನಹಣ್ಣುಗಳು ಬಂದವು. ಜಮೀನುದಾರರಿಗೆ ಕೊಡಬೇಕೆಂದಿದ್ದ ಚತುರ್ಥಾಂಶವನ್ನು ಕೊಡದೆ ಅವನು ಎಲ್ಲವನ್ನು ಮನೆಗೆ ತಂದು ಹಾಕಿಕೊಂಡ. ಗಿರಿಧರ ಬಂದು ಕೇಳಿದರೆ ಬಯ್ದು ಕಳಿಸಿದ. ತಾನು ಅವರ ಬೆದರಿಕೆಗೆ ಸೊಪ್ಪು ಹಾಕುವವನಲ್ಲವೆಂದು ತೋರಿಸುವುದು ಅವನ ಇಚ್ಛೆ. ಆಗೀಗ ರಾತ್ರಿ ೯–೧೦ ರವರೆಗೂ ಅವನ ಮನೆ ಮುಂದೆ ಹಾಡುಗಳು ನಡೆಯುತ್ತಿದ್ದವು—ಖಾನಸಾಹೇಬ ಮತ್ತು ಸುಕ್ಕು ಚೌಧರಿಯುರನ್ನು ಛಲಿಸುವ ಉದ್ದೇಶದಿಂದ.

ಒಂದು ದಿನ ಸಂಜೆಯುಮುಂದೆ ಮನೋಹರ ತನ್ನ ಮನೆಯೆದುರು ಮೇವು ಕೊಯ್ಯುತ್ತಿದ್ದ. ಬಲರಾಜ ತನ್ನ ಬಡಿಗೆಗೆ ಎಣ್ಣೆ ತಿಕ್ಕುತ್ತಿದ್ದ. ಆಗ ಡಪಟಸಿಂಹ ಬಂದು ಮಂಚದಮೇಲೆ ಕುಳಿತುಕೊಳ್ಳುತ್ತ ಹೇಳಿದ: "ಡಿಪ್ಟಿ ಜ್ವಾಲಾಸಿಂಹರು ನಮ್ಮ ಬಾಬೂ ಸಾಹೇಬರ ಹಳೇ ಗೆಳೇರಂತೆ. ಚಿಕ್ಕ ಸರಕಾರದ ಮಗ ಫೌಜದಾರ ಇದ್ದರು. ಅವರ ಖಟ್ಲೆ ಇವರ ಕೋರ್ಟಿನಲ್ಲೇ ನಡೀತು. ಅವರ ಬಿಡುಗಡೆ ಆಯ್ತಂತೆ."

"ಲಂಚ ತಿಂದದ್ದು ಖರೇವು ಅಂತಾಗಿತ್ತಲ್ಲs?" ಎಂದು ಕೇಳಿದ ಮನೋಹರ.

"ಹಾಂ. ಖರೇವಾಗಿತ್ತು. ಅವರ ಬಿಡುಗಡೆಯ ಆಶೆ ಯಾರಿಗೂ ಇದ್ದಿಲ್ಲ. ಆದರೂ ಜ್ಞಾನಬಾಬುಗಳು ಹೇಳಿದ್ದಗಿಂದ ಡಿಪ್ಟಿಸಾಹೇಬರು ಖಟ್ಲೆ ತೆಗೆದುಹಾಕಿದರಂತೆ."

"ನಮ್ಮ ಪರಗಣೆಯ ಅಧಿಕಾರಿಗಳೂ ಅವರೇ ಇದ್ದಾರೆ."

" ಹೌದು, ಅದಕ್ಕೇ ಚಿಂತೆ. ಹೆಚ್ಚಿನ ತೆರಿಗೀ ಜಗಳಾನೂ ಈ ಡಿಪ್ಟಿಗಳ ಕಡೆಗೇ ಹೋಗೋದು. "

ಬಲರಾಜ ಬಡಿಗೆಯನ್ನು ಹೆಗಲಮೇಲಿಟ್ಟುಕೊಳ್ಳುತ್ತ, "ಹೆಚ್ಚಿಸೋವ ಯಾವ, ತಲೆ ಒಡೆದುಬಿಡ್ತೀನು " ಎಂದ

ಮನೋಹರ ಅವನನ್ನು " ನಡಬಟ್ಟಲೆ ಯಾಕ ಬಾಯಿ ಹಾಕ್ಕೀ? ನಿನ್ನ ಯಾವ ಕೇಳಿದಾನು? " ಎಂದು ಗದರಿಸಿ ಡಪಟಸಿಂಹನಿಗೆ, " ನಾನಂತೂ ಒಂದು ಪೈ ಹೆಚ್ಚಿಗೆ ಕೊಡಾಕಿಲ್ಲ; ಹೊಲಾನೂ ಬಿಡಾಕಿಲ್ಲ. ಹೊಲದ ಸಂಗಾಟ ಜೀವಾನೂ ಹೋಕ್ಕೈತಿ, ಜತೀಗೆ ಮೂರು ನಾಲ್ಕು ತೆಕ್ಕೊಂಡು. " ಎಂದ.

" ಯಾರಾರೆ ನಮ್ಮ ಹೊಲದ ಕಡೆ ನೋಡಿದರೆ ಪಾಡಾಗಾಕಿಲ್ಲ. " ಬಲರಾಜನೆಂದ.

" ಮತ್ತ ಬಂದ್ಯಾ ನಡಾಕ? "

" ಯಾಕ ಬರಬಾರದು? ನೀವೇನು ನಾಕಾರು ದಿನದವ್ರು; ಏನು ಬೀಳೋದು ನನ್ನ ತೆಲಿಮ್ಯಾಗ ಬೀಳತೈತಿ. ತಾವು ಬೇಕಾದ ಅನ್ನೇವು ಮಾಡಲಿ, ನಾವು ಬಾಯಿ ತೆಗೀಬಾರದು ಅನ್ನಾಕ ಜಮೀಂದಾರೇನು ಬಾದಶಾ ಅಲ್ಲ. ಹೊಲಾ ಬೆಳೀಲಿ ಬಿಡಲಿ, ತೆರಿಗಿ ಬೆಳಕೊಂತ ಹೋಗೂದೇ ಅಂದ್ರ, ಹೇಳೋರು ಕೇಳೋರು ಇಲ್ಲೇನು? "

ಆ ಹೊತ್ತಿಗೆ ತಲೆಯಮೇಲೆ ಹುಲ್ಲುಹೊರೆ ಹೊತ್ತುಕೊಂಡು ಕಾದಿರಮಿಯಾ ಬಂದ, ಬಲರಾಜನ ಮಾತು ಕೇಳಿ ನಿಂತು ಅವನೆಂದ: " ತಮ್ಮಾ, ನೀ ಹೇಳೂದು ಖರೇವಽ ಅಯ್ತು. ಬ್ಯಾಸಾಯದಾಗ ಏನೂ ಹಾಸಿಲು ಉಳಿದಿಲ್ಲ—ಕೂಲೀನೂ ಹೊಂಡೂದಿಲ್ಲ. ನಂಮನೀನೇ ನೋಡು—ಸಣ್ಣವು ದೊಡ್ಡವು ಎಲ್ಲಾ ಬಂತು, ಹತ್ತು ಜನ ಅದೇವು. ಹಗಲೂ ರಾತ್ರೀ ದಗದಾ ಮಾಡಿದರೂ ಹೊಟ್ಟೆತುಂಬಾ ಕಾಳು ಸಿಗಾಣಿಲ್ಲ. "

" ಈ ಹಾಡು ಸರಕಾರಕ್ಕೆ ಗೊತ್ತಿದ್ದರೆ ರೈತರ ಕಡೆ ಲಕ್ಷ್ಯ ಕೊಡುತ್ತಿತ್ತು. " ಎಂದ ಮನೋಹರ.

ಡಪಟಸಿಂಹ ನಕ್ಕು, " ಬಲರಾಜಗೆ ಹೇಳಿರಿ, ಸರಕಾರದ ದರಬಾರದಾಗ ನಮ್ಮ ದೂರು ಕೊಟ್ಟುಬರಲಿ " ಎಂದ.

ಬಲರಾಜ, "ಒಕ್ಕಲಿಗೇರು ಅಂದ್ರ ಏನೂ ಅಲ್ಲ ಅನ್ನೂ ಹಾಂಗ ನೀವೆಲ್ಲಾ ಮಾತಾಡ್ತೀರಿ—ಅವರು ಜಮೀಂದಾರರ ಬಿಟ್ಟೀ ಮಾಡಾಕಽ ಹುಟ್ಟಿದಾರು. ನಾವು ತರಸೋ ವರ್ತಮಾನ ಪತ್ರದಾಗ ಬರದಾರು—ರಶಿಯಾದಾಗ ದುಡಿಯೋರದೇ ರಾಜ್ಯೆ ಅಯ್ತಂತ. ತಮಗೆ ಬೇಕನಿಸಿದ್ದೇ ಮಾಡ್ತಾರಂತ. ಅದರ ಹಂತ್ಯಾಕಽ ಇನ್ನೊಂದು ಬಲಗೇರಿ ಅಂಬೂ ದೇಶ ಅಯ್ತಂತ. ಇನ್ನೂ ಮನ್ನಿಮನ್ನೀ ಸುದ್ದಿ—ಅಲ್ಲಿ ದುಡಿಯೋ ಜನಾ ಅರಸನ್ನ ಗದ್ದಿಗಿಯಿಂದ ತಳ್ಳಿ ಹಾಕಿದಾರು; ಹೊಲ ಮತ್ತು ಕೂಲಿ ಮಾಡೋವರ ಪಂಚಾಯತಿಯವರು ರಾಜ್ಯಾ ಆಳತಾರು" ಎಂದ.

"ಅಲ್ಲಿ ಒಕ್ಕಲಿಗೇರು ರಾಜ್ಯೇವ ಆಳ್ತಾರು ಅಂದವ್ಯಾಕ, ನಮ್ಮ ಕಡಿಂದ ಸಾಹೇಬರ ಮುಂದ ಅಳಾಕೂ ಆಗಾಕಿಲ್ಲೃ?" ಎಂದ ಮನೋಹರ.

"ತಹಶೀಲದಾರರ ಮುಂದ ಬಾಯಿ ತೆಗಿಯಾಕ ಆಗೂದಿಲ್ಲ, ಸಾಹೇಬರ ಮುಂದೆ ದೂರಿಕೊಂಬಾವ ಯಾವ?" ಕಾದಿರನೆಂದ.

"ನಿಂಬಾಯಿ ತೆಗಿಯಾಕಿಲ್ಲ; ಸಾಹೇಬರ ಸಂಗಾಟ ನನ್ನ ಮಾತುಕತಿ ಆದರೆ ನಾ ಎಲ್ಲಾ ಹೇಳ್ತೀನು." ಬಲರಾಜನೆಂದ.

"ಆಗಲಿ. ಈಬ್ಯಾರೆ ಸಾಹೇಬರು ಬಂದರೆಂದರೆ ಅವರೆದುರಿಗೆ ನಿನ್ನೇ ಒಯ್ದು ನಿಲ್ಲಿಸ್ತೇವು." ಎಂದು ಕಾದಿರ ಮನೆಯ ಹಾದಿ ಹಿಡಿದ. ಬಲರಾಜ ಹೆಗಲಮೇಲೆ ಬಡಿಗೆ ಇಟ್ಟುಕೊಂಡು ಅವನನ್ನು ಹಿಂಬಾಲಿಸಿದ. ಸ್ವಲ್ಪ ಮುಂದುವರಿದ ಬಳಿಕ ಬಲರಾಜ, "ದಾದಾ, ಖಾನಸಾಹೇಬನ್ನ (ಕೈ ಮುಷ್ಟಿಯಿಂದ ಸನ್ನೆ ಮಾಡುತ್ತ) ಮಾಡಬೇಕು ನೋಡು" ಎಂದ.

"ಬೇಡ. ನಿನಗ ಕಿಚ್ಚಿನಾಗ ಬೀಳಾಕ ಹೇಳೂದಿಲ್ಲ ನಾ. ಅಲ್ಲಾನ ಅಪ್ಪಣಿ ಆತಂದ್ರ ತಾನೇ ಹೊಂಟುಹೋಕ್ಯಾನು ಇಲ್ಲಿಂದ." ಕಾದಿರ ಅವನ ಕಿವಿ ಹಿಡಿದು ಹೇಳಿದ.

"ಆತು. ನೀನು ನಡಾಕ ಬರೂದಿಲ್ಲ?"

"ಅಂದರ ನೀವು ಖರೇಖರೇ ಹೊಡದಾಡಾಕೇ ಹೂಂಕರಿಸ್ತೀರೇನು? ನನ್ನ ಮಾತು ಕೇಳ್ಬಿದ್ದರೆ ಕಚೇರಿಗೆ ಹೋಗಿ ತಿಳಿಸಿಬಿಡ್ತೀನು. ನೀವು ಹೀಂಗ ಊರಿಗೆ ಬೆಂಕೀ ಹಚ್ಚಿದರ ನಾ ಸುಮಾಕ ನೋಡಿಕೊಂತ ಕುಂದರಾವಲ್ಲ."

"ಅಂದರ, ದಿನಾ ಈ ಅನ್ನೇವು ಸೋಸಬೇಕಂತೀ ಏನು ?"

"ದೇವರ ಮನಸಿಗೆ ಬಂತಂದರೆ ಎಲ್ಲಾ ತನಗೆ ತಾನೇ ಸಮ ಆಕ್ಕೈತಿ."

೮

ಕಾರ್ತಿಕ ಮಾಸ ಬಂದಿತೆಂದರೆ ಹಳ್ಳಿಗಳಲ್ಲಿ ಒಂದು ವಿಶಿಷ್ಟ ಪಿಡುಗೇ ಆರಂಭವಾಗುತ್ತದೆ. ಅಧಿಕಾರಿಗಳು ಮತ್ತು ಅವರ ಕರ್ಮಚಾರಿಗಳು ವಿರಹಿಗಳಂತೆ ಈ ಸುಖಕ್ಕಾಗಿ ದಿನ ಎಣಿಸುತ್ತಿರುತ್ತಾರೆ. ಪಟ್ಟಣಗಳಲ್ಲಿ ಅವರ ಬೇಳೆ ಬೇಯುವುದಿಲ್ಲ— ಬೆಂದರೂ ತೀರ ಸ್ವಲ್ಪ. ಅಲ್ಲಿ ಪ್ರತಿಯೊಂದು ವಸ್ತುವಿಗಾಗಿಯೂ ಜೇಬಿನಲ್ಲಿ ಕೈ ಹಾಕಬೇಕಾಗುತ್ತದೆ. ಆದರೆ ಹಳ್ಳಿಗಳಲ್ಲಿ ಆ ಕೈ ತಮ್ಮ ಬಡಿಗೆಯ ಮೇಲೆ, ಇಲ್ಲವಾದರೆ ಯಾವನೊಬ್ಬನ ಕತ್ತಿನಮೇಲೆ ಇರುತ್ತದೆ. ತುಪ್ಪ ಹಾಲು–ಮೊಸರು, ಕಾಯಿಪಲ್ಲೆ, ಮಾಂಸ–ಮೀನು ಇವುಗಳಿಗಾಗಿ ಪಟ್ಟಣಗಳಲ್ಲಿ ಹಂಬಲಿಸುತ್ತಿರುತ್ತಾರೆ, - ಬಹುಶಃ ಇವನ್ನೆಲ್ಲ ಕನಸಿನಲ್ಲಿಯೂ ಕಾಣುತ್ತಿರಲಿಕ್ಕಿಲ್ಲ,—ಆದರಿಲ್ಲಿ ಒಂದು ನಾಲಗೆ, ಒಂದು ಮುಂಗೈ ಕಸುವಿನಿಂದ ಆ ಪದಾರ್ಥಗಳ ಸುರಿಮಳೆಯೇ ಆಗುತ್ತದೆ. ತಿನ್ನಲಿಕ್ಕಾಗುವುದನ್ನು ತಿನ್ನುತ್ತಾರೆ—ಸಾಕು ಸಾಕಷ್ಟು ತಿನ್ನುತ್ತಾರೆ; ತಿನ್ನಲಾಗದುದನ್ನು ಮನೆಗೆ ಕಳಿಸುತ್ತಾರೆ. ತುಪ್ಪದ ಗಡಿಗೆಗಳು, ಹಾಲು ಮೊಸರಿನ ಗಡಿಗೆಗಳು, ಕಟ್ಟಿಗೆ, ಹುಲ್ಲುಮೇವುಗಳನ್ನು ಹೇರಿಕೊಂಡು ಚಕ್ಕಡಿಗಳು ಪಟ್ಟಣಕ್ಕೆ ಸಾಗುತ್ತವೆ. ಅವರ ಮನೆಗಳಲ್ಲಿ ನಲಿವೇ ನಲಿವು ಆ ಕಾಲದಲ್ಲಿ. ಹಳ್ಳಿಗರಿಗೆ ಅವೇ ಅತ್ಯಂತ ಸಂಕಟದ ದಿನಗಳು, ದುರ್ಭಾಗ್ಯದ ದಿನಗಳು. ಅವರು ಹೊಡೆತ ತಿನ್ನುತ್ತಾರೆ, ಅವರನ್ನು ಬಿಟ್ಟಿ ಹಿಡಿಯಲಾಗುತ್ತದೆ, ದಾಸತ್ವದ ನಿರ್ದಯ ಆಘಾತಗಳಿಂದ ಅವರ ಆತ್ಮದ ಹ್ರಾಸವೂ ಆಗುತ್ತದೆ.

ಮಾರ್ಗಶಿರ ಮಾಸ. ಸಂಜೆಯಾಗಿತ್ತು. ಕಾದಿರಖಾನನ ಮನೆ ಮುಂದೆ ಅಗ್ನಿಕುಂಡ ಉರಿಯುತ್ತಿತ್ತು. ಕೆಲವರು ಅದರ ಸುತ್ತಲೂ ಕುಳಿತು ಮಾತನಾಡುತ್ತಿದ್ದರು.

"ಮೊನ್ನೆ ಮಗಳ ಮದುವೆಗೆ ಹುಣಿಸೆಮರ ಕಡಿಸಿದ್ದೆ. ಅದನ್ನು ಒಯ್ಯಬೇಡ ಎಂದು ಖಾನಸಾಹೇಬಗೆ ರಗಡು ಹೇಳಿಕೊಂಡೆ. ಆದರೆ

ಕೇಳುನವ ಯಾವ? ಆಳುಗಳಿಗೆ ರಾಶಿ ತೋರಿಸಿದ. ಎಲ್ಲಾ ಕಟ್ಟಿಗೆ ಡಿಪ್ಟಿ ಜ್ವಾಲಾಸಿಂಹರ ಬಿಡಾರಕ್ಕೆ ಹೊರಟುಹೋಯಿತು." ಡಪಟಸಿಂಹ ಹೇಳಿದ.

"ಅಧಿಕಾರಿಗಳ ಸಂಚಾರ ಅಂದರೆ ನಮಗೆ ಸಾವು. ಬಕರೀದದ ಕುರ್ಬಾನಿಗಾಗಿ ಆಡು ಸಾಕಿದ್ದೆ. ಅದನ್ನು ನಿನ್ನೆ ಬೀಡಾರಕ್ಕೆ ಹಿಡಕೊಂಡು ಹೋಗಿಬಿಟ್ಟರು. ಐದು ರೂಪಾಯಿಗೆ ರಬ್ಬಿ ಕೇಳಿದ್ರ ಅದನ್ನು, ನಾನು ಕೊಟ್ಟಿದ್ದಿಲ್ಲ. ಅದರ ಬೆಲೆ ಈಗ ಏಳು ರೂಪಾಯಿಗಿಂತ ಕಡಿಮೆ ಇಲ್ಲ." ಕಾದಿರ ಹೇಳಿದ.

"ಈ ಜನ ಬಲು ಅಂಧೇರಿ ನಡೆಸಿಬಿಟ್ಟದ್ದಾರೆ. ಇವರು ಬರೋದು ನೋಡಿಕೊಂಡು ಹೋಗಾಕ, ಸುಖದುಕ್ಕ ಕೇಳಿಕೊಳ್ಳಾಕ. ಆದರೆ ಮಾಡೋದು ನಮ್ಮ ಕೊಳ್ಳಿಗೆ ಚೂರೀ ಹಾಕೂ ಕೆಲಸ. ಇಂಥ ಸಂಚಾರ ಹೊರಡೋದಕಿಂತ ಬಿಟ್ಟುಬಿಟ್ಟದ್ದರೆ ಥಣೋಕ ಇತ್ತು"

"ನಿನ್ನೆ ದಂಡಿನ ಒಬ್ಬ ಶಿಪಾಯಿ ಬಿಸೇಸರನ ಅಂಗಡಿಗೆ ಬಂದಿದ್ದ— ಸಾಬುದಾಣಿ ಒಯ್ಯಾಲಿಕ್ಕೆ. ತನ್ನಲ್ಲಿ ಇಲ್ಲವೆಂದು ಕೈಮುಗಿದು, ಕಾಲಿಗೆ ಬಿದ್ದು ಬಿಸೇಸರ ಹೇಳಿಕೊಳ್ಳುತ್ತಿದ್ದ. ಆದರೆ ಶಿಪಾಯಿ ಕೇಳಲೊಲ್ಲ—ಎಲ್ಲಿ ಬೇಕಾದಲ್ಲಿಂದ ತಂದು ಕೊಡು ಎಂದು ಗಂಟುಬಿದ್ದಿದ್ದ— ಬಾಯಿಗೆ ಬಂದ ಹಾಗೆ ಅಂತಿದ್ದ, ಬಡಿಗೆ ತೋರಿಸುತ್ತಿದ್ದ. ಕಡೆಗೆ ಬಲರಾಜ ಹೋದ. ಅವನು ಬಾಯಿಬಿಟ್ಟಾಗ ಶಿಪಾಯಿಮಿಯಾ ಮೆತ್ತಗಾಗಿ ವಟವಟ ಅನ್ನುತ್ತ ಹೊಂಟುಹೋದ."

ಮನೋಹರನು ಚಿಂತಿತ ಭಾವದಿಂದ, "ಬಲರಾಜ ಈಗ ಸರಕಾರೀ ಮಂದೀ ಕೂಟ ಬಾಯ್ಮಾಡಾಕ ಹತ್ಯಾನು. ಏಟು ಹೇಳಿ ಹೇಳಿ ಸಾಕಾತು, ಕೇಳವಲ್ಲ." ಎಂದ.

ಹೀಗೆ ಮಾತು ನಡೆದಿರುವಾಗ ಹಾದಿಹೋಗುವವನೊಬ್ಬ ಬಂದು ಅಗ್ಗಿಷ್ಟಿಕೆಯ ಹತ್ತಿರ ನಿಂತ. ಅವನ ಹಿಂದಿನಿಂದ ಒಬ್ಬ ಮುದುಕಿ ಕೋಲು ಊರುತ್ತ ಬಂದು ಅಗ್ಗಿಷ್ಟಿಕೆಯಿಂದ ಸ್ವಲ್ಪ ದೂರದಲ್ಲಿ ತಲೆ ತಗ್ಗಿಸಿಕೊಂಡು ಕುಳಿತಳು.

"ಯಾರಪಾ, ಯಾವೂರಾಯ್ತು?" ಎಂದು ಕಾದಿರ ಕೇಳಿದ.

"ನಮ್ಮೂರು ದೇವರಿಯು ಅಜೆ. ತಾಯಿ ಮುದಿಕಿನ್ನ ಕರಕೊಂಡು ಆಸ್ಪತ್ರಿಗೆ ಹೊಂಟಿದ್ದೆ. ಇಲ್ಲಿ ದಾರೀ ಬದೀಗೆ ತೋಟದಾಗ ಡಿಪ್ಟಿಸಾಬರ ದಂಡು ಇಳದೈತಲ್ಲ, ಅಲ್ಲಿ ಹಾದಕೂಡಲೆ ಶಿಪಾಯರು ಬಂಡೀ ತರುಬಿದರು. ನಮ್ಮ ಆರಿವೀ ಅಂಚಡೀ ಎಲ್ಲಾ ಕಿತ್ತಿಒಗದು ಕಟಗೀ ಹೇರಲಾಕ ಹತ್ತಿದರು. ನಾನು ಬಾಳ ದೈನಾಸಬಟ್ಟು ಹೇಳಿಕೊಂಡೆ—ಮುದುಕಿಗೆ ಜಡ್ಡಾಗೆಯ್ತಿ, ಅಪರಾತ್ರಿ ವ್ಯಾಳೀದಾಗ ಹೊಂಟೀನಿ, ಇವತ್ತೀ ಆಸಪತ್ರಿಗೆ ಹೋಗಿ ಮುಟ್ಟ-ದಿದ್ದರೆ ಮುದಕಿಗೆ ಏನಾಕ್ಕಯೆತ್ತಾ ನಾಳೆ, ಅಂತಾ ಚಾಲುವರದ್ನಿ. ಆದರೆ ಯಾವ ಕೇಳಾವ? ನಾ ಅಳತಾನೇ ನಿಂತಿದ್ದೆ. ಆಕಡಸೆ ಬಂಡಿ ತುಂಬಿತು. ಈಟಕೇ ಬಿಡಲಿಲ್ಲ—ಚಕಡಿ ಹೊಡಿ ಅಂದರು ನನಗೇ. ಏನು ಮಾಡೂದೈತಿ, ಚಕಡೀ ಹೊಡಕೊಂಡು ಪಟ್ಟಣಕ್ಕ ಹೋಕ್ಕೀನಿ. ಅಲ್ಲಿಗೆ ಕಟಿಗಿ ಮುಟ್ಟಿಸಿ ಶ್ಯಾಸ ತಿರುಗಿಬಂದವ್ಯಾಗ ಆಸ್ಪತ್ರಿಗೆ ಹೊಕ್ಕೀನಿ. ಅಲ್ಲೀತನಕಾ ಈ ಮುದಿಕೀಗೆ ಒಂದೀಟು ಜಗಾ ಕೊಡಬೇಕು; ಆದರೆ ಒಂದು ಹೊರಸು ಕೊಡಿರಿ; ಈಟು ಪುಣ್ಣೇವು ಕಟ್ಟಿಕೊಳ್ಳಿರಿ. ನನಗೆ ಬಾಳ ತರಾಸು ಬಂದೈತಿ."

ಮನೋಹರನ ಹೊಟ್ಟೆ ಉರಿಯಿತು. ಅವನೆಂದ: "ಈಗಿಂದೀಗ ಡಿಪ್ಟಿ ಸಾಹೇಬರ ತಾವ ಹೋಗಿ ನೆನಪಿಡೋ ಹಂಗ ಅಂದುಬಿಡಬೇಕು ಅನಿಸುತದೆ ನನಗೆ. ದೊಡ್ಡ ಅಧಿಕಾರಿ ಸೋಂಗು ಹಾಕಿದ್ದಾರೆ. ನ್ಯಾಯ ಏನು ಮಾಡುತ್ತಾರೆ? ತಿರುಗಿ ಬಡವರನ್ನು ಅರೆಯುತ್ತಾರೆ! ಹೊರಸಿನ ಪರಸನೆ ಇಲ್ಲ, ಜಗಕ್ಕೂ ಕೊರತೆ ಇಲ್ಲ; ಆದರೆ ಒಬ್ಬಳೇ ಹೆಂಗ ಇರುತ್ತಾಳೆ? ಬೇರೆ ಯಾರರೆ ನಿನ್ನ ಚಕಡಿ ಹೊಡಕೊಂಡು ಹೋದರೆ ಆಗಾಕಿಲ್ಲೇನು?"

"ಅಷ್ಟು ಆದರ ಕೇಳೋದೇನು? ಅದಾರೇನು ಯಾರರೆ?" ಎಂದ ಆ ಮನುಷ್ಯ.

"ಬೇಕಾದಷ್ಟು ಮಂದಿ ಅಯ್ತಿ. ನಾನೇ ಹೋಕ್ಕೀನಿ." ಎಂದ ಮನೋಹರ.

"ನಿನ್ನ ಮ್ಯಾಗ ಬರೋಸಿಲ್ಲ" ಕಾದಿರ ಹೇಳಿದ. "ಎಲ್ಲೆರೆ ತಂಟೆ ತೆಗ-ದೆಂದರೆ, ಇಲ್ಲದ್ದಾದೀತು ನಾನೇ ಹೋಕ್ಕಿದ್ದೆ. ಆದರೆ ಈ ಮುದಕಿಯನ್ನು ನಾ ನೆಟ್ಟಗೆ ಮಾಡಬೇಕಂತ ನನ್ನ ಮನಸು ಹೇಳಯ್ತಿ. ಇವಳನ್ನು

ನಮ್ಮನಿಗೆ ಕರಕೊಂಡು ಹೋಕ್ತೇನಿ. ಬಂಡೀ ಹೊಡೆದುಕೊಂಡು ಹೋಗಂತ ಹಸನೂಗೆ ಹೇಳ್ತೇನಿ ಎತ್ತಿಗೆ ಸೀರು ಮೇವು ಹಾಕೋದಯ್ತು. ಬಲರಾಜನನ್ನು ತುಸ ಕಳಿಸಿಕೊಡು."

ಇಷ್ಟರಲ್ಲಿ ಸುಕ್ಕು ಚೌಧರಿ ಮತ್ತು ಗೌಸಖಾನ ಇಬ್ಬರು ಶಿಪಾಯಿಗಳೊಡನೆ ಬರುತ್ತಿರುವುದನ್ನು ಕಂಡರು. ಇನ್ನೊಂದು ಬದಿಯಿಂದ ಬಲರಾಜನೂ ಬಂದ.

"ಎಲ್ಲರೂ ಇಲ್ಲಿ ಕೂತು ಹರಟೆ ಕೊಚ್ಚುತೀರಿ. ದಂಡಿನ ಖಬರು ಈಟಾರೆ ಐತೇನು? ಈ ಶಿಪಾಯರು ಹಾಲಿಗೆ ಬಂದಿದಾರು. ಅದರ ವೆವಸ್ತ ಮಾಡಿರಿ." ಎಂದು ಗೌಸಖಾನ ಹೇಳಿದ.

"ಏಟು ಬೇಕು ಹಾಲು?" ಕಾದಿರ ಕೇಳಿದ

"ಕಮ್ಮಿ ಅಂದರ ಹತ್ತು ಸೇರು." ಒಬ್ಬ ಶಿಪಾಯಿ ಹೇಳಿದ

"ಹತ್ತು ಸೇರು! ಇಷ್ಟು ಹಾಲು ಇಡೀ ಊರಾಗ ಹುಟ್ಟಲಿಕ್ಕಿಲ್ಲ. ಮೂರು ನಾಲ್ಕು ಮನೆಯೊಳಗ ಎಮ್ಮಿ ಅದಾವು, ಅವೂ ಹಿಂಡುವುದಿಲ್ಲ." ಕಾದಿರ ಹೇಳಿದ.

"ನಮ್ಮುಂದೆ ತೆಕ್ಕೊಂಬರ್ರಿ ಎಮ್ಮಿ. ನಾವು ಕರಕೊಂತೀವಿ ಹಾಲು. ಕಲ್ಲಾಗೂ ಹಾಲು ತೆಗೀತೀವಿ ನಾವು. ಕಳ್ಳರ ಹೊಟ್ಯಾಗಿನ ಮಾತು ಹೊಂಡಸ್ತೇವು. ತರ್ರಿ, ಎಮ್ಮಿ ತಂದು ನಿಲ್ಲಿಸಿರಿ ಇಲ್ಲೆ" ಎಂದ ಶಿಪಾಯಿ.

"ಈಟೊಂದು ಗೊಂದಲ ಯಾಕೆ? ಹಾಲಿನ ವೆವಸ್ತ ತಾನೆ ಆಕ್ಕಯ್ತಿ. ಸುಕ್ಕು ಎಡ್ಡು ಸೇರು ಕೊಡ್ತಾನಂತ. ಕಾದಿರನಲ್ಲೆ ಎಡ್ಡು ಸೇರು ಹೊಂಟೇ ಹೊಂಡತ್ತೈತಿ. ದುಕರನ ಬಗತ ಎಡ್ಡು ಸೇರು ಕೊಡ್ತಾನು. ಮನೋಹರ, ಡಪಟಸಿಂಹ ಎಡ್ಡೆಡ್ಡು ಸೇರು ಕೊಡ್ತಾರು. ಆತೇ ಆತು" ಎಂದು ಗೌಸಖಾ ಹೇಳಿದ.

ಮನೋಹರ ಏನು ಹೇಳುತ್ತಿದ್ದನೋ— ಅಷ್ಟರೊಳಗೇ ಬಲರಾಜ ಮಾತನಾಡಿದ: "ನಮ್ಮ ಎಮ್ಮಿ ಬಿಟ್ಟಗಂದರ ಒಂಚಟಾಕೂ ಕೊಡೋದಿಲ್ಲ."

ಮನೋಹರ, "ನೀ ಯಾಕ ಸುಮಾಕಿರೋದಿಲ್ಲ? ನಿನ್ನ ಯಾವ ಕೇಳಿದ? ನಮಗೇಟು ಸಾದ್ಯೇವೈತಿ ಅಷ್ಟು ಕೊಡ್ತೇನು— ನಿನಗ ಯಾಕ?" ಎಂದ.

ಶಿಪಾಯಿ ಅಪಮಾನಜನಿತ ಕ್ರೋಧದಿಂದ ಬಲರಾಜನ ಕಡೆಗೆ ನೋಡಿ, "ಗೌಡಾ, ಇನ್ನೂ ನಮ್ಮ ಪಂಜರದಾಗ ಬಿದ್ದಿಲ್ಲ. ಒಮ್ಮೆ ಬಿದ್ದೆಂದರ ಗೊತ್ತಾತ್ಕಯ್ತಿ—ಹಿಟ್ಟೊಬ್ಯಾಳೀ ಭಾವ! ಬಾಯಿ ಬಂದಾಕ್ಕಯ್ತಿ." ಎಂದ

"ತಲೀಗೆ ಬಿಸಿ ಏರೆಯ್ತಿ ಕಾಣ್ತಯ್ತಿ, ಅಂತೇ ಈಟು ಪೆಡವು ಆಯ್ತಿ. ದಂಡಿಗೆ ಹಿಡಕೊಂಡು ಹೋದರ ಇಳಿದುಹೋಕ್ಕಯ್ತಿ ಕಾವೆಲ್ಲ." ಇನ್ನೊಬ್ಬ ಶಿಪಾಯಿಯೆಂದ.

ಮಾತು ಬಲರಾಜನ ಮರ್ಮಕ್ಕೆ ತಾಗಿತು. "ಮಿಯಾ, ನಮ್ಮಾವು ಐದ್ಕೈದು ರೂಪಾಯಿಯ ಶಿಪಾಯರ ಅಳತೀದಲ್ಲ. ಹೋಗಿರಿ, ನಿಮ್ಮ ಸಾಹೇಬ ಬಹದ್ದೂರರ ಬೂಟು ವರಸರಿ. ಅಷ್ಟೆ ನಿಮ್ಕೆಲಸ. ನಮ್ಮಾವಿನ ಗೊಡವಿಗೆ ಬರಬ್ಯಾಡಿರಿ—ಕೈ ತೋರಿಸಬೇಕಾದೀತು. ಹಿಂದಿನ ಜನಮದ ಪಾಪದ ಫಲ ಉಣ್ಣಾಕ ಹತ್ತಿದೀರಿ, ಆದರೂ ನಿಮ್ಕಣ್ಣು ತೆರೀಲಿಲ್ಲ ಇನ್ನೂ." ಎಂದ.

ಈ ಮಾತನ್ನು ಅತ್ಯಂತ ಗರ್ವದಿಂದ ಗಂಭೀರತೆಯಿಂದ ಅವನು ಆಡಿದ. ಶಿಪಾಯಿಗಳಿಬ್ಬರೂ ಲಜ್ಜಾಹತರಾದರು. ಇಂತಹ ಅಪಮಾನದ ಪ್ರತೀಕಾರ ಆಗುವುದು ಕೈಯಿಂದಲೇ, ಮಾತಿನಿಂದಲ್ಲ. ಆದರೆ ಬಲರಾಜನ ಹರವಾದ ಎದೆ, ತುಂಬಿದ ತೋಳುಗಳನ್ನು ಕಂಡು ಅವರು ಅಳುಕಿದರು. ಗೌಸಖಾನ ನೊಡನೆ ಹೇಳಿದರು: "ಈ ಪೋರನ ಮಾತು ಕೇಳಿದಿರಾ, ಖಾನಸಾಬ? ಏಟು ಉದ್ದಕ್ಕೆ ಹೋಕ್ಯಾನು! ಇವಗೆ ಜರಾ ಹೇಳಿರಿ, ನಮ್ಮ ಬಾಯಿಗೆ ಹತ್ತಬ್ಯಾಡಂತ. ವೈವ್ಯಾಗ ಬಂದೀತು, ಆರು ತಿಂಗಳು ಚಕ್ಕೀ ಬೀಸ-ಬೇಕಾದೀತು. ನಿಮ್ಮ ಮೊಕ ನೋಡಿ ನಾವು ಸುಮಾಕ ಅದೀವು ಅದೀವು. ಇಲ್ಲದಿದ್ದರೆ ಇವಗೆ ತೋರಿಸುತ್ತಿದ್ದೆವು ಮಜಾ. ತರ್ರಿ, ಹಾಲಿನ ವೆವಸ್ತಾ ಆಕ್ಕೈತೋ ನಾವು ಹೋಗೋಣೊ?"

"ಇಲ್ಲರೆಪಾ. ಹಾಲೊಯ್ಯಿರಿ— ಹತ್ತು ಸೇರು ಯಾಕೆ, ಹೆಚ್ಚು ಒಯ್ಯಿರಿ. ಇವರೇ ಡಕ್ಕಾಸ್ತ ಕೊಡತ್ತಾರೆ. ಈ ಹುಡಗನ ದಸಿಂದ ನಾವು ನಿಮ್ಮ ಮುಂದೆ ತಲೆ ತಗ್ಗಿಸಬೇಕಾಯ್ತು ಇವತ್ತು. ಈ ಊರಿನ ಗಾಳೀನೆ ಸೊಲ್ಪ ಕೆಟ್ಟೈತಿ. ನನಗೆಲ್ಲಾ ಗೊತ್ತಯ್ತಿ. ತೊಯ್ಸಿಕೊಂಡ ಬೆಕ್ಕಿನಂತ ಈ ಜನರೇ ಶಹ ಕೊಟ್ಟಿದಾರಂತ ಬಂದೈತಿ ಈ ಪೋರಗ ದೈರೆ.

ಗೂಟದ ಬಲದಿಂದನೇ ಜಿಗಿತಾನ ಆಗಲಿ, ಒಬ್ಬೊಬ್ಬರಿಗೂ ಚೆಲೋ ಬುದ್ದೀ ಕಲಿಸಿದರೇ ನನ್ನ ಹೆಸರು ಗೌಸಖಾ ''

ಈ ತಿರಸ್ಕಾರದ ಪ್ರಭಾವ ಆಶಾತೀತವಾಗಿ ಆಯಿತು. ಎಲ್ಲರೂ ಬೆದರಿದರು. ಅವರ ಮುಖದಲ್ಲಿಯ ಅವಿನಯದ ಕಳೆ ಅಡಗಿಹೋಯಿತು. ನೂರಾರು ಎಕ್ಕಡಗಳು ಬಿದ್ದವೋ ಎಂಬ ಹಾಗೆ ಮನೋಹರ ಸ್ತಬ್ಧನಾದ. ಎಲ್ಲರ ಮತ್ತೂ ಇಳಿಯಿತು.

" ಹೋಗು ಮನೋಹರ, ಏಟು ಹಾಲಯ್ತು, ಎಲ್ಲಾ ಕಳಿಸು. ಕಾದಿರ ಹೇಳಿದ.

" ಮನೋಹರನ ಹಾಲು ಬೇಕಾಗಿಲ್ಲ ನಮಗೆ '' ಎಂದ ಗೌಸಖಾ.

" ಇಲ್ಲಿ ಕೊಡಾವ ಯಾವ? " ಎಂದ ಬಲರಾಜ

ಮನೋಹರನಿಗೆ ರೇಗಿತು. ಚಟ್ಟನೆ ಎದ್ದು ನಿಂತು, " ಒಳ್ಳೇದು ಇನ್ನು ನೀನೇ ಮಾತಾಡಿಕೋ, ನಿನ್ನ ಮನಸಿಗೆ ಬಂದಂತೆ ಮಾಡಿಕೊ. ನಾ ಹೋಕ್ತೀನಿ. ಮನಿಮಾರು ನೋಡಿಕೊ. ನಿನ್ನ ಕೂಟ ಇರೋದs ಶಕ್ಕಿಲ್ಲ. ಮನೀ ಕಾಕೋ, ಬೇಕಾರ ಬೆಂಕಿ ಹಚ್ಚಿಕೊ. " ಎಂದ.

ಮನೋಹರ ಸಭಯ ಕ್ರೋಧದಿಂದ ಅಲ್ಲಿಂದ ಹೊರಟುಹೋದ. ಬಲರಾಜನೂ ಗರಡಿಮನೆಯ ಕಡೆ ತೆರಳಿದ. ಅಲ್ಲಿ ಶಾಂತತೆಯಿತ್ತು. ಬಲರಾಜ ಬಟ್ಟೆ ಕಳೆದು ಲಂಗೋಟಿ ಧರಿಸಿ ಗರಡಿಗಿಳಿದ. ಆದರೆ ವ್ಯಾಯಾಮದಲ್ಲಿ ಅವನ ಮನಸು ರಮಿಸಲಿಲ್ಲ. ಶಿಪಾಯಿಗಳಾಡಿದ ಮಾತುಗಳು ಮನವನ್ನು ಚುಚ್ಚುತ್ತಿದ್ದವು. ತಾನು ಅವರಿಗೆ ನಿರ್ಭಯವಾಗಿ ಉತ್ತರ ಕೊಟ್ಟಿದ್ದರೂ, ಊರಿನ ಇತರ ಗಂಡುಸರಿಗೆ—ತನ್ನ ತಂದೆಗೆ ಕೂಡ—ತನ್ನ ಮಾತು ಉದ್ಧಟತನದವೆಂದು ಎನಿಸಿದವೆಂಬುದರಲ್ಲಿ ಅವನಿಗೆ ಸಂದೇಹವಿರಲಿಲ್ಲ. ಎಲ್ಲರೂ ಹೇಗೆ ತೆಪ್ಪಗೆ ಕುಳಿತಿದ್ದರು! ಯಾರ ಬಾಯೊಳಗೂ ನಾಲಗೆಯೇ ಇಲ್ಲವೋ ಏನೊ! ಅಂತೆಯೇ ತಮಗೆ ಈ ದುರ್ಗತಿ. ಉಳಿದವರನ್ನು ಬಿಡಿರಿ, ತನ್ನ ತಂದೆಯೂ ತನ್ನನ್ನು ಧಿಕ್ಕರಿಸಿದ. ಅವನು ಇಷ್ಟೇಕೆ ಅಂಜುಬುರುಕನಾದನೋ ಏನೋ. ಮೊದಲು ಇಷ್ಟು ಹೇಡಿಯಿರಲಿಲ್ಲ. ಬಹುಶಃ ಈಗ ಅವನಿಗೆ ನನ್ನ ಬಗ್ಗೆ ಚಿಂತೆಯುಂಟಾಗಿದ್ದೀತು. 'ಅವಕಾಶ ಸಿಕ್ಕರೆ

ಸ್ಪಷ್ಟವಾಗಿ ಹೇಳಿಬಿಡುತ್ತೇನೆ—ನನ್ನ ಬಗ್ಗೆ ನೀನು ಚಿಂತಿಸಬೇಡ, ದೇವರು ನನಗೆ ಕೈಕಾಲು ಕೊಟ್ಟಿದ್ದಾನೆ, ದುಡಿಯಬಲ್ಲೆ, ನಾಲ್ಕು ಜನರನ್ನು ಸಲಹಬಲ್ಲೆ. ಆ ಮುದಿಯ— ಗೌಸಖಾ - ಕೆಂಗಣ್ಣು ಹೇಗೆ ಕೆಕ್ಕರಿಸುತ್ತಿದ್ದ! ನನಗೆನಿಸುತ್ತದೆ, ನನ್ನ ಕೈಯೊಳಗೇ ಇವನ ಸಾವಿರಬೇಕು. ಶಿಪಾಯಿಗಳು ಮನಸಿನಲ್ಲಿ ಉಬ್ಬಿದ್ದಾರು—ಇಡೀ ಊರು ಹೇಗೆ ಮೆತ್ತಗಾಯಿತು, ನೀರು ಹೊರಲಿಕ್ಕೂ ಸಿದ್ಧವಿದೆ ಎಂದು. ಊರಜನ ಬಾಲಗುಂಡಾಡಿಸುವವರಿರಬಹುದು. ಏನೂ ಪರವಾ ಇಲ್ಲ. ಶಿಪಾಯಿಗಳು ತನಗೇನು ಮಾಡಬಲ್ಲರು? ತಾನು ನಾಳೆ ಬೆಳಗ್ಗೆ ಡಿಪ್ಟಿಗಳ ಹತ್ತಿರ ಹೋಗಿ ಎಲ್ಲವನ್ನೂ ಹೇಳಿಬಿಡಬೇಕು. ವಿದ್ಯಾವಂತ ಮನುಷ್ಯ. ದೀನರ ವಿಷಯದಲ್ಲಿ ಖಂಡಿತ ದಯೆ ಹುಟ್ಟುತ್ತದೆ. ಚಕ್ಕಡಿ ಹಿಡಿಯುವುದನ್ನು ಅವರು ತಡೆದುಬಿಟ್ಟರೆ ಕೇಳುವುದೇನು? ಈ ಅತ್ಯಾಚಾರ ಅವರಿಗೆ ಎಂದಿಗೂ ಸರಿಬರುತ್ತಿರಲಿಕ್ಕಿಲ್ಲ. ಅವರಿಗೆ ತಿಳಿಯದಂತೆ ಶಿಪಾಯಿಗಳೇ ಎಲ್ಲ ನಡೆಸಿದ್ದಾರೆ. ಆದರೆ ಅವರು ನನ್ನನ್ನು ಹಾಗೇ ದಬ್ಬಿಬಿಟ್ಟರೆ? ದೊಡ್ಡವರಿಗೆ ಸೊಕ್ಕು ಬಹಳ. ಅಡ್ಡಿಯಿಲ್ಲ. ನಾನು ದಾರಿಯಲ್ಲಿ ನಿಂತುಬಿಡುತ್ತೇನೆ; ಪ್ರವಾಸಿಕರ ಬಂಡಿಗಳನ್ನು ಅದು ಹೇಗೆ ಹಿಡಿಯುತ್ತಾರೋ ನೋಡುತ್ತೇನೆ. ನಾಲ್ಕು ಮಂದಿಯ ತಲೆಗಳನ್ನಾದರೂ ಒಡೆಯುತ್ತೇನೆ, ನನ್ನ ತಲೆಯನ್ನಾದರೂ ಕೊಡುತ್ತೇನೆ. ಇನ್ನು ಬಿಸಿ ತೋರಿಸದಿದ್ದರೆ ಆಗುವಹಾಗಿಲ್ಲ.

ಮುಂಜಾನೆ ಗರಡಿಸಾಧನೆ ಮಾಡಿ, ಹಾಲು ಕುಡಿದು, ಸಡಿಲಾದ ಅಂಗಿಯನ್ನು ತೊಟ್ಟು, ಪಟಕ ಸುತ್ತಿಕೊಂಡು ಬಲರಾಜ ಡಿಪ್ಟಿಗಳ ಬೀಡಾರದತ್ತ ನಡೆದ. ಮನೋಹರ ಇದುವರೆಗೂ ಅವನಮೇಲೆ ಸೆಟೆಗೊಂಡು ಕುಳಿತಿದ್ದ. ಈಗ ಸುಮ್ಮನಿರುವುದಾಗಲಿಲ್ಲ.

"ಎತ್ತಾಗಿ ಹೊಂಟಿ?" ಎಂದು ಕೇಳಿದ.

"ಡಿಪ್ಟಿಸಾಹೇಬರ ತಾವ ಹೋಂಟೇನಿ."

"ಯಾಕ, ದೆವ್ವ ಬಡದೈತೇನು? ಏನು ದಗದ ಇಲ್ಲೇನು?"

"ಕಲ್ತವರ ಮನಸು ಹೆಂಗ ಇರ್ತಯ್ತೋ ನೋಡ್ತೇನಿ."

"ಹೊಡಶಾ ತಿಂತೀ, ಮತ್ತೇನಿಲ್ಲ."

" ಹೊಡತಾ ಅಂತೂ ಶಿಪಾಯರಿಂದ ತಿಂದೇ ತಿಂತೀನು, ಅದರದೇನು ಚಿಂತಿ ? ನಾಯಿ ಜಾತಿಯು ಗುರುತಾಕ್ಕೈತಿ. "

ಬಲರಾಜ ಕ್ಯಾಂಪಿಗೆ ಹೋದ. ಅಲ್ಲಲ್ಲಿ ಒಲೆಗಳುರಿಯುತ್ತಿದ್ದವು. ನೀರು ಕಾಸುತ್ತಿದ್ದರು, ಚಹಕ್ಕೆ ಇಟ್ಟಿದ್ದರು. ಒಂದು ಕಡೆ ಕಟುಕರು ಕುರಿಯ ಮಾಂಸ ಕೊಯ್ಯುತ್ತಿದ್ದರು ಇನ್ನೊಂದು ಕಡೆ ಬಿಸೇಸರನು ಸಾಮಾನು ತೂಗುತ್ತಿದ್ದ. ನಾಲ್ಕೂಕಡೆ ಕೊಡ-ಮಡಕೆಗಳು ಒಡೆದು ಬಿದ್ದಿದ್ದವು. ಒಂದು ಗಿಡದಡಿಯಲ್ಲಿ ಎಷ್ಟೋ ಜನರು ಮುದುರಿಕೊಂಡು ಕುಳಿತಿದ್ದರು; ಅವರ ಮೊಕದ್ದಮೆ ಇಂದು ನಡೆಯುವುದಿತ್ತು. ಬಲರಾಜ ಗಿಡಗಳ ಮರೆಮರೆಯಿಂದ ಸಾಗಿ ಜ್ವಾಲಾಸಿಂಹರ ಗೂಡಾರದ ಬಳಿ ಸಾರಿದ. ಆ ಶಿಪಾಯಿಗಳಿಬ್ಬರೂ ತನ್ನನ್ನು ಎಲ್ಲಿ ನೋಡುವರೋ ಎಂದು ಅವನ ಮನಸು ಅಳುಕುತ್ತಿತ್ತು. ಡಿಪ್ಟಿಗಳ ಮುಂದೆ ಹೇಗೆ ಹೋಗಲಿ ಎಂದು ಯೋಚಿಸ-ತೊಡಗಿದ. ಅವನಿಗೆ ಒಂದು ಬಗೆಯ ದಿಗಿಲು ಹೊಕ್ಕಂತಾಗಿತ್ತು. ಗೂಡಾ-ರದ ಎದುರಿಗೆ ಹೋಗುವಾಗಲೂ ಅವನ ಕಾಲುಗಳು ನಡುಗಿದವು. ಆಕ-ಸ್ಮಿಕವಾಗಿ, ಗೌಸಖಾ ಮತ್ತು ಸುಕ್ಖು ಚೌಧರಿ ಒಂದು ಗಿಡದಡಿಯಲ್ಲಿ ಬೆಂಕಿ ಕಾಯಿಸುತ್ತ ಕುಳಿತಿರುವುದು ಅವನ ಕಣ್ಣಿಗೆ ಬಿತ್ತು. ಗೂಡಾರದ ಹಿಂದು ಗಡೆ ನಿಂದಿರುವುದು ಅವನಿಗೆ ಅಶಕ್ಯವಾಯಿತು. ಅವನಿಗೆ, ದಕ್ಕೆ ತಿನ್ನುವು ದಾಗಲೀ ತಿರಸ್ಕಾರ ಕೇಳುವುದಾಗಲೀ ಸಾವಿಗಿಂತ ಕಟ್ಟದು. ಅವನು ಗಟ್ಟಿ ಮನಸು ಮಾಡಿ ತಂಬುವಿನ ಎದುರುಗಡೆ ಹೋದ. ಜ್ವಾಲಾಸಿಂಹರಿಗೆ ಶರಣು ಮಾಡಿ ಸುಮ್ಮನೆ ನಿಂತುಕೊಂಡ.

" ಯಾರೊ ? ಇಲ್ಲೇಕೆ ನಿಂತಿದ್ದೀ ? " ಜ್ವಾಲಾಸಿಂಹರು ಪ್ರಶ್ನಿಸಿದರು.

ಬಲರಾಜ ಮಣಿದು ನಮಸ್ಕಾರ ಮಾಡಿದ. ಅವನ ಉದ್ದಂಡತೆ ಲುಪ್ತವಾಗಿತ್ತು. ಅಂಜಂಜುತ್ತ ಮಾತನಾಡಿದ : " ಹುಜೂರರ ತಾವು ತುಸು ಹೇಳಿಕೊಳ್ಳೋದು ಅಯ್ತಿ. ನಾನು ಇದೇ ಲಖನಪುರದಾವರಿ. "

" ಏನಯ್ತಿ ಹೇಳೋದು ? "

" ಏನಿಲ್ಲರಿ. ಈಟ ಕೇಳಿಕೊಳ್ಳೋದಯ್ತರಿ—ಸರಕಾರಕ ಈಗ ಎಷ್ಟು ಬಂಡಿ ಬೇಕಾಗಿದಾವು ? "

" ಏಕೆ, ನೀನು ಬಂಡಿಗಳ ಚೌಧರಿಯೊ ? "

" ಅಲ್ಲರಿ. ಶಿಪಾಯರು ದಾರೀಲೆ ಹೋಗೋ ಮಂದೀ ಬಂಡೀನೆಲ್ಲ ತರುಬತಾರ್ರಿ; ಅವರಿಗೆಲ್ಲಾ ತರಾಸು ಕೊಡತಾರ್ರಿ. ನಾ ಅಂತೀನು— ಸರಕಾರಕ ಎಷ್ಟು ಬಂಡಿ ಬೇಕು ಅಷ್ಟು ಬಂಡೀ ಆಸಪಾಸಿನ ಹಳ್ಳ್ಯಾಗ ಹುಡಿಕಿ ತರಬೇಕು; ಸರಕಾರದಿಂದ ಸಿಗೋ ಬಾಡಿಗಿ ಅವರಿಗೆ ಕೊಡಬೇಕು. ಅಂದರೆ ದಾರಿಕಾರರ ತರಾಸು ತಪ್ಪೀತು ಅಂತ. "

ಜ್ವಾಲಾಸಿಂಹರು ತಮ್ಮ ಸಾಮಾನು ಹೇರುವುದಕ್ಕೆ ಒಂಟೆಗಳನ್ನು ಇಟ್ಟಿದ್ದರು. ಆದರೆ ತಮ್ಮ ಕೈಕೆಳಗಿನವರಿಗೆ, ಶಿಪಾಯಿಗಳಿಗೆ ಅವರವರ ಸಾಮಾನು ಸಾಗಿಸುವುದಕ್ಕೆ ಚಕ್ಕಡಿಗಳು ಬೇಕು ಎಂಬುದನ್ನು ಅವರು ಅರಿತಿದ್ದರು. ಅದರ ವೆಚ್ಚ ಅವರಿಗೆ ಸರಕಾರದಿಂದ ಸಿಗುವುದಿಲ್ಲ. ಜನರ ಚಕ್ಕಡಿಗಳನ್ನು ಹಿಡಿಯದಿದ್ದರೆ ಅವರಿಗೆ ಸಾಗುವಂತಿಲ್ಲ. ಇದರಿಂದ ಜನರಿಗೆ ಕಷ್ಟ ಆಗುತ್ತದೆ ನಿಜ; ಆದರೆ ಅದು ಕ್ಷಮ್ಯ. ಇದೇನು ಅಂತಹ ವಿಶೇಷವಲ್ಲ ಅವರ ದೃಷ್ಟಿಯಲ್ಲಿ. ಈ ವಿಷಯವನ್ನೇ ಸನ್ಮಾನ್ಯವ್ಯಕ್ತಿಗಳು ಯಾರಾದರೂ ಎತ್ತಿದ್ದರೆ ಅವರು ವಿಚಾರಮಾಡುವ ಸಂಭವವಿತ್ತು. ಆದರೆ ಹಳ್ಳಿವಾಡದ ಹುಂಬ ತಿಳಿಗೇಡಿ ದೂರುತರುವ ಸಾಹಸ ಮಾಡುವುದೆಂದರೆ, ತಮಗೆ ನ್ಯಾಯವನ್ನು ಕಲಿಸಲು ಬರುವುದೆಂದರೆ. ಅವರ ಆತ್ಮಾಭಿಮಾನಕ್ಕೆ ಅತ್ಯಂತ ಅಸಹ್ಯವಾಗಿತ್ತು. ಅವರಿಗೆ ರೇಗಿತು. " ಶಿರಸ್ತೇದಾರರನ್ನು ಹೋಗಿ ಕೇಳು. ಇದಕ್ಕೆಲ್ಲ ತಲೆ ನೋಯಿಸಿಕೊಳ್ಳಲು ನನಗೆ ಪುರಸತ್ತಿಲ್ಲ " ಎಂದರು.

ಬಲರಾಜನ ದೃಷ್ಟಿ ವಕ್ರಿಸಿತು. ಸುಶಿಕ್ಷಿತ ವರ್ಗದ ನೀತಿಪರಾಯಣತೆಯ ಬಗ್ಗೆ, ಸಜ್ಜನತೆಯ ಬಗ್ಗೆ ಅವನಲ್ಲಿದ್ದ ಶ್ರದ್ಧೆ ಕ್ಷಣಮಾತ್ರದಲ್ಲಿ ಭಗ್ನವಾಯಿತು. ಅವನು ನಿಃಶಂಕನಾಗಿ ಮಾತನಾಡಿದ: " ಸರಕಾರ ಇದಕ್ಕೆ ತಲೆನೋವು ಅಂದರೆ, ಇಲ್ಲಿ ನಮ್ಮ ಜೀವದ ಸುತ್ತು ಬಂದೈತಿ. ಹುಜೂರರು ಇಲ್ಲಿ ದರಮುದ ಗದಗೀವ್ಯಾಗ ಕುಂತೀರಿ, ಶಿಪಾಯರು ಜನರ ಸುಲಿಗಿ ನಡಸ್ಯಾರು. ನಿಮ್ಮುಂದ ಇದನ್ನು ತೋಡಿಕೊಳ್ಳಾಕ ಧೈರೆ ಬಂದದ್ದಂದರೆ, ಬಡಪಾಯಿಗಳನ್ನು ತಾವು ಕಾಯ್ತೀರಿ ಅಂತ ತಿಳಿದಿದ್ನಿ. ಈಗ ಗೊತ್ತಾತು— ಈ ದೈವಗೇಡಿಗಳಿಗೆ ದೇವರನ್ನು ಬಿಟ್ಟು ಯಾರೂ ಕಾಯೋರಿಲ್ಲ. "

ಇಷ್ಟು ನುಡಿದವನೇ ಬಲರಾಜ ಶರಣುಮಾಡದೆ ಅಲ್ಲಿಂದ ಹೊರಟು ಬಿಟ್ಟ. ಅವನಿಗೆ ಒಂದು ರೀತಿ ಅಮಲೇರಿದಂತೆ ಆಗಿತ್ತು. ಅವನ ಮಾತುಗಳು ಅವಜ್ಞಾಪೂರ್ಣವಾಗಿದ್ದರೂ ಸ್ವಾಭಿಮಾನ ಸದಿಚ್ಛೆಗಳು ವ್ಯಕ್ತವಾಗುತ್ತಿದ್ದವು. ಜ್ವಾಲಾಸಿಂಹರಲ್ಲಿ ಸಹೃದಯತೆ ಇನ್ನೂ ಪೂರಾ ಪತನಹೊಂದಿದ್ದಿಲ್ಲ. ಕ್ರೋಧದ ಎಡೆಯಲ್ಲಿ ಸದ್ಭಾವನೆಯ ವಿಕಾಸವಾಯಿತು. ಅವರು ವಿಚಾರ ಮಾಡುತ್ತ ಬಹಳಹೊತ್ತು ಕುಳಿತರು. ಕೊನೆಯ ಶಬ್ದಗಳು ಅವರ ಆತ್ಮವನ್ನು ಬಡಿದೆಚ್ಚರಿಸಿದ್ದವು. ಮನದೊಳಗೆ ತಮ್ಮ ಕರ್ತವ್ಯವನ್ನು ನಿರ್ಧರಿಸಿಕೊಂಡು, ಶಿರಸ್ತೇದಾರರನ್ನು ಕರೆಯಿಸಿಕೊಂಡು, "ಕ್ಯಾಂಪಿಗಾಗಿ ಬಂಡಿಗಳನ್ನು ಬಿಟ್ಟಿ ಹಿಡಿಯಕೂಡದೆಂದು ಪ್ರತಿಬಂಧಿಸಿರಿ. ನಿಮ್ಮ ಸಾಮಾನುಗಳನ್ನೆಲ್ಲ ನನ್ನ ಒಂಟೆಗಳ ಮೇಲೇ ಹೇರಿರಿ. ಇದರಿಂದ ನಿಮಗೆ ಸ್ವಲ್ಪ ತೊಂದರೆಯಾಗುವುದು ನಿಜ. ಆದರೆ ನಮ್ಮ ಸುಖಕ್ಕಾಗಿ ಇನ್ನೊಬ್ಬರಿಗೆ ಬಲಾತ್ಕಾರ ಮಾಡುವುದು ಉಚಿತವೆಂದು ತೋರುವುದಿಲ್ಲ. ರಾತ್ರಿ ನಮ್ಮ ಚಾವಡಿ-ಗೂಡಾರದಲ್ಲಿ ಮಲಗಲಿಕ್ಕೆ ಶಿಪಾಯರಿಗೆ ಹೇಳಿರಿ. ಕಣಿಕೆ ಮೇವು ಬಿಟ್ಟಿಯಾಗಿ ಎತ್ತುವ ಅಗತ್ಯವೂ ಇಲ್ಲ. ಬಡಒಕ್ಕಲಿಗರ ದನಕ್ಕೆ ಅದೇ ಆಹಾರ. ಅದನ್ನು ಕೊಡುವುದೆಂದರೆ ಅವರಿಗೆ ಬಲು ಕಷ್ಟ." ಎಂದು ಹೇಳಿದರು.

ಜ್ಞಾನಶಂಕರರ ವ್ಯಂಗ್ಯವಚನಗಳು ಜ್ವಾಲಾಸಿಂಹರ ಹೃದಯದಲ್ಲಿ ಇನ್ನೂ ಪಡಿನುಡಿಯುತ್ತಿದ್ದವು. ಅನಾಯಾಸವಾಗಿ ಅವರನ್ನು ಗೇಲಿ ಮಾಡುವುದಕ್ಕೆ ಸಾಮುಗ್ರಿ ದೊರೆಯುವುದಾದರೆ ಕೇಳಬೇಕೆ? ಈ ದ್ವೇಷದ ಆವೇಗವನ್ನು ತಡೆಯುವುದು ಜ್ವಾಲಾಸಿಂಹರಿಗೆ ಆಗಲಿಲ್ಲ. ಅಧೀನ ಅಧಿಕಾರಿಗಳು, ಶಿಪಾಯಿಗಳೊಡನೆ ಊರೊಳಗೆ ಹೋಗಿ ಕೃಷಿಕರಿಗೆ ಕೆಲವು ಪ್ರಶ್ನೆಗಳನ್ನು ಅವರು ಕೇಳಿದರು. ಆದರೆ ಅವರಾಸೆ ಪೂರ್ಣವಾಗಲಿಲ್ಲ. ಗೌಸಖಾನ ಅಥವಾ ಜ್ಞಾನಶಂಕರ ಬಾಬುಗಳ ವಿರುದ್ಧ ಒಂದು ಶಬ್ದಕೂಡ ಯಾರ ಬಾಯಿಂದಲೂ ಹೊರಡಲಿಲ್ಲ.

೬

ಜ್ಞಾನಶಂಕರರ ಇಷ್ಟದಂತೆಯೆ ನಡೆಯಲು ಪ್ರಭಾಶಂಕರರು ಒಪ್ಪಿದರು. ದಿವಾಣಖಾನೆಯನ್ನು ಅವರಿಗೆ ಬಿಟ್ಟುಕೊಟ್ಟರು; ಲಖನಪುರವನ್ನೂ ಅವರ

ಪಾಲಿಗೆ ಬಿಟ್ಟರು; ಮನೆಯ ಇತರ ಸಾಮಗ್ರಿಗಳನ್ನೂ ಅವರ ಇಚ್ಛಾನು ಸಾರವಾಗಿ ಹಂಚಿದರು. ಹೆಂಡತಿ ವಿರೋಧಿಸುವಳೆಂಬ ಅಂಜಿಕೆಯಿತ್ತು. ಜ್ಞಾನಶಂಕರರಿಂದಾದ ಉಪಕಾರ ಅವಳ ಬಾಯನ್ನು ಕಟ್ಟಿದುದಲ್ಲದೆ, ಮನೋ ಮಾಲಿನ್ಯವನ್ನೂ ತೊಡೆದುಹಾಕಿತು. ಪ್ರಭಾಶಂಕರರು ಈಗ ಹೆಂಡತಿಯೆದುರು ಬಳಗದವರೆದುರು ಗೆಳೆಯರೆದುರು, ಆಳುಹೋಳುಗಳೆದುರು ಜ್ಞಾನಶಂಕರ-ರನ್ನು ಹೊಗಳುತ್ತಿದ್ದರು. ತಮ್ಮ ಆತ್ಮೀಯತೆಯನ್ನು ಒಂದಿಲ್ಲೊಂದು ಉಪ-ಹಾರದ ರೂಪದಲ್ಲಿ ಪ್ರಕಟಗೊಳಿಸುತ್ತಿದ್ದರು. ಈ ಸದ್ಭಾವಗಳಿಂದ ಜ್ಞಾನ-ಶಂಕರರ ಮನಸು ಪೀಡಿತವಾಗುತ್ತಿತ್ತು. ಈ ಸತ್ಕಾರಗಳಿಂದ ಅವರಿಗೆ ತಮ್ಮ ಕುಟಿಲತೆಯ ನೆನಪಾಗಿ ಚಿತ್ತಗ್ಲಾನಿ ಉಂಟಾಗುತ್ತಿತ್ತು.

ಲಖನಪುರವು ಜ್ಞಾನಶಂಕರರ ಚಿರ-ಅಭಿಲಾಷೆಗಳ ಸ್ವರ್ಗವಾಗಿತ್ತು. ಮನೆತನದ ಸಕಲ ಸಂಪತ್ತಿಯಲ್ಲಿ ಇಂತಹ ಸಮೃದ್ಧವಾದ ಊರು ಬೇರಿಲ್ಲ. ನಗರಕ್ಕೆ ಹತ್ತಿರವಾಗಿ, ರಾಜಮಾರ್ಗಕ್ಕೆ ಹೊಂದಿ, ಒಳ್ಳೆಯ ಗಾಳಿ ನೀರುಳ್ಳ ದಾಗಿ ಇದ್ದ ಹಳ್ಳಿ. ಬಹುದಿನಗಳಿಂದ ಒಡೆಯರೇ ಮಾಡುತ್ತ ಬಂದ ಅನೇಕ ರಂಟೆಗಳ ಬೇಸಾಯ ಅಲ್ಲಿತ್ತು. ಒಂದು ಹೆಂಟೆಯದಾವರೂ ಸುಂದರವಾದ ಮನೆಯೂ ಇತ್ತು. ಇವೆಲ್ಲಕ್ಕಿಂತ ವಿಶೇಷವೆಂದರೆ ಹೆಚ್ಚಿನ ಉತ್ಪನ್ನಕ್ಕೆ ತುಂಬಾ ಅನುಕೂಲತೆಯಿತ್ತು. ಸ್ವಲ್ಪ ಪರಿಶ್ರಮದಿಂದ ಇಮ್ಮಡಿ ಲಾಭ ಹೊಂದಬಹುದಿತ್ತು. ಒಂದೆರಡು ಹೊಂಡ ತೋಡಿಸಿ ಲಾವಣಿಯ ಕಾಯದೆ ಕರಾರನ್ನು ಪೂರ್ಣಗೊಳಿಸಲು ಸಾಧ್ಯವಿತ್ತು. ಪಾಲಾದ ಒಂದು ವಾರದೊಳ-ಗಾಗಿಯೇ ಜ್ಞಾನಶಂಕರರು ಗೌಸಖಾನನನ್ನು ಕರೆಯಿಸಿಕೊಂಡು ಜಮಾ-ಬಂದಿಯ ಚೌಕಸಿ ಮಾಡಿದರು, ಲಾವಣಿ ಪದ್ಧತಿ ಕಿತ್ತಿಹಾಕುವ ಸಿದ್ಧತೆಯಲ್ಲಿ ತೊಡಗಿದರು, ಕುಳಗಳ ಮೇಲೆ ದಾವೆ ಹೂಡಲು ಅಪ್ಪಣೆ ಮಾಡಿದರು. ಇತ್ತೀಚೆಗೆ ಕಮತ ನಡೆದೇ ಇರಲಿಲ್ಲ. ಅದರ ಏರ್ಪಾಡು ಮಾಡಿದರು. ತಾವೇ ರಂಟೆಕುಂಟೆ, ಎತ್ತು, ಆಳುಹೋಳು ಇಟ್ಟು ವಿಧಿಪೂರ್ವಕವಾಗಿ ಒಕ್ಕಲುತನ ಮಾಡಬೇಕೆಂದು ಅವರ ಮನೀಷೆ. ಆದರೆ ಖಾನಸಾಹೇಬನು ಇಷ್ಟೆಲ್ಲ ಆಡಂಬರದ ಅಗತ್ಯವಿಲ್ಲ, ಬಿಟ್ಟಿಯಿಂದ ಸುಸೂತ್ರವಾಗಿ ಸಾಗುವಳಿ ಆಗುತ್ತದೆ ಎಂದು ಸಲಹೆಯಿತ್ತ; ಸಾಗುವಳಿಗಾಗಿ ಜಮೀನುದಾರರಿಗೆ ಬಿಟ್ಟಿಯ ಹಕ್ಕಿದೆ, ಅದನ್ನೇಕೆ ಬಿಡಬೇಕು ? ಎಂದ.

ಅವರ ಸುವ್ಯವಸ್ಥೆಯ ಮಧುರಸಂಗೀತದಲ್ಲಿ ಒಂದು ಕಟುಸ್ವರವೂ ಇದ್ದಿತು. ಅದರಿಂದ ಅದರ ಲಾಲಿತ್ಯ ಭಂಗವಾಗುತ್ತಿತ್ತು. ಅದೆಂದರೆ ವಿದ್ಯಾವತಿಯ ಅಸಹಕಾರ. ಗಂಡನ ಸ್ವಾರ್ಥಪರತೆ ಅವಳಿಗೆ ಸೇರುತ್ತಿರಲಿಲ್ಲ. ಒಮ್ಮೊಮ್ಮೆ ಈ ಭೇದ ವಿವಾದವಾಗಿ, ಜಗಳದ ರೂಪ ತಳೆಯುವುದೂ ಉಂಟು.

ಫಾಲ್ಗುಣಮಾಸ ಬಂದಿತು. ಲಾಲಾ ಪ್ರಭಾಶಂಕರರಲ್ಲಿ ಹೋಳೀ ಹಬ್ಬದ ಸಂಭ್ರಮ. ತಮ್ಮ ಮನೆಯವರಿಗೆ, ಜ್ಞಾನಶಂಕರರ ಮನೆಯವರಿಗೆ ಕೂಡ, ಹೊಸಬಟ್ಟೆಗಳನ್ನು ತಂದರು. ಕಳೆದ ಐವತ್ತು ವರುಷಗಳಿಂದಲೂ ಮನೆಯ ಜನಕ್ಕೆಲ್ಲ ಹೊಸ ಬಟ್ಟೆ ತಂದು ಪ್ರಭಾಶಂಕರರಿಗೆ ಅಭ್ಯಾಸವೇ ಆಗಿತ್ತು. ವಿದ್ಯಾವತಿ ಆ ಬಟ್ಟೆಗಳನ್ನು ಇಟ್ಟುಕೊಂಡುದೂ ಅಲ್ಲದೆ ಪ್ರತಿಯಾಗಿ ಅವರ ಮಕ್ಕಳು ಸೊಸೆಯರಿಗಾಗಿ ಉಡುಗೊರೆಗಳನ್ನು ಕಳಿಸಲು ಯೋಚಿಸಿ-ದಳು. ಈ ವಿಚಾರವನ್ನು ಕೇಳಿ ಜ್ಞಾನಶಂಕರರು ಕೆರಳಿದರು

"ಹೀಗೆ ಮಾಡುವುದೇ ಇದ್ದರೆ, ಅವರ ಬಟ್ಟೆ ಯಾಕೆ ತಿರುಗಿ ಕೊಡು-ವುದಿಲ್ಲ ?" ಎಂದರು.

"ಸರಿ, ತಿರುಗಿ ಕಳಿಸಿದರೆ ಅವರೇನೆಂದುಕೊಂಡಾರು ? ಅವರು ಪಾಪ, ನಿಮ್ಮನ್ನು ಕಾಣಲು ಧಾವಿಸಿ ಬರುತ್ತಾರೆ; ನೀವು ಮಾತ್ರ ತಪ್ಪಿಸಿಕೊಂಡು ಓಡಾಡುತ್ತೀರಿ ದುಡ್ಡಿನ ಧ್ಯಾನವೇ ತಾನೆ ನಿಮಗೆ ? ನೀವೇನು ಕೊಡ-ಬೇಡಿ, ನಾನು ಕೊಡುತ್ತೇನೆ." ಎಂದು ವಿದ್ಯಾವತಿ ಉತ್ತರವಿತ್ತಳು.

"ನಿನ್ನ ದುಡ್ಡು ನನ್ನ ದುಡ್ಡು ಎಂಬ ಭೇದವೇನೋ ನನಗೆ ತಿಳಿಯದು. ರಾಯಸಾಹೇಬರು ನಿನ್ನ ಹೆಸರಿನಲ್ಲಿ ಏನಾದರೂ ಸೊತ್ತು ಬರೆದುಕೊಟ್ಟಾಗ ತಿಳಿಯಬಹುದು."

"ಅಂದರೆ ಆತ ತನ್ನ ಮನೆ ಮಾರಿ ಕೊಡಬೇಕೆಂದು ನಿಮ್ಮ ವಿಚಾರ-ವೇನು ?"

"ಪಾಪ, ಅವರು ತಮ್ಮ ಮಟ್ಟಿಗೆ ತಾವು ನೆಮ್ಮದಿಯಾಗಿರಲಿ. ನನ ಗೇನು ಕೊಡುತ್ತಾರೆ ? ತಾವು ಲಕ್ಷಗಟ್ಟಲೆ ಹಾರಿಸಬೇಕು, ತಮ್ಮ ತೀರ ಹತ್ತಿರದ ಸಂಬಂಧಿಕರನ್ನು ಮಾತನಾಡಿಸಬಾರದು— ಇಂಥ ಜನ ಪಶುವಿಗಿಂತ

ಕಡೆ ಎಂದು ನನ್ನ ಭಾವನೆ. ಅವರು ಸತ್ತರೂ ನನ್ನ ಕಣ್ಣಲ್ಲಿ ನೀರು ಬರುವುದಿಲ್ಲ! ''

" ನಿಮ್ಮ ಹೃದಯ ಇಷ್ಟು ಸಣ್ಣದೆಂಬುದು ಈಗ ಗೊತ್ತಾಯಿತು ನನಗೆ! ''

" ನನ್ನೊಡನೆ ಮದುವೆಯಾದದ್ದಕ್ಕೆ ದೇವರನ್ನು ಕೊಂಡಾಡು. ಇಲ್ಲದಿದ್ದರೆ ಯಾರೂ ಕೇಳುತ್ತಲೇ ಇರಲಿಲ್ಲ. ಲಾಲಾ ಎಷ್ಟು ವರ್ಷ ಮೊಸರು ಮೊಸರು ಎಂದು ಕೂಗಿಕೊಂಡರೂ ಯಾರೂ ಪುಕ್ಕಟೆಯಾಗಿಯೂ ಕೇಳುತ್ತಿರಲಿಲ್ಲ. ''

ಈ ಮರ್ಮಾಘಾತವು ವಿದ್ಯಾವತಿಗೆ ಅಸಹನೀಯವಾಯಿತು. ಸಿಟ್ಟಿನಿಂದ ಅವಳ ಮುಖ ಕೆಂಪೇರಿತು. ಅಲ್ಲಿಂದ ಹೊರಟುಹೋಗಲು ಮಿಂಚಿನಂತೆ ಎದ್ದಳು. ಅಷ್ಟರಲ್ಲಿ ಒಕ್ಕಲುಗಿತ್ತಿ ತಂತಿಯ ಕವರೊಂದನ್ನು ತಂದು ಜ್ಞಾನಶಂಕರರ ಕೈಗಿತ್ತಳು.

" ಮಗ ತೀರಿಕೊಂಡ. ಶೀಘ್ರ ಬನ್ನಿ — ಕಮಲಾನಂದ '' ಎಂದು ಬರೆದಿತ್ತು. ಜ್ಞಾನಶಂಕರರು ಹಾಳೆಯನ್ನು ನೆಲಕ್ಕೆಸೆದರು. ನಿಟ್ಟುಸಿರೆಳೆದು " ಉಫ್! ಘಾತ! ದೇವರೇ ಇದೇನು ಮಾಡಿದೆ ನೀನು! " ಎಂದರು.

" ನಮ್ಮ ಮನೆಯಲ್ಲಿ ಕುಶಲವೆ ? " ಕಾತರಳಾಗಿ ನೋಡುತ್ತ ವಿದ್ಯಾವತಿ ಪ್ರಶ್ನಿಸಿದಳು.

" ಹಾಯ್ ಪ್ರಿಯೆ! ಎಲ್ಲ ಕುಶಲವೆಂದು ಹೇಳಲು ಬಾಯಿ ಎಲ್ಲಿ? ಆ ಮನೆ ಮುಳುಗಿತು. ಆ ಮನೆಯ ದೀಪ ನಂದಿತು. ಬಾಬು ರಾಮಾನಂದನನ್ನು ಇನ್ನು ನೋಡುವಂತಿಲ್ಲ! ''

ವಿದ್ಯಾವತಿ ಒಮ್ಮೆಲೆ ಚೀರಿ ವಿಹ್ವಲಳಾಗಿ ಬಿದ್ದುಬಿಟ್ಟಳು. ಎದೆ ಎದೆ ಬಡಿದುಕೊಂಡು ಅಳತೊಡಗಿದಳು. ಶ್ರದ್ಧಾ ಓಡಿಬಂದಳು. ತೊತ್ತುಗಳು ಕೂಡಿದರು. ರಂಬಾಟ ಕೇಳಿ ಪ್ರಭಾಶಂಕರರ ಹೆಂಡತಿ, ಅವರ ಹೆಣ್ಣು ಮಕ್ಕಳು, ಸೊಸೆ ಬಂದರು. ಕೋಣೆಯಲ್ಲಿ ಹೆಂಗುಸರ ಗುಂಪು ನೆರೆಯಿತು.

ಆದರೆ ಹಾಯ್ ಸ್ವಾರ್ಥಸಂಗ್ರಾಮವೆ! ಈ ನಿರ್ದಯ ವಜ್ರಪ್ರಹಾರವು ಜ್ಞಾನಶಂಕರರಿಗೆ ಕುಸುಮವೃಷ್ಟಿಯಾಗಿ ತೋರಿತು. ತತ್‌ಕ್ಷಣಕ್ಕೆ

ಅವರಿಗೆ ದುಃಖವೇನೋ ಆಯಿತು. ಆದರೆ ಪ್ರತಿಕ್ಷಣದಲ್ಲಿ ಅವರ ಹೃದಯದಲ್ಲಿ ಹೊಸ ಹೊಸ ಆಕಾಂಕ್ಷೆಗಳು ತೆರೆಗಳನ್ನೆಬ್ಬಿಸಿದವು. ರಾಯ ಕಮಲಾನಂದರಿಗೆ ಬೇರೆ ಪುತ್ರಸಂತಾನವಿರಲಿಲ್ಲ. ಇಬ್ಬರು ಹೆಣ್ಣುಮಕ್ಕಳಲ್ಲಿ ಒಬ್ಬಳು ವಿಧವೆ; ಅವಳಿಗೆ ಮಕ್ಕಳಿರಲಿಲ್ಲ. ವಿದ್ಯೆಗೆ ಸಂತತಿ ಕೊಟ್ಟಿದ್ದ ದೇವರು— ಮಾಯಾಶಂಕರ ಇನ್ನು ರಾಯಸಾಹೇಬರ ವಾರಸುದಾರ. ಜ್ಞಾನಶಂಕರರಿಗೆ ಈ ಶೋಕಮಯ ವ್ಯಾಪಾರ ತಮ್ಮ ಸೌಭಾಗ್ಯದ ಈಶ್ವರ ಕೃತ ವ್ಯವಸ್ಥೆ ಎಂದು ಎನಿಸಿದುದು ಆಶ್ಚರ್ಯವಲ್ಲ. ಅವರು ದಿವಾಣಖಾನೆಗೆ ಹೋಗಿ ಉತ್ತರಾಧಿಕಾರದ ಸಂಬಂಧದಲ್ಲಿ ಸ್ಮೃತಿಕಾರರ ವ್ಯವಸ್ಥೆಯೇನೆಂದು ಅವಲೋಕಿಸಿದರು. ಸಮಾಧಾನ ದೊರೆಯಲಿಲ್ಲ. ವಕೀಲರ ಅಭಿಪ್ರಾಯ ಅಗತ್ಯ ಎನಿಸಿತು. ಕೂಡಲೆ ಪೋಷಾಕು ಧರಿಸಿ ಹೊರಟೇಬಿಟ್ಟರು— ಹೆಸರಾದ ಬ್ಯಾರಿಸ್ಟರ್ ಡಾಕ್ಟರ್ ಇರಫಾನ ಅಲಿಗಳ ಮನೆಗೆ.

ಜ್ಞಾನಶಂಕರರು ಕುಳಿತೇ ಕುಳಿತರು. ಎಂಟು ಹೊಡೆಯಿತು. ಆಗ ಬಂತು ಅವರ ಸರದಿ. ಅವರು ಆಫೀಸಿನೊಳಗೆ ಹೋಗಿ ತಮ್ಮ ಪ್ರಕರಣ ವನ್ನು ವಿವರಿಸಿದರು. ಗುಮಾಸ್ತ ಎಲ್ಲವನ್ನೂ ಟಿಪ್ಪಣಿಸಿಕೊಂಡ. ಅದರ ಫೀ ೫ ರೂಪಾಯಿ ಆಯಿತು. ಡಾಕ್ಟರ್‌ಸಾಹೇಬರ ಅಭಿಪ್ರಾಯಕ್ಕಾಗಿ ಮತ್ತೊಂದು ದಿನ ಬರಹೇಳಿದರು. ಅದರ ಫೀ ಐನೂರು ರೂಪಾಯಿಯಿತ್ತು. ಅದರಲ್ಲಿ ಏನಾದರೂ ಸಂದೇಹಗಳು ಹೊರಟರೆ ಅವುಗಳ ಸಮಾಧಾನಕ್ಕಾಗಿ ಗಂಟೆಗೆ ಇನ್ನೂರು ರೂಪಾಯಿ ತೆರಬೇಕು. ಬ್ಯಾರಿಸ್ಟರ್ ಮಹಾಶಯರ ವೇಳೆ ಇಷ್ಟು ತುಟ್ಟಿಯದಿದ್ದೀತೆಂದು ಜ್ಞಾನಶಂಕರರು ಎಣಿಸಿರಲಿಲ್ಲ. ಸುಮ್ಮನೆ ಈ ರಗಳೆಯಲ್ಲಿ ಬಿದ್ದೆನಲ್ಲ ಎಂದು ಪಶ್ಚಾತ್ತಾಪಪಟ್ಟರು. ಗುಮಾಸ್ತನ ಬಾಬನ್ನು ಕೊಟ್ಟುಬಿಟ್ಟು, ಮನೆಯಿಂದ ಹಣ ತರುವ ನೆಪದಿಂದ ಹೊರಟು ಬಂದರು.

ಮನೆಗೆ ಮರಳಿದಾಗ ಒಂಬತ್ತಾಗಿಬಿಟ್ಟಿತ್ತು. ವಿದ್ಯೆ ತನ್ನ ಕೋಣೆ ಯಲ್ಲಿ ಏಕಾಕಿಯಾಗಿ ಉದಾಸಳಾಗಿ ಬಿದ್ದುಕೊಂಡಿದ್ದಳು. ಜ್ಞಾನಶಂಕರರು ಅವಳ ತಲೆಯನ್ನೆತ್ತಿ ತೊಡೆಯಮೇಲಿಟ್ಟುಕೊಂಡು, "ಮೋರೆ ನೋಡುವ ಭಾಗ್ಯವೂ ಇರಲಿಲ್ಲ" ಎಂದು ಗದ್ಗದ ಸ್ವರದಿಂದ ನುಡಿದರು.

ವಿದ್ಯೆ ಅಳುತ್ತಳುತ್ತ ಮಾತನಾಡಿದಳು: “ಅವನ ಮೋರೆ ಕಣ್ಣು ಮುಂದೆ ಕಟ್ಟಿದೆ. ನಾಳೆ ಸಂಜೆಯ ಗಾಡಿಗೆ ನಡೆಯಿರಿ. ಅವನಿಗೆ ಕುದುರೆ ಸವಾರಿ ಎಂದರೆ ಜೀವ. ನಾನು ಅವನ ಹೆಸರಿನಿಂದ ಒಂದು ಕುದುರೆ ಕೊಡಬೇಕೆನ್ನುತ್ತೇನೆ.”

ವಿದ್ಯಾವತಿ ಅಂಜಂಜುತ್ತ ಈ ಸೂಚನೆ ಎತ್ತಿದ್ದಳು. ಜ್ಞಾನಶಂಕರರು ಸಂತೋಷದಿಂದ ಸಮ್ಮತಿಸಿ ಅವಳನ್ನು ಮುಗ್ಧಮಾಡಿದರು. ಈ ಅಪವ್ಯಯಕ್ಕೆ ಕಡಿತ ಹಾಕುವುದು ಅನುಚಿತವೆಂದು ಅವರು ಬಗೆದರು. ಈ ಪ್ರಸಂಗವೇ ಅಂತಹದು.

## ೧೦

ರಾಯ ಕಮಲಾನಂದ ಬಹಾದುರರು ಲಖನೌದ ದೊಡ್ಡ ಶ್ರೀಮಂತರು; ತಾಲೂಕುದಾರರು. ವಾರ್ಷಿಕ ಉತ್ಪನ್ನ ಲಕ್ಷಕ್ಕೆ ಹತ್ತಿರ ಹತ್ತಿರ. ಅವರ ವಿಶಾಲವಾದ ಭವನವೊಂದು ಅಮಿನಾಬಾದಿನಲ್ಲಿತ್ತು. ನಗರದಲ್ಲಿಯೂ ಕೆಲವು ಮನೆಗಳಿದ್ದವು. ಆದರೆ ಅವರ ವಾಸ ಹೆಚ್ಚಾಗಿ ನೈನಿತಾಲಿನಲ್ಲಿ, ಇಲ್ಲವೆ ಮಸೂರಿಯಲ್ಲಿ. ಯುವಾವಸ್ಥೆಯಲ್ಲಿಯೇ ಹೆಂಡತಿ ತೀರಿಕೊಂಡಿದ್ದರೂ ಅವರು ಮರುಮದುವೆ ಮಾಡಿಕೊಂಡಿರಲಿಲ್ಲ. ಹಿರಿಮಗಳು ಗಾಯತ್ರಿಯನ್ನು ಗೋರಖಪುರದ ಮಹಾಶ್ರೀಮಂತರಿಗೆ ಕೊಟ್ಟಿತ್ತು. ಮದುವೆಯಾದ ಎರಡು ತಿಂಗಳಲ್ಲಿಯೇ ಅವಳು ವಿಧವೆಯಾಗಿದ್ದಳು. ವಿದ್ಯೆಯ ಕೈಹಿಡಿಯುವ ಭಾಗ್ಯ ಜ್ಞಾನಶಂಕರರಿಗೆ ದೊರಕಿತ್ತು. ಇದೀಗ ಸತ್ತ ರಾಮಾನಂದ ಇನ್ನೂ ಕುಮಾರನಾಗಿದ್ದ. ವಯಸ್ಸು ಇಪ್ಪತ್ತನ್ನು ದಾಟಿದ್ದರೂ ರಾಯ ಮಹಾಶಯರು ಅವನ ಮದುವೆಗೆ ಉತ್ಸುಕರಾಗಿರಲಿಲ್ಲ. ಅವನ ಮಾನಸಿಕ ಶಾರೀರಿಕ ವಿಕಾಸಕ್ಕೆ ಕೃತ್ರಿಮ ಆತಂಕವನ್ನೊಡ್ಡುವ ಇಚ್ಛೆ ಅವರಿಗಿರಲಿಲ್ಲ. ಪುಣೆಗೆ ಕುದುರೆಜೂಜಿಗೆ ಹೋದಾಗ ರಾಮಾನಂದನು ಕುದುರೆಯ ಮೇಲಿಂದ ಬಿದ್ದು, ಲಖನೌಗೆ ಮರಳಿದ ಎರಡು ದಿನಗಳಲ್ಲಿಯೆ ತೀರಿಕೊಂಡ. ರಾಯ ಸಾಹೇಬರ ಆಶಾಮಂದಿರ ಕುಸಿದುಬಿದ್ದಿತು ಆದರೆ ಶೋಕಸಂತಾಪಗಳಿಗೆ ತುತ್ತಾಗುವಂತಹ ಪ್ರಾಣಿ ಅವರಲ್ಲ. ಇದಕ್ಕೆ ವೈರಾಗ್ಯವೆನ್ನಿರಿ, ಬೇಕಾದರೆ ಪ್ರೇಮಶೈಥಿಲ್ಯವೆನ್ನಿರಿ ಇಲ್ಲವೆ ಚಿತ್ತಸ್ಥೈರ್ಯವೆನ್ನಿರಿ. ಮೂರುನಾಲ್ಕು

ದಿನಗಳಲ್ಲಿಯೇ ಅವರ ಪುತ್ರಶೋಕ ಜೀವನದ ಅವಿಶ್ರಾಂತ ಕರ್ಮಧಾರೆಯಲ್ಲಿ ವಿಲೀನವಾಯಿತು.

ರಾಯರು ಅತ್ಯಂತ ರಸಿಕಮನುಷ್ಯ. ಕುದುರೆಸವಾರಿ-ಬೇಟೆಗಳಲ್ಲಿ ಹಾಗೂ ಸರೋದ (ಒಂದು ವಾದ್ಯ) ಸಿತಾರಗಳಲ್ಲಿ ಅವರಿಗೆ ಬಲು ಪ್ರೀತಿ ಸಾಹಿತ್ಯ ಮತ್ತು ರಾಜನೀತಿಗಳನ್ನು ಬಲ್ಲವರು. ವಯಸ್ಸು ಅರುವತ್ತರ ಮನೆಗೆ ಬಂದಿದ್ದರೂ ಈ ವಿಷಯಗಳಲ್ಲಿ ಉತ್ಸಾಹ ಕೊಂಚವೂ ಕಡಿಮೆ. ಯಾಗಿರಲಿಲ್ಲ. ಹತ್ತು ಹನ್ನೆರಡು ಜಾತಿಕುದುರೆಗಳು ಅವರ ಲಾಯದಲ್ಲಿದ್ದವು. ಅಲ್ಲದೆ ಎರಡು ಆನೆಗಳು, ಡಜನಿಗಿಂತ ಹೆಚ್ಚಾಗಿ ನಾಯಿಗಳು, ಗಿಡುಗ ಮೊದಲಾದ ಬೇಟೆಹಕ್ಕಿಗಳ ಮುಗಿಲದಂಡು ಎಲ್ಲಾ ಇದ್ದವು. ಅವರ ದಿವಾಣಖಾನೆ ಒಂದು ಶಸ್ತ್ರಾಲಯವೇ ಆಗಿತ್ತು ಅವರ ತಪ್ಪದ ಗುರಿ, ಪೋಲೋ ಬಯಲಿನಲ್ಲಿ ಅವರ ಚಪಲತೆ ಕೈಚಳಕಗಳನ್ನು ಕಂಡು ಜನ ಬೆರಳು ಕಚ್ಚಬೇಕು. ಅವರ ಸಂಗೀತದ ಸೂಕ್ಷ್ಮತತ್ತ್ವಗಳ ಅಭಿಜ್ಞತೆಗೆ ಒಳ್ಳೊಳ್ಳೆಯ ಗಾಯಕರು ಚಕಿತರಾಗುತ್ತಿದ್ದರೆ, ಕಾವ್ಯಕಲೆಯಲ್ಲಿಯ ಅವರ ಕೌಶಲಕ್ಕೆ, ಮಾರ್ಮಿಕತೆಗೆ ಕವಿಗಳು ಲಜ್ಜಿತರಾಗಬೇಕು ಸಾವಿರಾರು ವಚನಗಳು ಕವಿತೆಗಳು ಅವರಿಗೆ ಮುಖೋದ್ಗತವಾಗಿದ್ದವು; ಅವುಗಳನ್ನು ಮಾತಿನಲ್ಲಿ ಬಳಸುವ ಅಭಿರುಚಿಯೂ ಚೆನ್ನಾಗಿತ್ತು. ಹತ್ತು ಹನ್ನೆರಡು ವರುಷಗಳಿಂದ ಅವರು ರಾಜಕಾರಣದಲ್ಲಿ ಪ್ರವೇಶಿಸಿ ಶಾಸನಸಭೆಯಲ್ಲಿ ಪ್ರಥಮಶ್ರೇಣಿಯ ಸ್ಥಾನ ಪಡೆದಿದ್ದರು. ಯಾವಾಗಲೂ ನಿರ್ಭೀತರಾದ ಇವರಿಗೆ ಅಲ್ಲಿ ವಿಶೇಷ ಗೌರವವಿತ್ತು. ಮಾತನಾಡುವುದು ಕಡಿಮೆಯಾದರೂ— ಶಾಸನಸಭೆಯ ಹೊರಗೆ ಎಂದೂ ಅವರ ಧ್ವನಿ ಕೇಳುತ್ತಿರಲಿಲ್ಲವಾದರೂ— ಮಾತನಾಡಿದಾಗ ಒಳ್ಳೆಯ ಚೆನ್ನಾಗಿಯೇ ಮಾತನಾಡುತ್ತಿದ್ದರು. ಅವರ ಬುದ್ಧಿಚಮತ್ಕಾರ ಮತ್ತು ಜ್ಞಾನವಿಸ್ತಾರ ಜ್ಞಾನಶಂಕರರನ್ನು ಚಕಿತಗೊಳಿಸಿತ್ತು. ಈ ಸತ್ಸಂಗದಿಂದ ಅವರ ಕಣ್ಣುಗಳು ತೆರೆದವು. ತಮ್ಮ ಯೋಗ್ಯತೆಯ ಬಗ್ಗೆ, ಚತುರತೆಯ ಬಗ್ಗೆ ಅವರಿಗೆ ಬಹಳ ಹೆಮ್ಮೆಯಿತ್ತು. ಈ ಸಿದ್ಧಿಗಳು ಅದನ್ನು ಚೂರು ಚೂರು ಮಾಡಿದವು. ಮೊದಲಿನೆರಡು ವಾರ ರಾಯಸಾಹೇಬರ ಈ ಬಹುಜ್ಞತೆಗಾಗಿ ಅವರ ಮೇಲೆ ಜ್ಞಾನಶಂಕರರಲ್ಲಿ ಶ್ರದ್ಧೆ ಹುಟ್ಟಿತ್ತಾದರೂ ಮುಂದೆ ಬರುಬರುತ್ತ ಅಶ್ರದ್ಧೆಯುಂಟಾಯಿತು. ಇಪ್ಪತ್ತುನಾಲ್ಕು ತಾಸೂ

ತಮ್ಮ ಕೀಳ್ಮೆಯನ್ನೇ ನೆನೆಯುವುದು ಅಸಹ್ಯವಾಗಿತ್ತು. ಈಗ ರಾಯ ಸಾಹೇಬರ ಪ್ರತಿಯೊಂದು ವಿಷಯದಲ್ಲಿಯೂ ಕ್ಷುದ್ರವಿಲಾಸ ಕಾಣತೊಡಗಿತು. ಅವರ ಪ್ರತಿಯೊಂದು ವ್ಯವಹಾರವನ್ನೂ ತೀವ್ರ ವಿಮರ್ಶಾದೃಷ್ಟಿಯಿಂದ ನೋಡುವರು.

ಆದರೆ ಒಂದು ತಿಂಗಳು ಕಳೆದರೂ ಜ್ಞಾನಶಂಕರರು ಬನಾರಸಕ್ಕೆ ಮರಳುವ ಮಾತೆತ್ತಲಿಲ್ಲ. ಗಾಯತ್ರಿಯ ಕೋಮಲಭಾವ, ಆಕೆಯ ಮೃದುಲ ರಸಮಯವಾದ ಮಾತುಗಳು ಅವರ ಚಿತ್ತವನ್ನು ಸೆಳೆಯುತ್ತಿದ್ದವು. ಅವಳ ಅರಳಿದ ಲಾವಣ್ಯಮಯ ಸೌಂದರ್ಯವು ಅಜ್ಞಾತವಾಗಿ ಅವರ ಹೃದಯವನ್ನು ಸೂರೆಗೊಳ್ಳುತ್ತಲಿತ್ತು. ಪತಂಗದ ಹಾಗೆ, ಪರಿಣಾಮದ ಎಚ್ಚರವಿಲ್ಲದೆ, ಅದು ಆ ದೀವಿಗೆಯ ಬಳಿ ಮುಂಬರಿಯುತ್ತಿತ್ತು. ಗಾಯತ್ರಿ ಅವರಿಗೆ ಪ್ರೇಮಾಕಾಂಕ್ಷೆಯ. ಪ್ರೇಮಾನುರೋಧದ ಮೂರ್ತಿಯಾಗಿ ಕಾಣು-ತ್ತಿದ್ದಳು. ಈ ಭ್ರಮೆ ಅವರ ಲಾಲಸೆಯನ್ನು ಇನ್ನಷ್ಟು ಉತ್ತೇಜಿಸುತ್ತಿತ್ತು. ಮನೆಯಲ್ಲಿ ಹಿರಿಯರು ಮುದುಕಿಯರು ಯಾರೂ ಇರಲಿಲ್ಲ. ಅವರ ಆದರೋಪಚಾರವನ್ನು ಗಾಯತ್ರಿಯೇ ಮಾಡುತ್ತಿದ್ದಳು. ಆದರಲ್ಲಿಯ ಸ್ನೇಹ-ಅನುರಾಗಗಳಲ್ಲಿ ಜ್ಞಾನಶಂಕರರಿಗೆ ಪ್ರೇಮಾವೇಶದ ರಸಮಯ ಆನಂದವಾಗುತ್ತಿತ್ತು. ಬರಿ ಪ್ರೇಮವಾಸನೆಗಳ ಸುಖವನ್ನಲ್ಲ, ಗಾಯತ್ರಿಯ ಅತುಲ ಸಂಪತ್ತಿಯ ಸುಖವನ್ನೂ ಅವರ ಮನಸು ಅನುಭವಿಸುತ್ತಿತ್ತು.

ಜ್ಞಾನಶಂಕರರ ದೃಷ್ಟಿಯಲ್ಲಿ ಆತ್ಮಸಂಯಮಕ್ಕೆ ಮಹತ್ತ್ವ ಕಡಿಮೆ. ಸಮಯ ಮತ್ತು ನಿಯಮ ಮಾನವಚರಿತ್ರದ ಸ್ವಾಭಾವಿಕ ವಿಕಾಸಕ್ಕೆ ಬಾಧಕ ಎಂದು ಅವರ ವಿಚಾರ. ಚರಿತ್ರೋನ್ನತಿಗಾಗಿ ವಿವಿಧ ಪ್ರಕಾರದ ಪರಿಸ್ಥಿತಿಗಳು ಅನಿವಾರ್ಯ. ಪ್ರತಿಯೊಂದು ಅನುಭವವೂ ಚರಿತ್ರದ ಒಂದಿಲ್ಲೊಂದು ಅಂಗವನ್ನು ಪೋಷಿಸುವುದು. ಕ್ರೋಧ ಈರ್ಷೆಗಳಲ್ಲಿ, ಅಸತ್ಯ ಕಪಟಗಳಲ್ಲಿಯೂ ಬಹುಮೂಲ್ಯ ಶಿಕ್ಷಣದ ಅಂಕುರ ಹುದುಗಿರು ತ್ತದೆ. ಇಚ್ಛೆಗಳ ದಮನವೂ ಆತ್ಮಹತ್ಯೆಯೂ ಒಂದೇ. ಇದರಿಂದ ಚರಿತ್ರ ಸಂಕುಚಿತವಾಗುತ್ತದೆ. ಬಂಧನಗಳ ದಿನ ಅಲ್ಲ ಇದು. ಸಾಂಸಾರಿಕ ಉನ್ನತಿಯೇ ನಮ್ಮ ಅಭೀಷ್ಟ ಈ ಕಾಲದಲ್ಲಿ. ಅಭೀಷ್ಟಸಿದ್ಧಿಗೆ ಸಹಾಯಕ ವಾದ ಪ್ರತಿಯೊಂದು ಸಾಧನವೂ ಗ್ರಾಹ್ಯ. ಈ ವಿಚಾರಗಳು ಜ್ಞಾನಶಂಕರರ

ವಿವೇಕವನ್ನು ಕಳೆದಿದ್ದವು. ವರ್ತಮಾನ ಸ್ಥಿತಿಯ ಪ್ರಭಾವದಿಂದಾಗಿ ನಿಂದೆ ಉಪಹಾಸಗಳ ಅಂಜಿಕೆ ಮಾತ್ರ ಅವರಿಗಿತ್ತು. ಅದೂ ಮಾನಸಿಕ ದುರ್ಬಲತೆ ಯೆಂದು ಅವರ ತಿಳಿವಳಿಕೆ.

ಎಷ್ಟೋ ಸ್ತ್ರೀಯರಿಗೆ ಪುರುಷರ ಹೃದಯ ತೆರೆದಿಟ್ಟ ಪುಟವಾಗಿರುತ್ತದೆ. ಗಾಯತ್ರಿ ಅಂತಹರ ಪೈಕಿ ಅಲ್ಲ. ಆಕೆಯ ಗಂಡ ದುರಾಚಾರಿಯಾಗಿದ್ದ. ಆದರೂ ಅವನಲ್ಲಿ ಎಂದೂ ಸಂದೇಹಪಡಲಿಲ್ಲ. ಆತ ಸತ್ತು ಮೂರು ವರುಷ ಗಳು ಸಂದಿದ್ದರೂ ಆತನ ಸ್ಮೃತಿಯನ್ನು ಆಧ್ಯಾತ್ಮಿಕ ಶ್ರದ್ಧೆಯಿಂದ ಆರಾಧಿಸುತ್ತಿದ್ದಳು. ಅವಳ ನಿಷ್ಕಲಹೃದಯ ವಾಸನಾಯುಕ್ತ ಪ್ರೇಮದ ರಹಸ್ಯಗಳನ್ನು ಅರಿಯದು. ಆದರೆ ಸಗರ್ವತೆ ಅವಳ ಸ್ವಭಾವದ ಪ್ರಧಾನ ಅಂಗವಾಗಿತ್ತು. ಜ್ಞಾನಶಂಕರರು ಸುರೂಪಿ, ಸೌಮ್ಯ, ಮೃದುಮುಖದ ಮನುಷ್ಯ. ಗಾಯತ್ರಿ ಸರಳಭಾವದಿಂದ ಈ ಗುಣಗಳಿಗೆ ಮುಗ್ಧಳಾಗಿದ್ದಳು. ಅವರನ್ನು ತಮ್ಮನಂತೆ ತಿಳಿದಿದ್ದಳು. ಅವರಿಗಾಗಿ ಒಳ್ಳೊಳ್ಳೆಯ ತಿಂಡಿಗಳನ್ನು ಮಾಡಿ, ದಿನದಲ್ಲಿ ಹಲವು ಸಲ ಉಪಹಾರಕ್ಕಾಗಿ ಮನೆಯೊಳಗೆ ಕರೆಯು ತ್ತಿದ್ದಳು. ಧಾರ್ಮಿಕ ವೈಜ್ಞಾನಿಕ ವಿಷಯುಗಳಲ್ಲಿ ವಿಶೇಷ ಅಭಿರುಚಿ ಅವಳಿಗೆ. ಆ ವಿಷಯುಗಳನ್ನು ಕುರಿತು ಜ್ಞಾನಶಂಕರರೊಡನೆ ಮಾತನಾಡು ವುದರಲ್ಲಿ ಹಾರ್ದಿಕ ಆನಂದ ಅವಳಿಗಾಗುತ್ತಿತ್ತು. ತಂಗಿಯ ಗಂಡನೆಂಬ ನಾತೆಯಿಂದ ಸಲಿಗೆಯ ಚೇಷ್ಟೆಯನ್ನೂ ಅವಳು ಮಾಡುತ್ತಿದ್ದಳು; ನಗುತ್ತಿ ದ್ದಳು. ಬಿಗಿದ ಮೋರೆಯಿಂದ ಉದಾಸಳಾಗಿರುವುದು ಅವಳಿಗೆ ಗೊತ್ತಿಲ್ಲ.

ಈ ಸರಲತೆ ಜ್ಞಾನಶಂಕರರ ಮಲಿನ ದೃಷ್ಟಿಯಲ್ಲಿ ಬೇರೆಯೇ ಆಗು ತ್ತಿತ್ತು 'ಈ ಹಾಳೆದೆಯನ್ನು ತುಂಬು ಬಾ' ಎಂದು ಸಂಕೇತದಿಂದ ಗಾಯತ್ರಿ ನುಡಿಯುತ್ತಿರುವಂತೆ ಅವರಿಗೆನಿಸುವುದು. ಪ್ರೇಮಾಹ್ವಾನವನ್ನು ಅನಾದರಿಸುವುದು ಅವರಿಗಸಾಧ್ಯ. ಆದರೆ ಅವರ ಹೃದಯ ಗಾಯತ್ರಿಗೆ ನಿಮಂತ್ರಣವೀಯಲಿಲ್ಲ, ತನ್ನ ಪ್ರೇಮವನ್ನು ಅವಳಿಗೆ ಅರ್ಪಿಸಲಿಲ್ಲ.

ಗಾಯತ್ರಿ ಭೋಳೆ ನಿಜ, ಅಜ್ಞಾನಿ ನಿಜ. ಆದರೆ ಮೆಲ್ಲಮೆಲ್ಲನೆ ಜ್ಞಾನ- ಶಂಕರರೊಡನೆ ಅವಳ ಮನಸು ಹೊಂದಿಕೊಳ್ಳುತ್ತಲಿತ್ತು. ತಿಳಿಯದೆಯೆ ವಿಷ ಕುಡಿದರೂ ಆಗುವ ಪರಿಣಾಮ ಕಡಿಮೆಯೆ? ಅವರು ಹೊರಗಿಂದ ಬರುವುದಕ್ಕೆ ತಡವಾದರೆ ಅವಳಿಗೆ ಹುರು ಹುರು ಎನಿಸತೊಡಗುವುದು. ಯಾವ

ಕೆಲಸದಲ್ಲಿಯೂ ಮನಸು ಬೇಸರಿಸುವುದು. ಅಟ್ಟದ ಮೇಲೆ ನಿಂತು ದಾರಿ ನೋಡುವಳು. ಅವಳು ಮೊದಲು ವಿದ್ಯಾವತಿಯ ಎದುರಿನಲ್ಲಿ ಅವರೊಡನೆ ನಕ್ಕು ಕೆಲೆದು ಮಾತನಾಡುತ್ತಿದ್ದಳು, ಒಮ್ಮೊಮ್ಮೆ ಒಬ್ಬಳೇ ಅವರನ್ನು ಕಾಣುತ್ತಿದ್ದಳು; ಅವಳಿಗೆ ಏನೂ ಎನಿಸುತ್ತಿರಲಿಲ್ಲ. ಈಗ ಹಾಗಿರಲಿಲ್ಲ. ಅವಳ ಮಾತುಗಳು ಏಕಾಂತವನ್ನು ಅರಸುತ್ತಿದ್ದವು. ವಿದ್ಯಾವತಿಯ ಇರುವಿಕೆ ಇಬ್ಬರನ್ನೂ ಮೌನಗೊಳಿಸುತ್ತಿತ್ತು. ಮಾತುಗಳು ಈಗ ವೈಜ್ಞಾನಿಕ ಧಾರ್ಮಿಕ ಚರ್ಚೆಗಳಿಗೆ ಮಾತ್ರ ಮರ್ಯಾದಿತವಾಗಿರಲಿಲ್ಲ. ಸ್ತ್ರೀಪುರುಷರ ಪಾರಸ್ಪರಿಕ ಸಂಬಂಧದ ಮೀಮಾಂಸೆ ನಡೆಯುತ್ತಿತ್ತು. ಒಮ್ಮೊಮ್ಮೆ ಮಾರ್ಮಿಕ ಪ್ರಸಂಗವನ್ನೆದುರಿಸಬೇಕಾಗಿ ಬಂದು ಗಾಯತ್ರಿ ನಾಚಿ ತಲೆ ತಗ್ಗಿಸುತ್ತಿದ್ದಳು.

ಒಂದು ದಿನ ಸಂಜೆ ಗಾಯತ್ರಿ ತೋಟದಲ್ಲಿ ವಿರಾಮಾಸನದಲ್ಲಿ ಕುಳಿತು ಯೋಚಿಸುತ್ತಿದ್ದಳು. ನಿನ್ನೆ ಬಾಬುಗಳು ನನ್ನಮೇಲೆ ಸಿಟ್ಟುಗೊಂಡಿರಬಹುದು. ಆದರೆ ನನ್ನ ಮನಸು ಮಾತ್ರ, ಮದುವೆಯೆಂಬುದು ಕೇವಲ ಶಾರೀರಿಕ ಸಂಬಂಧ, ಸಾಮಾಜಿಕ ವ್ಯವಸ್ಥೆ ಎಂಬ ಮಾತನ್ನು ಈಗಲೂ ಒಪ್ಪುವುದಿಲ್ಲ. ಇಂದು ಮತ್ತೆ ಈ ಪ್ರಶ್ನೆಯನ್ನೇ ತೆಗೆಯುತ್ತೇನೆ.—ಅಷ್ಟರಲ್ಲಿ ಜ್ಞಾನಶಂಕರರು ಅಲ್ಲಿಯೇ ಬಂದರು.

"ಹೇಳಿ, ಎಲ್ಲಿಯಾದರೂ ಹೋಗಲು ಸಿದ್ಧರಿದ್ದೀರಾ ?" ಎಂದು ಗಾಯತ್ರಿ ಕೇಳಿದಳು.

"ಈವೊತ್ತು ಥಿಯಟ್ರಿಕಲ್ ಕಂಪನಿಯ ವಿವಿಧವಿನೋದಾವಳಿ ಇದೆ. ನಿಮಗೂ ಸ್ಥಳ ಕಾಯ್ದಿರಿಸಬೇಕೇ ಎಂದು ಕೇಳಲು ಬಂದೆ."

"ವಿದ್ಯೆಯನ್ನು ಕೇಳಿದಿರಾ ? ಬರುವಳೆ ?"

ಅಷ್ಟರಲ್ಲಿ ಮಾಯಾಶಂಕರನನ್ನು ಎತ್ತಿಕೊಂಡು ವಿದ್ಯಾವತಿ ಬಂದಳು.

"ಯಾಕೆ ವಿದ್ಯಾ, ಈವೊತ್ತು ನಾಟಕಕ್ಕೆ ಬರುತ್ತೀಯಾ ?" ಎಂದು ಗಾಯತ್ರಿ ಕೇಳಿದಳು.

"ಯಾರಾದರೂ 'ಹೋಗುವ ನಡೆ' ಎಂದರೆ ಬರುತ್ತೇನೆ ಇಲ್ಲದಿದ್ದರೆ ನನಗೇನು ಇಷ್ಟವಿಲ್ಲ." ಎಂದಳು ವಿದ್ಯೆ.

" ನಾನು ಕರೆಯುತ್ತೇನೆ. ನೀನು ಬರಲೇಬೇಕು. ಬಾಬೂಜಿ, ಸ್ಥಳ ಕಾಯ್ದಿರಿಸಿರಿ. " ಗಾಯತ್ರಿ ಎಂದಳು.

ರಾತ್ರಿ ಒಂಬತ್ತಕ್ಕೆ ಮೂವರೂ ಪಿಟನ್ ಗಾಡಿಯಲ್ಲಿ ಥಿಯೆಟರಿಗೆ ಹೋದರು. ಮಾಯೂನೂ ಜೊತೆಗಿದ್ದ. ಅರ್ಧದಾರಿಯಲ್ಲಿ ಅವನು ನೀರು ನೀರು ಎಂದು ಕೂಗಿಕೊಳ್ಳತೊಡಗಿದ.

" ಹುಡುಗನನ್ನು ಕರೆದುಕೊಂಡು ಬಂದಿದ್ದೀ— ಸಂಗಡ ನೀರು ತರ-ಬಾರದೇ ? ಈಗಲೇ ಹೀಗೆ, ಎರಡು ಗಂಟೆಯುವರೆಗೆ ಇನ್ನೇನು ಅವಸ್ಥೆಯೊ! " ಎಂದರು ಜ್ಞಾನಬಾಬು.

" ಎಲ್ಲಿ ಎಚ್ಚತ್ತಿರುತ್ತಾನೆ ? ಹೋದ ಕೂಡಲೇ ಮಲಗಿಬಿಡುತ್ತಾನೆ " ಎಂದಳು ಗಾಯತ್ರಿ.

" ತೊಡೆಯಮೇಲೆ ಆರಾಮವಾಗಿ ಮಲಗುವುದು ಸಾಧ್ಯವಿಲ್ಲ. ನಡು ನಡುವೆ ಎದ್ದೆದ್ದು ಅಳುತ್ತಾನೆ. ಇಡೀ ಸಭೆಯೇ ಬೇಸತ್ತೀತು. ಇದೊಳ್ಳೇ ಬಾಲಗಸೆಕಟ್ಟಿಕೊಂಡು ಬಂದಿರಿ ಎನ್ನುವರು ಜನ. " ಎಂದರು ಜ್ಞಾನಬಾಬು.

" ಗಾಡಿ ತಿರುಗಿ ಹೊಡೆಯುಲಿಕ್ಕೆ ಯಾಕೆ ಹೇಳುವುದಿಲ್ಲ? ನಾನು ಬರುವುದೇ ಇಲ್ಲ" ಎಂದು ವಿದ್ಯಾವತಿ ನುಡಿದಳು.

" ಇದನ್ನೆಲ್ಲ ಮೊದಲೇ ವಿಚಾರ ಮಾಡಬೇಡವೇ ? ಈಗ ತಿರುಗಿ ಹೋಗುವುದೆಂದರೆ ಬರುವುದಕ್ಕೆ ಹತ್ತುಗಂಟೆಯಾಗುತ್ತದೆ ಅರ್ಧ ನಾಟಕ ಮುಗಿದುಹೋಗಿರುತ್ತದೆ. ಅಲ್ಲಿಗೆ ಮುಟ್ಟಿದ ಮೇಲೆ, ಮನಸಿದ್ದರೆ ಮಯೂನನ್ನು ಗಾಡಿಯಲ್ಲೇ ಕೆಡವಿ ನಾಟಕ ನೋಡಬೇಕು, ಇಲ್ಲವೆ ತಿರುಗಿ ಹೋಗುವುದು ಸರಿ ಎನಿಸಿದರೆ ಹೋಗಬೇಕು. " ಎಂದರು ಜ್ಞಾನಶಂಕರರು.

ಥಿಯೆಟರು ಬಂದಿತು. ಬಹಳ ಜನ ಕೂಡಿತ್ತು. ಜ್ಞಾನಶಂಕರರು ಇಳಿದರು. ಗಾಯತ್ರಿ ಎಷ್ಟು ಆಗ್ರಹಪಡಿಸಿದರೂ ವಿದ್ಯೆ ಇಳಿದುಬರಲು ಒಪ್ಪಲಿಲ್ಲ. ಗಾಡಿಯವನನ್ನು ನೀರಿಗೆ ಕಳಿಸಿದಳು. ಜ್ಞಾನಶಂಕರರು ಓಡುತ್ತ ಬಂದು, " ಅತ್ತಿಗೆ, ಅವಸರ ಮಾಡಿರಿ. ಗಂಟೆಯಾಯಿತು. ಮಾಯೂಗೆ ನೀರು ಕುಡಿಸುವ ತನಕ ನೀವು ಒಳಗೆ ಹೋಗಿ ಕುಳಿತುಕೊಳ್ಳಿರಿ. ಸ್ಥಳವೇ ಸಿಗಲಿಕ್ಕಿಲ್ಲ" ಎಂದು ಅವಸರಪಡಿಸಿ, ಗಾಯತ್ರಿಯನ್ನು ಕರೆದುಕೊಂಡು ನಾಟಕಮಂದಿರವನ್ನು ಹೊಕ್ಕರು.

ವಿದ್ಯೆ ಈಗ ಬರುತ್ತಾಳೆ ಎಂದು ನಂಬಿದ್ದಳು ಗಾಯತ್ರಿ. ಎಷ್ಟೋ ಮಿನಿಟುಗಳು ಕಳೆದರೂ ಅವಳನ್ನು ಕಾಣಲಿಲ್ಲ. ಕೊನೆಗೆ ಜ್ಞಾನಶಂಕರರು ಬಂದು ಅವಳು ಹೊರಟುಹೋದಳೆಂದು ಹೇಳಿದಾಗ ಗಾಯತ್ರಿಯ ಮನಸು ಬಹಳ ಕ್ಷುಬ್ಧವಾಯಿತು. ಅವಳು ಕೋಪಿಸಿಕೊಂಡು ಹೋದಳೆಂದು ತಿಳಿದಳು. ತನ್ನನ್ನು ಕ್ಷುದ್ರಳೆಂದು, ನಿಷ್ಠುರಳೆಂದು ಮನದಲ್ಲಿ ಅಂದುಕೊಂಡಿರಬಹುದು. ತಾನೂ ಅವಳೊಂದಿಗೆ ಹೋಗಿಬಿಡಬೇಕಾಗಿತ್ತು. ಅವಳ ಜೊತೆಯಲ್ಲಿ ನಾಟಕ ನೋಡಲಿಕ್ಕೆ ಅಡ್ಡಿಯಿದ್ದಿಲ್ಲ ಅವಳು ಹೋದಮೇಲೆ ತಾನಿಲ್ಲಿರುವುದು ತೀರಾ ಅನುಚಿತ. ಆಳು ತೊತ್ತುಗಳೆಲ್ಲ ನಕ್ಕಾರು. ಅವರು ನಗುವುದು ಯಥಾ-ರ್ಥವೇ. ಅಪ್ಪ ಮನಸಿನೊಳಗೆ ಏನೆಂದುಕೊಳ್ಳುವರೊ ?

“ನಾನು ಹೊರಡುತ್ತೇನೆ. ಇಲ್ಲಿ ಕುಳಿತುಕೊಳ್ಳಲಾಗುವುದಿಲ್ಲ. ನನ್ನನ್ನು ಮನೆಗೆ ಕಳಿಸಿರಿ.” ಎಂದು ಜ್ಞಾನಶಂಕರರಿಗೆ ಹೇಳಿದಳು.

ಅವರು ಅಲ್ಲಿ ನಿಲ್ಲುವುದಕ್ಕೆ ಒತ್ತಾಯಿಸುವರೆಂದು ಆಕೆಗೆ ಸಂದೇಹ-ವಿತ್ತು. ಹೊರಟರೂ ಸಿಟ್ಟಿನಿಂದ ಹೊರಡುವರೆನಿಸಿತ್ತು. ಆದರೆ ಹಾಗಾ-ಗಲಿಲ್ಲ. ಜ್ಞಾನಶಂಕರರು ಸಂತೋಷದಿಂದಲೇ ಎದ್ದರು. ಹೊರಗೆ ಬಂದು ಬಾಡಿಗೆಯ ಬಗಿಯನ್ನು ಹಿಡಿದು, ಮನೆಗೆ ಹೊರಟರು. ಎಬ್ಬಿಸಿಕೊಂಡು ಬಂದುದಕ್ಕಾಗಿ ಗಾಯತ್ರಿ ಜ್ಞಾನಶಂಕರರನ್ನು ಕ್ಷಮೆಬೇಡಿದಳು. ಅವರು ಯಾವ ಉತ್ತರವನ್ನೂ ಕೊಡಲಿಲ್ಲ. ಅವರ ಮನದಲ್ಲಿ ಒಂದು ವಿಷಮ ಕಲ್ಪನೆ ಇಂದು ಮೂಡಿತ್ತು. ಈ ಸಮಯದಲ್ಲಿ ಅದನ್ನು ಕಾರ್ಯರೂಪಕ್ಕೆ ತರಲು ಸಕಲ ಶಕ್ತಿಗಳನ್ನೂ ಒಟ್ಟುಗೂಡಿಸುತ್ತಿದ್ದರು ಅವರ ವಿಕೃತ ಚೇಷ್ಟೆ ಪ್ರಜ್ವಲಿತವಾಯಿತು. ಕಣ್ಣುಗಳಿಂದ ಜ್ವಾಲೆ ಹೊರಡತೊಡಗಿದವು, ನೆತ್ತರು ಕುದಿಯತೊಡಗಿತು, ಉಸಿರು ವೇಗದಿಂದ ಆಡತೊಡಗಿತು. ಅವರು ಮುಂಡಿಯಿಂದ ಗಾಯತ್ರಿಯ ತೊಡೆಯನ್ನು ತಿವಿದರು. ಅವಳು ತಟ್ಟನೆ ಕಾಲು ಮುದುರಿಕೊಂಡಳು ಕುಚೇಷ್ಟೆಯ ಸಂಶಯ ಲೇಶಮಾತ್ರವೂ ಅವಳಿಗೆ ಬರಲಿಲ್ಲ. ಆದರೆ ಒಂದು ಕ್ಷಣದ ತರುವಾಯ ಜ್ಞಾನಶಂಕರರು ತಮ್ಮ ಉರಿಯುವ ಕೈಯಿಂದ ಅವಳ ಮುಂಗಯ್ಯನ್ನು ಹಿಡಿದು ಮೆಲ್ಲನೆ ಅದುಮಿದರು. ಗಾಯತ್ರಿ ಬೆಚ್ಚಿ, ಹಾವು ಕಚ್ಚಿತೋ ಎಂಬ ಹಾಗೆ, ಕೈ ಎಳೆದುಕೊಂಡು ಭಯಭೀತ ನೇತ್ರಗಳಿಂದ ಅವರನ್ನು ನೋಡಿದಳು. ಅವರ

ಮುಖದಲ್ಲಿ ಒಂದು ಸಂತಪ್ತ ಉಗ್ರತೆ, ಒಂದು ಪ್ರದೀಪ್ತ ದುಃಸಾಹಸ ಕಂಡಿತು. ಅವಳ ಚಿತ್ತ ಅಸ್ಥಿರವಾಯಿತು; ಕಣ್ಣಿಗೆ ಕತ್ತಲು ಬಂದಂತಾಯಿತು. ಮೈಯೆಲ್ಲ ಜೋರನೆ ಬೆವರಿತು ಕಾತರನೇತ್ರಗಳಿಂದ ಹೊರಕ್ಕೆ ಬಾಗಿದಳು. ಮತ್ತೊಮ್ಮೆ ಅವರ ಕಡೆ ನೋಡುವ ಸಾಹಸ ಆಗಲಿಲ್ಲ ಅವಳಿಗೆ. ಅವಳ ಕ್ರೋಧವೂ ಶಾಂತವಾಯಿತು. ಅವಳು ಜ್ಞಾನಶೂನ್ಯಳಾದಳು. ಎಲ್ಲ ಮನೋವೇಗ ಶಿಥಿಲವಾಗಿಬಿಟ್ಟಿತು. ಕೇವಲ ಆತ್ಮವೇದನೆಯು ಜ್ಞಾನ ಅವಳ ಹೃದಯವನ್ನು ಕರಗಸವಂತೆ ಕೊರೆಯುತ್ತಿತ್ತು. ತನಗೆ ಜೀವಕ್ಕಿಂತ ಪ್ರಿಯವಾದ, ತನ್ನ ಮಾನರಕ್ಷಕವಾದ, ತನ್ನ ಆತ್ಮಗೌರವದ ಪೋಷಕವಾದ, ತನ್ನ ಜೀವನದ ಅವಲಂಬನವಾದ ವಸ್ತುವಿನ ಲೂಟಿಯಾಯಿತು! ತಾನಿನ್ನು ಯಾರಿಗೂ ಮೋರೆ ತೋರಿಸಲು ತಕ್ಕವಳಲ್ಲ ಎಂದೆನಿಸಿತು ಅವಳಿಗೆ. ತನ್ನ ಅಪಮಾನದ ಈ ಬಾಹ್ಯಸ್ವರೂಪದ ಕಡೆಗೆ ಇದುವರೆಗೆ ಅವಳ ಧ್ಯಾನ ಹೋಗಿರಲಿಲ್ಲ. ಈಗ ಅವಳಿಗೆ ಎನಿಸಿತು—ಇದು ತನ್ನ ಆತ್ಮಿಕಪತನ ಮಾತ್ರವೇ ಅಲ್ಲ, ಇದು ತನ್ನ ಆತ್ಮವನ್ನು ಮಾತ್ರ ಕಲುಷಿತಗೊಳಿಸಲಿಲ್ಲ, ತನ್ನ ಬಾಹ್ಯ ಪ್ರತಿಷ್ಠೆಯನ್ನೂ ಹಾಳು ಮಾಡಿತು. ಈ ಅವಗತಿ ಅವಳ ಮುಳುಗುವ ಹೃದಯವನ್ನು ನಿಲ್ಲಿಸಿತು.

ಗಾಯತ್ರಿ ಸ್ವಲ್ಪ ಸಾವರಿಸಿಕೊಂಡಳು. ಸಜಲ ನೇತ್ರಗಳಿಂದ ಜ್ಞಾನ ಶಂಕರರ ಕಡೆಗೆ ನೋಡಿದಳು. 'ನೀವು ಮಾಡಿದುದಕ್ಕೆ ದೇವರು ಪ್ರತಿಫಲ ಕೊಡುತ್ತಾನೆ, ಆದರೆ ಸೌಜನ್ಯದ ಅಲ್ಪಾಂಶವಾದರೂ ಇದ್ದರೆ, ನನ್ನ ಲಜ್ಜೆಯನ್ನು ಕಾಯಿರಿ. ಸತೀತ್ವವಂತೂ ಹೋಯಿತು, ಲೋಕಸಮ್ಮಾನವನ್ನು ರಕ್ಷಿಸಿರಿ' ಎಂದು ಹೇಳಲು ಬಯಸಿದಳು. ಶಬ್ದಗಳು ಹೊರಡಲಿಲ್ಲ; ಕಂಬನಿಯ ಹೊಳೆಯಲ್ಲಿ ವಿಲೀನವಾದವು.

ತಾನು ಪೆಟ್ಟುತಿಂದೆನೆಂದು ಜ್ಞಾನಶಂಕರರಿಗೂ ಗೊತ್ತಾಯಿತು. ತನ್ನ ಉದ್ವಿಗ್ನತೆ ಎಲ್ಲವನ್ನೂ ಹಾಳುಮಾಡಿತು. ಇದುವರೆಗೆ ತಮ್ಮ ಅಧೋಗತಿಗಾಗಿ ಅವರಿಗೆ ನಾಚಿಕೆಯಾಗುತ್ತಿರಲಿಲ್ಲ. ಆದರೆ ಗಾಯತ್ರಿಯ ಬಿಕ್ಕಳಿಕೆಯನ್ನು ಕೇಳಿ ಅವರ ಹೃದಯಕ್ಕೆ ಆಘಾತವಾಯಿತು. ಅಂತರಾತ್ಮ ಜಾಗ್ರತವಾಯಿತು. ನಾಚಿಕೆಯಿಂದ ತಲೆ ಬಾಗಿತು. ತಮ್ಮ ಪಾಪದ ಅಧಮತೆಯು ಅರಿವಾಯಿತು. ಗ್ಲಾನಿ ಅನುತಾಪಗಳ ಶಬ್ದಗಳೂ ಬಾಯಿತನಕ ಬಂದವು.

ಆದರೆ ವ್ಯಕ್ತವಾಗಲಿಲ್ಲ. ಗಾಯತ್ರಿಯ ಕಡೆಗೆ ನೋಡಲು ಸಾಹಸವಾಗಲಿಲ್ಲ. ಆತ್ಮವೇದನೆ ಕಣ್ಣೀರಾಗಿ ಹರಿಯಿತು. ಮನೆ ತಲುಪುವವರೆಗೂ ಇಬ್ಬರೂ ಕಣ್ಣೀರಿಡುತ್ತಿದ್ದರು.

ಈ ದುರ್ಘಟನೆಯ ಉತ್ಪತ್ತಿ-ಕಾರಣಗಳನ್ನು ಕುರಿತು, ಕಣ್ಣೀರು ನಿಂತಮೇಲೆ ಗಾಯತ್ರಿ ವಿಚಾರ ಮಾಡತೊಡಗಿದಳು. ಈ ವಿಷಯದಲ್ಲಿ ತಾನು ಸರ್ವಥಾ ನಿರಪರಾಧಿನಿಯಲ್ಲ ಎಂದು ಅವಳಿಗೆ ತಿಳಿಯಿತು. ತನ್ನ ದೌರ್ಬಲ್ಯದ ನಂಬುಗೆ ಇಲ್ಲದಿದ್ದರೆ ಜ್ಞಾನಶಂಕರರು ಇಂತಹ ದುಃಸಾಹಸ ಮಾಡುತ್ತಿರಲಿಲ್ಲ. ತಾನು ಅವರೊಡನೆ ಆಡುತ್ತಿದ್ದ ಮಾತುಗಳು ನೆನಪಾದವು. ಏಕಾಂತದಲ್ಲಿ ಆಡತಕ್ಕ ವಿಷಯಗಳ ಕಡೆಗೇ ತನ್ನೊಲವಿತ್ತು. ತನ್ನ ಪತಿಪ್ರೇಮ ಸಡಿಲಾಗಿಹೋಗಿದೆ, ಇಲ್ಲದಿದ್ದರೆ ಈ ವಿಷಯಗಳ ಸೆಳೆತದಿಂದ ತಾನು ಉಳಿದುಕೊಳ್ಳುತ್ತಿದ್ದಳು ಎಂದು ಅವಳೆಂದುಕೊಂಡಳು. ಅವಳು ಅಧೀರಳಾಗಿ ಎದ್ದು ತನ್ನ ಗಂಡನ ಚಿತ್ರದ ಎದುರು ನಿಂತಳು. ಪತಿದೇವನ ಎದೆಯಿಂದ ನೆತ್ತರು ಹರಿಯುತ್ತಿರುವಂತೆ ಕಂಡಿತವಳಿಗೆ. 'ಇದು ನಿನ್ನ ಕುಟಿಲತನದ ಗಾಯ. ನಿನ್ನ ಪಾವಿತ್ರ್ಯ—ಸತ್ಯತೆಗಳು ನನಗೆ ಕವಚಗಳಾಗಿದ್ದವು. ಅದಿಂದು ಕಳಚಿಬಿದ್ದಿತು; ಘಾತಕ ಅಸ್ತ್ರವು ನನ್ನ ಹೃದಯದಲ್ಲಿ ನಟ್ಟಿತು. ನಿನ್ನ ಸತೀತ್ವದ ಅಭಿಮಾನ ನನಗಿತ್ತು; ಅದಿಂದು ಪುಡಿಪುಡಿಯಾಯಿತು. ಸದಾ ನನ್ನ ಹೆಗಲಮೇಲಿರುತ್ತಿದ್ದ ಪ್ರೇಮದ ಕೈಯೇ ಕತ್ತು ಹಿಸುಕಿತು. ನನ್ನ ನಿನ್ನ ಸಂಬಂಧ ಇಂದಿಗೆ ಹರಿಯಿತು. ನಾನು ನಿನ್ನ ಗಂಡನಾಗಿದ್ದುದನ್ನು ಮರೆತುಬಿಡು' ಎಂದು ಅವನು ತನಗೆ ನುಡಿಯುತ್ತಿದ್ದಂತೆ ಭಾಸವಾಯಿತು. ಭಯದಿಂದ ಕೈಕಾಲುಗಳ ನರಸತ್ತು ಅವಳು ಚೀರಿಕೊಂಡು ನೆಲದಮೇಲೆ ಬಿದ್ದುಬಿಟ್ಟಳು.

ಕೆಲಹೊತ್ತು ಅವಳಿಗೆ ಪ್ರಜ್ಞೆಯಿರಲಿಲ್ಲ. ಎಚ್ಚತ್ತಾಗ, ವಿದ್ಯಾವತಿ, ದಾಸದಾಸಿಯರು ನೆರೆದಿದ್ದರು, ಡಾಕ್ಟರರನ್ನು ಕರೆತರಲು ಆಳನ್ನು ಕಳಿಸುತ್ತಿದ್ದರು. ಅವಳು ಕಣ್ದೆರೆದುದನ್ನು ಕಂಡು ವಿದ್ಯೆ ಹಾರಿಹೋಗಿ ಅವಳ ಕೊರಳಿಗೆ ತಳಿಕೆಬಿದ್ದಳು. "ಅಕ್ಕಾ, ನಿನಗೇನಾಗಿತ್ತೆ? ಹಿಂದೆಂದೂ ಹೀಗೆ ಆಗಿದ್ದಿಲ್ಲವಲ್ಲ?" ಎಂದಳು.

ಅಂದಿನ ಘಟನೆಯನ್ನೆಲ್ಲ ವಿದ್ಯೆಗೆ ಹೇಳಿಬಿಡಬೇಕು ಎಂದೊಮ್ಮೆ ಗಾಯತ್ರಿಗೆನಿಸಿತು. ಅವಳ ಎದೆಯಮೇಲೆ ಒಂದು ಭಾರ ಹೇರಿದಂತಿತ್ತು. ಅದನ್ನು ಹಗುರುಮಾಡಿಕೊಳ್ಳಲು ಅವಳಿಚ್ಛಿಸುತ್ತಿದ್ದಳು. ಜ್ಞಾನಶಂಕರರನ್ನು ವಿದ್ಯೆಯ ದೃಷ್ಟಿಯಲ್ಲಿ ಕೆಡಹುವುದೂ ಅಭೀಷ್ಟವಾಗಿತ್ತು. ಅದರಿಂದ ತನ್ನ ಅಪಮಾನವೂ ಆಗುತ್ತಿತ್ತು. ಆದರೂ ಜ್ಞಾನಶಂಕರರನ್ನು ಲಜ್ಜಿತಗೊಳಿಸುವುದಕ್ಕಾಗಿ ನಿಂದಿತಗೊಳಿಸುವುದಕ್ಕಾಗಿ ಅಷ್ಟು ಬೆಲೆ ತೆರಲು ಅವಳು ಸಿದ್ಧಳಾಗಿದ್ದಳು. ಆದರೆ ಮಾತು ತುಟಿವರೆಗೆ ಬಂದು ಹಿಂದಿರುಗಿತು.

" ನಾಳೆ ಇಲ್ಲ ನಾಡದು ಹೋಗಬೇಕೆಂದು ಹಂಬಲವಾಗಿದೆ " ಎಂದಳು.

' ಇಷ್ಟು ಬೇಗ! ನಾನಿರುವ ತನಕವಾದರೂ ಇರಬೇಕು " ಎಂದಳು ವಿದ್ಯಾವತಿ.

" ಇಲ್ಲ. ಇನ್ನು ನನಗಿಲ್ಲಿ ಸೊಗಸುವುದಿಲ್ಲ ಅಲ್ಲಿಯೂ ಕೆಲಸಗಳಿವೆ "

ಗಾಯತ್ರಿ ಎರಡು ದಿನ ಹೇಗೋ ಕಳೆದಳು. ಜ್ಞಾನಶಂಕರರೊಡನೆ ಮಾತನಾಡುವ ಪ್ರಸಂಗ ಬರಲಿಲ್ಲ. ಮೂರನೆಯ ದಿನ ಅವಳು ಹೊರಟಳು. ರಾಯಸಾಹೇಬರು ನಿಲ್ದಾಣಕ್ಕೆ ಕಳಿಸಲು ಹೋಗಿದ್ದರು. ಜ್ಞಾನಶಂಕರರೂ ಇದ್ದರು. ಗಾಯತ್ರಿ ಗಾಡಿಯಲ್ಲಿ ಕುಳಿತಳು. ರಾಯಸಾಹೇಬರು ತೆರತೆರದ ಹಣ್ಣುಗಳನ್ನು ಕೊಂಡುಕೊಂಡು—ಮಗಳು ಬೇಡಬೇಡವೆಂದರೂ—ಗಾಡಿಯಲ್ಲಿ ಒಟ್ಟುತ್ತಿದ್ದರು. ಜ್ಞಾನಶಂಕರರು ಬೆಂಚಿನಮೇಲೆ ಉದಾಸೀನರಾಗಿ ಕುಳಿತಿದ್ದರು. ಅವರನ್ನು ಕಂಡು ಗಾಯತ್ರಿ ಮರುಗಿದಳು. ಅಗಲುವಾಗ ನಾವು ಸಹೃದಯರಾಗುತ್ತೇವೆ. ಹೋಗುವಾಗ ಯಾರ ಮೇಲಾದರೂ ಋಣ ಬಿಟ್ಟು ಹೋಗುತ್ತೇವೆ, ಆದರೆ ಇಟ್ಟುಕೊಂಡು ಹೋಗಲಿಚ್ಛಿಸುವುದಿಲ್ಲ. ಗಾಡಿ ಕೂಗಿತು. ಜ್ಞಾನಶಂಕರರು ಚಮಕಿತರಾಗಿ ಬೆಂಚಿನಿಂದೆದ್ದು ಗಾಯತ್ರಿಯ ಎದುರಿಗೆ ಹೋಗಿ, ಲಜ್ಜಾಪೂರ್ಣವಾದ ಬೇಡಿಕೊಳ್ಳುವ ದೃಷ್ಟಿಯಿಂದ ನೋಡಿದರು. ಕಣ್ಣುಗಳಲ್ಲಿ ನೀರು ತೂರುತ್ತಿತ್ತು. ಪಶ್ಚಾತ್ತಾಪದ ಸಜೀವ ಮೂರ್ತಿಯಾಗಿದ್ದರು ಗಾಯತ್ರಿಯೂ ಏನೋ ಹೇಳಬೇಕೆಂದಿದ್ದಳು. ಆದರೆ ಗಾಡಿ ಹೊರಟುಬಿಟ್ಟಿತು. ಜ್ಞಾನಶಂಕರರ ವಿನಯಮೂರ್ತಿ ದಾರಿಯುದ್ದಕ್ಕೂ ಅವಳ ಕಣ್ಮುಂದೆ ಸುಳಿದಾಡುತ್ತಿತ್ತು.

ಗಾಯತ್ರಿ ಹೊರಟುಹೋದ ಬಳಿಕ ಜ್ಞಾನಶಂಕರರಿಗೂ ಅಲ್ಲಿರುವುದು ಕಷ್ಟವಾಯಿತು. ಸೌಭಾಗ್ಯವು ಅವರನ್ನು ಗಾಳಿಗುದುರೆಯಮೇಲೆ ಋದ್ಧಿ ಸಿದ್ಧಿಗಳ ಸ್ವರ್ಗಕ್ಕೆ ಒಯ್ಯುತ್ತಲಿತ್ತು. ಆದರೆ ಒಂದು ಪೆಟ್ಟಿಗೇ ಮಿನುಗು ತ್ತಿದ್ದ ತಾರೆ ಅದೃಶ್ಯವಾಯಿತು. ಪ್ರಾಣಪೋಷಕವಾದ ಆ ವಾಯು, ವಿಶಾಲವಾದ ಆ ನಭೋಮಂಡಲ, ಸುಖದವಾದ ಕಾಮನೆಗಳು ಎಲ್ಲವೂ ಲುಪ್ತವಾದವು. ಅವರು ತಿರುಗಿ ಅದೇ ಕಗ್ಗತ್ತಲೆಯಲ್ಲಿ ನಿರಾಶರಾಗಿ, ವಿಡಂಬಿತರಾಗಿ ಬಿದ್ದಿದ್ದರು. ರಾಯಸಾಹೇಬರು ಮದುವೆಗಾಗಿ ಹಾತೊರೆ ದಿದ್ದಾರೆ, ಅವರ ದುರ್ಬಲ ಕ್ರೋಧವು ದಿನದಿನಕ್ಕೆ ಅದಮ್ಯವಾಗುತ್ತಲಿದೆ ಎಂದು ಲಕ್ಷಗಳಿಂದ ಅವರಿಗೆ ಎನಿಸುತ್ತಿದ್ದಿತು. ರಾಯಸಾಹೇಬರ ಇಂದ್ರಿಯ ಲೋಲುಪತೆಗಾಗಿ ಕ್ಷುದ್ರತನಕ್ಕಾಗಿ ಅವರ ಮನಸು ರೇಗಾಡುತ್ತಿತ್ತು. ಒಮ್ಮೊಮ್ಮೆ ಕೆಟ್ಟಿಂದು ಬಗೆಯಲು ತಮಗೆ ಅಧಿಕಾರವಿಲ್ಲವೆಂದು ಸಮಾಧಾನ ಹೇಳಿಕೊಳ್ಳುತ್ತಿದ್ದರು. ಆದರೆ ಈ ಉದ್ವೇಶದಿಂದ ವಿಚಾರಗಳನ್ನು ಹಿಂದೆಗೆ ಯಿಸುವ ಪ್ರಯತ್ನವು ಒಂದು ಪ್ರತಿಕ್ರಿಯೆಯ ರೂಪವನ್ನು ತಾಳುತ್ತಿತ್ತು. ಅದರ ಪ್ರವಾಹ ಧೈರ್ಯ-ಸಂತೋಷಗಳ ಒಡ್ಡನ್ನು ಒಡೆದುಹಾಕುತ್ತಿತ್ತು. ಈ ಅತುಲ ಸಂಪತ್ತಿ ತಮ್ಮ ಕೈಗೆ ಯಾವಾಗ ಬಂದೀತೆಂಬ ಕಲ್ಪನಾ ಸುಖ ದಲ್ಲಿಯೇ ಅವರು ನಿತ್ಯವೂ ಮುಳುಗಿರುತ್ತಿದ್ದರು. ಆ ಶುಭ ಮುಹೂರ್ತ ಕ್ಕಾಗಿ ಅವರ ಹೃದಯವು ತಳಮಳಿಸುತ್ತಿತ್ತು. ಹೆಚ್ಚಾಗಿ, ಎಷ್ಟೋ ರಾತ್ರಿ ಅವರು ನಿದ್ದೆ ಮಾಡದೆ ಆ ಸುಖಸ್ವಪ್ನವನ್ನೇ ಕಾಣುತ್ತಿದ್ದರು. ತಿರುಗಾಡು-ವುದರಲ್ಲಿ ಸೊಗಸಿಲ್ಲದಾಗಿ ತಮ್ಮ ಕೋಣೆಯಲ್ಲಿಯೇ ಬಿದ್ದುಕೊಂಡಿರುತ್ತಿದ್ದರು. ಇತ್ತ ಆಶೆ, ಇತ್ತ ಭಯ. ಈ ಅವಸ್ಥೆ ಅವರಿಗೆ ಅಸಹ್ಯವಾಯಿತು. ಈ ಇತ್ತಿಟ್ಟನಲ್ಲಿಯೇ ಜ್ಯೇಷ್ಠ ಕಳೆದು ಆಷಾಢ ಕಾಲಿಟ್ಟಿತು

ಪುತ್ರಶೋಕದಿಂದಾಗಿ ರಾಯಸಾಹೇಬರು ಗುಡ್ಡಕ್ಕೆ ಹೋಗುವುದು ತಡವಾಗಿತ್ತು. ಮೊದಲ ಹನಿ ಉದುರುತ್ತಲೂ ಅವರು ಪಯಣದ ಏರ್ಪಾಡಿಗೆ ತೊಡಗಿದರು. ಜ್ಞಾನಶಂಕರರಿಗೆ ಈಗ ತಡೆಯುವುದಕ್ಕಾಗಲಿಲ್ಲ. ಯಾರು ಬಲ್ಲರು—ನೈನಿತಾಲದಲ್ಲಿಯೇ ಯಾವಳೊಬ್ಬ ನವವಿಚಾರದ ಲೇಡಿಯನ್ನು ಮದುವೆಯಾಗಿಬಿಟ್ಟರೆ, ಇಲ್ಲಿ ಯಾರಿಗೂ ಗೊತ್ತಾಗಲಿಕ್ಕೇ ಇಲ್ಲ. ಎಂದು ಯೋಚಿಸಿದರು. ಈ ಸಂದೇಹವನ್ನು ದೂರ ಮಾಡಿಕೊಳ್ಳಲು ನಿಶ್ಚಯಿಸಿದರು.

ಸಂಜೆಯಾಗಿತ್ತು. ಮನಸು ಗಟ್ಟಿಮಾಡಿಕೊಂಡು ಅವರು ರಾಯ-ಸಾಹೇಬರ ಕೋಣೆಗೆ ಹೋದರು. ಜ್ಞಾನಶಂಕರರು ಉತ್ಸುಕರಾಗಿರುವುದನ್ನು ಕಂಡು ರಾಯಸಾಹೇಬರು, ಇವನೇನೋ ಹೇಳಬೇಕೆಂದಿದ್ದಾನೆ, ಸಂಕೋಚದಿಂದ ಸುಮ್ಮನಿದ್ದಾನೆ ಎಂದು ಅರಿತುಕೊಂಡರು. " ಏನಾದರೂ ಹೇಳುವ-ದಿದ್ದರೆ ಹೇಳಿರಿ, ನನಗೆ ಪುರಸತ್ತಿದೆ " ಎಂದು ತಾವಾಗಿ ನುಡಿದರು.

ಜ್ಞಾನಶಂಕರರು ಗೊಂದಲದಲ್ಲಿ ಸಿಲುಕಿ, ಕೊನೆಗೆ ಹಿಂಜರೆಯುತ್ತ ಮಾತನಾಡಿದರು: "ಅಭದ್ರ ಮಾತು, ಆಡುವುದಕ್ಕೇ ನಾಚಿಕೆಯಾಗುತ್ತದೆ."

" ನನಗೆ ತಿಳಿಯಿತು. ನೀವು ಹೇಳಬೇಕಾದ ಆಗತ್ಯವಿಲ್ಲ" ರಾಯ-ಸಾಹೇಬರು ಹೇಳಿದರು, " ಹಾರಿಕೆಯ ಮಾತು ಕೇಳಿ ನೀವು ಸಂದೇಹಕ್ಕೆ ಒಳಗಾಗಿದ್ದೀರಿ. ಆದರಲ್ಲಿ ಹುರುಳಿಲ್ಲವೆಂದು ನಾನು ಭರವಸೆ ಕೊಡುತ್ತೇನೆ. ತಪ್ಪು ತಿಳಿದುಕೊಳ್ಳಬೇಡಿ—ಹಾರುಸುದ್ದಿಗಳಿಂದ ನೀವು ಎಷ್ಟು ವ್ಯಗ್ರರಾಗುವುದು ನನ್ನ ದೃಷ್ಟಿಯಲ್ಲಿ ನಿಮ್ಮ ಗೌರವವನ್ನು ಹೆಚ್ಚಿಸುವುದಿಲ್ಲ. ನಾನು ಮದುವೆಯ ನಿಶ್ಚಯವನ್ನೇ ಮಾಡಿದ್ದೇನೆಂದು ತಿಳಿಯಿರಿ. ಆದರೆ ಅವಳಲ್ಲಿ ಸಂತತಿಯಾದೀತು, ಆದರೂ ಅದು ಗಂಡಾದೀತು, ಗಂಡಾದರೂ ಬದುಕೀತು ಎಂದು ಹೇಳಲಾಗುವುದಿಲ್ಲ. ಆದರೂ ಮಾಯಾಶಂಕರ ಇನ್ನೂ ಚಿಕ್ಕ ಹುಡುಗ. ಅವನ ಹಣೆಯಲ್ಲಿ ವಿಧಿ ಏನು ಬರೆದಿದ್ದಾನೋ ನನಗೂ ಗೊತ್ತಿಲ್ಲ, ನಿಮಗೂ ತಿಳಿಯದು. ಅವನು ವಯಸ್ಸಿಗೆ ಬಂದು ನನ್ನ ಸೊತ್ತಿನ ಉತ್ತರಾಧಿಕಾರಿಯಾಗುವನೆಂದೂ ತಿಳಿಯಿರಿ. ನೀವು ಅಪೇಕ್ಷಿಸಿದಷ್ಟು ಅವನು ಕರ್ತವ್ಯನಿಷ್ಠ, ಸಚ್ಚರಿತ್ರ ಆಗುವುದು ಆವಶ್ಯಕವಲ್ಲ ಒಂದುವೇಳೆ ಅವನು ತಿಳಿವಳಿಕೆ ಬಂದವನಾಗಿದ್ದರೆ, ಈ ಸಂದೇಹಗಳು ಅವನ ಮನಸಿನಲ್ಲಿ ಹುಟ್ಟಿದ್ದರೆ ಕ್ಷಮ್ಯ ಎಂದು ನಾನೆಣಿಸುತ್ತಿದ್ದೆ. ಆದರೆ ನಿಮ್ಮಂತಹ ಬುದ್ಧಿವಂತ ಮನುಷ್ಯರು ಬುಡವಿಲ್ಲದ ಕಲ್ಪಿತ ಸಂಭಾವ್ಯಕ್ಕಾಗಿ ಚಡಪಡಿಸುವುದು ವಿಷಾದಕರ. "

ಈ ಮಾತಿನ ಮೊದಲ ಭಾಗದಿಂದ ಜ್ಞಾನಶಂಕರರಿಗೆ ಅಸಂತೋಷವಾಗಿತ್ತು. ಕೊನೆಯ ಭಾಗವನ್ನು ಕೇಳಿ ನಿರಾಶೆಯಾಯಿತು. ಈ ಚರ್ಚೆ ಇವರಿಗೆ ಸೇರುವುದಿಲ್ಲ, ಯುಕ್ತಿಯಿಂದ ತಮ್ಮನ್ನು ಸಮಾಧಾನಪಡಿಸಲು ಹವಣಿಸುತ್ತಿದ್ದಾರೆ, ನಿಜವಾಗಿ ಮದುವೆಯಾಗಲು ನಿಶ್ಚಯಿಸಿದ್ದಾರೆ ಎಂದು

ಅವರ ತಿಳಿವಳಿಕೆಯಾಯಿತು. ಅವರ ಗೌರವಶೀಲ ಹೃದಯ ಪ್ರತ್ಯುತ್ತರ ಕೊಡಲು ಹಾತೊರೆಯಿತು; ಆದರೆ ಅವರು ತಡೆದುಕೊಂಡರು.

ತಾವಾಡಿದ ಮಾತಿಗಾಗಿ ರಾಯಸಾಹೇಬರಿಗೂ ಖೇದವೆನಿಸಿತು. ಜ್ಞಾನಶಂಕರರ ಸಮಾಧಾನಕ್ಕಾಗಿ ಆ ಮಾತು ಈ ಮಾತು ಆಡತೊಡಗಿದರು. ನೈನಿತಾಲದ ವಿಷಯವೂ ಬಂದಿತು. ಜೊತೆಗೆ ನೀವೂ ಬರಬೇಕೆಂದು ಕರೆದರು. ಜ್ಞಾನಶಂಕರರು ಒಪ್ಪಿದರು. ಅದರಲ್ಲಿ ಎರಡು ಲಾಭಗಳಿದ್ದವು. ಒಂದು : ರಾಯಸಾಹೇಬರನ್ನು ಕಣ್ಣ ಕಾವಲಿನಲ್ಲಿಡಬಹುದು. ಇನ್ನೊಂದು : ಉಚ್ಚಾಧಿಕಾರಿಗಳಮೇಲೆ ತಮ್ಮ ಯೋಗ್ಯತೆಯ ಮುದ್ರೆಯೊತ್ತಬಹುದು. ರಾಯಸಾಹೇಬರ ಶಿಫಾರಸಿನಿಂದ ತಮಗೆ ಉಚ್ಚಪದ ದೊರಕಲೂಬಹುದು.

## ೧೧

ಗೌಸಖಾನನಮೇಲೆ ವಿಪತ್ತು ಬರುವಂತೇನು ಊರವರು ಮಾಡಿರಲಿಲ್ಲ. ಜ್ವಾಲಾಸಿಂಹರು ತನ್ನ ವಿಷಯಲ್ಲಿ ಹೇಳುವುದು ಕೇಳುವುದು ನಡೆಸಿದುದೇ ಅವನ ಮನಸನ್ನು ಕೆರಳಿಸಲು ಸಾಕಾಯಿತು. ಈ ಕಾಡು ಹುಂಬ ಡಿಪ್ಟಿಸಾಹೇಬರಿಗೆ ಏನು ಮಾಟಮಾಡಿದನೋ, ಅವರ ರೀತಿಯೇ ಬೇರೆಯಾಗಿಬಿಟ್ಟಿದೆ ಎಂದು ಗುಮಾಸ್ತರು, ಪೇದೆಗಳು ಎಲ್ಲರೂ ಚಕಿತ-ರಾಗಿದ್ದರು. ಯಾವುದನ್ನೂ ಬಿಟ್ಟಿಯಾಗಿ ತರುವಂತಿಲ್ಲ; ತಾವಿನ್ನು ಬದುಕಿದಂತೆಯೆ ಸರಿ. ತಮಗೆ ಭತ್ತೆಯಾದರೂ ಅಷ್ಟು ಸಿಕ್ಕುತ್ತದೆಯೆ ? ಇಂದು ಇಲ್ಲಿ ಈ ದುರ್ದೆಸೆ; ಮುಂದಿನ ಊರಲ್ಲಿ ಇನ್ನೂ ಒದ್ದಾಟ ಹೆಚ್ಚೀತು. ಡಿಪ್ಟಿ ಸಾಹೇಬರಿಗೆ ಹೇಳಬೇಕು ಎಂದು ಅವರು ನಿರ್ಧರಿಸಿಕೊಂಡರು.

ಜ್ವಾಲಾಸಿಂಹರು ಮರಳಿದಮೇಲೆ ಎಲ್ಲರೂ ಅವರೆದುರು ಹೋಗಿ ನಿಂತರು. ಈಜಾದ ಹುಸೇನನು ಅವರ ಮುಖವಾಗಬೇಕಾಯಿತು. “ ಹುಜೂರ, ತಮ್ಮ ಅಪ್ಪಣೆಯಿಂದ ಗಾಬರಿಯಾಗಿ ತಮ್ಮ ಹತ್ತಿರ ಇವರೆಲ್ಲರೂ ಓಡಿಬಂದಿದ್ದಾರೆ. ನಿನ್ನೆ ಈ ಊರೊಳಗೆ ದೊಡ್ಡ ಗಲಭೆಯಾಯಿತು. ಊರ ಜನ ಶಿಪಾಯಿಗಳನ್ನು ಹೊಡೆಯಲು ತಯಾರಾಗಿದ್ದರು. ಇವರು ಜೀವ ಉಳಿಸಿಕೊಂಡು ಓಡಿ ಬರದಿದ್ದರೆ ಫೌಜದಾರಿಯಾಗುತ್ತಿತ್ತು. ಇದನ್ನೆಲ್ಲ ದೂಗಿಕೊಂಡು ಹುಜೂರರಿಗೆ ತೊಂದರೆ ಕೊಡುವುದು ಸರಿಯಲ್ಲವೆಂದು ಇವರು

ಸುಮ್ಮನಿದ್ದರು. ಆದರೆ ಇವೊತ್ತಿನ ನಿರ್ಬಂಧವನ್ನು ಕೇಳಿ ಇವರ ಹಾಹಾರಿದೆ. ಮೊದಲೇ ಬಿಟ್ಟಿ ಸುಲಭವಾಗಿ ಸಿಕ್ಕುತ್ತಿರಲಿಲ್ಲ. ಈ ಅಪ್ಪಣೆ ತಿಳಿದ ಮೇಲಂತೂ ಜನ ಹುಲಿಯೇ ಆಗುತ್ತಾರೆ. ನಿನ್ನೆ ನಡೆದ ಗೊಂದಲಕ್ಕೆ ಮೂಲ ಅವನೇ—ಬೆಳಗ್ಗೆ ತಮ್ಮ ಕಡೆ ಬಂದಿದ್ದನಲ್ಲ ಆ ಯುವಕ. ಅವನಿಗೆ ಸ್ವಲ್ಪ ಎಚ್ಚರಿಕೆ ಕೊಡುವುದು ಅತ್ಯಂತ ಅಗತ್ಯ." ಎಂದು ಅವನು ಹೇಳಿದ.

"ನಾವು ಓಡಿಬರದಿದ್ದರೆ ಉಳಿಗಾಲವೇ ಇದ್ದಿಲ್ಲ" ಒಬ್ಬ ಶಿಪಾಯಿ ಎಂದ

"ಹುಜೂರ, ಆ ಹುಡುಗ ಮಿಗುಮೀರಿದ ದುಷ್ಟ ಅವನ ಸಲುವಾಗಿ ನಾವು ಊರಾಗ ಇರೋದೇ ಕಷ್ಟ ಆಗೆಯ್ತಿ. ದಿನಾ ಬೆಳಗಾದರ ಏನಾರೇ ಒಂದು ಸುಂಟರಗಾಳಿ ಎಬ್ಬಿಸಿರತಾನು." ಎಂದು ಗೌಸಖಾ ಜೋಡಿಸಿದ

"ಸೇವಾದಾಗ ನಮ್ಮ ಜನುಮ ಹೋಗೆಯ್ತಿ ಹುಜೂರ. ಇಂತಾ ಕೆಟ್ಟ ಗತಿ ಎಂದೂ ಬಂದಿದ್ದಿಲ್ಲ." ಇನ್ನೊಬ್ಬ ಶಿಪಾಯಿಯೆಂದ.

"ಹುಜೂರರ ಪ್ರಜಾಪಾಲನೆಯಲ್ಲಿ ಯಾವ ಸಂದೇಹವೂ ಇಲ್ಲ. ಅಮಲದಾರರು ದಯಾಳು ಇರಲೇಬೇಕು. ಆದರೆ, ಇರುವ ವಿಷಯವೆಂದರೆ, ಬಿಟ್ಟಿ ನಿಲ್ಲಿಸಿಬಿಟ್ಟರೆ ಈ ಜನರು ಬದುಕಲಾರರು." ಎಂದ ಈಜಾದ ಹುಸೇನ.

"ಇಲ್ಲ, ಇವರಿಗೆ ತೊಂದರೆ ಕೊಡುವ ಇಚ್ಛೆ ನನಗಿಲ್ಲ. ನನ್ನ ಉದ್ದೇಶ ಇಷ್ಟೇ— ಪ್ರಜೆಗಳ ಮೇಲೆ ಅನ್ಯಾಯದ ಬಲಾತ್ಕಾರ ನಡೆಯಬಾರದು. ನಾನು ಇವರಿಗಿತ್ತ ಅಪ್ಪಣೆಯಲ್ಲಿ ಇವರ ಆವಶ್ಯಕತೆಗಳಿಗೆ ಸಾಕಷ್ಟು ಗಮನ ಕೊಟ್ಟಿದ್ದೇನೆ. ಪಟ್ಟಣದಲ್ಲಿದ್ದಾಗ ಯಾವ ವಸ್ತುಗಳಿಲ್ಲದೆ ಇವರ ಜೀವನ ನಡೆಯುತ್ತಿತ್ತೋ, ಆ ವಸ್ತುಗಳು ಇಲ್ಲಿ ಹಳ್ಳಿಗೆ ಬಂದೊಡನೆ ಏಕೆ ಅಗತ್ಯ ವೆನಿಸುತ್ತವೆಯೋ ನನಗೆ ತಿಳಿಯದು" ಎಂದರು ಡಿಪ್ಟಿ.

"ಹುಜೂರ" ಒಬ್ಬ ಶಿಪಾಯಿಯೆಂದ, "ನಮ್ಮನ್ನು ಹೇಗೆ ಬೇಕಾದರೂ ಇಡಿರಿ. ನಾವು ನಿಮ್ಮ ಊಳಿಗದವರು. ಆದರೆ ಇದರಾಗ ವಜನಾನೇ ಕಡಿಮೆ ಆಕ್ಕಯ್ತಿ."

"ಹೌದು. ಈ ಹಳ್ಳೀಜನ ಮೆತ್ತಗಿದ್ದವರ್ನ ಅಮಲದಾರರಂತ ತಿಳಿ ಯೋದ್ವ ಇಲ್ಲ ಹುಜೂರರು ಹಿಂದುಸ್ತಾನಿಗಳಂತಾನೂ ಇವರು ಹೀಂಗ

ಏರಿಬರ್ತ್ತಾರೆ. ಇಂಗ್ರೇಜಿ ಅಮಲದಾರರು ಬಂದರೆ ಪಿಟ್ಟೆನ್ನುವುದಿಲ್ಲ.'' ಎಂದ ಗೌಸಖಾ.

ಜ್ವಾಲಾಸಿಂಹರು ತಮ್ಮ ಪ್ರತಿಷ್ಠೆ ಹೆಚ್ಚಿಸಿಕೊಳ್ಳುವುದಕ್ಕಾಗಿಯೇ ಆಂಗ್ಲ ರೀತಿನೀತಿಗಳನ್ನು ಅನುಸರಿಸುತ್ತಿದ್ದರು. ಹಿಂದುಸ್ತಾನಿ ಅಂತ ತಿಳಿದರೆ ಬಯ್ದಂತೆ. ಗೌಸಖಾ ಮತ್ತು ಈಜಾದ ಹುಸೇನರ ಮಾತುಗಳು ಗುರಿಗೆ ತಾಗಿದವು. ದರ್ಪದಿಂದ ನುಡಿದರು: ಒಳ್ಳೇದು, ನಾನೂ ಯಾವ ಆಂಗ್ಲನಿಗೂ ಕಡಿಮೆಯಲ್ಲ ಎಂಬುದನ್ನು ತೋರಿಸುತ್ತೇನೆ. ಶಿರಸ್ತೇದಾರರೇ, ಸಬ್ ಇನ್ಸ್‌ಪೆಕ್ಟರರಿಗೆ ಬರೆಯಿರಿ – ಶೀಘ್ರದಲ್ಲಿಯೇ ಈ ಪ್ರಕರಣದ ವಿಚಾರಣೆ ಮಾಡಿ ವರದಿ ಮಾಡಲಿ.''

ಸಂಜೆಗೇ ದಯಾಶಂಕರರು— ದೋಷಮುಕ್ತರಾಗಿ ಅದೇ ಭಾಗದಲ್ಲಿ ನಿಯುಕ್ತರಾಗಿದ್ದರು— ಲಖನಪುರಕ್ಕೆ ಬಂದರು. ಜೊತೆಯಲ್ಲಿ ಕಾನ್-ಸ್ಟೇಬಲರೂ ಕೆಲವರಿದ್ದರು. ಅವರು ಚಾವಡಿಯಲ್ಲಿ ಕುಳಿತು ಎಲ್ಲ ಜನರನ್ನು ಕರೆಸಿದರು.

ದಯಾಶಂಕರರು ಕಳೆದುಕೊಂಡರೂ ಏನೂ ಕಲಿತುಕೊಳ್ಳದಂಥ ಮನುಷ್ಯ. ಮೊದಲು ಅವರು ಏಕಾಕಿಯಾಗಿ ಲಂಚ ತಿನ್ನುತ್ತಿದ್ದರು. ಆದರಿಂದ ಕಚೇರಿಯ ಇತರ ಅಧಿಕಾರಿಗಳ ದ್ವೇಷಕ್ಕೆ ಗುರಿಯಾಗಿದ್ದರು. ಈಗ ಹಂಚಿ ತಿನ್ನಲು ಕಲಿತಿದ್ದರು. ಆದುದರಿಂದ ಇಡೀ ಕಚೇರಿಗೇ ಅವರು ಬೆಲ್ಲದಚ್ಚಾಗಿದ್ದರು. ಅಲ್ಲದೆ ಅವರು ಮೊದಲಿನಂತೆ ಕೆಟ್ಟ ಶಬ್ದಗಳನ್ನು ಆಡುತ್ತಿರಲಿಲ್ಲ. ಸಜ್ಜನಿಕೆ ಕೇವಲ ನೈತಿಕ ಮಹತ್ತ್ವದ ವಿಷಯುವಲ್ಲ, ಆರ್ಥಿಕ ಮಹತ್ತ್ವವೂ ಅದಕ್ಕಿದೆ ಎಂದು ಈಗ ಅವರ ಅನುಭವಕ್ಕೆ ಬರುತ್ತಲಿತ್ತು. ಒಟ್ಟಾರೆ, ಅವರ ಸ್ವಭಾವದಲ್ಲಿ ಅನರ್ಗಳತೆಯ ಬದಲು ಗಂಭೀರತೆಯ ಸಮಾವೇಶವಾಗಿತ್ತು. ಊರಿಗೆ ಊರನ್ನೇ ಈ ಗಲಭೆಯಲ್ಲಿ ತೊಡಕಿಸಿ ತಮ್ಮ ಸ್ವಾರ್ಥವನ್ನು ಸಾಧಿಸಬೇಕೆಂದು ಅವರು ಬಗೆದಿದ್ದರು. ಹೇಳಿಕೆಗಳನ್ನು ಬರೆದುಕೊಳ್ಳಲಾರಂಭವಾಯಿತು. ಮೊದಲು ಶಿಪಾಯಿಗಳ ಜವಾಬುಗಳಾದವು. ಅವರ ಸಿಟ್ಟೆಲ್ಲವೂ ಬಲರಾಜನಮೇಲೆ ಹಾಯಿತು. ಗೌಸಖಾನನೂ ಅವರಿಬ್ಬರು ಸಹಕಾರಿಗಳೂ ಅದಕ್ಕೆ ಹೊಂದಿಕೆಯಾಗುವಂತೆ ಹೇಳಿಕೆ ಕೊಟ್ಟರು. ಬಿಂದಾಮಹಾರಾಜನ ಜವಾಬು ಮಾತ್ರ ಕೊಂಚ ದುರ್ಬಲ

ವಾಯಿತು. ಬಳಿಕ ಊರ ಜನರ ಸರತಿ. ಊರಂತೂರಿಗೇ ವಿಪತ್ತು ಒದಗುವುದೆಂದು ಅವರ ಭಾವನೆಯಾಗಿತ್ತು ಮೊದಲು. ಎದುರು ಪಕ್ಷದವರ ಹೇಳಿಕೆಗಳನ್ನು ಕೇಳಿದಾಗ ಬಲರಾಜನನ್ನು ಸಿಕ್ಕಿಸುವುದಕ್ಕಾಗಿಯೇ ಎಲ್ಲ ಉದ್ಯೋಗ ನಡೆದಿದೆಯೆಂದು ಗೊತ್ತಾಯಿತು. ಬಲರಾಜ ಸಹೃದಯು ನಾದುದರಿಂದ ಎಲ್ಲರಿಗೂ ಪಂಚಪ್ರಾಣ. ಪರಸ್ಪರ ಸ್ನೇಹ-ಸಹೃದಯತೆಗಳೇ ಹಳ್ಳಿಬಾಳಿನ ಶುಭಲಕ್ಷಣ. ಆ ಸಂದರ್ಭದಲ್ಲಿ ಇದ್ದುದನ್ನು ಹೇಳುವುದ ರಿಂದಲೇ ಆವನು ಉಳಿದುಕೊಳ್ಳುತ್ತಿದ್ದ. ಆವರು ಬೆಳಿಸಿಯಾಗಲಿ ಉಳಿಸಿ ಯಾಗಲಿ ಹೇಳುವ ಆಗತ್ಯವಿರಲಿಲ್ಲ. ಅಂತೆಯೇ ಜನರು ಎಲ್ಲ ಘಟನೆಗಳನ್ನೂ ಸತ್ಯವಾಗಿ ಹೇಳಿದರು.—ಬಲರಾಜನ ಎಟ್ಟಿ ನುಡಿಗಳನ್ನು ಮಾತ್ರ ಬಚ್ಚಿಟ್ಟು ಕೊಂಡರು. ಪ್ರತಿಪಕ್ಷಿಗಳು ಆವರನ್ನು ಒಡೆದುಕೊಳ್ಳಲು ಸಾಕಷ್ಟು ಪ್ರಯತ್ನಿಸಿದರು. ಕಾದಿರಖಾನ ದೃಢತೆ ಯಾರನ್ನೂ ವಿಚಲಿತರಾಗಗೊಡಲಿಲ್ಲ.

ವಿಚಾರಣೆ ಎಂಟುಗಂಟೆಗೆ ಮುಗಿಯಿತು. ಬಲರಾಜನನ್ನು ಕೈಸೆರೆ ಹಿಡಿಯಲು ಯಾವ ಪ್ರಮಾಣ ಸಿಕ್ಕಲಿಲ್ಲ. ಗೌಸಖಾ ಹಲ್ಲುಕಡಿಯುತ್ತ ಕುಳಿತ. ಇನ್ಸ್ಪೆಕ್ಟರು ಎದ್ದು ಕೋಣೆಯಲ್ಲಿ ಹೋಗಿ ಕುಳಿತರು. ಊರ ಜನ ಒಬ್ಬೊಬ್ಬರೇ ಹೊರಟರು. ಮನೋಹರ ಅದೇ ಉಂಡು ಚಿಲಿಮೆ ಸೇದುತ್ತಿರುವ ಹೊತ್ತಿಗೇ ಬಿಂದಾ ಮಹಾರಾಜ ಹೋಗಿ ಕುಳಿತ.

" ಏನಾಯಿತು ಮಹಾರಾಜ, ಚಾವಡಿಯಾಗ ಏನು ನಡದಯ್ತು ? " ಮನೋಹರ ಪ್ರಶ್ನಿಸಿದ.

" ನಿಮ್ಮ ಗೋಣು ಮುರಿಯೋ ತಯಾರಿ ನಡದೈತಿ. ಇನ್ಸ್ಪೆಕ್ಟ್ರು ಊರಿನ ಮುಕ್ಯಮುಕ್ಯ ಜನರನ್ನು ಕರಿಸ್ಯಾರು, ಎಲ್ಲರಿಗೂ ತಂತಮ್ಮ ಜವಾಬು ಬದಲು ಮಾಡಾಕ ಹೇಳ್ಯಾರು, ಬದಲು ಮಾಡದಿದ್ದರ ಎಲ್ಲರ ಕಡಿಸಿಂದ ಮುಚ್ಚಳಿಕೀ ತಗೊಂತೀವಿ ಅಂತಾ ಬೆದರಿಸ್ಯಾರು. ಅದರವ್ಯಾಗ ನೂರು ರೂಪಾಯದ ಥೈಲಿ ಬ್ಯಾರೆ ಬೇಡತಾರು. ಎಲ್ಲರೂ ಅಂಜಿಕ್ಯಾರ ಬ್ಯಾರೆ ಜವಾಬು ಕೊಡಾಕ ತಯಾರಾಗ್ಯಾರು. ನಿಮಗ ಸುದ್ದೀ ಮುಟ್ಟಸಾಣಂತ ಬಂದೆ. ಜಮೀನುದಾರರ ಆಳಾದರೇನಾತು, ನಾವೂ ನೀವೂ ಎಲ್ಲಾ ಒಂದs. " ಎಂದ ಮಹಾರಾಜ.

ಮನೋಹರನ ಕಾಲ ಕೆಳಗಿನ ನೆಲವೇ ಸರಿದುಹೋಯಿತು. "ನನ್ನ ಮ್ಯಾಗ ಏನೋ ಗರಹದಶಾ ಬಂದೈತಿ, ವಮ್ತ್ರೇನು? ಈ ಹುಂಬನ ಕಾಲಾಗ ಏನೇನು ಗತಿ ಆಕ್ಕೈತೋ." ಎಂದ.

"ರಾತರೇನೋ ಬಾಳ ಆಗೆಯ್ತಿ. ಆದರೂ ಜನರ ಮನಿಗೆ ಹೋಗಿ ಕ್ಯಾರ ಹೇಳಿಕೋರಿ, ಕೇಳಿಕೋರಿ. ಯಾವಗ್ಲೊತ್ತು–ಕೆಲಸ ಆದರೂ ಆದೀತು." ಬಿಂದಾ ಸೂಚಿಸಿದ.

ಇರುಳಿನ ಒಂಬತ್ತಾಗಿಹೋಗಿತ್ತು. ಪ್ರಕೃತಿ ಮಂಜಿನಲ್ಲಿ ಮುಳುಗಿತ್ತು. ಮನೆಗಳ ಬಾಗಿಲುಗಳು ಮುಚ್ಚಿದ್ದವು ಭಟ್ಟಿಗಳೂ ತಣ್ಣಗಾಗಿದ್ದವು. ಸುಕ್ಖು ಚೌಧರಿಯ ಆಲಿಯಲ್ಲಿ ಮಾತ್ರ ಬೆಲ್ಲ ಕುದಿಯುತ್ತಿತ್ತು. ಮನೋ-ಹರನನ್ನು ನೋಡಿದೊಡನೆಯೆ ಅವನೆಂದ: "ಬಾ ಮನೋಹರ, ಕೂತುಕೊ. ನಾನೇ ನಿಂತಾವ ಬರಾವಿದ್ನಿ. ಇನ್ಸ್ಪೆಕ್ಟರಂತೂ ಬಾಳ ಬಾಯ್ಮಾಡಾಕ ಹತ್ಯಾರು. ಎಲ್ಲರ ಕಡಿಸಿಂದ ಮುಚ್ಚಳಿಕಿ ತಕ್ಕೊಂತಾರಂತ. ಮ್ಯಾಗ ನೂರರ ಥೈಲಿ ಬ್ಯಾರಂತೆ. ಮುಚ್ಚಳಿಕಿ ಅಂದುರಪಲೇ ಎಲ್ಲಾರೂ ನಡಗಾಕ ಹತ್ಯಾರು. ತಮ್ಮ ಜವಾಬು ತಿರಗಸಾಕ ತಯಾರಾಗ್ಯಾರು."

"ಹಂಗಾರ ನನಗ ದಾರೀ ಯಾವುದು ತಗಿತೀರಿ?"

"ನಾ ಏನು ಹೇಳ್ಲಿ? ಊರ ಪರುಸ್ತಿತಿ ಅನಕಾ ಗೊತ್ತss ಆಯ್ತಿ. ನಿಮ್ಮ ದಸಿಯಿಂದ ಮುಚ್ಚಳಿಕಿ ಯಾವ ಕೊಡಾಕ ಬರ್ತಾನು? ಯಾವನೂ ಒಪ್ಪಾಣಿಲ್ಲ. ಇರೋದಂದರ ದೇವರ ಇಸವಾಸ, ಇಲ್ಲದಿದ್ದರಃ ನಿನ್ನ ಗಂಟಿನ ನೆಂಬಿಕೆ."

ಮನೋಹರ ಸುಕ್ಖುವಿನ ಕೂಡ ಮಾತು ಬೆಳೆಸಲಿಲ್ಲ. ಇವನು ತನ್ನನ್ನು ಬೋಳಿಸಲು ನೋಡುತ್ತಿದ್ದಾನೆಂದು ಗೊತ್ತಾಯಿತು. ಸಲ್ಪ ಇನ್ಸ್ಪೆಕ್ಟರಿಗೆ ಕೊಟ್ಟು, ಗೌಸಖಾನನ್ನು ಕೂಡಿಕೊಂಡು ತಾನಿಷ್ಟು ತಿನ್ನಬೇಕೆಂದಿದ್ದಾನೆ. ಅವನು ಅಲ್ಲಿಂದೆದ್ದು ಡಪಟಸಿಂಹನ ಮನೆಯ ಕಡೆ ತೆರಳಿದ. ಆದರೆ ಅವನೊಡನೆ ಏನು ಮಾತನಾಡಬೇಕೆಂಬುದು ಇನ್ನೂ ನಿರ್ಧಾರವಾಗಿರಲಿಲ್ಲ.

ಡಪಟಸಿಂಹ ಇನ್ನೂ ಮಲಗಿರಲಿಲ್ಲ. ಪಡಸಾಲೆಯಲ್ಲಿ ಕಲ್ಲೆಣ್ಣೆಯ ಬುಡ್ಡಿ ಉರಿಯುತ್ತಿತ್ತು. "ಬಾರಪಾ, ನೀನು ದೊಡ್ಡ ಪೇಚಿನಾಗ ಬಿದ್ದೆಯಲ್ಲ!" ಎನ್ನುತ್ತ ಅವನು ಮನೋಹರನನ್ನು ಸ್ವಾಗತಿಸಿದ.

" ನೀವೆಲ್ಲಾ ಉಳಿಸಿದರ ಉಳಕೊಂತೀನಿ. " ಎಂದ ಮನೋಹರ.

" ನಿಮ್ಮನ್ನ ಉಳಿಸಾಕ ನಾವು ಏನು ಮಾಡದೆ ಬಿಟ್ಟೇವಿ ? ಬಲರಾಜಗೆ ಯಾವ ದೋಷವೂ ಬರವ ಹಾಗೆ ಜವಾಬು ಕೊಟ್ಟೆವು. ಆದರೆ ಮುಚ್ಚಳಿಕಿ ಕೊಡೋದು ಸಾಧ್ಯವಿಲ್ಲ. ಇವತ್ತು ಮುಚ್ಚಳಿಕಿ ಕೊಟ್ಟೆವೆಂದರೆ, ನಾಳಿ ಏನಾದರೂ ಸುಳ್ಳು ಅರ್ಜಿಮಾಡಿಕೊಂಡು ಬಿಟ್ಟನಂದರೆ,.... "

ಅಷ್ಟರಲ್ಲಿಯೇ ಕಾದಿರಖಾನ ದನಿ ಕೇಳಬಂದಿತು. " ನಾವು ನಮ್ಮ ನಮ್ಮ ಜವಾಬನ್ನೇ ಗಟ್ಟಿ ಹಿಡೀಬೇಕಂತ ನಾ ಅಂತೀನಿ. ಮುಚ್ಚಳಿಕಿ ಕೊಡಾಕs ಬೇಕಾಗತೈತಂತ ಈಗ್ಲಾ ಯಾರಿಗೆ ಗೊತ್ತಯ್ತಿ ? ಹಾಗಂದರೂ ನಾವು ಬೆನ್ನು ತಿರುಗಿಸಬಾರದು. ಮುಚ್ಚಳಿಕೀಗೆ ಅಂಜಿಕೊಂಡು ಮಾತಾಡಿದ್ದು ಹೊರಳಿಸೋದಂದರೆ ಎಂತ ಅನ್ಯಾಯ ನೋಡಿರಿ "

ಮನೋಹರ ಶ್ರದ್ಧಾಪೂರ್ಣ ನಯನಗಳಿಂದ ಕಾದಿರನನ್ನು ನೋಡಿದ. ಅವನೊಬ್ಬ ದೇವತೆಯಂತೆ ಕಂಡ. ಸಾಧಾರಣ ನ್ಯಾಯವನ್ನು ಆಧರಿಸಿದ ಕಾದಿರನ ಅಭಿಪ್ರಾಯ ಅವನಿಗೆ ಅಲೌಕಿಕವಾಗಿ ತೋರಿತು. ಈ ಸಲಹೆ ಸರಿಯೆಂದು ಡಪಟಸಿಂಹನಿಗೂ ಎನಿಸಿತು. ಮುಚ್ಚಳಿಕೆಯ ಭಯ ಎಷ್ಟೊ ಕಡಿಮೆಯಾಯಿತು. ತನ್ನ ಸ್ವಾರ್ಥವೃತ್ತಿಗಾಗಿ ಒಳಗೊಳಗೆ ನಾಚಿಕೊಂಡು ಅವನೆಂದ : " ನಾನೂ ನೀನೂ ನಮ್ಮ ಹೇಳಿಕೆಗೇ ಅಂಟಿಕೊಂಡೆವು ಎಂದು ತಿಳಿ. ಆದರೆ ಬಿಸೇಸರಗ ಮತ್ತೆ ದುಖರನಗ ಏನು ಮಾಡುತ್ತಿ ? ಅವರೇನು ಮಾಡಿದರೂ ಒಪ್ಪೋರಲ್ಲ. "

" ಅವರನ್ನೂ ಎಳಕೊಂಡು ಬರ್ತೀನಿ, ಹೇಗೆ ಒಪ್ಪೋದಿಲ್ಲ ? ದೇವರ ಹೆದರಿಕೆ ಇದ್ದರೆ ಎಂದಿಗೂ ಹೋಗಾಕಿಲ್ಲ. " ಎಂದು ನುಡಿದು ಕಾದಿರಖಾ ಹೊರಟುಹೋದ. ಸ್ವಲ್ಪ ಹೊತ್ತಿನಲ್ಲಿಯೇ ಅವರಿಬ್ಬರನ್ನೂ ಕರೆದುಕೊಂಡು ಬಂದ

ಬಿಸೇಸರಸಾಹೇಬ ಬಂದಾಕ್ಷಣ ಡಪಟಸಿಂಹನ ಕಡೆಗೆ ಪ್ರಶ್ನಸೂಚಕ ದೃಷ್ಟಿಯಿಂದ, ಕಣ್ಣು ಕುಣಿಸಿ ನೋಡಿದ—ನಿಮ್ಮ ಅಭಿಪ್ರಾಯ ಏನೆಂದು ಕೇಳಲಪೇಕ್ಷಿಸುವಂತೆ. ದುಖರನ ಭಗತ,—ಎರಡು ಹೊತ್ತು ತಪ್ಪದೆ ಗುಡಿಗೆ ಹೋಗಿ ಪೂಜೆ ಮಾಡುವವನು, ರಾಮುಚರ್ಚೆ ಎಷ್ಟು ಮಾಡಿಯೂ ತಣಿಯದವನು—ತಲೆತಗ್ಗಿಸಿಕೊಂಡು ಕುಳಿತುಬಿಟ್ಟ.- ಕಾದಿರಖಾ ಅವನನ್ನು ದೊಡ್ಡ

ಹಾಳುಬಾವಿಗೆ ತಳ್ಳುತ್ತಿದ್ದಾನೋ ಅಥವಾ ಅವನಮೇಲೆ ಸಿಡಿಲೇ ಎರಗಿದೆಯೊ !

ಡಪಟಸಿಂಹನನ್ನು ಸಮಾಧಾನಪಡಿಸಿದ ಯುಕ್ತಿಯನ್ನೇ ಕಾದಿರನು ಈಗಲೂ ಉಪಯೋಗಿಸಿದ. ಸ್ವಾಭಾವಿಕವಾಗಿ ಒಕ್ಕಲಿಗರು ವಿತಂಡವಾದಿಗಳಾಗಿರುವುದಿಲ್ಲ. ಹೇಳಿಕೆಯನ್ನು ಬದಲಿಸುವುದೆಂದರೆ ಕಾಣಾಕಾಣಾ ವಂಚನೆ ಎಂಬುದು ಅವರಿಗೆ ತಿಳಿದಿರಲಿಲ್ಲ. ಅದನ್ನು ತೋರಿಸಿಕೊಟ್ಟೊಡನೆ ಅವರ ಸರಲ ಸತ್ಯಭಕ್ತಿ ಜಾಗೃತವಾಯಿತು. ದುಖರನ ಬೇಗನೆ ಅವರಿಗೆ ಅನುಕೂಲನಾದ. ಬಿಸೆಸರನ ಮೇಲೆ ಕಾದಿರನ ಮಾತಿನ ಪರಿಣಾಮವಾಗಲಿಲ್ಲ. ಆ ಸಾಹಜಿ ಸಕ್ಕರೆ ಮತ್ತು ಕಾಳಿನ ವ್ಯಾಪಾರ ಮಾಡುತ್ತಿದ್ದ. ಕೊಡಕೊಳ್ಳುವ ವ್ಯವಹಾರವಿತ್ತು, ಚತುರ್ಥಾಂಶ ಬಡ್ಡಿಯ ವ್ಯವಹಾರ, ಎರಡು ನೇಗಿಲ ಕಮತವೂ ಇತ್ತು. ಗಾಂಜಿ ಭಾಂಗು ಅಫು ಮೊದಲಾದವುಗಳ ಗುತ್ತಿಗೆಯನ್ನೂ ಅವನು ಹಿಡಿದಿದ್ದ. ತನ್ನ ನಡೆನುಡಿಗಳಿಂದ ಅವನು ಬಲೆಯಿಂದ ಉಳಿದುಕೊಳ್ಳುತ್ತಿದ್ದ. "ಅಪ್ಪಾ, ನಿಮ್ಮ ಕೂಡ ಸೇರಲು ನನಗೆ ಶಕ್ಯವಿಲ್ಲ. ಈವೊತ್ತು ಮುಚ್ಚಳಿಕೆಯಾಯಿತು, ನಾಳೆ ಏನಾದರೂ ಪ್ರಕರಣ ಎದ್ದುಬಿಟ್ಟಿತು ಅಂದರೆ ಊರಾಗ ಒಂದು ಸಾಕ್ಷಿಯೂ ಹುಟ್ಟಲಿಕ್ಕಿಲ್ಲ, ಉಳಿದುಕೊಳ್ಳಲಿಕ್ಕೆ. ಸಂಸಾರದಲ್ಲಿದ್ದುಕೊಂಡು ಅಧರ್ಮದಿಂದ ಎಷ್ಟಂತ ಉಳಿದುಕೊಳ್ಳಲಿಕ್ಕಾಗುತ್ತದೆ. ನಿಮಗೆ ಸರಿಕಂಡಂತೆ ನೀವು ಮಾಡಿಕೊಳ್ಳಿರಿ. ಮುಚ್ಚಳಿಕೆ ಕೊಡಲಿಕ್ಕೆ ನಾನೇನು ತಯಾರಿಲ್ಲ." ಎಂದು ಅವನು ಹೇಳಿದ.

ಸ್ವಾರ್ಥನೀತಿಯ ಮಾಟ ನಿರ್ಬಲ ಆತ್ಮಗಳನ್ನು ಚೆನ್ನಾಗಿ ಹಿಡಿಯುತ್ತದೆ. ದುಖರನ ಮತ್ತು ಡಪಟಸಿಂಹರಿಗೆ ಈ ಮಾತು ಒಳ್ಳೇ ನ್ಯಾಯಸಂಗತವಾಗಿ ತೋರಿತು. ಧರ್ಮ ನ್ಯಾಯಗಳನ್ನು ಹೇಳಿದರೆ ಇವನಿಗೆ ನಾಟುವುದಿಲ್ಲ ಎಂದು ಕಾದಿರನಿಗೆ ತೋರಿತು. ಜವಾಬು ಬದಲಿಸಿದರೆ ಯಾವ ಯಾವ ತೊಂದರೆಗಳು ಒದಗುವವೆಂಬುದು ಮನವರಿಕೆಯಾಗದೆ ಇವನು ದಾರಿಗೆ ಬಾರನೆಂದುಕೊಂಡು ಅವನು ಹೇಳಿದ:

"ಸಾಹೂಜೀ, ದರಮುದ ಮಾತು ಅಟ್ಟ ಇಲ್ಲ. ಹೇಳಿಕೆ ತಿರುಗಿಸಿ ನಾವು ಹೊಸ ಪೇಚಿನಾಗ ಬೀಳಬಾರದು ಅಂಬೂದ್ತ ಹೆದರಿಕೆ. ಪೋಲಿಸ್

ಜನರಿಗೆ ಯಾರೂ ತನ್ನವರಲ್ಲ. ನಾವು ಮೊದಲು ಹೇಳಿದ್ದು ಫೌಜದಾರ ತಾವ ಅಯ್ತಿ. ಅದಕ್ಕೆ ನಮ್ಮ ಸಹಿ ಅದಾವು, ಹೆಬ್ಬಟ್ಟಿನ ಗುರುತು ಅದಾವು. ಎರಡನೇ ಜವಾಬು ಹಿಡಿದು ಅವರು ನಮ್ಮನ್ನು ಮೋಸಗಾರ ರೆಂದು ಬಂಧಿಸಿಬಿಟ್ಟರೆ ಹೆಂಗ, ವಿಚಾರಮಾಡು. ಶಿಕ್ಷಾ ಏಳು ವರುಷಕ್ಕೆ ಕಮ್ಮಿ ಆಗೂದಿಲ್ಲ. ಇದಕಿಂತ ಮುಚ್ಚಳಿಕಿ ಕೊಡೋದೇ ಒಳ್ಳೇದು. ನೋಡೀ ನೋಡೀ ನೊಣ ನುಂಗೂದ್ಯಾಕ ? ”

ಬಿಸೇಸರಸಾಹನ ಕಣ್ಣು ತೆರೆದವು. ಉಳಿದವರೂ ಬೆದರಿದರು. ಕಾದಿರಖಾನ ಯುಕ್ತಿ ಫಲಿಸಿತು. ತಾವೀಗ ಚೆಲೋ ಸಿಕ್ಕುಬಿದ್ದಿದ್ದಾರೆ, ಹೊರಬರಲು ದಾರಿಯೇ ಇಲ್ಲ ಎಂದವರು ತಿಳಿದುಕೊಂಡರು. ಕೈಯೊಳಗಿನ ಹಣದಗಂಟು ಬಿದ್ದುಹೋಯಿತೋ ಎಂಬ ಹಾಗೆ ಬಿಸೇಸರನು ಜೋಲು ಮೋರೆ ಹಾಕಿದ. “ ಹಾಗಾದರೆ ಈ ವಿಚಾರವನ್ನೇ ಗಟ್ಟಿಮಾಡಿರಿ: ಜವಾಬು ಬದಲಿಸಬಾರದು, ಇನ್ಸ್‌ಪೆಕ್ಟರ ಹತ್ತರ ಹೋಗಬಾರದು. ” ಎಂದ.

ದಯಾಶಂಕರನು ವಾಡಿಕೆಯಂತೆ ಎಂಟುಗಂಟೆಗೆ ಎದ್ದು ನಿದ್ದೆಯ ಆಲಸಿಕೆಯನ್ನು ಕಳೆದಮೇಲೆ ಜನರ ದಾರಿಕಾಯ್ದ. ಒಂಬತ್ತಾದರೂ ಯಾರೂ ಕಾಣಿಸಿಕೊಳ್ಳಲಿಲ್ಲ. ಕೊನೆಗೆ, “ ಏನು ಖಾನಸಾಹೇಬ, ಎಲ್ಲರೂ ಬರುವು-ದಿಲ್ಲವೆ ? ಹೊತ್ತಾಯ್ತು. ” ಎಂದು ಕೇಳಿದ.

“ ಯಾರಿಗೆ ಗೊತ್ತು, ರಾತ್ರಿ ಎಲ್ಲರೂ ಏನು ಮಸಲತ್ತು ಮಾಡಿದರೊ? ಗೊತ್ತಾಗಿದ್ದರ ಎಲ್ಲರನೂ ಇಲ್ಲೇ ಮನಗಸತಿದ್ದೆ. ” ಎಂದ ಗೌಸಖಾ.

“ ಸರಿ. ಹಾಗಾದರೆ ನಾನಿನ್ನು ವರದಿ ಬರೆದು ಹಾಕುತ್ತೇನೆ. ಊರ ಜನರ ಕಡೆ ಯಾವ ತರದ ಅನ್ಯಾಯ ಇದ್ದಂತೆ ಪ್ರಮಾಣ ದೊರೆತಿಲ್ಲ. ”

“ ಅಷ್ಟು ಮಾಡಬೇಡಿ ಹುಜೂರ, ಹಾಗಾದರೆ ಎಲ್ಲರೂ ಮತ್ತಷ್ಟು ಏರಿ ಕೂಡುತ್ತಾರೆ. ಬಲರಾಜಗೆ ಒಂದು ತಿಂಗಳಾದರೂ ಶಿಕ್ಷೆಯಾಗಬೇಕು, ಉಳಿದವರಿಂದ ಮುಚ್ಚಳಿಕೆ ತಕ್ಕೋಬೇಕು. ಅಂದರೆ ನನ್ನ ಮ್ಯಾಗ ದಯಾ ಮಾಡಿದಂಗ ಆಗತಯ್ತಿ. ನನ್ನಮಲು ನಡೀತೈತಿ, ಮತ್ತೆ ಮುಂದೆ ಅಮಲ ದಾರರಿಗೆ ಬಿಟ್ಟೇನೂ ಚಲೋ ನಡೀತೈತಿ. ”

“ ನೀವು ಹೇಳುವುದೇನೋ ಸರಿ. ಊರೊಳಗೆ ನಿಮ್ಮ ಅಮಲು ನಡೆದೀತು, ಆದರಿಂದ ನನಗೆ ಬರುವ ಭಾಗ್ಯ ? ನೀವು ಜನರನ್ನು ಸುಲಿಯು

ಬಹುದು, ಅದರ ಅಗತ್ಯ ನನಗೇನು ? ಊರವರೊಡನೆ ನನ್ನ ಹಗೆತನವೇನೂ ಇಲ್ಲ. ನೂರಕ್ಕಿಂತ ಕಡಿಮೆಯಾದರೆ ಕಣ್ಣೆತ್ತಿ ನೋಡಬಾರದೆಂದು ಆಣೆಯನ್ನು ಮಾಡಿದ್ದೇನೆ. ಆ ಹಣ ನೀವು ಕೊಡಿರಿ ಅಥವಾ ಹಾದೀ ಹೋಗುವ ಕಳ್ಳ ಕೊಡಲಿ. ಎದುರಿಗೆ ಬರಬೇಕು ದುಡ್ಡು, ರುಚಿಯಿಲ್ಲದೆ ಅಪರಾಧ ಮಾಡಲಾಗುವುದಿಲ್ಲ. ” ಎಂದು ದಯಾಶಂಕರನೆಂದ.

ಗೌಸಖಾ ಪರಿಪರಿಯಿಂದ ಹೇಳಿಕೊಂಡ. ತನ್ನ ಹೀನದಶೆಯನ್ನು ತೋಡಿಕೊಂಡ. ದೈನ್ಯಾಸಬಟ್ಟ. ಇನ್ಸ್‌ಪೆಕ್ಟರು ಒಂದಕ್ಕೂ ಕಿವಿಗೊಡಲಿಲ್ಲ. ಅವರಿಗೆ ದಕ್ಷಿಣೆಯನ್ನು ಸಲ್ಲಿಸದೆ ಬೇರೆ ಉಪಾಯವೇ ಉಳಿಯಲಿಲ್ಲ. ರೂಪಾಯಿಗಳ ರಾಶಿಯನ್ನು ನೋಡಿದಾಗ ಅವನ ಮೊಗ ಅರಳಿತು. “ ಇನ್ನು ನಿಮಗೆ ಗೆಲವಿದೆ, ಮಿಸ್ಟರ್ ಜ್ವಾಲಾಸಿಂಹರೂ ನಡುಗಿರಬೇಕು, ಹಾಗೆ ಬರೆಯುತ್ತೇನೆ ರಿಪೋರ್ಟ್. ” ಎಂದನು.

ಹತ್ತುಗಂಟೆಗೆ ವರದಿ ಸಿದ್ಧವಾಯಿತು. ಊರೊಳಗೆ ಎರಡು ದಿನ ಹಾಹಾಕಾರವೆದ್ದಿತು. ಜನ ಗಡಬಡಿಸಿತು. ಮತ್ತೆ ಎಲ್ಲರ ಜವಾಬಾಯಿತು. ಕೊನೆಗೆ ಎಲ್ಲರಿಂದಲೂ ನೂರು ನೂರು ರೂಪಾಯಿಗಳ ಮುಚ್ಚಳಿಕೆ ತೆಗೆದುಕೊಳ್ಳಲಾಯಿತು. ಕಾದಿರನಿಗೆ ಮನೆಯಿಂದ ಹೊರಬರುವುದೇ ಕಠಿನವಾಯಿತು.

## ೧೨

ರಾಯಸಾಹೇಬರು ನೈನಿತಾಲಿಗೆ ಬಂದು ಒಂದು ತಿಂಗಳಾಗಿದೆ. ಸುರಮ್ಯವಾದ ಒಂದು ಝರಿಯ ದಡದಲ್ಲಿ, ಹಸಿರುಮುರಿಯುವ ತೋಪಿನಲ್ಲಿ ಅವರ ಬಂಗಲೆ. ತಿಂಗಳಿಗೆ ಒಂದು ಸಾವಿರ ರೂಪಾಯಿ ಬಾಡಿಗೆ ತೆರುವ ಭವನ. ಕೆಲವು ಕುದುರೆಗಳಿವೆ, ಕೆಲವು ಮೋಟರುಗಳಿವೆ, ಬಹಳ ಜನ ಆಳುಹೋಳುಗಳಿದ್ದಾರೆ. ಅಲ್ಲಿ ಅವರು ರಾಜಠೀವಿಯಿಂದ ಜೀವನ ಸಾಗಿಸಿದ್ದಾರೆ. ಒಮ್ಮೆ ಹಿಮ-ಸಂಚಾರ, ಒಮ್ಮೆ ಬೇಟೆ, ಒಮ್ಮೆ ಆಟನೋಟಗಳು, ಒಮ್ಮೆ ಗಾಯನವಾದನ—ಹೀಗೆ ನಿತ್ಯವೂ ಹೊಸಹೊಸ ಆಮೋದಪ್ರಮೋದಗಳು. ರಾಯಸಾಹೇಬರು ಅತ್ಯಂತ ಉತ್ಸಾಹದಿಂದ ಆನಂದವನ್ನು ಸೂರೆಗೊಳ್ಳುವರು. ಅವರ ಹೊರತು ಯಾವ ಕೂಟಕ್ಕೂ ಯಾವ ಆಟಕ್ಕೂ ಕಳೆಯೇ ಕಟ್ಟದು.

ಆದರೆ ಜ್ಞಾನಶಂಕರರ ಹೃದಯದ ಮೊಗ್ಗು ಇಲ್ಲಿಯೂ ಅರಳಲಿಲ್ಲ. ರಾಯಸಾಹೇಬರು ಅಲ್ಲಿಯ ಸಮಾಜವನ್ನು ಅವರಿಗೆ ಗುರುತುಮಾಡಿ ಕೊಟ್ಟರು. ಎಲ್ಲ ಆಮೋದಪ್ರಮೋದಗಳಿಗೂ ಅವರನ್ನು ಕರೆದುಕೊಂಡು ಹೋಗುತ್ತಿದ್ದರು. ಅಧಿಕಾರಿಗಳೆದುರು ಅವರ ಗುಣಗಳನ್ನು ಹೊಗಳು-ತ್ತಿದ್ದರು. ಲೇಡಿಗಳೊಡನೆಯೂ ಇಂಟ್ರೊಡ್ಯೂಸ್ ಮಾಡಿಕೊಟ್ಟರು. ಇದಕ್ಕೂ ಹೆಚ್ಚಿಗೆ ಅವರೇನು ಮಾಡುವುದಕ್ಕಿತ್ತು ? ಆದರೆ ಜ್ಞಾನಶಂಕರರಿಗೆ ಈ ಆಟನೋಟಗಳಲ್ಲಿ ಅರುಚಿಯುಂಟಾಗತೊಡಗಿತು. ಈರ್ಷೆ, ತಮ್ಮ ಕ್ಷುದ್ರತೆಗೆ ಕೊಟ್ಟ ಒಪ್ಪಿಗೆಯಂತಿದ್ದ ಈರ್ಷೆ ಅವರೆದೆಯಲ್ಲಿ ಮುರಿದ ಮುಳ್ಳಾಯಿತು. ಅದು ನಾಡಿನ ಅಕ್ಕರತೆಯ ರೂಪದಲ್ಲಿ ಪ್ರಕಟವಾಗ-ತೊಡಗಿತು. ಸಾಫಲ್ಯ ಪಡೆಯದ ಲೇಖಕ ವಿಮರ್ಶಕನಾದ. ತನ್ನ ಅಸಮರ್ಥತೆ ಸಾಮ್ಯವಾದಿಯನ್ನಾಗಿ ಮಾಡಿತು. ಇವರೆಲ್ಲ ಬಣ್ಣದ ನರಿಗಳು; ಸುಲಿಗೆಗಾರರ ತಂಡ ಇದು. ಬಡವರು ಜೀವನ ಹೇಗೆ ಸಾಗಿಸಿದ್ದಾರೆ ಎಂಬ ಅರಿವೇ ಇಲ್ಲ ಯಾವನಿಗೂ. ಯಾರ ಹೃದಯದಲ್ಲಿಯೂ ದಯವನ್ನೇ ಕೇಳ ಬೇಡಿರಿ. ಯಾರು ರಾಜರು, ಯಾರು ತಾಲೂಕುದಾರರು, ಯಾರು ಸಾವು-ಕಾರರು, ಎಲ್ಲರೂ ಬಡವರಿಗಂಟಿದ ಜಿಗಳೆಗಳು. ಬಡವರ ಗುಡಿಸಲಿಗೆ ಕನ್ನ ಕೊರೆಯುವುದು, ಇಲ್ಲಿ ಬಂದು ದೇಶದ ಅವನತಿಯ ಲಾವಣಿ ಹಾಡುವುದು. ಅಧಿಕಾರೀವರ್ಗ ಇವರ ಕಡೆ ಮುಖ ತಿರುಗಿಸಿಲ್ಲವೆಂಬುದೇ ಭಾಗ್ಯ. ಒಂದು ವೇಳೆ ಇವರ ಸೆಳವಿಗೆ ಬಿದ್ದು ದೇಶದ ಭಾಗ್ಯವನ್ನು ಇವರಿಗೆ ಒಪ್ಪಿಸಿಬಿಟ್ಟರೆ, ರಾಷ್ಟ್ರ ಹೇಳಹೆಸರಿಲ್ಲದಾದೀತು ಈ ದೊಡ್ಡ ಜನರನ್ನು "ಲಕ್ಷಗಟ್ಟಲೆ ರೂಪಾಯಿಗಳನ್ನು ನೀವಿಲ್ಲಿ ವಿಲಾಸದಲ್ಲಿ ತೂರುತ್ತಿದ್ದೀರಿ, ರಾಷ್ಟ್ರಕ್ಕೆ ಇದರಿಂದ ಲಾಭವೇನು ? ಇದೇ ಹಣವನ್ನು ರಾಷ್ಟ್ರಕ್ಕಾಗಿ ಕೊಟ್ಟಿದ್ದರೆ ರಾಷ್ಟ್ರ ನಿಮ್ಮನ್ನು ಹಾಡಿಕೊಂಡಾಡುತ್ತಿತ್ತು. ಇಲ್ಲದಿದ್ದರೆ ನೀವು ಯಾರು, ಏನು ಮಾಡುತ್ತಿ-ರುವಿರಿ ಎಂಬ ಗೊಡವೆ ಅದಕ್ಕೇನು ? ನೀವು ಇದ್ದುದೂ ಇಲ್ಲದುದೂ ಅಷ್ಟೆ. ನೀವು ಶಿಫಾರಸುಮಾಡಿ ಎರಡನೆಯವರಿಂದ ಏನಾದರೂ ಕೊಂಚ ಕೊಡಿಸಿದರೆ ಬೇಡುವವನಿಗೆ ಸಂತೋಷವಾಗಲಾರದು. ನಿಮ್ಮಲ್ಲಿದ್ದುದನ್ನು ಸ್ವಲ್ಪ ಕೊಟ್ಟಾಗ ಸಂತೋಷವಾದೀತು." ಎಂದು ಯಾರಾದರೂ ಕೇಳಬೇಕು.

ಆದರೆ, ಈ ವಿಚಾರ ಶೀಘ್ರವೇ ಕೊನೆಗೊಂಡಿತು. ಜ್ಞಾನಶಂಕರರು

ಮತ್ತೆ ಅದೇ ಕುಟಿಲಸ್ವಾರ್ಥದ ಉಪಾಸನೆಗೆ ತೊಡಗಿದರು. ಅವರ ಹೃದಯ ದಿನದಿನಕ್ಕೆ ಕೃಪಣವಾಗುತ್ತ ಬಂದಿತು. ನೈನಿತಾಲದಲ್ಲಿ ಕೂಡ ಅವರು ರಾಯಸಾಹೇಬರ ದುಂದುವೆಚ್ಚಕ್ಕಾಗಿ ಒಳಗೊಳಗೆ ಕುದಿಯುತ್ತಿದ್ದರು. ಲಖನೌಗೆ ಬಂದ ಬಳಿಕ ಅವರ ಕಿರಿತನ ಶಬ್ದಗಳಲ್ಲಿ ಹೊರಡಲಾರಂಭಿಸಿತು ಜೇಡರವನ ಸಿಟ್ಟು ಗಡ್ಡದ ಮೇಲೆ ಹಾಯುತ್ತಿತ್ತು. ಒಮ್ಮೆ ಗುತ್ತಿಗೆದಾರನ ಮೇಲೆ, ಒಮ್ಮೆ ಗುಮಾಸ್ತರಮೇಲೆ, ಒಮ್ಮೆ ಆಳುಹೋಳುಗಳಮೇಲೆ ಹರಿ ಹಾಯುತ್ತಿದ್ದರು. ರಾಯಸಾಹೇಬರು ರಾಮಲೀಲಾ ಸಭೆಯ ಪ್ರಮುಖ-ರಾಗಿದರು. ಈ ಸಂದರ್ಭದಲ್ಲಿ ಸಾವಿರಾರು ರೂಪಾಯಿ ವೆಚ್ಚಮಾಡು-ತ್ತಿದ್ದರು. ಆಳುಗಳಿಗೆ ಹೊಸಹೊಸ ಉಡಿಗೆತೊಡಿಗೆ ದೊರೆಯುತ್ತಿದ್ದವು. ಶ್ರೀಮಂತರಿಗೆ ಅವುತಣವಿರುತ್ತಿತ್ತು. ಪಟ್ಟಾಭಿಷೇಕದ ದಿನ ಭೋಜನದ ಏರ್ಪಾಡಿರುತ್ತಿತ್ತು. ಜ್ಞಾನಶಂಕರರು ಈ ಅಪವ್ಯಯವನ್ನು ಕಂಡು ಉರಿದು ಬೀಳುತ್ತಿದ್ದರು. ದೀಪಮಾಲಿಕೆಯ ಉತ್ಸವದ ಸಿದ್ಧತೆಯನ್ನು ನೋಡಿ ಯಂತೂ ಅವರು ಹತಾಶರಾಗಿ ಒಂದು ವಾರದಮಟ್ಟಿಗೆ ಇಲಾಕೆಯ ಸಂಚಾರ ವನ್ನು ಕೈಕೊಂಡರು.

ಡಿಸೆಂಬರ್ ತಿಂಗಳು; ಕ್ರಿಸ್‌ಮಸ್ ದಿನ. ರಾಯಸಾಹೇಬರು ಆಂಗ್ಲ ಅಧಿಕಾರಿಗಳಿಗೆ ಕಾಣಿಕೆ ಕಳಿಸುವ ಏರ್ಪಾಡಿನಲ್ಲಿ ತಲ್ಲೀನರಾಗಿದ್ದರು. ಅದನ್ನು ಕಂಡು ಜ್ಞಾನಶಂಕರರು, ಇವರೇನೋ ಹೇಸಿಕೆಲಸ ಮಾಡುತ್ತಿದ್ದಾರೆ ಎಂಬಂತೆ ಕಟ್ಟುಮೋರೆ ಮಾಡುವರು ಒಮ್ಮೊಮ್ಮೆ ಮೆಲ್ಲಗೆ ಒಂದು ಕೊಕ್ಕೆ ಮಾತನ್ನು ಆಡುವರು. ಅವರನ್ನು ಕೆಣಕಿ ತರ್ಕವಿತರ್ಕ ಮಾಡಲು ಇಚ್ಛಿಸುವರು. ಇವೆಲ್ಲವುಗಳ ಪರಿಣಾಮ ರಾಯಸಾಹೇಬರ ಮೇಲೆ ಆಗುತ್ತಿರಲಿಲ್ಲ. ಆವರು ಜ್ಞಾನಶಂಕರರ ಮನೋವೃತ್ತಿಗಳನ್ನು ತಿಳಿದುಕೊಂಡಂತಿತ್ತು. ಅವರಿಗೆ ತಳಮಳವಾಗಲೆಂದೇ ಅವರು ಹೀಗೆ ಉತ್ಸಾಹಶೀಲರಾಗಿದ್ದರೂ ಆಗಿರಬಹುದು. ಜ್ಞಾನಶಂಕರರ ನಿದ್ರೆಯನ್ನು ಕಳೆಯುವುದಕ್ಕೆ ಈ ಚಿಂತೆ ಸಾಕಾಗಿತ್ತು. ಆದರಮೇಲೆ, ರಾಯಸಾಹೇಬರಿಗೆ ಎಷ್ಟೊ ಲಕ್ಷರೂಪಾಯಿಗಳ ಸಾಲವಿದೆ ಎಂಬ ಸಮಾಚಾರವನ್ನು ನಂಬಲರ್ಹವಾದ ಕಡೆಯಿಂದ ಕೇಳಿಯಂತೂ ಅವರು ನೈರಾಶ್ಯದಿಂದ ವಿಹ್ವಲರಾದರು.

ಆದರೆ ದುರ್ದೈವ! ಜ್ಞಾನಶಂಕರರ ಕಷ್ಟ-ಚಿಂತೆಗಳು ಇಲ್ಲಿಗೇ

ಮುಗಿಯುಲಿಲ್ಲ. ಅವರ ಅಣ್ಣ ಪ್ರೇಮಶಂಕರರು ಕೆಲವರ್ಷಗಳಿಂದ ಕಾಣೆ-ಯಾಗಿದ್ದರು. ಅವರು ಇಹದಲ್ಲಿಯೇ ಇಲ್ಲವೆಂದು ಜ್ಞಾನಶಂಕರರು ನೆರೆ ನಂಬಿದ್ದರು. ಫಾಲ್ಗುಣಮಾಸದಲ್ಲಿ ಒಂದು ದಿನ ಆಕಸ್ಮಿಕವಾಗಿ ಅಮೇರಿಕೆಯಿಂದ ಅವರದೊಂದು ಕಾಗದ ಬಂದಿತು: ಎಪ್ರಿಲ್ ಒಂದನೆಯ ತಾರೀಕಿಗೆ ಬನಾರಸಕ್ಕೆ ಬರುವೆನೆಂದು ತಿಳಿಸಿದ್ದರು ಅದನ್ನು ನೋಡಿ ಜ್ಞಾನಶಂಕರರು ಮೊದಲು ಪ್ರೇಮೋಲ್ಲಾಸದಿಂದ ಕೊನೆದಾಡಿದರು. ಇಷ್ಟು ದೀರ್ಘವಿಯೋಗದ ತರುವಾಯ ಸೋದರನನ್ನು ಕಾಣುವ ಆಸೆ ಅವರ ಹೃದಯವನ್ನು ಗದ್ಗದಗೊಳಿಸಿತು. ಆದರೆ ಇದು ಕ್ಷಣ ಮಾತ್ರ. ಮರುಗಳಿಗೆಯಲ್ಲಿ ಹೊಸ ಚಿಂತೆಗಳು ಕಣ್ಣೆದುರು ಸುಳಿಯಲಾರಂಭಿಸಿದವು. ಇದುವರೆಗೆ ಅವರು ಕಟ್ಟಿಕೊಂಡ ಆಸೆಗಳು, ಗೊತ್ತುಮಾಡಿಕೊಂಡ ಜೀವನಮಾರ್ಗ ಇವುಗಳಲ್ಲಿ ತಮ್ಮ ಹೊರತು ಯಾವ ವ್ಯಕ್ತಿಗೂ ಇಂಬುಗೊಟ್ಟಿರಲಿಲ್ಲ. ಅವರು ಬಯಸುವುದೆಲ್ಲವೂ ತಮಗಾಗಿ. ಈ ಯೋಜನೆಯಲ್ಲಿ ಎರಡು ಪ್ರಪಂಚಗಳ ನಿರ್ವಾಹವಾಗುವುದು ಕಠಿನವಾಗಿತ್ತು. ಲಖನಪುರದಲ್ಲಿಯೂ ಎರಡುಪಾಲು ಮಾಡಬೇಕಾಗುವುದು. ವಿಚಾರಮಾಡಿದಂತೆಲ್ಲ ಸಮಸ್ಯೆ ಮತ್ತಷ್ಟು ತೊಡಕಾಗುತ್ತಿತ್ತು; ಚಿಂತೆಗಳು ಮತ್ತಷ್ಟು ವಿಷಮಕ್ಕಿಟ್ಟುಕೊಳ್ಳುತ್ತಿದ್ದವು. ಬೆಳಗುಬಂದಂತೆ ಅವರಿಗೆ ತಮ್ಮ ಅವಸ್ಥೆ ಅಸಹ್ಯವೆನಿಸತೊಡಗಿತು. ಅವರು ಉದಾಸರಾಗಿ ಕುಳಿತುಕೊಂಡಿದ್ದರು. ಆಗ ರಾಯಸಾಹೇಬರು ಬಂದು "ನೀವಿನ್ನೂ ಬಟ್ಟೆಗಳನ್ನೇ ತೊಟ್ಟುಕೊಂಡಿಲ್ಲ? ಏಕೆ ತಿರುಗಾಡಲು ಬರುವುದಿಲ್ಲವೋ?" ಎಂದು ಕೇಳಿದರು.

"ಬರುವುದಿಲ್ಲ. ಇಂದು ಬೇಸರಾಗಿದೆ." ಎಂದು ಜ್ಞಾನಶಂಕರರೆಂದರು.

"ಒಳ್ಳೇದು, ನಾನೂ ಹೋಗುವುದಿಲ್ಲ. ಇತ್ತೀಚೆಗೆ ಏನಾದರೂ ಲೇಖ ಬರೆಯುತ್ತಿದ್ದೀರೋ?"

"ಇಲ್ಲ."

"ಹಾಗಾದರೆ ಈಗ ಬರೆಯಿರಿ. ವಿಷಯ ಸಾಮಗ್ರಿ ನಾನು ಕೊಡುತ್ತೇನೆ ಮೊದಲನೆಯ ಬರೆಹ ಈ ವರುಷದ ಮುಂಗಡ ಪತ್ರಿಕೆಯ ಬಗ್ಗೆ ಬರೆಯಿರಿ; ಇನ್ನೊಂದು ಗಾಯತ್ರಿಯನ್ನು ಕುರಿತು."

" ಮುಂಗಡ ಪತ್ರಿಕೆಯ ಬಗ್ಗೇನು, ನಾಳೆಗೇ ಬರೆದುಕೊಡುತ್ತೇನೆ. ಎರಡನೆಯದಕ್ಕೆ ಮಾತ್ರ ಹೆಚ್ಚು ದಿನ ಬೇಕು. ನಮ್ಮಣ್ಣ, ಬಹುದಿನಗಳಿಂದ ಅದೃಶ್ಯನಾಗಿದ್ದವನು, ಒಂದನೆಯ ತಾರೀಖಿಗೆ ಮನೆಗೆ ಬರುತ್ತಾನೆ. ಅವನು ಬರುವುದರೊಳಗಾಗಿ ನಾನು ಅಲ್ಲಿಗೆ ಹೋಗಬೇಕು. "

" ಅವರು ಅಮೇರಿಕೆಗೆ ಹೋಗಿದ್ದರಲ್ಲವೆ ? "

" ಹೌದು. ಅಲ್ಲಿಂದ ಬರೆದಿದ್ದಾರೆ. "

" ಸ್ವಭಾವದಿಂದ ಹೇಗಿದ್ದಾರೆ ? "

" ಈ ವಿಷಯದಲ್ಲಿ ಏನು ಹೇಳಬಲ್ಲೆ ? ಅವನಲ್ಲಿ ಏನು ಬದಲಾವಣೆ ಆಗಿದೆಯೋ ಬಂದಮೇಲೆ ತಿಳಿಯಬೇಕು. ಅವನು ಇದ್ದದ್ದಂತೂ ಶಾಂತ ಪ್ರಕೃತಿಯವನಿದ್ದ, ವಿಚಾರಶೀಲನಿದ್ದ. "

" ಆದರೆ ನಿಮಗೆ ಗೊತ್ತಿದೆ, ಅಮೇರಿಕೆಯ ಗಾಳಿ-ನೀರು ಬಂಧು ಪ್ರೇಮಭಾವಕ್ಕೆ ಪೋಷಕವಾದುದಲ್ಲ. ವೈಯಕ್ತಿಕ ಸ್ವಾರ್ಥವು ಅಲ್ಲಿಯ ಜೀವನದ ಮೂಲತತ್ತ್ವವಾಗಿದೆ ಅದರ ಪರಿಣಾಮ ನಿಮ್ಮಣ್ಣನ ಮೇಲೆ ಆಗದೆ ಹೋಗಿರಲಿಕ್ಕಿಲ್ಲ. ಕಳೆದ ಇಪ್ಪು ವರುಷಗಳ ಉತ್ಪನ್ನದ ಬಗ್ಗೆ ಅವರು ದಾವೆ ಮಾಡಿದರೆ ನಿಮಗೆ ಬಹಳ ಕಷ್ಟ. "

ಜ್ಞಾನಶಂಕರರ ಸಂದೇಹಗಳನ್ನು ಹೀಗೆ ಕೆರಳಿಸುವುದರಲ್ಲಿ ರಾಯ ಸಾಹೇಬರ ಉದ್ದೇಶವೇನಿತ್ತೋ ತಿಳಿಯುವುದು ಕಠಿನ. ಬಹಳವಾಡಿ, ಅವರ ಹೃದ್ಗತ ಭಾವಗಳನ್ನು ಅರಿಯಲಿಚ್ಛಕರಾಗಿರಬಹುದು; ಇಲ್ಲವೆ ಅವರ ಕೀಳ್ತನದ, ಸ್ವಾರ್ಥಪರತೆಯ ತಮಾಶೆ ನೋಡುವಾ ಎಂದಿರಬಹುದು, ಅವರ ವಿಚಾರ. ಈ ಕಿಡಿ ಹಾರಿಸಿ ಅವರು ಆಡ್ಡಾಡಲು ಹೊರಟುಹೋದರು. ಜ್ಞಾನಶಂಕರರ ಎದೆ ಸುಡತೊಡಗಿತು. ಅಣ್ಣ ಇಪ್ಪು ವರ್ಷಗಳ ಉತ್ಪನ್ನ ಕೇಳಬಹುದೆ ? ಕೇಳಿದರೆ, ತಮಗೆ ಉಳಿದುಕೊಳ್ಳಲು ಉಪಾಯವುಂಟೋ ಅಥವಾ ಇಲ್ಲವೋ ? ಅವರು ಎದ್ದು ರಾಯಸಾಹೇಬರ ಗ್ರಂಥಾಲಯಕ್ಕೆ ಹೋಗಿ ಒಂದು ಕಾಯದೆಯ ಪುಸ್ತಕವನ್ನು ತೆಗೆದು ನೋಡತೊಡಗಿದರು. ಆದರಿಂದ ಸಂದೇಹ ನಿವೃತ್ತಿಯಾಗಲಿಲ್ಲ. ಇನ್ನೊಂದು ಮತ್ತೊಂದೆಂದು ರಾಶಿ ಪುಸ್ತಕ ತೆಗೆದರು. ಅದನ್ನೊಮ್ಮೆ ಇದನ್ನೊಮ್ಮೆ ತೆರೆತೆರೆದು ನೋಡಿ ದರು. ಎಲ್ಲಿಯೂ ಸಮಾಧಾನ ದೊರೆಯಲಿಲ್ಲ. ಹತಾಶರಾಗಿ ಅತ್ತ ಇತ್ತ

ಕಣ್ಣುಬಿಟ್ಟರು. ಗಡಿಯಾರದ ಮೇಲೆ ದೃಷ್ಟಿ ಬಿತ್ತು. ಹತ್ತು ಹೊಡೆಯ ಬೇಕು ಎನ್ನುತ್ತಿತ್ತು. ಪುಸ್ತಕಗಳನ್ನು ಮುಚ್ಚಿಟ್ಟರು. ಊಟಮಾಡಿ ಆಡ್ಡಾದರು. ಆದರೆ ನಿದ್ದೆಯೆಲ್ಲಿ? ಇದುವರೆಗೆ ಅವರು ತಾವೇ ತಮ್ಮ ಜೀವನಸಾಗರದ ರಕ್ಷಾತಟವಾಗಿದ್ದರು. ಅವರ ಆಕಾಂಕ್ಷೆಗಳೆಲ್ಲ ಆ ತಟದ ಲ್ಲಿಯೇ ವಿಶ್ರಮಿಸುತ್ತಿದ್ದವು— ಪ್ರೇಮಶಂಕರರು ಬಂದು ಆ ತಟವನ್ನು ಧ್ವಂಸ ಗೊಳಿಸಿದರು; ಆ ನೌಕೆಗಳನ್ನು ಹೊಯ್ದಾಡಿಸಿಬಿಟ್ಟರು. ಅಣ್ಣನನ್ನು ಹೇಗೆ ಅಂಕೆಯಲ್ಲಿ ತರುವುದು? ಸಾಮೋಪಾಯದಿಂದಲೆ? ನಮ್ರತೆಯಿಂದಲೆ? ಅಸಂಭವ. ಅವನೊಳ್ಳೇ ಪಕ್ಕಾ ಧೂರ್ತ. ವಿನಯಕ್ಕೆ ವಿನಿಮಯವಾಗಿ ಒಳ್ಳೆಯತನವನ್ನು ಪಡೆಯಬಹುದಲ್ಲದೆ ಸ್ವಾರ್ಥತ್ಯಾಗವನ್ನಲ್ಲ. ಆದರೆ ಜಗಳ ಅಪವಾದಗಳಿಂದಲೇ? ಛೆ ಅದರಿಂದ ನನ್ನ ಪಕ್ಷ ಮತ್ತಷ್ಟು ದುರ್ಬಲವಾಗು ವುದು. ಹೀಗೆ ಮನಸು ತಿರುಗುತ್ತಿದ್ದಂತೆಯೇ ಉಲ್ಲಾಸದಿಂದ ನೆಗೆಯಿತು. ಎಂತಹ ತಿಳಿಗೇಡಿ ನಾನು. ಇದುವರೆಗೆ ಇದೇಕೆ ಹೊಳೆಯಲಿಲ್ಲ ನನಗೆ? ಬಂಧುತ್ವವು ಅವನನ್ನು ಮನೆಯಲ್ಲಿ ಕಾಲಿಡಗೊಟ್ಟರಲ್ಲವೇ ಅವನು ನನ್ನೊಡನೆ ಕೆಣಕಲು ಬರಬೇಕು? ಬನಾರಸಕ್ಕೆ ಬಂದೊಡನೆಯೆ ಅವನ ಮೇಲೆ ಅಭಿ- ಷೇಚನೆ ಆರಂಭವಾಗುವುದು. ಅವನಿಗೆ ಅಲ್ಲಿ ನಿಂದಿರುವುದಕ್ಕೇ ಆಗುವುದಿಲ್ಲ. ತೋರಿಕೆಗೆ ನಾನು ಅವನೊಂದಿಗೆ ಸೋದರನಂತೆ ವ್ಯವಹರಿಸುತ್ತ, ಸಮಾ ಜದ ಸಂಕುಚಿತತನಕ್ಕಾಗಿ ವ್ಯಸನಪಡುತ್ತ, ಪರೋಕ್ಷದಲ್ಲಿ ಅವನ ಕೀಲು ತಿರುಗಿಸುತ್ತಿರುವೆ. ಒಂದು ತಿಂಗಳು, ಹೆಚ್ಚಾದರೆ ಎರಡು ತಿಂಗಳು, ಅಷ್ಟ- ರೊಳಗೆ ತಾನೇ ಓಡಿಹೋಗುತ್ತಾನೆ. ಬಹುಶಃ ಶ್ರದ್ಧೆಯೂ ಅವನಿಂದ ಎಳೆ ಯಲ್ಪಡಬಹುದು. ಅವಳನ್ನು ಕೊಂಚ ಉತ್ತೇಜನಗೊಳಿಸಬೇಕು. ಧಾರ್ಮಿಕ ಪ್ರವೃತ್ತಿಯ ಹೆಂಗುಸು; ಜನಮತದ ಪರಿಣಾಮ ಅವಳ ಮೇಲೆ ಆಗಿಯೆ ಆಗುತ್ತದೆ. ನನ್ನ ಕ್ಷೇತ್ರ ನಿಷ್ಕಂಟಕವಾಗಿದೆ. ಆತನಿಗೆ ಅಂಜುವ ಕಾರಣವಿಲ್ಲ.

## ೧೩

ಗಾಡಿ ಬರುತ್ತಲೇ ಜ್ಞಾನಶಂಕರರು ಮೊದಲನೆಯ ಎರಡನೆಯ ತರ ಗತಿಯ ಡಬ್ಬಿಗಳಲ್ಲಿ ಇಣಿಕಿಣಿಕಿ ನೋಡಿದರು. ಪ್ರೇಮಶಂಕರರು ಅವುಗಳಲ್ಲಿ ಇರಲಿಲ್ಲ. ಮೂರನೆಯ ವರ್ಗದ ಡಬ್ಬಿಯಿಂದಿಳಿದು ಜ್ಞಾನಶಂಕರರನ್ನು

ಕಾಣುತ್ತಲೇ ಬಿಗಿದಪ್ಪಿಕೊಂಡರು. ಆಗ ತಮ್ಮ ಹೃದಯದಲ್ಲಿ ಆತ್ಮಬಲ–ಪ್ರೇಮಭಾವಗಳ ಸಂಚಾರವಾದಂತೆ ಜ್ಞಾನಶಂಕರರಿಗೆನಿಸಿತು. ನಿಜವಾದ ಭ್ರಾತೃಪ್ರೇಮ ಮನದ ಮಾಲಿನ್ಯವನ್ನು ತೊಡೆದುಹಾಕಿತು. ಕೊರಳು ಬಿಗಿದು, ಕಣ್ಣು ನೀರುದುಂಬಿದವು. ಒಂದೆರಡು ನಿಮಿಷ ಅಣ್ಣತಮ್ಮಂದಿರು ಇಬ್ಬರೂ ಅತ್ತರು. ಅಣ್ಣ ಒಳ್ಳೇ ಆಡಂಬರದಿಂದ ಬರಬಹುದೆಂದು ಜ್ಞಾನ-ಶಂಕರರು ಬಗೆದಿದ್ದರು. ಆದರೆ ಆವರ ಬಟ್ಟೆಬರೆ, ಪಯಣದ ಸಾಮಾನು ಶೀರ ಸಾಮಾನ್ಯವಾಗಿದ್ದವು. ಶರೀರ ಮಾತ್ರ ಹೃಷ್ಟಪುಷ್ಟವಾಗಿತ್ತು. ಜ್ಞಾನಶಂಕರರಿಗಿಂತ ನಾಲ್ಕೈದು ವರುಷಗಳಿಂದ ಹಿರಿಯರಾಗಿದ್ದರೂ ಅವರೇ ಚಿಕ್ಕವರೆಂದು ಕಾಣುತ್ತಿದ್ದರು. ಮುಖದಲ್ಲಿ ನೆಮ್ಮದಿಯ ಕಳೆ ಮಿನುಗು-ತ್ತಿತ್ತು. ಅಮೇರಿಕೆಯಲ್ಲಿ ಅವರು ಕೃಷಿಶಾಸ್ತ್ರದ ಅಧ್ಯಯನ ಮಾಡಿದ್ದರು. ಅಲ್ಲಿಯ ಧನದ ಮತ್ತು ಪ್ರಭುತ್ವದ ಕ್ರೂರ ಲೀಲೆಗಳನ್ನು ಕಂಡು ಕೊನೆ ಕೊನೆಗೆ ಆ ದೇಶದ ವಿಷಯದಲ್ಲಿ ಅವರಿಗೆ ತಿರಸ್ಕಾರವುಂಟಾಗಿತ್ತು. ತಾಯ್ನಾ-ಡಿನ ಹಳ್ಳಿಗಳ ಮತ್ತು ಸಣ್ಣ ನಗರಗಳ ಸರಳ ಜೀವನಕ್ಕಾಗಿ ಅವರ ಮನಸು ಹಂಬಲಿಸಿತ್ತು. ಭಾರತದ ಒಕ್ಕಲುತನದ ಪದ್ಧತಿಯ ಸುಧಾರಣೆಯನ್ನು ತಮ್ಮ ಬಾಳಗುರಿಯನ್ನಾಗಿಟ್ಟುಕೊಂಡು ಅವರು ಮರಳಿದ್ದರು.

ಜ್ಞಾನಶಂಕರರು ಕೂಲಿಯನ್ನು ಕೂಗುವಷ್ಟರಲ್ಲಿ ಪ್ರೇಮಶಂಕರರು ತಮ್ಮ ಸಾಮಾನುಗಳನ್ನೆಲ್ಲ ತೆಗೆದುಕೊಂಡು ಹೊರಟುಬಿಟ್ಟರು. ಜ್ಞಾನ ಶಂಕರರು ಸಂಕೋಚದಿಂದ ಹಿಂದುಳಿದುಬಿಟ್ಟರು— ಯಾರಾದರೂ ಗುರುತಿನವರು ನೋಡಿಬಿಟ್ಟರೆ! ಆಮೇಲೆ ಇಬ್ಬರೂ ಟಾಂಗೆಯಲ್ಲಿ ಕುಳಿತು ಮನೆಗೆ ಹೋದರು.

ಪ್ರೇಮಶಂಕರರು ಸ್ನಾನ ಸಂಧ್ಯೆ ಮುಗಿಸಿ ಊಟಕ್ಕಾಗಿ ಮೇಲೆ ಹೋದರು. ಶ್ರದ್ಧೆಯೆ ಊಟಕ್ಕೆ ಬಡಿಸುತ್ತಾಳೆ, ಅಲ್ಲಿಯೆ ಅವಳ ಭೆಟ್ಟಿಯಾಗುತ್ತದೆ, ತುಂಬಾ ಮಾತನಾಡಬಹುದು ಎಂದು ಅವರು ಆಶಿಸಿದ್ದರು. ಆದರೆ ಅದು ಪೂರ್ಣವಾಗಲಿಲ್ಲ. ಒಂದು ಮೇಜಿನಮೇಲೆ ಬಡಿಸಿದ ತಟ್ಟೆಯಿತ್ತು. ಅವರನ್ನು ಬರಮಾಡಿಕೊಳ್ಳಲು ಶ್ರದ್ಧೆ ಇರಲಿಲ್ಲ. ಅವಳ ಪ್ರೇಮಶೂನ್ಯತೆಗಾಗಿ ಪ್ರೇಮಶಂಕರರಿಗೆ ಬಹಳ ದುಃಖವಾಯಿತು. ಶ್ರದ್ಧೆಯ ಮೇಲಿನ ಪ್ರೇಮ ಅವರು ಮರಳುವುದಕ್ಕೆ ಮುಖ್ಯ ಕಾರಣವಾಗಿತ್ತು. ಅವಳ

ನೆನಪು ಅವರನ್ನು ಯಾವಾಗಲೂ ಕಾತರಗೊಳಿಸುತ್ತಿತ್ತು. ಅವಳ ಪ್ರೇಮ ಮೂರ್ತಿ ಸದೈವ ಅವರ ಹೃದಯನೇತ್ರಗಳೆದುರು ನಿಂತಿರುತ್ತಿತ್ತು. ಪ್ರೇಮದ ಬಾಹ್ಯಾಡಂಬರ ಅವರಿಗೆ ಸೇರುತ್ತಿರಲಿಲ್ಲ. ಸ್ತ್ರೀಯರ ಶ್ರದ್ಧೆ, ಪತಿಭಕ್ತಿ, ಲಜ್ಜಾಶೀಲತೆ, ಪ್ರೇಮಾನುರಾಗಗಳಿಗೆ ಅವರು ಮುಗ್ಧರಾಗಿದ್ದರು. ಕೆಳಗೆ ದಿವಾಣಖಾನೆಯಲ್ಲಿ ಶ್ರದ್ಧೆಯನ್ನು ಕಂಡಿದ್ದರೆ ಅವರಿಗೆ ಖೇದವಾಗುತ್ತಿತ್ತು. ಆದರೆ ಇಲ್ಲಿ ಅವಳನ್ನು ಕಾಣದೆ ಅವರ ಹೃದಯ ವ್ಯಾಕುಲಗೊಂಡಿತು. ಇದು ನಾಚಿಕೆಯಲ್ಲ, ಸಂಕೋಚವಲ್ಲ, ಪ್ರೇಮಶೈಥಿಲ್ಯ. ಇದು ಅವರ ಮರ್ಮಕ್ಕೆ ತಾಗಿತು. ಇಲ್ಲಿಂದ ಹೊರಟುಹೋಗಬೇಕು, ತಿರುಗಿ ಕಾಲು ಹಾಕಬಾರದು ಎಂದು ಎನಿಸಿತು. ಆದರೆ ಗಟ್ಟಿಮನಸು ಮಾಡಿದರು. ತಟ್ಟೆಯ ಮುಂದೆ ಕುಳಿತು, ಜ್ಞಾನಶಂಕರರಿಗೆ ತನ್ನೊಟ್ಟಿಗೆ ಉಣ್ಣಲು ಆಗ್ರಹಪಡಿಸಿದರು. ಆದರೆ ಅವರು ಜಾರಿಕೊಳ್ಳಲು ಒಂದಿಲ್ಲೊಂದು ನೆವ ಚಾಚುವುದನ್ನು ಕಂಡು, "ಇದೇನು, ನಮ್ಮೊಂದಿಗೆ ಕುಳಿತುಕೊಳ್ಳಲು ಇಷ್ಟು ಆಪತ್ತಿಯೆ? ಮಡಿಮೈಲಿಗೆಯ ವಿಷಯವಲ್ಲವಷ್ಟೆ?" ಎಂದು ಪ್ರೇಮಶಂಕರರು ಕೇಳಿದರು.

ಜ್ಞಾನಶಂಕರರು ನಾಚಿಕೊಳ್ಳುತ್ತ ಉತ್ತರವಿತ್ತರು: "ಇನ್ನೇನು ಹೇಳಲಿ? ಹಿಂದುಗಳು ಎಂಥ ಮಿಥ್ಯಾವಾದಿಗಳೆಂಬುದು ನಿನಗೆ ಗೊತ್ತೇ ಇದೆ. ನೀನು ಬರುವ ಸುದ್ದಿ ಬಂದೊಡನೆಯೆ ಇಡೀ ಸಮಾಜದಲ್ಲಿ ದೊಡ್ಡ ಬಿರುಗಾಳಿಯೇ ಎದ್ದಿದೆ. ವೈಯಕ್ತಿಕವಾಗಿ, ವಿದೇಶಯಾತ್ರೆಗೆ ನನ್ನ ವಿರೋಧವೇನೂ ಇಲ್ಲ. ರಾಷ್ಟ್ರದ ಉನ್ನತಿಗಾಗಿ ಇದು ಅವಶ್ಯವೆಂದೇ ತಿಳಿದಿದ್ದೇನೆ. ಈ ದಿಗ್ಬಂಧನದಿಂದ ನಮಗೆ ಬಹಳ ನಷ್ಟವಾಗಿದೆಯೆಂದು ನಂಬಿದ್ದೇನೆ. ಆದರೆ ಸಮಾಜದ ವಿರೋಧವನ್ನು ಕಟ್ಟಿಕೊಳ್ಳುವಷ್ಟು ಧೈರ್ಯ ನನಗಿಲ್ಲ."

ಇದಕ್ಕೆ ಪ್ರೇಮಶಂಕರರು ಪ್ರತ್ಯುತ್ತರವೀಯಲಿಲ್ಲ. ಉಂಡು ಏಡ್ದಾದಾಗ ತಮ್ಮ ಪರಿಸ್ಥಿತಿಯನ್ನು ಕುರಿತು ವಿಚಾರಿಸತೊಡಗಿದರು. ಇಲ್ಲಿ ಶಾಂತಿಪೂರ್ವಕವಾಗಿ ಕೆಲಸಮಾಡಬಲ್ಲೆ ಎಂದುಕೊಂಡಿದ್ದೆ. ಕೊನೆಯ ಪಕ್ಷ ಮನೆಯಲ್ಲಿ ಯಾರೂ ನನಗೆ ವಿರೋಧಿಗಳಾಗಲಾರರು ಎಂದು ಬಗೆದಿದ್ದೆ.

ಆದರೆ ಕೆಲಕಾಲ ಇಲ್ಲಿ ಅಶಾಂತಿಯನ್ನು ಎದುರಿಸಬೇಕಾಗುವುದೆಂದು ಕಾಣುತ್ತಿದೆ. ಆಗಲಿ, ಅಡ್ಡಿಯಿಲ್ಲ– ಸಮಾಜ ನನ್ನನ್ನು ಏನು ಮಾಡೀತು? ಅದರೊಳಗಿದ್ದರೆ ನನಗೆ ಬರುವ ಭಾಗ್ಯವೇನು? ಪರದೇಶಕ್ಕೆ ಹೋದದ್ದು ಮಹಾಪಾತಕವೋ ಏನೋ. ಆದರೆ ಪಾಪಿಗಳನ್ನು ಸಮಾಜ ಎತ್ತಿಡುವುದಿಲ್ಲವಲ್ಲ. ಧರ್ಮವನ್ನು ಮಾರುವವರು, ಮಾನಾಭಿಮಾನಗಳನ್ನು ಮಾರುವವರು. ಮಕ್ಕಳನ್ನು ಮಾರುವವರು ಸುಖವಾಗಿಯೇ ಇರುತ್ತಾರೆ. ಅವರ ಕಡೆ ಕಿಡುನೋಟದಿಂದ ಯಾರೂ ನೋಡುವುದಿಲ್ಲ. ಇಂತಹ ಪತಿತರೊಳಗೆ ಇರುವುದಕ್ಕಾಗಿ ನಾನು ನನ್ನ ಆತ್ಮದ ಸರ್ವನಾಶ ಏಕೆ ಮಾಡಿಕೊಳ್ಳಬೇಕು?

ಶ್ರದ್ಧೆಯೂ ತನಗೆ ಬಹಿಷ್ಕಾರ ಹಾಕುವುದಿಲ್ಲವಷ್ಟೇ—ಅಕಸ್ಮಾತ್ ಅವರಿಗೆನಿಸಿತು. ಈ ಅನುದಾರ ಭಾವಗಳ ಪ್ರಭಾವಕ್ಕೆ ಅವಳು ಒಳಗಾಗಿಲ್ಲವಷ್ಟೆ? ಹಾಗಿದ್ದರೆ ನನ್ನ ಬಾಳು ಹಾಳೇ. ಈ ಸಂದೇಹ ಅವರನ್ನು ಘೋರ ಚಿಂತೆಗೀಡುಮಾಡಿತು. ಮೂರನೆಯ ಪ್ರಹರದ ಹೊತ್ತಿಗೆ ಅವರ ವ್ಯಗ್ರತೆ ಅಳವು ಮೀರಿತು. ಮಾಯಾಶಂಕರನಿಂದ ಶ್ರದ್ಧೆಯ ಕೋಣೆಯನ್ನು ಕೇಳಿ ತಿಳಿದು ಅವರು ಮೇಲೆ ಹೋದರು.

ಶ್ರದ್ಧೆ ತನ್ನ ಕೋಣೆಯ ಬಾಗಿಲಲ್ಲಿ, ದಾರಿತಪ್ಪಿದ ದಾರಿಕಾರ ನಿಂತ ಹಾಗೆ ನಿಂತಿದ್ದಳು. ಅವಳ ಹೃದಯ ಕಂಪಿಸುತ್ತಿತ್ತು—ಆನಂದದಿಂದಲ್ಲ, ಅವ್ಯಕ್ತ ಭಯದಿಂದ. ಈ ಶುಭದಿನಕ್ಕಾಗಿ ಅವಳು ತಪಸ್ಸು ಮಾಡಿದ್ದಳು. ಈ ಆಕಾಂಕ್ಷೆ ಅವಳ ಕತ್ತಲೆಯ ಬಾಳಿಗೆ ಮಣಿದೀಪವಾಗಿತ್ತು, ಮುಳುಗುವ ದೋಣಿಗೆ ಲಂಗರಾಗಿತ್ತು. ತಿಂಗಳ ಮೂವತ್ತು ದಿನ, ದಿನದ ಇಪ್ಪತ್ತು ನಾಲ್ಕು ಗಂಟೆ ಈ ಸವಿಗನಸುಗಳನ್ನು ಕಾಣುತ್ತಲೇ ಕಳೆಯುತ್ತಿದ್ದಳು. ವಿಡಂಬನೆಯೆಂದರೆ, ಆ ಆಕಾಂಕ್ಷೆಗಳೂ ಕಾಮನೆಗಳೂ ಪೂರ್ಣವಾಗುವುದಕ್ಕಾಗಿ ಇರಲಿಲ್ಲ, ತಳಮಳಕ್ಕಾಗಿ ಮಾತ್ರ ಇದ್ದವು. ಆ ದಾಹ, ಆ ಸಂತೋಷ ಶಾಂತಿಯ ಇಚ್ಛುಕವಾಗಿರಲಿಲ್ಲ. ಪ್ರೇಮಶಂಕರರು ಶ್ರದ್ಧೆಗೆ ಒಂದು ಕಲ್ಪನೆ ಅಷ್ಟೆ. ಈ ಕಲ್ಪನೆಗೇ ಅವಳು ಪ್ರಾಣ ಅರ್ಪಿಸುತ್ತಿದ್ದಳು. ಅವರ ನೆನಪಿನ ಮೇಲೆಯೇ ಅವಳ ಭಕ್ತಿ. ಆ ನೆನಪು ಅತ್ಯಂತ ಮನೋಹರವಾಗಿತ್ತು, ಅನುರಾಗಪೂರ್ಣವಾಗಿತ್ತು. ಅವರು ಬಂದುದು ಈ ಸುಖದ ಕಲ್ಪನೆಯನ್ನು,

ಈ ಸವಿನೆನಹನ್ನು ಕೊನೆಗೊಳಿಸಿತು. ಅವರ ನೆನಪು ಪ್ರಾಣಪ್ರಿಯವಾಗಿತ್ತು; ಈಗ ಅವರ ಅಧಿಕಾರಕ್ಕೆ ಅವಳು ಭಯಭೀತಳಾಗಿದ್ದಳು. ಏಕೆಂದರೆ ಆ ಕಲ್ಪನೆ ಧರ್ಮ – ಸತೀತ್ವಗಳ ಪೋಷಕವಾಗಿತ್ತು; ಈ ಅಧಿಕಾರ ಅವುಗಳಿಗೆ ಘಾತಕವಾಗಿತ್ತು. ಸಾಮಾಜಿಕ ಪರಿಸ್ಥಿತಿ, ಸಮಯೋಚಿತ ಆವಶ್ಯಕತೆಗಳ ಜ್ಞಾನ ಶ್ರದ್ಧೆಗಿತ್ತು. ಪರಂಪರೆಯಾಗಿ ಬಂದ ಕಟ್ಟುಗಳನ್ನು ಕಡಿದುಹಾಕುವುದಕ್ಕೆ ಅಗತ್ಯವಿದ್ದ ವಿಚಾರಸ್ವಾತಂತ್ರ್ಯವಾಗಲಿ, ದಿವ್ಯಜ್ಞಾನವಾಗಲಿ ಆಕೆಗಿರಲಿಲ್ಲ. ಅವಳೊಬ್ಬ ಸಾಮಾನ್ಯ ಹಿಂದೂ ಮಹಿಳೆ; ಅವಳು ತನ್ನ ಪ್ರಾಣಗಳನ್ನು, ಪ್ರಾಣಪ್ರಿಯನಾದ ಪತಿಯನ್ನು ತೊರೆಯಬಲ್ಲಳಾಗಲಿ, ತನ್ನ ಧರ್ಮದ ಅವಜ್ಞೆಯನ್ನು ಮಾಡುವುದಾಗಲಿ, ಜನನಿಂದೆಯನ್ನು ಸಹಿಸುವುದಾಗಲಿ ಅಸಂಭವ. ಪ್ರೇಮಶಂಕರರು ಬರುವ ಸಮಾಚಾರ ತಿಳಿದಾಗಿನಿಂದಲೂ ಒರೆಯುಚ್ಚಿದ ಕತ್ತಿ ತಲೆಯಮೇಲೆ ತೂಗಾಡುತ್ತಿರುವ ಅಪರಾಧಿಯಂತೆ ಅವಳ ಸ್ಥಿತಿಯಾಗಿತ್ತು. ಅವರು ಬಂದು ಕೆಳಗಡೆ ಕುಳಿತಮೇಲೆ ಅವಳ ಕಂಬನಿ ಒಂದು ಕ್ಷಣವೂ ಹರಿಗಡಿದಿರಲಿಲ್ಲ. ಅವಳ ಹೃದಯ ಕಂಪಿಸುತ್ತಲಿತ್ತು: ಅವರು ಮೇಲೆ ಬಂದು ತನ್ನೆದುರಿಗೆ ನಿಂತುಬಿಟ್ಟರೆ! ತನ್ನ ಮೈಯನ್ನು ಮುಟ್ಟಿಬಿಟ್ಟರೆ! ಸಾಯುವುದೇ ಇದಕ್ಕಿಂತ ಸುಲಭ! ತಾನು ಅವರೆದುರು ಹೇಗೆ ನಿಲ್ಲಲಿ? ಹೇಗೆ ತಾನವರನ್ನು ನೋಡಲಿ? ಹೇಗೆ ಅವರೊಡನೆ ಮಾತನಾಡಲಿ? ಈ ಜಟಿಲ ಚಿಂತೆಯಲ್ಲಿ ಅವಳು ಮುಳುಗಿರುವಾಗಲೇ ಪ್ರೇಮಶಂಕರರು ಅವಳೆದುರಿಗೆ ಹೋಗಿ ನಿಂತರು. ಸಿಡಿಲು ಬಿದ್ದಿದ್ದರಾಗಲಿ, ಕಾಲಡಿಯ ನೆಲ ಸರಿದುಹೋಗಿದ್ದರಾಗಲಿ, ಪಕ್ಕನೆ ಸಿಂಹವೇ ಎದುರು ಬಂದಿದ್ದರಾಗಲಿ ಅವಳು ಅಷ್ಟು ಅಸಾವಧಾನಳಾಗಿ ಕೋಣೆಯೊಳಗೆ ಓಡಿಹೋಗುತ್ತಿರಲಿಲ್ಲ. ಸರ್ರನೆ ಅವಳು ಒಳಗೆ ಹೋಗಿ ಒಂದು ಮೂಲೆಯಲ್ಲಿ ನಿಂತುಕೊಂಡಳು. ಪ್ರೇಮಶಂಕರರಿಗೆ ದಿಗಿಲಾಯಿತು. ಎದುರಿನ ಆಕಾಶವೇ ಲುಪ್ತವಾಗಿದ್ದರೂ ಅವರಿಗೆ ಅಷ್ಟು ವಿಸ್ಮಯವಾಗುತ್ತಿರಲಿಲ್ಲ. ಕ್ಷಣ ಹೊತ್ತು ಬೊಂಬೆಯಂತೆ ನಿಂತು ತಣ್ಣಸಿರೆಳೆದು ತಿರುಗಿದರು. ಶ್ರದ್ಧೆಯ ಕೋಣೆಯೊಳಗೆ ಹೋಗಲು, ಅವಳನ್ನು ಮಾತನಾಡಿಸಲು ಎದೆ ಸಾಲಲಿಲ್ಲ. ಅನೇಕ ವರುಷಗಳಿಂದ ಅವರ ಚೈತನ್ಯಾವಸ್ಥೆಯ ಸಹಕಾರಿಗಳಾಗಿದ್ದ ಕಾವ್ಯಮಯ ಸ್ವಪ್ನಗಳು ನಷ್ಟವಾದವು. ಅವರ ಉತ್ಸಾಹ ಭಗ್ನವಾಯಿತು.

ಅವರು ಮೆಟ್ಟಿಲಿಳಿದು ಹೋಗುವುದನ್ನು ಶ್ರದ್ಧೆ ಬಾಗಿಲ ಮರೆಯಿಂದ ನೋಡಿದಳು. ಆಗಿನ ಅವಳ ಮನಃಸ್ಥಿತಿಯನ್ನು ಯಾರು ತಿಳಿಯಬಲ್ಲರು? ವಿಯೋಗದ ಏಳು ವರುಷಗಳನ್ನು ತಾನು ಅತ್ತತ್ತು ಕಳೆದಿದ್ದಾಳೆ. ಆ ಪ್ರಿಯ ಪತಿಯಿಂದು ಹತಾಶನಾಗಿ, ಭಗ್ನಹೃದಯನಾಗಿ ಹೊರಟುಹೋಗುತ್ತಿದ್ದಾನೆ; ತಾ ನಿಂತು ಸಶಂಕಳಾಗಿ—ಮುಂದುಗಡೆ ಅಪಾರ ಜಲರಾಶಿಯೋ ಇತ್ತೋ ಏನೋ—ನಿಂತಿದ್ದಾಳೆ. ಧರ್ಮ ಮುಂದೆ ಕಾಲಿಡಗೊಡುತ್ತಿರಲಿಲ್ಲ. ಉನ್ಮತ್ತ ಪ್ರೇಮ ತರಂಗಗಳು ಮತ್ತೆ ಮತ್ತೆ ಏಳುತ್ತಿದ್ದವು; ಧರ್ಮದ ಬಂಡೆಗೆ ಬಡಿದು ಹಿಂದುರುಳುತ್ತಿದ್ದವು. ಪ್ರೇಮಶಂಕರರನ್ನು ಕೈಹಿಡಿದು ಕರೆತರುವೆನೆಂದು ಆವಳೊಮ್ಮೆ ಅಧೀರಳಾಗಿ ಹೊರಟಳು; ಬಾಗಿಲತನಕ ಬಂದಳು; ಮುಂದು-ವರಿಯಲಾಗಲಿಲ್ಲ. ಧರ್ಮ ಆಹ್ವಾನಿಸಿತು: 'ಪ್ರೇಮ ನಶ್ವರವಾದುದು, ನಿಸ್ಸಾರವಾದುದು, ಯಾರು ಗಂಡ, ಯಾರು ಹೆಂಡತಿ? ಇದೆಲ್ಲವೂ ಮಾಯಾ ಜಾಲ. ನಾನು ಅವಿನಾಶಿ, ನನ್ನನ್ನು ಕಾಯ್ದುಕೊ.' ಏಳು ಕಡಲು ದಾಟಿ ಹೋಗಿದ್ದ ಗಂಡ— ಯಾರು ಬಲ್ಲರು— ಅಲ್ಲಿ ಏನು ತಿಂದರೋ, ಏನು ಕುಡಿದರೋ, ಯಾರ ಯಾರ ಕೂಡ ಬೆರತಿದ್ದರೋ, ಇನ್ನು ಅವರ ಸಂಬಂಧ ನನಗೇನು? ಎಂದುಕೊಂಡಳು. ಆದರೆ ಪ್ರೇಮಶಂಕರರು ಸೋಪಾನ ಇಳಿದು ಕೆಳಗೆ ಹೋದೊಡನೆ ಶ್ರದ್ಧೆ ಮೂರ್ಛಿತೆಯಾಗಿ ಬಿದ್ದುಬಿಟ್ಟಳು.

## ೧೪

ಬೇಗ ಬಿಡುಗಡೆಯಾಗಲಿರುವ ಸೆರೆಯಾಳಿನಂತೆ ಪ್ರೇಮಶಂಕರರು ಎರಡು ವಾರಗಳನ್ನು ಅಲ್ಲಿ ಕಳೆದರು. ಕೊಂಚವೂ ಸೊಗಸಿರಲಿಲ್ಲ ಜೀವಕ್ಕೆ ಶ್ರದ್ಧೆಯ ಧಾರ್ಮಿಕತೆಯಿಂದಾದ ಪೆಟ್ಟಿನ ನೋವು ಒಂದು ಕ್ಷಣವೂ ಶಾಂತ ವಾಗುತ್ತಿರಲಿಲ್ಲ. ಮತ್ತೆ ಅಮೇರಿಕೆಗೇ ಹೋಗಿಬಿಡಬೇಕು, ಎಂದಿಗೂ ಬರಲೇ ಬಾರದು ಎಂದೆನಿಸುತ್ತಿತ್ತು ತಿರುತಿರುಗಿ. ಕದಾಚಿತ್ ನಾಡು-ಜನಗಳ ತಿಳಿವಳಿಕೆ ಶ್ರದ್ಧೆಗೆ ಸದ್ವಿಚಾರವನ್ನು ಕೊಡಬಹುದು ಎಂಬ ಆಶೆ ಅವರ ಅಂಗಿಯ ಚುಂಗನ್ನು ಹಿಡಿದು ನಿಲ್ಲಿಸುತ್ತಿತ್ತು. ದಿನಾಂತದಿನವೆಲ್ಲ ದಿವಾಣ ಖಾನೆಯಲ್ಲಿ ಬಿದ್ದುಕೊಂಡಿರುತ್ತಿದ್ದರು; ಯಾರೊಡನೆ ಸೇರುವುದಿಲ್ಲ, ಮಾತಿಲ್ಲ.

ಕೃಷಿ ಸುಧಾರಣೆಯ ವಿಚಾರ ಸ್ಥಗಿತವಾಯಿತು. ಇಷ್ಟರಮೇಲೆ, ಜ್ಞಾನ ಶಂಕರರು ಸಾಮಾಜಿಕರ ಒಳಸಂಚಿನ ಸಮಾಚಾರಗಳನ್ನು ತಂದು ತಂದು ಅವರನ್ನು ಇನ್ನಷ್ಟು ಉದ್ವಿಗ್ನಗೊಳಿಸುತ್ತಿದ್ದರು. ಸಮಾಜದ ಹಿರಿಯರ ಕಡೆ ಹೋಗಿ, ಪ್ರೇಮಶಂಕರರ ಬಗೆಗೆ ಇಲ್ಲದುದೊಂದು ದೂರುತ್ತಿದ್ದರು— ದೇವರುದಿಂಡರನ್ನು ಬಯ್ಯುತ್ತಾನೆ, ಯಾರೇನು ಎಲ್ಲರ ಮಾಂಸ ಒಂದೇ ಎನ್ನುತ್ತಾನೆ; ಉಂಡು ಕೈಕಾಲನ್ನೂ ತೊಳೆಯುವುದಿಲ್ಲ; ಕರ್ಮಾನುಸಾರವಾಗಿ ಚಮ್ಮಾರನೂ ಬ್ರಾಹ್ಮಣನಾಗುತ್ತಾನೆ ಎಂದೆನ್ನುತ್ತಾನೆ ಇತ್ಯಾದಿ. ಇದನ್ನೆಲ್ಲ ಕೇಳಿ ಕೇಳಿ, ಸಾಮಾಜಿಕರ ದ್ವೇಷಾಗ್ನಿ ಮತ್ತಷ್ಟು ಉರಿದೇಳುತ್ತಿತ್ತು. ಕೆಲ ಮನಸ್ವೀ ಯುವಕರಂತೂ ಪ್ರೇಮಶಂಕರರು ಎಲ್ಲಿಯಾದರೂ ಒಬ್ಬರೇ ಸಿಕ್ಕರೆ ಚೆನ್ನಾಗಿ ಸಮಾಚಾರ ತೆಗೆದುಕೊಳ್ಳುತ್ತೇವೆ ಎನ್ನುತ್ತಿದ್ದರು. ಊರಿನ 'ತಿಲಕ' ಪತ್ರಿಕೆಯಲ್ಲಿ ಈ ವಿಷಯವಾಗಿ ತುಂಬಾ ವಿಷ ಕಾರಲಾಗುತ್ತಿತ್ತು. ಜ್ಞಾನಶಂಕರರು ನಿತ್ಯವೂ ಅದನ್ನು ತಂದು ಪ್ರೇಮಶಂಕರರ ಮುಂದೆ ಓದು-ತ್ತಿದ್ದರು: ಅವರು ನಿರಾಶರಾಗಿ, ಭಯಭೀತರಾಗಿ ಇಲ್ಲಿಂದ ಕಾಲ್ತೆಗೆಯಲಿ ಎಂದು, ಆಸ್ತಿಯಲ್ಲಿ ಪಾಲು ಕೊಡುವುದು ತಪ್ಪಲಿ ಎಂಬ ಉದ್ದೇಶದಿಂದ. ಪ್ರೇಮಶಂಕರರು ಗಟ್ಟಿಗರು, ಈ ಬೆದರಿಕೆಗಳ ಪರಿವೆ ಅವರಿಗಿರಲಿಲ್ಲ ಆದರೆ ತಮಗಾಗಿ ಜ್ಞಾನಶಂಕರರಿಗೆ ತ್ರಾಸವಾಗುವುದು ಬೇಡ. ಶ್ರದ್ಧೆಯ ವಿಷಯವೂ ಅವರ ಎದೆಯನ್ನು ಸೀಳುತ್ತಿತ್ತು. ಎಲ್ಲಿಯಾದರೂ ಹೋಗಿ ಪ್ರತ್ಯೇಕವಾಗಿದ್ದು ಶಾಂತಿಯಿಂದ ಬಾಳಬೇಕು, ಬಾಳಗುರಿಯನ್ನು ಸಾಧಿಸಲು ಹವಣಿಸಬೇಕು ಎಂಬುದು ಅವರ ಹಾರೈಕೆ.

ಹೋಗುವುದು ಎಲ್ಲಿ? ಲಖನಪುರದಲ್ಲಿ ಹೋಗಿರುವ ಇಚ್ಛೆಯನ್ನು ಜ್ಞಾನಶಂಕರರೆದುರು ಅವರೊಮ್ಮೆ ವ್ಯಕ್ತಗೊಳಿಸಿದರು. ಅವರು ಅನೇಕ ಅಡೆತಡೆಗಳನ್ನು ಎದುರೊಡ್ಡಿದರು; ಅನೇಕ ಕಷ್ಟಕಾರ್ಪಣ್ಯಗಳ ಚಿತ್ರಗಳನ್ನು ಚಿತ್ರಿಸಿದರು. ಅದರಿಂದ ಪ್ರೇಮಶಂಕರರು ಅವರ ಇಂಗಿತವನ್ನರಿತು ಸುಮ್ಮ ನಾದರು. ಪಟ್ಟಣದ ಸಮೀಪದಲ್ಲಿಯೇ ಒಂದು ಕೃಷಿಶಾಲೆಯನ್ನು ತೆರೆಯಲು ಅನುಕೂಲವಾದ ಸ್ವಲ್ಪ ಭೂಮಿಯನ್ನು ಹಿಡಿಯಬೇಕೆಂದು ಅವರು ಯೋಚಿ-ಸಿದರು. ಅದಕ್ಕಾಗಿ ದಿನಾಲು ಅಲ್ಲಿ ಇಲ್ಲಿ ತಿರುಗಾಡಿದರು. ಸಂಕೋಚ ಸ್ವಭಾವದಿಂದಾಗಿ ತಮ್ಮ ವಿಚಾರವನ್ನು ಯಾರೊಡನೆಯೂ ಹೇಳುತ್ತಿರಲಿಲ್ಲ.

ತಂದೆಗೆ ಸಮನಾದ ಲಾಲಾ ಪ್ರಭಾಶಂಕರರ ಸ್ನೇಹವು ಮಾತ್ರ ತಮ್ಮ ಮನದ ಮಾತನ್ನು ಆವರೆದುರು ಹೇಳುವಂತೆ ಮಾಡುತ್ತಿತ್ತು. ಆದರೆ ಪ್ರೇಮಶಂಕರರ ವಿಚಾರವನ್ನು ಅವರು ಒಪ್ಪುತ್ತಿರಲಿಲ್ಲ. ಯಾವುದಾದರೂ ಸರಕಾರಿ ಕೆಲಸ ಹಿಡಿಯಬೇಕು ಎಂದು ಅವರೆನ್ನುತ್ತಿದ್ದರು.

ಈ ಇತಿಮಿತಿಯಲ್ಲಿಯೇ ಚೈತ್ರ ಕಳೆಯಿತು. ಕೃಷಿಪ್ರಯೋಗ ಶಾಲೆಯ ಆವಶ್ಯಕತೆಯ ಕಡೆಗೆ ಧನಿಕರ ಗಮನವನ್ನು ಸೆಳೆಯುವುದಕ್ಕಾಗಿ ಪ್ರೇಮ-ಶಂಕರರು ಕೆಲವು ವಿದ್ವತ್ತ್ವಪೂರ್ಣಲೇಖನಗಳನ್ನು ಪತ್ರಿಕೆಗಳಲ್ಲಿ ಬರೆದರು. ಅವುಗಳ ಪ್ರಶಂಸೆಯಾಯಿತು, ಪತ್ರಿಕೆಗಳು ಆ ಬಗೆಗೆ ಟಿಪ್ಪಣಿಗಳನ್ನು ಬರೆದವು; ಲೇಖನಗಳ ಭಾಷಾಂತರಗಳು ಇತರ ಭಾಷಾ ಪತ್ರಿಕೆಗಳಲ್ಲಿಯೂ ಬಂದವು ಆದರ ಪರಿಣಾಮವಾಗಿ, ಕೃಷಿವಿಷಯಕವಾದ ಒಂದು ನಿಬಂಧವನ್ನು ತಮ್ಮ ವಾರ್ಷಿಕೋತ್ಸವದಲ್ಲಿ ಓದಬೇಕೆಂದು ತಾಲೂಕುದಾರರ ಸಂಘವು ಪ್ರೇಮಶಂಕರರನ್ನು ಕರೆಯಿತು. ಅತ್ಯಂತ ಪರಿಶ್ರಮದಿಂದ ಶೋಧಿಸಿ ನಿಬಂಧವನ್ನು ಸಿದ್ಧಪಡಿಸಿಕೊಂಡು ಅವರು ಲಖನೌಗೆ ಹೋದರು. ರಾಯಕಮಲಾನಂದರು ಆ ಸಭೆಯ ಕಾರ್ಯದರ್ಶಿಯಾಗಿದ್ದರು. ರಾತ್ರಿ ಎಂಟುಗಂಟೆಗೆ ಪ್ರೇಮಶಂಕರರು ಅವರಲ್ಲಿಗೆ ಹೋದರು.

ರಾಯಸಾಹೇಬರು ಪ್ರೇಮಶಂಕರರನ್ನು ಅತ್ಯುತ್ಸಾಹದಿಂದ ಸ್ವಾಗತಿಸಿ "ನಿಮ್ಮನ್ನು ಕಾಣುವ ಉತ್ಕಂಠೆ ನನಗೆ ಬಹಳವಿತ್ತು. ನೀವು ಬಂದಿರಿ, ಬಹು ಸಂತೋಷ. ಪ್ರಪಂಚವೆಂದರೆ ಈಶ್ವರನ ವಿರಾಟ್‌ಸ್ವರೂಪ. ಪ್ರಪಂಚವನ್ನು ಕಾಣುವುದೆಂದರೇ ಆ ವಿರಾಟ್‌ಸ್ವರೂಪದ ಸಾಕ್ಷಾತ್ಕಾರ. ಅನುಭೂತ ಜ್ಞಾನ ಪ್ರಾಪ್ತಿಗೆ ಯಾತ್ರೆ ಸರ್ವೋತ್ತಮ ಸಾಧನ." ಎಂದರು.

"ನನ್ನ ನಿಬಂಧವಾಚನಕ್ಕೆ ಸಮಯ ಯಾವಾಗ ಕೊಡಲಾಗುತ್ತದೆ?" ಎಂದು ಮರುದಿನ ಪ್ರೇಮಶಂಕರರು ಕೇಳಿದರು.

"ಈವೊತ್ತಂತೂ ಸಿಕ್ಕುವುದಿಲ್ಲ ಸಮಯ. ನಾಳೆ ಗಾರ್ಡನ್ ಪಾರ್ಟಿ ಇದೆ. ಹಿಜ್ ಎಕ್ಸೆಲೆನ್ಸಿ ಮತ್ತು ಇತರ ಅಧಿಕಾರಿ ವರ್ಗವನ್ನು ಕರೆದಿದೆ. ಇಡೀ ದಿನ ಅದರ ಏರ್ಪಾಡಿನಲ್ಲಿಯೇ ಹೋಗುತ್ತದೆ ನಾಡದು ಎಲ್ಲ ಹಕ್ಕಿಗಳು ಹಾರಿಹೋಗಿ ಆಯ್ದ ಜನ ಮಾತ್ರ ಉಳಿಯುತ್ತಾರೆ ಆಗ ನೀವು ನಿಬಂಧವನ್ನು ಸ್ವಚ್ಛಂದವಾಗಿ ಓದಬಹುದು." ಎಂದರು ರಾಯಸಾಹೇಬರು.

ಅಷ್ಟರಲ್ಲಿ ರಾಜಾ ಇಂದ್ರಕುಮಾರ ಸಿಂಹರು ಚಿತ್ತಯಿಸಿದರು. ಅವರನ್ನು ಬರಮಾಡಿಕೊಳ್ಳುತ್ತ ರಾಯಸಾಹೇಬರು, "ನೈನಿತಾಲಿಗೆ ಯಾವಾಗ ಹೊರಡುವಿರಿ?" ಎಂದು ಪ್ರಶ್ನಿಸಿದರು.

"ನಾನಂತೂ ಎಲ್ಲ ಸಿದ್ಧತೆ ಮಾಡಿಕೊಂಡೇ ಬಂದಿದ್ದೇನೆ. ಇಲ್ಲಿಂದಲೇ ಹಿಜ್ ಎಕ್ಸೆಲೆನ್ಸಿಯವರ ಜೊತೆಗೆ ಹೊರಡುತ್ತೇನೆ. ಮಿಸ್ಟರ್ ಜ್ಞಾನಶಂಕರರು ಬರಲಿಲ್ಲವೇನು?" ಇಂದ್ರಕುಮಾರರೆಂದರು.

"ಇಲ್ಲ, ಅವರಿಗೆ ಬಿಡುವಾಗಲಿಲ್ಲ." ಪ್ರೇಮಶಂಕರರು ಹೇಳಿದರು.

"ಪತ್ರಿಕೆಗಳಲ್ಲಿ ತಮ್ಮ ಲೇಖನವನ್ನು ನೋಡಿದೆ. ಕೃಷಿಶಾಸ್ತ್ರದಲ್ಲಿ ತಾವು ತಜ್ಞರೆಂಬುದರಲ್ಲಿ ಸಂದೇಹವೇ ಇಲ್ಲ. ಆದರೆ ತಾವು ಮಂಡಿಸಿದ ಸೂಚನೆ ಇಲ್ಲಿ ಅಷ್ಟೊಂದು ಉಪಯುಕ್ತವೆಂದು ನನಗೆನಿಸುವುದಿಲ್ಲ. ನಮ್ಮ ಸರಕಾರ ಕೃಷಿಯ ಉನ್ನತಿಗಾಗಿ ಯಾವುದನ್ನೂ ಮಾಡದೆ ಉಳಿಸಿಲ್ಲ. ಅಲ್ಲಲ್ಲಿ ಪ್ರಯೋಗಶಾಲೆಗಳನ್ನು ತೆರೆದಿದೆ, ಅಗ್ಗ ಬೆಲೆಯಲ್ಲಿ ಬೀಜಗಳನ್ನು ಪೂರೈ-ಸುತ್ತಿದೆ, ಕೃಷಿಸಂಬಂಧದ ಸಂಶೋಧನೆಗಳನ್ನು ಪ್ರಚುರಪಡಿಸುತ್ತಿದೆ, ಈ ಕಾರ್ಯಗಳಿಗಾಗಿ ಎಷ್ಟೋ ನಿರೀಕ್ಷಕರನ್ನು ನಿಯಮಿಸಿದೆ, ದೊಡ್ಡ ದೊಡ್ಡ ಕೃಷಿಕಾಲೇಜುಗಳು ಹೊರಟಿವೆ. ಆದರೆ ಅವುಗಳಿಂದ ಫಲ ಏನೂ ದೊರೆಯಲಿಲ್ಲ. ಹೀಗೆ ಕೋಟಿಗಟ್ಟಲೆ ರೂಪಾಯಿಗಳನ್ನು ವೆಚ್ಚಮಾಡಿಯೂ ಸಿದ್ಧಿಯಾಗದೆ ಹೋಗಿರುವಾಗ ತಾವು ಎರಡು ಲಕ್ಷದ ಬಂಡವಾಳದಿಂದ ಏನು ಸಾಧಿಸಬಲ್ಲಿರಿ? ತಾವು ರಚಿಸಿದ ಯಂತ್ರವನ್ನು ಯಾವ ಒಕ್ಕಲಿಗನೂ ತೆಗೆದುಕೊಳ್ಳುವುದಿಲ್ಲ. ತಮ್ಮ ರಾಸಾಯನಿಕ ಗೊಬ್ಬರ ಇದ್ದಲ್ಲಿಯೇ ಕೊಳೆತುಹೋಗುವುದು. ಬಹಳವಾದರೆ ತಾವು ನೂರಕ್ಕೆ ಐದಾರರಂತೆ ಲಾಭ ಕೊಡಬಹುದಷ್ಟೆ. ಇದರಿಂದ ಆಗುವುದೇನು? ಮೂರು ನಾಲ್ಕು ಕೆರೆಕಟ್ಟೆ ತೋಡಿಸಿ, ಪಟವಾರಿಗಳನ್ನು ಕೂಡಿಕೊಂಡು, ಕರ್ಮಚಾರಿಗಳ ಸತ್ಕಾರಮಾಡಿ ನಮ್ಮ ಉತ್ಪನ್ನವನ್ನು ನಿರಾಯಾಸವಾಗಿ ಹೆಚ್ಚಿಸಿಕೊಳ್ಳುವಂತಿರುವಾಗ ಈ ಜೊಂಜಾಟಕ್ಕೆ ಯಾರು ಬೀಳುತ್ತಾರೆ?" ಎಂದು ಇಂದ್ರಕುಮಾರ ಸಿಂಹರು ಉಪನ್ಯಾಸವಿತ್ತರು.

"ವ್ಯಾಪಾರವನ್ನು ಆರಂಭಿಸಬೇಕೆಂದೇನೂ ನನ್ನ ಉದ್ದೇಶವಿಲ್ಲ. ನಾನು ದುಡ್ಡು ಅಪೇಕ್ಷಿಸುವುದು ಕೇವಲ ಕೃಷಿಯ ಉನ್ನತಿಗಾಗಿ. ಮುಂದೆ ಲಾಭ

ವಾಗುವ ಸಂಭವವಿದೆ. ಆದರೆ ಸದ್ಯಕ್ಕೆ ಲಾಭದ ಆಶೆಯಿಲ್ಲ." ಎಂದರು ಪ್ರೇಮಶಂಕರರು.

"ತಿಳಿಯಿತು, ಇದು ಕೇವಲ ಪುಣ್ಯಕಾರ್ಯ" ಎಂದರು ಇಂದ್ರ-ಕುಮಾರರು.

"ಸರಿಯಾಗಿ ಹೇಳಿದಿರಿ. ನನ್ನ ಉದ್ದೇಶ ಅದೇ. ನನ್ನ ಆ ಲೇಖನದಲ್ಲಿ, ಈಗಿನ ಈ ನಿಬಂಧದಲ್ಲಿ ಕೂಡ, ಈ ಮಾತನ್ನೇ ಸ್ಪಷ್ಟಪಡಿಸಿದ್ದೇನೆ."

"ಹಾಗಾದರೆ ನೀವು ಶ್ರೀಗಣೇಶ ಮಾಡುವುದರಲ್ಲಿಯೇ ತಪ್ಪಿದ್ದೀರಿ. ತಾವು ಇದರಲ್ಲಿ ಮೊದಲು ದೊಡ್ಡಸಾಹೇಬರ ಸಹಾನುಭೂತಿಯನ್ನು ದೊರ-ಕಿಸಬೇಕಾಗಿತ್ತು. ಎಂದರೆ, ಎರಡೇಕೆ ಹತ್ತುಲಕ್ಷ ರೂಪಾಯಿ ಹಾಹಾ ಎನ್ನುವುದರೊಳಗೇ ಕೂಡುತ್ತಿದ್ದವು. ಸರಕಾರಿ ಪ್ರೇರಣೆಯಿಲ್ಲದೆ ಇಲ್ಲಿ ಇಂತಹ ಕಾರ್ಯಕ್ಕೆ ಯಶಸ್ಸು ದೊರೆಯಲಾರದು."

"ಈ ಸಂಸ್ಥೆಯನ್ನು ಸರಕಾರೀ ಸಂಬಂಧದಿಂದ ದೂರಿರಿಸಬೇಕೆಂದು ನನ್ನ ಇಚ್ಛೆ."

"ಈ ಪರಿಸ್ಥಿತಿಯಲ್ಲಿ ತಾವು ಈ ಅಸೋಸಿಯೇಶನ್ನಿನಿಂದ ಸಹಾಯದ ಆಶೆ ಹಿಡಿಯಬೇಡಿ. ನನ್ನ ವಿಚಾರವಂತೂ ಹೀಗೆ. ನೀವೇನೆನ್ನುವಿರಿ, ರಾಯಸಾಹೇಬ?"

"ನಿಮ್ಮ ಮಾತು ನಿಜ" ಎಂದರು ರಾಯಸಾಹೇಬರು.

ಪ್ರೇಮಶಂಕರರಿಗೆ ನಿರಾಶೆಯಾಯಿತು. ಇಂತಹ ಸಭೆಯಲ್ಲಿ ನಿಬಂಧ ಓದುವುದೆಂದರೆ ಕಣ್ಣಿಲ್ಲದವರ ಮುಂದೆ ಅತ್ತಂತೆಯೆ ಸೈ! ಲಖನೌದಲ್ಲಿ ಅವರು ಮೂರು ದಿನ ಇದ್ದರು; ಅಸೋಸಿಯೇಶನ್ನಿನ ಸಭೆಗಳಿಗೆ ಹೋಗುತ್ತಲಿದ್ದರು. ಆದರೆ ತಮ್ಮ ಲೇಖನವನ್ನು ಓದಲಿಲ್ಲ; ಓದಿಸುವ ಆಗ್ರಹವೂ ಯಾರಿಗಿರಲಿಲ್ಲ. ಎಲ್ಲರ ಮನಸೂ ಅಧಿಕಾರಿಗಳ ಸೇವಾ ಸತ್ಕಾರಗಳಲ್ಲಿಯೇ ಮಗ್ನವಾಗಿತ್ತು. ಅದೇಕೆ, ಪ್ರೇಮಶಂಕರರು ಅಲ್ಲಿದ್ದುದೇ ಅವರಿಗೆ ಎಡಚಾಗಿತ್ತು. ಈ ಮಹಾ-ಶಯರ ಮನಸ್ಸಿನಲ್ಲಿ ತಮ್ಮ ಬಗ್ಗೆ ತಿರಸ್ಕಾರವಿದೆ ಎಂದು ಅವರು ತಿಳಿದಿದ್ದರು. ಇವರು ಸ್ವರಾಜ್ಯವಾದಿಗಳೆಂದೂ ಅವರಿಗೆ ಗೊತ್ತಾಗಿತ್ತು. ಈ ಕಾರಣದಿಂದಲೇ ಅವರಿಗೆ ನಿಬಂಧವನ್ನೋದಲು ಯಾರೂ ಆಗ್ರಹಪಡಿಸಲಿಲ್ಲ; ಗಾರ್ಡನ್

ಪಾರ್ಟಿಗೆ ಅವರನ್ನು ಕರೆಯಲಿಲ್ಲ ಕೂಡ. ಈ ಪರಿಸ್ಥಿತಿಯಲ್ಲಿ ಪ್ರೇಮ-ಶಂಕರರು ಅಲ್ಲಿ ನಿಲ್ಲುವುದಾದರೂ ಹೇಗೆ? ನಾಲ್ಕನೆಯ ದಿನ ಹೊರಟು ಬಂದು ಬಿಟ್ಟರು. ಎರಡುಮೂರು ದಿನ ಅವರ ಮನಸು ಅತ್ಯಂತ ಖಿನ್ನವಾಗಿತ್ತು— ತಮಗೆ ಆಶಾತೀತ ಸಫಲತೆ ದೊರೆಯದುದಕ್ಕಾಗಿ ಅಲ್ಲ, ಈ ಶ್ರೀಮಂತರ ನೆರವಿಗಾಗಿ ಕೈಯೊಡ್ಡಿ ತಮ್ಮ ಸ್ವಾಭಿಮಾನ ಕಳೆದುಕೊಂಡುದಕ್ಕಾಗಿ. ಒಬ್ಬರೇ ಬಿದ್ದುಕೊಂಡು ಮನಸ್ಸಿನಲ್ಲಿ ಕುದಿಯುತ್ತಿದ್ದರೂ ಆ ಸ್ಥಿತಿ ಅವರ ಆತ್ಮ ಚಿಂತನಕ್ಕೆ ಒಳ್ಳೇ ಅನುಕೂಲವಾಗಿತ್ತು. ನಿಃಸ್ವಾರ್ಥಸೇವೆಯೇ ನನ್ನ ಕರ್ತವ್ಯ. ಪ್ರಯೋಗಶಾಲೆಗೇ ಏಕೆ ಬೆನ್ನುಹತ್ತಿದ್ದೇನೆ ನಾನು? ಅದಿಲ್ಲದೆಯೂ ಕೃಷಿವಿಷಯಕವಾಗಿ ಪ್ರಚಾರ ಸಾಧ್ಯವಿದೆ. ರೋಗನಿವಾರಣೆಯೇನು ಸೇವೆ ಯಲ್ಲವೆ?–ಪ್ರೇಮಶಂಕರರ ಸದುತ್ಸಾಹ ಉತ್ತೇಜಿತವಾಯಿತು. ಪ್ರಾತಃಕಾಲ ದಲ್ಲಿದ್ದು ನೆರೆಯ ಹಳ್ಳಿಗಳಿಗೆ ಹೋಗಿ ಒಕ್ಕಲಿಗರೊಡನೆ ಒಕ್ಕಲುತನದ ಬಗೆಗೆ ಮಾತನಾಡತೊಡಗಿದರು. ಇಲ್ಲಿಯ ಒಕ್ಕಲಿಗರು ಜನ ತಿಳಿದು ಕೊಂಡಷ್ಟು ಮೂರ್ಖರಲ್ಲ ಎಂದು ಅವರಿಗೆ ಕಂಡಿತು. ಒಕ್ಕಲಿಗರಿಂದ ಎಷ್ಟೊ ಹೊಸಜ್ಞಾನ ಅವರಿಗೆ ದೊರೆಯಿತು ಬರುಬರುತ್ತ ಇಡೀ ದಿನ, ಒಮ್ಮೊಮ್ಮೆ ಎರಡು ಮೂರು ದಿನ, ಮನೆಗೇ ಬರುತ್ತಿರಲಿಲ್ಲ ಅವರು.

ಜ್ಯೇಷ್ಠಮಾಸ; ಮುಗಿಲು ಕೆಂಡವನ್ನೇ ಸುರಿಸುತ್ತಿತ್ತು. ರಾಜ್ಯಾಧಿ ಕಾರೀ ವರ್ಗ ಬೆಟ್ಟದಮೇಲೆ ತಂಗಾಳಿಯನ್ನು ಸೇವಿಸುತ್ತಿತ್ತು. ತಿರುಗಾಡುವ ಅಧಿಕಾರಿಗಳ ಸಂಚಾರವೂ ನಿಂತಿತ್ತು. ಪ್ರೇಮಶಂಕರರಿಗೆ ಮಾತ್ರ ಬಿಡು-ವಿರಲಿಲ್ಲ. ಬಹುಮಟ್ಟಿಗೆ ಎರಡುಪ್ರಹರದ ಸಮಯವನ್ನು ಮರಗಳ ನೆರಳಲ್ಲಿ ಕಳೆಯುತ್ತಿದ್ದರು. ಎಷ್ಟೋ ಸಲ ಇಡೀದಿನ ಊಟವಿಲ್ಲದೆ ಕಳೆಯುತ್ತಿದ್ದರು. ಆದರೆ ಸೇವೆಯ ಆಸಕ್ತಿ ಶಾರೀರಿಕ ಸುಖದಲ್ಲಿ ವಿರಕ್ತಿಯನ್ನು ಹುಟ್ಟಿಸಿತ್ತು. ಎಲ್ಲಿಯೋ ಮಾರಿಕಾಬೇನೆ ಆರಂಭವಾದ ಸುದ್ದಿ ಬರುವುದು: ಎಲ್ಲಿಯೋ ಹುಳುಗಳು ಕಬ್ಬಿನ ಬೆಳೆ ಹಾಳುಮಾಡುತ್ತಿರುವ ಸಮಾಚಾರ ಕೇಳುವುದು; ಮತ್ತೆಲ್ಲಿಯೋ ಹೊಡೆದಾಟವಾದ ವಾರ್ತೆ ತಿಳಿಯುವುದು. ಪ್ರೇಮಶಂಕರರು ಅಲ್ಲಿಗೆಲ್ಲಾ ಹೋಗುವರು; ಕಷ್ಟನಿವಾರಣೆಗಾಗಿ ಸಾಧ್ಯವಿದ್ದುದನ್ನೆಲ್ಲ ಮಾಡುವರು. ಒಮ್ಮೊಮ್ಮೆ ಲಖನಪುರದವರೆಗೂ ಹೋಗುವರು. ಆಷಾಢದಲ್ಲಿ ಮಳೆಯಾದಾಗ ಅವರ ಕೆಲಸಕ್ಕೆ ಬಹಳ ತೊಂದರೆಯಾಯಿತು. ಒಂದು

ವಿಶಿಷ್ಟ ಧಾನ್ಯದ ಪ್ರಚಾರ ಮಾಡಬೇಕೆಂದು ಪ್ರೇಮಶಂಕರರು ಇಚ್ಛಿಸಿದ್ದರು. ಕಾಯಿಪಲ್ಲೆಯ ಬೀಜಗಳನ್ನು ಹಂಚುವುದಕ್ಕಾಗಿ ತರಿಸಿದ್ದರು. ಅವುಗಳನ್ನು ಬಿತ್ತುವ ಬೆಳೆಯುವ ರೀತಿಯನ್ನು ತಿಳಿಸಿಹೇಳುವ ಅಗತ್ಯವೂ ಇತ್ತು. ಅದಕ್ಕಾಗಿಯೇ ಅವರು ನಗರದಿಂದ ನಾಲ್ಕೈದು ಮೈಲು ದೂರದಲ್ಲಿ, ಬರನಾ ದಂಡೆಯ ಹಾಜೀಗಂಜದಲ್ಲಿ ಮನೆಮಾಡಬೇಕೆಂದು ನಿರ್ಧರಿಸಿದರು. ಊರ ಹೊರಗೆ ಹುಲ್ಲುಗುಡಿಸಲೊಂದು ಸಿದ್ಧವಾಯಿತು. ಎರಡು ಮೂರು ಮಂಚ-ಗಳು ಬಂದವು. ಊರ ಜನಕ್ಕೆ ಅವರಮೇಲೆ ಬಹಳ ಭಕ್ತಿಯಿತ್ತು. ಅವರು ಬಂದುದು ಮಹಾಭಾಗ್ಯವೆಂದು ಅವರು ತಿಳಿದರು.

ಅಲ್ಲಿ ಪ್ರೇಮಶಂಕರರಿಗೆ ಅತ್ಯಂತ ಶಾಂತಿ ದೊರೆಯುತ್ತಿದ್ದಿತಾದರೂ ಆಗಾಗ ಶ್ರದ್ಧೆಯ ನೆನಪಿನಿಂದ ಅವರ ಮನಸು ವಿಕಲವಾಗುತ್ತಿತ್ತು. ಅವಳೂ ಜೊತೆಯಲ್ಲಿದ್ದಿದ್ದರೆ ಎಂದೆನಿಸುವುದು. ತನ್ನ ವಿರುದ್ಧವಾಗಿ ಜ್ಞಾನಶಂಕರರೇ ಅವಳ ಕಿವಿಯೂದಿದ್ದಾರೆ ಎಂಬುದು ಗೊತ್ತಾದುದರಿಂದ, ಅವಳಮೇಲೆ ಕ್ರೋಧದ ಬದಲು ಈಗ ದಯೆ ಉಂಟಾಗುತ್ತಿತ್ತು. ಒಮ್ಮೆ ಅವಳನ್ನು ಕಾಣಬೇಕು, ಅವಳ ಮನೋಗತ ಭಾವಗಳನ್ನು ತಿಳಿದುಕೊಳ್ಳಬೇಕು ಎಂದು ಎಷ್ಟೋ ಸಲ ಅವರ ಜೀವ ಹಂಬಲಿಸುವುದು. ಎಷ್ಟೋ ಸಲ ಅವಳಿಗೆ ಕಾಗದ ಬರೆಯಬೇಕೆಂದು ನಿಶ್ಚಯಿಸಿ, ಉತ್ತರ ಕೊಡುವಳೋ ಇಲ್ಲವೋ ಎಂಬ ವಿಚಾರದಿಂದ ಸುಮ್ಮನಾಗುತ್ತಿದ್ದರು. ಈ ಚಿಂತೆಯಲ್ಲದೆ ಧನದ ಅಭಾವದ ಕಷ್ಟವೂ ಇತ್ತು. ಅಮೇರಿಕೆಯಿಂದ ತಂದಿದ್ದ ಹಣ ಈ ಆರು ತಿಂಗಳಲ್ಲಿ ಮುಗಿದುಹೋಗಿತ್ತು. ಅಲ್ಲಿ ಪ್ರತಿನಿತ್ಯವೂ ಅವರಿಗೆ ಹಣದ ಅಗತ್ಯವಿರುತ್ತಿತ್ತು. ಕೊನೆಗೆ ತಮ್ಮ ಪಾಲಿನ ಉತ್ಪನ್ನವನ್ನು ಬೇಡಬೇಕೆಂಬ ನಿರ್ಧಾರಕ್ಕೆ ಬಂದರು. ನನ್ನ ಪಾಲಿನದೆಲ್ಲವನ್ನೂ ಹಾರಿಸಲು ಅವರಿಗೇನು ಅಧಿಕಾರ ? ಒಂದು ಸಾವಿರದಷ್ಟು ನನಗೆ ದೊರೆಯಬಹುದು. ಸದ್ಯಕ್ಕೆ ಸಾಗುತ್ತದೆ, ಮುಂದೆ ನೋಡಿದರಾಯಿತು — ಎಂದು ಯೋಚಿಸಿದರು. ಮೊದಲೆಂದೂ ಪ್ರೇಮಶಂಕರರ ಲಕ್ಷ್ಯ ಆ ಕಡೆ ಹರಿದಿರಲಿಲ್ಲ. ಆ ಹಣ ತೆಗೆದುಕೊಳ್ಳುವುದು ಉಚಿತವಲ್ಲವೆಂದು ಎಣಿಸಿದ್ದರು. ಅಭಾವ ಎಲ್ಲ ಸಿದ್ಧಾಂತ ಸಂಕಲ್ಪಗಳಿಗೂ ಕುಠಾರಪ್ರಾಯ. ಜ್ಞಾನಶಂಕರರಿಗೆ ಎಲ್ಲವನ್ನೂ ಸ್ಪಷ್ಟವಾಗಿ ಬರೆದು ತಿಳಿಸಬೇಕೆಂದು ಕುಳಿತರು. ಆದರೆ ಬರೆಯುದು

ಇಷ್ಟೆ: "ನನಗೆ ಹಣದ ಅಗತ್ಯ ಬಹಳವಿದೆ; ಸಹಾಯ ಮಾಡುವಿರೆಂದು ನಂಬಿದ್ದೇನೆ."

ಕಾಗದವನ್ನು ನೋಡಿ ಜ್ಞಾನಶಂಕರರು ಕೋಪಾವಿಷ್ಟರಾದರು. ಶ್ರದ್ಧೆಯನ್ನು ಕುರಿತು ಕೂಗಾಡಿದರು. "ಏನೂ ಕೆಲಸ ಬೊಗಸೆ ಮಾಡುವ ಹಾಗಿಲ್ಲ, ಕೂತಲ್ಲೇ ಕೀರ್ತಿಯ ಆನಂದ ಅನುಭವಿಸಬೇಕೆನ್ನುತ್ತಾನೆ ಇಲ್ಲಿ ದುಡ್ಡು ಸುರಿಯುತ್ತಾ ಇದೆ ಎಂದು ತಿಳಿದಿದ್ದಾನೆ. ಏನೂ ಕಷ್ಟ ನಷ್ಟ ಇಲ್ಲದೆ ಉತ್ಪನ್ನ ಬರುತ್ತದೆಯೇನು? ಕಚೇರಿ ಕಟ್ಟಿಯ ವೆಚ್ಚದೊಳಗೆ ಮನುಷ್ಯ ಜಿಬ್ಬಿಯಾಗಿ ಹೋಗುತ್ತಾನೆ. ಒಂದು ಸಾವಿರ ಸಾಲ ತಂದು ಖರ್ಚಾಗಿಹೋಯಿತು. ಮತ್ತಿನ್ನೂ ಇಡೀ ವರುಷಬಿದ್ದಿದೆ. ಲೆಕ್ಕಪತ್ರ ಒಮ್ಮೆ ನೋಡಿದರೆ ಕಣ್ಣು ತೆರೆದಾವು. ಜಮೀನುದಾರಿ ಎಂದರೆ ಬಡಿಸಿಟ್ಟ ಎಡೆಯಲ್ಲ ಎಂಬುದು ಕಂಡೀತು. ನೂರು ನೂರುಗಟ್ಟಲೆ ರೂಪಾಯಿ ಅನುಬುದಾರರ ಕಪ್ಪ-ಕಾಣಿಕೆಗೇ ಫಸ್ಸಾಗುತ್ತದೆ."

ಹೀಗೆನ್ನುತ್ತಲೇ ಸಿಟ್ಟಿನಿಂದ ಪತ್ರಕ್ಕೆ ಉತ್ತರಬರೆಯಲು ಕೆಳಗಿಳಿದರು. ಅವರಿಗೆ ತನ್ನ ಸ್ಥಿತಿಯಮೇಲೆ, ದುರ್ದೈವದಮೇಲೆ, ಸಿಟ್ಟುಬರುತ್ತಲಿತ್ತು. ರಾಯ ಕಮಲಾನಂದರ ಮಾತು ನೆನಪಾಯಿತು ಅವರು ಎಂದಂತೆಯೇ ಆಯಿತು.

ಸಂಜೆಯಾಗಿತ್ತು. ಮೋಡ ಕವಿದಿತ್ತು. ಪ್ರೇಮಶಂಕರರು ಓಲೆ ಒಯ್ವ ಮನುಷ್ಯನ ಹಾದಿಕಾಯುತ್ತಿದ್ದರು. ಉತ್ತರ ಏನೆಂದು ಬರುತ್ತದೊ ಎಂದು ಕಾತರದಿಂದ ವಿಚಾರಮಾಡುತ್ತಿರುವಾಗ ಒಂದು ಎಕ್ಕಾ ಬರುತ್ತಿರುವುದು ಕಂಡಿತು. ಲಾಲಾ ಪ್ರಭಾಶಂಕರರು ಅದರಲ್ಲಿದ್ದರು. ಪ್ರೇಮಶಂಕರರು ಧಾವಿಸಿಹೋಗಿ ಅವರನ್ನು ಸ್ವಾಗತಿಸಿದರು. ಪ್ರಭಾಶಂಕರರು ಅವರನ್ನು ತಬ್ಬಿಕೊಳ್ಳುತ್ತ "ತಗೋ, ಶ್ರದ್ಧಾ ಈ ಕಾದಗ ಈ ಸಂದೂಕ ನಿನಗೆಕೊಡಲು ಕೊಟ್ಟಿದ್ದಾಳೆ." ಎಂದರು.

ಪ್ರೇಮಶಂಕರರು ಅತ್ಯಂತ ಉತ್ಸುಕತೆಯಿಂದ ಕವರನ್ನು ತೆಗೆದುಕೊಂಡು ಒಡೆದು ಕಾಗದ ಓದಿದರು.

"ಪ್ರಿಯ ಪ್ರಾಣಪತಿ, ದಾಸಿಯ ಪ್ರಣಾಮಗಳನ್ನು ಸ್ವೀಕರಿಸಿರಿ. ತಾವು ಅಮೇರಿಕೆಯಲ್ಲಿದ್ದಾಗ ವಿಯೋಗ ದುಃಖವನ್ನು ಧೈರ್ಯದಿಂದ

ಸ್ವೀಕರಿಸಿದೆ. ಆದರೆ ತಮ್ಮ ಈ ಏಕಾಂತನಿವಾಸ ಅಸಹ್ಯವಾಗಿದೆ. ಇಲ್ಲಿ ನಾನು ತಮ್ಮೊಡನೆ ಮಾತನಾಡುತ್ತಿರಲಿಲ್ಲ, ಭೆಟ್ಟಿಯಾಗುತ್ತಿರಲಿಲ್ಲ; ಆದರೆ ಕಣ್ಣಿಂದ ನೋಡುತಿ ದ್ದೆ, ತಮ್ಮ ಸೇವೆ ಮಾಡುತ್ತಿದ್ದೆ. ತಾವು ನನ್ನ ಈ ಸೌಭಾಗ್ಯವನ್ನೂ ಕಸಿದುಕೊಂಡಿರಿ. ನನಗೋ ಜನರ ಅಪಹಾಸ್ಯದ ಭಯ ವಿತ್ತು, ತಮಗೂ ಇದೆಯೆ? ತಮ್ಮನ್ನು ಭೆಟ್ಟಿಯಾಗಲು ಅನಿಷ್ಟದ ಚಿಂತೆಯು ಆತಂಕವಿದೆ ಧರ್ಮಭ್ರಷ್ಟರಾಗಿ ಯಾರು ಸುಖದಿಂದ ಬಾಳಿಯಾರು? ತಾವು ಈ ವಿಚಾರದವರಲ್ಲ; ಎಂದಮೇಲೆ ನನ್ನ ಸಮಾಚಾರ ಏಕೆ ತೆಗೆದು ಕೊಳ್ಳುವುದಿಲ್ಲ?

"ಇಲ್ಲಿ ತಮ್ಮ ಪ್ರಾಯಶ್ಚಿತ್ತದ ಮಾತಾಡುತ್ತಿದ್ದಾರೆ ಮಂದಿ. ತಮಗೆ ಸಮಾಜದ ಭಯವಿಲ್ಲವೆಂದು ನಾನು ಬಲ್ಲೆ. ಆದರೆ ನನ್ನಲ್ಲಿ ತಮಗೆ ದಯೆ ಯಿದೆ, ಪ್ರೇಮವಿದೆ ಎಂಬುದೂ ನನಗೆ ಗೊತ್ತಿದೆ. ನನಗಾಗಿ ಇಷ್ಟು ಮಾಡಲಾರಿರಾ? ನನ್ನ ಧರ್ಮವನ್ನು ಕಾಪಾಡುವುದಿಲ್ಲವೆ?

"ಸಂದುಕದಲ್ಲಿ ನನ್ನ ಕೆಲವು ಆಭರಣ, ಸ್ವಲ್ಪ ಹಣ ಇವೆ ನಾನಿನ್ನು ಆಭರಣ ಯಾರಿಗಾಗಿ ಇಡುವುದು? ಯಾರು ನೋಡುತ್ತಾರೆ? ಈ ಕ್ಷುದ್ರ ಕಾಣಿಕೆಯನ್ನು ಸ್ವೀಕರಿಸಿರಿ. ತಿರುಗಿ ಬಿಟ್ಟರೆ ತಾವು ನನ್ನ ಸಂಬಂಧವನ್ನು ಕಡಿದುಕೊಂಡಿರೆಂದಾಗುವುದು.

ತಮ್ಮ ಅಭಾಗಿನಿ

ಶ್ರದ್ಧಾ"

ಪೆಟ್ಟಿಗೆಯನ್ನು ತಿರುಗಿ ಕಳಿಸಿಬಿಡಬೇಕು ಎಂದು ಪ್ರೇಮಶಂಕರರಿಗೆ ಮೊದಲೆನಿಸಿತು. ನಿನ್ನ ಸಹಾಯದ ಅಗತ್ಯವಿಲ್ಲವೆಂದು ಬರೆದುಬಿಡಬೇಕು ಎಂದುಕೊಂಡರು. ತನ್ನೊಡನೆ ಇಷ್ಟು ನಿಷ್ಠುರಳಾಗಿ ನಡೆದುಕೊಳ್ಳುವ ಹೆಂಡತಿಯ ಮುಂದೆ ನೆರವಿಗಾಗಿ ಕೈಯೊಡ್ಡಲು ನಾಚಿಕೆಯಿಲ್ಲದವನೇ? ಆದರೆ ಮರುಕ್ಷಣದಲ್ಲಿ ಈ ವಿಚಾರ ಬದಲಾಯಿತು. ಇವಳು ಮನಸಿನಲ್ಲಿ ಏನಾದರೊಂದು ಯೋಜನೆ ಮಾಡಿಕೊಂಡಿರಲಿಕ್ಕಿಲ್ಲವಷ್ಟೆ, ಎಂದು ಸಂದೇಹ ವುಂಟಾಯಿತು. ಅಸ್ಥಿರ ಚಿತ್ತದಿಂದ ಎಡೆಯಾಡತೊಡಗಿದರು.

"ತಮಗೆ ಗೊತ್ತಿರಬಹುದಲ್ಲ– ಈಕೆಯೊಡನೆ ಜ್ಞಾನಶಂಕರನ ನಡೆವಳಿಕೆ ಹೇಗಿದೆ?" ಸಹಸಾ ಪ್ರೇಮಶಂಕರರು ಪ್ರಭಾಶಂಕರರನ್ನು ಪ್ರಶ್ನಿಸಿದರು

"ಈ ವಿಷಯ ನನ್ನನ್ನು ಕೇಳಬೇಡ ತಮ್ಮಾ. ಇಷ್ಟು ಮಾತ್ರ ಹೇಳಬಹುದು: ನೀನು ಇಲ್ಲಿರುವುದರಿಂದ ಅವಳಿಗೆ ಬಹಳ ದುಃಖವಾಗಿದೆ. ನಿನ್ನಲ್ಲಿ ಅವಳಿಗೆ ಎಷ್ಟೊಂದು ಪ್ರೇಮವಿದೆ ಎಂಬುದನ್ನು ನೀನು ಬಲ್ಲೆ. ನಿನಗಾಗಿ ಅವಳು ಮಹಾ ತಪಸ್ಸು ಮಾಡಿದ್ದಾಳೆ. ಅವಳಮೇಲೆ ಅವಕೃಪೆ ಮಾಡುವುದು ತರವಲ್ಲ." ಎಂದರು ಪ್ರಭಾಶಂಕರರು.

"ಅಲ್ಲಿರುವುದಕ್ಕೆ ನನ್ನದೇನೂ ಅಡ್ಡಿಯಿಲ್ಲ. ಜ್ಞಾನಶಂಕರನ ಕುಟಿಲ ವ್ಯವಹಾರದಿಂದ ದುಃಖ ಮಾತ್ರ ಆಗುವುದು. ಅಲ್ಲದೆ, ಅಲ್ಲಿ ಕುಳಿತು ಈ ಕೆಲಸ ಮಾಡಲಿಕ್ಕಾಗುವುದಿಲ್ಲ. ಒಕ್ಕಲಿಗರ ಮಧ್ಯದಲ್ಲೇ ಇದ್ದರೆ ಆಗುವಷ್ಟು ಕೆಲಸ ಬೇರೆಯಿದ್ದರೆ ಆಗುವುದಿಲ್ಲ. ನಿಮ್ಮಲ್ಲಿ ನನ್ನ ಬೇಡಿಕೆ ಇಷ್ಟೇ, ಅವಳನ್ನು ಕರೆದು ಸಮಾಧಾನ ಹೇಳಿರಿ. ನನ್ನ ದೃಷ್ಟಿಯಿಂದ ಅವಳ ನಡತೆ ಎಷ್ಟು ಅನುಚಿತವಾಗಿದ್ದರೂ ಆಕೆ ನಿರಪರಾಧಿ ಎಂದೇ ನಾನು ಭಾವಿಸಿದ್ದೇನೆ. ಇದೆಲ್ಲ ಎರಡನೆಯವರ ಪುಸಲಾವಣೆಯ ಫಲ. ನನಗೆ ಸಂದೇಹವಾಗುತ್ತದೆ— ಅವಳು ಜೀವಕ್ಕೇನಾದರೂ ಮಾಡಿಕೊಳ್ಳಬಾರದು."

"ಹಾಗಾದರೆ, ವಾರದಲ್ಲಿ ಒಮ್ಮೆಯಾದರೂ ನೀನು ಅಲ್ಲಿಗೆ ಬರುತ್ತೇನೆಂದು ಮಾತು ಕೊಡಬೇಕು."

"ಹಾಗೆ ಗಟ್ಟಿಮುಟ್ಟಾಗಿ ವಚನ ಕೊಡುತ್ತೇನೆ."

ಪ್ರಭಾಶಂಕರರು ಹೊರಡಲನುವಾದರು. ಪ್ರೇಮಶಂಕರರು ಒತ್ತಾಯದಿಂದ ನಿಲ್ಲಿಸಿಕೊಂಡರು. ಅವರು ಮಲಗಿದ ಮೇಲೆ ಪ್ರೇಮಶಂಕರರು ಸಂದುಕವನ್ನು ತೆರೆದು ನೋಡಿದರು. ಎಲ್ಲ ಚಿನ್ನದಾಭರಣಗಳಿದ್ದವು. ಹಣ ಎಣಿಸಿದರು; ಪೂರ್ಣ ಒಂದು ಸಾವಿರ ಇದ್ದವು. ತಮ್ಮ ನಿಷ್ಠುರತೆಗಾಗಿ ಅವರಿಗೆ ಅತ್ಯಂತ ಗ್ಲಾನಿಯಾಯಿತು. ಶ್ರದ್ಧೆಯ ಭಕ್ತಿಯ ಮುಂದೆ ತಮ್ಮ ಕಟುಕತನ ಮತ್ತು ಅನೌದಾರ್ಯಗಳು ಬಹು ನಿಂದ್ಯವಾಗಿ ಕಂಡವು. ಸಂದುಕವನ್ನು ಮುಚ್ಚಿ ಮಂಚದ ಬುಡದಲ್ಲಿಟ್ಟು ಮಲಗಿದರು. ಯೋಚನೆ ಆರಂಭವಾಯಿತು.—ಈ ಆಭರಣಗಳನ್ನು ಏನು ಮಾಡಬೇಕು? ಒಟ್ಟು ಸಂಪತ್ತು ಐದು ಸಾವಿರಕ್ಕೆ ಕಡಿಮೆಯೇನೂ ಇರಲಿಕ್ಕಿಲ್ಲ. ಇವನ್ನು ನಾನು ತೆಗೆದುಕೊಂಡುಬಿಟ್ಟರೆ ಶ್ರದ್ಧೆಗೆ ಅವಲಂಬನವೇ ಇಲ್ಲದಾಗುವುದು. ಆದರೆ ನನ್ನ ಸ್ಥಿತಿ ಯಾವಾಗಲೂ ಹೀಗೆಯೆ ಏನಿರುವುದಿಲ್ಲವಷ್ಟೆ. ಈಗ ಸಾಲವೆಂದು

ಸ್ವೀಕರಿಸಿವರಾಯಿತು; ಹಿಂದುಗಡೆ ಬಡ್ಡಿ ಸಮೇತ ಮರಳಿ ಕೊಟ್ಟರಾಯಿತು. ಇಪ್ಪತ್ತೈದು ಬಿಘೆ ಪಡಭೂಮಿ ತೆಗೆದುಕೊಂಡರೆ ಎರಡು ಎರಡೂವರೆ ಸಾವಿರದಲ್ಲಿ ಬಗೆಹರಿಯುತ್ತದೆ. ಒಂದು ಸಾವಿರ ಗೊಬ್ಬರಕ್ಕೆ, ಮಣ್ಣು ಹದ ಮಾಡುವುದಕ್ಕೆ ಬೇಕು. ಒಂದು ಸಾವಿರದಲ್ಲಿ ಎರಡು ಜೋಡು ಎತ್ತು, ಇತರ ಸಾಮಗ್ರಿ ಕೊಳ್ಳಬೇಕು. ಹತ್ತು ಬಿಘೆಗಳ ಒಂದು ಸುಂದರವಾದ ತೋಟ, ಹದಿನೈದು ಬಿಘೆಗಳ ಹೊಲ ಮಾಡಬೇಕು. ಎರಡು ವರುಷ ಹುಟ್ಟುವಳಿ ಕಡಿಮೆ ಬರಬಹುದು. ಮುಂದೆ ಎರಡು ಎರಡೂವರೆ ಸಾವಿರದ ವಾರ್ಷಿಕ ಉತ್ಪನ್ನಕ್ಕೆ ಸಾವಿಲ್ಲ. ನನಗೆ ವರುಷಕ್ಕೆ ಇನ್ನೂರು ರೂಪಾಯಿ ಸಾಕು. ಮಿಕ್ಕದು ನನ್ನ ಉದ್ದಿಷ್ಟ ಕಾರ್ಯಕ್ಕೆ ಒದಗುತ್ತದೆ. ಎಂದರೆ ಯಾರ ನೆರವೂ ಇಲ್ಲದೆ ನನ್ನ ಕೆಲಸವಾಗುತ್ತದೆ.

ಈ ಎಣಿಕೆ ಗುಣಿಕೆಯಲ್ಲಿಯೇ ಪ್ರೇಮಶಂಕರರು ಮಗ್ನರಾಗಿದ್ದರು. ಒನಕೆ ಗಡುತರ ಮಳೆ ಸುರಿಯುತ್ತಿತ್ತು. ಆಗ ಒಮ್ಮಿಗಿಲೆ ಗುಡುಗಿನಂತಹ ಸದ್ದು ಕೇಳಿಸಿತು. ಆ ಸದ್ದು ದೊಡ್ಡ ಸೇತುವೆಯ ಮೇಲೆ ಉಗಿಬಂಡಿ ಹೋಗುತ್ತಿರುವ ಹಾಗೆ ಬಹಳ ಹೊತ್ತು ಕೇಳಿಸುತ್ತಲೇ ಇತ್ತು. ತುಸು ಹೊತ್ತಿನಲ್ಲಿ ಊರ ಕಡೆಯಿಂದ ಜನರ ಕೂಗಾಟ ಅಳು ಕೇಳಿಸತೊಡಗಿತು. ಪ್ರೇಮಶಂಕರರು ಗಾಬರಿಯಾಗಿ ಎದ್ದು ಊರ ಕಡೆಗೆ ನೋಡಿದರು. ಜನರು ತೊಗರೆ-ಪುಂಡಿಗಳ ಪಂಜುಗಳನ್ನು ಹಿಡಿದುಕೊಂಡು ನದಿಯ ಕಡೆ ಓಡುತ್ತಿದ್ದರು. ಮರುಕ್ಷಣದಲ್ಲಿ ಪಂಜುಗಳ ಪ್ರತಿಬಿಂಬ ಕಂಡಂತೆ ಭಾಸವಾಯಿತು- ಊರೊಳಗೆ ನೀರೇ ನೀರಾಗಿರುವಂತೆ ತೋರಿತು.

ವಿಲಂಬಿಸಲು ಅವಕಾಶವಿಲ್ಲ. ಪ್ರೇಮಶಂಕರರು ಊರ ಕಡೆ ಹೊರಟರು. ಊರನ್ನು ಸಮೀಪಿಸಿದಾಗ ದೊಡ್ಡ ಹಾಹಾಕಾರವೇ ಎದ್ದಿತ್ತು. ಊರವರೆಲ್ಲರೂ—ಮುದುಕರು, ಯುವಕರು, ಹುಡುಗರು, ಹೆಂಗಸರು— ಗುಡಿಯ ಕಟ್ಟೆಯ ಮೇಲೆ ನಿಂತು ಪ್ರಳಯಕಾರಿ ಮೇಘ ಲೀಲೆಯನ್ನು ನೋಡುತ್ತಿದ್ದರು. ಪ್ರೇಮಶಂಕರರನ್ನು ಕಂಡೊಡನೆ ಜನರು ಧಾವಿಸಿ ಬಂದು ಸುತ್ತುವರಿದರು. ಹೆಂಗಸರು ಅಳತೊಡಗಿದರು.

"ನೆರೆ ಈ ಸಲವೇ ಬಂದೈತ್ಯೋ ಹಿಂದಕೂ ಎಂದಾದರೂ ಬಂದಿತ್ತೊ?" ಎಂದು ಪ್ರೇಮಶಂಕರರು ಕೇಳಿದರು.

" ಎರಡು ಮೂರು ವರುಷಕ್ಕೊಮ್ಮೆ ಬಂದೇ ಬರ್‍ತಯ್ತಿ. ಒಮ್ಮೊಮ್ಮೆಂತೂ ವರುಷದಾಗ ಎರಡು ಬ್ಯಾರೆ ಬರ್‍ತಯ್ತಿ. " ಭವಾನೀಸಿಂಹ ಹೇಳಿದ.

" ಏನಾವರೂ ಉಳಿದಯ್ತೋ ಏನೆಲ್ಲಾ ಮುಣುಗಿಹೋಯ್ತೋ ? "

" ಕತ್ತಲದಾಗ ಏನೂ ತಿಳಿಯೋಹಂಗ ಇಲ್ಲ. ಆದರ ಮನಿ ಒಂದೂ ಉಳಿದಿಲ್ಲ ಅಂತ ಕಾಣ್ತಯ್ತಿ. ಅರಿವೆ ಅಂಚಡಿ, ಪಾತ್ರಿ ಪಡಗ, ಎಲ್ಲಾ ಕೊಚ್ಚಿಕೊಂಡು ಹೋಗ್ಯಾವು. ಕೈಸಂಗತೀ ಏನಾದರೂ ತರೋಟು ಕೂಡ ವ್ಯಾಳ್ಯೆ ಸಿಗಲಿಲ್ಲ. ಕುಂತ ಕುಂತ ಹಂಗೇ ಎದ್ದು ಓಡಿಬಂದಿವು. ಇಂತಾ ನೆರಿ ಎಂದೂ ಬಂದಿರಾಣಿಲ್ಲ. "

" ದನಾ ಕರಾನೂ ತೇಲಿ ಹೋದವೇನು ? "

" ದೇವರೇ ಬಲ್ಲ. ಕೆಲವು ಕಣ್ಣಿ ಕಿತ್ತುಕೊಂಡು ಓಡಿಹೋಗ್ಯಾವು. ಕೆಲವು ಮುಳುಗಿಹೋಗ್ಯಾವು; ಕೆಲವು ಕುತ್ತಿಗಿಮಟ ನೀರಾಗ ನಿಂತ್ಯಾವು. ಇನ್ನೊಂದು ಗೇಣು ನೀರು ಏರಿದರ ಅವೂ ಕೈಗೆ ಹತ್ತಾಕಿಲ್ಲ. "

" ಎಲ್ಲಾ ಹೋದರೂ ಅವನ್ನಂತೂ ಉಳಿಸಿಕೋಬೇಕು. ಐದೈದು ಮಂದೀ ಗುಂಪು ಮಾಡಿಕೊಂಡು ಊರಾಗ ತಿರುಗಾಡಿ ಬರ್ರಿ. ಸಿಕ್ಕಷ್ಟು ದನಾ ನಮ್ಮ ಗುಡಿಸಲ ಕಡೆ ಹೊಡಕೊಂಡು ನಡೀರಿ. ನಾನೂ ಬರ್‍ತೇನಿ ನಿಮ್ಮ ಕೂಟ. ಈ ಕೆಲಸಕ್ಕೆ ಸಿದ್ಧರಿದ್ದವರು ಮುಂದೆ ಬರ್ರಿ. "

ಪ್ರೇಮಶಂಕರರ ಉತ್ಸಾಹದಿಂದ ಎಲ್ಲರಿಗೂ ಹುರುಪುಬಂದಿತು. ಅಯ್ವತ್ತು ಅರವತ್ತು ಮಂದಿ ಮುಂದಾದರು. ಎಲ್ಲರ ಕೈಯಲ್ಲಿಯೂ ಬಡಿಗೆಗಳಿದ್ದವು. ಅವರು ಪ್ರೇಮಶಂಕರರನ್ನು ಬಿಡಿಸಲು ಪ್ರಯತ್ನಿಸಿದರು. ಅವರು ಕೇಳಲಿಲ್ಲ. ಒಂದು ಬಡಿಗೆ ತೆಗೆದುಕೊಂಡು ಮುಂಬರಿದರು. ತೇಲಿ ಹೋಗುವ ಗುಡಿಸಲುಗಳು, ಬಿದ್ದ ಮರಗಳು, ಮರದಸಾಮಾನುಗಳು ಇವುಗಳನ್ನು ತಡಹಾಯುತ್ತ ಸಾಗಬೇಕಿತ್ತು. ಊರಿನ ಕುರುಹೇ ತಿಳಿಯದು. ಜನರಿಗೆ ತಮ್ಮ ತಮ್ಮ ಮನೆಯ ಗುರುತೇ ಹತ್ತದು. ಅಲ್ಲಲ್ಲಿ ದನಗಳ ಡುರಿಕೆಗಳು ಮಾತ್ರ ಕೇಳಬರುತ್ತಿದ್ದವು. ಕೆಲವು ತೇಲಿಹೋಗುವ ದನಗಳು ಕೈಗೆ ಸಿಕ್ಕವು. ಪಶುರಕ್ಷಣೆಯ ಉದ್ಯೋಗ ರಾತ್ರಿಯೆಲ್ಲ ನಡೆಯಿತು.

ಪ್ರೇಮಶಂಕರರ ಧೈರ್ಯ ಸಾಹಸಗಳಿಂದ ಕೈಲಾಗದವರಿಗೂ ಬಲಬಂದಿತ್ತು. ಅವರು ಸೂರ್ಯೋದಯಕ್ಕೆ ತಮ್ಮ ಗುಡಿಸಲಿಗೆ ಬಂದಾಗ ಇನ್ನೂರಕ್ಕಿಂತ ಹೆಚ್ಚು ದನಗಳು ಆನಂದದಿಂದ ಮೆಲುಕಾಡಿಸುತ್ತ ಮಲಗಿದ್ದವು.

ನಾಲ್ಕನೆಯ ದಿನ ಆಕಾಶ ನಿರ್ಮಲವಾಯಿತು. ನೆರೆಯೂ ಇಳಿಯಿತು. ಊರಿನ ಹೆಚ್ಚು ಮಂದಿ ಬೇರೆ ಊರುಗಳಿಗೆ ಹೋಗಿದ್ದರು. ಕೆಲವರು ಪ್ರೇಮ-ಶಂಕರರ ಗುಡಿಸಲಿನ ಬಳಿ •ಗರಿಗಳ ಗೂಡು ಕಟ್ಟಿಕೊಂಡಿದ್ದರು. ಯಾರ ಬಳಿಯೂ ಆಹಾರವಿರಲಿಲ್ಲ. ಅತ್ಯಂತ ಶೋಚನೀಯ ದೃಶ್ಯ. ಪ್ರೇಮಶಂಕರರು ಚಿಂತಿಸತೊಡಗಿದರು: ಎಂತಹ ವಿಷಮ ಸಮಸ್ಯೆ! ಈ ದೀನರಿಗೆ ರಕ್ಷಕರು ಯಾರೂ ಇಲ್ಲ. ಯಾವಾಗಲೂ ಈ ಸಂಕಟಕ್ಕೆ ಬಲಿಯಾಗುತ್ತಾರೆ. ಆದರೆ ಇವರು ಇದರ ನಿವಾರಣೆ ಮಾಡಿಕೊಳ್ಳಲಾರರು. ಒಂದೆರಡು ವರುಷ ಹೊಟ್ಟೆ ಕಟ್ಟಿ ಕೂಡಿಟ್ಟುದು ಜಲಾರ್ಪಣವಾಗಿಬಿಡುತ್ತದೆ. ಎಷ್ಟು ಧನ, ಎಷ್ಟು ಜನ ನೀರುಪಾಲಾಗುತ್ತಾರೆ; ಎಷ್ಟು ಮನೆಗಳು ನೆಲಸಮವಾಗುತ್ತವೆ, ಎಷ್ಟು ಮನೆತನಗಳು ಹಾಳಾಗುತ್ತವೆ.—ಇದು ಕೇವಲ ಊರ ಪಕ್ಕದಲ್ಲಿ ಗಟ್ಟಿಯಾದ ಒಡ್ಡು ಕಟ್ಟುವ ಸಾಹಸ ಇವರಿಗಿಲ್ಲದುದಕ್ಕೆ. ಹಣವಿಲ್ಲ; ಹಣವಿಲ್ಲದೆಯೂ ದೊಡ್ಡ ದೊಡ್ಡ ಕಾರ್ಯಗಳನ್ನು ಸಾಧಿಸಬಹುದಾದ ಸಹಮತಿಯಿಲ್ಲ, ಸಂಘಟನೆ ಯಿಲ್ಲ. ಇಂತಹದೊಂದು ಒಡ್ಡಾದರೆ ಈ ಊರು ಮಾತ್ರವಲ್ಲ, ಆಸುಪಾಸಿನ ಕೆಲ ಊರುಗಳೂ ಸುರಕ್ಷಿತವಾಗುತ್ತವೆ. ನಾಲ್ಕೈದು ಸಾವಿರ ರೂಪಾಯಿ ಇವೆ ನನ್ನ ಹತ್ತಿರ. ಈ ಕೆಲಸ ನಾನೇಕೆ ಕೈಕೊಳ್ಳಬಾರದು? ಊರ ಜನಕ್ಕೆ ದುಡ್ಡು ಕೊಡಲಾಗದಿದ್ದರೂ ದುಡಿಯಬಲ್ಲರು. ಇವರನ್ನು ಸಂಘಟಿಸಬೇಕು ಅಷ್ಟೆ.

ಈ ವಿಚಾರದಿಂದ ಅವರು ಉತ್ಸಾಹಗೊಂಡರು. ತ್ವರೆಯಿಂದೆದ್ದು ಒಡ್ಡಿನ ಸ್ಥಳ ನಿರೀಕ್ಷಣೆಗಾಗಿ ಕೆಲ ಜನರೊಡನೆ ಹೊರಟರು. ಹೊಳೆಯ ದಂಡೆಯ ಮೇಲೆ ನಿಂತು, ಹಗ್ಗದಿಂದ ಅಳತೆ ಮಾಡಿ, ಕಾಗದದಲ್ಲಿ ನಕ್ಷೆ ತೆಗೆದರು. ಮಳೆಗಾಲ ಮುಗಿಯುತ್ತಲೂ ಕೆಲಸ ಆರಂಭಿಸಬೇಕೆಂದು ಸಂಕಲ್ಪಿಸಿದರು. ಒಡ್ಡಿನೊಡನೆ ಊರಿನ ಪುನರುಜ್ಜೀವನವೂ ಆಗಬೇಕೆಂದು ಕೊಂಡರು.

# ೧೫

ರಮಣೀಯತೆ ಲಾಲಿತ್ಯಗಳೊಂದಿಗೆ ಪುರುಷರಂತೆ ಧೈರ್ಯಸಾಹಸಗಳೂ ಬೆರೆತ ಪ್ರಕೃತಿ ಗಾಯತ್ರಿಯದು. ಹಣೆಗೆ ಕನ್ನಡಿಗಳನ್ನು ಮನಮೆಚ್ಚಿಕೊಂಡವಳಾದರೂ ಅಸಿದ್ಧ ಮಾರ್ಗಗಳ ಕೆಸರು-ದೂಳುಗಳಿಗೂ ಹಿಂಜರಿಯುವವಳಲ್ಲ. ಪಿಯಾನೊವಿಗೆ ಮೋಹಿತಳಾಗಿದ್ದಂತೆಯೇ ಹಳ್ಳಿಗರ ಅಪಸ್ವರದ ಆಲಾಪಗಳಲ್ಲಿಯೂ ಆನಂದವನ್ನು ಅನುಭವಿಸುವಳು. ಅವಳು ಲಖನೌದಿಂದ ಬಂದು ಎರಡು ವರುಷ ಸಂದುಹೋಗಿವೆ. ತನ್ನ ವಿಶಾಲ ಭವನದಲ್ಲಿ ಹಾಯಾಗಿ ಒಂದು ದಿನವೂ ಕುಳಿತಿಲ್ಲ. ಒಮ್ಮೆ ಆ ಊರಿಗೆ ಹೋಗುವುದು ಒಮ್ಮೆ ಈ ಊರಲ್ಲಿ ತಂಗುವುದು; ಒಮ್ಮೆ ತಹಸೀಲಿಗೆ ಬರಬೇಕು, ಒಮ್ಮೆ ಕಚೇರಿಗೆ ಹೋಗಬೇಕು. ಮೇಲಿಂದಮೇಲೆ ಅಧಿಕಾರಿಗಳನ್ನು ಕಾಣಬೇಕಾಗುತ್ತಿತ್ತು. ಅವಳ ನಾಡಿನಲ್ಲಿ ಎಲ್ಲೆಲ್ಲಿಯೂ ಕೊಳ್ಳೆ-ಸುಲಿಗೆ ನಡೆದಿದ್ದವು. ಕಾರಭಾರಿಗಳು ಆಸಾಮಿಗಳನ್ನು ಸುಲಿಯುತ್ತಿದ್ದರು. ಈ ಕಾರಭಾರಿಗಳು, ಈ ಗುಮಾಸ್ತರು ಎಲ್ಲರನ್ನೂ ತೆಗೆದು ಬಿಡಲೂ ಎಂದು ಯೋಚಿಸುತ್ತಿದ್ದಳು. ಆದರೆ ಕೆಲಸ ಮಾಡುವವರು ಬೇಕಲ್ಲ? ಇವರ ಬದಲು ಬರುವವರಾದರೂ ಇದಕ್ಕೂ ಹೆಚ್ಚಿನವರಾಗಲಿಕ್ಕಿಲ್ಲ ಎಂದು ಯಾರು ಹೇಳಬಲ್ಲರು? ಇರುವ ತೊಂದರೆಯೆಂದರೆ, ಈ ಅತ್ಯಾಚಾರದಿಂದ ನನಗಾಗುವಷ್ಟು ಕಷ್ಟವೇನೂ ಪ್ರಜೆಗಳಿಗಾಗುವುದಿಲ್ಲ. ಯಾರೂ ತಕರಾರು ಮಾಡುತ್ತಿಲ್ಲ, ದೂರು ತರುತ್ತಿಲ್ಲ, ಅನ್ಯಾಯವನ್ನು ಸಹಿಸುವುದು ಅವರಿಗೆ ಅಷ್ಟು ಅಭ್ಯಾಸವಾಗಿಬಿಟ್ಟಿದೆ. ಅದೂ ಅವರ ಜೀವನದ ಒಂದು ಸಾಮಾನ್ಯ ಸ್ಥಿತಿಯಂತೆಯೇ ಆಗಿಹೋಗಿದೆ. ಆದರಿಂದ ಬಿಡುಗಡೆ ಹೊಂದಲು ಯತ್ನಮಾಡಬೇಕೆಂಬುದೂ ಅವರಿಗೆ ತಿಳಿಯದು.

ಗಾಯತ್ರಿಯ ಸತ್ಪ್ರಯತ್ನಗಳನ್ನು ಸಂದೇಹದೃಷ್ಟಿಯಿಂದಲೇ ನೋಡುತ್ತಿತ್ತು ಜನ. ತಮ್ಮ ಏಳಿಗೆಗಾಗಿ ಜಮೀನುದಾರರು ತಮ್ಮ ಕೈಕೆಳಗಿನವರನ್ನು ದಂಡಿಸುವುದೂ ಉಂಟು ಎಂಬ ಮಾತನ್ನು ಅವರು ನಂಬುತ್ತಲೇ ಇರಲಿಲ್ಲ. ಈಗಿನ ಅನ್ಯಾಯ ಅವರಿಗೆ ತಿಳಿದದ್ದೇ; ಅದರ ಭಯ ಅವರಿಗಿರಲಿಲ್ಲ. ಈ ಜನಗಳಿಗೆ ರುಬ್ಬುವುದಕ್ಕೆ ಹೊಸ ಕಾಯದೆಯೇನಾದರೂ ಇದ್ದಿರಬಹುದು

ಎಂಬ ಶಂಕೆ ಬರುತ್ತಿತ್ತು ಪ್ರಜೆಗಳಿಗೆ. ಅನುಭವವೂ ಈ ಶಂಕೆಗೆ ಪುಷ್ಟಿ-ಕೊಡುತ್ತಿತ್ತು. ಹೆಸರಿಗೆ ಬಡ್ಡಿ ತೆಗೆದುಕೊಂಡು ಒಕ್ಕಲಿಗರಿಗೆ ಸಾಲ ಕೊಡಬೇಕೆಂದು ಗಾಯತ್ರಿ ಅಪ್ಪಣೆ ಮಾಡಿದ್ದರೆ, ಕಾರಭಾರಿಗಳು ಬಡ್ಡಿ ತೆಗೆದು-ಕೊಳ್ಳುವಲ್ಲಿ ಸಾವುಕಾರರಿಗಿಂತ ಹೆಚ್ಚಿನವರಾಗಿದ್ದರು. ಕುಳಗಳಿಗೆ ವಖಾರಡಿಂದ ಅಷ್ಟಾಂಶದ ಮೇಲೆ ಕಾಳು ಕೊಡಬೇಕೆಂದು ಅವಳು ವಿಧಿಸಿದ್ದರೆ ಇಲ್ಲಿ ಅಷ್ಟಾಂಶ ಸಿಕ್ಕದೆ, ಜನರು ಬೇರೆಯವರಿಂದ ಒಂದೂಕಾಲು ಒಂದೂವರೆಯಂತೆ ಧಾನ್ಯ ತರುತ್ತಿದ್ದರು. ತನ್ನ ಇಲಾಕೆಯಲ್ಲೆಲ್ಲ ಸ್ವಚ್ಛತೆಯ ಯೋಜನೆಯಾಗಬೇಕೆಂದು ಅವಳ ಅಭಿಲಾಷೆ. ಸಗಣಿ–ಕಸ ಚೆಲ್ಲುವುದಕ್ಕೆ ಊರ ಹೊರಗೆ ಕುಳಿ ತೋಡಿಸಿದ್ದಳು. ಚರಂಡಿಗಳನ್ನು ಬಳಿಯುವುದಕ್ಕೆ ಭಂಗಿಗಳನ್ನು ಇಟ್ಟಿದ್ದಳು. ಆದರೆ, ತಮ್ಮ ಗೊಬ್ಬರಗುಂಡಿಗಳನ್ನು ವಶಪಡಿಸಿಕೊಳ್ಳುವ ಆಟವನ್ನು ಹೂಡಿಲ್ಲವಷ್ಟೆ ಎಂದು ಜನರಿಗೆ ಭಯ.

ಚಳಿಗಾಲದಲ್ಲಿ ರಾಪ್ತೀತೀರದ ಹಳ್ಳಿಗಳಲ್ಲಿ ಗಾಯತ್ರಿ ಸಂಚರಿಸುತ್ತ-ಲಿದ್ದಳು. ಕೆಲ ಹಳ್ಳಿಗಳು ನೆರೆಗೆ ಬಲಿಯಾಗಿದ್ದವು. ಹಳ್ಳಿಗರು ಸೂಟು ಬೇಡಿದ್ದರು. ಸರಕಾರೀ ಅಧಿಕಾರಿಗಳು ಅಲ್ಲಿ ಇಲ್ಲಿ ಅಡ್ಡಾಡಿ ಸೂಟಿನ ಅಗತ್ಯವಿಲ್ಲ ಎಂದು ವರದಿಮಾಡಿದ್ದರು. ಅಲ್ಲಿನ ಸ್ಥಿತಿಯನ್ನು ಕಣ್ಣಾರೆ ಕಂಡು ಎಷ್ಟು ಸವಲತ್ತು ಕೊಡಬೇಕೆಂದು ಯೋಚಿಸುತ್ತಿದ್ದಳು. ಇಡೀ ದಿನ ಅಡ್ಡಾಡಿ ದಣಿದು ಸಂಜೆ ಬಿಂದಾಪುರದ ಛಾವಣಿಯಲ್ಲಿ ಅಡ್ಡಾಗಿದ್ದಳು. ಇಷ್ಟು ನೌಕರರಿದ್ದಾರೆ, ಇಲಾಕೆಯ ಮೇಲ್ಮೆಯ ಧ್ಯಾನವೇ ಯಾರಿಗಿಲ್ಲ. ಅಂತಹ ತಕ್ಕ ಮನುಷ್ಯ ಎಲ್ಲಿ ಸಿಕ್ಕಾನು ? ಒಬ್ಬಳೇ ಎಲ್ಲೆಲ್ಲಂತ ತಿರುಗಲಿ ? ಗುತ್ತಿಗೆ ಕೊಟ್ಟರೆ ಎಲ್ಲ ಸುಸೂತ್ರವಾಗುವುದು. ಆದರೆ ಕುಳಗಳು ಸಾಯು-ತ್ತಾರೆ. ಜ್ಞಾನಶಂಕರರು ಒಪ್ಪಿದರೆ ಇಲಾಕೆಯ ಭಾಗ್ಯ ತೆರೆಯುವುದು. ಅವರು ಎಷ್ಟು ಮರ್ಮಜ್ಞ, ಎಷ್ಟು ಸೂಕ್ಷ್ಮದರ್ಶಿ. ಅವರು ಬಂದರೆ ಈ ಲೂಟಿಗಾರರಿಂದ ನಾನು ಉಳಿದುಕೊಂಡೇನು. ಆದರೆ ಕಷ್ಟವೆಂದರೆ, ಅವರ ಮಾತುಗಳನ್ನು ಕೇಳಿ ನನ್ನ ಭಕ್ತಿ, ಧರ್ಮಶ್ರದ್ಧೆಗಳ ಬುಡವೇ ಅಳ್ಳಾಡುವುದು. ನನ್ನ ವಿಷಯವಾಗಿ ಅವರ ಮನದಲ್ಲಿ ಯಾವ ಭಾವನೆಗಳುಂಟಾಗಿವೆಯೋ ! ಗಂಡುಸುರಲ್ಲಿ ಒಂದು ಅವಗುಣವಿದೆ: ಹಾಸ್ಯ-ವಿನೋದಗಳನ್ನು ಕುವೃತ್ತಿ-ಯಿಂದ ಬೇರಿರಿಸಲಾರರು. ಅವುಗಳ ಪವಿತ್ರ ಆನಂದವನ್ನು ಅನುಭವಿಸುವುದೇ

ಅವರಿಗೆ ಗೊತ್ತಿಲ್ಲ. ಹೆಂಗುಸು ಸ್ವಲ್ಪ ನಕ್ಕು ಮಾತಾಡಿದರಾಯಿತು, ಅವಳು ತಮಗೆ ಮನಸೋತಿದ್ದಾಳೆಂದೇ ತಿಳಿಯುವರು. ಜ್ಞಾನಶಂಕರರು ಬಂದರೆ ಅವರನ್ನು ಇಲ್ಲಿಯೇ ಇರಿಸುವೆ; ಇಲ್ಲಿಂದಲೇ ಆಡಳಿತ ನೋಡಲಿ. ಅಗತ್ಯದ ಕೆಲಸವಿದ್ದಾಗ ಪಟ್ಟಣಕ್ಕೆ ಬರಲಿ. ಆಗಲೂ ನಾನು ಅವರಿಂದ ದೂರವೇ ಇರುವೆ. ಮರೆತೂ ಮನೆಗೆ ಕರಸುವಹಾಗಿಲ್ಲ. ಬಹುಶಃ ಅಷ್ಟು ಧಾರ್ಷ್ಟ್ಯವೂ ಇರಲಿಕ್ಕಿಲ್ಲ ಅವರಿಗೆ.

ಗಾಯತ್ರಿ ಈ ವಿಚಾರದಲ್ಲಿದ್ದಾಗ ಟಪಾಲು ಬಂದಿತು. ರಾಯ ಕಮಲಾನಂದರ ಒಂದು ಕಾಗದವಿತ್ತು. ಅದನ್ನು ಉತ್ಸುಕತೆಯಿಂದ ತೆರೆದು ಓದಿದಳು. ಅವಳ ಕಣ್ಣುಗಳು ಆನಂದಪೂರ್ಣ ಗರ್ವದಿಂದ ಮಿನುಗಿದವು ಇನ್ನೊಂದು ಪತ್ರಿಕೆ ತೆರೆದೊಡನೆ ಕಣ್ಣಿಗೆ ಬಿತ್ತು, ತನ್ನ ಭಾವಚಿತ್ರ. ಮೊದಲ ಬರೆಹವೇ "ಗಾಯತ್ರೀದೇವಿ" ಎಂಬುದು. ಬರೆದುದು ಜ್ಞಾನಶಂಕರ ಬಿ. ಎ. ಉತ್ಸುಕತೆಯಿಂದ ಓದಿದಳು. ಇಪ್ಪತ್ತು ಪುಟಗಳನ್ನು ಅರ್ಧ ಗಂಟೆಯಲ್ಲಿ ಓದಿ ಮುಗಿಸಿ ಗೌರವೋನ್ಮತ್ತ ನೇತ್ರಗಳಿಂದ ಅತ್ತಿತ್ತ ನೋಡಿ ಉಸುರ್ಗರೆದಳು. ಗಾಯತ್ರಿಯ ಚರಿತ್ರವನ್ನು, ಸದ್ಗುಣ ಸತ್ಕಾರ್ಯಗಳನ್ನು ಅವರು ಒಳ್ಳೇ ಉತ್ಸುಕತೆಯಿಂದ ಉಲ್ಲೇಖಿಸಿದ್ದರು; ಭಕ್ತಿಯ ಸ್ಥಳದಲ್ಲಿ ಐತಿಹಾಸಿಕ ಗಂಭೀರತೆಯ ಬಣ್ಣ ಬಂದಿತ್ತು. ಅವಳ ಹೃದಯದಲ್ಲಿ ಉತ್ಸಾಹ ಎಲ್ಲೆಮೀರಿ ಹರಿಯತೊಡಗಿತು. ತಾನು ವಿಮಾನವೇರಿ ಸ್ವರ್ಗಕ್ಕೆ ಹೊರಟಿರುವಳೋ ಎಂಬ ಹಾಗಿತ್ತು. ತನ್ನ ಧಮನಿಗಳಲ್ಲಿ ನೆತ್ತರಿನ ಬದಲು ಉಚ್ಚ ಭಾವಗಳ ಸಂಚಾರವಾಗುತ್ತಿರುವಂತೆ ಎನಿಸಿತು. ಬೆಳಗುಮುಂಜಾನೆ ಅವಳು ಜ್ಞಾನಶಂಕರರಿಗೆ ಕಾಗದ ಬರೆದಳು. ಲೇಖನದ ಚರ್ಚೆ ಬಿಟ್ಟು, ಕೇವಲ ತನ್ನ ವಿಡಂಬನೆಯ ವೃತ್ತಾಂತವನ್ನು ಬರೆದು, ನೀವು ಬಂದು ನನ್ನ ಇಲಾಕೆಯ ಆಡಳಿತ ಕೈಕೊಂಡು, ಮುಳುಗುವ ಡೋಣಿಯನ್ನು ದಡ ಕಾಣಿಸಿರಿ ಎಂದು ಆಗ್ರಹದಿಂದ ನಿವೇದಿಸಿಕೊಂಡಳು.

## ೧೬

ಜ್ಞಾನಶಂಕರರಿಗೆ ಆನಂದ ಹೊಟ್ಟೆಯಲ್ಲಿ ಹಿಡಿಸಲಿಲ್ಲ. ತೆರತೆರದ ಸುಖದ ಕಲ್ಪನೆಗಳ ತರಂಗಗಳು ಅವರ ಮನದಲ್ಲಿ ಏಳತೊಡಗಿದವು. ಒಂದು

ದೊಡ್ಡ ನಾಡಿನ ಒಡೆಯನಾಗುವ ಸಂಧಿಯನ್ನು ದೇವರೇ ತನಗೆ ಒದಗಿಸಿದ್ದಾನೆ; ಈಗಲೂ ತಾನು ಲಾಭ ಪಡೆಯಲಾರನಾದರೆ ತನ್ನ ದುರ್ದೈವವೇ ಸರಿ.

ಗೋರಖಪುರಕ್ಕೆ ಹೊರಡುವ ಮೊದಲು ಲಖನಪುರದ ವಿಷಯದಲ್ಲಿ ಅವರು ನಿಶ್ಚಿಂತರಾಗಬೇಕಾಗಿತ್ತು. ಪ್ರೇಮಶಂಕರರು ತಮ್ಮ ಲಾಭಾಂಶವನ್ನು ಕೋರಿದಾಗಿನಿಂದಲೂ ಅವರ ಮನಸು ಸ್ವಸ್ಥವಾಗಿರಲಿಲ್ಲ. ಅಲ್ಲದೆ, ಪ್ರಭಾಶಂಕರರು ಅಲ್ಲಿಗೆ ಹೋಗುವುದು ಬರುವುದು ಮತ್ತಷ್ಟು ಕುಟುಕುತ್ತಿತ್ತು. ಆ ಮುದುಕ ಪ್ರೇಮಶಂಕರರನ್ನು ಒಡೆದುಕೊಂಡು ಲಖನಪುರದಲ್ಲಿ ಅರ್ಧ ಪಾಲನ್ನೇ ಎಲ್ಲಿ ಹೊಡೆದುಹಾಕುವರೋ ಎಂಬ ಭಯ. ಈಗ ತಮ್ಮ ಆ ಸೋತ ಆಟಕ್ಕೆ ಶ್ರದ್ಧೆಯೇ ಫರ್ಜಿ. 'ನಿನ್ನ ನಿರ್ವಾಹಕ್ಕಾಗಿ ಅರ್ಧ ಲಖನಪುರವನ್ನು ಬರೆಸಿಕೋ. ಅವನನ್ನು ಯಾರೂ ಕೇಳುವರಿಲ್ಲ, ಒಬ್ಬನೇ ಒಬ್ಬ, ಯಾವಾಗ ಎಲ್ಲಿ ಹೊರಟುಹೋಗುವನೋ ತಿಳಿಯದು. ನಿನ್ನ ಅವಸ್ಥೆ ಏನು?' ಎಂದು ಅವಳನ್ನು ತಿದ್ದಬೇಕು ಎಂದು ಯೋಚಿಸಿದರು. ಅವಳನ್ನು ತೀರ್ಥಯಾತ್ರೆಗೆ ಕಳಿಸಿದರಾಯಿತು, ಅಲ್ಲಿಯೇ ಸತ್ತುಹೋಗುತ್ತಾಳೆ, ಇದ್ದರೂ ಹರದ್ವಾರದಲ್ಲಿ ಗಂಗಾಸ್ನಾನ ಮಾಡುತ್ತ ಇದ್ದುಬಿಡುತ್ತಾಳೆ– ಎಂದು ಮನಸಿನಲ್ಲಿ. ಆದರೆ ಅವರ ಎಣಿಕೆ ಹಣ್ಣಿಸಲಿಲ್ಲ. ಶ್ರದ್ಧೆಯ ಪತಿಭಕ್ತಿ ಅವರನ್ನು ದಂಗುಬಡಿಸಿಬಿಟ್ಟಿತು. ಅವರಿಗೆ ಮತ್ತೆ ಚಿಂತೆಗಿಟ್ಟಿಕೊಂಡಿತು. ಅವನು ಶ್ರದ್ಧೆಯ ಭಾರವನ್ನು ತನ್ನ ಮೇಲೇ ಹಾಕುವುದಾದರೆ, ಲಖನಪುರವನ್ನು ಅವನು ಅವಳಿಗೆ ಬರೆದುಕೊಡಲೇಬೇಕು; ಅವನನ್ನು ಒಪ್ಪಿಸಿಯೇಬಿಡುತ್ತೇನೆ. ಎಂದು ವಿಚಾರಿಸುತ್ತ ಹಾಜೀಪುರದ ಹಾದಿ ಹಿಡಿದರು.

ಪ್ರೇಮಶಂಕರರು ಮನೆಯ ಮುಂದೆ ಎತ್ತುಗಳಿಗೆ ಮೇವು ಹಾಕುತ್ತ ನಿಂತಿದ್ದರು. ಜ್ಞಾನಶಂಕರರನ್ನು ಕಂಡು ಧಾವಿಸಿ ಬಂದು ಅವರನ್ನು ಮನೆಯ ಕುಶಲ ಸಮಾಚಾರವನ್ನು ಕೇಳಿ, "ನೀನು ನನ್ನನ್ನು ಮರೆತೇ ಬಿಟ್ಟೆಯೋ ಏನೋ. ಅಂತೂ ಇಂದು ಬಂದೆ." ಎಂದರು.

ಜ್ಞಾನಶಂಕರರು ಸ್ವಲ್ಪ ಲಜ್ಜಿತರಾಗಿ ಉತ್ತರವಿತ್ತರು. "ಈ ಕಡೆ ಬರಬೇಕೆಂದು ಬಹು ದಿನಗಳಿಂದಲೂ ಇತ್ತು. ಪುರಸತ್ತೇ ಆಗುತ್ತಿರಲಿಲ್ಲ."

" ಗಾಯತ್ರಿಯ ಬಗ್ಗೆ ನೀನು ಬರೆದದ್ದು ಚೆನ್ನಾಗಿದೆ. ಓದಿ ನಾನಂತೂ ಮುಗ್ಧನಾದೆ. "

" ಅವರು ತಮ್ಮ ಇಲಾಕೆಯ ಆಡಳಿತ ನೋಡಿಕೊಳ್ಳಲು ನನ್ನನ್ನು ಕರೆದಿದ್ದಾರೆ. ನನಗಿದು ಒಳ್ಳೆಯ ಸಂಧಿ. ಆದರೆ ಹೋಗುವುದು ಹೇಗೆ? ಮಾಯಾ ಮತ್ತು ಅವನ ತಾಯಿಯನ್ನು ಕರೆದುಕೊಂಡು ಹೋಗಬಲ್ಲೆ. ಅತ್ತಿಗೆ ಎಷ್ಟು ಹೇಳಿದರೂ ಒಪ್ಪಲೊಲ್ಲರು. ದೂರು ಅಂತಲ್ಲ—ಇತ್ತೀಚೆಗೆ ಕಕ್ಕಿಯೊಡನೆ ಅವರ ಸಖ್ಯ ಹೆಚ್ಚಾಗಿದೆ. ಕಕ್ಕಿ, ಅವರ ಸೊಸೆ ಇಬ್ಬರೂ ಅವರ ಕಿವಿಯಲ್ಲಿ ತುಂಬುತ್ತಾರೆ. ಅತ್ತಿಗೆಯ ಸ್ವಭಾವ ಸರಳ, ಎರಡನೆಯವರ ಮಾತಿಗೆ ಮರುಳಾಗುತ್ತಾರೆ. ಅವರಿಬ್ಬರೂ ' ಲಖನಪುರದ ಅರ್ಧ ನಿನ್ನ ಹೆಸರಿಗೆ ಬರಸಿಕೋ, ನಿನ್ನ ಗಂಡ ಮತ್ತೆ ಯಾವಾಗ ಪರದೇಶಕ್ಕೆ ಎದ್ದು ಬಿಡುತ್ತಾನೋ, ಮುಂದೆ ನಿನ್ನ ಗತಿ? ' ಎಂದು ಹೇಳುತ್ತಿದ್ದಾರೆ. ಕಕ್ಕನೂ ಆ ಗೋಷ್ಠಿಯಲ್ಲಿದ್ದಾನೆ. ಇಂದು ನಾಳೆ ಇಷ್ಟರಲ್ಲಿ ಅವರು ನಿನ್ನ ಕಡೆ ಬರುತ್ತಾರೆ. ಈ ವಿಷಯದಲ್ಲಿ ನೀನು ಏನು ಮಾಡಬೇಕೆನ್ನುವೆಯೋ ನನಗೆ ತಿಳಿಸಬೇಕೆಂದು ನನ್ನ ವಿನಂತಿ. ನನ್ನ ಜೀವನದ ಆಶೆಗಳೆಲ್ಲ ನಿನ್ನ ನಿರ್ಧಾರವನ್ನು ಅವಲಂಬಿಸಿವೆ. ನೀನು ನಿನ್ನ ಪಾಲನ್ನು ಮಾರುವ ವಿಚಾರ ಮಾಡಿದ್ದರೆ ನಾನು ಬೇರೆ ದಾರಿ ಕಂಡುಕೊಳ್ಳುತ್ತೇನೆ." ಎಂದು ಜ್ಞಾನಶಂಕರರು ನುಡಿದರು.

" ಕಕ್ಕನ ಬಗ್ಗೆ ನಿನಗಿರುವ ಸಂದೇಹಕ್ಕೆ ಬುಡವಿಲ್ಲ. ಇನ್ನು ಲಖನಪುರದ ಜಮೀನುದಾರ ಎಂದೆನಿಸಿಕೊಳ್ಳುವುದೂ ನನಗೆ ಬೇಕಾಗಿಲ್ಲ. ನನ್ನ ಬಗ್ಗೆ ನಿಶ್ಚಿಂತನಾಗಿರು. ನಾನು ಇಲ್ಲವೇ ಇಲ್ಲ ಎಂದು ತಿಳಿ. ಗಳಿಸಿಯೇ ಜೀವಿಸಬೇಕೆಂಬುದು ನನ್ನ ವಿಚಾರ. ನಡುವಿನ ದಲಾಲನಾಗುವುದು ಬೇಡ. ಸರಕಾರಿ ಕಾಗದ ಪತ್ರಗಳಲ್ಲಿ ನನ್ನ ಹೆಸರು ಹಚ್ಚಿದ್ದರೆ ರಾಜಿನಾಮೆ ಕೊಡಲಿಕ್ಕೂ ಸಿದ್ಧ. ನಿನ್ನ ಅತ್ತಿಗೆಯ ಭಾರ ನಿನ್ನ ಮೇಲಿರುವುದು. ನಾನೂ ಆದಷ್ಟು ನಿನಗೆ ಸಹಾಯ ಮಾಡುತ್ತೇನೆ. "

ಅಣ್ಣನ ಮಾತು ಕೇಳಿ ಜ್ಞಾನಶಂಕರರು ವಿಸ್ಮಿತರಾದರು. ಅಲ್ಲಿಂದ ಹೊರಟಾಗ ಅವರ ಮನಸು ಬಹಳ ಪ್ರಸನ್ನವಾಗಿತ್ತು.

೧೭

ಲಖನಪುರದ ತೆರಿಗೆಯನ್ನು ಹೆಚ್ಚಿಸಬೇಕೆಂದು ಜ್ಞಾನಶಂಕರರು ಎರಡು ವರುಷಗಳಿಂದಲೂ ಹವಣಿಸುತ್ತಿದ್ದರು. ಯಾವಾಗಲೂ ಒಂದಿಲ್ಲೊಂದು ತಡೆ ಉಂಟಾಗುತ್ತಿತ್ತು. ಕೆಲ ದಿನ ಕಕ್ಕನಿಂದ ಬೇರೆಯಾಗುವುದರಲ್ಲಿ ಕಳೆ-ದವು. ಅದಾದಮೇಲೆ ಲಖನೌಗೆ ಹೋಗುವುದು ಬಂತು. ಅಷ್ಟರಲ್ಲಿ ಪ್ರೇಮಶಂಕರರ ಆಗಮನದಿಂದ ಹೊಸ ಸಮಸ್ಯೆ ಎದ್ದಿತು. ಈಗ ಅದಕ್ಕೆ ಸಮಯ ಒದಗಿ ಬಂದಿತು. ಕಾಗದಪತ್ರಗಳು ಮೊದಲೇ ಸಿದ್ಧವಿದ್ದವು. ಕಾರ್ಯಾರಂಭಕ್ಕೆ ತಡವಾಗಲಿಲ್ಲ.

ಮುಚ್ಚಳಿಕೆಯ ಪ್ರಕರಣದಿಂದ ಮೊದಲೇ ವಿತುಷ್ಟರಾದ ಲಖನಪುರದ ಜನರು ಈಗ ಮತ್ತಷ್ಟು ಕೆರಳಿದರು. ಇಡೀ ಊರು ಒಂದಾಯಿತು. ಮುದುಕ ಕಾದಿರನು— ಸಹಿಷ್ಣುತೆಗಾಗಿ ಕುಪ್ರಸಿದ್ಧಿಗಳಿಸಿದವನು— ಕೂಡ ಧೀರತೆಯಿಂದ ನಿರ್ವಹಿಸಲು ಅಸಮರ್ಥನಾದ. ನೆರೆದ ಪಂಚಾಯತಿಯಲ್ಲಿ ಜಮೀನುದಾರರನ್ನು ವಿರೋಧಿಸುವ ಉದ್ದೇಶದಿಂದ ಬಂದಿದ್ದವನೊಬ್ಬ ಹೇಳಿದ: " ಎಲ್ಲವೂ ಭೂಮಿಯಿಂದಲೇ ಹುಟ್ಟುವುದು, ನಾವೂ ಹುಟ್ಟಿದ್ದೇವೆ. ಭೂಮಿಯಲ್ಲೇ ಎಲ್ಲವೂ ಅಡಗುವುದು, ನಾವೂ ಒಂದಿನ ಅದರಲ್ಲೇ ಸೇರುವೆವು. ಇದನ್ನು ನಾವೇಕೆ ಸಹಿಸಬೇಕು? ನೆಲಕ್ಕಾಗಿಯೇ ಅರಸರ ತಲೆಗಳು ಉರುಳುತ್ತವೆ, ನಾವೂ ನಮ್ಮ ತಲೆ ಕೊಡುತ್ತೇವೆ. ಈ ಕೆಲಸದಲ್ಲಿ ನೆರವು ಕೊಡುವುದು ಎಲ್ಲರ ಧರ್ಮ. "

ಎಲ್ಲರೂ ಒಕ್ಕೊರಲಿನಿಂದ ಬೆಂಬಲವಿತ್ತರು : " ಎಲ್ಲರೂ ನಿಮ್ಮ ಕೂಟ ಆದೇವು. ನೀವು ತೋರಿಸಿದ ದಾರೀಲೆ ನಡೀತೇವು. "

ಜಮೀನುದಾರರಿಗೆ ತೆರಿಗೆ ಹೆಚ್ಚಿಸುವ ಅಧಿಕಾರವಿದೆ ಎಂಬುದು ಎಲ್ಲ-ರಿಗೂ ಖಂಡಿತ ಗೊತ್ತಿತ್ತು. ಜಮೀನುದಾರರು ತಮ್ಮ ಪ್ರಯತ್ನದಿಂದ ಭೂಮಿಯ ಉತ್ಪಾದಕ ಶಕ್ತಿಯನ್ನು ಹೆಚ್ಚಿಸಿದಾಗ ಮಾತ್ರ ಈ ಅಧಿಕಾರ ಅವರಿಗುಂಟಾಗುತ್ತದೆ ಎಂಬುದನ್ನೂ ಅರಿತಿದ್ದರು. ವಿನಾಕಾರಣ ಹೆಚ್ಚಳವನ್ನು ಅವರು ಅನರ್ಥವೆಂದು ಬಗೆದಿದ್ದರು.

ಈ ಒಕ್ಕಟ್ಟಿನಿಂದ ಜ್ಞಾನಶಂಕರರು ಬೆಚ್ಚಿದರು. ಆದರೆ ಕೆಲಮಟ್ಟಿಗೆ

ತಮ್ಮ ಬಲದಿಂದ, ಕೆಲಮಟ್ಟಿಗೆ ಜ್ವಾಲಾಸಿಂಹರ ಮಿತ್ರರು ತಾವೆಂಬ ಬಲ-ದಿಂದ, ತಮ್ಮ ಯಶಸ್ಸಿನ ವಿಷಯದಲ್ಲಿ ಅಷ್ಟು ಸಂದೇಹ ಅವರಿಗಿರಲಿಲ್ಲ. ಆದರೆ, ವಿಚಾರಣೆ ಮುಗಿದು, ಹೊಣೆಗಾರಿಕೆಯ ಪ್ರಶ್ನೆ ಆರಂಭವಾದಾಗ ಅದು ತಿಳಿದುಕೊಂಡಷ್ಟು ಸುಲಭವಲ್ಲವೆಂದು ಕಂಡುಬಂದಿತು. ಜ್ವಾಲಾ-ಸಿಂಹರು ಕೇಳುವ ಪ್ರಶ್ನೆಗಳಿಂದ, ಕುಳಗಳ ಕಡೆ ವ್ಯಕ್ತವಾಗುತ್ತಿದ್ದ ಅವರ ದಯಾದೃಷ್ಟಿಯಿಂದ ಅವರ ಮನದೊಲವು ಗೊತ್ತಾಗುತ್ತಿತ್ತು. ಪ್ರಕರಣ ದಿನದಿನಕ್ಕೆ ಜ್ಞಾನಶಂಕರರ ಎದುರುದಿಕ್ಕಿಗೇ ಹೊರಟಿತ್ತು. ಕೊನೆಗೆ ಸುಮ್ಮ ನಿದ್ದರೆ ಕೆಲಸ ಕೆಡುವುದೆಂದು ಅವರು ಜ್ವಾಲಾಸಿಂಹರನ್ನು ಸಂದರ್ಶಿಸಿದರು.

ಜ್ವಾಲಾಸಿಂಹರು ಸ್ನೇಹದಿಂದ ಸ್ವಾಗತಿಸುತ್ತ, "ಬನ್ನಿ ಬನ್ನಿ, ಬಹಳ ದಿನಗಳಿಂದ ನಿಮ್ಮನ್ನು ನೆನಸುತ್ತಿದ್ದೆ. ಈಚೆಗೆ ಸಾಹಿತ್ಯಸ್ಫೂರ್ತಿ ತುಂಬಾ ಹೆಚ್ಚಿದೆ. ಗಾಯತ್ರಿದೇವಿಯವರ ಬಗೆಗೆ ಬರೆದ ಲೇಖನ ಓದಿದೆ—ಬರೆದ ಲೆಕ್ಕಣಿಕೆಯನ್ನು ಮುದ್ದಾಡಲೇ ಎನ್ನಿಸಿತು. ಗಾಯತ್ರಿದೇವಿ ಮೆಚ್ಚಿ ವರ ದಾನ ಮಾಡಬಹುದಲ್ಲವೆ?" ಎಂದು ಮೊದಲು ಮಾಡಿದರು.

"ಅವರ ಕಾಗದ ಬಂದಿದೆ. ತಮ್ಮ ಇಲಾಕೆಯ ಆಡಳಿತ ನನಗೆ ಒಪ್ಪಿಸಬೇಕೆನ್ನುತ್ತಾರೆ."

"ಭಲೆ, ಕೇಳುವುದೇನು? ಯಾವಾಗ ಹೋಗುತ್ತೀರಿ?"

"ಹೊರಡಲು ಸಿದ್ಧನಾಗಿಯೇ ಇದ್ದೇನೆ—ಆದರೆ. ನೀವು ನನ್ನ ಕತ್ತು ಬಿಟ್ಟಾಗ." ಜ್ಞಾನಶಂಕರರು ಮಾತನ್ನು ವಿಷಯದ ಕಡೆಗೆಳೆದರು.

"ಫ್ಯಾಮಿಲಿಯನ್ನೂ ಕರೆದೊಯ್ಯುವಿರಷ್ಟೇ. ಅವಶ್ಯವಾಗಿ ಕರೆದು ಕೊಂಡು ಹೋಗಿರಿ. ನಾನೂ, ಒಂದು ವಾರವಾಯಿತು, ಹೆಂಡತಿಯನ್ನು ಕರೆದುಕೊಂಡು ಬಂದಿದ್ದೇನೆ." ಜ್ವಾಲಾಸಿಂಹರು ವಿಷಯವನ್ನು ಜಾರಿಸಲು ಹವಣಿಸಿದರು.

"ಏನು, ಅತ್ತಿಗೆ ಬಂದಿದ್ದಾರೆಯೆ? ಸಂತೋಷ."

"ನಾಳೆ ನಿಮ್ಮ ಮನೆಯವರನ್ನು ಇತ್ತ ಕಳಿಸಿರಲ್ಲ. ಗಾಡೀ ಕಳಿಸು-ತ್ತೇನೆ. ನಿಮ್ಮ ವೈಫಿನ (ಹೆಂಡತಿಯ) ಅಡ್ಡಿಯಿರಲಿಕ್ಕಿಲ್ಲವಷ್ಟೆ?"

"ಇಲ್ಲ. ಸಂತೋಷದಿಂದ ಬರುತ್ತಾಳೆ."

ಜ್ಞಾನಶಂಕರರಿಗೆ ತಮ್ಮ ಪ್ರಕರಣದ ಬಗ್ಗೆ ಮಾತನಾಡಲು ಆಸ್ಪದವೇ ದೊರೆಯಲಿಲ್ಲ. ಆದರೂ ಅಲ್ಲಿಂದ ಹೊರಟಾಗ ಅವರ ಮನಸು ಪ್ರಫುಲ್ಲಿತವಾಗಿತ್ತು. ಹೆಂಗುಸು-ಹೆಂಗುಸರ ಗೆಳೆತನದಿಂದ ಇವರು ವಶರಾಗ ಬಹುದೆಂದು ಅವರೆಣಿಕೆ; ದೃಢವಾದ ನಂಬಿಕೆಯೆ. ಆದರೆ ಮನೆಗೆ ಬಂದು ವಿದ್ಯೆಯೊಡನೆ ಹೇಳಲು, ಅವಳು “ ಅಲ್ಲಿ ಹೋಗುವುದಕ್ಕೆ ಮನಸ್ಸು ಒಲ್ಲೆನ್ನುತ್ತದೆ. ಎಂದೂ ಗುರುತು – ಪರಿಚಯವಿಲ್ಲ, ನಡತೆ–ನಡಾವಳಿಯಿಲ್ಲ. ಹೋಗಿ ಏನು ಮಾತಾಡಲಿ ? ಮೂಕಿಯ ಹಾಗೆ ಕೂಡುವುದು. ” ಎಂದಳು. ಬಹಳ ಹೇಳಿದಮೇಲೆ ಕೊನೆಗೆ ಹೂ ಎಂದಳು.

ಆದರೆ ಮುಂದಿನ ಮುದ್ದತಿನಲ್ಲಿಯೂ ಜ್ವಾಲಾಸಿಂಹರ ವೃತ್ತಿಯಲ್ಲಿ ಸ್ವಲ್ಪವೂ ವ್ಯತ್ಯಾಸ ಕಾಣಲಿಲ್ಲ ಅರ್ಜಿದಾರನ ಹೇಳಿಕೆ, ಅವನ ವಕೀಲನ ವಾದಗಳ ಬಗ್ಗೆ ಅವಿಶ್ವಾಸ-ಶಂಕೆಗಳಿಂದ ಪ್ರಶ್ನಿಸುತ್ತಲಿದ್ದರು. ಸ್ಥಾನಿಕ ವಿಚಾರಣೆಗಾಗಿ ಮುಂದೂಡಿದಾಗಲಂತೂ ಜ್ಞಾನಶಂಕರರು ಅತ್ಯಂತ ವಿಚಲಿತ ರಾದರು. “ ನೋಡಿದೆಯಾ, ಮತ್ತೆ ಸ್ಥಾನಿಕವಿಚಾರಣೆಯಂತೆ! ಇನ್ನು ತಡೆಯುವುದು ಸಾಧ್ಯವಿಲ್ಲ. ಹೋಗಿ ಖಂಡತುಂಡಾಗಿ ಅಂದು ಬರುತ್ತೇನೆ. ಇಲ್ಲಿ ಕೂತು ಸುಮ್ಮನೆ ನೂರಾರು ರೂಪಾಯಿ ಹಾನಿಯಾಗುತ್ತದೆ ” ಎಂದು ಹೆಂಡತಿಯೆದುರು ಒದರಾಡಿದರು.

ಗಾಯತ್ರಿಯ ಸೂಚನೆಯನ್ನು ಜ್ಞಾನಶಂಕರರು ಇನ್ನೂ ವಿದ್ಯೆಯ ಎದುರು ಆಡ್ಡಿರಲಿಲ್ಲ. ಈಗ ಪಕ್ಕನೆ ಮಾತು ಬಾಯಿಂದ ಬಂದುಬಿಟ್ಟಿತು. “ ಹಾನಿ ಹೇಗೆ ಆಗುತ್ತದೆ ? ” ಎಂದು ಕೇಳಿದಳು ಚಕಿತಳಾಗಿ.

“ ಓ, ನಿನಗೆ ಗಾಯತ್ರಿಯವರ ಪತ್ರ ಬಂದದ್ದು ಹೇಳಿದ್ದೆನಷ್ಟೆ. ತಮ್ಮ ಸಂಸ್ಥಾನದ ಆಡಳಿತಗಾರ ಆಗಬೇಕಂತೆ ನಾನು. ಬೇಗ ಬರಲು ತಿಳಿಸಿ ದ್ದಾರೆ. ” ಎಂದು ಅವರು ಹೇಳಿದರು.

“ ಒಪ್ಪಿಕೊಂಡಿರೇನು ? ನನಗಂತೂ ನೀವು ಅಲ್ಲಿಗೆ ಹೋಗುವುದ ಸರಿಕಾಣುವುದಿಲ್ಲ. ”

“ ಇಂದಿನ ಮುಂದಿನ ವಿಚಾರಮಾಡಿ ಈ ಸಂಧಿಯನ್ನು ಕಳೆದುಕೊಳ್ಳು ವುದು ಸರಿಯಲ್ಲ ಎಂದುಕೊಂಡಿದ್ದೇನೆ. ಬರೀ ನೌಕರಿಯ ಉದ್ದೇಶದಿಂದ ಹೋಗುವುದಿಲ್ಲ ನಾನು; ಬೇರೆ ವಿಚಾರವೂ ಇದೆ. ”

"ಮತ್ತೇನು ವಿಚಾರ?" ಗಂಡನ ಕಡೆ ಸಾಶಂಕ ದೃಷ್ಟಿಯಿಂದ ನೋಡಿ ವಿದ್ಯೆ ಕೇಳಿದಳು.

"ಆ ಸಮೃದ್ಧವಾದ ಸಂಸ್ಥಾನ ಬೇರೆಯವರ ಕೈಗೆ ಹೋಗುವುದನ್ನು ನಾನು ನೋಡಲಾರೆ. ಗಾಯತ್ರಿಯವರ ತರುವಾಯ ಅದು ಎರಡನೆಯವರಿಗೆ ಹೋಗುವುದಾದರೆ ನನಗೇಕೆ ಆಗಬಾರದು? ಸರಿ. ಈಗ ಜ್ವಾಲಾಸಿಂಹರ ಕಡೆ ಹೋಗಿ ಏನೆಂಬುದನ್ನು ಬಗೆಹರಿಸಿಕೊಳ್ಳುತ್ತೇನೆ."

"ಏನು ಬಗೆಹರಿಸಿಕೊಳ್ಳುತ್ತೀರಿ? ಅವರು ಲಂಚ ತಿಂದಿದ್ದಾರೆಯೆ?"

"ಅಲ್ಲ, ಅವರು ಇಷ್ಟು ಗೆಳೆತನ ತೋರಿಸುವುದು ಏಕೆ?"

"ಅದು ಅವರ ಸಜ್ಜನಿಕೆ. ಆದರೆ ನಿಮಗಾಗಿ ಅವರು ಮತ್ತೊಬ್ಬರಿಗೆ ಅನ್ಯಾಯ ಮಾಡಬೇಕೆಂದಲ್ಲ."

"ಇದನ್ನೇ ಅವರ ಬಾಯಿಂದ ಕೇಳಬೇಕಾಗಿದೆ. ಇದಕ್ಕೆ ತಕ್ಕ ಉತ್ತರ ನನ್ನ ಹತ್ತಿರ ಇದೆ."

"ಒಳ್ಳೇದು ಹೋಗಿರಿ. ಮನಸಿಗೆ ಬಂದಂತೆ ಮಾಡಿರಿ. ನನ್ನನ್ನು ಏಕೆ ಕೇಳುತ್ತೀರಿ ಮತ್ತೆ?"

"ನಿನ್ನ ಸಲಹೆ ಕೇಳಲು ಬಂದಿಲ್ಲ. ಇಷ್ಟು ಬುದ್ಧಿ ಇದ್ದಿದ್ದರೆ ಏತರ ಗೋಳಿತ್ತು? ಹೆಂಗುಸರು ದೊಡ್ಡ ದೊಡ್ಡ ಕೆಲಸ ಮಾಡುತ್ತಾರೆ. ನಿನಗೆ ಇಷ್ಟು ಕೂಡ ಮಾಡುವುದಾಗಲಿಲ್ಲ — ಶೀಲಮಣಿಯವರೊಂದಿಗೆ ಈ ಪ್ರಕರಣದ ಮಾತು ಸ್ವಲ್ಪ ಆಡಿದ್ದರೆ! ನಿನಗೆ ಅಷ್ಟಕ್ಕೆಷ್ಟಕ್ಕೆ ಮಾನ ಮುಕ್ಕಾಗುತ್ತದೆ."

"ನನಗೆ ಈ ಮಾತು ಬರುವುದಿಲ್ಲ, ಏನು ಮಾಡಲಿ?"

"ಅಂದರೆ ಕೆಲಸ ಕೆಟ್ಟುಹೋಗಲಿ?"

"ಏನಾದರಾಗಲಿ!"

ಜ್ಞಾನಶಂಕರರು ಹೊರಗೆ ಬಂದರು. ಗಾಯತ್ರಿಯ ಊರಿಗೆ ಹೋಗುವ ವಿಷಯದಲ್ಲಿ ವಿದ್ಯೆಯನ್ನು ಹೇಗೆ ಒಪ್ಪಿಸುವುದೆಂಬುದೊಂದು ಅವರಿಗೆ ಹೊಸ ಸಮಸ್ಯೆಯಾಯಿತು. ಹಟದ ಸ್ವಭಾವ ಅವಳದು. ತಾವು ಹೊರಟುಹೋದರೆಂದರೆ ಈಕೆ ಇಲ್ಲಿ ರಾಯಸಾಹೇಬರಲ್ಲಿ ತಮ್ಮನ್ನು ದೂರಿಕೊಂಡರೆ ಎಲ್ಲ

ಹೊಳೆಯಲ್ಲಿ ಹೋಮಮಾಡಿದಂತಾಗಿಬಿಟ್ಟರೆ! ಈ ಚಿಂತೆಯಲ್ಲಿ ಕುಳಿತಿರುವಾಗ ಶೀಲಮಣಿ ಬಂದಳು. ಜ್ಞಾನಶಂಕರರು ತಾವೇ ಹೋಗಿ ತಮ್ಮ ವಿಷಯ ತೋಡಿಕೊಳ್ಳಬೇಕೆಂದು ನಿಶ್ಚಯಿಸಿ ಮೇಲೆ ಹೋದರು.

ಮೂವರೂ ಹೆಣ್ಣುಮಕ್ಕಳು ಮಾತನಾಡುತ್ತ ಕುಳಿತಿದ್ದರು. ಜ್ಞಾನಶಂಕರರು ಹಿಂಜರಿಯುತ್ತ ಹೋಗಿ ತೆರೆಯ ಬಳಿ ನಿಂತು, " ನಮಸ್ಕಾರ, ಅತ್ತಿಗೆ, " ಎಂದರು.

ಅವರ ಆಶಯ ತಿಳಿದು ವಿದ್ಯೆಯ ಮುಖ ನಾಚಿಕೆಯಿಂದ ಕೆಂಪಾಯಿತು. ಅವಳು ಅಲ್ಲಿಂದೆಷ್ಟು ಅವಹೇಲನೆಯ ದೃಷ್ಟಿಯಿಂದ ಜ್ಞಾನಶಂಕರರನ್ನು ನೋಡಿ ಬೇರೆ ಕೋಣೆಗೆ ಹೊರಟುಹೋದಳು.

ಜ್ಞಾನಶಂಕರರೆಂದರು: "ಅಣ್ಣ ಅವರು ಪರದೆಯ ಅನುಮೋದಕರಲ್ಲ; ಅಲ್ಲದೆ ನಮ್ಮೊಳಗೆ ಇಷ್ಟು ಆತ್ಮೀಯತೆ ಬೆಳೆದಿರುವಾಗ ಈ ಲೆಕ್ಕಾಚಾರ ಉಳಿಯಬಾರದು. ನಿಮಗೆ ನನ್ನ ಹೇಳುವುದು ಬಹಳವಿದೆ. ದೇವರು ಶೀಲ ವಿನಯಗಳನ್ನು ಕೊಟ್ಟಿದ್ದಾನೆ. ಅಂತೆಯೇ ನನ್ನ ವಿಷಯ ಹೇಳಿಕೊಳ್ಳುವ ಸಾಹಸ ಮಾಡಿದ್ದೇನೆ. ನೀವು ಉಪೇಕ್ಷಿಸುವುದಿಲ್ಲ ಎಂದು ನಂಬಿದ್ದೇನೆ. ನನ್ನ ಕಂದಾಯ ಹೆಚ್ಚಳದ ಪ್ರಕರಣ ಅಣ್ಣ ಅವರ ಎದುರು ಎರಡು ತಿಂಗಳಿಂದ ನಡೆದಿದೆ ಅವರ ಬಗ್ಗೆ ನನಗೆ ಬಹಳ ಗೌರವವಿದೆ. ಅದರಿಂದ ಈ ವಿಷಯವಾಗಿ ಅವರಿಗೆ ಹೇಳುವುದಕ್ಕೆ ಸಂಕೋಚ. ಅವರು ನನ್ನನ್ನು ತಮ್ಮನಂತೆ ತಿಳಿದಿದ್ದರೂ ಯಾವ ಕಾರಣದಿಂದಲೋ ನನ್ನ ಪಕ್ಷ ಅಸತ್ಯವೆಂದು ಅವರಿಗೆ ಭ್ರಮೆಯಾದಂತಿದೆ. ಅವರು ಅದನ್ನು ಎಲ್ಲಿ ಕಿತ್ತಿಹಾಕುವರೋ ಎಂದು ಭಯವಾಗುತ್ತಿದೆ. ಹಾಗೆ ಮಾಡುವುದರಲ್ಲಿ ನಿಃಸಂದೇಹವಾಗಿ ದುಃಖವಾಗುತ್ತದೆ. ಅದರಿಂದ ನನಗೆ ಎಷ್ಟು ಅಪಮಾನ, ಎಷ್ಟು ನಷ್ಟ ಎಂಬುದನ್ನು ಅವರರಿಯರು. ಜೀವನಾವಶ್ಯಕ ವಸ್ತುಗಳು ದಿನದಿನಕ್ಕೂ ಬಹಳ ತುಟ್ಟಿಯಾಗುತ್ತಿವೆ. ಆದರೂ ಉತ್ಪನ್ನ ಮಾತ್ರ ಮೂವತ್ತು ವರ್ಷಗಳ ಹಿಂದಿನಷ್ಟೇ ಇದೆ ಈ ಸ್ಥಿತಿಯಲ್ಲಿ ತೆರಿಗೆ ಹೆಚ್ಚಿಸದೆ ಬೇರೆ ದಾರಿಯೇ ಇಲ್ಲ. ಒಕ್ಕಲಿಗರ ಉತ್ಪನ್ನವೋ ಇಮ್ಮಡಿ ಮುಮ್ಮಡಿ ಹೆಚ್ಚಿದೆ. ಅವರ ಹೆಚ್ಚಿದ ಉತ್ಪನ್ನದಲ್ಲಿ ಒಂದು ಪಾಲು ಬೇಡಿದರೆ ನನ್ನದೇನು ಅನ್ಯಾಯ? ನಾನು ಗೆದ್ದರೆ ನನ್ನ ಉತ್ಪನ್ನ ಸಹಜವಾಗಿ ಸಾವಿರದಿಂದ

ಹೆಚ್ಚುವುದು. ಸೋತರೆ ಕುಳಗಳ ದೃಷ್ಟಿಯಲ್ಲಿ ಚ್ಯುತನಾಗುತ್ತೇನೆ. ಹಾಗಾದರೆ, ಜಮೀನುದಾರಿಗೆ ರಾಜಿನಾಮೆ ಕೊಟ್ಟು ಮಿತ್ರರಮೇಲೆ ಬೀಳುವುದೇ ಒಂದು ಹಾದಿ ನನಗೆ." ಎಂದು ನಕ್ಕು, "ನಿಮ್ಮ ಬಾಗಿಲ ಮುಂದೆ ಬಂದು ಕೂಡುತ್ತೇನೆ, ಹೊಡೆದು ದಬ್ಬಿದರೂ ಏಳುವವನಲ್ಲ." ಎಂದರು.

ಶೀಲಮಣಿ ಎಲ್ಲವನ್ನೂ ಮನಸುಗೊಟ್ಟು ಕೇಳಿ ಶ್ರದ್ಧೆಗೆ ಹೇಳಿದಳು: "ಬಾಬೂಜಿಗೆ ಚಿಂತೆ ಮಾಡಬೇಡಿರೆಂದು ಹೇಳಮ್ಮ. ನೀವು ಮೊದಲೇ ನನ್ನ ಮುಂದೆ ಏಕೆ ಹೇಳಲಿಲ್ಲ? ಇಲ್ಲದಿದ್ದರೆ ಇಷ್ಟೊತ್ತಿಗೆ ನಿಮ್ಮ ಡಿಕ್ರಿ ಆಗಿಬಿಡುತ್ತಿತ್ತು."

## ೧೮

ಸ್ಥಾನಿಕ ವಿಚಾರಣೆಗಾಗಿ ಜ್ವಾಲಾಸಿಂಹರು ಹೊರಟುನಿಂತಿದ್ದರು. ಕುದುರೆ ಸಿದ್ಧವಾಗಿತ್ತು. ಕಳೆದ ರಾತ್ರಿ ಶೀಲಮಣಿ ಜ್ಞಾನಶಂಕರರ ಪ್ರಕರಣದ ಬಗ್ಗೆ ಹೇಳಿದಾಗಿನಿಂದ ಅವರ ಮನಸು ಬಹಳ ವಿಚಲಿತವಾಗಿತ್ತು. ನ್ಯಾಯ–ಪ್ರಣಯ, ಕರ್ತವ್ಯ–ಸ್ತ್ರೀಯ ಮಾನರಕ್ಷಣೆ ಈ ದ್ವಂದ್ವಗಳ ಘರ್ಷಣೆಯಲ್ಲಿ ಅವರ ಚಿತ್ತ ಸಿಕ್ಕಿತ್ತು. ನನ್ನ ಕೋರ್ಟಿನಲ್ಲಿ ಈ ಪ್ರಕರಣ ಏಕೆ ಹಿಡಿದೆನೋ ಎಂದು ಎನಿಸಿತು ಅವರಿಗೆ. ಜ್ಞಾನಶಂಕರರು ಹೀಗೆ ಕೂಟನೀತಿ ಅನುಸರಿಸುವರೆಂದು ತಮಗಾದರೂ ಏನು ಗೊತ್ತು ಎಂದುಕೊಂಡರು.

ಇದೇ ಹೊತ್ತಿನಲ್ಲಿ ಜ್ಞಾನಶಂಕರರು ಕಾಲ್ಬಂಡಿಯಮೇಲೆ ಬರುತ್ತಿರುವುದನ್ನು ಕಂಡು ಜ್ವಾಲಾಸಿಂಹರು ವಿಹ್ವಲರಾದರು. ಕುದುರೆಯನ್ನು ತ್ವರೆಯಿಂದ ತರಿಸಿಕೊಂಡು, ಹತ್ತಿ ಹೊರಟೇಬಿಟ್ಟರು. ಅವನ್ನು ಕಂಡು ಜ್ಞಾನಶಂಕರರು ತಮ್ಮ ಮಂತ್ರ ಸಫಲವಾಗುತ್ತಿದೆ ಎಂದು ಭಾವಿಸಿದರು. ಇಲ್ಲದೆ ಹೋದರೆ ಅವರು ಆದರದಿಂದ ಸವಿ ಸವಿ ಮಾತನಾಡುತ್ತಿದ್ದರು.

ನಾಲ್ಕು ಮೈಲು ನಡೆದ ಬಳಿಕ ಜ್ವಾಲಾಸಿಂಹರು ಸಿಗರೇಟು ಸೇದುವುದಕ್ಕಾಗಿ ಕುದುರೆಯನ್ನು ನಿಲ್ಲಿಸಿದರು ಆದರೆ ಜೇಬಿನಲ್ಲಿ ಕಡ್ಡಿಪೆಟ್ಟಿಗೆಯಿರಲಿಲ್ಲ. ಅತ್ತ ಇತ್ತ ನೋಡಿದರು. ಎದುರುಕಡೆ ಒಂದು ಚಕ್ಕಡಿ ಹೊರಟಿತ್ತು. ಅದರಲ್ಲಿ ಪ್ರೇಮಶಂಕರರು ಕುಳಿತಿದ್ದರು. ಜ್ವಾಲಾಸಿಂಹರು ಚಕ್ಕಡಿಯನ್ನು ಸಂಧಿಸಿ, "ಈವೊತ್ತು ಯಾವ ಕಡೆ ಹೊರಟಿದ್ದೀರಿ?" ಎಂದು ಕೇಳಿದರು.

"ಲಖನಪುರಕ್ಕೆ ಹೊರಟಿದ್ದೇನೆ. ನೀವು ?"

"ಒಳ್ಳೇದು. ಜೋಡಾಯಿತು ಏನಾದರೂ ಪ್ರಕರಣ ಇದೆಯೆ ?"

ಜ್ವಾಲಾಸಿಂಹರು ಸಿಗರೇಟು ಹೊತ್ತಿಸಿ ಪ್ರಕರಣದ ವಿಷಯವನ್ನು ಹೇಳಿ "ಈಗ ಲಖನಪುರಕ್ಕಷ್ಟೇ ಹೋಗುವಿರೊ, ಏನು ಮುಂದೆ ಹೋಗುವ ವಿಚಾರ ವಿದೆಯೊ ?" ಎಂದು ಕೇಳಿದರು.

"ಇಲ್ಲಿಗೇ ಎಂದು ಹೊರಟಿದ್ದೇನೆ, ಮುಂದೆ ಹೇಗೋ ನೋಡಬೇಕು. ಇಲ್ಲಿ ಸುತ್ತುಮುತ್ತಿನ ಹಳ್ಳಿಗಳಲ್ಲಿ ಪ್ಲೇಗಿನ ಪಿಡುಗು ಆರಂಭವಾಗಿದೆ. ಸಂಗಡ ಔಷಧ ತೆಕೊಂಡು ಹೊರಟಿದ್ದೇನೆ. ದೈವಸಂಕಲ್ಪವಿದ್ದರೆ ನನ್ನ ಕೈಲಿ ನಾಲ್ಕು ಜೀವ ಉಳಿದರೆ ಉಳಿಯಲಿ."

ಇಬ್ಬರೂ ಮಾತನಾಡುತ್ತ ಲಖನಪುರವನ್ನು ತಲುಪಿದರು. ಜನರು ಊರು ಬಿಟ್ಟು ಹೊರಗೆ ಗುಡಿಸಲು ಹಾಕಿಕೊಂಡಿದ್ದರು ಆ ಚಿಕ್ಕವಸತಿ ಯಲ್ಲಿ, ಜನರ ಹೃದಯ ವಿದೀರ್ಣವಾಗಿದ್ದರೂ ಆ ದಾರುಣ ದುಃಖದ ಚಿಹ್ನೆ ಎಲ್ಲಿಯೂ ಕಾಣುತ್ತಿರಲಿಲ್ಲ ಚಪ್ಪರಗಳ ಎದುರು ಇಸ್ಪಿಯ ಹೂ ಒಣ ಹಾಕಿದ್ದರು; ಬೀಸುವ ಕುಟ್ಟುವ ಸಪ್ಪಳ ಕೇಳಿಸುತ್ತಿತ್ತು. ಪ್ಲೇಗಿನ ಮಾರಣ ಯಜ್ಞವನ್ನೂ ಲೆಕ್ಕಿಸದ ಜೀವನಸಂಗ್ರಾಮದ ಸೂಚನೆ ಕಾಣುತ್ತಿತ್ತು. ಹೆಂಗುಸರು ಪಾತ್ರೆ ತಿಕ್ಕುತ್ತಿದ್ದರು, ನೆರೆಮನೆಗಳಿಂದ ಬೆಂಕಿ ತರುತ್ತಿದ್ದರು; ಹುಡುಗರು ಮಾವುಗಳಿಗೆ ಕಲ್ಲೆಸೆಯುತ್ತಿದ್ದರು. ಒಬ್ಬರೂ ಸುಮ್ಮನೆ ಕುಳಿತುದು ಕಾಣಲಿಲ್ಲ.

ಪ್ರೇಮಶಂಕರರು ಚಕ್ಕಡಿಯನ್ನಿಳಿದು ಒಂದು ಗುಡಿಸಲಿನ ಮುಂದೆ ಹೊರಸಿನ ಮೇಲೆ ಕುಳಿತರು ಜ್ವಾಲಾಸಿಂಹರು ಕುದುರೆಯ ಮೇಲಿಂದಲೇ "ಮುಖ್ಯಸ್ಥ ಎಲ್ಲಿ ? ಕರೆದುಕೊಂಡು ಬನ್ನಿ. ವಿಚಾರಣೆಗೆ ಬಂದಿದ್ದೇವೆ" ಎಂದು ಗಟ್ಟಿಯಾಗಿ ನುಡಿದರು. ಹೊರಸಿನ ಮೇಲೆ ಕುಳಿತುಕೊಂಡರೆ ಮಾನ ಉಳಿಯಬಹುದೆ ?

ಅವರ ಅಪ್ಪಣೆಯನ್ನು ಕೇಳಿ ಕೆಲ ಜನರು ರೋಗಿಗಳನ್ನು ಬಿಟ್ಟು ಗುಡಿಸಲಿನ ಹೊರಗೆ ಬಂದರು. ವಸತಿಯಲ್ಲೆಲ್ಲ ಓಡಾಟ ಆರಂಭವಾಯಿತು. ಒಂದಿಬ್ಬರು ಕುರ್ಚಿ ತರಲು ಚಾವಡಿಗೋಡಿದರು; ಒಂದಿಬ್ಬರು ಪಟವಾರಿ ಯನ್ನು ಹುಡುಕಲು ಹೊರಟರು; ಊರ ಹಿರಿಯರೆಂಬವರು ಜ್ವಾಲಾಸಿಂಹ

ರನ್ನು ಸುತ್ತುಗಟ್ಟಿನಿಂತರು. ಪ್ರೇಮಶಂಕರರ ಕಡೆ ಯಾರೂ ಲಕ್ಷ್ಯಕೊಡ ಲಿಲ್ಲ. ಇಷ್ಟರಲ್ಲಿ ಕಾದಿರನು ಗುಡಿಸಲಿಂದ ಹೊರಗೆ ಬಂದು ಸುಕ್ಖುವಿನ ಕಿವಿಯಲ್ಲಿ ಏನೋ ಹೇಳಿದ; ಸುಕ್ಖು ದುಖರನ ಭಗತನೊಡನೆ ಪಿಸುಮಾತಾ ಡಿದ; ಬಳಿಕ ಬಿಸೇಸರನೊಡನೆ ಗುಜುಗುಜು. ಹತ್ತು ನಿಮಿಷಗಳಲ್ಲಿ ಸುಕ್ಖು ಚೌಧರಿ ಒಂದು ಥಾಲಿ ಹಿಡಕೊಂಡು ಬಂದ. ಅದರಲ್ಲಿ ಅಕ್ಷತೆ, ಮೊಸರು, ಕೆಲವು ರೂಪಾಯಿ ಇದ್ದವು. ಪುರೋಹಿತನು ಪ್ರೇಮಶಂಕರರ ಹಣೆಗೆ ಮೊಸರಕ್ಷತೆ ಹಚ್ಚಿ ಥಾಲಿಯನ್ನು ಅವರ ಮುಂದಿಟ್ಟ.

"ಇಲ್ಲಿ ಬೇನೆ ಕಡಿಮೆಯಾಗಿದೆಯೋ ಏನು ಹಾಗೆಯೇ ಇದೆಯೊ ಇನ್ನೂ ?" ಎಂದು ಪ್ರೇಮಶಂಕರರು ಕೇಳಿದರು.

ಆದನ್ನು ಕೇಳಬೇಡಿ ಸರಕಾರ. ಇನ್ನೂ ಹೆಚ್ಚುತ್ತಲೇ ಆಯ್ತು. ಒಂದಿನಾನೂ ಖಾಲಿ ಹೋಗುವುದಿಲ್ಲ. ನದಿ ಆರು ಹರದಾರಿ ದೂರಯ್ತು. ಒಂದೊಂದು ದಿನವಂತೂ ಎರಡು ಮೂರು ಬ್ಯಾರೆ ಯಾತ್ರಾ ಮಾಡಬೇಕಾ ಕ್ಕೈತಿ. ಹೊಲದಾಗ ಬೆಳಿ ಕೊಳ್ಯಾಕ ಹತ್ತಿದಾವು. ಕೊಯ್ಯೋರಿಲ್ಲ, ತರೋರಿಲ್ಲ. ಎಲ್ಲರ ಮನ್ಯಾಗೂ ಒಪ್ಪತ್ತೇ ಅಡಿಗೆ. ಈ ಗೋಳಿನಾಗ ಒಡೇರ ಕೆಟ್ಟಕಣ್ಣೂ ಬಿದ್ದೈತಿ. ಸಾವಿರ ದಗದಾ ಬಿಟ್ಟು ಕಚೇರಿಗೆ ಎಡ-ತಾಕಬೇಕು. ಏನು ಮಾಡೋದು, ಬಂದದ್ದು ಅನಬವಿಸ್ತೇವಿ. ಹುಜೂರರ ಒಬ್ಬ ಗುಲಾಮ ಇದ್ದ, ಚೆಲೋ ಗಟ್ಟಿಮುಟ್ಟಿದ್ದ, ಮನಿತನ ಸಾಗಿಸಿಕೊಂಡು ಹೋಕ್ಕಿದ್ದ, ಮೂರು ತಾಸಿನಾಗ ಹೊಂಟೋದ. ಸುಕ್ಖು ಚೌಧರಿಯ ಮನಿ ಸತ್ಯಾನಾಸ ಆತು, ಒಬ್ಬನೇ ಉಳದಾನು. ಡಪಟಸಿಂಹನ ಚಿಕ್ಕ ಮಗ ನಿನ್ನೆ ಸತ್ತ, ಇವತ್ತು ಹಿರಿಯವಗೆ ಬಂದೈತಿ;—ಅಲ್ಲಾ ಉಳಿಸಿದರೆ ಉಳೀಬೇಕು. ಬಾಯಿ ಹೋಗೇತಿ, ಕೆಂಪು ಕಣ್ಣು ತಕ್ಕೊಂಡು ಒದ್ದಾಡಾಕ ಹತ್ಯಾನು—" ಕಾದಿರಖಾ ವಿವರಿಸಿದ.

"ಡಪಟಸಿಂಹನ ಮಗನನ್ನು ನಾನು ನೋಡುತ್ತೇನೆ."

"ಆಗಲಿ ಧನೇರ, ನಡೀರಿ."

"ಸ್ವಲ್ಪ ಜೋಕೆಯಿಂದ ಇರ್ರಿ. ಸೋಂಕ ಬೇನೆ ಇದು." ಜ್ವಾಲಾ ಸಿಂಹರು ಕುರ್ಚಿಯಲ್ಲಿ ಕುಳ್ಳಿರುತ್ತ ನುಡಿದರು.

ಪ್ರೇಮಶಂಕರರು ಆ ಮಾತಿಗೆ ಉತ್ತರವೀಯದೆ ಔಷಧದ ಬ್ಯಾಗ್ ತೆಗೆದುಕೊಂಡು ಕಾದಿರನ ಹಿಂದೆ ಹೊರಟರು. ಡಪಟಸಿಂಹನ ಮನೆಯ ಮುಂದೆ ಜನ ಗುಂಪುಗೂಡಿದ್ದರು. ಒಂದು ಮಾವಿನ ಮರದಡಿಯಲ್ಲಿ ರೋಗಿಯ ಮಂಚವಿತ್ತು. ಡಪಟಸಿಂಹ ಮತ್ತು ಅವನ ತಮ್ಮ ಝಪಟಸಿಂಹ ತಲೆದಿಂಬುದೆಸೆಯಲ್ಲಿ ನಿಂತು ಗಾಳಿ ಹಾಕುತ್ತಿದ್ದರು. ಕಾಲುದೆಸೆಯಲ್ಲಿ ಹೆಂಗುಸರು ಅಳುತ್ತಿದ್ದರು. ಪ್ರೇಮಶಂಕರರನ್ನು ಕಂಡು ಹೆಂಗಸರಿಬ್ಬರೂ ಒಳಗೆ ಹೋದರು. ಇಬ್ಬರೂ ಅಣ್ಣತಮ್ಮಂದಿರು ದೀನದೃಷ್ಟಿಯಿಂದ ಅವರನ್ನು ನೋಡಿ ಸರಿದು ನಿಂತರು ಪ್ರೇಮಶಂಕರರು ರೋಗಿಯ ಜ್ವರ ಅಳೆದರು. ೧೦೭ ಅಂಶವಿತ್ತು. ತ್ರಿದೋಷ ಲಕ್ಷಣ ಕಂಡಿತು. ಇವನು ಕ್ಷಣಮಾತ್ರದ ಅತಿಥಿಯೆಂದು ಅವರಿಗೆನಿಸಿತು. ಅವರು ಔಷಧ ತೆಗೆಯುತ್ತಿರುವಾಗ ರೋಗಿ ಚೀರಿಕೊಂಡು ಎದ್ದು ಮತ್ತೆ ಬಿದ್ದ. ಕಣ್ಣುಗಳು ಸ್ತಬ್ಧವಾದವು.

ಡಪಟಸಿಂಹ ಹೆಣದಮೇಲೆ ಬಿದ್ದು ಹಾಯ್ ಮಗೂ ಎಂದತ್ತ. ತುಸ ಹೊತ್ತಿನಮೇಲೆ ಎದ್ದು, “ಹಾಯ್, ಈ ಮನೆಗೆ ಯಾರಾದರೂ ಯಾಕೆ ಬೆಂಕಿ ಹಚ್ಚಲೊಲ್ಲರು? ಇನ್ನೇನಿದೆ ಇಲ್ಲಿ? ತಂದೆ ಕಲ್ಲಿನಹಾಗೆ ಇದ್ದಾನೆ. ಮಗ ಹೊಂಟುಹೋದ. ‘ಅಪ್ಪಾ ನೀ ಮುದುಕಾದಿ, ಸುಮ್ಮನೆ ಕೂತಿರು. ನಾವೆಲ್ಲಾ ಮಾಡುತ್ತೇವೆ’ ಅಂತಿದ್ದರು. ಇಬ್ಬರೂ ನನ್ನ ಬಿಟ್ಟುಹೋಗಿ ಬಿಟ್ಟರು. ಒಬ್ಬನಿಗೂ ದಯೆ ಬರಲಿಲ್ಲ ನನ್ನಮೇಲೆ,” ಎಂದು ಹಾಡಿ ಕೊಂಡು ರೋದಿಸಿದ.

ಪ್ರೇಮಶಂಕರರು ಕರುಣಾತುರರಾಗಿ ಅವನ ಹತ್ತಿರಹೋಗಿ, “ಠಾಕೂರ, ಧೈರ್ಯ ತಂದುಕೊಳ್ಳಿರಿ ನೀವೇ ಅತ್ತರೆ, ಹೆಂಗುಸರನ್ನು ತಮ್ಮನನ್ನೂ ಸಮಾಧಾನ ಪಡಿಸುವವರು ಯಾರು?” ಎಂದು ಸಂತೈಸಿದರು.

ಡಪಟಸಿಂಹ ಉನ್ಮತ್ತ ನೇತ್ರಗಳಿಂದ ಅವರ ಕಡೆ ನೋಡಿ, ವ್ಯಂಗ್ಯ-ವಾಗಿ ಮಾತನಾಡಿದ: “ಓ, ನಮ್ಮ ದನಿಯರು! ಏನು ತೆರಿಗೆ ವಸೂಲಿಗೆ ಬಂದಿರೋ. ಅಲ್ಲಿ ಬಿದ್ದಿದ್ದಾನೆ—ಅವನಿಂದಲೇ ವಸೂಲು ಮಾಡಿರಿ, ಎಲ್ಲವನ್ನೂ ಅವನೇ ಕೊಡುತ್ತಾನೆ. ಗೌಸಖಾನಿಗೆ ಹೇಳಿರಿ—ಇವನನ್ನು ಹಿಡಿದುಕೊಂಡು ಹೋಗಲಿ; ಕಂಬಕ್ಕೆ ಕಟ್ಟಿ ಹೊಡೆಯಲಿ!....”

ಕಾದಿರ ಹೇಳಿದ: “ಎದೆ ಗಟ್ಟಿಮಾಡಿಕೋ ಡಪಟ. ಎಲ್ಲ ಮನೆ

ಗಳಿಗೂ ಹತ್ತಿದೆ ಈ ಬೆಂಕಿ. ನನ್ನ ತಲೆಯಮೇಲೂ ಈ ವಿಪತ್ತು ಬಿದ್ದಯ್ತು. ಹಿಂಗ ಅಳ್ಳೆದಿ ಮಾಡಿಕೊಂಡರ ಏನಾಕ್ಕಯ್ತು ? ''

ಈಗ ಡಪಟನಿಗೆ ಪರಿವೆಬಂದಿತು. ಅವರೊಡನೆ ಕಣ್ಣೀರೂ ಬಂದವು. ಅಳುತ್ತ, " ಎಣ್ಣಾ, ನಿನ್ನಂತ ಎದಿ ಎಲ್ಲಿಂದ ತರಲಿ ? ದುಃಖ ನಿಲ್ಲಲೊಲ್ಲದು. ಅಯ್ಯೋ ! ಇಬ್ಬರೂ ಹೊರಬಿದ್ದುಹೋದರು. '' ಎಂದು ಪುನಃ ಮಕ್ಕಳನ್ನು ನೆನೆನೆನೆದು ವಿಲಾಪಿಸಿ, " ನಾನು ಈ ಮನೆಯಲ್ಲಿರಲಾರೆ. ಝುಪಟ, ಪ್ರಪಂಚ ನೀ ನೋಡಿಕೋ, ನಾ ಎಲ್ಲಿಯಾದರೂ ದೇಶಾಂತರ ಹೋಗಿ ಬಿಡುತ್ತೇನೆ. ರಾಮ ರಾಮ ಧನಿಯರೇ ರಾಮರಾಮ ! ಏನಾದರೂ ಅಂದಿದ್ದರೆ ಕ್ಷಮಿಸಿರಿ. '' ಎಂದು ಹೊರಟೇಬಿಟ್ಟ. ನಾಲ್ಕು ಜನ ಅವನನ್ನು ಬೆನ್ನಟ್ಟಿದರು. ಅವರ ಕೈಗೆ ಅವನು ಸಿಕ್ಕಲಿಲ್ಲ. ಎಲ್ಲರೂ ಅಲ್ಲಿಯೆ ಉಳಿದರು. ಬಲರಾಜನೊಬ್ಬ ಅವನ ಬೆನ್ನುಬಿಡಲಿಲ್ಲ. ಹಿಡಿದು ಮನೆಗೆ ತಂದ.

ಜ್ವಾಲಾಸಿಂಹರ ಎದೆಯೂ ದ್ರವಿಸಿತು. " ಬಾಬೂಸಾಹೇಬ, ಬಹು ಶೋಕಮಯ ದೃಶ್ಯ ! '' ಎಂದರು.

" ಹೇಳುವಂತಿಲ್ಲ, ಕರುಳು ಬಾಯಿಗೆ ಬರುತ್ತನೆ. '' ಎಂದು ಪ್ರೇಮ ಶಂಕರರು ಉತ್ತರವಿತ್ತರು.

ಮೂರನೆಯ ಪ್ರಹರದವರೆಗೂ ಹೆಣ ಏಳುವ ಲಕ್ಷಣ ಕಾಣಲಿಲ್ಲ. ಆಗ, " ಏಕೆ ತಡಮಾಡುತ್ತಿದ್ದೀರಿ ? '' ಎಂದು ಪ್ರೇಮಶಂಕರರು ಕೇಳಿದರು.

" ಏನು ಹೇಳಬೇಕು ಸರಕಾರ—ಮನ್ಯಾಗ ದುಡ್ಡಿಲ್ಲ. ಝುಪಟ ಊರೆಲ್ಲಾ ತಿರುಗಾಕ ಹತ್ಯಾನ ಎಲ್ಲೂ ಹುಟ್ಟಲೊಲ್ಲವು. ನಮ್ಮ ಗೋಳು ನಮಗೆ ಗೊತ್ತು ಒಡೆಯರೆ. ತೆರಿಗೆ ಹೆಚ್ಚಿಸೋ ದಾವೇದಾಗ ಕೊಡಪಾನ ಹಂಚು ಎಲ್ಲಾ ಒತ್ತಿಬಿದ್ದು ಹೋದುವು. ವ್ಯಾಗ ಈ ಬ್ಯಾನಿ ಉಳಿದದ್ದೂ ತೊಳಕೊಂಡು ಹೋತು. ಈಗ ಒಬ್ಬರ ತಾವೂ ಏನ ಕಸರುಳಿ ದಿಲ್ಲ. '' ಕಾದಿರ ಹೇಳಿದ.

ಪ್ರೇಮಶಂಕರರು ನಿಟ್ಟುಸಿರಿಟ್ಟು ಜ್ವಾಲಾಸಿಂಹರಿಗೆಂದರು : " ನೋಡಿ ದಿರಾ ಇವರ ಹಾಡು ! ನಾನು ಬರುವ ಮುಂದೆ ಸ್ವಲ್ಪ ಹಣವನ್ನಾದರೂ ತರಲಿಲ್ಲವಲ್ಲ ಎಂದು ದುಃಖವಾಗುತ್ತದೆ. ''

" ನನ್ನ ಹತ್ತಿರ ಇದೆ ಹಣ. ಕೊಡುವುದಕ್ಕೆ ಸಂಕೋಚವಾಗುತ್ತದೆ. ಇವರಿಗೆ ಮನಸಿಗೆ ಬರಲಿಕ್ಕಿಲ್ಲ. ನೀವು ತಕ್ಕೊಂಡು ಕೊಟ್ಟರೆ ನೆಟ್ಟಗೆ. " ಎಂದರವರು.

ಪ್ರೇಮಶಂಕರರು ಇಪ್ಪತ್ತು ರೂಪಾಯಿಗಳನ್ನು ಇಸಕೊಂಡು ಸುಮ್ಮಗೊಯ್ದು ಕಾದಿರನ ಕೈಲಿ ಕೊಟ್ಟರು. ಆಮೇಲೆ ಒಬ್ಬ ಬಟ್ಟೆ ತರಲು ಓಡಿದ. ಹೆಣವನ್ನು ಸಾಗಿಸುವ ಹವಣಿಕೆಯಾರಂಭವಾಯಿತು. ಹೆಂಗುಸರ ಹಾಹಾಕಾರ ಪುನಃ ಮರ್ಮಭೇದಿಯಾಗಿ ಎದ್ದಿತು. ಹೆಣವೇ ಆಗಲಿ ಈ ವರೆಗೆ ಎದುರಿಗಿತ್ತು. ಈಗ ಪಾರ್ಥಿವ ಶರೀರ ಕೊನೆಯಾಗಿ ಅಗಲುತ್ತಿದೆ.

## ೧೯

ಜ್ವಾಲಾಸಿಂಹರು ಹಳ್ಳಿಯ ಸಂದರ್ಶನ ಮುಗಿಸಿಕೊಂಡು ಸಂಜೆಗೆ ತಿರುಗಿಹೋದರು. ತಣ್ಣನೆಯ ಪಾನಕ ಕುಡಿಯುತ್ತ ಕುಳಿತಾಗ ಶೀಲಮಣಿ ಬಂದು ಕೇಳಿದಳು: " ಮಧ್ಯಾಹ್ನ ಎಲ್ಲಿದ್ದಿರಿ ? "

" ಪ್ರೇಮಶಂಕರರ ಅತಿಥಿಯಾಗಿದ್ದೆ. ಅವರಿನ್ನೂ ಹಳ್ಳಿಯಲ್ಲಿಯೇ ಇದ್ದಾರೆ. "

" ಬೇನೆಯ ಹಾವಳಿ ಇನ್ನೂ ಕಡಿಮೆಯಾಗಿಲ್ಲವೆ ? "

" ಇಲ್ಲ. ಈಗ ಕಡಿಮೆಯಾಗುತ್ತಿದೆ. ಈಗ ಹದಿನೈದು ದಿನಗಳಿಂದಲೂ ಅವರು ಹಳ್ಳಿಹಳ್ಳಿ ತಿರುಗುತ್ತಿದ್ದಾರೆ. ಒಂದಿನವೂ ವಿರಾಮವಿಲ್ಲ. ಹಳ್ಳಿಯ ಜನ ಅವರನ್ನು ಪೂಜಿಸುತ್ತಾರೆ "

" ಬಹಳ ಪರೋಪಕಾರಿಗಳೆಂದು ಕಾಣುತ್ತದೆ ನೀವು ಹೋದ ಕೆಲಸ ಏನಾಯಿತು ? "

" ಹಾಂ ಆಯಿತು. ನನ್ನ ಸಂದೇಹ ನಿಜವಾಯಿತು. ಜ್ಞಾನಶಂಕರರ ಬೇಡಿಕೆಯಲ್ಲಿ ಹುರುಳಿಲ್ಲ. ಬರೀ ಕುಳಗಳ ನೆತ್ತರು ಹೀರುವ ಅಭಿಲಾಷೆಯೇ ಅಭಿಲಾಷೆ; ಹಳ್ಳಿಗೆ ಹೋಗಿ ಬಡವರ ಸ್ಥಿತಿಗತಿ ನೋಡುವುದೇ ಬೇಡ. "

" ಅಂದರೆ ನೀವು ಅವರ ಮನವಿ ಕಿತ್ತುಹಾಕುವವರೆ ? "

" ಇಲ್ಲ. ಇದೆಲ್ಲಾ ಗೊತ್ತಿಮ್ದ್ದೂ ಅವರಂತೆ ತೀರ್ಮಾನಿಸುತ್ತೇನೆ ಬೇಕಾದರೆ ಅಪೀಲಿನಲ್ಲಿ ಹಾರಿಹೋಗಲಿ ನನ್ನ ತೀರ್ಪು. "

ಶೀಲವತಿಗೆ ಹರ್ಷವಾಯಿತು. " ಸಾಕು, ನನ್ನ ಇಚ್ಛೆಯೂ ಇದೇ ಇತ್ತು. ನನ್ನ ಮಾತು ಉಳಿಯುವ ಹಾಗೆ ಮಾಡಿರಿ. " ಎಂದಳು.

" ನೀನು ನಿನ್ನ ಮೇಲೆ ಎಂಥ ಭಾರ ತೆಗೆದುಕೊಳ್ಳುತ್ತಿರುವೆ— ಸ್ವಲ್ಪ ಯೋಚಿಸು. ಲಖನಪುರದಲ್ಲಿ ಪ್ಲೇಗಿನ ಪಿಡುಗು ಭಯಂಕರವಾಗಿದೆ. ರೋದನವಿಲ್ಲದ ಮನೆ ಒಂದೂ ಇಲ್ಲ ಬೆಳೆ ಕೊಯ್ಯುವವರು ಸಿಕ್ಕಿಲ್ಲ. ಅಪೀಲು ಮಾಡುವ ಬಲ ಆ ಬಡವರಲ್ಲಿಲ್ಲ. ಡಿಕ್ರಿ ಪಡೆದ ಕೂಡಲೆ ಜ್ಞಾನ ಶಂಕರರು ಅದನ್ನು ಜಾರಿಗೆ ತರುವರು. ಯಾರ ಎತ್ತುಗಳ ಮಾರಾಟವಾಗುತ್ತವೆ, ಯಾರ ಮನೆಮಾರು ಹೋಗುತ್ತವೆ; ಹೊಲಗಳಲ್ಲಿ ಬೆಳೆದು ನಿಂತ ಬೆಳೆ ದುಡ್ಡು ದುಗ್ಗಾಣಿಯ ಬೆಲೆಗೆ ಹರಾಜಾಗುತ್ತದೆ. ಬಡವರ ಈ ಗೋಳು ತಟ್ಟುವುದು ಯಾರಿಗೆ ? ನಾನು ಅಪಕೀರ್ತಿಗೆ ಅಂಜುವುದಿಲ್ಲ; ಅನ್ಯಾಯಕ್ಕೆ, ಅನರ್ಥಕ್ಕೆ ನನ್ನೆದೆ ನಡಗುತ್ತದೆ. "

ಈ ವ್ಯಾಖ್ಯಾನವನ್ನು ಕೇಳಿ ಶೀಲವತಿ ನಡುಗಿದಳು. ಈ ಪ್ರಕರಣ ಇಷ್ಟು ಮಹತ್ತ್ವದ್ದೆಂದು ಅವಳು ತಿಳಿದಿರಲಿಲ್ಲ. ಅವಳ ಮೌನವ್ರತ ಭಗ್ನ ವಾಯಿತು. " ಈ ಸ್ಥಿತಿಯಿದ್ದರೆ ನ್ಯಾಯವಾದವನ್ನೇ, ಸತ್ಯವಾದದನ್ನೇ ಮಾಡಿರಿ. ಬಡವರ ಗೋಳು ಕಟ್ಟಿಕೊಳ್ಳುವುದು ನನಗೆ ಬೇಡ. " ಎಂದಳು.

ಜ್ವಾಲಾಸಿಂಹರ ಎದೆಯಮೇಲಿನ ಕಲ್ಲು ಇಳಿದಂತಾಯಿತು. ಜ್ಞಾನ ಶಂಕರರ ಅರ್ಜಿ ತಿರಸ್ಕೃತವಾಯಿತು. ಅವರು ಹಲ್ಲು ಮಸೆದರು. ಸಿಟ್ಟಿನಲ್ಲಿಯೆ ಮನೆಗೆ ಬಂದು ವಿದ್ಯೆಗೆ ಹರಿಹಾಯ್ದರು. ಬಹುದಿನಗಳ ತರುವಾಯ ಇಂದೇ ಪ್ರಭಾಶಂಕರರ ಕಡೆ ಹೋಗಿ, ಈ ಅಸಭ್ಯವ್ಯವಹಾರವನ್ನು ಕುರಿತು ಗೋಳಿಟ್ಟರು. ಅವರ ಬಾಯಿಂದ ಜ್ವಾಲಾಸಿಂಹರ ಕಪಟವ್ಯವಹಾರದ ದೂರನ್ನು ಕೇಳದ ಒಬ್ಬ ಪರಿಚಯದವನೂ ಉಳಿಯಲಿಲ್ಲ. ಅವರನ್ನು ಲಂಚ ಹೊಡೆದರೆಂದೂ ಆರೋಪಿಸಿದರು. ಬಾಯಿ ಚಾಪಲ್ಯಕ್ಕೇ ಮುಗಿಸದೆ ಲೇಖನಿಯ ಕತ್ತಿ ಮಸೆದರು. ಕೆಲ ದಿನಪತ್ರಿಕೆಗಳಲ್ಲಿ ಅವರನ್ನು ಅತ್ಯಾಚಾರ-ಅವಿಚಾರಗಳ ಕಾಲಪುರುಷರನ್ನಾಗಿ ಚಿತ್ರಿಸಿದರು. ಜ್ವಾಲಾಸಿಂಹರು ಅವನ್ನು ಓದುತ್ತಿದ್ದರು. ಒಳಗೊಳಗೇ ಸಿಡಿಗುಟ್ಟುತ್ತಿದ್ದರು. ತಮ್ಮ ಶುದ್ಧತೆಯ ಬಗ್ಗೆ ಸ್ಪಷ್ಟೀಕರಣ ಕೊಡುವ ಅಧಿಕಾರವಿಲ್ಲ ಅವರಿಗೆ. ಕಾಯಿದೆ ಅವರ ಬಾಯಿ ಕಟ್ಟಿತ್ತು. ಸತ್ಯಾಸತ್ಯವನ್ನು ನೋಡದೆ ಅಧಿಕಾರಿಗಳ ಮೇಲೆ ಕಿಡಿ

ಕಾರುವುದೇ ಒಂದು ಗೌರವವೆಂದು ತಿಳಿದಿರುವ ಪತ್ರಿಕೆಗಳ ಮಿಥ್ಯಾವಾದಿತ್ವ-ಕ್ಕಾಗಿ ಕುದಿಯುತ್ತಿದ್ದರು. ಊರಲ್ಲೆಲ್ಲ ಇದೇ ಚರ್ಚೆ. ಮನೆಬಿಟ್ಟು ಹೊರ ಬರುವುದೇ ಕಷ್ಟವಾಯಿತವರಿಗೆ. ಈ ವಿಷಯವನ್ನು ಕಮಿಶನರರಲ್ಲಿ ಹೇಳಿ ಕೊಳ್ಳಲು ಹೋದಾಗ, ಎಲ್ಲವನ್ನೂ ಸಹಾನುಭೂತಿಯಿಂದ ಕೇಳಿಕೊಂಡು, ಹೊರಟು ಬರುವಾಗ ಅವರು ಹೇಳಿದರು: " ಈ ಕೋಲಾಹಲದ ಪರಿಣಾಮ ನಿಮ್ಮ ಮೇಲೆ ಆಗಲಿಕ್ಕಿಲ್ಲ ಎಂದು ಹೇಳಲಾಗುವುದಿಲ್ಲ. ಆದರೂ ನಿಮಗೆ ಪೆಟ್ಟಾಗದಂತೆ ಸಾಧ್ಯವಿದ್ದಷ್ಟೂ ಪ್ರಯತ್ನಿಸುತ್ತೇನೆ. ನ್ಯಾಯೋಚಿತ ಸಮ ರ್ಥನೆ ಮಾಡಿಕೊಳ್ಳುವುದಕ್ಕೆ ನೀವು ಸ್ವಲ್ಪ ನಷ್ಟ ಸೋಸಬೇಕು ಮಾತ್ರ. ಏಕೆಂದರೆ, ಸನ್ಮಾರ್ಗದಲ್ಲಿ ಹೂವಿನ ಹಡದಿ ಇರುವುದಿಲ್ಲ. "

ಒಮ್ಮೆ ಜ್ವಾಲಾಸಿಂಹರು ಈ ಚಿಂತೆಯಲ್ಲಿ ಕುಳಿತಾಗ ಪ್ರೇಮಶಂಕರರು ಅಕಸ್ಮಾತ್ತಾಗಿ ಬಂದರು. ಕುಶಲಾಲಾಪದ ತರುವಾಯ, " ಪತ್ರಿಕೆಗಳಲ್ಲಿ ಏನು ಗೊಂದಲ ಎದ್ದಿದೆ ಇದು ? ನಾನು ಈವೊತ್ತು ನೋಡಿದೆ. ಈ ಜನ ಅನ್ಯಾಯವಾಗಿ ನಿಮಗೆ ಕೈತೊಳೆದುಕೊಂಡು ಬೆನ್ನುಹತ್ತಿದ್ದಾರೆ. " ಎಂದು ಪ್ರೇಮಶಂಕರರೆಂದರು.

" ಇದೆಲ್ಲ ಜ್ಞಾನಶಂಕರರ ಅನುಗ್ರಹ. ನನ್ನ ಕರ್ತವ್ಯಪಾಲನೆಗೆ ಅವರಿಂದ ಇಂತಹ ಶಿಕ್ಷೆ ದೊರೆತೀತೆಂದು ನಾನು ಆಶಿಸಿರಲಿಲ್ಲ. ನನ್ನ ನ್ಯಾಯ ಮತ್ತು ಅಧಿಕಾರಗಳ ಮೇಲಷ್ಟೇ ಪೆಟ್ಟು ಹಾಕಿದ್ದರೆ ನನಗೇನು ದುಃಖವಿರಲಿಲ್ಲ. ಆದರೆ ನನ್ನ ಚರಿತ್ರೆಗೇ ಕಲಂಕ ಹಚ್ಚಿದ್ದಾರೆ. " ಎಂದರು ಜ್ವಾಲಾಸಿಂಹ.

" ಈ ಪತ್ರಿಕೆಗಳಮೇಲೆ ಮಾನಹಾನಿಯ ದಾವೆ ಮಾಡಿರಿ. ನಿಮ್ಮ ನಿರ್ದೋಷಿತ್ವವನ್ನು ಸಿದ್ಧಪಡಿಸಲು ಇನ್ನೊಂದು ಹಾದಿಯಿಲ್ಲ. "

" ಅದರ ಪರಿಣಾಮದ ಬಗ್ಗೆ ಕಾತರನಾಗಿದ್ದೇನೆ ನಾನು. ಜ್ಞಾನಶಂಕರ ರಿಗೆ ಕಾರಾಗೃಹದ ಪಾಳಿ ಬರಬಹುದು. ಆ ಆತ್ಮಿಕಕ್ಲೇಶ ನನಗೆ ಇದಕ್ಕಿಂತಲೂ ಅಸಹ್ಯ. ನನಗಿದರಲ್ಲಿ ಇಲ್ಲಿಂದ ವರ್ಗವಾದೀತು, ತೀರ ಹೆಚ್ಚೆಂದರೆ ಪದಚ್ಯುತಿ ಬಂದೀತು, ಅಷ್ಟೆ. ಆದರೆ ಜ್ಞಾನಶಂಕರರು ಹಾಳಾಗಿ ಹೋಗುತ್ತಾರೆ, ನಾನು ಎದುರು ಹೂಡಿದರೆ. ಇದು ನನ್ನ ಕೈಯಿಂದಾಗದ ಮಾತು. "

ಪ್ರೇಮಶಂಕರರು ಅತ್ಯಂತ ಶ್ರದ್ಧಾಪೂರ್ಣ ನೇತ್ರಗಳಿಂದ ಜ್ವಾಲಾ-ಸಿಂಹರನ್ನು ನೋಡಿ, " ಬಂಧೂ, ನೀವೊಬ್ಬ ದೇವತಾಮನುಷ್ಯರೇ ಸರಿ.

ನಿಮ್ಮ ಹೃದಯದಲ್ಲಿ ಇಷ್ಟು ನಿರ್ಮಲ–ಪವಿತ್ರಭಾವವಿದೆಯೆಂದು ನಾನು ತಿಳಿದಿರಲಿಲ್ಲ." ಎಂದರು. ತುಸು ತಡೆದು, "ನೀವೊಪ್ಪಿದರೆ ಆ ಪತ್ರಿಕೆಗಳಲ್ಲಿಯೇ ಈ ಆಕ್ಷೇಪಗಳಿಗೆ ಉತ್ತರ ಬರೆಯುತ್ತೇನೆ" ಎಂದರು

ಜ್ವಾಲಾಸಿಂಹರು ಒಪ್ಪಲಿಲ್ಲ. "ಬೇಡ. ಅದರ ಆವಶ್ಯಕತೆಯೂ ಇಲ್ಲ" ಎಂದರು.

ಪ್ರೇಮಶಂಕರರು ಸಂಚಾರದಿಂದ ಮರಳಿದ ಸುದ್ದಿ ತಿಳಿದೊಡನೆ ಜ್ಞಾನಶಂಕರರು ಅವರನ್ನು ಕಾಣಲು ಆತುರಗೊಂಡರು. ಅವರ ದೃಷ್ಟಿಯಲ್ಲಿ ಜ್ವಾಲಾಸಿಂಹರನ್ನು ಪತಿತಗೊಳಿಸುವುದು ಅವಶ್ಯವಾಗಿತ್ತು. ಅವರು ಬಂದಾಗ ಪ್ರೇಮಶಂಕರರು ಮನೆಮುಂದಿನ ಹೂಗಿಡಗಳಿಗೆ ನೀರೆರೆಯುತ್ತಿದ್ದರು. ಕುಶಲ ಪ್ರಶ್ನೆಗಳಾದಮೇಲೆ, "ಆ ಮೊಕದ್ದಮೆಯ ಅಪೀಲು ಮಾಡಿದೆಯೊ ಇನ್ನೂ ಇಲ್ಲವೊ ?" ಎಂದು ಕೇಳಿದರು.

"ಹೂಂ, ಮಾಡಿದೆ. ಜ್ವಾಲಾಸಿಂಹರ ಸಜ್ಜನಿಕೆ ನೋಡಿದೆಯಾ ? ನಾನೇ ಇವನನ್ನು ಮುಂದಕ್ಕೆ ತಂದೆ—ಕಟೆದು ಕಟೆದು ಬಿ. ಎ. ಮಾಡಿಸಿದೆ. ಆ ಉಪಕಾರ ಹೀಗೆ ತೀರಿಸಿದ."

"ಅವರ ಬಗ್ಗೆ ಲೇಖ ನೀನು ಬರೆದೆಯಾ, ಪತ್ರಿಕೆಗಳಲ್ಲಿ ?"

"ಹೌದು. ಅವನು ನನಗೆ ಹೀಗೆ ಮಾಡಿದಮೇಲೆ ನಾನೇಕೆ ಆತನ ಭಿಡೆ ಇಡಲಿ ?"

"ಅವರು ಮಾನಹಾನಿಯ ದಾವೆ ತಂದರೆ ?"

"ಅದಕ್ಕೆ ಧೈರ್ಯ ಬೇಕು. ಅದು ಅವನಿಗಿಲ್ಲ. ಬರೀ ಬೆದರಿಕೆಯ ಮಾತು ಅಷ್ಟೆ. ಅಪೀಲಿನಲ್ಲಿ ನನ್ನಂತಾಗಲಿ, ಅವನನ್ನು ಇನ್ನೊಂದು ಕೈ ನೋಡುತ್ತೇನೆ. ಲಖನಪುರಕ್ಕೆ ನೀನು ಹೋಗಿಬಂದಿದ್ದೀ. ಜನ ನನ್ನನ್ನು ಬಹಳ ದೂರಿಕೊಂಡಿರಬಹುದು."

"ಹೌದು. ಎಲ್ಲರೂ ದೂರುತ್ತಾರೆ."

"ಹೊಡೆದಾಟ ಬಡಿದಾಟದ ಭಯವಿಲ್ಲವಷ್ಟೆ ?"

"ಆದರ ಸಂಭವವಿಲ್ಲವೆಂದು ತೋರುತ್ತದೆ ನನಗೆ."

"ಆದರೂ ನನ್ನ ಹಿತಕ್ಕಾಗಿ ನೀನು ಅಲ್ಲಿಗೆ ಹೋಗುವುದು ಬರುವುದು ಬಿಡಬೇಕು."

"ಏಕೆ, ನಾನು ನಿನ್ನ ವಿರುದ್ಧ ಜನರನ್ನು ಎಬ್ಬಿಸುವೆನೆಂದು ಸಂದೇಹವೆ? ನಿನ್ನಮೇಲೆ ನನ್ನ ಹಗೆತನವುಂಟೆ? ಲಖನಪುರ ಮಾತ್ರವೇ ಅಲ್ಲ, ಇಡೀ ದೇಶದ ರೈತರ ಬಗ್ಗೆ ನನ್ನ ಸಹಾನುಭೂತಿಯಿದೆ. ಆದರೆ, ಜಮೀನುದಾರರನ್ನು ನಾನು ದ್ವೇಷಿಸುತ್ತೇನೆಂದು ಇದರರ್ಥವಲ್ಲ. ಆದರೂ, ನಿನ್ನ ಇಚ್ಛೆ ಹಾಗಿದ್ದರೆ ನಾನು ಅಲ್ಲಿಗೆ ಹೋಗುವುದಿಲ್ಲ."

ಜ್ಞಾನಶಂಕರರಿಗೆ ಸಂತೋಷವಾಯಿತು. ಅದನ್ನು ಪ್ರಕಟಗೊಳಿಸಲು ನಾಚಿಕೊಂಡರು.

ಮರುದಿನ ಪ್ರೇಮಶಂಕರರಿಗೆ ಒಂದು ನೋಂದಿಸಿದ ಪಾಕೀಟುಬಂದಿತು. ಒಂದು ಚೀಟಿ, ಐನೂರು ರೂಪಾಯಿಗಳ ನೋಟುಗಳು ಅದರಲ್ಲಿದ್ದವು. 'ಲಖನಪುರದ ಒಕ್ಕಲಿಗರಿಗೆ ಅಪೀಲಿನ ವೆಚ್ಚದ ಸಲುವಾಗಿ' ಎಂದು ಚೀಟಿಯಲ್ಲಿ ಬರೆದಿತ್ತು. ಕಳಿಸಿದವರ ಹೆಸರು ದೆಸೆ ಇರಲಿಲ್ಲ. ಜ್ವಾಲಾಸಿಂಹರೇ ಇರಬೇಕೆಂದು ಎನಿಸುತ್ತಿದ್ದರೂ ಮನಸು ಒಪ್ಪಲೊಲ್ಲದಾಗಿತ್ತು. ಈ ಹಣವನ್ನು ಆ ಜನಕ್ಕೆ ಹೇಗೆ ಕಳಿಸುವುದೆಂದು ಚಿಂತೆಯಾಯಿತು. ಜ್ಞಾನಶಂಕರನಿಗೆ ತಿಳಿದರೆ, ತಾನೇ ಒಕ್ಕಲಿಗರಿಗೆ ಸಹಾಯ ಮಾಡಿದವನೆಂದು ಭಾವಿಸುತ್ತಾನೆ. ಕೊಡದಿದ್ದರೆ ದೊಡ್ಡ ವಿಶ್ವಾಸಘಾತವಾಗುತ್ತದೆ. ಪ್ರೇಮಶಂಕರರು ವಿಮಂಚನೆಗೊಳಗಾದರು.

## ೨೦

ರೈತರಲ್ಲಿ ಹಣವಿಲ್ಲ, ಅಪೀಲು ತಮ್ಮಂತಾಗುವುದು ಖಂಡಿತ ಎಂದು ಜ್ಞಾನಶಂಕರರು ತಿಳಿದಿದ್ದರು. ಅವರ ಪರವಾಗಿಯೂ ವಾದ ಚೆನ್ನಾಗಿ ನಡೆದುದನ್ನು ಕಂಡು ಅವರಿಗೆ ಸ್ವಲ್ಪ ಸಂದೇಹವುಂಟಾಯಿತು. ಇದು ಹೀಗೆ ಹೇಗಾಯಿತು? ಖಂಡಿತವಾಗಿ ಅವರಿಗೆ ಯಾರ ನೆರವೋ ಸಿಕ್ಕಿದೆ. ಯಾವನೋ ಧನವಂತ ನಿಂತಿದ್ದಾನೆ ಹಿಂದೆ. ಯಾರು?

ತೀರ್ಪಾಯ್ತು—ಜ್ಞಾನಶಂಕರರ ವಿರುದ್ಧ. ಗೌಸಖಾನನ್ನು ಕೋಪದಿಂದ ಕೇಳಿದರು: "ಅವರ ಯಾರ ಹತ್ತಿರವೂ ಒಂದು ಕವಡೆಯೂ ಇಲ್ಲ ಎನ್ನುತ್ತಿದ್ದಿರಿ. ವಕೀಲರೇನು ಪುಕ್ಕಟೆ ಬಂದರೇ?"

ಖಾನನೂ ಕಾಯ್ದು ಉತ್ತರವಿತ್ತ : "ನಾನು ಇದ್ದದ್ದು ಹೇಳಿದ್ದೆ. ಆದರೆ ಧನೇರೊಳಗs ಇಷ್ಟು ಇರೋದ ಇರೋದು ನನಗೇನು ಗೊತ್ತು? ಹುಜೂರರ ಅಣ್ಣಾವರೇ ಕಾದಿರಗೆ ಸಾವಿರ ರೂಪಾಯಿ ಕೊಟ್ಟರಂತ ಕೇಳೀನಿ. ''

ಜ್ಞಾನಶಂಕರರು ದುಮುದುಮಿಸುತ್ತಲೇ ಮನೆಗೆ ಬಂದು ಶ್ರದ್ಧೆಗೆ, "ನೋಡಿದೆಯಾ ಅತ್ತಿಗೆ, ಅಣ್ಣನ ಆಟ? ಲಖನಪುರದವರಿಗೆ ಅಪೀಲಿನ ಸಲುವಾಗಿ ಸಾವಿರ ರೂಪಾಯಿ ಕೊಟ್ಟಿದ್ದಾನಂತೆ. ಅದರಿಂದ ನನ್ನ ಅಪೀಲು ಹಾರಿಹೋಯ್ತು. ತಿಂಗಳುಗಟ್ಟಲೆ ಎಡತಾಕಿದ್ದಾಯ್ತು; ಸಾವಿರಾರು ರೂಪಾಯಿ ಕೈಬಿಟ್ಟದ್ದಾಯ್ತು. ನೀನೆ ಹೇಳು—ಇವನಿಗೆ ಮಿತ್ರ ಎನ್ನಬೇಕೋ ಶತ್ರು ಎನ್ನಬೇಕೋ ?'' ಎಂದರು.

"ಯಾರೋ ನಿಮಗೆ ಸುಳ್ಳೇ ಹೇಳಿರಬೇಕು. ಅಷ್ಟು ಹಣ ಅವರಲ್ಲಿ ಬರಬೇಕೆಲ್ಲಿಂದ ?'' ಶ್ರದ್ಧೆ ಸಾಶಂಕಭಾವದಿಂದ ನುಡಿದಳು.

"ಇಲ್ಲ. ಸುದ್ದಿ ಪಕ್ಕಾ ತಿಳಿದಿದೆ. ಹಣ ತಕ್ಕೊಂಡವರ ಬಾಯಿಂದಲೇ ಕೇಳಿದ್ದೇನೆ. ಇವನಿಗಿಂತ ಜ್ವಾಲಾಸಿಂಹರೇ ಸಾವಿರಪಾಲಿಗೆ ಬೇಕು. ಅವರು ಮಾಡಿದ್ದು ನ್ಯಾಯದೃಷ್ಟಿಯಿಂದ ಮಾಡಿದರು. ನನ್ನನ್ನು ಕೆಡಿಸುವ ಬುದ್ಧಿ ಅವರಿಗಿರಲಿಲ್ಲ. ನಾನು ಸುಳ್ಳೇ ಅನ್ಯಾಯವಾಗಿ ಅವರ ಹೆಸರು ಕೆಡಿಸಿದೆ."

"ಅವರಿಗೆ ವರ್ಗವಾಗಿದೆಯಂತೆ. ಇಂದು ಅವರ ಮನೆಯ ದಾಸಿ ಬಂದಿದ್ದಳು; ಅವಳು ಹೇಳಿದಳು. ಮೂರು ನಾಲ್ಕು ದಿನಗಳಲ್ಲಿ ಹೋಗುತ್ತಾರಂತೆ."

"ನಿಜವಾಗಿ!" ಚಕಿತರಾಗಿ ಜ್ಞಾನಶಂಕರರು ಕೇಳಿದರು.

"ಶೀಲಮಣಿ ನಾಳೆ ಬರುತ್ತಾರಂತೆ. ವಿದ್ಯಾ ಬಹಳ ಸಂಕೋಚದಲ್ಲಿ ಬಿದ್ದಿದ್ದಾಳೆ."

"ನಾನು ಬಹಳ ತಪ್ಪುಮಾಡಿದೆ. ಈ ದುಃಖ ಸಾಯುವವರೆಗೆ ಉಳಿಯುತ್ತದೆ. ನನಗೀಗ ಮನವರಿಕೆಯಾಗುತ್ತಿದೆ: ಅಣ್ಣ ಅವರ ಕಿವಿಯನ್ನು ಕಚ್ಚಿದ್ದಾನೆ. ಅವರು ಸ್ಥಳಿಕ ವಿಚಾರಣೆಗೆ ಹೋದಾಗಲೇ ಇವನೂ ಲಖನಪುರಕ್ಕೆ ಹೋಗಿದ್ದ. ಇಷ್ಟು ದೂರ ಬಲೆ ಬೀಸುವನೆಂದು ನಾನು ಎಣಿಸಿರಲಿಲ್ಲ. ಇಲ್ಲದಿದ್ದರೆ ನಾನು ಮೊದಲಿನಿಂದಲೂ ಎಚ್ಚರದಿಂದಿರುತ್ತಿದ್ದೆ."

ಶ್ರದ್ಧೆ ಜ್ಞಾನಶಂಕರರನ್ನು ಆದರದ ದೃಷ್ಟಿಯಿಂದ ನೋಡಿ ಅಲ್ಲಿಂದೆದ್ದು ಹೊರಟುಹೋದಳು.

ಜ್ವಾಲಾಸಿಂಹರು ಹೊರಡುವುದಕ್ಕೆ ನಾಲ್ಕು ದಿನ ಇತ್ತು. ಜ್ಞಾನಶಂಕರರು ಅವರನ್ನು ಕಾಣಲು ಹೋಗಬೇಕೆಂದು ದಿನಾಲು ಯೋಚಿಸುತ್ತಿದ್ದರು. ಆದರೆ ಹೋಗಲಿಲ್ಲ. ಹೊರಡುವ ಹೊತ್ತಿನಲ್ಲಿ ಮನಸು ಕಾತರವಾಗುತ್ತಿತ್ತು. ಅವರು ಆ ಲೇಖನಗಳ ಮಾತೆತ್ತಿದರೆ!

ಐದನೆಯ ದಿನ ಅಸಂಖ್ಯ ಮಿತ್ರರು ಜ್ವಾಲಾಸಿಂಹರನ್ನು ನಿಲ್ದಾಣದಲ್ಲಿ ಬೀಳ್ಕೊಟ್ಟರು. ಪ್ರೇಮಶಂಕರರೂ ಬಂದಿದ್ದರು. ಅವರು ಎಲ್ಲರ ಕೈ ಕುಲುಕುತ್ತಿದ್ದರು. ಗಾಡಿ ಬಿಡುವುದಕ್ಕೆ ಒಂದೆರಡು ನಿಮಿಷವಿತ್ತು. ಜ್ಞಾನಶಂಕರರು ಕದ್ದು ಬಂದು ಹಿಂದಿನ ಸಾಲಿನಲ್ಲಿ ನಿಂತರು. ಮುಂದುವರಿದು ಕಾಣಿಸಿಕೊಳ್ಳುವ ಧೈರ್ಯವಿಲ್ಲ. ಜ್ವಾಲಾಸಿಂಹರು ಅವರನ್ನು ನೋಡಿದರು. ಕೂಡಲೆ ಗಾಡಿಯಿಂದಿಳಿದು ಬಂದು ಅವರನ್ನು ತಕ್ಕೈಸಿದರು. ಜ್ಞಾನಶಂಕರರಿಗೆ ಕಣ್ಣೀರು ಒತ್ತರಿಸಿತು. ಚಿರಕಾಲದ ಮೈತ್ರಿಯ ಅಂತ ಹೀಗಾಯಿತಲ್ಲ ಎಂದು ಜ್ವಾಲಾಸಿಂಹರು ದುಃಖಿಸಿದರು. ಇಂತಹ ಸನ್ಮಿತ್ರನಿಗೆ ಕೆಡುಕಾಯಿತಲ್ಲ ಎಂದು ಜ್ಞಾನಶಂಕರರು ದುಃಖಿಸಿದರು. ಆ ಮಿತ್ರರ ಸದ್ವ್ಯವಹಾರವನ್ನು ಕಂಡು ಜನಕ್ಕೆಲ್ಲ ಕುತೂಹಲ. ಜ್ಞಾನಶಂಕರರನ್ನು ಅವರಿದ್ದುದಕ್ಕಿಂತ ಹೆಚ್ಚಾಗಿ ಅಸಜ್ಜನನೆಂದು ಭಾವಿಸಿದ್ದ ಪ್ರೇಮಶಂಕರರಿಗೆ ಎಲ್ಲರಿಗಿಂತ ಹೆಚ್ಚಿನ ಆಶ್ಚರ್ಯ.

## ೨೧

ಪರಿಸ್ಥಿತಿಯನ್ನು ತಿಳಿದುಕೊಂಡು ವಿದ್ಯೆ ಗಂಡನ ವಿಚಾರ ಒಪ್ಪಿದಳು. ಜನ್ಮಾಷ್ಟಮಿಯ ಉತ್ಸವವಾದಮೇಲೆ ಜ್ಞಾನಶಂಕರರು ಗೋರಖಪುರಕ್ಕೆ ತೆರಳಿದರು. ಹೋಗುವ ಮೊದಲು ಪ್ರೇಮಶಂಕರರನ್ನು ಕಾಣಲಿಲ್ಲ.

ಗಾಯತ್ರಿಗೆ ಇದೀಗ ರಾಣಿ ಎಂಬ ಪದವಿ ಬಂದಿತ್ತು. ಜ್ಞಾನಶಂಕರರು ಬಂದುದನ್ನು ಕೇಳಿ ಒಮ್ಮೆಲೆ ಒಳಗೆ ಬರಮಾಡಿಕೊಳ್ಳಲಿಲ್ಲ. ತಕ್ಕ ರೀವಿಯಲ್ಲಿ ಕಾಣಿಸಿಕೊಳ್ಳಬೇಕೆಂದು ಅವಳ ಮನಸು. ತನ್ನ ಕೋಣೆಗೆ ಹೋಗಿ ಸುಂದರವಾದ ಸೀರೆಯನ್ನುಟ್ಟು, ಹರಡಿದ ಕೂದಲನ್ನು ನೇರ್ಪಡಿಸಿಕೊಂಡು,

ದೊಡ್ಡ ದಿಂಬಿಗೆ ಆತು ಕುಳಿತುಕೊಂಡಳು. ಬಳಿಕ ಜ್ಞಾನಶಂಕರರಿಗೆ ಕರೆಹೋಯಿತು.

ಜ್ಞಾನಶಂಕರರು ಒಳಗೆ ಬಂದು, ಎದುರಿನಲ್ಲಿ ವಿಲಾಸಮಯ ಸೌಂದರ್ಯದ ಅನುಪಮ ಮೂರ್ತಿಯೊಂದನ್ನು ಕಂಡರು. ಅದರ ಪ್ರತಿ ಅಂಗದಲ್ಲಿಯೂ ಗರ್ವಗೌರವಗಳು ಹೊಮ್ಮುತ್ತಿದ್ದವು. ಮೊದಲಿನ ಪ್ರಸನ್ನ ಮುಖದ, ಸರಲ ಪ್ರಕೃತಿಯ ವಿನಯಪೂರ್ಣಳಾದ ಗಾಯತ್ರಿ ಅವಳಾಗಿರಲಿಲ್ಲ. ಜ್ಞಾನಶಂಕರರು ತಲೆವಾಗಿ ವಂದಿಸಿ ಕುರ್ಚಿಯ ಮೇಲೆ ಕುಳಿತುಕೊಂಡರು. ಲಜ್ಜೆ ತಲೆ ಎತ್ತರಿಸಗೊಡಲಿಲ್ಲ.

"ಬನ್ನಿ ಬನ್ನಿ, ವಿದ್ಯೆ ನಿಮ್ಮನ್ನು ಬಿಡಲೇ ಇಲ್ಲವೋ ಏನು? ಎಲ್ಲ ಕ್ಷೇಮವೆ?" ಎಂದು ಗಾಯತ್ರಿ ನುಡಿದಳು.

"ಹಂ, ಎಲ್ಲರೂ ಚೆನ್ನಾಗಿದ್ದಾರೆ."

"ನಿಮ್ಮ ಲೇಖ ಒಳ್ಳೇ ಮೆಚ್ಚಿಕೆ ಪಡೆದಿದೆ." ಎಂದು ನಸುನಕ್ಕು ಗಾಯತ್ರಿ, "ಜನರನ್ನು ಒಲಿಸಿಕೊಳ್ಳುವ ಬಗೆಯನ್ನು ನಿಮ್ಮಿಂದ ಕಲಿಯಬೇಕು" ಎಂದಳು.

"ಇದ್ದುದು ನನ್ನ ಶ್ರದ್ಧೆಯ ಅಲ್ಪಾಂಶ ಮಾತ್ರ" ಜ್ಞಾನಶಂಕರರೆಂದರು.

ಗಾಯತ್ರಿ ಗುಣಜ್ಞತೆಯ ಭಾವದಿಂದ ನಕ್ಕಳು. "ಸ್ವಲ್ಪ ಪಾಪ ಹೆಸರು ಕೆಡಿಸಲು ಸಾಕಿರುವಾಗ ಹೆಚ್ಚಿಗೆ ಮಾಡಬಾರದೇಕೆ? ಕಾರ್ತಿಕದಲ್ಲಿ ಹಿಜ್ ಎಕ್ಸೆಲೆನ್ಸಿ ಬರುತ್ತಾರೆ ಇಲ್ಲಿಗೆ. ಆಗ ನನ್ನ ಪದವೀದಾನದ ಸಮಾರಂಭವನ್ನು ಏರ್ಪಡಿಸಲಾಗಿದೆ. ನೀವು ಒಳ್ಳೇ ಸಮಯಕ್ಕೆ ಬಂದಿರಿ. ಈಗಿಂದಲೇ ದರಬಾರದ ಮಂಟಪಕ್ಕೆ ತೊಡಗಬೇಕು. ಅಭ್ಯಾಗತರ ಸತ್ಕಾರ ಹೌದು ಹೌದು ಎನ್ನುವಂತಾಗಬೇಕು. ದುಡ್ಡಿನ ಚಿಂತೆ ಕೊಂಚವೂ ಮಾಡಬೇಡಿ"

ಬಳಿಕ ಗಾಯತ್ರಿ ಇಲಾಕೆಯ ವ್ಯವಸ್ಥೆ, ತನ್ನ ಸಂಕಲ್ಪಗಳನ್ನು ಕುರಿತು ಚರ್ಚಿಸಿದಳು. ಅವಳ ಅನುಭವ, ಯೋಗ್ಯತೆಗಳನ್ನು ಕಂಡು ಜ್ಞಾನಶಂಕರರಿಗೆ ಆಶ್ಚರ್ಯವಾಯಿತು. ಇದೆಲ್ಲ ತನ್ನಿಂದ ನೀಗೀತೇ ಎಂಬ ಸಂದೇಹವೂ ಉಂಟಾಯಿತು. ಹಳ್ಳಿಯ ಬ್ಯಾಂಕುಗಳು, ನಿರ್ಮಾಣಕಾರ್ಯ, ಒಕ್ಕಲುತನದ ಹೊಸಶೋಧಗಳು ಅವರಿಗೆ ಅಪರಿಚಿತ. ಆದರೆ ಈಗ ತಮ್ಮ ಅನರ್ಹತೆಯನ್ನು ತೋರಿಸಿಕೊಳ್ಳುವುದು ಅತ್ಯಂತ ಅನುಚಿತವಾಗಿತ್ತು. ಈ ವಿಷಯ

ಗಳಲ್ಲಿ ತಾವು ಪಾರಂಗತರೋ ಎನ್ನುವಂತೆ ಒಳ್ಳೇ ಮರ್ಮಜ್ಞತೆಯಿಂದ ಅವಳ ಮಾತಿಗೆ ತಲೆದೂಗುತ್ತಿದ್ದರು, ನಡುನಡುವೆ ತಮ್ಮ ವಿಚಾರ ಪ್ರಕಟಿಸುತ್ತಿದ್ದರು.

ಶಾಂತಿಯಿಂದ ಕುಳಿತು ಕೆಲಸದ ತಿಳಿವಳಿಕೆ ಮಾಡಿಕೊಳ್ಳುವುದಕ್ಕೆ ಎರಡು ಮೂರು ದಿನಗಳೂ ಜ್ಞಾನಶಂಕರರಿಗೆ ದೊರೆಯಲಿಲ್ಲ. ಮರುದಿನದಿಂದಲೇ ದರ್ಬಾರದ ಸಿದ್ಧತೆಗೆ ತೊಡಗಬೇಕಾಯಿತು. ಎರಡು ತಿಂಗಳ ಅವಿಶ್ರಾಂತ ಶ್ರಮದಿಂದ ಅದು ಪೂರ್ಣವಾಯಿತು. ಅಭಿನಂದನ ಪತ್ರದ ರಚನೆಯ ಹೊಣೆಯೂ ಅವರ ಮೇಲೆಯೆ ಇತ್ತು. ಜಿಲ್ಲಾಧೀಶರು ಅದನ್ನೋದಿ, ಹಿಂದುಸ್ತಾನಿಗಳ ಲೆಕ್ಕಣಿಕೆಯಲ್ಲಿ ಇಂತಹ ಚಮತ್ಕಾರವನ್ನು ಕಂಡುದೇ ಇಲ್ಲವೆಂದು ಮಾನ್ಯಜನರಲ್ಲಿ ಕೊಂಡಾಡಿದರು.

ಅಕ್ಟೋಬರ್ ೧೫ ರಂದು ಎಲ್ಲ ಕಾರ್ಯಗಳು ನಿರ್ದಿಷ್ಟ ಸಮಯಕ್ಕೆ ಸಾಂಗವಾದವು. ಯಾವುದರಲ್ಲಿಯೂ ಕುಂದು ಕೊರತೆ ಆಗಲಿಲ್ಲ. ಎಲ್ಲರೂ ಮೆಚ್ಚಿ ಕೊನೆದಾಡಿದರು. ಗವರ್ನರರನ್ನು ಟ್ರೇನ್ ಹತ್ತಿಸಿ ಬಂದು ಸಂಜೆ ವಿರಾಮಾಸನದಲ್ಲಿ ಕುಳಿತಾಗ ಅವರಿಗೆ ಬಹಳ ದಣಿವಾಗಿತ್ತು. ಆದರೂ ತಮ್ಮ ಸಾಫಲ್ಯಕ್ಕಾಗಿ ಹೃದಯ ಅತ್ಯಂತ ಉಲ್ಲಸಿತವಾಗಿತ್ತು. ವರುಷಕ್ಕೆ ಎರಡು ಸಾವಿರ ರೂಪಾಯಿ ಉತ್ಪನ್ನವುಳ್ಳ ಸಾಮಾನ್ಯ ಜಮೀನುದಾರರಾಗಿದ್ದ ತಾವು ಈ ಹಂತಕ್ಕೇರಿ, ಈ ನಗರದ ಪ್ರಮುಖರಲ್ಲಿ ಮನ್ನಣೆ ಪಡೆದುದಕ್ಕಾಗಿ ಹೆಮ್ಮೆಪಡುತ್ತಿದ್ದರು. ತಾವು ತೋರಿದ ಯೋಗ್ಯತೆ ಆಶಾತೀತವಾದುದೆಂದು ಅಚ್ಚರಿಪಡುತ್ತಲೂ ಇದ್ದರು. ಬನಾರಸದಲ್ಲಿ ಇಡೀ ಜೀವಮಾನ ಕಳೆದರೂ ಇಂತಹ ಸಮ್ಮಾನಪದ ಲಭ್ಯವಾಗುತ್ತಿರಲಿಲ್ಲ ಗಾಯತ್ರಿಯ ವಿಚಾರ ಬಂದಿತು. ಅವಳ ಚಿತ್ತವೂ ಗಗನದಲ್ಲಿ ವಿಹರಿಸುತ್ತಿರಬಹುದು. ವಿದ್ಯೆ ಈಕೆಗಿಂತ ರೂಪವತಿಯೇ- ಆದರೆ ಈ ಆಕರ್ಷಣ, ಈ ರಸಿಕತೆ ಅವಳಿಗೆಲ್ಲಿ ? ಇವಳೆದುರಿಗೆ ಬಂದರೆ ಕಣ್ಣುಗಳನ್ನು ಅಂಕೆಯಲ್ಲಿಟ್ಟುಕೊಳ್ಳುವುದೇ ಕಠಿನವಾಗುತ್ತದೆ. ಈ ಶಕ್ತಿಯ ಮುಂದೆ ನಿಲ್ಲುವುದು ಸಾಧ್ಯವಿಲ್ಲ. ಅವಳು ನನ್ನ ಯೋಗ್ಯತೆಯನ್ನು ಗೌರವಿಸುತ್ತಾಳೆ. ನನ್ನನ್ನು ತನ್ನ ಸಮ್ಮಾನ ಸಾಧನವನ್ನಾಗಿ ಮಾಡಿಕೊಳ್ಳುತ್ತಿದ್ದಾಳೆ ಮಾತ್ರ. ಸ್ವಾಮಿನಿ-ಸೇವಕ ಭಾವದ ಹೊರತು ಬೇರೆ ಸಂಬಂಧವನ್ನು ಅವಳು ಆಶಿಸುವುದಿಲ್ಲ. ಸಮ್ಮಾನವೇ ಅವಳ

ಇಂದಿನ ಜೀವನದ ಉದ್ದೇಶ. ಇದರ ಆವಾಹನದಿಂದಲೇ ನಾನು ಇಲ್ಲಿಗೆ ಬಂದು ತಲುಪಿದ್ದೇನೆ; ಇದರಿಂದಲೇ ಒಂದಿನ ಅವಳ ಹೃದಯದಲ್ಲಿ ಪ್ರೇಮವನ್ನು ಮೊಳೆಯಿಸಬಹುದು.

ಜ್ಞಾನಶಂಕರರು ಈ ವಿಚಾರದಲ್ಲಿ ಮುಳುಗಿರುವಾಗ ಗಾಯತ್ರಿ ಕರೆಸಿಕೊಂಡಳು. ನಗುತ್ತ ಅವಳೆಂದಳು: "ಇಂದಿನ ಏರ್ಪಾಡಿನ ಯಶಸ್ಸೆಲ್ಲ ನಿಮ್ಮದೇ. ಅದಕ್ಕಾಗಿ ನಾನು ಅನುಗ್ರಹೀತಳಾಗಿದ್ದೇನೆ. ಪ್ರತಿಯೊಬ್ಬ ಕೆಲಸದವನಿಗೂ ಒಂದೊಂದು ರೂಪಾಯಿ ಮೆಚ್ಚುಕೊಡಿರಿ."

"ಅಯ್ನೂರಕ್ಕಿಂತ ಕಡಿಮೆಯಿಲ್ಲ ಮಂದಿ."

"ಏನಡ್ಡಿಯಿಲ್ಲ. ಇಂತಹ ಸಂದರ್ಭ ದಿನಾಲು ಬರುವುದಿಲ್ಲ. ಪೆಂಡಾಲು ಕಟ್ಟಿದವನಿಗೆ ನೂರುರೂಪಾಯಿ ಮೆಚ್ಚುಕೊಡಿರಿ."

"ಮತ್ತೆ ಮಿಠಾಯಿ ಮಾಡಿದವರು, ಅಡಿಗೆಯವರು, ಬಡಿಸುವವರು ಇವರನ್ನೆಲ್ಲ ಏಕೆ ಬಿಡಬೇಕು?"

"ಛೆ ಛೆ, ಅವರಿಗೆ ಒಬ್ಬೊಬ್ಬನಿಗೂ ಇಪ್ಪತ್ತು ರೂಪಾಯಿ ಸಿಕ್ಕಬೇಕು. ನಮ್ಮ ನೌಕರರಿಗೆ ಕೂಡ ಯೋಗ್ಯತಾನುಸಾರ ಸ್ವಲ್ಪಿಲ್ಲ ಸ್ವಲ್ಪ ಸಲ್ಲಬೇಕು. ಎಲ್ಲರನ್ನೂ ಇಲ್ಲಿಗೇ ಕರೆಸಿರಿ. ನಾನೇ ಕೊಡುತ್ತೇನೆ, ಎಂದರೆ ಅವರಿಗೆ ವಿಶೇಷ ಆನಂದವಾಗುವುದು."

ಬಳಿಕ ವಿದ್ಯೆಗೆ ಕಳಿಸುವುದಕ್ಕಾಗಿ ರತ್ನದ ಬಳೆಗಳನ್ನೂ ಐನೂರು ರೂಪಾಯಿಗಳನ್ನೂ ಗಾಯತ್ರಿ ಕೊಟ್ಟಳು. ಜ್ಞಾನಶಂಕರರು ತಲೆತಗ್ಗಿಸಿ, "ಇದೇಕೆ? ಅಂತಹದೇನು ಸಂದರ್ಭ?" ಎಂದರು.

"ಇನ್ನೇನು ಸಂದರ್ಭ ಬರುತ್ತದೆ? ಮಕ್ಕಳಿಲ್ಲ ಮರಿಯಿಲ್ಲ, ಮದುವೆಗಳಲ್ಲಿ ಮನದ ಅಪೇಕ್ಷೆ ತೀರಿಸಿಕೊಳ್ಳಲಿಕ್ಕೆ." ಎಂದು ಗಾಯತ್ರಿ ಒತ್ತಾಯಿಸಿ "ಇನ್ನು ನಿಮ್ಮಲ್ಲಿಯೂ ಒಂದು ಬೇಡಿಕೆ: ನನಗಿಂತ ಚಿಕ್ಕವರು ನೀವು, ನೀವೂ ನಿಮ್ಮ ಹಕ್ಕನ್ನು—ದಯೆಮಾಯೆ ಇಲ್ಲದೆ–ವಸೂಲು ಮಾಡಿಕೊಳ್ಳಿರಿ."

"ನಿಮ್ಮ ಕೃಪಾದೃಷ್ಟಿಯೇ ಸಾಕು ನನಗೆ. ಇದರಲ್ಲಿ ದೊರೆತ ಕೀರ್ತಿಯೇ ನನಗೊಂದು ಮೆಚ್ಚು." ಎಂದು ಜ್ಞಾನಶಂಕರರು ನಾಚಿ ನುಡಿದರು.

"ಛೆಛೆ ನಾನು ಕೇಳುವುದಿಲ್ಲ. ನೀವಾಗಿ ಹೇಳುವುದಿಲ್ಲ, ನಾನೇ

ಹೇಳುತ್ತೇನೆ. ಬನಾರಸದ ನಿಮ್ಮ ಮನೆಯ ಪಕ್ಕದಲ್ಲಿ ಸುಂದರವಾದ ಒಂದು ಬಂಗಲೆ ಕಟ್ಟಿಕೊಳ್ಳಿರಿ, ಒಂದು ಕುದುರೆ ಒಯ್ಯಿರಿ ...''

ಅಲ್ಲಿಂದ ಹೊರಟಾಗ ಜ್ಞಾನಶಂಕರರ ಹೆಜ್ಜೆ ನೆಲದಮೇಲೆ ಬೀಳು-ತ್ತಿರಲಿಲ್ಲ.

## ೨೨

ಆಯ ಹೆಚ್ಚು, ವ್ಯಯ ಕಡಿಮೆ—ಇದು ಜ್ಞಾನಶಂಕರರ ಆಡಳಿತದ ಗುಟ್ಟು. ಮೇಲ್ವಿಚಾರಕರ ಮತ್ತು ಗುಮಾಸ್ತರ ಅಸಡ್ಡೆಯಿಂದ ಬಹಳ ಭೂಮಿ ಪಡಬಿದ್ದಿತ್ತು; ಸಾಗುವಳಿಯಾದ ಸಾವಿರಾರು ಬಿಘೆ ಭೂಮಿಯ ಹುಟ್ಟುವಳಿಯ ಪತ್ತೆಯೇ ಇರಲಿಲ್ಲ; ಬೆಳೆಯುಳ್ಳ ಎಷ್ಟೋ ಕ್ಷೇತ್ರಗಳು ಬಂಜರಾಗಿದ್ದವು ಉಳಿದ ಆದಾಯವೆಲ್ಲ ರಾಜ್ಯಾಧಿಕಾರಿಗಳ ಆದರಸತ್ಕಾರಕ್ಕೆ ಹೋಗುತ್ತಿತ್ತು. ನೌಕರರ ಸಂಖ್ಯೆಯೂ ಆಗತ್ಯಕ್ಕಿಂತ ಹೆಚ್ಚಿತ್ತು. ಬಹು ದಿನಗಳಿಂದ ಕಂದಾಯದ ಏರಿಕೆ ಆಗಿರಲಿಲ್ಲ; ಹೊಲಗಳ ಜಮಾಬಂದಿಯೂ ನಿಶ್ಚಿತ ನಿಯಮಾಧೀನವಾಗಿರಲಿಲ್ಲ. ಎಲ್ಲವನ್ನೂ ಜ್ಞಾನಶಂಕರರು ಸರಿಪಡಿಸ ಲಾರಂಭಿಸಿದರು. ಇಲಾಕೆಯ ತುಂಬ ಗೊಂದಲವೆದ್ದಿತು. ಗಾಯತ್ರಿಯ ಕಡೆಗೂ ದೂರುಗಳು ಬಂದವು. ಆಕೆ ಕುಳಗಳೊಡನೆ ಮಿದುವಾಗಿ ವರ್ತಿಸಲು ಬಯಸುತ್ತಿದ್ದರೂ ಜ್ಞಾನಶಂಕರರು ಲೆಕ್ಕದ ತಾಳ-ಮೇಳ ಇದಿರಿಗೆ ಹಿಡಿದರು. ತತ್ಕಾಲ ಕಿತ್ತಿಹಾಕದಿದ್ದರೆ, ಕೊನೆವರೆಗೂ ಜಮೀನುದಾರರ ಅಂಕೆ ತಪ್ಪಿ ಹೋಗುವಂತಹ ಕುಳಗಳು ಸಾವಿರದ ಮೇಲಿದ್ದವು. ಅದರಿಂದ ವರುಷಕ್ಕೆ ಇಪ್ಪತ್ತುಸಾವಿರ ರೂಪಾಯಿ ಕೈತಪ್ಪುವಂತಿತ್ತು. ತೆರಿಗೆ ಹೆಚ್ಚಳದಿಂದ ಉತ್ಪನ್ನ ಕಾಲುಪಟ್ಟು ಬೆಳೆಯುತ್ತಿತ್ತು. ಹೀಗಿರುವಾಗ ಸುದಕ್ಷನಾದ ಆಡಳಿತಗಾರನ ಮಾತನ್ನು ಅವಳೇಕೆ ಒಪ್ಪಲಿಕ್ಕಿಲ್ಲ?

ಗಾಯತ್ರಿ ಜ್ಞಾನಶಂಕರರನ್ನು ಗೌರವಿಸುತ್ತಿದ್ದಳು; ಪ್ರತಿಯೊಂದು ಮಾತಿನಲ್ಲಿಯೂ ಅವರ ಸಲಹೆಯಂತೆ ನಡೆಯುತ್ತಿದ್ದಳು; ಪ್ರಾಯಿಕವಾಗಿ ನಿತ್ಯವೂ ಅವಳ ಸಂದರ್ಶನದ ಅವಕಾಶ ಅವರಿಗೆ ಸಿಕ್ಕುತ್ತಿತ್ತು; ದೂರದ ಸ್ಥಳದಿಂದಲೂ ಅವರು ಕಾರಿನಲ್ಲಿ ಬರುತ್ತಿದ್ದರು. ಆದರೆ ಈ ಬೆಟ್ಟಿ ಇಲಾಕೆಯ ವ್ಯವಹಾರದ ಮಟ್ಟಿಗೆ ಮಾತ್ರ. ಅಲ್ಲಿ ಪ್ರೇಮತತ್ತ್ವದರ್ಶನಕ್ಕೆ ಆಸ್ಪದ

ವಿರುತ್ತಿರಲಿಲ್ಲ ಇಬ್ಬರು ಮೂವರು ದಾಸಿಯರು ಇದ್ದೇ ಇರುತ್ತಿದ್ದರು. ನಿರಾಶೆಯಿಂದ ಮರಳುತ್ತಿದ್ದರು. ಕೈಕಾಸಿಕೊಳ್ಳುವುದಕ್ಕಾಗಿ ಅವರು ಹೊತ್ತಿಸಿದ ಬೆಂಕಿ ಅವರ ಹೃದಯವನ್ನೂ ಕಾಯಿಸುತ್ತಿತ್ತು.

ಆ ಏಕಾಂತ ದರ್ಶನ ಒಮ್ಮೆ ಒದಗಿಬಂದಿತು. ಗಾಯತ್ರಿಯ ಕರೆಯ ಮೇರೆಗೆ ಜ್ಞಾನಶಂಕರರು ಹೋದಾಗ ಆಕೆ ಒಬ್ಬಳೇ, ತೋಟದಲ್ಲಿ ಹಕ್ಕಿಗಳಿಗೆ ಕಾಳುಹಾಕುತ್ತ ಕುಳಿತಿದ್ದಳು ಜ್ಞಾನಶಂಕರರನ್ನು ಕಂಡು,

"ತಮ್ಮ ತರುವಾಯ ಇಲಾಕೆಯನ್ನು ವಿಶ್ವಸ್ತಮಂಡಲದ ನೇತೃತ್ವದಲ್ಲಿ ಧರ್ಮಾರ್ಪಣ ಮಾಡಬೇಕೆಂದು ಯಜಮಾನರು ಅಂತ್ಯಕಾಲದಲ್ಲಿ ಹೇಳಿದ್ದರು. ಅವರ ಅಪೇಕ್ಷೆ ಪೂರೈಸಬೇಕೆಂದು ನನಗೀಗ ಎನಿಸುತ್ತದೆ. ಬಾಳು ನೆಚ್ಚಿನದಲ್ಲ. ಬರೆದಿಡದೆ ಹೊರಟುಹೋದೆನೆಂದರೆ ಇಲಾಕೆ ಒಡೆದು ಹಂಚಿ ಹೋಗಿ ಮಾತು ಅಲ್ಲೇ ಉಳಿದುಹೋಗುವುದು. ಈ ಸಮಸ್ಯೆಯನ್ನು ತೀರ್ಮಾನಿಸಬೇಕೆಂದು ನನ್ನ ಇಚ್ಛೆ."

ಜ್ಞಾನಶಂಕರರ ಅಭಿಲಾಷೆಗಳ ತ್ರಿಭುಜದ ಆಧಾರವೇ ಲುಪ್ತವಾಗುವಂತೆ ತೋರಿತು. "ಕೊನೆಹೇಳಿಕೆ ಬರೆಹದಲ್ಲಿದೆಯೆ?" ಎಂದು ಕೇಳಿದರು.

"ಅವರ ಬಯಕೆಯೇ ನನಗೆ ಸಾವಿರ ಬರೆಹಗಳಿಗಿಂತ ಬೆಲೆಯುಳ್ಳದ್ದು" ಎಂದಳು ಗಾಯತ್ರಿ.

ಈ ಸಮಯದಲ್ಲಿ ಕೂಟನೀತಿ ಅವಶ್ಯವೆಂದು ಜ್ಞಾನಶಂಕರರಿಗೆನಿಸಿತು. "ಅವಶ್ಯವಾಗಿ. ಆದರೆ, ಈ ಪರಮಾರ್ಥದ ಸ್ವರೂಪವನ್ನು ಮೊದಲು ನಿಶ್ಚಯಿಸಿಕೊಳ್ಳಬೇಕು." ಎಂದರು

"ಈಬಗ್ಗೆ ಲಖನೌಗೆ ಹೋಗಿ ಅಪ್ಪನೊಡನೆ ವಿಚಾರಿಸಿರಿ; ನಿಮ್ಮ ಅಣ್ಣನ ಅಭಿಪ್ರಾಯವನ್ನೂ ಕೇಳಿರಿ."

"ರಾಯಸಾಹೇಬರ ಸಮ್ಮತಿ ಅವಶ್ಯವೇ— ಅವರು ಬುದ್ಧಿವಂತರು. ಆದರೆ, ಅಣ್ಣ ಈ ವಿಷಯದಲ್ಲಿ ಯೋಗ್ಯನೆಂದು ನನಗೆನಿಸುವುದಿಲ್ಲ. ಅವನಂತಹ ವಿಚಾರಗೇಡಿ— ಹೆಂಡತಿಯನ್ನು ಬಿಟ್ಟುಬಿಟ್ಟಿದ್ದಾನೆ, ಮಿಥ್ಯಾಸಿದ್ಧಾಂತಗಳ ಬೆನ್ನುಹತ್ತಿ ಸಮಾಜವನ್ನು ತಿರಸ್ಕರಿಸುತ್ತಿದ್ದಾನೆ, ತನ್ನ ಅಸಾಧುತನಕ್ಕೆ ಪ್ರಜಾಪ್ರೇಮದ ಬಣ್ಣಬಳಿದು ತಮ್ಮನ ಕೊರಳಿಗೆ ಚೂರಿಯಿಡಲೂ ಹಿಂಜರಿಯುವುದಿಲ್ಲ; ಇಂತಹನನ್ನು ಈ ಧಾರ್ಮಿಕ ವಿಷಯದಲ್ಲಿ

ಕೇಳುವುದರಲ್ಲಿ ಅರ್ಥವಿಲ್ಲ. ಈ ಅವಿಚಾರಗಳಿಂದಾಗಿಯೇ ಶ್ರದ್ಧೆಗೆ ಅವನೆಂದರೆ ಆಗುವುದಿಲ್ಲ."

"ಶ್ರದ್ಧೆಯದು ಅನ್ಯಾಯವೆ. ಮದುವೆಯಾದ ಗಂಡನೊಟ್ಟಿಗೆ ಬಾಳುವುದು ಕರ್ಮನಿಷ್ಠ ನಾರಿಯ ಧರ್ಮ."

"ಹಿಂದಕ್ಕೆ ಹೀಗಿರಬಹುದು, ಹೊಸ ಯುಗ ಇದನ್ನು ಒಪ್ಪುವುದಿಲ್ಲ. ಸ್ತ್ರೀಸ್ವಾತಂತ್ರ್ಯವಾದಿ ಯುಗವಿದು. ಪಶ್ಚಿಮ ದೇಶದಲ್ಲಿ ಧಾರ್ಮಿಕ ಮತ ಭೇದದಿಂದಾಗಿ ವಿಚ್ಛೇದಗಳಾಗುತ್ತಿವೆ."

"ಆದರೆ ನಮ್ಮಲ್ಲಿ ಸ್ತ್ರೀಪುರುಷರು ಕೂಡಿದ್ದು ತಮ್ಮ ತಮ್ಮ ಮತದಂತೆ ನಡೆಯಬಲ್ಲರು. ಗಂಡ ವೈಷ್ಣವ, ಹೆಂಡತಿ ಶೈವಳು ಇರುವುದುಂಟು. ಗಂಡ ಆರ್ಯಸಮಾಜದಲ್ಲಿ, ಹೆಂಡತಿ ಪುರಾತನ ಸನಾತನ ಧರ್ಮದಲ್ಲಿ ಇದ್ದುದುಂಟು ಗಂಡ ದೇವರನ್ನೇ ಒಪ್ಪದಿರಬಹುದು, ಹೆಂಡತಿ ಕಲ್ಲುಕಟ್ಟಿಗೆಗಳನ್ನು ಪೂಜಿಸುತ್ತಾಳೆ. ಈ ಭೇದ ಪತಿಪತ್ನಿಯರಲ್ಲಿ ಭಿನ್ನಭಾವಕ್ಕೆ ಎಡೆಗೊಡುವುದೆಂದಿಲ್ಲ. ವಿಚಾರಸ್ವಾತಂತ್ರ್ಯ ಇಷ್ಟು ವಿಕೋಪಕ್ಕೆ ಹೋದ ದಿನವನ್ನು ದೇವರು ತರುವುದೇ ಬೇಡ."

"ನಾವು ಭೀರುಗಳಾಗಿರುವುದೇ ಇದಕ್ಕೆ ಕಾರಣ. ಯಥಾರ್ಥವನ್ನು ಎದುರಿಸದೆ, ಸುಳ್ಳು ಆದರ್ಶಪ್ರೇಮದ ಹಿಂದೆ ನಮ್ಮ ದುರ್ಬಲತೆಯನ್ನು ಅಡಗಿಸುತ್ತಿದ್ದೇವೆ."

"ಇಚ್ಛೆಗಳು—ಮನೋವೃತ್ತಿಗಳು - ಒಯ್ದತ್ತ ಕಣ್ಣುಮುಚ್ಚಿಕೊಂಡು ಹೋಗಬೇಕೆಂಬುದು ನಿಮ್ಮ ಮಾತಿನ ಅರ್ಥವೆಂದು ತೋರುತ್ತದೆ. ನನ್ನ ಹೃದಯ ಮಾತ್ರ ಎಂದಿಗೂ ಇದನ್ನು ಒಪ್ಪುವುದಿಲ್ಲ ಇಚ್ಛಾ-ವಾಸನೆಗಳೇ ಮಾನವನ ಪತನಕ್ಕೆ ಮುಖ್ಯ ಕಾರಣ, ಅವುಗಳ ನಿಗ್ರಹ ಮುಕ್ತಿಗೆ ಸಾಧನ ಎಂದು ಧರ್ಮಗ್ರಂಥಗಳು ಸಾರುತ್ತಿವೆ. ಇದು ನಿರ್ವಿವಾದ ಸತ್ಯವೆಂದೇ ನನ್ನ ಮತ. ಸಂಪ್ರದಾಯದಾಸ್ಯ ಇಚ್ಛಾದಾಸ್ಯಕ್ಕಿಂತ ಶ್ರೇಷ್ಠವಾದದ್ದು."

ಗಾಯತ್ರಿಯ ಈ ಮಾತುಗಳಿಂದ ಜ್ಞಾನಶಂಕರರಿಗೆ ಆನಂದವಾಗುತ್ತಲಿತ್ತು. ಇದರಿಂದ ಅವಳ ಹೃದಯದ ಭೇದ್ಯ ಅಭೇದ್ಯ ಸ್ಥಳಗಳು ಗೊತ್ತಾಗುತ್ತಿದ್ದವು. ಅವರು ಏನೋ ಮಾತನಾಡಬೇಕೆಂಬ ಹೊತ್ತಿಗೆ ಒಬ್ಬ ದಾಸಿ

ಬಂದು ತಂತಿಯ ಕವರೊಂದನ್ನು ಕೊಟ್ಟಳು. ಜ್ಞಾನಶಂಕರರು ಚಕಿತರಾಗಿ ಅದನ್ನು ತೆರೆದರು.—'ಬೇಗ ಬರಬೇಕು, ಲಖನಪುರದವರೊಡನೆ ಫೌಜದಾರಿಯಾಗುವ ಭಯವಿದೆ.' ಎಂದಿತ್ತು.

"ಮನೆಯಲ್ಲಿ ಎಲ್ಲರೂ ಕುಶಲರೆ?" ಗಾಯತ್ರಿ ಕೇಳಿದಳು.

"ಲಖನಪುರದಿಂದ ಬಂದಿದೆ. ಅಲ್ಲಿ ಫೌಜದಾರಿ ಆಗಿದೆ. ಆ ಊರಿನಿಂದ ನನಗೆ ಸಾಕುಸಾಕಾಗಿದೆ ಎಲ್ಲರೂ ಮಹಾದುಷ್ಟರು; ಅವರನ್ನು ಅಂಕೆಯಲ್ಲಿ ತರುವುದೇ ಅಸಾಧ್ಯವಾಗಿದೆ. ಎಲ್ಲವೂ ಅಣ್ಣನ ಪ್ರಭಾವ."

"ಹಾಗಾದರೆ ನೀವು ಹೋಗಬೇಕಾಯಿತು. ಅಲ್ಲಿನ ಪರಿಸ್ಥಿತಿ ವಿಪರೀತಕ್ಕಿಟ್ಟುಕೊಂಡೀತು ಮತ್ತೆ. ಅಲ್ಲಿನ ಸಮಾಚಾರ ಬರೆಯುತ್ತಾ ಇರಬೇಕು; ಅವಕಾಶ ಸಿಕ್ಕೊಡನೆ ಬಂದುಬಿಡಬೇಕು."

ಗಾಯತ್ರಿಯ ಕೊನೆಯ ವಾಕ್ಯ ಆಕಾಂಕ್ಷಾಸೂಚಕವಾಗಿತ್ತು. ಜ್ಞಾನಶಂಕರರ ಹೃದಯದಲ್ಲಿ ಒಂದು ತರಹ ಆಯಿತು. ಈ ಮೂರು ವರುಷಗಳಲ್ಲಿ ಬನಾರಸಕ್ಕೆ ಎಷ್ಟೋ ಸಲ ಅವರು ಹೋಗಿದ್ದರು. ತಿರುಗಿ ಬರುವುದಕ್ಕಾಗಿ ಗಾಯತ್ರಿ ಎಂದೂ ಹೀಗೆ ಭಾವಪೂರ್ಣ ಆಗ್ರಹ ಮಾಡಿರಲಿಲ್ಲ. ತನ್ನ ಮಂತ್ರ ನಾಟುತ್ತಲಿದೆಯೋ ಎಂದಿತು ಮನಸು.

"ಎರಡು ವಾರಗಳಾದರೂ ಬೇಕಷ್ಟೆ?" ಎಂದರು ಜ್ಞಾನಶಂಕರರು.

"ಎರಡು ವಾರ?" ಗಾಯತ್ರಿಯ ಸ್ವರದಲ್ಲಿ ಚಿಂತೆ ವ್ಯಕ್ತವಾಗುತ್ತಿತ್ತು.

## ೨೩

ಬೇನೆ, ಬೆಳೆಗೇಡು, ಮೊಕದ್ದಮೆಗಳಿಂದ ಹೆಣವಾಗಿದ್ದ ಒಕ್ಕಲಿಗರಿಗೆ, ಪ್ರೇಮಶಂಕರರು ನೀಡಿದ ನೆರವಿನಿಂದ ಬಲಬಂದು ಅಪೀಲಿನಲ್ಲಿಯೂ ಗೆಲವೇನೋ ಆಯಿತು. ಆದರೆ ಆ ನೈತಿಕವಿಜಯ ಅವರ ಪಾಲಿಗೆ ಸೋಲಿನಷ್ಟೇ ದುಃಸಹವಾಯಿತು. ಜ್ಞಾನಶಂಕರರು ಅವರ ದುಃಸಾಹಸದ ಸೇಡು ತೀರಿಸಿಕೊಳ್ಳಲು ಅಣಿಯಾದರು. ಜನರು ಇನ್ನೂ ಗುಡಿಸಲುಗಳಲ್ಲಿಯೇ ಇದ್ದರು. ಗೌಸಖಾನ ಮತ್ತು ಶಿಪಾಯಿಗಳು ಸೇರಿ ಗುಡಿಸಲು

ಗಳಿಗೆ ಕೊಳ್ಳಿಯಿಡಿಸಿದರು. ತೋಟ ಜಮೀನುದಾರರದು; ಅಲ್ಲಿ ಗುಡಿಸಲು ಕಟ್ಟಿಕೊಳ್ಳುವ ಅಧಿಕಾರ ಅವರಿಗಿರಲಿಲ್ಲ. ಬೇಸಗೆಯ ಜಳ ಇನ್ನೂ ಇರುವಾಗಲೇ ಜನರು ಊರು ಸೇರಬೇಕಾಯಿತು. ಅದರ ಫಲವಾಗಿ ಠಾಕೂರ ಝಪಟಸಿಂಹ ಪ್ಲೇಗಿಗೆ ಬಲಿಯಾದ; ಕಲ್ಲೂ ಆಹೀರ ಸತ್ತುಸತ್ತು ಉಳಿದ. ಲಖನಪುರದಲ್ಲಿ ಒಂದು ದೊಡ್ಡ ಕೆರೆಯಿತ್ತು. ಜಳಕ, ಒಗೆಯುವುದು, ದನಕರು ನೀರುಕುಡಿಯುವುದು ಅಲ್ಲಿಯೇ. ಜೂನ್ ತಿಂಗಳಲ್ಲಿ ಎಲ್ಲ ಬಾವಿಗಳ ನೀರೂ ಪಾತಾಳಕಂಡವು; ಸುತ್ತುಮುತ್ತಲಿನ ಜಲಾಶಯಗಳೆಲ್ಲ ಒಣಗಿದವು. ಆ ದೊಡ್ಡ ಕೆರೆಯೊಂದರಲ್ಲಿಯೇ ನೀರಿದ್ದಿತು. ಗೌಸಖಾ ಅದರ ಬಳಕೆಯನ್ನು ಪ್ರತಿಬಂಧಿಸಿದ. ಸದಾ ಇಬ್ಬರು ಶಿಪಾಯಿಗಳು ಕೆರೆಯನ್ನು ಕಾಯುತ್ತಾ ನೀರಿಗೆ ಬರುವ ದನಕರುಗಳನ್ನು ಹೊಡೆದೋಡಿಸತೊಡಗಿದರು. ಕೂಡಲೇ ಊರ ಜನ ಕೆರೆಯ ದಂಡೆಯಮೇಲೆ ಸೇರಿದರು. ಶಿಪಾಯಿಗಳೊಡನೆ ಬಾಯಿಗೆ ಬಾಯಿ ಹತ್ತಿತು. ಮಾತು ವಿಕೋಪಕ್ಕೆ ಹೋಗುವುದೆಂದು ಕಂಡು ಕಾದಿರನು ಹಿಂದೆ ಸರಿಯುವುದು ಉಚಿತವೆಂದುಕೊಂಡು, ನಾಲ್ಕು ಹೆಜ್ಜೆ ಹಿಂದುವರಿದ.

"ಎಲ್ಲಿ ಹೋಗುತೀ ಕಾದಿರಣ್ಣಾ, ಇಲ್ಲೀದು ಒಂದು ದಡಕ್ಕೆ ಹಚ್ಚದೇ ಹೋಗೂಹಂಗಿಲ್ಲ." ಎಂದು ಸುಕ್ಖು ಕಾದಿರನನ್ನು ಕೈಹಿಡಿದು ತಡೆದ.

"ಅಂದರೇನು, ಬಡಿಗೀ ಚಲಾಯಿಸಬೇಕಂತೀಯೇನು?" ಕಾದಿರ ಕೇಳಿದ.

"ಮತ್ತ ಈ ಬಡಿಗಿ ಇರೋದು ಯಾವತ್ತಿನ ಸಲುವಾಗಿ?"

"ಯಾರ ಬಲದಿಂದ ಬಡಿದಾಡೋವ? ಊರಾಗಿನ ಹರೇದವರನೆಲ್ಲಾ ಅಲ್ಲಾ ಒಯ್ದುಬಿಟ್ಟ."

"ಹರೇದವರು ಇಲ್ಲದಿದ್ದರಿಲ್ಲ, ಮುದುಕರಂತೂ ಅದೇವಲ್ಲ. ಎಂದು ಆಗಬೇಕು ನಮ್ಮುಪಯೋಗ?"

ಊರ ಜನ ಕೆರೆಯ ಬಳಿ ಸೇರಿದ್ದಾರೆಂಬುದನ್ನು ಕೇಳಿ ಗೌಸಖಾ ಅಲ್ಲಿಗೆ ಓಡಿಬಂದ. "ಜ್ವಾಕಿ, ಕೆರೀ ಕಡೆ ಕಾಲು ಹಾಕಿಗೀಕೀರಿ." ಎಂದು ಗದ್ದರಿಸಿದ.

ಸುಕ್ಕ್ಯಾ ಮುಂದುವರಿದು ಗರ್ಜಿಸಿದ. "ಯಾವ ಆದಾನು ತಡೆಯೋ ಗಂಡಸು! ನಾವು ಅಜ್ಜಮುತ್ತಜ್ಜರ ಕಾಲದಿಂದ ಬಳಸಿಕೊಂತ ಬಂದೀವು. ಜಮೀನದಾರ ಯಾಕೆ, ಬರಮದೇವರು ಬಂದು ಹೇಳ್ಳಿ, ನಾವೇನು ಬಿಡೋರಲ್ಲ."

ಗೌಸಖಾ ವಿಸ್ಮಯದ ನೋಟದಿಂದ ಸುಕ್ಕ್ಯಾನನ್ನು ನೋಡಿ, "ಏನು ಚೌಧರಿ, ನೀವೂ ತಿರುಗಿಬಿದ್ದಿರೇನು ಈಗ? ಅರಿವು ಅಯ್ತೇನು?" ಎಂದ.

"ಯಾಕೆ, ಜಮೀನದಾರರ ದಸಿಂದ ನನ್ನ ಕೈಕಾಲು ಕಡಕೋ ಅಂತೀರೇನು?"

"ಅಂದರೆ ಫೌಜದಾರಿ ಮಾಡೋ ಇಚಾರ ಅಯ್ತೇನು?"

"ಫೌಜದಾರಿ ಯಾಕೆ ಮಾಡ್ತೇವು, ನ್ಯಾಯದ ರಾಜ್ಯ ಇಲ್ಲೇನು? ಇಲ್ಲದಿದ್ದರ ನೀವು ಬಯಸಿಧಂಗೆ ಆದೀತು." ಎಂದು ಹೇಳಿ ಸುಕ್ಕ್ಯಾ ಕೆರೆ ದಂಡೆಯಿಂದ ಹೊರಟುಬಂದ. ಮರುದಿನವೇ ನ್ಯಾಯಾಲಯದಲ್ಲಿ ದೂರಿಟ್ಟ.

ಕುಲಕರಣಿ ಮೌಜೀಲಾಲನ ಸಾಕ್ಷ್ಯವನ್ನು ಸೋಲು ಗೆಲವು ಅವಲಂಬಿಸಿತ್ತು. ಅದು ಊರವರಿಗೆ ಅನುಕೂಲವಾಯಿತು. ಗೌಸಖಾ ಅವನನ್ನು ಒಡೆದುಕೊಳ್ಳಲು ಎಲ್ಲ ಪ್ರಯತ್ನಗಳನೂ ಮಾಡಿದ ಹೊಡೆತ ಬಡಿತದ ಬೆದರಿಕೆಯನ್ನೂ ಹಾಕಿದ. ಸಫಲವಾಗಲಿಲ್ಲ. ಮೌಜೀಲಾಲನ ಇದ್ದ ಒಬ್ಬ ಮಗ ಪ್ಲೇಗಿನಲ್ಲಿ ಸತ್ತಿದ್ದ. ಇದು ತನ್ನ ಪೂರ್ವಸಂಚಿತ ಪಾಪದ ಫಲವೆಂದು ಬಗೆದಿದ್ದ ಅವನು ಸನ್ಮಾರ್ಗದಿಂದ ವಿಚಲಿತನಾಗಲಿಲ್ಲ. ಸುಕ್ಕ್ಯಾವಿನಂತೆ ತೀರ್ಪಾಯಿತು. ಅವನ ಎಷ್ಟೋ ನೂರು ರೂಪಾಯಿ ವೆಚ್ಚವಾದರೂ ಅವನು ಊರೊಳಗೆ ಕಳೆದುಕೊಂಡ ಪ್ರತಿಷ್ಠೆಯನ್ನು ಪಡೆದುಕೊಂಡ.

ಇದರಿಂದ ಗೌಸಖಾನನ ಕಣ್ಣಲ್ಲಿ ಸುಕ್ಕ್ಯಾ ಒತ್ತತೊಡಗಿದ. ಈ ಭಾಗದಿಂದ ದಯಾಶಂಕರರಿಗೆ ವರ್ಗವಾಗಿ ನೂರ್ ಆಲಮ ಎಂಬವರು ಬಂದರು. ಖಾನನು ಅವರೊಡನೆ ಸಂಬಂಧ ಬೆಳೆಸಿದ. ಅವರಲ್ಲಿ ಮಿತ್ರತ್ವ ಬೆಳೆದು ಲಖನಪುರದವರಮೇಲೆ ಹೊಸ ಹೊಸ ಕುತ್ತಗಳು ಬರಲಾರಂಭಿಸಿದವು.

ಮಳೆಗಾಲದಲ್ಲಿ ಒಕ್ಕಲಿಗರಿಗೆ ಜೋಳ ಸಜ್ಜೆಗಳನ್ನು ಕಾಯುವುದರಲ್ಲಿ ಅವಕಾಶವೇ ಇರಲಿಲ್ಲ. ಹಗಲಿರುಳೂ ಹಕ್ಕಿ ಹಿಂಡುಗಳ ದಾಳಿ. ಹಾಹೂ ಕೇಹು, ಡೊಳ್ಳುಡಬ್ಬಿಗಳ ಸಪ್ಪಳ ಯಾವಾಗಲೂ ತಪ್ಪುವಂತಿಲ್ಲ. ಇದರ

ಜೊತೆಗೆ ಮಡಿಗಳಲ್ಲಿ ಅಗಿಗಳನ್ನು ನೆಡಬೇಕು. ಪ್ರಹರ ರಾತ್ರಿಯಿರುವಾಗಲೇ ಹೋಗಬೇಕು, ಪ್ರಹರ ರಾತ್ರಿಯಾದ ಮೇಲೆ ಮರಳಬೇಕು. ಸೊಳ್ಳೆಗಳ ಕಡಿತದಿಂದ ಮೈಮೇಲೆ ಬೊಕ್ಕೆಗಳೇಳುತ್ತಿದ್ದವು. ಒಬ್ಬರ ಮನೆ ಬೀಳುತ್ತಿದ್ದರೆ ಒಬ್ಬರ ಹೊಲದೊಳಗಿನ ಒಡ್ಡು ಒಡೆಯುತ್ತಿತ್ತು. ಜೀವನ ಸಂಗ್ರಾಮದ ಈ ಕೋಲಾಹಲದ ಮಧ್ಯದಲ್ಲಿಯೇ ಫೌಜದಾರ ನೂರ ಆಲಮ ಬಂದು ಊರಿಗೆ ಮುತ್ತಿಗೆ ಹಾಕಿದರು. ಸುಕ್ಖು ಚೌಧರಿ ಎಂದೂ ಅಫು ಸೇವಿಸಿದವನಲ್ಲ; ಅದು ಎಂತಹದೆಂದು ನೋಡಿದವನಲ್ಲ, ಹೆಸರೂ ಕೇಳಿದವನಲ್ಲ. ಆದರೆ ಅವನ ಮನೆಯಲ್ಲಿ ಒಂದು ತೊಲೆ ಅಫೀಮು ಹೊರಟಿತು. ಸರಿ; ಮೊಕದ್ದಮೆ ನಡೆಯಿತು. ವಸ್ತು ಹೊರಟುದೇ ತಡ, ಅವನನ್ನು ಸೆರೆಯಲ್ಲಿಡಲಾಯಿತು. ತನಗೆ ಬಿಡುಗಡೆಯಿಲ್ಲವೆಂದು ಸುಕ್ಖು ತಿಳಿದ. ತಾನೂ ಹೀಗೆ ಎಷ್ಟೋ ಮಂದಿಗೆ ಶಿಕ್ಷೆ ಮಾಡಿಸಿದ್ದ. ಸೆರೆಮನೆಗೆ ಹೋಗುವ ಕ್ಷಣದ ಮುಂಚೆ ಮನೆಯೊಳಗೆ ಹೋಗಿ ಒಂದು ಗಡಿಗೆ ತೆಗೆದುಕೊಂಡು ಹೊರಗೆ ಬಂದ. ಊರ ಜನರೆಲ್ಲ ನೆರೆದಿದ್ದರು. ಅವರಿಗೆಂದ:

"ರಾಮ ರಾಮ ಎಲ್ಲರಿಗೂ. ಇನ್ನು ಭೆಟ್ಟಿ ಆಗುತದೋ ಇಲ್ಲೋ. ಮುದುಕನ ಜೀವದ್ದು ಏನು ನೆಚ್ಚಿಕೆ? ಇದರಾಗ ಆಯ್ದು ಸಾವಿರ ರೂಪಾಯಿ ಅನ. ಇದನ್ನು ಕಾದಿರಣ್ಣನಿಗೆ ಒಪ್ಪಿಸ್ತೇನಿ. ಕೆರೆಗೆ ಗಟ್ಟೆ ಕಟ್ಟಿಸಬೇಕು. ಯಾರು ಯಾರಿಂದ ಏನೋದದೆ, ಎಲ್ಲಾ ಬಿಟ್ಟುಬಿಟ್ಟೇನಿ" ಎಂದು ಹೇಳಿ ಚೌಧರಿ ಎಲ್ಲ ಕಾಗದಗಳನ್ನು ಹರಿದುಹಾಕಿದ.

ಹಣ ಕಂಡು ಫೌಜದಾರರ ಬಾಯಲ್ಲಿ ನೀರೂರಿತು ಸುಕ್ಖುವನ್ನು ಹತ್ತಿರ ಕರೆದು ಕಿವಿಯಲ್ಲಿ ಹೇಳಿದರು: "ಎಂಥ ಹುಚ್ಚರು ನೀವು! ಇಷ್ಟು ಹಣ ಇಟ್ಟುಕೊಂಡು ಉಳಿದುಕೊಳ್ಳಲು ಪ್ರಯತ್ನಿಸುವುದಿಲ್ಲವಲ್ಲ?"

"ಉಳಕೊಂಡು ಮಾಡೋದೇನು ಇನ್ನು? ಅಳೋರು ಯಾರಿದ್ದಾರ ನನಗೆ?" ಎಂದ ಸುಕ್ಖು.

ಎಲ್ಲರೂ ಒಬ್ಬೊಬ್ಬರಾಗಿ, ಮತ್ತೆ ಒಟ್ಟುಗೂಡಿ ಸುಕ್ಖುವಿಗೆ ತಿಳಿಹೇಳಿದರು. ಅವನು ಜಪ್ಪೆನ್ನಲಿಲ್ಲ. ಕೊನೆಗೆ ಜನರು ಕಾದಿರನನ್ನು ಮುತ್ತಿದರು. ಅವನೂ ಹೇಳಿದ. ಹೆಸರು ಕೆಡುವುದೆಂದರೂ ಸೆರೆಮನೆಯ ಕಷ್ಟಗಳನು

ಬಣ್ಣಿಸಿದರೂ ಸುಕ್ಕು ಸೊಪ್ಪು ಹಾಕಲಿಲ್ಲ. ಗೌಸಖಾನನ ಈರ್ಷೆಗೆ ಬಲಿಯಾಗಿ ನಿರ್ದೋಷಿ ಎರಡು ವರುಷಗಳ ಕಾರಾವಾಸದ ಶಿಕ್ಷೆಗೆ ಗುರಿಯಾದ.

ಇಡೀ ಊರಿಗೇ ನಡುಕ ಹುಟ್ಟಿತು. ಕಂದಾಯ ಹೆಚ್ಚಳದ ಬೇಡಿಕೆ ಬಿದ್ದು ಹೋದ ಬಳಿಕ ಭಗವಂತನು ಅಭಯದಾನ ಮಾಡಿದ, ತಾವು ನಿಶ್ಚಿಂತ ರಾದೆವು ಎಂದು ಜನರು ಬಗೆದಿದ್ದರು. ಅತ್ಯಾಚಾರದ ಈ ಹೊಸ ತಂತ್ರವನ್ನು ಕಂಡು ಅವರ ಪ್ರಾಣವೇ ಕಮರಿತು. ಗೌಸಖಾ ಸುಕ್ಕುವನ್ನು ಸೆರೆ ಮನೆಗೆ ಕಳಿಸಿ ತಣಿಯಲಿಲ್ಲ. ಇಡೀ ಊರೇ ತನ್ನ ದಾಸಾನುದಾಸ ಆಗಿರ ಬೇಕೆಂದು ಅವನ ಅಪೇಕ್ಷೆ. ಪರಂಪರೆಯ ಒಕ್ಕಲುಗಳಲ್ಲಿ ಇನ್ನೂ ಕೆಲವರು ಉಳಿದಿದ್ದರು. ಕಾದಿರನಿದ್ದ, ಬಲರಾಜ ಮನೋಹರರೂ ಕಣ್ಣೊಳಗೆ ಒತ್ತು ತ್ತಿದ್ದರು.

ಲಖನಪುರ ಪಟ್ಟಣದಿಂದ ಹತ್ತೇ ಮೈಲಿನೊಳಗಿತ್ತು. ಅಧಿಕಾರಿಗಳು ಹೋಗುತ್ತೊಮ್ಮೆ ಬರುತ್ತೊಮ್ಮೆ ಇಲ್ಲಿ ತಳ ಊರುವವರೇ. ಮಾರ್ಗಶೀರ್ಷ ಮಾಸದ ಆರಂಭದಲ್ಲೇ ದೊಡ್ಡ ಪೋಲೀಸ್ ಅಧಿಕಾರಿಯೊಬ್ಬರು ದಂಡಿ ನೊಡನೆ ಬಂದು ತಂಗಿದರು. ಸರಬರಾಯಿಯ ಏರ್ಪಾಟಿಕ್ಕೆಂದು ಸ್ವತಃ ತಹಸೀಲದಾರರು ಬಂದರು. ಅವರೊಂದಿಗೆ ಶಿಪಾಯಿಗಳ ತಂಡವೂ ಇತ್ತು. ದಂಡಿನಲ್ಲಿ ನೂರು ನೂರಿಪ್ಪತ್ತರಷ್ಟು ಮಂದಿಯಿತ್ತು. ತಮ್ಮ ಗತಿ ನೆಟ್ಟಗಿಲ್ಲ ವೆಂದು ಊರವರಿಗೆನಿಸಿತು. ಮನೋಹರ ಬಲರಾಜನನ್ನು ಮಾವನ ಮನೆಗೆ ಕಳಿಸಿ, ಇವನನ್ನು ಅನಕ ನಾಲ್ಕಾರು ದಿನ ಬಿಡಬಾರದೆಂದು ಅವರಿಗೆ ತಿಳಿ ಸಿದ. ಜನರು ತಮ್ಮ ಕಟ್ಟಿಗೆ ಹೊಟ್ಟು ಮೇವುಗಳನ್ನು ಮನೆಯೊಳಗೆ ಇಟ್ಟು ಕೊಳ್ಳಲು ತೊಡಗಿದರು.

ಮುಂಜಾನೆ ಬಿಸೇಸರ ಸಾಹನು ಅಂಗಡಿ ತೆರೆಯುತ್ತಿರುವಾಗಲೇ ಹತ್ತು ಹನ್ನೆರಡು ಜನ ಶಿಪಾಯಿಗಳು ಬಂದರು. ಬಿಸೇಸರ ಹಿಟ್ಟು ಬೇಳೆಗಳ ಚೀಲ ಉಚ್ಚಿಕೊಟ್ಟ. ವಸ್ತುಗಳನ್ನು ಅಳೆದು ತೂಗಿ ಕೊಡುವುದು ಎರಡು ಪ್ರಹರದ ವರೆಗೂ ಆಯಿತು. ತುಪ್ಪದ ಡಬ್ಬಿಗಳು ಬರಿದಾದವು ಬಿಸೇಸರನಿಗೆ ಹೌಹಾರಿಬಿಟ್ಟಿತು. ಅಂಗಡಿಯೆಲ್ಲಾ ಜಾಡಿಸಿದಂತಾಯಿತು. ಬಿಟ್ಟಿಯ ಪ್ರಶ್ನೆ ಇಷ್ಟು ಸಹಜವಾಗಿರಲಿಲ್ಲ. ಐದು ಬೆಟ್ಟದಂತಹ ಕುದುರೆಗಳಿಗೆ ಹಸಿರು ಹುಲ್ಲು ಒದಗಿಸುವುದು ಸಾಮಾನ್ಯವಲ್ಲ. ಊರಿನ ಸಮಗಾರರನ್ನೆಲ್ಲ ಹುಲ್ಲು ಕೀಳಲು

ಹೆಚ್ಚಿನರು. ಕೆಲವರು ಉಸ್ತಾರರು ನೀರು ತುಂಬುತ್ತಿದ್ದರು. ನಿತ್ಯವೂ ಸರಕಾರೀ ಟಪ್ಪಾಲನ್ನು ಒಯ್ಯುವುದಕ್ಕೆ ತರುವುದಕ್ಕೆ ಪಟ್ಟಣಕ್ಕೆ ಹೋಗಿ ಬರುವವರು ನಾಲ್ಕು ಜನ. ಅಧಿಕಾರಿವರ್ಗದ ಸೇವೆ ಮಾಡುವುದರಲ್ಲಿ ಬೋವಿಗಳಿಗೆ ತಲೆಯೆತ್ತಲೂ ಪುರಸತ್ತಿರಲಿಲ್ಲ. ಎರಡು ಗಂಟೆಗೆ ಸಾಹೇಬರ ಮತ್ತೊಂದು ಅಪ್ಪಣೆ ಹೊರಟಿತು—ಬಯಲಿನಲ್ಲಿಯ ಹುಲ್ಲು ತೆಗೆದು ಟೆನಿಸ್ ಕೋರ್ಟು ತಯಾರಿಸಬೇಕು. ಸರಿ. ಮುಂದುಕರೆಂದೋ ಜಾತಿ ಗೌರವವೆಂದೋ ಉಳಿದುಕೊಂಡಿದ್ದ ಕೆಲ ಜನರಿಗೂ ದಾಳಿ ಬಂದಿತು. ಶಿಪಾಯಿಗಳು ದುಖರನ ಭಗತನನ್ನು ಹಿಡಿದರು ಮೊದಲು.

" ಯಾಕ, ನಂದೇನಯ್ತಿ ಕೆಲಸ ? " ಎಂದ ದುಖರನ.

" ನಡೀ ದಂಡಿನಾಗ ಹುಲ್ಲು ಕೀಳೂದಯ್ತಿ. ''

'' ಹುಲ್ಲು ಸಮಗಾರು ಕೀಳ್ತಾರು, ನಮ್ಮ ಕೆಲಸಲ್ಲ. "

ಒಬ್ಬ ಶಿಪಾಯಿ ದುಖರನನ ಕತ್ತು ಹಿಡಿದು ತಳ್ಳಿ, " ನಡೀತೀಯೋ ಸುಮಾಕ, ಇಲ್ಲೀ ಕಾಯದೇ ಕೊಚ್ಚತೀಯೋ ? " ಎಂದ.

ಹಾಕಿಯಾಟ ತರವಲ್ಲವೆಂದುಕೊಂಡು ದುಖರನ ಮನೆಯೊಳಗೆ ಹೊಕ್ಕುಕೊಂಡು ಕದ ಮುಚ್ಚಿಕೊಂಡ. ಶಿಪಾಯಿಗಳು ಧಡ ಧಡ ಬಾಗಿಲು ಬಡಿಯತೊಡಗಿದರು. ಚೌಕಟ್ಟನ್ನೇ ಕಿತ್ತಲುದ್ಯುಕ್ತರಾದರು. ಅಷ್ಟರಲ್ಲಿ ಮತ್ತೆ ಕೆಲ ಶಿಪಾಯಿಗಳು ಕಾದಿರ, ಮನೋಹರ ಮೊದಲಾದವರನ್ನು ಹಿಡತಂದರು. ಡಪಟಸಿಂಹ ಪ್ರಹರ ರಾತ್ರಿ ಇದ್ದಾಗಲೇ ಮನೆಯಿಂದ ಅದೃಶ್ಯನಾಗಿದ್ದ.

'' ಭಗತ, ಮನ್ಯಾಗ ಯಾಕ ಹೊಕ್ಕೊಂಡು ಕುಂತಿ ನಡೀ. ನಾವೂ ಹೊಂಟೇವು. '' ಕಾದಿರ ಕರೆದ. ದುಖರನ ಬಾಗಿಲು ತೆರೆದು ಹೊರಕ್ಕೆ ಬರಲು ಕಾದಿರ ನಗುತ್ತ, '' ಇವತ್ತು ನಮ್ಮ ಜಿದ್ದಯ್ತಿ: ನೋಡೂಣ, ಯಾರು ಹೆಚ್ಚು ಹುಲ್ಲು ಕೀಳತಾರೋ. '' ಎಂದ.

" ಈ ಪರಸಂಗದಾಗ ನನಗ ನಗಚಾಟಿಗಿ ಅನಸೂದಿಲ್ಲ. ಇಲ್ಲೇ ತಲೀ ಒಡಕೊಂಡು ಸಾಯಲ್ಯಾ ಅನಸ್ತಯ್ತಿ '' ಎಂದ ದುಖರನ

" ಈಗ ನಂ ಬಲರಾಜ ಇದ್ದಿದ್ದರ ನೆತ್ತರಾನೇ ಹರೀತಿತ್ತೋ ಏನೊ. '' ಎಂದ ಮನೋಹರ.

" ಎಲಾ, ನಾವು ಮರ್ಯಾದಿಯಿಂದ ಬದುಕಬೇಕಂತ ಅಲ್ಲಾನ ಇಚ್ಛಾ ಇದ್ದರೆ ಒಕ್ಕಲಿಗೇರನ ಮಾಡಿ ಯಾಕ ಹುಟ್ಟಿಸ್ತಿದ್ದ ? ಕೂತುಕೊಂಡು ಎರಡನೇಯವರ ಮ್ಯಾಗ ಹುಕುಮು ನಡಸೋ ಪೋಲೀಸರನ್ನ, ಶಿಪಾಯಿ ಗಳನ್ನ, ಜಮೀನದಾರರನ್ನು ಮಾಡತಿದ್ದಿಲ್ಲೇನು ? ನಮ್ಮದು ನಾವು ಗಳಸ್ತೇವಿ, ನಮ್ಮದು ನಾವು ಉಣತೇವಿ, ಆದರೂ ಕಂಡಕಂಡವರು ಗದರಸೋರೇ. ಎಲ್ಲಾರಿಗೂ ಜೀತದಾಳಾಗಿರಬೇಕು. ನಮ್ಮದಸಿಂದ ಅಲ್ಲಾಗೂ ಉಪಾಯ ಇಲ್ಲದ್ಹಾಂಗ ಆಗಿದ್ದೀತು. ಇಲ್ಲದಿದ್ದರೆ ನಾವೇನು ಮನಸ್ಯಾರು ಅಲ್ಲೇನು ? ಯಾರೇನು ನಮ್ಮಕಿಂತ ದೊಡ್ಡ ಶಾಣೇರೇನು ? ಆದರೆ ಅತ್ತರೆ ಕೇಳೋರು ಯಾರು ? ಅಲ್ಲಾನೇ ಕಣ್ಣು ಮುಚ್ಚ್ಯಾನ. ಯಾರಾದರೂ ದೊಡ್ಡ ಮನಸಿನೋರು ನಮ್ಮಗೋಳು ಕಂಡು ಬೆನ್ನುಕಟ್ಟಿದರೆ ಅವರಿಗೂ ಬಂತೇ ಗೋಳು. '' ಎಂದು ಹೇಳುತ್ತಿದ್ದಂತೆ ಕಾದಿರನ ಕಣ್ಣಲ್ಲಿ ನೀರು ಬಂದಿತು. ಅದನ್ನು ಕಂಡ ಮನೋಹರನ ಕಣ್ಣುಗಳು ಕೆಂಪಾದವು. ನಾಲ್ವರಲ್ಲಿ ಒಬ್ಬನೂ ಮಾತನಾಡಲಿಲ್ಲ.

ಎಲ್ಲರೂ ತಲೆ ತಗ್ಗಿಸಿಕೊಂಡು ಹುಲ್ಲು ಕಿತ್ತಿದರು. ಮೂರು ಗಂಟೆಗೆ ಬಯಲು ಸ್ವಚ್ಛವಾಯಿತು. ಕುರ್ಚಿಗೆಯನ್ನು ಕೆಳಗಿಟ್ಟು ಟೊಂಕ ಸಮ ಮಾಡಿಕೊಳ್ಳಲು ಕೊಂಚ ಆಡ್ಡಾದರು. ಇನ್ನು ಪಾರಾದೆವೆಂದು ಅವರು ತಿಳಿದಿದ್ದರು ಪಾಪ. ಅಷ್ಟರಲ್ಲಿ ತಹಸೀಲದಾರ ಬಂದು,

" ಸಗಣಿ ತಂದು ಸಾರಿಸಿರಿ. ಒಳ್ಳೇ ಸಾಪಾಗಬೇಕು; ಹಳ್ಳು ಕಡ್ಡಿ ಒಂದೂ ಇರಬಾರದು. '' ಎಂದು ಅಪ್ಪಣೆ ವಿಧಿಸಿದ

ನಾಜರನು ಬಕೆಟ್ಟು ಹಗ್ಗ ತರಿಸಿಕೊಟ್ಟ. ಕಾದಿರ ಬಕೆಟ್ಟು ತೆಗೆದು ಕೊಂಡು ಬಾವಿಗೆ ಹೊರಟ. ದುಖರನ ಭಗತನು ಮಾತ್ರ ಮನೆಯ ಹಾದಿ ಹಿಡಿದ.

" ಅತ್ತಲಾಗೆಲ್ಲಿ ? '' ತಹಸೀಲದಾರ ಕೇಳಿದ.

" ಮನೆಗೆ. " ಅವನು ಉದ್ದಂಡತನದಿಂದ ಉತ್ತರವಿತ್ತ.

" ಸಾರಿಸುವವರು ಯಾರು ? "

" ಯಾರಿಗೆ ಬೇಕಾಗೇತಿ ಅವರು. "

"ಇವನ ಪ್ರಕೃತಿ ಚೆನ್ನಾಗಿಲ್ಲ. ಯಾರಿದ್ದೀರಿ, ಹಾಕಿರಿ ನಾಲ್ಕು ಮಚ್ಛೀ ಏಟು–ಜ್ವರಾ ಇಳಿಯುತ್ತವೆ."

ತಹಸೀಲದಾರನ ಬಾಯಿಂದ ಮಾತು ಹೊರಟುದೇ ತಡ, ಒಬ್ಬ ಶಿಪಾಯಿ ಹೋದವನೇ ಭಗತನನ್ನು ಬಲವಾಗಿ ತಳ್ಳಿದ ಅವನು ಬಿದ್ದುಬಿಟ್ಟ. ಮೇಲೆ ಕಾಲ್ಮರೆಯ ಹೊಡೆತಗಳು ಬೀಳತೊಡಗಿದವು—ಪ್ರಜ್ಞೆ ತಪ್ಪುವವರೆಗೆ. ಅವನ ಮುಖದಲ್ಲಿ ಕ್ರೋಧದ ಅಥವಾ ಗ್ಲಾನಿಯ ಚಿಹ್ನವೂ ಇರಲಿಲ್ಲ. ಹಾಯ್ ಎಂಬ ಶಬ್ದ ಕೂಡ ಹೊರಡಲಿಲ್ಲ ಬಾಯಿಂದ. ದೀನತೆ ಸಕಲ ಚೈತನ್ಯಶಕ್ತಿಯನ್ನು ನಾಶಗೊಳಿಸಿತ್ತು.

ಕಾದಿರ ಬಾವಿಯಿಂದ ಓಡಿಬಂದು ನಿರ್ದಯನಾದ ಆ ಶಿಪಾಯಿಯ ಮುಂದೆ ತಲೆತಗ್ಗಿಸಿ ನಿಂತು,

"ಸೇಖಜೀ, ಇವನ ಬದಲು ನನ್ನನ್ನು ಬೇಕಾದಷ್ಟು ಹೊಡೀರಿ.—ಇಷ್ಟು ಸಾಕು." ಎಂದ.

ಶಿಪಾಯಿ ಕಾದಿರನನ್ನು ಕಸುವಿನಿಂದ ನೂಕಿ, ಮತ್ತೆ ಕೆರ ಎತ್ತಿದ. ಅಷ್ಟರಲ್ಲಿ ಒಂದು ಎಕ್ಕ ರಸ್ತೆಯಲ್ಲಿ ಬಂದುದು ಕಂಡಿತು. ಪ್ರೇಮಶಂಕರರು ಡಪಟಸಿಂಹ ಅದರಲ್ಲಿದ್ದರು. ಪ್ರೇಮಶಂಕರರು ಎಕ್ಕದಿಂದ ಹಾರಿ ಧಾವಿಸಿ ಬಂದು,

"ಜೋಕೆ, ಮತ್ತೆ ಕೈಮಾಡಿದೆಂದರೆ!" ಎಂದರು.

ಕಲ್ಲೂ, ಮನೋಹರ ಎಲ್ಲರೂ ಹಗ್ಗ ಬಕೆಟ್ಟುಗಳನ್ನು ಬಿಸುಟು ಬಂದು ಅವರಿಗೆ ನಮಸ್ಕಾರಮಾಡಿ ನಿಂತುಕೊಂಡರು. ಹುಲ್ಲು ತಂದೊಗೆದು ಹಣಕ್ಕಾಗಿ ಕಾಯ್ದಿದ್ದ ಚಮ್ಮಾರರೂ ಅಲ್ಲಿಗೆ ಬಂದರು.

"ಯಾರು ನೀವು? ಸರಕಾರೀ ಕೆಲಸದಲ್ಲಿ ಅಡ್ಡಿ ಮಾಡಲು ನಿಮಗೇನು ಅಧಿಕಾರ?" ತಹಸೀಲದಾರ ಕಠೋರ ಸ್ವರದಲ್ಲಿ ಕೇಳಿದ.

"ಬಡವರನ್ನು ಕಾಲ್ಮರೆಯಿಂದ ಹೊಡೆಸುವುದೂ ಸರಕಾರೀ ಕೆಲಸವೆಂಬುದು ನನಗೆ ಗೊತ್ತಿರಲಿಲ್ಲ" ಎಂದರು ಪ್ರೇಮಶಂಕರರು.

ತಹಸೀಲದಾರನಿಗೆ ಸಿಟ್ಟು ತಲೆಗೇರಿತು. "ನೀವು ಇಲ್ಲಿಂದ ಹೊರಟು ಹೋಗಿರಿ. ಇಲ್ಲದಿದ್ದರೆ ಪರಿಣಾಮ ನೆಟ್ಟಗಾಗಲಿಕ್ಕಿಲ್ಲ. ನಾಜಿರಜೀ, ಏಕೆ ಮೋರೆ ನೋಡುತ್ತಿರುವಿರಿ? ಚಮ್ಮಾರರ ಸಮಾಚಾರ ಚೆನ್ನಾಗಿ ತೆಗೆದು

ಕೊಳ್ಳಲು ಶಿಪಾಯಿಗಳಿಗೆ ಹೇಳಿರಿ. ಅದೇ ಅವರಿಗೆ ಕೂಲಿ!" ಎಂದು ನುಡಿದ

ಶಿಪಾಯಿಗಳು ಬಿಟ್ಟಿಯಾಳುಗಳನ್ನು ಮುತ್ತಿದರು. ಪೋಲೀಸರು ತುಬಾಕಿಯ ಹಿಡಿಯಿಂದ ಲತ್ತಾಪ್ರಯೋಗ ನಡೆಸಿದರು. ಕೆಲವರಿಗೆ ಗಾಯ ಗಳಾದವು.

"ತಹಸೀಲದಾರಸಾಹೇಬರೇ, ಈ ಹೊಡೆಯುವುದನ್ನು ತಡೆಯ ಬೇಕೆಂದು ನನ್ನ ವಿನಂತಿ. ಇಲ್ಲದಿದ್ದರೆ ಈ ಬಡವರು ವ್ಯರ್ಥವಾಗಿ ಸಾಯು ತ್ತಾರೆ." ಪ್ರೇಮಶಂಕರರು ಗಟ್ಟಿಯಾಗಿ ನುಡಿದರು.

"ನಿಮ್ಮ ಪ್ರಚೋದನೆಯಿಂದಲೇ ಈ ದುಷ್ಟರು ಉಪಟಳ ನಡೆಸಿ ದ್ದಾರೆ. ಇದಕ್ಕೆ ಹೊಣೆಗಾರರು ನೀವೇ. ನಾನು ಬಲ್ಲೆ. ನೀವು ಯಾವುದೋ ರೈತ ಸಭೆಗೆ ಸೇರಿದವರಿರಬೇಕು." ತಹಶೀಲದಾರನೆಂದ.

ಊರ ಜನರ ಮೋರೆ ರೋಷದಿಂದ ವಿಕೃತವಾಗುತ್ತಲಿದ್ದವು. ಯಾರು ಯಾವಾಗ ಕೈಮಾಡುವರೋ ಎಂದು ಭಯವಾಗುತ್ತಿತ್ತು. ತಹಶೀಲದಾರ ನಿಂದಾಗಲಿ ಉಳಿದ ನೌಕರರಿಂದಾಗಲಿ ಮಾನವತೆಯನ್ನು, ದಯಾಳುತನ ವನ್ನು ಆಶಿಸುವಹಾಗಿರಲಿಲ್ಲ, ಕೂಡಲೆ ಕರ್ತವ್ಯವನ್ನು ನಿರ್ಧರಿಸಿಕೊಂಡು ಜನರ ಕಡೆ ಹೊರಳಿ ಪ್ರೇಮಶಂಕರರೆಂದರು: "ತಹಸೀಲದಾರಸಾಹೇಬರ ಅಪ್ಪಣೆ ನಡೆಸಿರಿ. ಒಬ್ಬರೂ ಇಲ್ಲಿಂದ ಹೋಗಬೇಡಿರಿ. ಎಲ್ಲರಿಗೂ ಕೂಲಿ ಕೊಡುತ್ತದೆ; ಚಿಂತೆ ಮಾಡಬೇಡಿರಿ."

ಎಲ್ಲರೂ ಚಕಿತರಾಗಿ ಪ್ರೇಮಶಂಕರರ ಕಡೆ ನೋಡಿದರು. ಸರಕಾರೀ ಸೇವಕರಿಗೂ ವಿಸ್ಮಯವಾಯಿತು. ಮನೋಹರ, ಕಲ್ಲೂ ಬಾವಿಗೆ ತೆರಳಿದರು; ಸಮಗಾರರು ಸಗಣಿ ಕೂಡಿಸತೊಡಗಿದರು; ಡಪಟಸಿಂಹ ಕೂಡ ಬಯಲ ಲ್ಲಿಯ ಕಲ್ಲುಗಳನ್ನು ತೆಗೆದೊಗೆಯಲಾರಂಭಿಸಿದ. ಅಲ್ಪ ಸಮಯದಲ್ಲಿಯೇ ಬಯಲು ಸಾರಿಸಿ ಉಡುಗಿ ಸಿದ್ಧವಾಯಿತು. ಮನೆಗೆ ಬೀಗರು ಬಂದಾಗಿ ನಂತೆ ಎಲ್ಲರೂ ಹುರುಪಿನಿಂದ ಕೆಲಸಮಾಡಿದರು.

ಸಂಜೆಯಾದರೂ ಪ್ರೇಮಶಂಕರರು ಚಿಂತಿಸುತ್ತ ಕುಳಿತೇ ಇದ್ದರು. ಬಡವರ ಮೇಲೆ ಆಗುವ ಅನ್ಯಾಯವಾದರೂ ಎಷ್ಟು? ಅವರನ್ನು ಮನುಷ್ಯ ರೆಂದು ಎಣಿಸುವುದು ಯಾವಾಗ? ನಮ್ಮ ಸುಶಿಕ್ಷಿತರು ತಮ್ಮ ಈ ದೀನ

ಬಾಂಧವರನ್ನು ಗೌರವದಿಂದ ಕಾಣಲು ಕಲಿಯುವುದು ಎಂದು ? ಸ್ವಾರ್ಥ ಕ್ಕಾಗಿ ಮೇಲಧಿಕಾರಿಗಳ ನೀಚ ಆರಾಧನೆ ಬಿಡುವುದು ಯಾವಾಗ ?— ಅಲ್ಲಿಂದ ಎದ್ದು ಹೊರಟಾಗ ಎಂಟು ಹೊಡೆದುಹೋಗಿತ್ತು. ದುಖರನ ಭಗತನ ಮನೆಯ ಮುಂದಿನಿಂದ ಸಾಗಿದ್ದರು. ಅಲ್ಲಿ ವಿಚಿತ್ರ ದೃಶ್ಯವನ್ನು ಕಂಡರು. ಬಹುಜನರು ನೆರೆದಿದ್ದರು. ಭಗತ ಮಧ್ಯವಲ್ಲಿ ಕೈಯೊಳಗೆ ಶಾಲಿಗ್ರಾಮವನ್ನು ಹಿಡಿದು ನಿಂತು ಉನ್ಮತ್ತನಂತೆ ಮಾತನಾಡುತ್ತಿದ್ದ—

" ಇದೊಂದು ಕಲ್ಲುಹುಳು. ಇದರ ಪೂಜಾ ಮಾಡಿದರೆ ಈ ಲೋಕ ಆ ಲೋಕ ಎರಡೂ ಸಾಧಿಸುತ್ತವೆ ಅಂತ ಮೂರ್ಖರ ಹಂಗ ತಿಳಿದಿದ್ದೆ. ಇದು ಬರೀ ಕಲ್ಲು ಅಂತ ಈಗ ತಿಳೀತು ನಾಲ್ವತ್ತು ವರುಷದ ಬಗತಿಗೆ ನೀ ಏನು ಫಲ ಕೊಟ್ಟೆ ? ಅದನ್ನೇ ಕೊಡುತೇನಿ ನಿನಗೂ ನಾನು. "

ದುಖರನ ಶಾಲಿಗ್ರಾಮ ಮೂರ್ತಿಯನ್ನು ಬಿರ್ರನೆ ಬೀಸಾಡಿದ. ಅದು ಎಲ್ಲಿ ಹೋಗಿ ಬಿತ್ತೋ. ಆವನು ಒಳಗೆ ಹೋಗಿ ಪೂಜೆಯ ಪಾತ್ರೆಯನ್ನು ತಂದ. ಅದನ್ನು ಕಸಿದುಕೊಳ್ಳಲು ಮನೋಹರ ಧಾವಿಸಿದ. ದುಖರನ ಅವನು ಬರುವುದರೊಳಗೇ ಪೆಟ್ಟಿಗೆ ತೆರೆದು ಬುಡಮೇಲು ಮಾಡಿದ. ಸಾಮಗ್ರಿಗಳೆಲ್ಲ ಸಬ್ಬನೆಸೂರೆಯಾದವು. ಇದುವರೆಗೆ ಕಟ್ಟಿದ್ದ ಧರ್ಮನಿಷ್ಠೆ, ಆತ್ಮಿಕಶ್ರದ್ಧೆಗಳ ಕಟ್ಟಡ ಕುಸಿದು ಇಟ್ಟಿಗೆಗಳು ಸುತ್ತಲೂ ಹರಡಿಬಿದ್ದವು. ಎಂತಹ ಹೃದಯ ವಿದಾರಕ ದೃಶ್ಯ !

ಪ್ರೇಮಶಂಕರರು ಎಲ್ಲರ ಹಿಂದೆ ನಿಂತಿದ್ದರು ಅವರ ಹೃದಯ ಗದ್ಗದವಾಯಿತು. ಅವರನ್ನು ಯಾರೂ ಕಂಡಿರಲಿಲ್ಲ. ಅವರು ಸುಮ್ಮನೆ ಚಾವಡಿಗೆ ಹೊರಟುಹೋದರು. ಮಂಚ ಹಾಸಿ ಸಿದ್ಧವಾಗಿತ್ತು. ಡಪಟ ಸಿಂಹ ಆಹಾರ ಅಣಿಗೊಳಿಸುತ್ತಿದ್ದ, ಕಲ್ಲೂ ನೀರು ತುಂಬುತ್ತಿದ್ದ. ಮನೋಹರ ಹಾಲು ತಂದ, ಕಲ್ಲೂ ಮೊಸರು ತಂದ. ಎಲ್ಲರೂ ಪ್ರೇಮಶಂಕರರ ಸೇವಾಸತ್ಕಾರದಲ್ಲಿ ಮಗ್ನರಾಗಿದ್ದರು. ಅಂದಿನ ವೃತ್ತಾಂತವನ್ನೆಲ್ಲ ಅವರು ಅರುಹಿದರು. ಪ್ರೇಮಶಂಕರರು ಉಂಡುಬಂದು ಅಡ್ಡಾದಾಗ ಅವರ ಮನ ರಂಜನೆಗಾಗಿ ರಾಮಾಯಣ ಲಾವಣಿ ಹಾಡಬೇಕೆಂದು ಗೊತ್ತುಮಾಡಿದರು. ಡೊಳ್ಳು ತಾಳಗಳು ಬಂದವು. ಕಾದಿರನು ಡೊಳ್ಳು ಬಾರಿಸತೊಡಗಿದ. ಪ್ರೇಮಶಂಕರರಿಗೆ ಹಿಂದೀ ಭಾಷೆಯ ರೂಢಿಯಿರಲಿಲ್ಲ. ಎಲ್ಲಿಯೋ ಒಂದೊಂದು

ಚೌಪದಿ ತಿಳಿದಂತೆ ಆಗುತ್ತಿತ್ತು. ಆದರೂ ಹಳ್ಳಿಗರ ನಿರ್ಮಲ ಧರ್ಮಾನು ರಾಗದ ಆನಂದವನ್ನು ಅವರು ಸವಿಯುತ್ತಲಿದ್ದರು. ಎಂತಹ ನಿಷ್ಕಪಟ ಸರಲ ಹೃದಯದ ಸಾಧುಗಳು ಈ ಜನ. ಇಷ್ಟು ಕಷ್ಟಬಡುತ್ತಾರೆ, ಇಷ್ಟು ಅಪಮಾನ ಸೈರಿಸುತ್ತಾರೆ, ಆದರೂ ಮನೋಮಾಲಿನ್ಯವೆಳ್ಳಷ್ಟೂ ಇಲ್ಲ. ಎಲ್ಲರೂ ಆಮೋದದಲ್ಲಿ ಮೈಮರೆತಿದ್ದಾರೆ.

"ಕಾದಿರಕಕ್ಕ, ನಿಂದೊಂದು ಏನಾರೆ ಆಗಲಿ'' ರಾಮಾಯಣ ಮುಗಿದ ಬಳಿಕ ಕಲ್ಲೂ ಎಂದ.

"ಅಲ್ಲಪಾ, ಈಗ ಹಾಡಾಕ ಹತ್ತೀದೀರಿ, ಈಗಲೇ ಸಾಕಾತೇನು ?" ಕಾದಿರ ಬಾರಿಸುತ್ತಲೆ ನುಡಿದ.

"ಇಲ್ಲಪಾ, ಇನ್ನು ನಿನ್ನದೊಂದು ಚೆಲೋ ಚೀಜು ಹೇಳು. ಬಾಳ ದಿನಾ ಆತು, ಇನ್ನ ಮತ್ತೆಂದ ಕೂಡುತೇವೋ. ಸರಕಾರ, ಇಂತಾ ಗಾಯಕ ಇಲ್ಲೆ ಸುತ್ತುಮುತ್ತ ಎಲ್ಲೂ ಇಲ್ಲ." ಎಂದ ಕಲ್ಲೂ.

"ನನ್ನ ಹಳ್ಳೀ ಕಗ್ಗ ಹಾಡು ಸರಕಾರಕ ಏನು ಸವಿ ಅನಿಸೀತು ?'' ಕಾದಿರನೆಂದ

"ಇಲ್ಲಿಲ್ಲ, ನಾ ನಿನ್ನ ಹಾಡು ಸಂತೋಷದಿಂದ ಕೇಳುತ್ತೇನೆ.'' ಪ್ರೇಮಶಂಕರರು ಪ್ರೋತ್ಸಾಹಿಸಿದರು.

"ಎಂತಾ ಹಾಡೋದು ಸರಕಾರ, ಅತ್ತಂಗ. ಹೆಂಗ ಮೀರೋದು ನಿಮ್ಮಾತು ?'' ಎಂದು ಕಾದಿರ ಘೋಲಿಗೆ ಸ್ವರ ಕೂಡಿಸಿ ಒಂದು ಭಜನೆ ಹೇಳಿದ. ಅವನ ಕಂಠದಲ್ಲಿ ನಯವಾಗಲಿ ಮಾಧುರ್ಯವಾಗಲಿ ಇರಲಿಲ್ಲ ವಾದರೂ ತಾಳ ಮತ್ತು ಸ್ವರ ಸರಿಯಾಗಿದ್ದವು. ಪ್ರತಿ ಶಬ್ದವೂ ಭಕ್ತಿ ಮತ್ತು ಉದ್ಗಾರಗಳಲ್ಲಿ ಅದ್ದಿ ಅದ್ದಿ ತೆಗೆದಂತಿತ್ತು. ವ್ಯವಸಾಯೀ ಗಾಯ ಕರ ಶುಷ್ಕತೆಯ ಎಡೆಯಲ್ಲಿ ಅನುರಾಗಮಯ ಭಾವರಸ ತುಂಬಿತ್ತು. ಆ ಕೀರ್ತನೆ ಕೇಳಿ ಪ್ರೇಮಶಂಕರರ ಚಿತ್ತ ಪ್ರಸನ್ನವಾಯಿತು.

ಆಮೇಲೆ ಒಂದು ಅಭಿನಯದ ಕಾರ್ಯಕ್ರಮ. ಕಲ್ಲೂ ಈ ಕಲೆಯಲ್ಲಿ ಹಿರಿದು ಜಾಣ. ಕಾದಿರ ರಾಜನಾದ; ಕಲ್ಲೂ ಮಂತ್ರಿ; ಬಿಸೇಸರ ಸಾಹ ಸೆಟ್ಟಿ; ಅರಸುಮಗ ಯಾರಾಗುವುದೆಂದು ಯೋಚಿಸತೊಡಗಿದರು. "ನಿಮ್ಮ ಅಡ್ಡಿಯಿಲ್ಲದಿದ್ದರೆ ನನಗೆ ಕೊಡಿರಿ, ರಾಜಕುಮಾರನ ಪಾತ್ರ'' ಎಂದು

ನಗುತ್ತ ಪ್ರೇಮಶಂಕರರು ಹೇಳಿದರು. ಎಲ್ಲರೂ ಉಬ್ಬಿದರು. ನಾಟಕ ಆರಂಭವಾಯಿತು. ಹಳ್ಳಿಗರ ಅಭಿನಯ ಕೌಶಲವನ್ನು ಕಂಡು ಪ್ರೇಮ ಶಂಕರರಿಗೆ ಅಚ್ಚರಿಯಾಯಿತು. ಯಾವ ಸಾಧನ ಸಾಮಗ್ರಿಗಳಿಲ್ಲ, ಒಂದು ತೆರೆಯೂ ಇಲ್ಲ. ಆದರೂ ಅಭಿನಯ ಒಳ್ಳೇ ಸೊಗಸಾಗಿತ್ತು, ತುಂಬ ಮನೋರಂಜಕವಾಗಿತ್ತು.

ಬೆಳಗಿನಲ್ಲಿ ಪ್ರೇಮಶಂಕರರು ತಿರುಗಾಡುತ್ತ ಬಿಡಾರದ ಕಡೆ ಹೋದಾಗ ದಂಡು ಪ್ರಯಾಣದ ಸಿದ್ಧತೆಯಲ್ಲಿತ್ತು. ಗೂಡಾರ ಕೀಳುತ್ತಲಿದ್ದರು. ಬಂಡಿಗಳ ಮೇಲೆ ಸಾಮಾನು ಹೇರುತ್ತಿದ್ದರು. ಸಾಹೇಬರ ಕಾರು ಅಣಿ ಯಾಗಿ ನಿಂತಿತ್ತು. ಬಿಸೇಸರ ಕಾಗದದ ಕಟ್ಟೊಂದನ್ನು ಹಿಡಿದುಕೊಂಡು ನಿಂತಿದ್ದ ತಹಸೀಲದಾರನ ಮುಂದೆ. ಗಾಣಿಗ, ಎಲೆಗಾರ, ಕಟಕ ಮೊದಲಾ ದವರೂ ತಮ್ಮ ಬರತಕ್ಕ ಹಣಕ್ಕಾಗಿ ಒಂದು ಮರದಡಿಯಲ್ಲಿ ಆರೋಪಿಗಳಂತೆ ಕುಳಿತಿದ್ದರು. ತುಸ ಕಡಿಮೆ ಅರ್ಧವಷ್ಟು ಜನ ತಮ್ಮ ಲೆಕ್ಕವನ್ನು ಪಡೆ ಯದೆಯೆ ತಿರುಗಿಹೋದರು. ಕಾಲುಪಾಲಿಗಿಂತ ಹೆಚ್ಚು ಜನ ಪಲಾಯನ ಮಾಡಿದ್ದರು. ಉಳಿದ ಸ್ವಲ್ಪ ಮಂದಿಯಿತ್ತು. ಅವರಿಗೂ ಹಣ ಸಿಕ್ಕುವ ಬಗ್ಗೆ ಸಂದೇಹವೇ ಇತ್ತು. ಎಲ್ಲೋ ನಾಲ್ಕಾರು ಸಜ್ಜನರಿಗೆ ಹಣ ಸಂದಿತ್ತು.

ಕಾಗದವನ್ನು ತಹಸೀಲದಾರನ ಎದುರು ಬಡಿದು, "ಬೇರೆ ಯಾರೂ ನನಗೆ ಗೊತ್ತಿಲ್ಲ. ಹುಜೂರರದು ಮಾತ್ರ ಗೊತ್ತು. ಹುಜೂರರ ಹೇಳಿಕೆ ಯಂತೆ ನಾ ಸಾಮಾನು ಕೊಟ್ಟದ್ದು." ಎಂದ ಬಿಸೇಸರ ಸಾಹ

"ನಾನೇನು ನನ್ನ ಜೇಬಿನಿಂದ ಕೊಡಲಿ ?"

"ಹುಜೂರರ ಇಚ್ಛಾ—ಕೊಡಿರಿ ಇಲ್ಲ ಕೊಡಿಸಿರಿ. ಎರಡು ನೂರ ರಾಗ ಈ ಎಪ್ಪತ್ತು ಬಂದಯ್ತಿ. ನಾ ಸಣ್ಣ ಅಂಗಡಿಯವ. ಇಂತಾ ಪೆಟ್ಟು ಹೆಂಗ ತಡಕೊಳ್ಳಿ ? ಸಾವುಕಾರರು ನನ್ನ ಮನೀ ಮಾರಿಸಿ ತಗೋತಾರ."

"ಒಳ್ಳೇದು, ನಿನ್ನ ಹಣ ಸಿಗುತ್ತದೆ. ನಾಜಿರಜೀ, ನೀವು ಶಿಪಾಯಿ ಗಳನ್ನು ಕರೆದುಕೊಂಡು ಹೋಗಿ, ಇವನ ಲೆಕ್ಕದ ಪುಸ್ತಕ ತೆಗೆದುಕೊಂಡು ಬನ್ನಿ. ಇವನ ವರ್ಷದ ಉತ್ಪನ್ನದ ಲೆಕ್ಕ ಸ್ವತಃ ನೋಡಿರಿ, ಎಷ್ಟಂತ. ಅಂದರೆ ಎಲ್ಲಾ ಹೊರಬೀಳುತ್ತದೆ ಹೂರಣ. ಇವನ ಎಲ್ಲಾ ಹಣ ನಾ

ಕೊಟ್ಟುಬಿಡುತ್ತೇನೆ—ಇವನಿಂದಲೇ ತೆಗೆದುಕೊಂಡು. ಮಗನೇ, ವರುಷಾ ಎರಡು ಸಾವಿರ ರೂಪಾಯಿ ಲಾಭ ತಿನ್ನುತ್ತೀ— ಈ ಒಂದು ನೂರು ಕಡಿಮೆ ಯಾದರೆ ಪ್ರಾಣ ಹೋಗುತ್ತದೆಯೆ ನಿನ್ನದು ? ”

ಈ ಗದರಿಕೆಯಿಂದ ಬಿಸೇಸರ ಸಾಹನು ಕಾವೇರುತ್ತಿದ್ದವನು ಒಮ್ಮೆಲೆ ತಣ್ಣಗಾಗಿ ಹಿಂದೆ ಸರಿದ. ಗಾಣಿಗಗೇಣಿಗರೆಲ್ಲರೂ ತಮಗೆ ಸಿಗುವುದೊತ್ತಟ್ಟಿಗಿರಲಿ, ತಮ್ಮ ಮೇಲೆಯೆ ಗ್ರಹ ತಿರುಗುವುದೆಂದು ಕಂಡು ಮನೆಯ ಹಾದಿ ಹಿಡಿದರು.

## ೨೪

ಆಶ್ವಯುಜ ಮಾಸದ ಒಂದು ಪ್ರಾತಃಕಾಲ. ಬಿಂದಾಮಹಾರಾಜನು ಕರ್ತಾರಸಿಂಗನೂ ಬಡಿಗೆ ಹೆಗಲಮೇಲಿಟ್ಟುಕೊಂಡು ಒಂದು ಮರದಡಿಯಲ್ಲಿ ಬಂದು ನಿಂತರು.

“ ಈ ಮುದಿಯಾ ಸುಳ್ಳೇ ತಪ್ಪು ಹುಡುಕತಾನೇ ಇರುತ್ತಾನೆ. ನೀನೇ ಹೇಳು, ಇಲ್ಲಿ ದನಾ ಮೇಸಬಾರದಂದರೆ ಜನಾ ಹೋಗಬೇಕೆಲ್ಲಿ ? ಮತ್ತೆ ಈಟು ದಿನ ಸರುವ ಕಾಲ ಇಲ್ಲೇ ಮೇಸಿಕೊಂತ ಬಂದಾವರು ಅದ್ಯಾಕ ಕೇಳ್ಯಾರು ? ” ಎಂದ ಕರ್ತಾರಸಿಂಹ.

“ ನಮುಗನಕೂ ಮೂವತ್ತು ವರುಸದ ನ್ಯಾಗ ಆತು–ಹತ್ತು ಮಂದಿ ಬಂದರು ಹತ್ತು ಮಂದಿ ಹೋದರು–ಆದರೆ ಹುಲ್ಲುಗಾವಲಾ ಯಾರೂ ತಡೀಲಿಲ್ಲ. ಊರ ದನಗೋಳೆಲ್ಲಾ ಮೇತಿದ್ದವು. ” ಎಂದ ಬಿಂದಾ.

“ ಹುಕುಮು ಮಾಡೋರದು ಏನು ಹೊಕ್ಕಯ್ತು, ಹೋಗೋದು ನಮ್ಮ ತೆಲಿ. ಆಕಾ, ಈಕಡೇನೇ ಬರಲಾಕ ಹತ್ತಿದಾವು ದನಾ. ”

“ ಈ ಆಕಳಾ ಎಮ್ಮಿ ಮನೋಹರನವಂತ ಕಾಣತಾವು. ಬಿಲಾಸಿ ಬಂದಾಳು ಮೇಸಾಕ. ”

“ ಯಾರವರು ದನಾ ಹೊಡಕೊಂಡ ಬರಾವರು ಇಲ್ಲೆ ? ಅಟಗೊಂಡು ಹೋಗರಿ ಇಲ್ಲಿಂದ, ಸರಕಾರದ ಅಪಣೆಲ್ಲ. ” ಕರ್ತಾರಸಿಂಗ ಕೂಗಿಕೊಂಡ.

ಬಿಲಾಸಿ ಸನಿಯಕ್ಕೆ ಬಂದು ಬಿಂದಾಮಹಾರಾಜನ ಕಡೆ ನಿಶ್ಚಿಂತಭಾವ ದಿಂದ ನೋಡಿ, “ ಕೇಳಿದ್ಯಾ ಮಾರಾಜ, ಠಾಕುರನ ಮಾತು ? ” ಎಂದಳು.

' ಸರಕಾರದ ಅಪಣೆ ಆಗೆಯ್ತಿ - ಇಲ್ಲಿ ಯಾರೂ ದನಾ ಮೇಸಾಕ ತರಬಾರದಂತ. ''

" ಎಂಥ ಸರಕಾರದ ಅಪಣಿ? ಸರಕಾರದ್ದಲ್ಲ ಭೂಮಿ. ಮಾರಾಜ, ನೀ ಒಂದು ಯುಗಾನೇ ಕಳೆದೀ ಇಲ್ಲೆ—ಯಾರಾದರೂ ಮೇಸೋದು ತಡೆದಿದ್ದರೇ ಎಂದಾದರೂ? "

" ಆ ಹಳೇ ಮಾತು ತೆಗೀಬೇಡ, ಈಗಾಗೇತಿ ಸರಕಾರದ ಹುಕುಮು. ಮತ್ತ ಯಾವ ಹುಲ್ಲುಗದ್ದಿಗ್ಯಾರೆ ಹೊಡಕೊಂಡು ಹೋಗು ದನಾ. ಇಲ್ಲದಿದ್ದರೆ ಗೌಸಖಾ ಬರತಾನ ನೋಡು. ಎಲ್ಲಾನೂ ಕೊಂಡವಾಡಕ ಹಾಕ್ತಾನು" ಬಿಂದಾ ಹೇಳಿದ.

" ಕೊಂಡವಾಡಕ ಹಾಕಾಕೇನು ತುಡುಗು ಮೇತಾವೇನು? ಸರೂ ಕಾಲ ಇಲ್ಲೇ ಮೇಕೊಂತ ಬಂದಾವ್ರು, ಮುಂದೂ ಇಲ್ಲೇ ಮೇತಾವು. ಒಳ್ಳೇದು, ಸರಕಾರ ಇವತ್ತು ದನಾ ಮೇಸಬ್ಯಾಡ ಅಂತು; ನಾಳೆ ಮನ್ಯಾಗೇ ಇರಬ್ಯಾಡ ಅಂದೀತು. ಹೇಳಾವ ಕೇಳಾವ ಯಾವನೂ ಇಲ್ಲೇನು?" ಎಂದಳು ಬಿಲಾಸಿ.

ಅಷ್ಟರಲ್ಲಿ ಗೌಸಖಾ ಮತ್ತು ಫೈಜು ಅಲ್ಲಿಗೆ ಬಂದರು. ಬಿಲಾಸಿಯ ಕೊನೆಯ ಶಬ್ದಗಳು ಅವರ ಕಿವಿಗೆ ಬಿದ್ದವು. " ದನಾ ಹೊಡಕೊಂಡು ಹೋಗು ಇಲ್ಲಿಂದ. ಇಲ್ಲದಿದ್ದರೆ ಕೊಂಡವಾಡೆ ಕಾಣಿಸುತ್ತೇವೆ ಎಲ್ಲಾನೂ " ಎಂದು ಗದ್ದರಿಸಿದ ಗೌಸಖಾ.

" ಅದ್ಯಾಕೆ? ಹುಲ್ಲುಗದ್ದಿ ಸರೂ ಊರ ಜನರದೈತಿ. ಎಲ್ಲಾರೂ ಬಿಟ್ಟರ ನಾನೂ ಬಿಡ್ತೀನಿ. " ಬಿಲಾಸಿ ಉತ್ತರವಿತ್ತಳು.

" ಬಾಯಿಲೆ ಹೇಳಿದರೆ ಕೇಳೂದಿಲ್ಲ ಈ ಮುದಿಕಿ. ಅಟ್ಟಿಕೊಂಡು ನಡೀರಿ ಕೊಂಡವಾಡೇಕ್ಕ ದನಾನ. "

" ಹಾಂ, ಹೇಳಿರತೀನಿ, ಇವನ್ನ ಹಿಡೀಬ್ಯಾಡಿರಿ; ಪಾಡಾಗಾಕಿಲ್ಲ. '' ಎಂದಳು ಮುದುಕಿ.

ಆ ಮಾತಿಗೆ ಯಾರೂ ಲಕ್ಷ್ಯಕೊಡಲಿಲ್ಲ ತುಸ ಹೊತ್ತಿನಲ್ಲಿಯೇ ದನಗಳು ಹುಲ್ಲನ್ನು ಆಶೆಗಣ್ಣಿಂದ ನೋಡುತ್ತ ಸಿಪಾಯಿಗಳೊಡನೆ ಸಾಗಿದವು. ಬಿಲಾಸಿ ಸಂದಿಗ್ಧಸ್ಥಿತಿಯಲ್ಲಿ ಮೂರ್ತಿಮತ್ತಾಗಿ ನಿಂತಿದ್ದಳು. ದನಗಳು ಒಂದಿಪ್ಪತ್ತು ಹೆಜ್ಜೆ ಹೋದಾಗ ಅವಳು ಉನ್ಮತ್ತಳಂತೆ ಓಡಿಹೋಗಿ ದಾರಿ

ಕಟ್ಟೆ ನಿಂತಳು. "ಹಾಂ, ನಾ ಹೇಳಲಿಲ್ಲ ಆಂದೀರಿ, ಇವನ್ನು ಬಿಟ್ಟುಬಿಡಿರಿ, ಪಾಡಾಗಾಕಿಲ್ಲ" ಎಂದು ತೇಕುತ್ತ ನುಡಿದಳು.

ಶಿಪಾಯಿಗಳು ದಾರಿಬಿಡೆಂದು ಗದರಿದರು. ಆಕೆ ಕೇಳಲಿಲ್ಲ. ಫೈಜೂ ಮುಂದೆ ಹೋಗಿ ಅವಳನ್ನು ಕತ್ತು ಹಿಡಿದು ತಳ್ಳಿದ. ಬಿಲಾಸಿ ಎರಡು ಮೂರು ಹೆಜ್ಜೆ ಆಚೆ ಹೋಗಿಬಿದ್ದಳು. ಕಣ್ಣು ಕತ್ತಲುಗಂಡಿಸಿದವು. ಕ್ಷಣ ಹೊತ್ತಿನಮೇಲೆ ಚೇತರಿಸಿಕೊಂಡೆದ್ದು ತನ್ನ ರಕ್ಷಕರ ಬಳಿ ದೂರಿಡಲು ಕುಂಟುತ್ತ ಹೊರಟಳು.

ಮನೋಹರ ಬಲರಾಜ ಇಬ್ಬರೂ ನೆರೆಯೂರಿಗೆ ಬೆಳೆ ಕುಯ್ಲಿಗೆ ಹೋಗಿದ್ದರು. ಇಲ್ಲಿಂದ ಒಂದು ಹರದಾರಿಯ ದಾರಿ. ಬಿಲಾಸಿ ಮುಗ್ಗರಿಸುತ್ತ ಬೀಳುತ್ತ ಬದುವು ಹಿಡಿದು ನಡೆದಳು. ಮೊಣಕಾಲು ಕೆತ್ತಿದ್ದುದರಿಂದ ಇಚ್ಛೆಯಂತೆ ತ್ವರೆಯಾಗಿ ಹೋಗುವುದು ಅಸಾಧ್ಯವಾಗಿತ್ತು. ಅವಳ ರೋಮ ರೋಮದಲ್ಲಿಯೂ ಬೆಂಕಿಯ ಕುಡಿ ಹಾಯುತ್ತಿದ್ದವು. 'ಎಂಥ ಸೊಕ್ಕು ಇವರದು!' ಎಂದು ಪ್ರತ್ಯಂಗದಲ್ಲಿಯೂ ಧ್ವನಿಯಾಗುತ್ತಿತ್ತು.

ಅವಳು ಹೊಲವನ್ನು ಸಮೀಪಿಸಿದಾಗ ತನ್ನ ದೂರಿನ ಪರಿಣಾಮ ಏನಾಗಬಹುದೆಂಬ ಕಲ್ಪನೆ ಅವಳಿಗೆ ಬಂದಿತು. ಬಲರಾಜನಿಗೆ ಸಿಟ್ಟು ಮೂಗಿನ ಮೇಲೆಯೆ, ಮನೋಹರ ಅವನಿಗಿಂತ ಗುಂಜಿತೂಕ ಹೆಚ್ಚೇ. ತನ್ನ ಕಣ್ಣೀರು ಕಂಡರೆ ಅವರು ಜೀವನದ ಪರವೆಯನ್ನೇ ಬಿಡುತ್ತಾರೆ. ಆದರೇನು ಆಗ್ಲಿ ಎಂದಿತು ಅವಳ ನೊಂದುಬೆಂದ ಮನಸು. ಮನುಷ್ಯ ಮಕ್ಕಳ ಸಲುವಾಗಿ ಹಲುಬುವುದು ಏಕೆ? ಗಂಡನಿಗಾಗಿ ಅಳುವುದು ಏಕೆ? ಇಂತಹ ದಿನಕ್ಕಾಗಿಯೇ ಅಲ್ಲವೆ? ಫೈಜೂನಿಗೆ ಮರ್ದನವಂತೂ ಆಗುತ್ತದೆ. ಗೌಸಖಾನ ಸೊಕ್ಕು ಇಳಿಯುತ್ತದೆ.

ಅವಳು ಮುಂದುವರಿದಳು. ಹೊಲದಲ್ಲಿ ಮನೋಹರ ಬಲರಾಜರು ದೂರದಿಂದ ಕಣ್ಣಿಗೆ ಬೀಳುತ್ತಲೆ ಅವಳ ಕಾಲುಗಳು ತಾವಾಗಿಯೇ ನಿಲ್ಲುತ್ತಲಿದ್ದವು. ಅವರ ಬಳಿ ಹೋದೊಡನೆ ಅವಳು ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ಈ ಕಣ್ಣೀರ ಹನಿಗಳು ನಿಗಿನಿಗಿ ಕಿಡಿಗಳೆಂದು ಅವಳಿಗೆ ತಿಳಿದಿತ್ತಾದರೂ ಅವಳ ಆವೇಗ ಅಳವು ಮೀರಿತ್ತು.

"ಅಮ್ಮಾ, ಇದೇನು? ಯಾಕ ಅಳತೀ? ಏನಾತು? ಅರಿವೆಲ್ಲಾ ನೆತ್ತರಾಗ್ಯಾವಲ್ಲ, ಯಾಕ?" ಬಲರಾಜ ಸಾಶಂಕನಾಗಿ ಪ್ರಶ್ನಿಸಿದ.

ಬಿಲಾಸಿ ಸೀರೆ ನೋಡಿಕೊಂಡಳು. ನಿಜವಾಗಿಯೂ ರಕ್ತದ ಕಲೆಗಳಿದ್ದವು. ಮೊಣಕಾಲಿನಿಂದ ನೆತ್ತರು ಬಸಿಯುತ್ತಿತ್ತು. ಆನಳಿದೆ ನಡುಗಿತು. ತನಗೆ ಯಾವ ಭೂತ ಬಡಿದಿತ್ತೊ! ಇಲ್ಲಿಗೇಕೆ ಓಡಿಬಂದಳು ತಾನು? ಸಂಜೆಯವರೆಗೆ ಧೈರ್ಯದಿಂದ ಇದ್ದು, ಇವರು ಮನೆಗೆ ಬಂದಮೇಲೆ ಜನರೆಲ್ಲರೂ ಸೇರಿದಾಗ ಎಲ್ಲ ಸಮಾಚಾರ ಹೇಳಬೇಕಾಗಿತ್ತು. ಎಲ್ಲರ ಸಮ್ಮತಿಯಿಂದ ಏನು ಮಾಡುವುದು ಮಾಡಬಹುದಾಗಿತ್ತು. ಈ ಅವ್ಯವಸ್ಥಿತ ಮನಃಸ್ಥಿತಿಯಲ್ಲಿ ಯಾವ ಸರಿಯಾದ ಉತ್ತರವೂ ತೋಚಲಿಲ್ಲ ಅವಳಿಗೆ.

"ಯಾಕ ಮಾತಾಡಲೊಲ್ಲಿ—ಬರೇ ಅಳಾಕ ಹತ್ತೀದಿ? ಆದದ್ದಾದರೂ ಏನು, ಹೇಳಬಾರದೆ?" ಮತ್ತೆ ಕೇಳಿದ ಬಲರಾಜ.

"ಫೈಜೂ, ಗೌಸಖಾ ನಮ್ಮ ದನಾನೆಲ್ಲಾ ಕೊಂಡವಾಡಕ್ಕೆ ಹೊಡಕೊಂಡು ಹೋದರು." ಬಿಕ್ಕಳಿಸುತ್ತ ಬಿಲಾಸಿ ಉತ್ತರವಿತ್ತಳು.

"ಯಾಕ? ಅವರಿಗೇನು ಮಾಡಿದ್ದವವು?"

"ಇಲ್ಲ, ಹುಲ್ಲುಹಕ್ಕಲದೊಳಗೆ ಮೇಸಬಾರದಂತೆ ದನಾ."

ಅವಳ ಕಣ್ಣುಗಳು ತಗ್ಗಿದವು; ಮುಖದಲ್ಲಿ ಮರ್ಮಾಘಾತದ ಕಳೆಯಿತ್ತು. ಆದನ್ನು ಕಂಡು ಬಲರಾಜ ಕೋಪಭರದಲ್ಲಿ ನಡೆದುದನ್ನು ವಾಸ್ತವಕ್ಕಿಂತ ಹೆಚ್ಚಾಗಿಯೆ ಭಾವಿಸಿಕೊಂಡ. ಹೆಚ್ಚಿಗೆ ಕೇಳಿಕೊಳ್ಳುವ ಅಗತ್ಯವೆನಿಸಲಿಲ್ಲ ಅವನಿಗೆ. ಅವನ ಕಣ್ಣುಗಳು ಕೆಂಪಾದವು. ಬಡಿಗೆಯನ್ನು ಹೆಗಲಮೇಲಿರಿಸಿಕೊಂಡು ಮನೋಹರನಿಗೆ, "ನಾ ಓಟು ಊರ ಕಡೆ ಹೋಕ್ಕೇನಿ." ಎಂದ.

"ಈಗ್ಗ ಹೋದೆಂದರ ಜಗಳ ಬೆಳದೀತು, ಹೊಡೆದಾಟಕ್ಕೂ ಬಂದೀತು, ನಾಕು ಮಂದಿ ನಿನಗ ಛೀ ಅಂದಾರು. ಅಪಮಾನದ ಕಡಾ ಹಿಂಗ ತೀರೋದಿಲ್ಲ." ಮನೋಹರ ಹೇಳಿದ. ಅವನ ಶಬ್ದಗಳಲ್ಲಿ ಒಂದು ಭಯಂಕರ ಸಂಕಲ್ಪ ಹುದುಗಿತ್ತು, ಒಂದು ಘಾತಕ ನಿಶ್ಚಯ ತುಂಬಿತ್ತು. ಬಲರಾಜನಿಂದ ಹೆಚ್ಚು ಆಗ್ರಹಪಡಿಸಲಾಗಲಿಲ್ಲ. ಅವನು,

" ಈಗ ಮನೆಗೆ ಹೋಗಮ್ಮ, ನಾವು ಬಂದವ್ಯಾಗ ನೋಡೋಣಂತ " ಎಂದು ಹೇಳಿದ

" ಬೇಡ, ಮನೆಗೆ ಹೋಗಬೇಡ; ಸಂಜೆಗೆ ಎಲ್ಲರೂ ಕೂಡೇ ಹೋಗೋಣಂತ. ಅದು ಯಾರೋ ಬರಾಕ ಹತ್ಯಾರಲ್ಲ ಓಡೋಡಿ ? ಬಿಂದಾ ಮಾರಾಜೇನು ? " ಎಂದ ಮನೋಹರ.

" ಅಲ್ಲ, ಕಾದಿರಣ್ಣ ಕಾಣ್ತಾನು, ಹೌಂದು ಅವನ. ಊರಾಕ ಬಡದಾಟ ಆಗೆಯ್ತೋ ಏನೋ—ಯಾಕೆಣ್ಣ, ಹಿಂಗ್ಯಾಕ ಓಡಿಬಂದಿ ?

ತೇಕು ಸಾವರಿಸಿಕೊಂಡು ಕಾದಿರ ಉತ್ತರವಿತ್ತ : " ನಿಂಕಡಸ್ಯಾಕೇ ಬಂದೆ. ಬಿಲಾಸಿ ಅತುಗೊಂತ ಬಂದ್ಲು. ನೀವು ಸಿಟ್ಟಿನ ಕಯ್ಯಾಗ ಬುದ್ದೀ ಕೊಟ್ಟು ಏನು ಮಾಡತೀರೋ ಅಂತ ಓಡಿಬಂದೆ. ಇಂದಾದದ್ದು ಆಗಿ ಹೋತು. ಮುಂದಿನ ಇಚಾರ ಮಾಡಿಕೊಳ್ರಿ. ಇವತ್ತಿನಿಂದ ಜಮೀಂದಾರ್‍ರು ಹಕ್ಲ ಬಂದು ಮಾಡ್ಯಾರು. ನೋಡಿದ್ಯಾ, ಎಂತಾ ಅನ್ನೇವು ಅತ್ಯಾಚಾರ!"

" ಹೂಂ, ನೋಡಾಕ ಹತ್ತೇನಿ—ಹೇಳೋ ಆರಸಿಲ್ಲ, ಕೇಳೋ ಪರದಾನಿಲ್ಲ. " ಮನೋಹರನೆಂದ.

" ಮತ್ತೆ ಕೋರ್ಟಿಗೆ ಹೋಗಬೇಕಾತು. "

" ನಡೀ, ನಾ ತಯಾರದೇನಿ. "

" ಇವತ್ತೆಲ್ಲಾ ಮಾತಾಡಿ ಗಟ್ಟಿ ಮಾಡೋಣು. ಈ ಬ್ಯಾರೆ ಹೈ-ಕೋರ್ಟ್ ತನಕಾ ಬಡದಾಡೋದು. ಅವರವರ ಕಮತದ ತಕ್ಕ ವರ್ಗಣಿ ಗೂಳಿಮಾಡಬೇಕು. "

" ಹೌದು. ಬರಾಬರಿ ಹೇಳಿದಿ. "

ಕಾದಿರಖಾ ಸಮಾಧಾನದಿಂದ ಹೊರಟುಹೋದ. ಇವರ ಮನಸಿನಲ್ಲಿ ಬೇರೊಂದು ಸಂಕಲ್ಪ ನಡೆದುದು ಅವನಿಗೆ ತಿಳಿಯಲಿಲ್ಲ. ಮನೋಹರನ ತೂಕದ ಮಾತು ಮಾನಸಿಕ ಧೈರ್ಯದ ಕುರುಹೆಂದು ಅವನು ಬಗೆದ.

ಮನೋಹರ ಉದ್ದೀಪ್ತ ಉತ್ಸಾಹದಿಂದ ತನ್ನ ಕೆಲಸದಲ್ಲಿ ತೊಡಗಿದ. ಅವನ ಹರಯ ಮರುಕಳಿಸಿದಂತಿತ್ತು. ತೆನೆಗಳ ರಾಸಿ ಬೀಳುತ್ತಿತ್ತು. ಅವನು ಹಿಂದೆ ನೋಡುತ್ತಿದ್ದಿಲ್ಲ, ಮುಂದೆ ನೋಡುತ್ತಿದ್ದಿಲ್ಲ. ಮಂದಿಯೊಡನೆ

ಮಾತನಾಡುತ್ತಿದ್ದಿಲ್ಲ, ಮುಂದಿ ಆಡಿದುದು ಅವನಿಗೆ ಕೇಳುತ್ತಿದ್ದಿಲ್ಲ. ಕೈ ಸೋಲಲಿಲ್ಲ, ಸೊಂಟ ನೋಯಲಿಲ್ಲ. ಮೈಮೇಲೆ ಕೆಂಡ ಸುರಿದಂತೆ ಬಿಸಿಲು; ಬೆವರು ಧಾರಾಕಾರವಾಗಿ ಹರಿಯುತ್ತಿತ್ತು. ಅವನು ಮಾತ್ರ ಮುಖ ಮೇಲೆತ್ತುತ್ತಿರಲಿಲ್ಲ. ಬಲರಾಜ ಅವನಿಗಾಗಿ ಹಚ್ಚಿಟ್ಟ ಚಿಲಿಮೆಯ ತಂಬಾಕ ಅಲ್ಲಿಯೇ ಸುಟ್ಟು ಬೂದಿಯಾಯಿತು. ಬಲರಾಜ ಒಮ್ಮೆ ಹೊಲದೊಳಗೆ ಬರುವ, ಒಮ್ಮೆ ಮರದ ಬುಡದಲ್ಲಿ ಕುಳ್ಳಿರುವ, ಒಮ್ಮೆ ಚಿಲಿಮೆ ಸೇದುವ. ಇಬ್ಬರ ಎದೆಯೊಳಗೂ ಒಂದೇ ಬೆಂಕಿ ಉರಿಯುತ್ತಿತ್ತು. ಒಂದು ಕಡೆ ವಾಯುವೇಗದಿಂದ ಚಂಚಲ, ಒಂದು ಕಡೆ ನಿರ್ಬಲತೆಯಿಂದ ನಿಶ್ಚಲ. ಇಬ್ಬರ ಹೃದಯದಲ್ಲಿಯೂ ಒಂದೇ ಭಾವನೆ—ಒಂದರಲ್ಲಿ ಉದ್ದಾಮ–ಉಚ್ಛೃಂಖಲ; ಒಂದರಲ್ಲಿ ಸ್ಥಿರ-ಗಂಭೀರ.

ಎರಡು ಪ್ರಹರ ಹೊತ್ತಾಯಿತು. ಬಿಲಾಸಿ ಹೋಗಿ, "ನಡೀ ಉಣ್ಣಾಕ" ಎಂದಳು ಅಂಜುತ್ತಂಜುತ್ತ.

"ನಡೀ ಬಂದೆ" ತಲೆ ತಗ್ಗಿಸಿಕೊಂಡೇ ಮನೋಹರನೆಂದ.

ಒಂದು ಗಂಟೆಯ ತರುವಾಯ ಬಿಲಾಸಿ ಮತ್ತೆ ಹೋಗಿ ಕರೆದಳು. "ನಡೀ ಊಟಾ ಮಾಡು. ಆಗಲೇ ಹೊತ್ತಿಳೀತು. ಏನು, ಇವತ್ತೇ ಇಡೀ ಹೊಲಕೊಯ್ದು ಮುಗಿಸಬೇಕಂತೀಯೇನು?"

"ಅದೇ ಇಚಾರದಾಗ ಅದೀನಿ. ನಾಳೇನು ಬರ್ತೇನೋ ಬರೋದಿಲ್ಲೋ ಯಾವಗ ಗೊತ್ತು!" ಮನೋಹರನ ಸ್ವರ ಕಠೋರವಾಗಿತ್ತು.

ತುಂಬಿದ ಕೊಡಕ್ಕೆ ಹರಳು ತಾಕಿದ ಹಾಗೆ, ಬಿಲಾಸಿಯ ಹೃದಯಕ್ಕೆ ಈ ಮಾತು ತಾಗಿ ಕಣ್ಣಿಂದ ನೀರು ಹರಿಯತೊಡಗಿತು. ಅವಳು ಅಂಗೈ ಉಜ್ಜಿಕೊಳ್ಳುತ್ತ ಎಷ್ಟೋ ಹೊತ್ತು ನಿಂತಳು. ಇವನು ಮನಸಿನೊಳಗೆ ಏನು ದೃಢಮಾಡಿಕೊಂಡಿದ್ದಾನೋ ಏನೋ ಎಂದು ಡವಡವಿಕೆ. ಕೊನೆಗೆ ಮನೋಹರನ ಎದುರಿನಲ್ಲಿ ಕುಳಿತುಕೊಂಡು, ದೀನಮುದ್ರೆಯಿಂದ ಅವನನ್ನು ನೋಡುತ್ತ, "ಕೈಮುಗಿದು ಹೇಳಿಕೊಂತೀನಿ, ಏಳು ಊಟಾಮಾಡು ನೀ ಹಿಂಗ ಗುಮ್ಮನಗುಸಕನ ಹಂಗ ಇರೋದು ನೋಡಿ ನನ್ನೆದಿ ಹಾರಾಕ ಹತ್ತೈತಿ. ನೀ ಏನು ಗೊತ್ತು ಮಾಡೀ, ಹೇಳೂದಿಲ್ಲ ಯಾಕ?" ಎಂದಳು.

"ಹೋಗಿ ಸುಮಾಕ ಕುಕ್ಕರಿಸು. ನನ್ನ ಹೊಟ್ಟೆ ಹಸದಾಗ ನಾ ತಿಂತೀನಿ." ಎಂದು ನುಡಿದು ಮನೋಹರ ಮತ್ತೆ ತನ್ನ ಕೆಲಸದಲ್ಲಿ ಮಗನಾದ.

ಸಂಜೆಯವರೆಗೂ ಹೀಗೇ ಮೌನವಾಗಿ ಸಾಗಿತು. ತೆನೆಗಳನ್ನು ಬಂಡಿಗೆ ಹೇರಿದರು ಮೂವರೂ ಕೂಡಿ. ಆಗಲೂ ಮಾತಿಲ್ಲ. ಬಲರಾಜ ಬಂಡಿ ಹೊಡೆಯುತ್ತಿದ್ದ. ಮನೋಹರ ಲಾವಣಿ ಹೇಳುತ್ತ ಹಿಂದೆ ಸಾಗಿದ್ದ.

ಊರಲ್ಲಿ ಎಲ್ಲೆಲ್ಲಿಯೂ ಹುಲ್ಲುಗಾವಲಿನ ಚರ್ಚೆಯೇ ನಡೆದಿತ್ತು. ಕಾದಿರನ ಮನೆಯ ಮುಂದೆ ಆಲೋಚನಾ ಸಭೆಯೇ ಸೇರಿತ್ತು. ಮನೋಹರ ಅಲ್ಲಿಗೆ ಹೋಗದೆ ನೆಟ್ಟಗೆ ಮನೆಗೆ ಹೋಗಿ ಊಟ ಬೇಡಿದ. ಸೊಸೆ ಅಡಿಗೆ ಮಾಡಿಟ್ಟಿದ್ದಳು. ಅವನು ಯಥೇಷ್ಟ ಭೋಜನ ಮಾಡಿ ಎಳನೀರು ಕುಡಿದು ಕುಳಿತ. ತುಸಹೊತ್ತಿನಲ್ಲಿ ಬಲರಾಜ ಪಂಚಾಯತಿಯಿಂದ ಮರಳಿದ.

"ಏನಾಯಿತು ?" ಮನೋಹರ ವಿಚಾರಿಸಿದ.

"ಏನಿಲ್ಲ. ಖಾನಸಾಬಗ ಕಾಣಿಕಿ ದಕ್ಷಿನಾ ಕೊಟ್ಟು ಒಲಿಸಿಕೋ-ಬೇಕಂತ ಆತು. ಕೋರ್ಟು ಕಚೇರಿ ಅಂದರ ಎಲ್ಲಾನೂ ಜರಕೊಂತಾರ."

"ಇಷ್ಟು ನನಗ ಮುಂಚಾಕೆ ತಿಳಿದಿತ್ತು. ಒಳ್ಳೇದು. ಹೋಗಿ ಲಗ್ಗನ ಒಂದೀಟು ಊಟಾ ಮುಗಿಸಿಕೋ. ಇವತ್ತ ನಾನೂ ನಿನ್ನ ಕೂಟ ಬರ್ತೇನಿ ಕಾಯಾಕ. ಜಂಪು ಹತ್ತಿದರ ಎಬ್ಬಿಸು."

ಒಂದು ಗಂಟೆಯ ತರುವಾಯ ಇಬ್ಬರೂ ಹೊಲಕ್ಕೆ ಹೊರಟುನಿಂತರು.

"ಕೊಡಲಿ ಕೆಲಸಾ ಪಾಡ ಕೊಡತೈತ್ಯೋ ಇಲ್ಲೊ ?" ಮನೋಹರ ಕೇಳಿದ.

"ಹಾಂ ಇವತ್ತೇ ಮಸದಿಟ್ಟೆಯ್ತಿ."

"ಅದನ ತಗೋ."

"ನನ್ನ ಎದ್ಯಾಗನಕೂ ತರತರಾ ಅನ್ನಾಕ ಹತ್ತೈತಿ."

"ಅಂದಕೋಳಿ. ನಿನ್ನ ಸಂಗಾಟ ಇರತೇನಲ್ಲ ನಾನೂ. ನೀ ಒಂದೆರಡು. ಕೈ ಹಾಕಿ ಅಲ್ಲಿಂದ ಕಾಲು ಕಿತ್ತಿಬಿಡು. ಉಳದದ್ದೆಲ್ಲಾ ನಾ ನೋಡಿ-ಕೊಂತೀನಿ. ಬಂದು ಏನೇನೂ ಗೊತ್ತಿಲ್ಲದವರ ಹಂಗ ಮನಕೊಂಡುಬಿಡು. ಯಾರಾದರೂ ಏನಾದರೂ ಕೇಳಿದರೆ, ಹೆದರಿಸಿದರೆ ಬಾಯಿಬಿಟ್ಟೀ. ನಾ

ಒಬ್ಬವನಿಗೆ ಹೋಕ್ಕಿದ್ದಿನಿ—ರಾತರೀ ಪಾಡ ಕಾಣಸಾಣಿಲ್ಲ; ಕಯ್ಯಾಗ ಒಂದು ಹೊಡತ ಎಡ್ಡು ತುಂಡು ಅನ್ನೋ ಬಲಾನೂ ಉಳಿದಿಲ್ಲ.''

ಮನೋಹರ ಮನೆತನದ ಸಾಧಾರಣ ಮಾತು ಆಡುತ್ತಾರೇನೋ ಎಂಬ ಹಾಗೆ ಒಳ್ಳೇ ಸಾವಧಾನದಿಂದ ಮಾತನಾಡುತ್ತಿದ್ದ. ಇದಕ್ಕೆ ಪ್ರತಿಕೂಲವಾಗಿ ಭಯಶಂಕೆಗಳಿಂದ ಬಲರಾಜ ಆತುರನಾಗುತ್ತಲಿದ್ದ. ಕ್ರೋಧದ ಆವೇಶದಲ್ಲಿ ಅವನು ಕಿಚ್ಚಿನಲ್ಲಿಯೂ ಧುಮುಕಬಲ್ಲ. ಆದರೆ ಈ ಪೈಶಾಚಿಕ ಹತ್ಯಾಕಾಂಡ ವೆಂದರೆ ಅವನ ಜೀವ ಒಣಗಿಹೋಗುತ್ತಿತ್ತು.

ಇಬ್ಬರೂ ಹೊಲದಲ್ಲಿ ಮಂಚಿಕೆಯ ಮೇಲೆ ಮಲಗಿದರು. ಅಮಾವಾಸ್ಯೆಯ ರಾತ್ರಿ; ಸ್ವಲ್ಪ ಮೋಡವೂ ಕವಿದು ಕತ್ತಲೆಯನ್ನು ಹೆಚ್ಚಿಸಿತ್ತು. ಮನೋಹರ ಮಲಗಿದೊಡನೆ ಗೊರಕೆ ಹೊಡೆಯತೊಡಗಿದ. ಬಲರಾಜ ಆ ಮಗ್ಗುಲು ಈ ಮಗ್ಗುಲು ಹೊರಳುತ್ತಿದ್ದ. ಹಲವಾರು ಶಂಕೆಗಳ ಅವಿರಲ ಸ್ರೋತವಾಗಿತ್ತು, ಅವನ ಹೃದಯ.

ಎರಡು ಗಳಿಗೆ ಕಳೆದಿರಬಹುದು. ಮನೋಹರನಿಗೆ ಎಚ್ಚರವಾಯಿತು. "ಬಲರಾಜ, ಮನಗಿದೇನು?"

"ಇಲ್ಲ. ನಿದ್ದಿ ಬರಾಕೊಲ್ಲದು."

"ಒಳ್ಳೇದು. ಇನ್ನು ದೇವರ ಹೆಸರು ತೊಗೊಂಡು ತಯಾರಾಗು. ಅಂಜಿಕಿ ಗಾಬರಿ ಆಗೋ ಮಾತು ಏನಿಲ್ಲ. ತಮ್ಮ ಮರ್ಯಾದಿ ಕಾಯ್ಕೊಂಬೋದು ಗಂಡಸೂರ ಕೆಲಸ. ಇಂತಾ ಅತ್ಯಾಚಾರಕ ನಾವು ಬ್ಯಾರೆ ಏನು ಉತ್ತರಾ ಕೊಡೋದಯ್ತಿ? ಮಾನಗೇಡ್ಯಾಗಿ ಬದಕೂಕಿಂತ ಸಾಯೋದು ಪಾಡ. ಮನಸು ಚಲೋ ಗಟ್ಟಿ ಮಾಡು. ನಿನ್ನ ಕೆಲಸಾ ತೀರಿಸಿದವನೇ ನೆಟ್ಟೋಕ ಇಲ್ಲಿಗೆ ಬರಬೇಕು. ಕಗ್ಗಾನ ಕಾವಳಯ್ತಿ, ಠಾಣೇದಾರ ನಿನ್ನ ಬೆದರಿಸ್ಯಾನು, ಜ್ವಾಕಿ, ಅಂಜಬ್ಯಾಡ. ಊರ ಮಂದಿ ಕೂಟ ಮೇಳಾಗಿ ಇದ್ದೆಂದರ ಯಾರೂ ನಿನ್ನ ಕೂದಲಾ ಕೊಂಕಿಸೂದಿಲ್ಲ. ದುಖರನ ಭಗತ ಅಷ್ಟು ಒಳ್ಳೇವಲ್ಲ, ಅವನ ಕೂಟ ಎಚ್ಚರಿಕೆಯಿಂದ ಇರು. ಕಾದಿರ ಬಾಳ ನಂಬಿಗೀ ಮನಸ್ಯಾ. ಅವ ಅಂದದ್ದಕ್ಕ ಕಟ್ಟನಿಸಿಗೋ ಬ್ಯಾಡ. ನಾ ಇನ್ನ ಮನಿಗೆ ತಿರಿಗಿ ಬರೂದಿಲ್ಲ. ನೀನೇ ಮನೀ ಯಜಮಾನ ಆಕ್ಕೀ. ನೀ ಇನ್ನ ಆ ಹುಡುಗತನ ಬಿಡಬೇಕು. ಯಾರಾದರೂ ನಾಕ ಮಾತು ಆಡಿದರ ಸುಮಾಕಿರಬೇಕು. ಅಪ್ಪ—

ಅಜ್ಜಗೋಳ ಹೆಸರಿಗೆ ಕಪ್ಪು ಹತ್ತೋ ಕೆಲಸಾ ಮಾಡಬಾರದು. ಹೆಣತೀನತೆಲಿ ಗೇರಿಸಿಕೋ ಬಾರದು, ಎತ್ತಿ ಹೇಳಿದಂಗ ಕೇಳ್ಕೊಂಡಿರು ಅಂತ ಆಕೀಗೆ ಬುದ್ಧಿ ಹೇಳಿಕೊಂತಾ ಇರಬೇಕು. ನಾ ಏನು ನೋಡಾಕ ಬರೂದಿಲ್ಲ ಆದರ ಇಂತಾ ರಗಳಿ ಆಕ್ಕೊಂತ ಹೋದರ ಮನೀ ಮಸಣಾಕ್ಕಯ್ತು."

"ಎಪ್ಪಾ, ಈಗ ಸಂಬಾಳಿಸಿಕೋ. ನನ್ನ ಕೈಕಾಲು ನಡುಗ್ತಾವು." ಬಲರಾಜ ಬಿಗಿದ ಕೊರಳಿಂದ ನುಡಿದ.

"ಏನಡ್ಡೀ ಇಲ್ಲ. ಕೊಡ್ಲಿ ಕೈಯಾಗ ಬಂತಂದರ ಎಲ್ಲಾ ಆಕ್ಕಯ್ತು. ಯಾರ ಮಗಾ ನೀ—ನಿನ್ನ ಎದಿ ಗಟ್ಟಿ ಆಯ್ತು. ಈಗಿನ ನಿನ್ನ ನಡಗಂದರ ಜರದ ಮುಂಚಾಕಿನ ಚಳಿ. ಹೆಗಲ ಮ್ಯಾಗೆ ಕೊಡ್ಲಿ ಇಟಗೊಂಡು ಜಯ ಮಹಾವೀರ ಅಂತ ಹೊಂಟರ ಹುಲಿ ಹಂಗ ಬ್ಯಾಟಿ ಮ್ಯಾಗ ಹಾರತಿ. ಆಗ ನಾ ತಡದರೂ ನೀ ಕೇಳಾಕಿಲ್ಲ."

ಆಗ ಅರ್ಧರಾತ್ರಿಯಾಗಿತ್ತು.

## ೨೫

ಪ್ರೇಮಶಂಕರರ ಕೃಷಿಶಾಲೆಯನ್ನೀಗ ನಗರದ ರಮಣೀಯ ಸ್ಥಳಗಳಲ್ಲಿ ಎಣಿಸಲಾಗುತ್ತಿತ್ತು. ರಸಿಕರಿಗೆ ಆಕರ್ಷಣೀಯವಾಗಿತ್ತು, ಅಲ್ಲಿಯ ಚೊಕ್ಕಟ ತನ, ಸೊಬಗು. ಪ್ರೇಮಶಂಕರರು ಕೇವಲ ಅದರ ಆಡಳಿತಗಾರರಾಗಿದ್ದರೂ ಒಕ್ಕಲುಗಳ ಭಕ್ತಿವಿಶ್ವಾಸಗಳಿಂದ ಒಡೆಯರೇ ಎನಿಸಿದ್ದರು ಅವರೀಗ ನಾನಾ ಪ್ರಕಾರದ ಪರೀಕ್ಷೆಗಳನ್ನು ನಡೆಸುತ್ತಿದ್ದರು; ಹೊಸ ಹೊಸ ಬೆಳೆಗಳನ್ನು ಬೆಳೆ ಯುತ್ತಿದ್ದರು. ಆರೇಳು ಮಣ ಹುಟ್ಟುವಳಿಯಿದ್ದ ಕ್ಷೇತ್ರಗಳು ಸರಾಸರಿ ಹದಿನೈದಿಪ್ಪತ್ತು ಮಣ ಬೆಳೆ ಕೊಡುತ್ತಿದ್ದವು ಅಲ್ಲದೆ ತೋಟದ ಹುಟ್ಟು ವಳಿ ಬೇರೆ. ಈ ನಾಲ್ಕು ವರುಷಗಳಲ್ಲಿ ಮಾವು, ಕಿತ್ತಳೆ ಮೊದಲಾದ ಗಿಡ ಗಳು ಫಲ ಕೊಡಲಾರಂಭಿಸಿದ್ದವು. ಕಾಯಿಪಲ್ಲೆಗಳ ಹುಟ್ಟುವಳಿ ನಿರಂತರ ವಾಗಿತ್ತು. ಪ್ರೇಮಶಂಕರರಿಂದ ಕಲಿತು ಹಾಜಿಪುರದವರೂ ತಮ್ಮ ಬಾಳನ್ನು ನೊಗಸಾಗಿ ರೂಪಿಸಿಕೊಂಡಿದ್ದರು; ಅವರಿಗೆ ಬೇಕಾದುದೆಲ್ಲವೂ ಅಲ್ಲಿಯೆ ಸಿಕ್ಕುವಂತಾಗಿತ್ತು. ಎಂಟರಲ್ಲೊಂದು ಭಾಗ ಭೂಮಿಯಲ್ಲಿ ಹತ್ತಿ ಬೆಳೆ ಯುತ್ತಿದ್ದರು. ಹಳ್ಳಿಗರು ಮನೆಯಲ್ಲಿಯೆ ನೂತು ಅಲ್ಲಿಯ ನೇಕಾರನಿಂದಲೇ

ಬಟ್ಟೆ ನೇಯಿಸಿಕೊಳ್ಳುತ್ತಿದ್ದರು. ಮೊದಲು ಆ ನೇಕಾರ ಜೂಜಾಡುತ್ತಿದ್ದ. ಕೆಲ ಸಲ ಕಳವಿನಲ್ಲಿ ಸಿಕ್ಕಿದ್ದ. ಈಗವನು ತನ್ನ ಪರಿಶ್ರಮದಿಂದ ಬಾಳಿ ಒಳ್ಳೆಯ ಮನುಷ್ಯನೆನಿಸಿಕೊಳ್ಳುತ್ತಿದ್ದ. ಹಳ್ಳಿಗಳ ವ್ಯಾಜ್ಯಾಸಕ್ತರಾದ ಜಮೀನುದಾರರು, ಒಕ್ಕಲಿಗರು ಬಹುಶಃ ಇಲ್ಲಿಯೇ ಉಳಿದುಕೊಳ್ಳುತ್ತಿದ್ದರು. ಉರವಲು, ತರಕಾರಿ, ಉಪ್ಪು ಎಣ್ಣೆಗಳ ವೆಚ್ಚ ಉಳಿಸಿಕೊಳ್ಳುತ್ತಿದ್ದರು. ಸಾಧುಸಂತರಂತೂ ಅಲ್ಲಿ ನೆಲೆಮನೆಯನ್ನೇ ಮಾಡಿಕೊಂಡಿದ್ದರು. ಹಾಜಿ ಪುರದವರು ಅವರನ್ನು ತಮ್ಮ ಭಾಗದ ದೇವರೆಂದೇ ಭಾವಿಸುತ್ತಿದ್ದರು. ನೇಕಾರನಂತೆ ಇನ್ನೂ ಅನೇಕ ಕುಚರಿತ್ರರನ್ನು ಅವರ ಸದಯ ಉದಾರ ಸರಲ ಸ್ವಭಾವವು ಉದ್ಧಾರಮಾಡಿತ್ತು.

ಕೃಷಿಕರ ಆರ್ಥಿಕ ಹೀನದೆಸೆಯ ಬಗ್ಗೆ ಪ್ರೇಮಶಂಕರರು ಬಹುವಾಗಿ ಯೋಚಿಸುತ್ತಿದ್ದರು. ಇತರ ಅರ್ಥಶಾಸ್ತ್ರವಿದರಂತೆ ಅವರು ಒಕ್ಕಲಿಗರನ್ನು ದುಂದುಗಾರರು, ಆಲಸಿಗಳು, ದಡ್ಡರು, ಸಾಗುವಳಿ ತಿಳಿಯದವರು ಎಂದು ದೂಷಿಸಿ ಈ ಪ್ರಶ್ನೆಯನ್ನು ಕೊನೆಗೊಳಿಸುತ್ತಿರಲಿಲ್ಲ. ತಮ್ಮಲ್ಲಿ ಕೃಷಿಕರಿಗೆ ತಿಳಿಸಿಕೊಡುವುದಕ್ಕೆ ಅವರಿಗೆ ಗೊತ್ತಿಲ್ಲದ ವಿಷಯವಿಲ್ಲ; ಅವರಿಗಿಂತ ಹೆಚ್ಚಿನ ಕಷ್ಟಾಳುಗಳು ಪ್ರಪಂಚದಲ್ಲಿಯೇ ಯಾರಿಲ್ಲ; ಮಿತವ್ಯಯದಲ್ಲಿ, ಆತ್ಮಸಂಗ್ರಾಮದಲ್ಲಿ, ಗೃಹವ್ಯವಸ್ಥೆಯಲ್ಲಿ ನಿಪುಣರವರು— ಎಂದೆನ್ನುತ್ತಿದ್ದರು ಅವರು ಪರೋಕ್ಷದಲ್ಲಿ. ಅವರ ಬಡತನಕ್ಕೆ ಅವರು ಹೊಣೆಯಲ್ಲ; ಅದು ಪರಿಸ್ಥಿತಿಗಳ ದೋಷ. ಆ ಪರಿಸ್ಥಿತಿಗಳು ಯಾವವು? ತಮ್ಮತಮ್ಮಲ್ಲಿ ಒಡಕು, ಸ್ವಾರ್ಥಪರತೆ, ಅವರ ಕಾಲಬೇಡಿಯಂತಿರುವ ಸಂಸ್ಥೆಯ ವಿಕಾಸ. ಕೊಂಚ ವಿಚಾರ ಮಾಡಿದರೆ, ಈ ಮೂರೂ ಒಂದೇ ರೆಂಬೆಯ ಟಿಸಿಲುಗಳೆಂದು, ಆ ಸಂಸ್ಥೆ ಒಕ್ಕಲಿಗರ ನೆತ್ತರನ್ನೇ ಅವಲಂಬಿಸಿದುದೆಂದು ಕಂಡುಬರುವುದು. ತಮ್ಮತಮ್ಮೊಳಗೆ ವಿರೋಧವೇಕೆ? ಕಾರಣ, ಈಗಿನ ಶಾಸನದಿಂದ ಸೃಷ್ಟಿಯಾದ ದುರವಸ್ಥೆಗಳೇ. ಪ್ರೇಮ ಮತ್ತು ವಿಶ್ವಾಸಗಳು ಏಕಿಲ್ಲ? ಪ್ರಸ್ತುತ ಶಾಸನವು ಈ ಸದ್ಭಾವಗಳನ್ನು ತನಗೆ ಘಾತುಕವೆಂದು ತಿಳಿಯುತ್ತಿದೆ; ಅವುಗಳನ್ನು ಕೊನರಗೊಡುವುದಿಲ್ಲ. ಈ ಪರಸ್ಪರ ವಿರೋಧದ ಶೋಚನೀಯ ಫಲವೆಂದರೆ, ಬರಬರುತ್ತ ಭೂಮಿಗಳು ಚಿಕ್ಕ ಚಿಕ್ಕ ತುಂಡುಗಳಾಗುವುದು, ಅವುಗಳ ಕಂದಾಯದ ಅಪರಿಮಿತ ವೃದ್ಧಿ. ಈ ಶಾಸನವನ್ನು ತಿದ್ದುವುದು

ಮಾನವನ ಆಳವಿಗೆ ಮೀರಿದ್ದೆಂದು ಪ್ರೇಮಶಂಕರರಿಗೆನಿಸುತ್ತಿತ್ತು. ಭೂಮಿಗಳ ಹಂಚಿಕೆಯನ್ನು ತಡೆಯುವುದು ಮಾತ್ರ ಸಾಧ್ಯವೆಂದು ತೋರುತ್ತಿತ್ತು. ಯಾವುದೊಂದು ಚಳವಳಿಯ ಮುಂದಾಳುಗಳಾಗುವುದು ತಮಗಿಷ್ಟವಲ್ಲದಿದ್ದರೂ ಪತ್ರಿಕೆಗಳಲ್ಲಿ ತಮ್ಮ ಮಂತವ್ಯವನ್ನು ಪ್ರಚುರಪಡಿಸದೆ ಇರಲಾಗಲಿಲ್ಲ ಅವರಿಗೆ. ತಮಗಿಂತ ಅನುಭವಿಗಳು, ಪ್ರತಿಭಾಶಾಲಿಗಳು ಯಾರಾದರೂ ಈ ಪ್ರಶ್ನೆಗೆ ಕೈಹಾಕಲೆಂಬುದು ಅವರ ಉದ್ದೇಶ.

ಒಮ್ಮೆ ಈ ವಿಷಯ ಹೊರಟಾಗ ಒಬ್ಬ ಮಿತ್ರರು, "ಕಾಯದೆಯಿಂದ ಈ ಪ್ರಥೆ ನಿಲ್ಲುವುದೆಂದು ತಿಳಿಯುವುದು ಭ್ರಮೆಯೆ. ಈ ವಿಷವೃಕ್ಷದ ಬೇರುಗಳು ಮನುಷ್ಯನ ಹೃದಯದಲ್ಲಿವೆ. ಅವುಗಳನ್ನು ಅಗಿದು ಕಿತ್ತೊಗೆಯುವವರೆಗೆ ಅದು ಹೀಗೆಯೇ ಹೊಕಾಯಿ ಬಿಡುತ್ತಿರುವುದೇ," ಎಂದರು. "ಕಾನೂನಿನಿಂದ ಸ್ವಲ್ಪಲ್ಲ ಸ್ವಲ್ಪ ಸುಧಾರಣೆ ಆಗಿಯೇ ಆಗುತ್ತದೆ" ಎಂದು ಪ್ರೇಮಶಂಕರರೆಂದರು. ಅದಕ್ಕೆ ಆ ಮಹಾಶಯರು "ಎಂದೂ ಆಗದು. ತಿರುಗಿ ಪ್ರತ್ಯಕ್ಷ ಪ್ರಕಟನೆಗೆ ಆಸ್ಪದ ದೊರಕದೆ ಸ್ವಾರ್ಥವು ಇನ್ನಷ್ಟು ಭಯಂಕರ ರೂಪವನ್ನು ತಳೆಯುವುದು" ಎಂದು ಬಲವಾಗಿ ಪ್ರತಿಪಾದಿಸಿದರು

ಅದಾಗ ಪಾಲಿನ ದರಖಾಸ್ತು ಮಾಡಿ ಕಚೇರಿಯಿಂದ ಬಂದಿದ್ದ ಕೃಷಿಕನೊಬ್ಬ "ಏನೂ ಆಗಾಣಿಲ್ಲ. ನಾವಂತೂ ನಿಮ್ಮ ಹೆಜ್ಜಿಮ್ಯಾಗ ಹೆಜ್ಜಿ ಇಡಾವ್ರು. ನಿಮ್ಮ ಅಣ್ಣಾವ್ಮಂದಿರಾಗs ಕೂಡಿ ನಡ್ಯಾಣಿಲ್ಲ, ನಮ್ಮಲ್ಲಿ ಹೆಂಗ ನಡದೀತು ? ನಿಮಗ ದೇವರು ಎಲ್ಲಾ ಕೊಟ್ಟಿದಾನು, ಅಂದರೂ ನೀವು ನಿಮ್ಮ ಅಣ್ಣನಿಂದ ಬ್ಯಾರೆ ಆದೀರಿ" ಎಂದು ನುಡಿದ.

ಈ ಉಚ್ಛೃಂಖಲ ಶಬ್ದಗಳಿಂದ ಪ್ರೇಮಶಂಕರರ ಹೃದಯದಲ್ಲಿ ಅಲಗು ಚುಚ್ಚಿದಂತಾಯಿತು. ಅವರು ತಲೆ ತಗ್ಗಿಸಿದರು. ಮುಖ ಮಾಸಲಾಯಿತು. ಗೆಳೆಯರು ತಿರಸ್ಕಾರದಿಂದ ಒಕ್ಕಲಿಗನನ್ನು ನೋಡಿದರು. ಮುಂದೆ ಎಷ್ಟೋ ಹೊತ್ತು ಅವರು ಕುಳಿತಿದ್ದರು ಆದರೆ ಪ್ರೇಮಶಂಕರರ ನಾಲಗೆ ಕಿಂಚಿತ್ತೂ ಕೆಲಸ ಮಾಡಲಿಲ್ಲ.

ಎಲ್ಲರೂ ಹೊರಟುಹೋದರು. ಪ್ರೇಮಶಂಕರರು ಗುಡಿಸಲಿನ ಮುಂದೆ ಎಡೆಯಾಡತೊಡಗಿದರು. ಜ್ಞಾನಶಂಕರರೊಡನೆ ಕೂಡುವುದು ಹೇಗೆಂಬ

ಷಮುಷ್ಯೆ ಅಪರಿದುರಿಗಿತ್ತು. ಬಗೆಬಗೆದಂತೆ ತಾವೇ ದೋಷಿ ಎಂದು ಕಾಣು ತ್ತಿತ್ತು. ಒಕ್ಕಲುಗಳೊಡನೆ ಅವರು ಕಾದುತ್ತಿದ್ದಾಗ ತಾವು ಒಕ್ಕಲುಗಳ ಪಕ್ಷ ಕಟ್ಟಿದುದು ಉಚಿತವಾಗಲಿಲ್ಲ. ಜ್ಞಾನಶಂಕರರವು ಅನ್ಯಾಯುವಾಗಿ ದ್ದರೂ ತಾವು ನಿರ್ಲಿಪ್ತರಾಗಿರಬೇಕಿತ್ತು; ಏನಿದ್ದರೂ ಸೋದರನೆಂದು ತಿಳಿಯು ಬೇಕಿತ್ತು. ಅಷ್ಟು ಮಾಡದೆ ಎದುರು ನಿಂತರು. ತಮ್ಮ ಅವರ ವಿಚಾರದಲ್ಲಿ ಮಹದಂತರವಿರುವುದಾದರೂ ಆ ಭೇದ ಭ್ರಾತೃಪ್ರೇಮುವನ್ನು ಏಕೆ ಕಲಕ ಬೇಕು ? ಬಂದಾಗಿನಿಂದಲೂ ಅವರು ತಮ್ಮ ಅವಹೇಲನೆ ಮಾಡುತ್ತಿದ್ದಾರೆ ಪತ್ನೀಪ್ರೇಮದಿಂದ ಕೂಡ ವಂಚಿತರನ್ನಾಗಿ ಮಾಡಿದ್ದಾರೆ ನಿಜ. ಆದರೆ ಅವರೊಡನೆ ಹೊಂದಿಕೊಂಡುಹೋಗಲು, ಅವರ ಅಪ್ರಿಯು ವಚನ-ವರ್ತನೆಗಳನ್ನು ಮರೆಯುಲು ತಾವೂ ಪ್ರಯುತ್ನಿಸಲಿಲ್ಲ. ಸಿದ್ಧಾಂತ ಪ್ರಿಯುತೆ ಎಂದರೆ ತನ್ನವರನ್ನು ವಿರೋಧಿಸುವುದಲ್ಲ. ಸಿದ್ಧಾಂತಗಳನ್ನು ಮನುಷ್ಯನಿಗಿಂತ ಹೆಚ್ಚೆಂದು ಬಗೆಯುವುದು ಅಕ್ಷಮ್ಯ. ಅವರ ಹೃದಯುವನ್ನು ತಮ್ಮ ಕಡೆ ತಿದ್ದಿ ಒಲಿಸಿಕೊಳ್ಳುವುದಕ್ಕೆ ಇದು ತಕ್ಕ ಸಂಧಿ....

ಸಂಜೆಯ ಹೊತ್ತು, ಜ್ಞಾನಶಂಕರರು ಮೌಲವಿ ಈಜಾದ ಹುಸೇನ ರೊಂದಿಗೆ ಮಾತನಾಡುತ್ತ ತಮ್ಮ ಸುರಮ್ಯ ಬಂಗಲೆಯ ಮುಂದೆ ಕುಳಿತಿದ್ದರು. ಸರಕಾರಿ ನೌಕರಿಯಲ್ಲಿ ತಕ್ಕ ಸಾಫಲ್ಯವನು ಕಾಣದೆ ಮೌಲವಿಸಾಹೇಬರು ತ್ಯಾಗಪತ್ರ ಕೊಟ್ಟಿದ್ದರು. ಕೆಲದಿನಗಳಿಂದ ಸಮಾಜಸೇವೆಯಲ್ಲಿ ತೊಡಗಿ ದ್ದರು. ಹಿಂದು ಮುಸ್ಲಿಂ ಮೈತ್ರಿ ಸಾಧನೆಗಾಗಿ 'ಅಂಜುಮನ ಇತ್ತಹಾದ' ಸಂಸ್ಥೆ ಸ್ಥಾಪಿಸಿದ್ದರು. ವರ್ಗಣಿ ಶೇಖರಿಸಲೆಂದು ಇತ್ತ ಬಂದಿದ್ದರು. ಅವರು ಮಾತನಾಡುತ್ತಿರುವಾಗ ಫೈಜು–ಕರ್ತಾರಸಿಂಹರು ಬಂದು ಶರಣೆಂದರು.

"ಏನು, ಎಲ್ಲಾ ನೆಟ್ಟಗೇ ?" ಜ್ಞಾನಶಂಕರರು ಪ್ರಶ್ನಿಸಿದರು.

"ಏನು ಪಾಡು ! ರಾತ್ರಿ ಯಾರೋ ಖಾನಸಾಹೇಬರನ್ನು ಕೊಂದು ಹಾಕ್ಯಾರು." ಫೈಜು ವರದಿ ಮಾಡಿದ.

ಈಜಾದ ಹುಸೇನ ಬೆಚ್ಚಿಬಿದ್ದರು. ಜ್ಞಾನಶಂಕರರು ಕೊಂಚವೂ ವಿಚಲಿತರಾಗಲಿಲ್ಲ— ಮೊದಲೇ ಅರಿತಿದ್ದರೋ ಎಂಬ ಹಾಗಿದ್ದರು. "ನೀವೆಲ್ಲಿ-ದ್ದಿರಿ ? ಎಲ್ಲಿಯಾದರೂ ಸಂಚಾರ ನಡೆಸಿದ್ದಿರೋ ಏನು ಅಫೀಮಿನ ಅಮಲೇರಿ ಬಿದ್ದಿದ್ದಿರೊ ?" ಎಂದು ಕೇಳಿದರು.

"ಚಾವಡ್ಯಾಗs ಇದ್ದಿವಿ ಹುಜೂರ. ಆದರೆ ಯಾರಿಗೆ ಗೊತ್ತಿರಿ ಇಂತ ಅನರ್ತ ಆಕ್ಕಯ್ತಂತ?"

"ಏಕೆ ಗೊತ್ತಾಗಲಿಲ್ಲ? ಹಾವು ತುಳಿಯುವವನಿಗೆ ಅದರ ಹಲ್ಲೊಳಗೆ ವಿಷ ಇರುವುದು ತಿಳಿದಿರಲೇಬೇಕು. ಜಮೀನುದಾರಿ ನಡೆಸುವುದೆಂದರೆ ಹಾವಾಡಿಸಿದ ಹಾಗೆ. ಹಾವಿಗೆ ಕಚ್ಚಲು ಅವಕಾಶ ಕೊಡುವ ಹಾವಾಡಿಗ ಹುಂಬನೇ ಸರಿ. ಇರಲಿ, ಕೊಲೆಗಾರ ಯಾರೇನಾದರೂ ತಿಳಿದಿದೆಯೆ?"

"ಹಾಂ, ಅವನೇ ಆ ಮನೋಹರ ಅಹೀರ. ಆತನೇ ನಸುಕಿರುತಾನs ಹೋಗಿ ಠಾಣೇಕ್ಕ ಒಪ್ಪಿಗೆ ಕೊಟ್ಟ. ಮದ್ಯಾನ್ನ ಠಾಣೇದಾರು ಬಂದು ಪಂಚ-ನಾಮೆ ನಡಸ್ಯಾರು. ಖಾನಸಾಹೇಬರ ತಂತಿ ಹುಜೂರರಿಗೆ ಸಿಕ್ಕಿತ್ತೆ?"

ಅಕಸ್ಮಾತ್ ಪ್ರೇಮಶಂಕರರು ಪ್ರಭಾಶಂಕರರೊಂದಿಗೆ ಬಂದರು. "ಯಾವಾಗ ಬಂದೆ? ಎಲ್ಲ ಕ್ಷೇಮವೆ?" ಎಂದು ಪ್ರೇಮಶಂಕರರು ಕೇಳಿದರು.

ಜ್ಞಾನಶಂಕರರು ರುಕ್ಷವಾಗಿ ಉತ್ತರವಿತ್ತರು: "ಬಂದೆ. ಕ್ಷೇಮ ಸಮಾಚಾರ ಇವರನ್ನು ಕೇಳು. ಲಖನಪುರದವರು ಗೌಸಖಾನನ್ನು ಕೊನೆ-ಗಾಣಿಸಿಬಿಟ್ಟಿದ್ದಾರೆ!"

ಪ್ರೇಮಶಂಕರರು ಸ್ತಂಭಿತರಾದರು. "ಅಂ ಯಾವಾಗ?" ಎಂಬ ಉದ್ಗಾರ ಹೊರಟಿತು ಬಾಯಿಂದ.

"ನಿನ್ನೆ ರಾತ್ರಿ."

"ವಿಷಯವಾದರೂ ಏನು?"

"ಮತ್ತೇನು? ಊರವರ ದುರುಳತನ. ನಾನು ಹುಲ್ಲುಗದ್ದೆಗೆ ಪ್ರತಿಬಂಧ ಮಾಡಿದೆ. ಅಲ್ಲಿ ತೋಟ ಮಾಡಬೇಕೆಂದು ನನ್ನ ವಿಚಾರವಿತ್ತು— ಸರಿ, ಕೊಲೆಗೇ ಉದ್ಯುಕ್ತರಾದರು!"

"ಕೊಲೆಗಾರ ಯಾರಂತೆ?"

"ಮನೋಹರ ಮುಂಜಾನೆ ಠಾಣೆಗೆ ಹೋಗಿ ಒಪ್ಪಿಗೆ ಹೇಳಿಕೆ ಕೊಟ್ಟ ನಂತೆ. ತಾನೊಬ್ಬನೇ ಈ ಕೆಲಸ ಮಾಡುವಷ್ಟು ಧೈರ್ಯ ಅವನಿಗಿಲ್ಲ ಎಂದು ನನಗೆನಿಸುತ್ತಿದೆ ನಿಸ್ಸಂದೇಹವಾಗಿ ಇಡೀ ಊರೇ ಕೂಡಿದೆ."

ಪ್ರೇಮಶಂಕರರು ಮೆತ್ತಗೆ ಉತ್ತರವಿತ್ತರು: "ಒಬ್ಬನದೇ ಕೆಲಸ ವೆಂದು ನಂಬಿಕೆಯಾದರೆ ಇಡೀ ಊರನ್ನು ಗಾಸಿಸುವುದು ಸರಿಯಾಗಲಿಕ್ಕಿಲ್ಲ."

ಜ್ಞಾನಶಂಕರರಿಗೆ ಸಿಟ್ಟು ಬಂದಿತು. "ಒಳ್ಳೇದರಿ. ತಾವು ಈ ವಿಷಯ ದಲ್ಲಿ ಸತ್ಯನ್ಯಾಯಗಳ ಸೋಗು ತೆಗೆಯಬೇಡಿರಿ. ಅನಿವಾರ್ಯವಾಗಿ ನಾನು ಸ್ಪಷ್ಟ ಹೇಳುತ್ತೇನೆ. ನಿನ್ನ ಬಲದಿಂದಲೇ ಹಾರಾಡುತ್ತಾರೆ ಅವರು. ನೀನು ಯಾವಗಲೂ ನನ್ನ ವಿರುದ್ಧ ಅವರಿಗೆ ಸಹಾಯ ಮಾಡಿದ್ದೀ, ಭಾಗಾದಿತನ ಸಾಧಿಸಿದ್ದೀ. ನಿನ್ನ ಈ ಸೋದರಭಾವ ಅವರ ತಲೆ ತಿರುಗಿಸಿದೆ. ಅವರ ಹೃದಯದಿಂದ ನನ್ನ ಭೀತಿಯೇ ಹಾರಿಹೋಗುತ್ತಿದೆ. ನಿನ್ನ ಸಿದ್ಧಾಂತಗಳ ಬಗ್ಗೆ ನನಗೆ ಆದರವಿದೆ. ಆದರೆ ನೀನು ಬೇವಿನಮರಕ್ಕೆ ಹಾಲೆರೆಯುತ್ತಿರುವೆ; ಹಣ್ಣು ಸವಿಯಾಗುವವೆಂದು ನಿರೀಕ್ಷಿಸುವೆ. ಇಂತಹ ಕುಪಾತ್ರರೊಡನೆ ಉಚ್ಚಭಾವದಿಂದ ನಡೆದುಕೊಳ್ಳುವುದೆಂದರೆ ಹುಚ್ಚರ ಕೈಯೊಳಗೆ ಕೊಳ್ಳಿ ಕೊಟ್ಟಂತೆ."

ಪ್ರೇಮಶಂಕರರು ತಿರುಗಿ ಮಾತನಾಡಲಿಲ್ಲ; ಮುಖ ಮೇಲೆತ್ತಲಿಲ್ಲ. ಈ ಮಾತು ರುಚಿಸದೆ ಪ್ರಭಾಶಂಕರರು ಎದ್ದುಹೋದರು. ಪ್ರೇಮಶಂಕರರು ಆತ್ಮಪರೀಕ್ಷೆಯಲ್ಲಿ ಮೌನವಾಗಿ ಕುಳಿತಿದ್ದರು. ದೀನಗ್ರಾಮೀಣರ ಬಗ್ಗೆ ಸಾಧಾರಣ ಸಜ್ಜನತೆ ತೋರುವುದರ ಪರಿಣಾಮ ಇಷ್ಟು ಭಯಂಕರವಾಗುವು ವುದೆಂಬುವುದು ಹೊಸ ಅನುಭವ ಅವರಿಗೆ. ಒಂದೇ ಜೀವ ಹೋಗಲಿಲ್ಲ, ಇನ್ನೂ ಎಷ್ಟೋ ಜೀವಗಳ ಬಲಿದಾನವಾಗುವ ಭಯವಿತ್ತು. ದೇವರೇ ಈ ಬಡವರ ಮೇಲೆ ಕೃಪೆಮಾಡು. ಅವರ ಸೇವೆಯನ್ನು ಸದ್‌ಹೃದಯ ದಿಂದ ಮಾಡಲಿಲ್ಲ ನಾನು. ದ್ವೇಷಭಾವ ನನಗೆ ಪ್ರೇರಕವಾಗಿತ್ತು. ಜ್ಞಾನ ಶಂಕರರನ್ನು ಕೀಳ್ಮಾಡಲು ಬಯಸುತ್ತಿದ್ದೆ. ನನ್ನ ಈರ್ಷ್ಯಾಗ್ನಿಯ ಕುಂಡ ದಲ್ಲಿ ಎಷ್ಟು ಪ್ರಾಣಗಳನ್ನು ನೂಕಿದೆ ನಾನು! ಇನ್ನು ಜ್ಞಾನಶಂಕರನಿಗೆ ಎಷ್ಟು ಕೆಟ್ಟೆನಿಸಿದರೂ ಈ ಅಭಾಗ್ಯರಿಗೆ ಆದ ಸಹಾಯ ಮಾಡಲೇ ಬೇಕು; ಬೇರೆ ಮಾರ್ಗವಿಲ್ಲ.

"ಕಕ್ಕಾ ಅವ್ವ ಅಂದಳು—ಹೊತ್ತು ಬಹಳವಾಗಿದೆ; ಹಾಜೀಪುರಕ್ಕೆ ಇನ್ನೆಲ್ಲಿ ಹೋಗುತೀರಿ–ಇಲ್ಲೇ ಊಟಮಾಡಿ ಇವತ್ತು ಇಲ್ಲೇ ಇದ್ದುಬಿಡಿರಿ." ಮಾಯಾಶಂಕರ ಬಂದು ಹೇಳಿದ.

ಶೋಕಮಯ ವಿಚಾರಗಳ ತರಂಗಗಳಲ್ಲಿ ತಾವು ಹಾಜೀಪುರಕ್ಕೆ ಹೋಗುವುದಿದೆ ಎಂಬುದನ್ನೇ ಅವರು ಮರೆತಿದ್ದರು. ಈಗ ಎಚ್ಚತ್ತು ಮಾಯಾಶಂಕರನನ್ನು ಆದರಿಸುತ್ತ “ಇಲ್ಲ ಮಗೂ, ನಾನು ಹೋಗುತ್ತೇನೆ. ಇನ್ನೂ ಬಹಳವಾಗಿಲ್ಲ ರಾತ್ರಿ. ಇಲ್ಲೇ ಉಳಿದುಬಿಟ್ಟರೆ ಅಲ್ಲಿ ಬಹಳ ತೊಂದರೆಯಾಗುತ್ತದೆ.” ಎಂದು ಎದ್ದು ಜ್ಞಾನಶಂಕರರ ಕಡೆ ಕರುಣನೇತ್ರಗಳಿಂದ ನೋಡಿ ನೀರವವಾಗಿ ಹೊರಟುಹೋದರು. ಅವರು ಅವರ ಕಡೆ ದೃಷ್ಟಿಕೂಡ ಚೆಲ್ಲಲಿಲ್ಲ.

ಮುಂದೆ ಬಹಳ ಹೊತ್ತು ಈ ದುರ್ಘಟನೆಯನ್ನು ಕುರಿತು ಮಾತುಕತೆ ನಡೆದು, ಈಜಾದ ಹುಸೇನರು ಹೋದ ಬಳಿಕ ಜ್ಞಾನಶಂಕರರು ಒಳಗೆದ್ದು ಹೋದರು. “ಕೇಳಿದೆಯಾ, ಅಣ್ಣನವರು ಲಖನಪುರದಲ್ಲಿ ಮಾಡಿದ ಆಟ? ಜನರು ಗೌಸಖಾನನ್ನು ಕೊಂದಿದ್ದಾರಂತೆ” ಎಂದರು.

ಹೆಂಗುಸರಿಬ್ಬರೂ ದಿಗಿಲುಗೊಂಡು ಒಬ್ಬರವೋರೆ ಒಬ್ಬರು ನೋಡಿದರು.

“ನನಗೆ ಅಂಜಿಕೆಯಾಗುತ್ತಿದೆ— ಈ ಪ್ರಕರಣದಲ್ಲಿ ಅವನೂ ಸಿಕ್ಕಿಬೀಳಬಾರದು! ಪೋಲೀಸ್ ಜನ ಬಹಳ ಕುಟಿಲರಿರುತ್ತಾರೆ ಯಾರನ್ನಾದರೂ ಒಬ್ಬ ದೊಡ್ಡ ಮಂದಿಯನ್ನು ತೊಡಕಿಸದೆ ಇರುವುದಿಲ್ಲ. ಹಳ್ಳಿಗರನ್ನು ಬಲಾತ್ಕರಿಸಿ ಬಿಟ್ಟರೆ ಎಲ್ಲಾ ಬಯಲಿಗೆ ಹಾಕಿ, ಎಲ್ಲ ದೋಷವನ್ನೂ ಅಣ್ಣನ ತಲೆಯ ಮೇಲೆ ಹಾಕಿಬಿಡುತ್ತಾರೆ.” ಜ್ಞಾನಶಂಕರರು ಭಾಷ್ಯ ನುಡಿದರು.

ಶ್ರದ್ಧೆ ಭಾವನ ಕಡೆ ಕಾತರ ದೃಷ್ಟಿಯಿಂದ ನೋಡಿ ಮುಖ ತಗ್ಗಿಸಿದಳು. ತನ್ನ ಮನೋಭಾವಗಳನ್ನು ಪ್ರಕಟಿಸಲು ಅವಳು ಸಮರ್ಥಳಾಗಲಿಲ್ಲ. ವಿದ್ಯೆ, “ಠಾಣೇದಾರರ ಕಡೆ ಯಾಕೆ ಹೋಗಬಾರದು ನೀವು ಸ್ವಲ್ಪ? ಹೇಗಾದರೂ ಅವರನ್ನು ರಾಜಿ ಮಾಡಿಸಿರಿ” ಎಂದಳು.

“ಹೌದು, ಏನಾದರೂ ಮಾಡಲಿಕ್ಕೆ ಬೇಕು. ಆದರೆ ಸಣ್ಣ ಮನುಷ್ಯನಿಗೆ ಹೇಳಿಕೊಳ್ಳುವುದೆಂದರೆ ಎಂಥ ಅಪಮಾನ?— ಅಣ್ಣ ಇಂಥವನೆಂದು ನಾನು ತಿಳಿದಿರಲಿಲ್ಲ.”

ಶ್ರದ್ಧೆ ತಲೆಬಾಗಿಕೊಂಡೇ ಸರೋಷವಾಗಿ ಉತ್ತರವಿತ್ತಳು: “ಪೋಲೀಸರು ಅವರ ಮೇಲೆ ಯಾವ ಅಪರಾಧವನ್ನೇ ಹೊರಿಸಲಿ;— ಅವರು ಅಂತಹ

ಮನುಷ್ಯರಲ್ಲ; ಹಳ್ಳಿಯವರನ್ನು ಕೆರಳಿಸುತ್ತ ತಿರುಗುವವರಲ್ಲ. ಹಳ್ಳಿಯವರ ರೀತಿ ಅವರಿಗೆ ಮೊದಲೇ ತಿಳಿದಿದ್ದರೆ ಇಂತಹ ಪ್ರಸಂಗವೂ ಬರುತ್ತಿರಲಿಲ್ಲ. ಏನೇ ಇರಲಿ, ನೀವು ಠಾಣ್ಯದಾರರನ್ನು ಮೆಚ್ಚಿಸಬೇಕಾದ ಅಗತ್ಯವಿಲ್ಲ. ಅವರು ತಮ್ಮ ರಕ್ಷಣೆ ತಾವು ಮಾಡಿಕೊಳ್ಳುವರು."

"ನಿಮಗೆ ನಾನು ಯಾವಾಗಲೂ ಹೇಳುತ್ತ ಬಂದೆ— ಹಳ್ಳಿಯವರ ಕೂಡ ರೊಚ್ಚು ಕಲಕಬೇಡಿರಿ ಎಂದು. ತಪ್ಪಿಸಿಕೊಳ್ಳಲು ದಾರಿ ಇಲ್ಲದಾಗ ಬೆಕ್ಕೂ ಹುಲಿಯಾಗುತ್ತದೆ. ಆದರೆ ನೀವೆಂದೂ ಕಿವಿಗೊಡಲೇ ಇಲ್ಲ ನನ್ನ ಮಾತಿಗೆ." ಎಂದಳು ವಿದ್ಯೆ.

"ಎಂತಹ ತಳಬುಡ ಇಲ್ಲದ ಮಾತನಾಡುತ್ತೀ ನೀನು. ಕುಳಗಳಿಗೆ ಬಗ್ಗಿ ನಡೆಯುವವ ಎಂತಹ ಜಮೀನುದಾರ! ನನಗೆ ಎದುರು ನಿಲ್ಲುವ ಸಾಹಸವಿತ್ತೇ ಅವರಲ್ಲಿ? ತಮ್ಮ ಮನೆಗೇ ಬೆಂಕಿ ಹಚ್ಚುವ ನುನೆಮುರಕ ರಿರುವಾಗ ಆಗಲಾರದ್ದೂ ಆಗುತ್ತದೆ. ಅಣ್ಣ ಇವರನ್ನು ಏರಿಸದಿದ್ದರೆ ಇವರ ಉಪದ್ರವ ಇಷ್ಟು ಹೆಚ್ಚುತ್ತಿರಲಿಲ್ಲ. ಒಮ್ಮೆಯಲ್ಲ ಸಾವಿರ ಸಲ ಹೇಳುತ್ತೇನೆ ಈ ಮಾತು." ಜ್ಞಾನಶಂಕರರೆಂದರು.

ಶ್ರದ್ಧೆ ಕೇಳಲಾರದೆ ತನ್ನ ಕೋಣೆಗೆ ಹೊರಟುಹೋದಳು.

## ೨೬

ಠಾಣ್ಯದಾರನು ತನ್ನ ಸ್ವಾರ್ಥಕ್ಕಾಗಿ ಪ್ರಕರಣವನ್ನು ಬೆಳೆಸಿಯೇ ಬೆಳೆಸುತ್ತಾನೆ; ಇಡೀ ಊರನ್ನೇ ಸಿಕ್ಕಿಸಲು ಪ್ರಯತ್ನಿಸುತ್ತಾನೆ; ಎಲ್ಲವೂ ತಮಗೆ ಅನುಕೂಲವಾಗಿಯೇ ಇದೆ; ಈ ವಿಷಯದಲ್ಲಿ ತಾವೇನೂ ಕೈಕಾಲಾಡಿಸಬೇಕಾಗಿಲ್ಲ— ಎಂಬ ಭರವಸೆಯಲ್ಲಿ ಜ್ಞಾನಶಂಕರರು ನಿಶ್ಚಿಂತರಾಗಿದ್ದರು. ಪೋಲೀಸರು ತಮ್ಮ ಜಮೀನದಾರ ಚಾವಡಿಯನ್ನು ಶೋಧಿಸದೆ ಇರುವುದಿಲ್ಲ; ಅಣ್ಣನ ನಡತೆಯ ಬಗ್ಗೆ ನಿಷೇಧವನ್ನು ವ್ಯಕ್ತಪಡಿಸಿದ ತಮ್ಮ ಒಂದೆರಡು ಪತ್ರಗಳು ಅಲ್ಲಿ ಸಿಕ್ಕುತ್ತವೆ; ಅಷ್ಟರಿಂದ, ಪ್ರಜಾವಾದದ ದೆಸೆಯಿಂದ ಮೊದಲೇ ಪೋಲೀಸಿನವರ ಕಣ್ಣಲ್ಲಿ ಒತ್ತುತ್ತಿದ್ದ ಅಣ್ಣನೇ ಈ ಸಂಚಿನ ಪ್ರೇರಕನೆಂದು ಸಿದ್ಧಪಡಿಸಲು ಠಾಣ್ಯದಾರನು ಪ್ರಕರಣಕ್ಕೆ ಬಣ್ಣಕೊಡುತ್ತಾನೆ ಎಂದೂ ಭಾವಿಸಿದ್ದರು.

ಅದುದೂ ಅಕ್ಷರಶಃ ಹಾಗೆಯೆ. ಟ್ಯಾಕ್ಸಿನ ಬ್ರಹ್ಮಾಸ್ತ್ರದಿಂದ ಬಿಸೇಸರನನ್ನು ಒಡೆದುಕೊಳ್ಳಲಾಯಿತು. ಬಹುಶಃ ಊರಿನ ಎಲ್ಲ ಅವಿಧೇಯರನ್ನೂ ಪ್ರಕರಣದಲ್ಲಿ ತೊಡಕಿಸಲಾಯಿತು. ಹಾಜೀಪುರದಲ್ಲಿ ಪ್ರೇಮಶಂಕರರ ಮನೆಯ ಪರಿಶೋಧನೆಯಾಗಿ ಅವರನ್ನೂ ಕೈಸೆರೆ ಹಿಡಿಯಲಾಯಿತು. ಇದನ್ನು ಕೇಳಿದಾಗ ಜ್ಞಾನಶಂಕರರ ಮೈಗೂದಲು ನೆಟ್ಟಗಾದವು. ಕಣ್ಣುಗಳಲ್ಲಿ ನೀರೂ ಬಂದಿತು. ಬಂಧುಪ್ರೇಮವು ಒಂದುಕ್ಷಣ ಕ್ಷುದ್ರ ಭಾವಗಳನು ಹಿಮ್ಮೆಟ್ಟಿಸಿತು. ಮರುಕ್ಷಣದಲ್ಲಿ ಜಾಮೀನಿನ ಪ್ರಶ್ನೆ ಎದುರಿಗೆ ಬಂದು ಈ ಆವೇಗ ಶಾಂತವಾಯಿತು. ಈ ಸುದ್ದಿ ಮನೆಯಲ್ಲಿ ದೊಡ್ಡ ರಂಬಾಟವನ್ನೇ ಎಬ್ಬಿಸಿತು.

ಪ್ರೇಮಶಂಕರರು ನಗರದಿಂದ ಬೇರೆಯೆ ಇದ್ದರು. ದೊಡ್ಡಮಂದಿಯ, ಶ್ರೀಮಂತರ ಸಂಪರ್ಕ ಇಲ್ಲವೆಂಬಷ್ಟು ಕಡಿಮೆ. ಹೆಚ್ಚಾಗಿ, ಕಾಲೇಜು ಯುವಕರು, ಕಚೇರಿಗಳಲ್ಲಿಯ ಕೆಳ–ನೌಕರರು, ಹಳ್ಳಿಗರು ಅವರ ನಿಕಟ ಪರಿಚಿತರು, ಹಿತಚಿಂತಕರು. ಅವರ ಬಂಧನದ ವಾರ್ತೆ ಕೇಳಿದೊಡನೆ ಸಾವಿರಾರು ಜನ ನೆರೆದು ಪೋಲೀಸ್ ಠಾಣ್ಯದವರೆಗೂ ಹಿಂಬಾಲಿಸಿದರು. ಆದರೆ, ಜಾಮೀನು ಕೊಡುವಂತಹ ಸಮರ್ಥನು ಒಬ್ಬನೂ ಇರಲಿಲ್ಲ.

ಪ್ರಭಾಶಂಕರರು ಉನ್ಮತ್ತನಂತೆ ಜ್ಞಾನಶಂಕರರ ಬಳಿ ಓಡಿಬಂದರು. " ಕೇಳಿದೆಯಾ ತಮ್ಮಾ, ಮನೆತನದ ಮರ್ಯಾದೆ ಮಣ್ಣುಪಾಲಾಗುತ್ತಿದೆ ... ಜಾಮೀನು ನಡೆಯಲಿಕ್ಕಿಲ್ಲವೆ ? "..... ಎಂದು ಗೋಳಿಪ್ಟು ಗೋಗರೆದರು.

ಈ ಕಾತರ ಅಧೀರತೆಗೆ ಜ್ಞಾನಶಂಕರರು ರುಷ್ಟರಾಗಿ ಉತ್ತರವಿತ್ತರು : " ಗೊತ್ತಿಲ್ಲ. ಅದು ನ್ಯಾಯಾಧೀಶರ ಇಚ್ಛೆ ! "

" ಹಾಗಾದರೆ ನ್ಯಾಯಾಧೀಶರನ್ನು ಯಾಕೆ ಕಾಣಬಾರದು ? ನಿನಗಾದರೂ ಮರ್ಯಾದೆಯ ಪ್ರಶ್ನೆ ಅಲ್ಲವೆ ? "

" ಅದು ನನ್ನ ಕೈಯಿಂದಾಗದ ಮಾತು. ಯಾವ ಭರವಸೆಯಿಂದ ನಾನು ಹೊಣೆಯಾಗಲಿ. ಆತ ತನ್ನ ಹಟ ಬಿಡುವವನಲ್ಲ. ನನ್ನನ್ನೂ ತನ್ನ ಜೊತೆಯಲ್ಲಿ ಎಳೆದುಕೊಂಡು ಮುಳುಗಿಸುತ್ತಾನೆ;— ನನಗೆ ಚೆನ್ನಾಗಿ ಗೊತ್ತು. "

ಪ್ರಭಾಶಂಕರರು ನಿಟ್ಟುಸಿರೆಳೆದರು. "ಭಗವಂತಾ ಇದು ಅಣ್ಣ ತಮ್ಮಂದಿರ ರೀತಿ! ಆಗಲಿ," ಎಂದು ಎದ್ದರು.

ರಾತ್ರಿ ಎಂಟಾಗಿತ್ತು. ಆದರ ಪರಿವೆಯೂ ಇಲ್ಲದೆ ಪ್ರಭಾಶಂಕರರು ಮ್ಯಾಜಿಸ್ಟ್ರೇಟರಲ್ಲಿಗೆ ತೆರಳಿದರು. ಅತ್ಯಂತ ಭಕ್ತಿಭಾವದಿಂದ ಕೈಜೋಡಿಸಿ ನಿಂತು. ಅತ್ಯಂತ ದೀನ ವಾಣಿಯಿಂದ ತಮ್ಮ ಮನೆತನದ ಗೌರವವನ್ನು ಹಾಡಿಕೊಂಡು, ರಾಜಭಕ್ತಿಯನ್ನು ತೋಡಿಕೊಂಡು ಪರಿಪರಿಯಾಗಿ ಬೇಡಿಕೊಂಡರು. ಅಂತೂ ಕೊನೆಗೆ ಸಾಹೇಬರು ಕರಗಿದರು. ಜಾಮೀನು ಸ್ವೀಕರಿಸಲು ಒಪ್ಪಿದರು. ಆದರೆ ರಾತ್ರಿಯಾಗಿದ್ದುದರಿಂದ ಆಗ ಯಾವ ಏರ್ಪಾಡೂ ಮಾಡಲಾಗಲಿಲ್ಲ.

ಮರುದಿನ ಪ್ರಭಾಶಂಕರರು ಕೂಳುನೀರೆನ್ನದೆ ಆ ಕಚೇರಿ ಈ ಕಚೇರಿ ಎಡತಾಕಿದಮೇಲೆ, ಸಂಜೆಯ ನಾಲ್ಕು ಗಂಟೆಗೆ ಮ್ಯಾಜಿಸ್ಟ್ರೇಟರು ಜಾಮೀನು ಮಾನ್ಯ ಮಾಡಿದರು;— ಸಾವಿರ ಎರಡು ಸಾವಿರದ್ದಲ್ಲ, ಹತ್ತು ಸಾವಿರದ್ದು, ಅದೂ ನಗದು. ಪ್ರಾಣ ನೆತ್ತಿಯಿಂದಲೇ ಹಾರಿದಂತಾಯಿತು ಅವರಿಗೆ. ಮನೆಗೆ ಬಂದು ನಿರ್ಜೀವವಾದ ದೇಹವನ್ನು ಮಂಚದಮೇಲೆ ಕೆಡವಿ ಯೋಚಿಸತೊಡಗಿದರು. ಹತ್ತುಸಾವಿರ ರೂಪಾಯಿ ಎಲ್ಲಿಂದ ಒದವಿಸುವುದು? ನಂಬಿಗೆಯಿಂದ ಇಷ್ಟು ಹಣ ಯಾರು ಕೊಟ್ಟಾರು? ಆಸ್ತಿ ಅಡವು ಹಾಕಲೇ? ಮನೆಯವರು ಒಪ್ಪಲಾರರು. ಏನು ಮಾಡಲಿ?— ಬಹಳ ಹೊತ್ತು ಚಿಂತಿಸಿದರು.

ಹೆಂಡತಿ ಬಂದು ಊಟಕ್ಕೆ ಕರೆದಳು. ಪ್ರಭಾಶಂಕರರು ವಿನೀತಭಾವದಿಂದ ಅವಳ ಕಡೆ ದಿಟ್ಟಿಸುತ್ತ "ನನಗೆ ಸ್ವಲ್ಪವೂ ಹಸಿವೆಯಿಲ್ಲ" ಎಂದರು.

"ಇವತ್ತು ಕುಂಬಳಕಾಯಿ ಒಡೆ ಮಾಡಿದ್ದೇನೆ. ನೀವು ಉಣ್ಣುವುದಿಲ್ಲ ಎಂದು ಗೊತ್ತಿದ್ದರೆ ನಾನೆಲ್ಲಿ ಮಾಡುತ್ತಿದ್ದೆ?" ಎಂದಳು ಗೃಹಿಣಿ.

ಪ್ರಭಾಶಂಕರರ ಉದಾಸೀನತೆ ಸರಿದುಹೋಯಿತು. "ಆಗಲಿ, ತಟ್ಟೆ ಬಡಿಸು. ಹಸಿವೆಯೇನೂ ಇಲ್ಲ. ಒಂದೆರಡು ತುತ್ತು ತಿಂದರಾಯಿತು." ಎಂದರು.

ಊಟವಾದಮೇಲೆ ಅವರನ್ನು ಮತ್ತೆ ಅದೇ ಚಿಂತೆ ಆವರಿಸಿತು. ಹಣ ತರುವುದು ಎಲ್ಲಿಂದ? ಗೃಹಿಣಿ ಸಾಲಮಾಡಕೂಡದೆಂದು ಸ್ಪಷ್ಟವಾಗಿ

ಹೇಳಿದಳು. ಇಡೀ ರಾತ್ರಿ ಅವರಿಗೆ ಮತ್ತೊಮ್ಮೆ ನಿದ್ದೆಯಿಲ್ಲ. ಆಕೆಯ ವಿರೋಧ ಎಷ್ಟಿದ್ದರೂ ತಾವು ತಮ್ಮ ಕರ್ತವ್ಯ ಪೂರೈಸಲೇಬೇಕೆಂದು ನಿಶ್ಚಯಿಸಿ ಕೊಂಡರು. ಹೊತ್ತು ಮೂಡುವುದರೊಳಗೇ ದೀನಾನಾಥ ಸೆಟ್ಟರಲ್ಲಿಗೆ ಹೋಗಿ ಸಂಕಟವನ್ನು ಹೇಳಿಕೊಂಡರು. ಬಹುದಿನಗಳ ಸಂಬಂಧ; ಇವರ ಅನುಗ್ರಹದಿಂದಲೇ ಸೆಟ್ಟರು ಜಮೀನುದಾರರಾಗಿದ್ದರು. ಅವರು ಒಪ್ಪಿ ಕಾಗದ ಪತ್ರ ಮಾಡಿಸಿಕೊಂಡು ಹಣ ಕೊಟ್ಟರು. ಪ್ರಭಾಶಂಕರರು ಸೆಟ್ಟಿಯನ್ನು ಮನಸಾರೆ ಅಭಿನಂದಿಸಿ ಹಾಡಿಹರಸಿದರು. ಅಲ್ಲಿಂದ ಸೆಟ್ಟಿಗೆ ಕಚೇರಿಗೆ ಹೋಗಿ ಜಾಮೀನು ತುಂಬಿದರು. ಆಗವರ ಹೃದಯ ತುಂಬಾ ಪ್ರಫುಲ್ಲಿತವಾಗಿತ್ತು ಈ ಭಕ್ತಿಯಿಂದ ತಮ್ಮ ಅಣ್ಣನಿಗೆ ಎಂತಹ ಸಂತೋಷವಾಗಿದ್ದೀತು

ಹೊತ್ತು ಹನ್ನೊಂದಾಗಿತ್ತು. ಮ್ಯಾಜಿಸ್ಟ್ರೇಟರ ನ್ಯಾಯಾಲಯದಲ್ಲಿ ಲಖನಪುರದ ಆರೋಪಿಗಳು ಬೇಡಿತೊಟ್ಟು ನಿಂತಿದ್ದರು, ಈ ವಿಚಿತ್ರ ಜೀವ ಧಾರಿಗಳನ್ನು ನೋಡುವುದಕ್ಕಾಗಿ ಸಾವಿರಗಟ್ಟಲೆ ಜನ ಸೇರಿತ್ತು. ಎಲ್ಲರಿಗೂ ಮನೋಹರನನ್ನು ನೋಡುವ ಆತುರ ಕೆಲವರು ಅವನನ್ನು ಧಿಕ್ಕರಿಸಿದರೆ, ಕೆಲವರು ಸೆಟ್ಟಿಗೆ ಮಾಡಿದ ಅತ್ಯಾಚಾರಿಗಳಿಗೆ ಹೀಗೆಯೇ ಆಗಬೇಕು ಎನ್ನುತ್ತಿ-ದ್ದರು. ಎದುರಿಗೆ ಒಂದು ಮರದಡಿಯಲ್ಲಿ ಬಿಲಾಸಿ ಖಿನ್ನಳಾಗಿ ಕುಳಿತಿದ್ದಳು. ಬಲರಾಜನ ಮುಖದಲ್ಲಿ ನಿರ್ಭಯತೆ ಮಿನುಗುತ್ತಿತ್ತು. ಡಪಟಸಿಂಹ ಮತ್ತು ದುಖರನ ಚಿಂತಾಗ್ರಸ್ತರಂತೆ ಕಾಣುತ್ತಿದ್ದರು. ಕಾದಿರಖಾ ಧೈರ್ಯದ ಮೂರ್ತಿಯಾಗಿದ್ದ. ಮನೋಹರ ಮಾತ್ರ ನಾಚಿಕೆಯಿಂದ, ಪಶ್ಚಾತ್ತಾಪ ದಿಂದ ಉದ್ವಿಗ್ನನಾಗಿದ್ದ. ತನ್ನಿಂದಾಗಿಯೇ ಊರಿಗೆ ಈ ವಿಪತ್ತು ಬಂದಿತೆಂಬ ವಿಚಾರ ಒಂದು ಕ್ಷಣವೂ ಮರವೆಗೆ ಬೀಳದೆ ಎದೆಯನ್ನು ಕೊರೆಯುತ್ತಿತ್ತು. ಅಭಿಯುಕ್ತರಿಂದ ಸ್ವಲ್ಪ ದೂರದಲ್ಲಿ ಬಿಸೇಸರ ಸಾಹ ನಿಂತಿದ್ದ—ಗ್ಲಾನಿಯ ಸಜೀವ ಮೂರ್ತಿಯೇ ಅವನು ಅವನ ಸುತ್ತಲೂ ಪೋಲೀಸರು. ಎಲ್ಲರ ಹಿಂದೆ ಪ್ರೇಮಶಂಕರರಿದ್ದರು. ಹೊಣೆಯ ಆಧಾರದಿಂದ ತಮ್ಮ ಬಿಡುಗಡೆ-ಯಾದುದನ್ನು ಕೇಳಿ ಅವರು ಮುಂದೆ ಹೋಗಿ " ಈ ಕೃಪೆಗಾಗಿ ನಾನು ತಮಗೆ ಕೃತಜ್ಞನಾಗಿದ್ದೇನೆ. ಆದರೆ ನನ್ನ ಈ ನಿರಪರಾಧಿ ಬಂಧುಗಳು ಬೇಡಿತೊಟ್ಟು ನಿಂತಿರುವಾಗ ಇವರನ್ನು ಅಗಲಿಹೋಗುವುದು ಉಚಿತವಾಗದು " ಎಂದರು.

ನೆರೆದ ಜನರ ಸಾವಿರಾರು ವಿಸ್ಮಯದ ದೃಷ್ಟಿಗಳು ಪ್ರೇಮಶಂಕರರ

ಮೇಲೆ ಬಿದ್ದವು. ಪ್ರಭಾಶಂಕರರು ಕರುಣ ಗದ್ಗದಕಂಠದಿಂದ ಅಂಗಲಾಚಿದರು : " ತಮ್ಮಾ, ನನ್ನಮೇಲೆ ದಯಮಾಡಪ್ಪ. ನಾನು ಹುಟ್ಟಿ ಒದ್ದಾಟದ ಕಡೆ, ಮನೆತನದ ಮರ್ಯಾದೆಯ ಕಡೆ, ಆಪ್ತೇಷ್ಟರ ಶೋಕವಿಲಾಪದ ಕಡೆ ಸ್ವಲ್ಪ ನೋಡು. "

ಪ್ರೇಮಶಂಕರರ ಕಣ್ಣುಗಳಲ್ಲಿ ಅಶ್ರುಗಳು ಒತ್ತರಿಸಿದವು. " ಕಕ್ಕಾ, ನಿಮ್ಮ ಪ್ರೇಮ ಸದಾಶಯಗಳಿಂದ ನಾನು ಅನುಗ್ರಹೀತನಾಗಿದ್ದೇನೆ. ಮಾನವ ಹೃದಯ ಎಷ್ಟು ಪವಿತ್ರ, ಎಷ್ಟು ಉದಾರ, ಎಷ್ಟು ವಾತ್ಸಲ್ಯಮಯವಾಗಿರುವುದೆಂಬುದರ ಅರಿವು ನನಗಿಂದಾಯಿತು. ನನ್ನ ಜೊತೆ ತಪ್ಪಿದರೆ ಈ ಜನ ಎದೆಗೆಡುವರು, ಎಲ್ಲರೂ ಹತಾಶರಾಗುವರು. ಆದುದರಿಂದ ಇವರೊಟ್ಟಿಗೆ ನಾನಿರುವುದು ಅವಶ್ಯ. ಇಲ್ಲಿ ನನಗೆ ಯಾವ ಕಷ್ಟವೂ ಇಲ್ಲ. ನಿಮ್ಮಲ್ಲಿ ನನ್ನದೊಂದು ವಿನಂತಿ: ನನಗೆ ವಕೀಲರ ಅಗತ್ಯವಿಲ್ಲ; ನನ್ನ ನಿರ್ದೋಷಿತೆಯನ್ನು ನಾನೇ ಪ್ರಮಾಣಿಸಿಕೊಡಬಲ್ಲೆ. ಸಾಧ್ಯವಾದರೆ ಈ ಬಾಯಿ ಇಲ್ಲದ ಬಡಪಾಯಿಗಳಿಗಾಗಿ ಒಬ್ಬ ವಕೀಲನನ್ನು ಕೊಡಿರಿ. ಇಲ್ಲದಿದ್ದರೆ ಇವರಿಗೆ ಅನ್ಯಾಯವಾಗುವ ಸಂಭವವಿದೆ. "

ಪ್ರಭಾಶಂಕರರು ಹತೋತ್ಸಾಹರಾಗಿ ನ್ಯಾಯಾಲಯದಿಂದ ಹೊರಬಿದ್ದರು.

## ೨೭

ತನಗಾಗಿ ವಕೀಲನ ಅಗತ್ಯವಿಲ್ಲೆಂದು ಪ್ರೇಮಶಂಕರರು ಸ್ಪಷ್ಟವಾಗಿ ಹೇಳಿದ್ದರೂ ಪ್ರಭಾಶಂಕರರ ಮನಸು ಕೇಳಲಿಲ್ಲ. ನಗರದ ನಾಮಾಂಕಿತ ವಕೀಲರನ್ನೆಲ್ಲ ಕಂಡು ಕೇಳಿದರು. ಒಬ್ಬನೂ ಒಪ್ಪಲಿಲ್ಲ. ಈ ಪ್ರಯತ್ನ ವಿಫಲವಾಗಲು ಮಿಕ್ಕ ಆರೋಪಿಗಳ ದೆಸೆಯಿಂದ ಅವರು ಪ್ರಯತ್ನಿಸಲೇ ಇಲ್ಲ. ಅವರ ಸಹಾನುಭೂತಿಯ ವ್ಯಾಪ್ತಿ ಅಷ್ಟೇ—ತಮ್ಮ ಕುಟುಂಬದ ಮಟ್ಟಿಗೆ.

ಅಭಿಯೋಗ ಸಿದ್ಧವಾಗಿ ವಿಚಾರಣೆ ಆರಂಭವಾಯಿತು. ಪೋಲಿಸಿನವರ, ತಹಸೀಲದಾರನ, ಜವಾನರ, ಫೈಜುವಿನ ಹೇಳಿಕೆ ಸಾಕ್ಷ್ಯಗಳಾಗಿ, ಎಂಟನೆಯ ದಿನ ಜ್ಞಾನಶಂಕರರ ಸರದಿ ಬಂದಿತು. ಎಲ್ಲರಿಗೂ ಕುತೂಹಲ– ಇವರ ಹೇಳಿಕೆ

ಏನಾಗುತ್ತದೊ ಎಂದು. ಇವರ ಹೇಳಿಕೆ ಪ್ರೇಮಶಂಕರರಿಗೆ ಬ್ರಹ್ಮಪಾಶ-ವಾಗುತ್ತದೆಂದು ನಂಬಿದ್ದರು ಪೋಲಿಸರು. ಆದರೆ, ಅವರಿಗೆ, ಅವರಿಗಿಂತ ಹೆಚ್ಚಾಗಿ ಶ್ರೋತೃಗಳಿಗೆ ವಿಸ್ಮಯವಾಗುವಂತಾಯಿತು. ಜ್ಞಾನಶಂಕರರು ಲಖನಪುರದವರ ಬಗ್ಗೆ ತಮ್ಮ ಒಡಲುರಿಯನ್ನು ಹೊರಹಾಕಿದರಾಗಲಿ, ಪ್ರೇಮಶಂಕರರ ಹೆಸರನ್ನು ಕೂಡ ಎತ್ತಲಿಲ್ಲ. ಬಳಿಕ ಜ್ವಾಲಾಸಿಂಹರ ಸಾಕ್ಷ್ಯವೂ ಆಯಿತು. ಪ್ರೇಮಶಂಕರರನ್ನು ಸಿಕ್ಕಿಸುವ ಸರಕಾರೀ ವಕೀಲರ ಪ್ರಶ್ನೆಗಳೆಲ್ಲ ಹುಸಿಹೋದವು

ಬಿಸೇಸರ ಸಾಹನ ಹೇಳಿಕೆ ದೊಡ್ಡದಾಗಿತ್ತು, ಕ್ರಮಬದ್ಧವಾಗಿತ್ತು, ಸಾರಗರ್ಭಿತವಾಗಿತ್ತು ಅಶಿಕ್ಷಿತಗಾವಿಲನಿಗೆ ಇಂತಹ ವಾಕ್ಚಾತುರ್ಯ ಎಲ್ಲಿಂದ ಬಂದಿತೆಂದು ಎಲ್ಲರಿಗೂ ಅಚ್ಚರಿ. ಅವನು ಘಟನೆಗಳನ್ನು ಪ್ರಕಟಗೊಳಿಸುವ ಬಗೆ, ವಾಸ್ತವಿಕತೆಯ ಬಣ್ಣದಿಂದ ಅವಿಶ್ವಾಸಪಡುವುದಕ್ಕೆ ಬಾರದಹಾಗಿತ್ತು. ಗೌಸಖಾನನ ಮೇಲೆ ಊರವರ ಹಗೆತನ, ಬಿಟ್ಟಿಯ ಪ್ರಸಂಗಗಳಲ್ಲಿ ಅವರ ತಂಟೆತಕರಾರು, ಹುಲ್ಲುಗಾವಲಿನ ಪ್ರತಿಬಂಧದಿಂದ ಊರ ಜನ ಉತ್ತೇಜಿತ-ರಾದದ್ದು, ರಾತ್ರಿ ಎಲ್ಲರೂ ಸೇರಿ ಗೌಸಖಾನನ ಕೊಲೆಯ ಬಗ್ಗೆ ಯೋಚಿ-ಸಿದ್ದು—ಎಲ್ಲವನ್ನು ವಿಶದವಾಗಿ ವಿವೇಚಿಸಿದ.

ಬಿಸೇಸರ ಹೇಳಿದ: “ರಾತ್ರಿ ಒಂಬತ್ತಾಗಿತ್ತು. ಮನೋಹರ ಬಂದು ಕಾದಿರಖಾನಿಗೆ ಹೇಳಿದ: ‘ಯಾಕ ಕುಂತೀದಿ? ಹುಲ್ಲುಗದ್ದೀ ಬಂದು ಮಾಡ್ಯಾರು. ಸುಮಾಕ ಕುಂತರ ನಡ್ಯಾಣಿಲ್ಲ. ಏನಾದರೂ ಉಪಾಯ ಮಾಡು.’ ಕಾದಿರಖಾ ನಮಾಜುಮಾಡುವ ತಯಾರಿ ನಡೆಸಿದ್ದ. ‘ಕುಂತಗೊ.’ ನಾನು ನೀನು ಒಬ್ಬೊಬ್ಬರೇ ಏನು ಮಾಡಾಕಾಕ್ಕೃತಿ? ಎಲ್ಲರನೂ ಕೇಳಿದರ ಏನಾದರು ಆದೀತು. ಹೋಗಿ ದುಖರನ ಭಗತನನ್ನು ಕರೆದುಕೊಂಡು ಬಾ’ ಅಂದ. ಮನೋಹರ ದುಖರನನ ಮನೆಗೆ ಹೋದ. ಸಂಗಾಟ ನಾನು ಹೋದೆ. ‘ಕಾಲಾಗ ಮುಳ್ಳು ನೆಟ್ಟಯ್ತಿ, ನನಗ ನಡ್ಯಾಕಾಗೋದಿಲ್ಲ, ಖಾನ ಸಾಹೇಬನ್ನs ಇಲ್ಲಿ ಕರಕೊಂಡು ಬಾ’ ಅಂತ ದುಖರನ ಹೇಳಿದ. ನಾ ಹೋಗಿಕ್ಯಾಸ ಕಾದಿರನ್ನ ಕರಕೊಂಡು ಬಂದೆ. ಡಪಟಸಿಂಹನ್ನ, ಕಲ್ಲೂನ್ನ ಮನೋಹರ ಕರಕೊಂಡು ಬಂದ. ಕಾದಿರ ಹೇಳಿದ: ‘ನಾವೆಲ್ಲಾ ಹಳ್ಳೀ-ಮಡ್ಡುಗಳು. ನಮಗ ತಿಳಿದ್ದಂಗ ಏನಾರ ಮಾಡಾಕ ಹೋದರ ಅಂಗಾತ

ಬೀಳತೇವೋ ಬಕ್ಕಬಾರಲೇ ಬೀಳತೇವೋ. ಪ್ರೇಮಬಾಬುಗಳ ಇಚಾರ ಕೇಳಿ ಕೋರಿ.' ಡಪಟಸಿಂಹ 'ಎಲ್ಲಾರೂ ಅಲ್ಲಿಗೆ ಹೋಗೋದು ಜರೂರಿಲ್ಲ. ಅವರನ್ನs ಇಲ್ಲಿಗೆ ಕರಕೊಂಡು ಬರ್ತೀನಿ.' ಅಂದ. ಪ್ರೇಮಶಂಕರರು ಎಕ್ಕಾದಲ್ಲಿ ಮರುದಿನ ಸಂಜೆಗೆ ಬಂದರು. ನಾನು ಅಂಗಡಿ ಮುಚ್ಚುತ್ತಿದ್ದೆ. ಮನೋಹರ ಬಂದು ಬಾಬುಗಳು ಬಂದಾರ ಬಾ ಎಂದು ನನ್ನ ಕರೆದ. ಅವನ ಕೂಟ ಕಾದಿರನ ಮನಿಗೆ ಹೋದೆ. 'ಜ್ಞಾನಬಾಬು ನಮ್ಮ ತಮ್ಮ ಆದರೇನಾತು, ಇಂತಾ ತಮ್ಮನ ಕಡದು ಹಾಕಬೇಕು' ಎಂದು ಪ್ರೇಮಬಾಬು ಹೇಳಿದರು. ಅದಕ್ಕ ಕಾದಿರ ಖಾ, 'ಅವರ ಜೊತಿ ನಮ್ಮ ಹಗಿ ಇಲ್ಲ. ಗೌಸಖಾನನ ಕೂಟ ಆಯ್ತು. ನಮ್ಮ ಹಗಿ ಇವನ ಕಾಲಾಗ ನಾವು ಊರಾಗ ಇದೋದs ದುಸತಾರ ಆಗೆಯ್ತು. ಈಗ ನಾವು ಏನು ಮಾಡಬೇಕು, ನೀವs ಹೇಳಿರಿ' ಅಂದ. 'ಈ ಅಪಮಾನ ಸೈಸೋದು ಶಕ್ಯಿಲ್ಲ' ಅಂತ ಮನೋಹರ ಅಂದ. ಆವಾಗ ಪ್ರೇಮಶಂಕರರು, 'ಗಂಡಸರಾಗ್ಯಿ ಇಂತ ಅಪಮಾನ ಯಾಕ ಸೋಸತೀರಿ ? ಒಂದ ಕೈಯಾಗ ಕೆಲಸ ಮುಗಿದುಹೊಕ್ಕಾಯ್ತು' ಎಂದು ಹೇಳಿದರು. ಅದಕ್ಕ ಕಾದಿರಖಾ, 'ಮಾಡೆಂತು ಬಿಟ್ವಿ ಅನ್ರಿ. ಇಡೀ ಊರಮ್ಯಾಗ ಬರ್ತಯ್ತು.' ಅಂದ. 'ಎಂತಾ ಮಡ್ತರೋ ನೀವು ? ಯಾರೂ ಇಚಾರ ಮಾಡೋರಿಲ್ಲೇನು ? ವಕೀಲರಿಲ್ಲೇನು ?' ಅಂತ ಪ್ರೇಮಬಾಬು ಅಂದರು. ಅಟರಾಗ ಉಣ್ಣಾಕ ನಾ ಮನಿಗೆ ಬಂದೆ. ಪ್ರೇಮಶಂಕರರು ಆಗs ರಾತ್ರಿ ಎಕ್ಕಾದಾಗ ತಿರಿಗಿ ಹೋದರು. ರಾತ್ರಿ ಹನ್ನೆರಡು ಒಂದರ ಸುಮಾರಕ ಏನೋ ಸಪ್ಪಳಾದ್ಹಾಂಗಾತು. ನಾ ಎದ್ದು ಮನೀಸುತ್ತ ಅಡ್ಡಾಡಿದೆ. ಕೆಲವು ಜನರು ಹೋಗೋದು ಕಾಣಿಸಿತು. ನಮ್ಮ ಜೋಡಿದಾರರೇ ಅಂತ ನಾ ತಿಳಕೊಂಡೆ. ಕಾದಿರನ ಹೆಸರು ತಗೊಂಡು ಕೂಗಿದೆ. 'ನಡೀ ಇಲ್ಲಿಂದ' ಅಡ್ಡ ಬರಬ್ಯಾಡ. ಬಿದ್ದುಕೋ ಸುಮಾಕ' ಅಂತ ಅಂದ ಕಾದಿರ."

ಕಾದಿರನಿಂದ ಸುಮ್ಮನಿರುವುದಾಗಲಿಲ್ಲ. ಕಠೋರ ನೇತ್ರಗಳಿಂದ ಬಿಸೇಸರನ ಕಡೆ ನೋಡುತ್ತ, "ಬಿಸೇಸರ, ವ್ಯಾಗ ಅಲ್ಲಾ ಆದಾನ, ಅವನ ಅಂಜಿಕ್ಯಾರೆ ಆಯ್ತು ?" ಎಂದ.

"ಸುಮ್ಮನಿರು. ಇಲ್ಲದಿದ್ದರೆ ಸಾಕ್ಷಿಗೆ ಬೆದರಿಕೆ ಹಾಕಿದ್ದಕ್ಕೆ ಮತ್ತೊಂದು ಖಟ್ಲೆ ಆದೀತು." ಸರಕಾರೀ ವಕೀಲ ದಟ್ಟಿಸಿದ.

ರಾತ್ರಿ ಕೈಸೆರೆಮನೆಯಲ್ಲಿ ಈ ಜನ ಕುಳಿತು ಮಾತನಾಡುತ್ತಿದ್ದರು. ಮನೋಹರನನ್ನು ಪ್ರತ್ಯೇಕ ಕೋಣೆಯಲ್ಲಿಟ್ಟಿದ್ದರು.

" ಇದು ಮನೋಹರನ ಕೆಲಸ ಇಡೀ ಊರನ್ನೇ ಮುಳುಗಿಸಿದ. " ಎಂದ ದುಖರನ.

" ಅವಗ ಯಾವ ಭೂತ ಬಡಕೊಂಡಿತ್ತೋ ಯಾವ ಬಲ್ಲ? ಸಿಟ್ಟೇನು ನನಗೂ ಬಂದಿತ್ತು. ಆದರೆ ಅವಗ ಪ್ರಯೋಗ ಖಬರ, ತಪ್ಪಿತ್ತೋ ಏನೋ," ಎಂದ ಬಲರಾಜ.

" ಏನು ಸೊಟ್ಟ ಹುಲ್ಲುಗದ್ದೀ ಕಾಲಾಗ ಇಂತಾ ಅನರ್ಥ. " ಎಂದ ಡಪಟಸಿಂಹ

" ಹಾಂಗ ಹೋಗಬ್ಯಾಡ್ರಿ, ಅಸಗೋಳಿರಾ ಪಾಪ, ನಿಮ್ಮ ಸಲುವಾಗೀನs, ನಿಮ್ಮ ಹಕ್ಕು ಕಾಯೋ ದಸಿಂದಾನs ಅವ ಮಾಡ್ಯಾನ. ಅವನ ಧೈರ್ಯ, ಅವನ ಗಟ್ಟಿಗತನ ಕೊಂಡ್ಯಾಡೋದು ಹೋಗಲಿ, ಅವನ್ನ ಹಳೀತೀರಿ. ನಾವೆಲ್ಲರೂ ಹೇಡಿಪೋಳೆಮಕ್ಕಳು, ಅವನs ಗಂಡಸು. " ಎಂದು ಕಾದಿರ ಮಾತನಾಡಿದ.

" ಬಿಸೇಸರನ ಬುದ್ಧೀನs ತಿರುಗಿಹೋಗೇತಿ. " ಎಂದ ಕಲ್ಲೂ

" ಏನು ಸಾಕ್ಷಿ ಹೇಳತಾನು—ಗಿಳಿ ಮಾತಾಡಿದ್ಹಂಗ ಥೇಟು. " ದುಖರನ ಭಗತನೆಂದ

" ಏನು ಕಾದಿರಣ್ಣಾ, ಕರಿನೀರಿಗೆ ಹೋದವರು ಹೊಲಗದ್ದೀ ಮಾಡ-ತಾರಲ್ಲs? " ಎಂದು ಬಲರಾಜ ಪ್ರಶ್ನಿಸಿದ

" ಅಲ್ಲಿ ಕಬ್ಬು ಬಾಳು ಬೆಳೀತಯ್ತಂತ ಕೇಳಿದೇನು. "

" ಅಲ್ಲಿ ನೀರು ಬಾಳು ಬೇಕಾಕ್ಕಯ್ತಂತ ಕೇಳಿದೇನಿ. "

ಅಷ್ಟೊತ್ತಿಗೆ ಕೋಣೆಯ ಬಾಗಿಲು ಅಕಸ್ಮಾತ್ ತೆರೆಯಿತು. ಕೊತವಾಲನು ಬಂದು ಹೇಳಿದ, " ಪ್ರೇಮಶಂಕರಬಾಬೂ, ಸರಕಾರ ನಿಮ್ಮ ಮೇಲಿನ ಕಟ್ಟಳೆ ಹಿಂತೆಗೆದುಕೊಂಡಿದೆ. ನಿಮ್ಮ ಬಿಡುಗಡೆಯಾಯಿತು. ನಿಮ್ಮ ಮನೆಯವರು ಹೊರಗೆ ನಿಂತಿದ್ದಾರೆ. "

ತಾವಿದ್ದುದರಿಂದ ಇವರಿಗೆಷ್ಟು ಧೈರ್ಯವಿತ್ತು. ಇವರೊಡನೆ ತಮ್ಮ ಬಿಡುಗಡೆಯೂ ಆಗುವುದೆಂದು ಆಸಿಸಿರಬಹುದು. ಇವರಿಗೆ ತಮ್ಮ ಅಗಲಿಕೆ

ಯಿಂದ ಬಹಳ ನಿರಾಶೆಯಾಗುತ್ತದೆ ಎಂದುಕೊಂಡರು "ಉಪಾಯವಿಲ್ಲದೆ ನಾನು ನಿಮ್ಮನ್ನು ಬಿಟ್ಟುಹೋಗಬೇಕಾಗಿದೆ. ನನ್ನ ಹೃದಯ ಮಾತ್ರ ನಿಮ್ಮ ಜೊತೆಯಲ್ಲಿಯೇ ಇರುವುದು. ಹೊರಗಿನಿಂದ ನಿಮಗೆ ನನ್ನ ಸೇವೆ ಸಲ್ಲಿಸಲು ಅನುಕೂಲವಾದೀತು" ಎಂದು ಸಮಾಧಾನ ಹೇಳಿ ಹೊರಗೆ ಬಂದರು.

ಜ್ಞಾನಶಂಕರ ಜ್ವಾಲಾಸಿಂಹರ ಸಾಕ್ಷ್ಯಗಳು ಪ್ರೇಮಶಂಕರರಿಗೆ ಅನೂಕೂಲವಾಗಿದ್ದರೂ ಅಷ್ಟರಿಂದಲೇ ತಮ್ಮ ಬಿಡುಗಡೆಯಾದೀತೆಂದು ಅವರು ತಿಳಿದಿರಲಿಲ್ಲ. ಇದು ಪ್ರಭಾಶಂಕರರ ಕಂತ್ರಾಟವೆಂದು ಅವರಿಗೆ ಹೊಳೆಯಲು ತಡವಾಗಲಿಲ್ಲ. ಅದು ನಿಜವೇ ಆಗಿತ್ತು. ಎರಡು ಎರಡೂವರೆ ಸಾವಿರ ರೂಪಾಯಿಗಳ ಬಲಿದಾನದಿಂದ ಪ್ರಭಾಶಂಕರರು ಈ ವರದಾನ ಪಡೆದಿದ್ದರು. ನೆರೆ ಮನೆಯ ಬಾಗಿಲಲ್ಲಿ ಪ್ರೇಮಶಂಕರರನ್ನು ತಬ್ಬಿಕೊಂಡು ಹೊರಟಾಗ ಅವರೆದೆ ಡವಡವಿಸುತ್ತಿತ್ತು— ಬಿಡುಗಡೆಯ ಕುರಿತು ಇವನೆಲ್ಲಿ ಪ್ರಶ್ನಿಸುತ್ತಾನೋ ಎಂದು. ಹೊರಡುವ ಹೊತ್ತಿಗೇ ಜ್ವಾಲಾಸಿಂಹರು ಬಂದುದರಿಂದ ಆ ಪ್ರಸಂಗ ತಪ್ಪಿಸಲು ಅನುಕೂಲವಾಯಿತು. ಪ್ರಭಾಶಂಕರರು ಅವರೊಡನೆಯೇ ಮಾತಿಗೆ ತೊಡಗಿದರು.

ಇಲ್ಲಿಂದ ವರ್ಗವಾದಂದಿನಿಂದ ಜ್ವಾಲಾಸಿಂಹರಿಗೆ ಶಾಂತಿಯೆಂಬುದಿರ-ಲಿಲ್ಲ. ಮೇಲಿನವರು, ಕೆಳಗಿನವರು, ಜಮೀನುದಾರರು ಎಲ್ಲರೂ ಅವರ ವಿಷಯದಲ್ಲಿ ಅಸಂತೋಷಿಗಳಾಗಿದ್ದರು ಮಾತುಮಾತಿಗೆ ಜವಾಬು ಕೊಡ ಬೇಕಾಗಿತ್ತು. ದೂರ ಎಲ್ಲಿಗಾದರೂ ವರ್ಗಮಾಡಿಸಿಕೊಳ್ಳುವುದು ಸಾಧ್ಯವಾಗಲಿಲ್ಲ. ಅದಕ್ಕೆ ಬೇಸತ್ತು ಅವರೀಗ ರಾಜಿನಾಮೆ ಕೊಡುವ ವಿಚಾರ-ದಲ್ಲಿದ್ದರು.

## ೨೮

ರಾತ್ರಿ ಜ್ವಾಲಾಸಿಂಹರು ಪ್ರಭಾಶಂಕರರಲ್ಲಿಯೇ ಉಂಡು ಅವರ ದಿವಾಣಖಾನೆಯಲ್ಲಿಯೆ ಮಲಗಿದರು. ಸೊಳ್ಳೆಗಳ ಕಾಟದಿಂದ ಪ್ರೇಮಶಂಕರ ರಿಗೆ ನಿದ್ದೆ ಬಾರದೆ, ಕೊನೆಗೆ ವ್ಯಾಕುಲರಾಗಿ ಹೊರಗೆ ಬಂದು ಅಡ್ಡಾಡತೊಡಗಿದರು. ಎದುರಿನಲ್ಲಿಯೇ ಶ್ರದ್ಧೆಯ ಕೋಣೆ ಎಲ್ಲೆಲ್ಲೂ ಸ್ತಬ್ಧತೆ. ಅದು ಅವರ ವಿಚಾರಕ್ಕೆ ಪುಟಕೊಟ್ಟಿತು. ಇವಳಂತಹ ದೇವಿಯನ್ನು ಪಡೆದೂ ತಾನು

ದಾಂಪತ್ಯಸುಖಕ್ಕೆ ಎರವಾಗಿದ್ದಾನೆ; ಅವಳ ಶಯನಗೃಹ ಮುಂದಿದ್ದರೂ ಆಕಡೆ ದಿಟ್ಟಿಸುವ ಸಾಹಸ ತನಗಿಲ್ಲ; ಈಗ ಆಕೆ ಯಾವುದೊಂದು ಧರ್ಮ-ಗ್ರಂಥ ಓದುತ್ತಿರಬಹುದು; ಅವಳ ಕೋಮಲ ವಾಣಿಯನ್ನು ಕೇಳುವ ಅಧಿಕಾರ ತನಗಿಲ್ಲ.

ಕೊಂಚ ದೂರದಲ್ಲಿ ಜ್ಞಾನಶಂಕರರ ಕೋಣೆ. ಆಕಸ್ಮಾತ್ ಯಾರೊ ಒಬ್ಬ ಹೆಂಗಸು ಅಲ್ಲಿಂದ ಹೊರಬಿದ್ದಂತಾಯಿತು. ಪ್ರೇಮಶಂಕರರು ನೋಡಿದರು. ಆಕೃತಿ ನಡಿಗೆ ಶ್ರದ್ಧೆಯಂತೆ ಇಷ್ಟು ರಾತ್ರಿಯಲ್ಲಿ, ಈ ಕತ್ತಲೆಯಲ್ಲಿ ಶ್ರದ್ಧೆ ಎಲ್ಲಿ ಬಂದಾಳು ? ಯಾರೋ ಇರಬಹುದು. ನನ್ನ ಭ್ರಮೆ ಇದ್ದೀತು, ಎಂದುಕೊಂಡರು. ಕುತೂಹಲದಿಂದ ಅವಳ ಹಿಂದೆ ಹಿಂದೆ ಸಾಗಿದರು.

ಅವಳು ಹೊರಬಿದ್ದು ಬೀದಿಗೆ ಬಂದು ದಶಾಶ್ವಮೇಧ ಘಾಟಿನತ್ತ ನಡೆದಳು. ಇವಳು ಶ್ರದ್ಧೆಯೆ ಎಂದು ಪ್ರೇಮಶಂಕರರಿಗೆ ಮನದಟ್ಟು ಮಾಡಿಕೊಟ್ಟಿತು ಅವಳ ನಡಿಗೆ. ಆಶ್ಚರ್ಯವಾಯಿತು ಅವರಿಗೆ. ಶ್ರದ್ಧೆ ಮೆಟ್ಟಿಲಿಳಿದು ಗಂಗೆಯ ಪಾತ್ರದಂಚನ್ನು ತಲುಪಿದಳು. ಪ್ರೇಮಶಂಕರರು ಭಯದಿಂದ ನಡುಗಿದರು. ಸರಸರನೆ ಮೆಟ್ಟಿಲಿಳಿದು ತೀರ ಅವಳ ಸಮೀಪದಲ್ಲಿ—ಏನಾದರೂ ಆಗಬಾರದ್ದಾದರೆ ಒಂದೇ ನೆಗೆತದಲ್ಲಿ ಹಿಡಿಯುವಷ್ಟು ಸಮೀಪದಲ್ಲಿ ಹೋಗಿ ನಿಂತರು.

ಶ್ರದ್ಧೆ ಕೊಂಚಹೊತ್ತು ಸುಮ್ಮನೆ ನಿಂತಿದ್ದು ಮೆಲ್ಲಗೆ ನೀರಿಗಿಳಿದಳು. ಪ್ರೇಮಶಂಕರರು ಇನ್ನು ನಿರೀಕ್ಷಿಸುವುದು ತರವಲ್ಲವೆಂದು ಭರ್ರನೆ ಹೋಗಿ ಅವಳನ್ನು ಹಿಡಿದರು. ಅವಳು ಬೆದರಿ ಸಶಂಕಳಾಗಿ, " ಯಾರವರು ? ಸರಿ ದೂರ ! " ಎಂದಳು.

" ನಾನು—ದುರ್ಭಾಗ್ಯ ಪ್ರೇಮಶಂಕರ ! " ಸದೋಷ ನೇತ್ರಗಳಿಂದ ನೋಡುತ್ತ ಅವರು ಉತ್ತರವಿತ್ತರು.

ಅವಳು ಪತಿಯನ್ನು ದಿಟ್ಟಿಸಿದಳು. ನೀರಿಂದ ಮೇಲೆ ಬಂದು ಕೈ ಜೋಡಿಸಿ ಗಂಗೆಯನ್ನು ನೋಡುತ್ತ, " ತಾಯೆ, ನೀನು ನನ್ನ ಹರಕೆ ಪೂರ್ಣ ಮಾಡಿದೆ. ಈ ಅಭಾಗಿನಿಯನ್ನು ಉದ್ಧರಿಸಿದೆ. " ಎಂದಳು.

ಪ್ರೇಮಶಂಕರರ ಹೃದಯ ಉಬ್ಬುತ್ತಲಿತ್ತು. " ನನ್ನ ಉದ್ಧಾರ-ಕ್ಕಾಗಿಯೆ ನಿನ್ನ ಆ ಅನುಷ್ಠಾನವೆಂದು ನನಗೀಗ ತಿಳಿಯಿತು. ನನ್ನ ಪ್ರೇಮವೂ

ನಿಷ್ಕಾಮವಾಗಿದ್ದರೆ ಈ ಆತ್ಮಿಕ ಸಂಯೋಗದಿಂದಲೇ ತೃಪ್ತನಾಗುತ್ತಿದ್ದೆ. ಆದರೆ ನಾನು ರೂಪ-ರಸಗಳ ದಾಸ, ಈ ಆತ್ಮಾನುರಾಗದ ಆನಂದ ನನಗಿಲ್ಲ," ಎಂದರು.

"ನಿಮ್ಮನ್ನು ಕೂಡುವುದು ಅಧರ್ಮ ಎಂಬ ನನ್ನ ಶಂಕೆ ಎಂದೂ ಹೋಗದು. ಅಧರ್ಮವೆಂದರೆ ನನ್ನ ಮೈ ಜುಮ್ಮೆನ್ನುತ್ತದೆ."

"ಶಂಕೆ ಹೇಗೆ ಶಾಂತವಾಗುವುದು ?"

"ಪ್ರಾಯಶ್ಚಿತ್ತದಿಂದ."

"ನದಿಯೊಳಗೆ ಮುಳುಗೆದ್ದರೆ, ಕೆಲವು ಕಟ್ಟಿಗೆಗಳನ್ನು ಸುಟ್ಟರೆ, ಘೃಣಿತ ವಸ್ತುಗಳನ್ನು ತಿಂದು ತಿನಿಸಿದರೆ, ಬ್ರಾಹ್ಮಣರನ್ನು ಉಣ್ಣಿಸಿದರೆ ನನ್ನ ಅಪವಿತ್ರತೆ ತೊಲಗುವುದೆಂದು ನೀನು ನಂಬುವೆಯಾ ? ವಿವೇಕಿಯಾದ ನೀನು ಇಷ್ಟು ಮಿಥ್ಯಾವಾದಿನಿಯಾಗಿರುವುದು ವಿಷಾದಕರ."

ಶ್ರದ್ಧೆಯ ಒಂದು ಕೈ ಪ್ರೇಮಶಂಕರರ ಕೈಯೊಳಗಿತ್ತು. ಅದನ್ನು ಕೊಸರಿಕೊಂಡು ಅವಳು ಎರಡೂ ಕಿವಿಗಳಲ್ಲಿ ಬೆರಳಿಟ್ಟುಕೊಂಡಳು. "ದೇವರಿಗಾಗಿ ನನ್ನ ಮುಂದೆ ಶಾಸ್ತ್ರಗಳನ್ನು ಹಳಿಯಬೇಡಿ. ನಮ್ಮ ಋಷಿ-ಮುನಿಗಳು ಬರೆದಿಟ್ಟದ್ದನ್ನು ನಾವು ಮನ್ನಿಸಲೇಬೇಕು. ಅದರಲ್ಲಿ ಮೀನ ಮೇಷ ತೆಗೆಯುವುದು ಉಚಿತವಲ್ಲ. ನಿಮ್ಮ ಚಿತ್ತದಲ್ಲಿಯ ಅಹಂಕಾರ ಇನ್ನೂ ಮೃತವಾಗಿಲ್ಲ. ಅದು ಇರುವತನಕ ಋಷಿಗಳ ಮಾತು ನಿಮಗೆ ತಿಳಿಯುವುದಿಲ್ಲ." ಎಂದು ಅವಳು ಮೆಟ್ಟಲೇರತೊಡಗಿದಳು.

ಪ್ರೇಮಶಂಕರರ ಬಾಯಿಂದ ಮಾತು ಹೊರಡಲಿಲ್ಲ. ಅವಳನ್ನು ತಡೆಯುವ ಸಾಹಸವಾಗಲಿಲ್ಲ ಅವರಿಗೆ ಅವಳು ಕತ್ತಲಲ್ಲಿ ಅದೃಶ್ಯಳಾಗಿ ಹೋದಳು. ಅವರು ಹಾಗೆಯೇ ನಿಂತಿದ್ದರು. ತುಸುಹೊತ್ತಿನಮೇಲೆ ಅರ-ಮರೆವಿನಿಂದ ಎಚ್ಚತ್ತಾಗ ತಮ್ಮ ಅವಸ್ಥೆಯ ಅರಿವು ಅವರಿಗಾಯಿತು. ಸಂಧಿ ಕೈತಪ್ಪಿಹೋಯಿತು. ವಿಚಾರ ಮನುಷ್ಯನಿಗಿಂತ ಉತ್ತಮವೆಂದು ತಿಳಿದಿದ್ದೆ. ಸಿದ್ಧಾಂತಗಳು ಮನುಷ್ಯನಿಗಾಗಿ ಇವೆ, ಅವುಗಳಿಗಾಗಿ ಮನುಷ್ಯ ನಲ್ಲ. ಇಷ್ಟೂ ನನಗೆ ತಿಳಿಯಲಿಲ್ಲ. ಪ್ರಾಯಶ್ಚಿತ್ತದಲ್ಲಿ ನನಗೆ ವಿಶ್ವಾಸವಿಲ್ಲ ದಿದ್ದರೂ ಆದರಿಂದ ಎರಡೂ ಜೀವಿಗಳ ಜೀವನ ಸುಖಮಯವಾಗುತ್ತಿತ್ತು. ನನ್ನ ಸಿದ್ಧಾಂತ ಪ್ರೇಮ ಎರಡನ್ನೂ ಹಾಳುಮಾಡಿತು. ಈಗಲೇ ಹೋಗಿ

ಪ್ರಾಯಶ್ಚಿತ್ತಕ್ಕೆ ನನ್ನ ಒಪ್ಪಿಗೆ ಇದೆಯೆಂದು ಹೇಳಲಾ—ಇನ್ನೂ ಅವಳು ದೂರ ಹೋಗಿರಲಿಕ್ಕಿಲ್ಲ ಎಂದು ಅವರಿಗೆನಿಸಿತು. ಅವಳ ವಿಶ್ವಾಸ ಮಿಥ್ಯ ವಾದದ್ದಿರಬಹುದು, ಆದರೆ ಅದೆಷ್ಟು ದೃಢ! ಎಂತಹ ನಿಃಸ್ವಾರ್ಥ ಪತಿಭಕ್ತಿ, ಎಂತಹ ಅವಿಚಲ ಧರ್ಮಶ್ರದ್ಧೆ!

ಈ ವಿಚಾರದಲ್ಲಿಯೇ ಪ್ರೇಮಶಂಕರರು ಮರಳಿದರು. ಮಲಗಿ ನಿದ್ರೆಗಾಗಿ ಪ್ರಯತ್ನಿಸತೊಡಗಿದರು. ಆದರೀಗ ಸೊಳ್ಳೆಗಳ ಬದಲು ವಿಚಾರದ ಕಾಟ ಆರಂಭವಾಗಿತ್ತು. ನನ್ನ ಚಿತ್ತದಿಂದ ಇನ್ನೂ ಅಹಂಕಾರ ತೊಲಗಿಲ್ಲ ಎಂದಳು. ಪ್ರೇಮಶಂಕರರು ತಮ್ಮ ಕೃತ್ಯಗಳನ್ನು ಅತ್ಯಂತ ಕಠೋರವಾಗಿ ವಿಮರ್ಶಿಸಿಕೊಂಡರು. ಅಂತಃಕರಣದ ಒಂದೊಂದೇ ಪದರನ್ನು ಬಿಡಿಸಿ ನೋಡಿದರು. ನಿಜವಾಗಿ ತಾವು ಅಹಂಕಾರದ ಮೂರ್ತಿಯೆಂದು ಅವರಿಗೆ ಪ್ರತಿಕ್ಷಣವೂ ಖಂಡಿತವಾಗುತ್ತಿತ್ತು.

"ಏಕೆ, ಏಳುವುದಿಲ್ಲವೇ, ಹೊತ್ತೇರಿತು." ಜ್ವಾಲಾಸಿಂಹರು ಎಚ್ಚರಿಸಿದರು.

ಪ್ರೇಮಶಂಕರರು ಬೆಚ್ಚಿ ಬಾಗಿಲ ಕಡೆ ನೋಡಿದರು. ನಿಜವಾಗಿಯೂ ಸೂರ್ಯೋದಯವಾಗಿತ್ತು. ಇಬ್ಬರೂ ಸ್ನಾನಾದಿಗಳನ್ನು ತೀರಿಸಿ ಉಪಹಾರ ಮುಗಿಸಿಕೊಂಡು ಮನೆಯಿಂದ ಹೊರಟರು.

"ಯಾರನ್ನಾದರೂ ವಕೀಲರನ್ನು ಗೊತ್ತುಮಾಡಬೇಕು. ಡಾಕ್ಟರ್ ಇರ್ಫಾನ ಅಲಿಯವರ ಗುರುತು ಚೆನ್ನಾಗಿದೆ ನನಗೆ. ಮೊದಲು ಅಲ್ಲಿಯೇ ಹೋಗುವ, ನಡೆಯಿರಿ." ಜ್ವಾಲಾಸಿಂಹರೆಂದರು.

ಡಾಕ್ಟರ್ ಮಹೋದಯರು ತಮ್ಮ ಕೈದೋಟದಲ್ಲಿ ಅಲೆದಾಡುತ್ತಿದ್ದರು. ಇಬ್ಬರನ್ನೂ ಹಸ್ತಾಂದೋಲನವಿತ್ತು ಒಳಕ್ಕೆ ಕರೆದೊಯ್ದರು. ಜ್ವಾಲಾಸಿಂಹರನ್ನು ಕುರಿತು, "ನಿಮ್ಮ ದರ್ಶನ ಬಹಳ ದಿನಕ್ಕಾಯಿತು. ನಿಮ್ಮ ಹೇಳಿಕೆ ಪೋಲಿಸಿನವರ ಬಾಯಿ ಕಟ್ಟಿಬಿಟ್ಟಿತು. ಆದರೆ ಮರೆಯಬೇಡಿ: ಇದರ ಪರಿಣಾಮವನ್ನು ನೀವು ಅನುಭವಿಸಬೇಕಾಗುತ್ತದೆ." ಎಂದರು.

"ಅಂತಹ ಪ್ರಸಂಗವೇ ಬರಲಾರದು. ರಾಜಿನಾಮೆ ಕೊಡುವ ನಿಶ್ಚಯವನ್ನೆ ಮಾಡಿದ್ದೇನೆ." ಜ್ವಾಲಾಸಿಂಹರೆಂದರು.

“ ಇರುವ ಸ್ಥಿತಿಯೇ ಹಾಗೆ ಸ್ವಾಭಿಮಾನಿಗಳು ಅವರ ಮೆಚ್ಚಿಕೆ ಪಡೆಯುವುದೆ ಸಾಧ್ಯವಿಲ್ಲ. ಕಾನ್ಶನ್ಸ್ ನಿರ್ಜೀವವಾಗಿದ್ದವರಿಗೇ ಚವರ ಬೀಸುತ್ತದೆ ಇಲ್ಲಿ. ನನ್ನ ಉದ್ಯೋಗವನ್ನೇ ತಕ್ಕೊಳ್ಳಿ. ಇದು ಸ್ವತಂತ್ರ ಉದ್ಯೋಗ ಎನಿಸಿಕೊಳ್ಳುತ್ತದೆ. ಆದರೆ, ಲಾಲಾ ಪ್ರಭಾಶಂಕರರಿಗೆ—” ಪ್ರೇಮಶಂಕರರ ಕಡೆ ಹೊರಳಿ ಡಾಕ್ಟರ್ ಮುಂದುವರಿದರು.—“ ನಿಮ್ಮ ಪರವಾಗಿ ವಾದಿಸಲು ವಕೀಲರೇ ದೊರೆಯಲಿಲ್ಲ. ಅವರು ನನ್ನ ಕಡೆ ಏಕೆ ಬರಲಿಲ್ಲವೋ ಕಾಣೆ. ”

“ ಆ ತಪ್ಪಿನ ಪ್ರಾಯಶ್ಚಿತ್ತಕ್ಕಾಗಿಯೆ ನಾವೀಗ ಬಂದದ್ದು. ಬಡ ರೈತರಮೇಲೆ ತಮ್ಮ ಅನುಗ್ರಹವಾಗಬೇಕು. ’’ ಜ್ವಾಲಾಸಿಂಹರೆಂದರು.

“ ಈ ಸೇವೆಗೆ ನಾನು ಸಿದ್ಧನಿದ್ದೇನೆ. ಪೋಲಿಸರೊಡನೆ ನನಗೆ ಹಳೆಯ ದ್ವೇಷವಿದೆ, ಇಂತಹ ಮೊಕದ್ದಮೆಯ ನಿರೀಕ್ಷಣೆಯಲ್ಲಿಯೇ ಇದ್ದೇನೆ. ’’

ಡಾಕ್ಟರ್ ಇರ್ಫಾನ ಅಲಿಯವರ ಮಾತಿನಿಂದ ಪ್ರೇಮಶಂಕರರ ಮನಸಿಗೆ ನೆಮ್ಮದಿಯೆನಿಸಿತು.

## ೨೮

ಡಾಕ್ಟರ್ ಪ್ರಿಯನಾಥರು ಬಹು ಉದಾರರು, ವಿಚಾರಶೀಲರು, ಸಹೃದಯ ಸಜ್ಜನರು. ಚಿಕಿತ್ಸಾಜ್ಞಾನ ಅವರಿಗೆ ಚೆನ್ನಾಗಿತ್ತು. ಎಲ್ಲಕ್ಕೂ ವಿಶೇಷವೆಂದರೆ, ಅವರ ಸ್ವಭಾವ ಅತ್ಯಂತ ಕೋಮಲ ಹಾಗೂ ನಮ್ರ. ರೋಗಿಗಳ ಪಾಲಿನ ತರಕಾರಿ, ಹಾಲು, ಬೆಣ್ಣೆ, ಸೌದೆಗಳಲ್ಲಿ ಒಂದು ಭಾಗ ಅವರ ಮನೆಗೆ ಮುಟ್ಟುತ್ತಿದ್ದರೆ, ಅದು ಅಲ್ಲಿಯ ರೂಢಿ ಅಷ್ಟೆ. ಅವರ ಹಿಂದೆಯೂ ಹಾಗಿತ್ತು. ಇದರಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯ ಅವರಿಗೆ ತೋರಲಿಲ್ಲ. ಅವರು ಕಡಿಮೆ ಗಳಿಕೆಯುಳ್ಳವರಿಂದ ಅರ್ಧ ಫೀ ತೆಗೆದು ಕೊಳ್ಳುತ್ತಿದ್ದರು; ರಾತ್ರಿಯ ಫೀಯೂ ಸಾಧಾರಣವಿತ್ತು. ಅವರಲ್ಲಿ ಸರಕಾರೀ ಚಿಕಿತ್ಸಾಲಯದಿಂದ ಉಚಿತವಾಗಿ ಔಷಧಿ ಸಿಕ್ಕುತ್ತಿತ್ತು. ಅದರಿಂದ ಮಿಕ್ಕ ಡಾಕ್ಟರಿಗಿಂತ ಅವರದು ಚೆನ್ನಾಗಿ ಸಾಗುತ್ತಿತ್ತು. ತಮ್ಮ ಆರ್ಥಿಕ ಕಾಮನೆಗಳನ್ನು ಪೂರ್ತಿಗೊಳಿಸಿಕೊಳ್ಳಬಹುದಾದಂತಹ ಪ್ರಸಂಗಗಳು ಎಷ್ಟೋ

ಬರುತ್ತಿದ್ದವು. ಆದರೆ ಅವರ ವಿಚಾರಶೀಲತೆ ಅವರ ಬಾಯಿಗೆ ಕಡಿವಾಣವಾಗಿತ್ತು. ಕಾಲೇಜು ಬಿಟ್ಟ ಬಳಿಕ ಕೆಲ ವರುಷ ನಿರ್ಭೀತತೆಯಿಂದ ಅವರು ತಮ್ಮ ಕರ್ತವ್ಯ ನೆರವೇರಿಸುತ್ತ ಬಂದರು. ಆದರೆ ಕೆಲವು ಸಲ ಪೋಲಿಸರ ವಿರುದ್ಧ ಸಾಕ್ಷ್ಯ ಹೇಳಿದಾಗ ಪೆಟ್ಟು ತಿಂದು ಎಚ್ಚತ್ತರು. ಅವರು ನಿತ್ಯವೂ ಪೋಲಿಸರ ಒಲವು ನೋಡಿ ತಮ್ಮ ನೀತಿಯನ್ನು ನಿರ್ಧರಿಸಿಕೊಳ್ಳುತ್ತಿದ್ದರು. ಆದರೂ ತಮ್ಮ ನಿದಾನವನ್ನು ಪೋಲಿಸರ ಇಷ್ಟದಂತೆ ನಡೆಸುವುದೆಂದರೆ ಅವರ ಮನಸಿಗೆ ಕಷ್ಟವಾಗುತ್ತಿತ್ತು. ಅಂತೂ, ಗೌಸಖಾನ ಹೆಣ ಪರೀಕ್ಷೆಗಾಗಿ ಬಂದಾಗ ಅವರು ಗೊಂದಲದಲ್ಲಿ ಬಿದ್ದರು. ಈ ಕೆಲಸ ಒಬ್ಬನದೇ, ಒಂದೇ ಪೆಟ್ಟಿಗೆ ಸಮಾಪ್ತಿಯಾಗಿದೆ ಎಂದು ಹೇಳುತ್ತಿತ್ತು ನಿದಾನ. ಆದರೆ ಒಂದು ಗುಂಪಿನ ಕೆಲಸ ಎಂದು ಪೋಲಿಸರ ಗ್ರಹಿಕೆಯಾಗಿತ್ತು. ಹೀಗಾಗಿ ಅವರು ದ್ವಂದ್ವದಲ್ಲಿ ಸಿಕ್ಕಿದ್ದರು. ಒಳ್ಳೇ ಮಹತ್ವಪೂರ್ಣ ಪ್ರಕರಣ. ಪೋಲಿಸರು ತಮ್ಮ ಯಶಸ್ಸಿಗಾಗಿ ಯಾವುದನ್ನೂ ಮಾಡದೆ ಉಳಿಸಿರಲಿಲ್ಲ. ಅದನ್ನು ಖಂಡಿಸುವುದೆಂದರೆ ವೈರ ಕಟ್ಟಿಕೊಂಡ ಹಾಗೆಯೆ. ಅಪರಾಧವಾದರೊ ಸ್ವಾದಹೀನ. ಕೆಲ ದಿನ ಈ ಗೊಂದಲದಲ್ಲಿಯೇ ಬಿದ್ದಿದ್ದರು. ಬುದ್ಧಿ ನಡೆಯುದಾಗಿತ್ತು. ಈ ಮಧ್ಯದಲ್ಲಿಯೇ ಒಮ್ಮೆ ಜ್ಞಾನಶಂಕರರು ಗಾಯತ್ರಿಯ ಪತ್ರವನ್ನು, ಜೊತೆಗೆ ಐನೂರು ರೂಪಾಯಿಗಳ ಕಾಣಿಕೆಯನ್ನೂ ತೆಗೆದುಕೊಂಡು ಅವರ ಕಡೆ ಹೋದರು. ರಾಣಿ ಅವರಿಂದ ಶಿಶುಪಾಲನದ ಕುರಿತು ಗ್ರಂಥವನ್ನು ಬರೆಸಲು ಇಚ್ಛಿಪಟ್ಟಿದ್ದಳು ಅಲ್ಲದೆ ಅವರನ್ನು ಗೃಹ ಚಿಕಿತ್ಸಕರೆಂದು ಗೊತ್ತುಮಾಡಿ, ಪ್ರತಿ ವಿಜಿಟ್ಟಿಗೆ ನೂರು ರೂಪಾಯಿ ಕೊಡುವುದಾಗಿ ತಿಳಿಸಲಾಗಿತ್ತು. ಡಾಕ್ಟರರಿಗಾದ ಆನಂದಕ್ಕೆ ಪಾರವೇ ಇಲ್ಲ.

ಮರಳುವಾಗ ಜ್ಞಾನಶಂಕರರು ಅತ್ಯಂತ ನಿಃಸ್ವಾರ್ಥಭಾವದಿಂದ, "ಲಖನಪುರದ ಪ್ರಕರಣದಲ್ಲಿ ನೀವು ಏನೆಂದು ನಿರ್ಣಯ ಮಾಡಿದಿರಿ? ಹೆಣ ಪರೀಕ್ಷೆಗಾಗಿ ನಿಮ್ಮಲ್ಲಿಗೇ ಬಂದಿರಬಹುದಲ್ಲ" ಎಂದು ಪ್ರಶ್ನಿಸಿದರು.

"ಹೌದು. ಹೆಣ ಬಂದಿತ್ತು. ಚಿಹ್ನದಿಂದಂತೂ ಈ ಕಾರ್ಯ ಒಬ್ಬನದೇ ಎಂದು ಸಿದ್ಧವಾಗುತ್ತದೆ. ಆದರೆ ಪೋಲಿಸರು ಇದರಲ್ಲಿ ಹೆಚ್ಚು ಮಂದಿಯನ್ನು ಎಳೆಯಬೇಕೆನ್ನುತ್ತಾರೆ. ನಿಮ್ಮ ಮುಂದೆ ಬಚ್ಚಿಡುವುದೇನು?

ಪೋಲಿಸರನ್ನು ಅಸಂತುಷ್ಟಗೊಳಿಸುವುದಕ್ಕಾಗುವುದಿಲ್ಲ. ಆದರೆ ನಿರಪರಾಧಿಗಳನ್ನು ಶಿಕ್ಷಿಸುವುದಕ್ಕೆ ಮನಸು ಹೇಸಿಕೊಳ್ಳುತ್ತದೆ." ಡಾಕ್ಟರೆಂದರು.

"ಚಿಹ್ನದಿಂದ ನೀವು ಪಡುವ ಅಭಿಪ್ರಾಯ ಸರಿಯೇ ಇದ್ದಿರಬಹುದು. ಆದರೆ ವಾಸ್ತವವಾಗಿ ಆ ಕೊಲೆ ಆದದ್ದು ಹೆಚ್ಚು ಜನರಿಂದ. ಲಖನಪುರ ನನ್ನದೇ ಊರು. ಆದರೂ ಈ ಘಟನೆಯನ್ನು ನಾನು ಪೋಲಿಸರ ದೃಷ್ಟಿಯಿಂದ ನೋಡುವುದಿಲ್ಲ. ಕೊಲೆ ಆಗಿಹೋಗಿದೆ—ಒಬ್ಬನೇ ಮಾಡಲಿ, ನಾಲ್ಕುಮಂದಿ ಕೂಡಿ ಮಾಡಲಿ. ನನ್ನಮಟ್ಟಿಗೆ ಈ ಸಮಸ್ಯೆ ಇದಕ್ಕೂ ಜಟಿಲವಾಗಿದೆ. ಜಮೀನುದಾರ ಮತ್ತು ಒಕ್ಕಲಿಗರ ಪ್ರಶ್ನೆಯಿದೆ ಕೊಲೆಪಾತಕಿಗಳಿಗೆ ತಕ್ಕ ಶಾಸ್ತಿ ಆಗದೆ ಹೋದರೆ, ಮುಂದೆ ಇಂತಹ ದುರ್ಘಟನೆ ಮತ್ತೂ ಆದಾವು; ಜಮೀನದಾರರು ಜೀವ ಉಳಿಸಿಕೊಳ್ಳುವುದು ಕಠಿನವಾದೀತು."

ಪ್ರಸ್ತುತ ಪ್ರಶ್ನೆಗೆ ಈ ಹೊಸರೂಪ ಕೊಟ್ಟು ಜ್ಞಾನಶಂಕರರು ಬೀಳ್ಕೊಂಡರು. ಕೊಲೆಯ ಬಗ್ಗೆ ಡಾಕ್ಟರರ ಅಭಿಪ್ರಾಯ ಮೊದಲಿನಂತೆಯೇ ಇದ್ದರೂ ಗುಹ್ನೆ ಮಾತ್ರ ಸ್ವಾದಹೀನವಾಗಿರಲಿಲ್ಲ. ಐನೂರು ಕಾಣಿಕೆ, ಒಂದುನೂರು ವ್ಹಿಜಿಟ್ ಫೀ, ವರುಷಕ್ಕೆ ಸಾವಿರಾರು ರೂಪಾಯಿ ಉತ್ಪನ್ನ, ಮೇಲೆ ಪೋಲಿಸರ ಕೃಪೆ ಬೇರೆ ಇನ್ನು ಹಿಂದೆ ಮುಂದೆ ನೋಡುವ ಅಗತ್ಯ ಇರಲಿಲ್ಲ. ಇರುವ ಭಯವೆಂದರೆ ಡಾಕ್ಟರ್ ಇರ್ಫಾನ್ ಅಲಿಯವರ ಎದುರು ಸವಾಲಿನದು. ಅದಕ್ಕಾಗಿ ಪ್ರೇಮನಾಥರು ತಮ್ಮ ಪಕ್ಷಸಮರ್ಥನೆಗಾಗಿ ಕೆಲವು ಗ್ರಂಥಗಳನ್ನೋದಿ ತತ್ತ್ವಗಳನ್ನು ಶೋಧಿಸಿಕೊಂಡರು. ಕೋರ್ಟಿನಲ್ಲಿ ಅವರು ಒಳ್ಳೇ ತಾತ್ತ್ವಿಕ ಗಂಭೀರತೆಯಿಂದ, ಮರ್ಮಜ್ಞತಾಪೂರ್ಣಭಾವದಿಂದ ಈ ಹತ್ಯಾಕಾಂಡವನ್ನು ವಿವೇಚಿಸಿದರು: "ಚಿಹ್ನದಿಂದ ಒಬ್ಬನದೇ ಕೃತ್ಯ ಎಂದು ತೋರುತ್ತದೆ. ಇದರಲ್ಲಿ ಹತ್ಯಾಕಾರಿಗಳ ಚಾತುರ್ಯ ವ್ಯಕ್ತವಾಗುತ್ತಿದೆ. ಮೃತ್ಯುವಿನ ಕಾರಣ ಕೊಡಲಿಯ ಗಾಯವಲ್ಲ; ಕತ್ತು ಹಿಸುಕಿದ್ದು. ಕೆಲ ಜನರ ಸಹಾಯವಿಲ್ಲದೆ ಗೌಸಖಾನಂತಹ ಬಲಿಷ್ಠನ ಕತ್ತು ಹಿಸುಕಿ ಕೊಲ್ಲುವುದು ಅಸಂಭವ. ಜೀವ ಹೋದಮೇಲೆ, ಒಬ್ಬನ ಕೃತ್ಯವೆಂದು ಎನಿಸುವುದಕ್ಕಾಗಿ, ಒಂದೇಟನಿಂದ ಕತ್ತು ಕಡಿಯಲಾಗಿದೆ."

ಇರ್ಫಾನ ಅಲಿಯವರ ಎದುರು ಪ್ರಶ್ನೆಗಳು ಆರಂಭವಾದವು. ಎಲ್ಲ ಪ್ರಶ್ನೆಗಳು ಡಾಕ್ಟರ್ ಪ್ರೇಮನಾಥರ ವೈಯಕ್ತಿಕ ಜೀವನಕ್ಕೆ ಸಂಬಂಧ

ಪಟ್ಟವು. ಅವುಗಳಿಗೆ ಮ್ಯಾಜಿಸ್ಟ್ರೇಟರು, " ಈ ಸವಾಲುಗಳ ಉದ್ದೇಶವೇನೆಂದು ತಿಳಿಯದು " ಎಂದು ಆಕ್ಷೇಪಿಸಿದರು.

" ಸಾಕ್ಷಿಯ ನಿಜಸ್ವರೂಪವನ್ನು ತೆರೆದು ತೋರಿಸಿ, ಇವರು ಉಚ್ಚ ದರ್ಜೆಯ ಮನುಷ್ಯರಲ್ಲವೆಂಬುದನ್ನು ಸಿದ್ಧಪಡಿಸಬೇಕಾಗಿದೆ " ಎಂದು ಇರ್ಫಾನ ಅಲಿ ತಮ್ಮ ಉದ್ದೇಶವನ್ನು ತಿಳಿಸಿದರು.

ಇಂತಹ ಪ್ರಶ್ನೆಗಳಿಗೆ ಮ್ಯಾಜಿಸ್ಟ್ರೇಟರು ಎಡೆಕೊಡುವುದಿಲ್ಲ ಎಂದರು. ವಕೀಲರು ಪ್ರಶ್ನೆಗಳನ್ನೇ ಕೇಳುವುದಿಲ್ಲವೆಂದು ಕೋರ್ಟಿನಿಂದ ಹೊರಬಿದ್ದರು.

ಒಂದು ಗಂಟೆಯ ತರುವಾಯ, ಮ್ಯಾಜಿಸ್ಟ್ರೇಟರು ತೀರ್ಪು ಹೇಳಿದರು. ಎಲ್ಲ ಆರೋಪಿಗಳನ್ನೂ ಸೆಶನ್ಸ್ ಕಮಿಟ್ ಮಾಡಿದರು.

## ೩೦

ಗಾಯತ್ರಿಯಿಂದ ಹಲವು ಕಾಗದಗಳು ಬಂದಿದ್ದವು. ಮೊಕದ್ದಮೆ ಸೆಶನ್ಸ್ ಕಮಿಟ್ಟಾದ ಮೇಲೆ ಆರೋಪಿಗಳಿಗೆ ಮುಕ್ತಿಯಿಲ್ಲವೆಂದು ಬಗೆದು, ಜ್ಞಾನಶಂಕರರು ಗೌಸಖಾನನ ಸ್ಥಳಕ್ಕೆ ಫೈಜುಲ್ಲಾಹನನ್ನು ನಿಯಮಿಸಿ ಗೋರಖಪುರಕ್ಕೆ ತೆರಳಿದರು. ತನ್ನ ಜೀವಕ್ಕೆ ಚಡಪಡಿಕೆಯಾಗುವುದೆಂದು ವಿದ್ಯೆ ಎಷ್ಟು ಹೇಳಿಕೊಂಡರೂ ಕೇಳದೆ, ಮಾಯಾಶಂಕರನನ್ನೂ ಜೊತೆಯಲ್ಲಿ ಕರೆದೊಯ್ದರು.

ಅನೇಕ ವರುಷಗಳಿಂದ ಎಣಿಕೆಹಾಕುತ್ತಿದ್ದ ಸಮಸ್ಯೆಗೆ ಜ್ಞಾನಶಂಕರರು ಈ ಒಂದು ತಿಂಗಳಲ್ಲಿ ಪರಿಹಾರವನ್ನು ಕಂಡುಕೊಂಡಿದ್ದರು. ಗಾಯತ್ರಿಯ ಹೃದಯವನ್ನು ತಲುಪುವ ಹಾದಿಯನ್ನು ಹುಡುಕಿದ್ದರು. ಅವಳ ಧರ್ಮ ಭಾವನೆಗಳನ್ನು ಚದರಿಸುವ ಬದಲು ದೃಢಪಡಿಸಬಾರದೇಕೆ? ಅವಳನ್ನು ತನ್ನವಳನ್ನಾಗಿಸುವ ಬದಲು ತಾನೇ ಏಕೆ ಅವಳವನಾಗಬಾರದು?

ಜ್ಞಾನಶಂಕರರು ಈಗ ಮೊದಲಿಗಿಂತ ಹೆಚ್ಚು ಉತ್ಸಾಹದಿಂದ ದಕ್ಷತೆಯಿಂದ ಕೆಲಸ ಕೈಕೊಂಡರು. ಅವರ ವ್ಯವಸ್ಥೆ ಕಾರ್ಯಪಟುತ್ವಗಳು ಗಾಯತ್ರಿಯ ಸದಿಚ್ಛೆಯನ್ನು ಶ್ರದ್ಧೆಯಾಗಿ ಮಾರ್ಪಡಿಸುತ್ತಿದ್ದವು. ಅವಳ ಪ್ರತ್ಯುಪಕಾರ ವಿವಿಧರೂಪಗಳಲ್ಲಿ ಪ್ರಕಟವಾಗುತ್ತಿತ್ತು: ವಿದ್ಯೆಗೆ ಬಗೆಬಗೆಯ ಉಡುಗೊರೆ ಕಳಿಸುವಳು; ಮಾಯಾಶಂಕರನನ್ನು ಜೀವಕ್ಕೆ ಮಿಗಿಲಾಗಿ

ಪ್ರೀತಿಸುವಳು. ಅವನಿಗೆ ಅಡ್ಡಾಡುವುದಕ್ಕೆ ಎರಡು ಟಾಂಗೆ, ಓದಿಸಲಿಕ್ಕೆ ಇಬ್ಬರು ಶಿಕ್ಷಕರು, ಅವನ ಚಾಕರಿಗೆ ಬೇರೆ ಎರಡು ಆಳು, ಹೊತ್ತುಹೊತ್ತಿಗೆ ಒಳ್ಳೊಳ್ಳೆಯ ತಿಂಡಿತಿನಿಸು – ತಾನೇ ಕಯ್ಯಾರೆ ಕೊಟ್ಟು ತಿನಿಸಬೇಕು,— ಅವನಿಗೆ ಕತೆ ಹೇಳುವುದು, ಅವನಿಂದ ತಾನು ಕೇಳುವುದು. ಮಾಯಾ ಶಂಕರ ತಾಯಿಯನ್ನೇ ಮರೆತ.

ಜ್ಞಾನಶಂಕರರ ಜೀವನದಲ್ಲಿಯೂ ವಿಶೇಷ ಪರಿವರ್ತನೆಯಾಯಿತು. ದಿನಾಲು ಸಂಜೆಯ ಹೊತ್ತು ಭಾಗವತ ಕೇಳುತ್ತಿದ್ದರು. ನಾಲ್ಕಾರು ಜನ ಸಾಧುಸಂತರು, ಅಭಿರುಚಿಯುಳ್ಳ ಸಜ್ಜನರು, ಶ್ರದ್ಧಾಳುಗಳು ಬಂದು ಕೂಡುತ್ತಿದ್ದರು; ಚಿಕ್ಕದೊಂದು ಧಾರ್ಮಿಕ ಸಭೆಯೆ ಸೇರುತ್ತಿತ್ತು. ಶ್ರೀಕೃಷ್ಣನ ಕುರಿತು ಚರ್ಚೆ, ಅವನ ಪ್ರೇಮಕಥೆಗಳು, ಒಮ್ಮೊಮ್ಮೆ ಕೀರ್ತನಗಳು ಜರುಗುತ್ತಿದ್ದವು. ಜನ ಪ್ರೇಮಪರವಶರಾಗಿ ಕಂಬನಿಗರೆಯುವರು; ಎಲ್ಲರಿಗಿಂತ ಹೆಚ್ಚು ಕಣ್ಣೀರು ಜ್ಞಾನಶಂಕರರ ಕಣ್ಣಲ್ಲಿ.

"ನಿಮ್ಮಲ್ಲಿ ನಿತ್ಯ ಕೃಷ್ಣಚರ್ಚೆ ನಡೆಯುತ್ತದೆ. ತೆರೆಯ ಏರ್ಪಾಟಾದರೆ ನಾನೂ ಬಂದೇನು." ಒಮ್ಮೆ ಗಾಯತ್ರಿಯೆಂದಳು.

ಅವಳೂ ಭಾಗವಹಿಸುವಂತೆ ಏರ್ಪಾಟು ಮರುದಿನವೇ ಆಯಿತು. ಭಕ್ತರ ಸಂಖ್ಯೆ ಹೆಚ್ಚಿತು. ಕೀರ್ತನ ಸಮಯದಲ್ಲಿ ಜನರು ಭಾವೋನ್ಮತ್ತರಾಗಿ ಕುಣಿಯುತ್ತಿದ್ದರು. ಗಾಯತ್ರಿಯ ಹೃದಯದಲ್ಲಿಯೂ ಪ್ರೇಮ ತರಂಗಗಳು ಏಳುತ್ತಲಿದ್ದವು. ಜ್ಞಾನಶಂಕರರ ಚಿತ್ತಸ್ಥೈರ್ಯವೂ ಕಲಕುತ್ತಿತ್ತು. ಆ ಕ್ಷಣದಲ್ಲಿ ಅವರ ಚಿತ್ತ ಶ್ರೀಕೃಷ್ಣನ ಪವಿತ್ರ ಪ್ರೇಮದಿಂದ ಬೆಳಗುತ್ತಿತ್ತು; ಆ ಬೆಳಕಿನಲ್ಲಿ ತಮ್ಮ ಕುಟಿಲತೆ, ಕ್ಷುದ್ರತೆ ಅತ್ಯಂತ ಹೇಯವಾಗಿ ಕಾಣುತ್ತಿದ್ದವು. ಸಮ್ಮೇಲನ ಚದರಿತೆಂದರೆ ಮತ್ತೆ ಸ್ವಾರ್ಥಾಂಧಕಾರ.

ಒಮ್ಮೆ ವೃಂದಾವನದಿಂದ ರಾಸಲೀಲಾ ಮಂಡಲಿ ಬಂದಿತು. ತಿಂಗಳುಗಟ್ಟಲೆ ಲೀಲೆಗಳು ನಡೆದವು. ನೋಡಲು ಊರೇ ಕಿತ್ತಿ ಬರುತ್ತಿತ್ತು. ಜ್ಞಾನಶಂಕರರು ಪ್ರೇಮದ ಮೂರ್ತಿಯಾಗಿ ಎಲ್ಲರನ್ನು ಆದರಿಸುತ್ತಿದ್ದರು. ಹೆಂಗುಸರಿಗಾಗಿ ಪ್ರತ್ಯೇಕ ವ್ಯವಸ್ಥೆಯಿತ್ತು. ಅಲ್ಲಿ ಗಾಯತ್ರಿಯ ಆದರಾತಿಥ್ಯ. ಕೃಷ್ಣನ ಮಥುರಾಗಮನ ಲೀಲೆಯ ದಿನ, ನಂದಯಶೋದೆಯರ

ಹೃದಯವಿದಾರಕ ಮಾತುಗಳನ್ನು ಕೇಳಿ ಜನರು ನಿಜವಾಗಿ ಅತ್ತೇ ಬಿಟ್ಟರು. ಗಾಯತ್ರಿಯಂತೂ ಎಚ್ಚರುದಪ್ಪಿ ಬಿದ್ದುಬಿಟ್ಟಳು.

ಎಚ್ಚತ್ತಾಗ ಅವಳು ತನ್ನ ಶಯನಗೃಹದಲ್ಲಿದ್ದಳು. ಸ್ವಪ್ರಭಾತೆ ನೆಲೆ ಸಿತ್ತು. ಜ್ಞಾನಶಂಕರರು ಅವಳಿಗೆ ಗಾಳಿ ಹಾಕುತ್ತಿದ್ದರು. ಮತ್ತೊಬ್ಬರಿಲ್ಲ. ಗಾಯತ್ರಿಯನ್ನು ಅಲಸಿಕೆ ಆವರಿಸಿತ್ತು. ಜ್ಞಾನಶಂಕರರಿಗೆ ಕುಳಿತುಕೊಳ್ಳು ವಂತೆ ಸನ್ನೆ ಮಾಡಿದಳು. ಶೈಶವೋಚಿತವಾದ ಸರಲತೆಯಿಂದ ಅವರ ತೊಡೆಯಮೇಲೆ ತಲೆಯಿಟ್ಟು ಆಶಾಪೂರ್ಣಭಾವದಿಂದ "ನನ್ನನ್ನು ವೃಂದಾ ವನಕ್ಕೆ ಕರೆದುಕೊಂಡು ಹೋಗಿರಿ" ಎಂದಳು.

ಮೂರನೆಯ ದಿನ ರಾಸಲೀಲೆ ಮುಗಿಯಿತು. ಅಂದೇ ಜ್ಞಾನಶಂಕರರು ಗಾಯತ್ರಿಯೊಂದಿಗೆ ವೃಂದಾವನಕ್ಕೆ ತೆರಳಿದರು.

## ೩೧

ಸೆಶನ್ಸ್ ಜಜ್ ನ್ಯಾಯಾಲಯದಲ್ಲಿ ಲಖನಪುರದ ಆಪಾದಿತರು ಪುನಃ ರಕ್ಷಣೆಯ ಹೇಳಿಕೆಯಿತ್ತರು. ಮನೋಹರ ಅತ್ಯಂತ ನಿರ್ಭಯವಾಗಿ ಎಲ್ಲ ಘಟನೆಗಳನ್ನು ನಿವೇದಿಸಿದ. ಕೊನೆಯಲ್ಲಿ "ಪ್ರಭೂ, ಇದ್ದದ್ದು ಇಷ್ಟು. ಗೌಸ ಖಾನನ್ನು ಇದೇ ಕೊಡಲಿಯಿಂದ ಇದೇ ಕೈಗಳಿಂದ ನಾನೇ ಕೊಂದೆ. ನನ್ನ ಜತಿಗಾರು ಯಾರೂ ಇಲ್ಲ; ಯಾರ ಇಚಾರಾನೂ ತಕ್ಕೊಂಡಿಲ್ಲ, ಯಾರ ಸಹಾಯವೂ ಇಲ್ಲ. ಇನ್ನು ತಮ್ಮನ್ನು ಕೂಡಿದ್ದು— ಬೇಕಾದರೆ ಇಡೀ ಊರಿಗೆ ಫಾಂಸಿ ಕೊಡಿರಿ. ಬೇಕಾದರೆ ಕರಿನೀರಿಗೆ ಕಳಿಸಿರಿ; ಬೇಕಾದರೆ ಬಿಟ್ಟು ಬಿಡಿರಿ. ಫೈಜು, ಬಿಸೇಸರ, ಫೌಜದಾರರು ಹೇಳಿದ್ದು ಪೂರಾ ಸುಳ್ಳಯ್ತಿ. ಫೌಜದಾರರ ವಿಷಯ ನಾ ಹೇಳೂದಿಲ್ಲ. ಫೈಜುನ್ನ, ಬಿಸೇಸರನ್ನ ಬೇಕಾದರೆ ಮನಿಗೆ ಕರಿಸಿಕೊಂಡು ಗುಟ್ಟಾಗಿ ಕೇಳಿರಿ— ಪೋಲೀಸರ ಹಿಂಸೆ ಆಗೂದಿ ಲ್ಲಂತ ಬರೋಸೆ ಕೊಡಿರಿ.—ನನ್ನ ಸತ್ತೇದ ಅಸತ್ತೇದ ಪರೀಕ್ಷಾ ಆಕ್ಕಯ್ತಿ. ಇನ್ನೇನು ಹೇಳ್ಲಿ ? ತಾವೂ ಪಂಚರೂ ಕೂಡಿಕ್ಯಾಸ ಹಾಲಿದ್ದದ್ದು ಹಾಲು, ನೀರಿದ್ದದ್ದು ನೀರು ಮಾಡ್ರಿ."

ಕೋರ್ಟು ಎದ್ದಿತು. ಆರೋಪಿಗಳೆಲ್ಲ ಲಾಕಪ್ಪಿಗೆ ಹೊರಟರು. ಹಣೆ ಯಲ್ಲಿ ಬರೆದಂತೆ ಆಗಿಯೇ ತೀರುವುದೆಂದು ಎಲ್ಲರೂ ಎಂದುಕೊಳ್ಳುತ್ತಿದ್ದರು.

ದುಃಖರನ ಭಗತನೊಬ್ಬ ಮಾತ್ರ ಕುದಿಯುತ್ತಿದ್ದ. ಸ್ವಲ್ಪ ಸಂಧಿ ಸಿಕ್ಕರೆ ಮನೋಹರನನ್ನು ಏನು ಹೇಳಲಿ ಎಂದುಕೊಳ್ಳುತ್ತಿದ್ದ. ದಾರಿಯಲ್ಲಿ ಮನದ ಕೋಪವನ್ನು ಹೊರಹಾಕಲು ಅವನಿಗೆ ಅವಕಾಶ ಸಿಕ್ಕಿತು. "ಇವೊತ್ತು ಸತ್ಯೇವು ಪರಮಾಣ ಅಂತ ಏನೇನೊ ಬೊಗುಳಿದಿ. ಬಾಣಾ ಬಿಡೋ ಮುಂಚಾಕ್ಕ ಇಚಾರ ಮಾಡಬೇಕು ಮನಸ್ಯಾ, ಇದು ಯಾರಿಗೆ ತಾಕತ್ತೈತಂತ. ಅನಾಥ ಮಕ್ಕಳಿಗೆ ಹೆಂಗುಸುರಿಗೆ ಯಾರು ದಿಕ್ಕು? ದೈವ ಗೇಡಿಗೋಳು ಉಪವಾಸ ಒರಲತಿರಬೌದು. ನೀ ಒಬ್ಬಾವ ಇಡೀ ಊರಿಗೆ ಗೋಳು ತಂದಿಕ್ಕಿದಿ." ಎಂದ.

ಇದೇ ದುಃಖ ಮನೋಹರನನ್ನು ಹಗಲಿರುಳೂ ಕೊರೆಯುತ್ತಿತ್ತು. ಕೊಲೆ ಮಾಡುವಾಗಲೂ ಈ ಚಿಂತೆಯಿತ್ತು. ಅದಕ್ಕೇ ತಾನಾಗಿ ಹೋಗಿ ಅಪರಾಧ ಒಪ್ಪಿಕೊಂಡನು. ಊರಿಗೆ ತೊಂದರೆಯಾಗಬಾರದೆಂದು ತಾನೆಷ್ಟು ಮಾಡಬೇಕೊ ಅಷ್ಟು ಮಾಡಿದ. ಈ ದುಷ್ಕೃತ್ಯಕ್ಕಾಗಿ ತನಗೆ ಎಷ್ಟೇ ಪಶ್ಚಾತ್ತಾಪವಾದರೂ ಜನ ತನ್ನನ್ನು ಕ್ಷಮಾದೃಷ್ಟಿಯಿಂದ, ಏಕೆ ಸಹಾನುಭೂತಿಯಿಂದ ಕಾಣುವರೆಂದು ಅವನು ನಂಬಿದ್ದ. ತನ್ನನ್ನು ಸುಡುವುದಕ್ಕೆ ಒಳಗಿನ ಬೆಂಕಿಯೇನು ಕಡಿಮೆಯಿದೆಯೇ, ಮೇಲೆ ಎಣ್ಣೆ ಹೊಯ್ಯುವುದಕ್ಕೆ? ದುಖರನನ ಕಟುವಾಕ್ಯಗಳನ್ನು ಕೇಳಿ ಅವನ ಒಡಲು ತಳಮಳಿಸಿತು. ಅವನು ಅದಕ್ಕೆ ಉತ್ತರ ಕೊಡಲಿಲ್ಲ.

ಮನೋಹರ ಸಂಜೆಯ ಊಟ ತೆಗೆದುಕೊಳ್ಳಲಿಲ್ಲ. ವಿಚಾರ ಮಾಡುತ್ತ ಬಿದ್ದುಕೊಂಡ. ಗಂಡಸರೇ,—ಊರನ್ನು ಉಳಿಸುವುದಕ್ಕೆ ತಾನು ಮಾಡುವುದೆಲ್ಲ ಮಾಡಿದ, ಆದರೂ ಅತ್ಯಾಚಾರ ನಡೆದದ್ದು ಕಾಲಗತಿ ಎಂದು ತಿಳಿದವರೇ - ಹೀಗೆನ್ನುತ್ತಿರುವಾಗ ತಿಳಿಯದ ಹೆಂಗುಸರು ಏನಾಡಿಕೊಳ್ಳುತ್ತಿರಬಹುದು? ಬಿಲಾಸಿಗೆ ಊರೊಳಗೆ ಮೋರೆ ಎತ್ತದಂತಾಗಿದ್ದೀತು. ಈಗಿನ್ನೂ ಸುಗ್ಗಿಯಾಗಿದೆ, ಮನೆಯಲ್ಲಿ ಸ್ವಲ್ಪ ಇರಬಹುದು. ಆದರೆ ಬಿತ್ತಿಗೆ ಆಗಿರಲಿಕ್ಕಿಲ್ಲ. ಚೈತ್ರದಲ್ಲಿ ಬೆಳೆ ಬರದಿದ್ದರೆ, ಮಕ್ಕಳು ಮರಿ ಕೂಳು ಕೂಳು ಎನ್ನಲಿಕ್ಕೆ ಹತ್ತಿದರೆ, ಆಗ ಅವಳ ಸ್ಥಿತಿ ಏನಾದೀತು? ಈ ಗೋಳು ಒಂದೆರಡು ವರುಷದ್ದಲ್ಲ; ಎಲ್ಲರನ್ನೂ ಕರಿನೀರಿಗೆ ಕಳಿಸಿದರೆ ಸಾಯುವ ತನಕ ಅಳುವುದು!

ವಿಚಾರದಲ್ಲಿಯೆ ಮನೋಹರನಿಗೆ ಜಂಪು ಹತ್ತಿತು. ಒಂದು ಕನಸು: ದೊಡ್ಡ ಬಯಲು; ಸಾವಿರಾರು ಮಂದಿ ನೆರೆದಿದ್ದಾರೆ; ಶೂಲ ಸಿದ್ಧವಾಗಿದೆ; ತನ್ನನ್ನು ವಧಸ್ಥಾನಕ್ಕೆ ಒಯ್ಯುತ್ತಿದ್ದಾರೆ; ಎಲ್ಲರೂ ತಿರಸ್ಕಾರದಿಂದ ನೋಡುತ್ತಿದ್ದಾರೆ; ಸುತ್ತುಕಡೆಯಿಂದಲೂ ಊರು ಹಾಳುಮಾಡಿದವ ಇವ ಎಂಬ ಧ್ವನಿ. ಆಮೇಲೆ ಅವನಿಗೆನಿಸಿತು: ತಾನು ಸತ್ತುಬಿಟ್ಟಿದ್ದಾನೆ; ಹಲವಾರು ಭೂತ ಪಿಶಾಚಗಳು ತನ್ನನ್ನು ಸುತ್ತುವರಿದಿವೆ; ನಮ್ಮನ್ನೆಲ್ಲ ಕೂಳು ಕೊಳೆಂದು ಹಲುಬಿಸಿ ಸಾಯಿಸಿದವ ಇವನೇ, ಈ ಪಾಪಿಯನ್ನು ಎತ್ತಿ ಕಿಚ್ಚಿನಲ್ಲಿ ಒಗೆಯಿರಿ ಎನ್ನುತ್ತಿವೆ. ಮನೋಹರ ಭಯದಿಂದ ಚೀರಿದ. ಎಚ್ಚತ್ತು ಕಣ್ದೆರೆದ ಕೋಣೆಯೆಲ್ಲ ಕತ್ತಲೆ. ಅವನ ಮನದಲ್ಲಿ ತಟ್ಟನೆ ಒಂದು ವಿಚಾರ ಮೂಡಿತು: ಈ ಎಲ್ಲ ಕೌತುಕವನ್ನು ನೋಡುವುದಕ್ಕೆ, ಕೇಳುವುದಕ್ಕೆ ಬದುಕಬೇಕೇ ತಾನು ? ಇಡೀ ಊರು, ಇಡೀ ದೇಶ ತನ್ನನ್ನು ತಿರಸ್ಕರಿಸುತ್ತಿದೆ. ಬಲರಾಜನೂ ಮನಸ್ಸಿನಲ್ಲಿ ಬಯ್ಯುತ್ತಿರಬಹುದು. ಇಂದು ದುಃಖರನ ಅಂದ, ನಾಳೆ ಮತ್ತೊಬ್ಬ ದನಿಗೂಡಿಸಬಹುದು. ಕಾದಿರನಿಗೂ ಈ ಬಂದಿವಾಸದಿಂದ ಕಷ್ಟವಾಗಿದ್ದೀತು. ಅನ್ಯರಂತೂ ಅನ್ಯರು, ಬಲರಾಜನಾದರೂ ಉಳಿದುಕೊಳ್ಳಲಿಲ್ಲ. ಅವನ ತಾರುಣ್ಯದ ಮೇಲೂ ತನಗೆ ಕನಿಕರ ಹುಟ್ಟಲಿಲ್ಲ. ತನ್ನ ಮುದ್ದು ಮಗನನ್ನು, ಹರಯದ ಮಗನನ್ನು ತನ್ನ ಕೈಯಿಂದಲೇ........ ದೇವರೇ ಈ ದುಃಖ ಸಹಿಸಲಾರೆ. ತನಗೆ ಗಲ್ಲು ಇನ್ನೂ ಎಂದೊ ಏನೊ! ಅಥವಾ ಯಾರು ಬಲ್ಲರು, ಎಲ್ಲರೊಂದಿಗೆ ತನಗೂ ಕರಿನೀರೇ ಆದರೆ ಕೊನೆವರೆಗೂ ಮಂದಿಯ ಕಟುವಚನ ಕೇಳುತ್ತಿರಬೇಕು....

## ೩೨

ಗೌಸಖಾನ ಸ್ಥಾನದಲ್ಲಿ ಫೈಜುಲ್ಲಾಹನ ನಿಯುಕ್ತಿ ಊರಿನ ದುಃಖಗಳ ಹುಣ್ಣಿನಮೇಲೆ ಬರೆ ಕೊಟ್ಟಂತೆಯೇ ಇತ್ತು. ಮೊದಲ ದಿನವೇ ತಿಕ್ಕಾಟ ಜಗ್ಗಾಟ ಆರಂಭವಾಯಿತು. ವಿರೋಧಾಗ್ನಿಯನ್ನು ಶಾಂತಗೊಳಿಸುವುದು ಫೈಜುವಿಗೆ ಅವಶ್ಯವೆನಿಸಲಿಲ್ಲ. ಅವನು ಊರಿನ ಸರ್ವಸತ್ತಾಧಾರಿಯೇ ಆಗಿದ್ದ. ಅವನ ಅಪ್ಪಣೆಯೆಂದರೆ ಕಾಯುದೆಯೆ. ಯಾರೂ ಪಿಟ್ಟೆನ್ನುವಂತಿಲ್ಲ. ಊರಿನ ಹಾಲು-ಬೆಣ್ಣೆ, ಕಟ್ಟಿಗೆ-ಕುರುಳು, ಹೊಟ್ಟು-ಮೇವು, ಕಾಯಿ-ಪಲ್ಲೆ,

ಎತ್ತುಗಳು ಎಲ್ಲವೂ ಅವನವಾಗಿದ್ದವು, ಗೌಸಖಾ ಇಡಿಯ ಜೀವನದಲ್ಲಿ ಪಡೆಯದ ಅಧಿಕಾರ, ಕಾಲದ ಪರಿವರ್ತನೆಯಿಂದ, ದೈವವಶದಿಂದ ಫೈಜು ಲ್ಲಾಹನಿಗೆ ಮೊದಲ ದಿನವೇ ಉಂಟಾಯಿತು. ಅನ್ಯಾಯ-ಸ್ವೇಚ್ಛೆಗಳ ಬ್ರಯಲಿನಲ್ಲಿ ಯಾವ ಅಡೆತಡೆಯೂ ಇರಲಿಲ್ಲ. ಫೈಜುಲ್ಲಾಹಖಾನ ನಿತ್ಯ ಬೆಳಗಾಗುತ್ತಲೂ ಜಟಕದಲ್ಲಿ ಊರು ಸುತ್ತುತ್ತಿದ್ದ. ಬಡಿಗೆ ಹಿಡಿದ ಕರ್ತಾರ, ಬಿಂದಾ ಹಿಂದಿರುತ್ತಿದ್ದರು. ಏನಾದರೂ ಬೇಟೆ ಸಿಕ್ಕರೆ ತಂದು ಹಾಕಿಕೊಳ್ಳು ತ್ತಿದ್ದರು. ಅವರ ಅತ್ಯಾಚಾರಕ್ಕೆ ಊರೆಲ್ಲ ಬಲಿಯಾಗಿದ್ದರೂ ಮನೋಹರನ ಮನೆಯಮೇಲೆ ಅವರ ಕೃಪೆ ವಿಶೇಷ. ಬಿಲಾಸಿಯ ಮೇಲೆ ಪುಷ್ಯದಲ್ಲಿಯೇ ಕಂದಾಯದ ಬಗ್ಗೆ ವ್ಯಾಜ್ಯ ಹೂಡಿ ಅವಳ ದನಕರುಗಳನ್ನೆಲ್ಲ ಮಾರಿಸ ಲಾಯಿತು. ಆಕೆ ಅಂಜಿ ಮನೆಯ ಹೊರಗೇ ಬರುತ್ತಿರಲಿಲ್ಲ. ಹಿಂಗಾರಿ ಬೆಳೆ ಹೊಲದಲ್ಲಿಯೇ ಒಣಗುತ್ತಿತ್ತು. ಮಾಡುವವರಿಲ್ಲ, ಮುಟ್ಟುವವರಿಲ್ಲ, ತನ್ನವೆಂಬ ಎತ್ತುಕತ್ತೆಗಳಿಲ್ಲ, ಹೆರವರನ್ನು ಕೇಳಲು ಮುಖವಿಲ್ಲ.

ಆಡಾಡುತ್ತ ಚೈತ್ರ ಮಾಸ ಬಂದಿತು. ಗೇಣಿಯ ತಗಾದೆ ಸುರುವಾ ಯಿತು. ಊರಿನ ಉಳಿದಿದ್ದ ಜನ ಈಗ ಎಚ್ಚತ್ತಿತು. ಗೇಣಿ ಕೊಡುವುದೂ ಉಂಟೆಂಬುದನ್ನು ಅವರು ಮರೆತುಬಿಟ್ಟಿದ್ದರು. ಬಡತನದಲ್ಲಿ ಮನುಷ್ಯ ಭಾಗ್ಯಕ್ಕೇ ಶರಣೆನ್ನುತ್ತಾನೆ. ಫೈಜುಲ್ಲಾಹನ ಕಡ್ಡಾಯ ಆರಂಭವಾಯಿತು. ಕೆಲವರನ್ನು ಚಾವಡಿಯ ಎದುರು ಬಿಸಿಲಲ್ಲಿ ನಿಲ್ಲಿಸಿದ, ಕೆಲವರನ್ನು ಬಟ್ಟೆ ತೆಗೆಸಿ ಹೊಡೆಸಿದ; ದೀನ ನಾರಿಯರೊಡನೆ ಇನ್ನೂ ಹೆಚ್ಚಿನ ಪಾಶವಿಕ ವ್ಯವ ಹಾರ ನಡೆಯಿತು—ಬಳೆ ಒಡೆಯುವುದು, ಮುಡಿ ಸೆಳೆಯುವುದು ಇತ್ಯಾದಿ. ಈ ಅತ್ಯಾಚಾರಗಳನ್ನು ತಡೆಯುವವರು ಯಾರಿದ್ದರು? ಸತ್ಯಾಗ್ರಹದಲ್ಲಿ ಅನ್ಯಾಯವನ್ನು ದಮನಿಸುವ ಶಕ್ತಿಯಿದೆ ಎಂಬ ಮಾತು ಹುಚ್ಚುತಿಳಿವಳಿಕೆ ಯೆಂದು ಸಿದ್ಧವಾಯಿತು.

ಜ್ಯೇಷ್ಠ ಕಳೆದರೂ ಒಂದು ಕವಡೆಯ ವಸೂಲಿಯೂ ಆಗಲಿಲ್ಲ. ಹೊಲಗಳಲ್ಲಿ ಧಾನ್ಯವಿದ್ದರೆ ಯಾವದಾದರೂ ಸಾವುಕಾರ ಮುಂದೆ ಬರಬಹು ದಿತ್ತು. ಹಾಳು ಹೊಲ ಯಾರು ಮಾತಾಡಿಸಬೇಕು? ಕೊನೆಗೆ ಜ್ಞಾನಶಂಕರರ ಹೊಲ ಬಿಡಿಸಿಕೊಳ್ಳಲು ನಿರ್ಧರಿಸಿದರು. ಸರಿ, ದಾವೆಯಾಯಿತು. ಊರವರಿಗೆ

ಹಣದ ಬಲ ದೊರೆಯಲಿಲ್ಲ. ಏಕಪಕ್ಷದಿಂದ ತೀರ್ಪಾಗಿ ಎಲ್ಲರ ಹೊಲಗಳೂ ಕೈಬಿಡುವವೆಂದು ತಿಳಿದುಕೊಂಡರು.

ತೀರ್ಪಿನ ದಿನ ಬಂದಿತು. ಕರ್ತಾರಸಿಂಹ ಮಲ್ಲಿನ ತೆಳು ಅಂಗಿ, ಗುಲಾಬಿ ಪಾವುಡ ತೆಗೆದ, ಪಾದರಕ್ಷೆಗಳಿಗೆ ಎಣ್ಣೆ ಉಣಿಸಿದ, ಬಡಿಗೆಯನ್ನು ಎಣ್ಣೆಹಚ್ಚಿ ಉಜ್ಜಿದ, ತಲೆಬಾಚಿದ, ಹಣೆಗೆ ವಿಭೂತಿ ಹಚ್ಚಿದ. ಫೈಜುಲ್ಲಾಹ ಮತ್ತು ಬಿಂದಾಮಹಾರಾಜರೂ ತಮ್ಮ ತಮ್ಮ ಪರಿಯಲ್ಲಿ ಸಿಂಗಾರವಾದರು. ಬಿಟ್ಟಿ ಆಳುಗಳಮೇಲೆ ಸಾಮಾನು ಹೊರಿಸಿಕೊಂಡು ಕಚೇರಿಗೆ ಹೊರಡಲು ಸಿದ್ಧರಾದರು. ಇನ್ನು ಖಾನಸಾಹೇಬರ ನಮಾಜೊಂದು ಬಾಕಿ.

ಎಂಟಕ್ಕೆ ಸಾಹೇಬರ ನಮಾಜು ಮುಗಿಯಿತು. ಬಿಂದಾ ಕರ್ತಾರನಿಗೆ ಕುದುರೆ ತರಲು ಆಜ್ಞಾಪಿಸುತ್ತಿದ್ದ. ಆಗ ಎದುರುಗಡೆ ಸುಖ್ಖು ಚೌಧರಿ ಬರುವುದು ಕಂಡಿತು. ತಲೆಯಮೇಲೆ ಕಿವಿಟೊಪ್ಪಿಗೆ, ಹಣೆಗೆ ಚಂದನ, ಮೈಮೇಲೆ ಚಾದರ, ಕೈಯೊಳಗೆ ಒಂದು ಚಿಮಟಿಗೆ. ಬಂದು ಚಾವಡಿಯಲ್ಲಿ ನೆಲದಮೇಲೆ ಕುಳಿತುಕೊಂಡ. ಕರ್ತಾರನಿಂದ ಚಿಲಿಮೆ ತೆಗೆದುಕೊಂಡು ದೊಡ್ಡದೊಂದು ಜುರಿಕೆ ಎಳೆದು ಹೊಗೆಬಿಡುತ್ತ, "ಇವತ್ತು ದಾವೆಯ ತಾರೀಕು ಅಲ್ಲವೆ?" ಎಂದ.

"ನನಗೆ ಬೇರೆ ದಾರಿಯೆ ಇದ್ದಿಲ್ಲ, ಏನು ಮಾಡಲಿ? ಹುಕುಮು-ಕಾಯದೆ ಅದಾವ ನೋಡು ಚೈತ್ರ, ವೈಶಾಖ, ಜ್ಯೇಷ್ಠ ಮೂರು ತಿಂಗಳು ಬೆನ್ನುಹತ್ತಿದೆ. ಇದಕಿಂತ ಹೆಚ್ಚು ಏನಯ್ತು ನನ್ನ ಕೈಯಾಗ?" ಎಂದು ತಾನು ದಯೆ ಸಜ್ಜನಿಕೆಗಳ ಮೂರ್ತಿಯೋ ಎಂಬ ಭಾವದಿಂದ ಚೌಧರಿಯ ಕಡೆ ನೋಡಿದ.

"ಒಳ್ಳೇದು. ಒಟ್ಟು ನಿಮ್ಮದು ಎಷ್ಟು ರೂಪಾಯಿ ಆಕ್ಕಯ್ತು? ವೆಚ್ಚಾನೂ ಕೂಡಿಸಿ ಹೇಳಿರಿ." ಎಂದು ಚೌಧರಿ ನಡದಿಂದ ನೋಟುಗಳ ಕಟ್ಟನ್ನು ತೆಗೆದ. ಒಂದು ಚೀಲದಿಂದ ಕೆಲವು ರೂಪಾಯಿಗಳನ್ನು ತೆಗೆದು ಖಾನಸಾಹೇಬನ ಕಡೆಗೆ ಪರೀಕ್ಷಾಭಾವದಿಂದ ನೋಡಿದ.

ಖಾನಸಾಹೇಬ ಹೌಹಾರಿದ. ವರುಷಗಟ್ಟಲೆ ನೀರೆರೆದು ಜೋಪಾನ ಮಾಡಿದ ಆಸೆಬಳ್ಳಿ ಕಣ್ಣೆದುರಿಗೇ ದನದ ಪಾಲಾಗುತ್ತಿತ್ತು. ಈ ಸುಯೋಗ

ಕ್ಕಾಗಿ ತಾನೆಷ್ಟು ಯೋಜನೆ ಮಾಡಿದ್ದ, ಎಷ್ಟು ಕೂಟನೀತಿಯಿಂದ ಕೆಲಸ ಸಾಗಿಸಿದ್ದ, ಎಷ್ಟು ಅತ್ಯಾಚಾರ ಎಸಗಿದ್ದ !

"ಇದರ ತೀರ್ಮಾನ ಈಗ ಕೋರ್ಟಿನ ಕೈಯಾಗಯ್ತಿ." ಫೈಜು ಅತ್ಯಂತ ಗಂಭೀರಭಾವದಿಂದ ಉತ್ತರವಿತ್ತ, ಕೋರ್ಟಿನ ಹೆಸರೆತ್ತಿ ಚೌಧರಿಯನ್ನು ಹೆದರಿಸಬೇಕೆಂದು.

"ಹಂಗಿದ್ದರೆ ಅಲ್ಲಿಗೇ ಹೋಗಿರಿ," ಎಂದ ಚೌಧರಿ.

ಈ ನೀತಿಯಿಂದ ಕೆಲಸ ಕೈಗೂಡದೆಂದು ಫೈಜುಗೆ ತಿಳಿಯಿತು. ಇವನು ಕೋರ್ಟಿನಲ್ಲಿಯೆ ಬಂದು ಈ ರೂಪಾಯಿ ಎಣಿಸಿಬಿಟ್ಟರೆ ತಾವು ತೆಪ್ಪಗೆ ಬೆಪ್ಪಾಗಿ ಬರಬೇಕಾದೀತು ಎಂದುಕೊಂಡು ಮೆಟ್ಟುಗಳನ್ನು ಕಳಚಿ ಬಿಟ್ಟು ಬಂದು ಲೆಕ್ಕ ನೋಡಿದ. ಕೋರ್ಟಿನ ವೆಚ್ಚ, ವಕೀಲರ ವೆಚ್ಚ, ಜಮೀನುದಾರಿ ಕಪ್ಪ, ಮೇಲ್ಕಾಣಿಕೆ ಇತ್ಯಾದಿಗಳನ್ನೆಲ್ಲ ಲೆಕ್ಕಮಾಡಿ, "ಒಟ್ಟು ೧೭೫೦ ರೂಪಾಯಿ ಆಗುತ್ತದೆ" ಎಂದು ಹೇಳಿದ.

"ಮತ್ತೊಮ್ಮೆ ನೋಡಿರಿ, ಇನ್ನೂ ಏನಾದರೂ ಉಳಿದಯ್ತೇನೋ ಮತ್ತ. ಆದರ ಖಂಡಿತ ತಿಳಕೋರಿ, ಲೆಕ್ಕದಕಿಂತ ಒಂದು ಪೈ ಹೆಚ್ಚಿಗಿ ತೆಕ್ಕೊಂಡರೆ ನಿಮಗೆ ಒಳ್ಳೇದಾಗಾಕಿಲ್ಲ."

"ಖಾನಸಾಹೇಬ, ಮತ್ತೊಮ್ಮೆ ಲೆಕ್ಕಾಮಾಡಿ ನೋಡಿರಿ." ಬಿಂದಾ ಸಾಶಂಕನಾಗಿ ಹೇಳಿದ.

"ಬರೋಬರೀನಃ ಮಾಡ್ಯಾರು. ದಿನಾ ದಿನಾ ಇದಃ ದಗದ ಅವರದು. ತಾ, ತೆಗಿ ೧೭೫೦ ರೂಪಾಯಿ" ಕರ್ತಾರನೆಂದ.

"೧೭೫೦ ತೆಗೊಳ್ಳೋದಿದ್ದರ ಕೋರ್ಟಿನಾಗಃ ತೆಕ್ಕೋರಿ. ಇಲ್ಲಾಂದರ ೧೦೦೦ಕ್ಕಿಂತ ಹೆಚ್ಚು ಕೊಡಾಣಿಲ್ಲ." ಚೌಧರಿ ಹೇಳಿದ.

"ಮತ್ತು ಕೋರ್ಟಿನ ವೆಚ್ಚ?" ಫೈಜು ಕೇಳಿದ.

ಚೌಧರಿ ಸರ್ರನೆ ಚಿಮುಟಗೆ ಎತ್ತಿ ಫೈಜುಲ್ಲಾಹನ ತಲೆಗೆ ಕಸುವಿಂದ ಹೊಡೆದ. ಅವನು ಬಿದ್ದುಬಿಟ್ಟ. ಚೌಧರಿ ಹೇಳಿದ: "ಇದೇ ಕೋರ್ಟ್ ವೆಚ್ಚ! ಬೇಕಾದರೆ ತೆಕ್ಕೊ. ಬಂಡ, ಈಟ ಬ್ಯಾಗನ ಕಣ್ಣಾಗ ನೆಶಾ ಬೆಳೀತಃ? ನೀನೂ ಒಬ್ಬ ಜಮೀನದಾರರ ಕುಳಾ ಅದೀ, ನಿಮ್ಮನಿ ನಾ ನೋಡಿ

ಬಂದೀನಿ. ನಿಮ್ಮ ಎಪ್ಪ–ಎವ್ವ, ಎಣ್ಣ ತಮ್ಮ, ಎಲ್ಲರೂ ಬಿಟ್ಟಿ ಮಾಡಿ ಮಾಡಿ ಸಾಯ್ತಾರು. ನೀ ಒಂದ್ನಾಕು ಅಕ್ಸರ ಕಲ್ತು—ಬೂಮಿ ವ್ಯಾಗ ಕಾಲೂರವಲ್ಲಿ—ಬಡಬಗ್ಗರನ್ನ ಸುಲೀತಾ ತಿರುಗುತಿ. ನಾ ಕಚೇರಿಗೆ ಹೋಗಿ ಕೇಳಿಕೊಂಡು ಬಂದೀನಿ; ಎಂಟ್ನೂರರ ದಾವೆ ಆಯ್ತು, ನೂರು ರೂಪಾಯಿ ಕೋರ್ಟ್ ಖರ್ಚು. ನೀ ಬೇಡುತೀ ೧೭೫೦! ಯಾಕಪಾ ಠಾಕೂರ, ನೀನೂ ತುರ್ಕನ ಸಂಗತೀ ಬಿದ್ದು ನಿನ್ನವರನ್ನ ಮರತುಬಿಟ್ಟೀನು? ಯಾಕ ಹಚ್ಚುತೀ ಈ ಚಂದನ? ಧನದ ಬೆನ್ನುಹತ್ತಿ ಧರಮಾ ಮರತಿ. ಧನ ಬೇಕಽ ನಿನಗ? ನಿನ್ನ ಬಾಗ್ಯೇದಾಗ ಧನ ಬರದಿತ್ತಂದರ ತಕ್ಕೋ ಈ ಚೀಲ. ಕಡುಪಾಪಿ ನೀನು. ನಿನ್ನ ಕೈ ಹತ್ತಿದರೆ ಬಂಗಾರಾನೂ ಮಣ್ಣಾಕ್ಕಯ್ತಿ. ಈ ಚೀಲಾ ಮುಟ್ಟಿನೋಡು—ಹಂಚಿನಬಿಲ್ಲಿ ಆಗ್ತಾವು ಎಲ್ಲಾ.''

ಕರ್ತಾರ ಚೀಲವನ್ನು ದಿಟ್ಟಿಸಿದ. ರೂಪಾಯಿಗಳಿಂದ ತುಂಬಿತ್ತು. ಅಂಜುತ್ತಂಜುತ್ತ ಚೀಲವನ್ನೆತ್ತಿದ. ಆದರೆ ಮುಟ್ಟಿದ ಕೂಡಲೆ ಮಹಾದ್ಭುತ ದೃಶ್ಯ— ರೂಪಾಯಿಗಳು ಹಂಚಿನ ಚೂರುಗಳಾದವು! ಚೀಲ ಅವನ ಕೈಯಿಂದ ಬಿದ್ದುಬಿಟ್ಟಿತು. ಅವನು ಕೈಜೋಡಿಸಿ ಅತ್ಯಂತ ಭಕ್ತಿಭಾವದಿಂದ ಚೌಧರಿಯ ಕಾಲಮೇಲೆ ಬಿದ್ದ. "ಎಪ್ಪಾ, ನನ್ನ ತೆಪ್ಪು ಕ್ಷೆಮಿಸಿರಿ. ಪಾಪೀನ ಉದ್ಧಾರ ಮಾಡಿರಿ'' ಎಂದು ಬೇಡಿಕೊಂಡ.

ಫೈಜುಪ್ಪೂ ಗಾದಿ ಬಡಿದು ಎದ್ದು ಕುಳಿತ. ದುರ್ಬಲ ಮುದುಕ ಚೌಧರಿ ಅವನಿಗೆ ದೇವರಂತೆ ಕಂಡ. ಅವನೂ ಕ್ಷಮೆ ಕೋರತೊಡಗಿದ. ಮುದುಕನಿಗೆ ಕುಳಿತುಕೊಳ್ಳಲು ಜಮಖಾನೆ ಹಾಸಿದ; ಕರ್ತಾರ ಅವನಿಗೆ ಚಿಲಿಮೆ ತುಂಬಿ ಕೊಟ್ಟ; ಬಿಂದಾನ ಸಂದೇಹ ದೂರವಾಗಿತ್ತು,— "ಪಾನಕ ತೆಗೆದುಕೊಳ್ಳುತ್ತೀರಾ? ಮಾಡಲೇ" ಎಂದು ಕೇಳಿದ.

ಚೌಧರಿ ಪ್ರಸನ್ನನಾದ. ಜೋಳಿಗೆಯಿಂದ ಒಂದು ಔಷಧ ತೆಗೆದು ಕೊಡುತ್ತ, "ಮಲರೋಗಕ್ಕೆ ರಾಮಬಾಣ ಔಷಧ ಇದು; ಎಂಥ ಹಳೇ ಬ್ಯಾನಿಯಾದರೂ ಕಳೆಯುತ್ತಿದೆ, ಜ್ವಾಕಿಯಿಂದ ಇಟಗೋರಿ. ಮತ್ತ ಇವತ್ತಽ ದಾವೆ ಹಿಂತಕ್ಕೋರಿ. ಇದರಾಗ ಸಾವಿರ ರೂಪಾಯಿ ನೋಟು ಅದಾವು, ಎಣಿಸಿಗೋರಿ. ಎಲ್ಲಾ ಕುಳಗಳಿಗೆ ಬ್ಯಾರೆ ಬ್ಯಾರೆ ಪಾವತಿ ಕೊಡಿರಿ. ನಾ ಇನ್ನ ಹೋಕ್ಕೀನಿ." ಎಂದು ಹೇಳಿದ.

## ೩೩

ಪ್ರಾತಃಕಾಲ ಮನೋಹರನ ಆತ್ಮಹತ್ಯೆಯ ಸುದ್ದಿ ಸೆರೆಮನೆಯಲ್ಲಿ ಹಾಹಾಕಾರ ಎಬ್ಬಿಸಿತು. ಕೆಳಗಿನಿಂದ ಮೇಲಿನವರೆಗಿನ ಎಲ್ಲ ಸೇವಕ-ಅಧಿಕಾರಿಗಳ ಹೌಹಾರಿತು. ಪೋಲೀಸು ಪಂಚನಾಮೆ ನಡೆಯಿತು. ಜೇಲರನಿಗೆ ಆರು ತಿಂಗಳು ಸಸ್ಪೆಂಡಾಯಿತು; ಕಾವಲುಗಾರರಿಗೆ ದಂಡವಾಯಿತು. ಸೆರೆ-ಮನೆಯ ನಿಯಮಗಳು ಬಿಗಿಯಾದವು. ಉಳಿದ ಅಭಿಯುಕ್ತರ ಕೈಗಳಿಗೆ ಜಡವಾದ ಬೇಡಿಗಳು ಬಂದವು. ಇದುವರೆಗೆ ಪ್ರೇಮಶಂಕರರಿಗೆ ಆರೋಪಿಗಳನ್ನು ಕಾಣುವುದಕ್ಕೆ, ಆಹಾರಾದಿಗಳನ್ನು ಅವರಿಗೆ ಒದಗಿಸುವುದಕ್ಕೆ ಸೌಕರ್ಯ ಕಲ್ಪಿಸಲಾಗಿತ್ತು. ಈಗ ಅವರು ಬಂದರೆ ಎಲ್ಲವನ್ನೂ ತಿರಸ್ಕರಿಸಿ ಕಳಿಸಿಬಿಟ್ಟರು.

ಪ್ರೇಮಶಂಕರರು ಹತಾಶರಾಗಿ ಮನೆಗೆ ಹೋಗಿ ಚಿಂತಿಸುತ್ತ ಬಿದ್ದು ಕೊಂಡರು. ಈ ಮೊಕದ್ದಮೆ ಎಷ್ಟು ದಿನ ನಡೆಯುತ್ತದೋ? ವೆಚ್ಚದ ಗತಿ ಏನು? ಇರ್ಫಾನಅಲಿ ಮೂರುಸಾವಿರ ತೆಗೆದುಕೊಂಡಿದ್ದಾರೆ, ಬಹುಶಃ ಇನ್ನೂ ಅಷ್ಟು ಕೊಡಬೇಕು. ಎಲ್ಲಿಂದ ಬರಬೇಕು? ಲಖನಪುರದ ಯೋಗ ಕ್ಷೇಮ ವಿಚಾರಿಸಲಿಕ್ಕೇ ಆಗಲಿಲ್ಲ. ಆ ದುಃಖಿಗಳಮೇಲೆ ಏನೆಲ್ಲಾ ಒದಗಿದೆಯೊ ಕಾಣೆ.

ಡಾ. ಇರ್ಫಾನಅಲಿ ಕಾಯದೆ ಹೊತ್ತಗೆಗಳನ್ನು ಎದುರಿಗೊಟ್ಟುಕೊಂಡು ಮನೋಹರನ ಆತ್ಮಹತ್ಯೆಯ ಪರಿಣಾಮ ಮಿಕ್ಕ ಆರೋಪಿತರ ಮೇಲೆ ಹೇಗಾಗುವುದೆಂದು ಯೋಚಿಸುತ್ತಿದ್ದರು. ನಡುವೆ, ಈ ಮೊಕದ್ದಮೆಯನ್ನು ಏಕೆ ಹಿಡಿದೆನೋ ಎಂಬ ವಿಚಾರ ಬರುತ್ತಿತ್ತು. ದಿನಾಲು ನೂರು ರೂಪಾಯಿ ಗಳ ನಷ್ಟ; ಇದಿನ್ನೂ ಎಷ್ಟು ದಿನ ನಡೆಯುವುದೋ ಗೊತ್ತಿಲ್ಲ, ಎಂಬ ವಿಚಾರ. ಆಗ ಜವಾನ ಒಂದು ತಂತಿಯ ಕವರು ತಂದಿತ್ತ: ಜ್ಞಾನಶಂಕರರು ಒಂದು ಮೊಕದ್ದಮೆ ಕೊಡಮಾಡಿದ್ದರು, ದಿನದ ಫೀ ಐನೂರು ರೂಪಾಯಿ ಎಂದೂ ಸೂಚಿಸಿದ್ದರು. ಈಗ ರಾಣಿಗೆ ಏನು ಉತ್ತರ ತಿಳಿಸಬೇಕು? ಕೃಷಿಕರ ಪ್ರಕರಣ ಮುಗಿಸದೆ ಎಲ್ಲೂ ಹೋಗಬಾರದು—ಇದು ನೀತಿ. ಆದರೆ ದಿನಾಲು ಐನೂರು ಕಳೆದುಕೊಳ್ಳುವುದು ಹೇಗೆ?

ಅವರ ಮುಖ್ಯ ಗುಮಾಸ್ತ, "ತಾವು ಯಾರ ಅಂಕಿತರೂ ಅಲ್ಲ; ಸ್ವೇಚ್ಛೆಯಾಗಿ ಹೋಗಬಹುದು. ಎಲ್ಲ ವಕೀಲರೂ ಹೀಗೆ ಮಾಡುತ್ತಾರೆ. ಇಂತಹ ಸಂದರ್ಭ ಕಳೆದುಕೊಳ್ಳಬೇಡಿ." ಎಂದು ಸೂಚಿಸಿದ.

ತೂಕಡಿಸುವವನಿಗೆ ಗುಮಾಸ್ತ ಹಾಸಿಗೆ ಹಾಸಿಕೊಟ್ಟ. ಕಚೇರಿಯಲ್ಲಿ ಪ್ರೇಮಶಂಕರರು ಮೊಕದ್ದಮೆ ವಿಚಾರಣೆಗೆ ಬಂದಿದೆಯೆಂದು ಹೇಳಿ, ಕಾರ್ಯ ಯೋಜನೆ ಮಾಡುವುದಕ್ಕಾಗಿ ಬಂದರೆ ವಕೀಲರು ಹೇಳಿದರು: "ತಮಗೆ ಬಹಳ ತೊಂದರೆಯಾಯಿತು, ಕ್ಷಮಿಸಿರಿ. ನನಗೆ ನಾಲ್ಕಾರು ದಿನ ಈ ಮೊಕದ್ದಮೆ ನಡೆಯಿಸಲಾಗುವುದಿಲ್ಲ, ಎಂದು ತಿಳಿಸಲು ಬಹಳ ಸಂಕೋಚವಾಗುತ್ತದೆ."

"ಇದೊಂದು ಕೆಟ್ಟ ಸುದ್ದಿ ಕೇಳಿದಂತಾಯಿತು. ಇಂತಹ ಸೂಕ್ಷ್ಮ ಪರಿಸ್ಥಿತಿಯಲ್ಲಿ ತಾವಿಲ್ಲದಿದ್ದರೆ ಎಂತಹ ನಷ್ಟವಾಗುವುದೆಂಬುದನ್ನು ತಮಗೆ ಹೇಳಬೇಕಾಗಿಲ್ಲ." ಎಂದರು ಪ್ರೇಮಶಂಕರರು.

"ಉಪಾಯವಿಲ್ಲ. ನಿಮ್ಮ ತಮ್ಮ ಗೋರಖಪುರಕ್ಕೆ ಕರೆದಿದ್ದಾರೆ; ತಂತಿ ಬಂದಿದೆ."

"ಈ ಸಮಾಚಾರದಿಂದ ನನ್ನ ಜೀವವೇ ಹೋದಂತಾಯಿತು. ಆ ಬಡಪಾಯಿಗಳನ್ನು ತಾವು ನಡುಹೊಳೆಯಲ್ಲಿ ಕೈಬಿಡುತ್ತಿದ್ದೀರಿ. ಅವರ ಗತಿ ಏನಾಗುವುದೆಂಬುದನ್ನು ನೋಡಿರಿ. ಇಂತಹ ಇರುಕಿನ ಸಮಯದಲ್ಲಿ ಮತ್ತೊಬ್ಬ ವಕೀಲರು ಇಲ್ಲಿ ಸಿಕ್ಕುವ ಸಂಭವವಿಲ್ಲ."

"ನನಗೆ ಸ್ವತಃ ಅತ್ಯಂತ ದುಃಖವಾಗುತ್ತಿದೆ. ಆದರೆ ಅಂಗಡಿ ಹಚ್ಚಿಕೊಂಡಿರುವ ತನಕ ಗಿರಾಕಿಗಳನ್ನು ಸಂಬಾಳಿಸಲೇಬೇಕು. ಈ ಉದ್ಯೋಗವೇ ಅಂತಹ ಕೆಟ್ಟದು; ಇದರಲ್ಲಿ ನಿಯಮವನ್ನು ಚಿರವಾಗಿ ಪಾಲಿಸುವುದು ಅಸಾಧ್ಯ. ಈ ದುಃಖಿಗಳ ಬಗ್ಗೆ ನನಗೆ ಸಹಾನುಭೂತಿಯಿದೆ; ಆದರೆ ಶ್ರೀಯುತ ಜ್ಞಾನಶಂಕರರನ್ನು ನಿರಾಶೆಗೊಳಿಸುವುದಂತೂ ನನ್ನಿಂದಾಗದು." ಎಂದು ಹೇಳಿ ವಕೀಲರು ಕಾರನ್ನೇರಿ ಹೊರಟೇಬಿಟ್ಟರು.

ಒಂದು ಗಂಟೆಗೆ ಗಾಡಿ ಬಿಡುತ್ತಿತ್ತು. ಸಮಯ ತೀರ ಸ್ವಲ್ಪವಿತ್ತು. ವಕೀಲರು ಮನೆಯೊಳಗೆ ಹೋಗದೆ ಕಾರು ಹತ್ತುವುದರಲ್ಲಿದ್ದರು. ದಾಸಿ

ಬಂದು ಹೇಳಿದಳು: "ಹುಜೂರ, ತುಸು ಒಳಗೆ ಬರ್ರಿ. ಬೇಗಮ ಸಾಹೇಬಾ ಕರೀತಾರು. ಮುನೀರಾಗೆ ಹೊರಕಡಿಗಿ-ಕಾರಿಕಿ ಆಗಾಕ ಹತ್ತೈತ್ರಿ."

ಇರ್ಫಾನ ಅಲಿ ಮುನಿಸಿನಿಂದ ಒಳಗೆ ಹೋಗಿ, "ನೀನೇನು ಸಣ್ಣ ಮಾತಿಗೆ ದೊಡ್ಡ ಬಿರುಗಾಳಿಯನ್ನೇ ಎಬ್ಬಿಸಿದ್ದೀಯಲ್ಲ" ಎಂದು ಬೇಗಮಳಿಗೆ ನುಡಿದರು

"ಮುನೀರಾನ ಸ್ಥಿತಿ ನೆಟ್ಟಗೆ ಕಾಣಿಸುವುದಿಲ್ಲ. ಬಂದು ನೋಡಿರಿ ಸ್ವಲ್ಪ. ಕೈಕಾಲು ಸೆಟೆಸಲಿಕ್ಕೆ ಹತ್ತಿದ್ದಾಳೆ. ಕಾಲರಾಬೇನೆಯೋ ಏನೊ ಎಂಬ ಅಂಜಿಕೆ." ಎಂದಳು ಬೇಗಮ.

"ಇಲ್ಲದ ಸಂಶಯ ನಿನಗೆ. ಎರಡು ತಾಸಿಗೊಮ್ಮೆ ಅರ್ಕಕರ್ಪೂರ ಹಾಕುತ್ತ ಹೋಗು; ಸಂಜೆಯೊಳಗೆ ಎಲ್ಲಾ ಸರಿಹೋಗುತ್ತದೆ. ಈಗಿನ ಗಾಡಿಗೇ ಸ್ವಲ್ಪ ಗೋರಖಪುರಕ್ಕೆ ಹೋಗಬೇಕು."

ಅವರ ಈ ನಡತೆಯನ್ನು ಬೇಗಮ ಕಟುವಾಗಿಯೇ ತಿರಸ್ಕರಿಸಿದಳು. ಆದರೂ ಆವರು ಅವಳಿಗೆ ಮೂರ್ಖಳೆಂದು ಬಿರುದುಕೊಟ್ಟು ಹೊರಟು ಹೋದರು.

## ೩೪

ಜ್ಞಾನಶಂಕರರಿಗೆ ಧರ್ಮಾನುರಾಗ ಹೆಚ್ಚಿ ಸಾಂಸಾರಿಕ ವಿಷಯಗಳಲ್ಲಿ ಅರುಚಿಯೇ ಉಂಟಾಗಿತ್ತೆನ್ನಬಹುದು. ಸಂಸ್ಥಾನದ ಆಡಳಿತವನ್ನು ಮೊದಲಿನಂತೆಯೇ ಉತ್ಸಾಹ—ಪರಿಶ್ರಮಗಳಿಂದ ನಡೆಸಿದ್ದರಾದರೂ ಈಗ ಕಡ್ಡಾಯದ ಬದಲು ನಯವಿತ್ತು. ಗೊತ್ತುಪಡಿಸಿದ ಕಂದಾಯವಲ್ಲದೆ, ಗುಡಿ-ಗುಂಡಾರ ಛತ್ರ-ಧರ್ಮಶಾಲೆಗಳ ಚಂದಾ ಎತ್ತುತ್ತಿದ್ದರು. ಅದೂ ಯಾರಿಂದಲೂ ದೂರು ಬರದಂತೆ ನಮ್ರವಾಗಿ. ದಾವೆಗಳು ತೀರ ಕಡಿಮೆ. ಒಕ್ಕಲಿಗರಿಗೆ ಬ್ಯಾಂಕಿನಿಂದ ಅಲ್ಪ ಬಡ್ಡಿ ದರದಿಂದ ಸಾಲಕೊಡುತ್ತಿದ್ದರು; ದೊಡ್ಡ ದೊಡ್ಡ ಊರುಗಳಲ್ಲಿ ಐದಾರು ಪೇಟೆಗಳನ್ನು ತೆರೆದರು; ಎರಡು ಮೂರು ಕಾಲುವೆಗಳಿಗೆ ಸಂಕ ಕಟ್ಟಿಸಿದರು. ಅಲ್ಲಲ್ಲಿ ಒಡ್ಡು-ಒತ್ತಲುಗಳಾದವು; ನೀರೆರೆಯುವ ಯಂತ್ರವನ್ನು ತರಿಸಿ ಬಾಡಿಗೆಗೆ ಇಟ್ಟರು; ಎಣ್ಣೆ ತೆಗೆಯುವ ದೊಡ್ಡ ಕಾರಖಾನೆ ಸ್ಥಾಪಿಸಿದರು. ಈ ಯೋಜನೆಗಳಿಂದ ಇಲಾಕೆಯ ಲಾಭ ಮತ್ತಷ್ಟು

ಹೆಚ್ಚಿತು. ಅವರ ಈ ಕಾರ್ಯಪಟುತ್ವ ಗಾಯತ್ರಿಯನ್ನು ಅತಿಶಯವಾಗಿ ಮುಗ್ಧಗೊಳಿಸಿತು. ಅವಳು ಯಾವ ವಿಷಯದಲ್ಲಿಯೂ ಬಾಯಿಹಾಕದಂತಾಯಿತು.

ಜ್ಞಾನಶಂಕರರ ಊಟ-ಉಡಿಗೆ, ನಡೆ-ನುಡಿಗಳಲ್ಲಿಯೂ ಈಗ ವಿಶೇಷ ವ್ಯತ್ಯಾಸವಾಗಿತ್ತು. ತಲೆಯಮೇಲೆ ಜಡೆ, ಬೂಟಿನ ಬದಲು ಪ್ರಾಯಿಕವಾಗ ಕಡಾವಿಗೆ, ಕೋಟಿನ ಬದಲು ಸಡಿಲಾದ ಮೊಣಕಾಲ ಕೆಳಗಿನವರೆಗೆ ಕಾವಿ ಬಣ್ಣದ ಅಂಗಿ. ಈ ವೇಷ ಅವರ ಸೌಮ್ಯಮೂರ್ತಿಗೆ ಒಪ್ಪುತ್ತಿತ್ತು. ಅವರ ಮಾತಿನಲ್ಲಿ ಅನುಪಮ ಮಾಧುರ್ಯಪೂರ್ಣ ಸರಳತೆಯಿರುತ್ತಿತ್ತು; ಮುಖದಲ್ಲಿ ದಿವ್ಯಜ್ಯೋತಿ ಮಿನುಗುತ್ತಿತ್ತು. ತರ್ಕ-ನ್ಯಾಯಗಳಲ್ಲಿ ಅವರಿಗೀಗ ರುಚಿಯಿರಲಿಲ್ಲ; ದಿವ್ಯಜ್ಞಾನ ಪ್ರಾಪ್ತವಾಗಿರುವಂತೆ ಮಾತನಾಡುತ್ತಿದ್ದರು. ಭಕ್ತಿ ಪ್ರೇಮಗಳ ವಿಷಯದಲ್ಲಿ ಯಾರಾದರೂ ಸಂದೇಹವೆತ್ತಿದರೆ. ಸಾವಿರ ನುಡಿಗಳಿಗಿಂತಲೂ ಪ್ರಭಾವಿಯಾದ ಮಾರ್ಮಿಕವಾದ ನಗೆಯಿಂದಲೇ ಅವರು ಉತ್ತರವೀಯುತ್ತಿದ್ದರು.

ಅವರು ಶ್ರೀವಲ್ಲಭ ಪಂಥದ ಅನುಯಾಯಿಗಳಾಗಿದ್ದರು ಆಧ್ಯಾತ್ಮಿಕ ವಿಕಾಸದ ಲಕ್ಷಣವೆನಿಸಿದ, ಹೂಗಳಲ್ಲಿ ಲಲಿತಗಾನದಲ್ಲಿ ಸುರಮ್ಯ ದೃಶ್ಯಗಳಲ್ಲಿ ಕಾವ್ಯಮಯ ಭಾವಗಳಲ್ಲಿ ವಿಶೇಷರುಚಿ ಅವರಿಗುಂಟಾಗಿತ್ತು. ಅವರ ಧರ್ಮದ ಪ್ರಧಾನ ತತ್ತ್ವ ಸೌಂದರ್ಯೋಪಾಸನೆ.

ಈ ಪ್ರೇಮಭಕ್ತಿ ಗಾಯತ್ರಿಯಮೇಲೆ ಇನ್ನಷ್ಟು ಪ್ರಭಾವಬೀರಿತ್ತು. ಮೀರಾಬಾಯಿಯಂತೆ ಕೃಷ್ಣಮೂರ್ತಿಯನ್ನು ಆರಾಧಿಸುವಳು; ಮಿಷ್ಟಾನ್ನ ನಿವೇದಿಸುವಳು; ಮೂರ್ತಿಯ ಎದುರು ಅನುರಾಗಮಗ್ನಳಾಗಿ ಗಂಟೆಗಟ್ಟಳೆ ಕೀರ್ತನೆ ಮಾಡುವಳು. ಅರ್ಧರಾತ್ರಿಯವರೆಗೂ ಅವನ ಲೀಲೆಗಳನ್ನು ಹಾಡುವಳು, ಕೇಳುವಳು. ಈಗ ತೆರೆ ಬಿಟ್ಟು ಸಾಧುಸಂತರ ಸತ್ಸಂಗದಲ್ಲಿ ಬೆರೆಯುವಳು. ಆದರೆ ಈ ಸತ್ಸಂಗದಿಂದ ಅವಳ ಹೃದಯಕ್ಕೆ ಶಾಂತಿ ದೊರೆಯುವ ಬದಲು, ಒಂದು ಬಗೆಯ ತೃಷ್ಣೆಯಿಂದ, ಒಂದು ಬಗೆಯ ವಿರಹಕಲ್ಪನೆಯಿಂದ ಯಾವಾಗಲೂ ವಿಕಲವಾಗಿರುತ್ತಿತ್ತು. ಅವಳ ಹೃದಯ-ವೀಣೆ ಒಂದು ಅಜ್ಞಾತ ಆಕಾಂಕ್ಷೆಯನ್ನು ಗುಂಜಿಸುತ್ತಿತ್ತು. ಈ ಹಂಬಲ

ಯಾವುದೆಂದು ತನಗೇ ತಿಳಿಯುತ್ತಿರಲಿಲ್ಲ. ಕೇವಲ ಕೃಷ್ಣಲೀಲೆಗಳ ದರ್ಶನ ದಿಂದ ಆವಳಿದೆ ತಣಿಯುತ್ತಿರಲಿಲ್ಲ. ಅದು ಸ್ವಯಂ ಒಂದಿಲ್ಲೊಂದು ರಾಸ ರಚನೆಯನ್ನು ಕೋರುತ್ತಿತ್ತು. ತನ್ನ ಕೃಷ್ಣನನ್ನು ಸ್ವೀಕರಿಸುವುದಕ್ಕೆ ಧೈರ್ಯ ಮಾತ್ರ ಸಾಲದು. ಅವನ ರೂಪು ಸುಮಾರಾಗಿ ಜ್ಞಾನಶಂಕರರನ್ನು ಹೋಲುತ್ತಿತ್ತು.

ಉದಾರ ಹೃದಯೆಯಾದ ಗಾಯತ್ರಿ ಈಗ ಇನ್ನೂ ದಾನಶೀಲೆ ಯಾದಳು. ಅವಳಲ್ಲಿ ನಿತ್ಯಸದಾವ್ರತ ನಡೆಯುತ್ತಿತ್ತು. ಧಾರ್ಮಿಕ ಪಾರಮಾರ್ಥಿಕ ಸಂಸ್ಥೆಗಳಿಗೆ ಅವಳಿಂದ ತುಂಬಾ ನೆರವು ದೊರೆಯುತ್ತಿತ್ತು. ಗೋರಖಪುರದಲ್ಲಿ ಜರುಗಲಿದ್ದ ಈ ಸಲದ ಧರ್ಮಮಂಡಲದ ವಾರ್ಷಿಕೋ ತ್ಸವದ ಸಭಾಪತಿಯೆಂದು ಗಾಯತ್ರಿಯನ್ನೇ ಆರಿಸಲಾಗಿತ್ತು. ಸಭೆಯ ಕಾರ್ಯದರ್ಶಿಯಾಗಿದ್ದ ಜ್ಞಾನಶಂಕರರನ್ನು ಕರೆದು, ಐವತ್ತು ಸಾವಿರ ರೂಪಾಯಿ ಬೆಲೆ ಬಾಳುವ ಆಭರಣಗಳನ್ನು ಸನಾತನ ಧರ್ಮ ಸಭೆಗೆ ದಾನವಿತ್ತಳು.

ಸಭೆ ಅತ್ಯಂತ ಅಪೂರ್ವವಾಗಿ ನೆರವೇರಿತು. ಗಾಯತ್ರಿಯ ವ್ಯಾಖ್ಯಾನ ವನ್ನು ನಾಡೆಲ್ಲ ಮೆಚ್ಚಿ ಕೊನೆಮುಡಿತು. ಪತ್ರಿಕೆಗಳಲ್ಲಿ ಓದಿದವರು ಚಕಿತ ರಾದರು; ಕಿವಿಯಾರೆ ಕೇಳಿದವರಿಗಂತೂ ಅನುಭವಿಸಿದ ಸ್ವರ್ಗೀಯ ಆನಂದ ಮರೆಯದಂತಾಯಿತು. ಗಾಯತ್ರಿಯೀಗ ಜ್ಞಾನಶಂಕರರನ್ನು ದೇವತುಲ್ಯ ರೆಂದು ತಿಳಿಯುತ್ತಿದ್ದಳು. ಅವರಿಂದಾಗಿಯೇ ಅವಳ ಸುಕೀರ್ತಿ ಇಷ್ಟೊಂದು ಮೊಳಗುತ್ತಿತ್ತು. ಅವರ ಉಪಕಾರಕ್ಕೆ ಒಂದೇ ಉಪಹಾರವೆಂದರೆ— ಪ್ರೇಮ ಪೂರ್ಣ ಶ್ರದ್ಧೆ.

ಸಂಜೆಯಾಗಿತ್ತು. ಜ್ಞಾನಶಂಕರರು ಕೆಲವು ಪತ್ರಗಳೊಂದಿಗೆ ಬಂದು " ನೋಡಿದಿರಾ, ರಾಯಸಾಹೇಬರು ಒಂದು ಹೊಸ ಆಟವನ್ನೆ ತೆಗೆದಿದ್ದಾರೆ," ಎಂದರು.

ಗಾಯತ್ರಿ ಹುಬ್ಬೇರಿಸಿ, " ಅವರ ಹೆಸರನ್ನೇ ತೆಗೆಯಬೇಡಿರಿ ನನ್ನ ಮುಂದೆ. ನಾನೆಷ್ಟು ಬೇಡಿಕೊಂಡಿದ್ದೆ ಅವರಿಗೆ—ಸಭೆಗೆ ಬರಬೇಕೆಂದು. ಅವರೇನು ಬರಲಿಲ್ಲ, ಇಷ್ಟೇ ಅಲ್ಲ, ಪತ್ರಕ್ಕೆ ಉತ್ತರ ಕೂಡ ಬರೆಯಲಿಲ್ಲ. ಅಪ್ಪನಾದರೇನಾಯಿತು, ಅವರಿಂದಲೂ ಅಪಮಾನ ಸಹಿಸಲಾರೆ " ಎಂದಳು.

" ಅವರಿಗೆ ಅನಾಸ್ಥೆ ಎಂದುಕೊಂಡಿದ್ದೆ ನಾನು. ಆದರೆ ಈ ಪತ್ರದಿಂದ ತಿಳಿಯುತ್ತದೆ— ಅವರೊಂದು ಸಂಗೀತ ಸಭೆಯ ಏರ್ಪಾಡಿನಲ್ಲಿದ್ದಾರಂತೆ. ನನಗೆ ಬಾ ಎಂದಿದ್ದಾರೆ, ನಿಮ್ಮನ್ನೂ ಕರೆಯುತ್ತಿದ್ದಾರೆ. "

" ನಾನು ಹೋದಹಾಗಾಯಿತು. ತಮಗೆ ಇಲ್ಲಿಗೆ ಬರಲಿಕ್ಕೆ ಮಾನ ಸಾಲದು; ನನಗಲ್ಲಿಗೆ ಹೋಗಲಿಕ್ಕೆ ಅಂಥದೇನು ತಡೆದು ನಿಂತಿದೆ? ಆದರೆ, ವಿದ್ಯೆ ಹೋಗಲಿ. ನೀವು ಮಾತ್ರ ಎರಡು ದಿನಕ್ಕಿಂತ ಹೆಚ್ಚು ನಿಲ್ಲಕೂಡದು ಅಲ್ಲಿ. "

" ವಿಚಾರ ಮಾಡಿ ನಿರ್ಣಯಿಸುತ್ತೇನೆ. ಬರಹಲ ಮತ್ತು ಅಮಗಾಂವ ಗಳಿಂದ ಪತ್ರ ಬಂದಿವೆ, ಆಸಾಮಿಗಳು ಸಭೆಯ ಚಂದಾ ಕೊಡುವುದಿಲ್ಲ ಎನ್ನುತ್ತಾರೆ. "

ಗಾಯತ್ರಿ ಪ್ರೇಮದೇವಿಯಿದ್ದವಳು ಕ್ರೋಧಮೂರ್ತಿಯಾದಳು. " ಏನು, ಹಳ್ಳಿಗಳಲ್ಲಿಯೂ ಈ ಗಾಳಿ ಬೀಸಹತ್ತಿತೆ? ಅಲ್ಲಿಯ ಮೇಲ್ವಿಚಾರ ಕರಿಗೆ ಬರೆಯಿರಿ: ಪುಂಡರ ಮನೆಗೆ ಕೊಳ್ಳಿಯಿಕ್ಕಲಿ, ಅವರನ್ನು ಬಾರ ಕೋಲಿಂದ ಹೊಡೆಯಲಿ. ನಾನು ಈ ಅವಜ್ಞೆಯನ್ನು ಸಹಿಸಲಾರೆ. ಅವರಿಗೆ ಇಷ್ಟು ಸೌಲಭ್ಯ ತೋರಿಸುತ್ತೇನೆ, ಅವರ ಸಹಾಯಕ್ಕಾಗಿ ಸದಾ ಸಿದ್ಧಳಿರು ತ್ತೇನೆ—ಅದಕ್ಕೆ ಈ ಫಲವೆ? ಕೃತಘ್ನರು ! " ಎಂದಳು.

" ಮುನ್ನಿ ರಾಮಸನೇಹಿಯ ಪತ್ರ: ಠಾಕುರದ್ವಾರದ ಕೆಲಸ ಮೂರು ದಿನಗಳಿಂದ ನಿಂತುಬಿಟ್ಟಿದೆಯಂತೆ; ಕಡ್ಡಾಯದ ಕೆಲಸಕ್ಕೆ ಯಾರೂ ಬರ ಲೊಲ್ಲರಂತೆ. "

" ಅವರಿಗೆ ಕೂಲಿ ಕೊಡುತ್ತದಷ್ಟೆ ? "

" ಕೊಡುತ್ತದೆ.—ಜಮೀನುದಾರೀ ದರದಿಂದ. ಜಮೀನುದಾರೀ ದರ ಎರಡಾಣೆ ಇದೆ; ವಾಡಿಕೆಯ ದರ ಆರಾಣೆ ಇದೆ. "

" ನಿಮಗೆ ಸರಿ ಕಾಣಿಸಿದರೆ ರಾಮಸನೇಹಿಗೆ ನಾಲ್ಕಾಣೆ ಕೂಲಿ ಕೊಡಲು ತಿಳಿಸಿರಿ. "

" ತಿಳಿಸುತ್ತೇನೆ. ನಿಜವಾಗಿ ಎರಡಾಣೆಯಿಂದ ಒಪ್ಪೊತ್ತೂ ಹೊಟ್ಟೆ ತುಂಬುವುದಿಲ್ಲ. ಆದರೆ ಇಷ್ಟೇ ಹೆದರಿಕೆ: ಆ ಮಡ್ಡ ಹುಂಬರು ತಮ್ಮಮೇಲೆ

ದಯೆ ತೋರಿಸಿದರೆ ನಾವು ಸೋತು ಮೆತ್ತಗಾದೆವೆಂದು ತಿಳಿಯುತ್ತಾರೆ. ನಾಳೆ ಆರಾಣೆ ಬೇಡುತ್ತಾರೆ; ಮತ್ತು ಮಾತು ಕೇಳದಾಗುತ್ತಾರೆ. ”

“ ಹಾಗಾದರೆ ಬಲಾತ್ಕಾರದಿಂದ ದುಡಿಸಲು ಬರೆಯಿರಿ. ಒಲ್ಲೆಂದವರನ್ನು ಊರಿಂದ ಹೊಡೆದಟ್ಟಬೇಕೆಂದು ಹೇಳಿರಿ. ನಮ್ಮ ಅಧಿಕಾರ, ನಮ್ಮ ದರ್ಪ ಉಳಿಸಿಕೊಳ್ಳಲಿಕ್ಕೇ ಬೇಕು. ”

ಜ್ಞಾನಶಂಕರರು ಅಂದೇ ಬನಾರಸಕ್ಕೆ ಹೋಗಿ, ವಿದ್ಯೆಯನ್ನು ಕರೆದು ಕೊಂಡು ಲಖನೌಗೆ ಹೋಗಲು ನಿರ್ಧರಿಸಿದರು. ಎಷ್ಟು ಹೇಳಿದರೂ ಗಾಯತ್ರಿ ಒಪ್ಪಲಿಲ್ಲ.

## ೩೫

ರಾಯರ ಯೋಗಾಭ್ಯಾಸ ಸಂಗೀತ ಪ್ರೇಮಗಳು ವಯಸ್ಸಾದಂತೆ ಹೆಚ್ಚುತ್ತಲೇ ಇತ್ತು. ಅಧಿಕಾರಿಗಳನ್ನು ಕಾಣುವ ಹವ್ಯಾಸ ಈಗ ಅಷ್ಟಿರಲಿಲ್ಲ. ಯಾರಾದರೂ ಗಾಯಕರ ಸಮಾಚಾರ ತಿಳಿದರಾಯಿತು, ಅವರನ್ನು ಕರಸಿ ಸನ್ಮಾನಿಸುತ್ತಿದ್ದರು. ಸಂಗೀತವೆಂದರೆ ನಾಡಿನ ಸರ್ವಶ್ರೇಷ್ಠ ಸಂಪತ್ತಿ ಎಂದು ಅವರ ಅಭಿಪ್ರಾಯ. ಸದ್ಯದ ಸಂಗೀತಾಭಿರುಚಿಯನ್ನು ಕಂಡು ಅವರಿಗೆ ಭಯವಾಗುತ್ತಿತ್ತು: ಕೆಲಕಾಲ ಇದೇ ಸ್ಥಿತಿಯಿದ್ದರೆ ಅದರ ಸ್ವರೂಪವೇ ಹಾಳಾಗುವುದೆಂದು. ಈ ಕಲೆಯ ಉನ್ನತಿಗಾಗಿ ಸಂಗೀತಸಭೆ ಸ್ಥಾಪಿಸಬೇಕೆಂದು ಅವರು ಪ್ರಯತ್ನಿಸುತ್ತಿದ್ದರು. ವೆಚ್ಚದ ಅಂದಾಜು ನಾಲ್ಕುಲಕ್ಷದ್ದಿತ್ತು. ರಾಯಸಾಹೇಬರು ಯಾರನ್ನೂ ಹಣ ಕೇಳುವುದು ಉಚಿತವಲ್ಲವೆಂದುಕೊಂಡಿದ್ದರೂ ಒಂದಿಬ್ಬರು ಧನಿಕರು ಎರಡು ಲಕ್ಷಗಳ ವಾಗ್ದಾನ ಮಾಡಿದ್ದರು. ಯುರೋಪಿನಿಂದ ಹೆಸರಾದ ಸಂಗೀತಜ್ಞರು ಆರು ಜನ ಬಂದಿದ್ದರು. ಮೈಸೂರು, ಗ್ವಾಲಿಯರ, ಡಾಕಾ, ಕಾಶ್ಮೀರ ಮೊದಲಾದ ಕಡೆಯ ಕಲಾವಿದರಿಗೆ ಕರೆ ಹೋಗಿತ್ತು. ಇದರ ವ್ಯವಸ್ಥೆಗಾಗಿಯೇ ಅವರು ಜ್ಞಾನಶಂಕರರನ್ನು ಕರೆಸಿದ್ದು. ಗಾಯತ್ರಿ ಬರಲಿಲ್ಲವೆಂದು ರಾಯಸಾಹೇಬರು ಬಹಳ ವ್ಯಸನಪಟ್ಟು, “ ಸನಾತನ ಧರ್ಮೋತ್ಸವಕ್ಕೆ ನಾ ಬರಲಿಲ್ಲವೆಂದು ಆಕೆ ಬಿಟ್ಟಿಲ್ಲ. ರಾಣಿಯಾಗಿದ್ದಾಳೆ ಈಗ, ಇಷ್ಟು ಗರ್ವವೂ ಇರಲಾಗದೆ ? ” ಎಂದರು.

ಜ್ಞಾನಶಂಕರರು ಹಿಂದಿನ ರಾತ್ರಿ ನಿದ್ದೆಗೆಟ್ಟು ದಣಿದಿದ್ದರು. ಉಂಡು ವಿಶ್ರಮಿಸಿದರು. ಮೂರನೆಯ ಪ್ರಹರದಲ್ಲಿ ಎದ್ದಾಗ ರಾಯಸಾಹೇಬರು ಪತ್ರಗಳನ್ನು ಓದುತ್ತಿದ್ದರು. ಜ್ಞಾನಶಂಕರರಿಗೆ ಒಂದು ಕಾಗದ ತೋರುತ್ತ ಅವರೆಂದರು: "ಇದು ನೋಡಿರಿ: ಪುಣೆಯ ಮಾಧೋಲ್ಲಕರರ ಕಾಗದ ಬಂದಿದೆ. ಇದು ಹೇಗೆ ಇವರಿಗೆ ಸಂದೇಹಬಂತೋ— ಈ ದೇಶದಲ್ಲಿ ವಿದೇಶೀ ಸಂಗೀತದ ಪ್ರಚಾರ ಮಾಡಬೇಕೆನ್ನುತ್ತೇನಂತೆ ನಾನು, ಅದಕ್ಕಾಗಿ ನನ್ನನ್ನು ಚೆನ್ನಾಗಿ ಟೀಕಿಸಿದ್ದಾರೆ."

ಈ ಮಾತು ತೆಗೆಯುವುದಕ್ಕಾಗಿಯೇ ಜ್ಞಾನಶಂಕರರ ಮನಸು ಚಡಪಡಿಸುತ್ತಿತ್ತು. ಈಗ ಅವಕಾಶ ಸಿಕ್ಕಿತು. "ಯುರೋಪದ ಮಂದಿಯನ್ನು ಸುಮ್ಮನೆ ಕರೆಸಿದಿರಿ ನೀವು. ಆದರಿಂದಲೇ ಸಂದೇಹಕ್ಕೆ ಆಸ್ಪದವಾಯಿತು. ಅವರ ಸಂಭಾವನೆಯು ನಿಷ್ಕರ್ಷೆ ಆಗಿದೆಯೆ?" ಅವರೆಂದರು

"ಹಾಂ. ಇಬ್ಬರಿಗೆ ದಿನವೊಂದಕ್ಕೆ ಎರಡೆರಡು ಸಾವಿರ ಕೊಡಬೇಕು; ಪ್ರವಾಸದ ವೆಚ್ಚ ಬೇರೆ. ಜರ್ಮನಿಯ ಇಬ್ಬರು ಪ್ರತಿದಿನ ಒಂದೂವರೆ— ಒಂದೂವರೆ ಸಾವಿರ ತೆಗೆದುಕೊಳ್ಳುತ್ತಾರೆ. ಇಟಲಿಯ ಇಬ್ಬರು ಮಹನೀಯರು ಮಾತ್ರ ನಿಃಸ್ವಾರ್ಥಬುದ್ಧಿಯಿಂದ ಭಾಗವಹಿಸಲೊಪ್ಪಿದ್ದಾರೆ."

"ಅಂದರೆ ಒಟ್ಟು ವೆಚ್ಚ ಐದ್ಯೆದೂವರೆ ಲಕ್ಷಕ್ಕೆ ಮುಟ್ಟುತ್ತದೆ, ಹಾಗಾದರೆ."

"ಅಂದಾಜೇನೋ ನಾಲ್ಕು ಲಕ್ಷದ್ದಿತ್ತು. ಬಹುಶಃ ಅದಕ್ಕಿಂತ ಹೆಚ್ಚುತ್ತದೆ."

"ಇಲ್ಲಿಯ ಶ್ರೀಮಂತರೇನಾದರೂ ಸಹಾಯ ಸಲ್ಲಿಸುವರೆ?"

"ಕೆಲವರು ಮಾತು ಕೊಟ್ಟಿದ್ದಾರೆ. ಎರಡುಲಕ್ಷ ಸಿಕ್ಕಬಹುದು."

"ಅವರು ಮಾತು ಪೂರಯಿಸಿದರೆಂದರೂ ಎರಡುವರೆ–ಮೂರುಲಕ್ಷ ನಿಮ್ಮಮೇಲೆ ಬೀಳುತ್ತದೆ."

ರಾಯಸಾಹೇಬರು ವ್ಯಂಗಪೂರ್ಣವಾಗಿ ನಕ್ಕರು. "ದುಡ್ಡು ಸುಖಭೋಗಕ್ಕಾಗಿ ಹೊರತು, ಅದರ ಉದ್ದೇಶ್ಯ ಮತ್ತೊಂದಿಲ್ಲ. ಧನ ನಮ್ಮ ಇಚ್ಛೆಗಳ ಆಳೇ ಹೊರತು, ನಾವು ಅದರ ದಾಸರಾಗಬಾರದು." ಎಂದರು.

" ಆದರೆ ಪಾರಸದಾರರಿಗೂ ಒಂದಿಷ್ಟು ಸುಖಭೋಗದ ಅಧಿಕಾರವಿದೆ ಯಷ್ಟೇ ? "

" ಪ್ರಪಂಚದಲ್ಲಿ ಎಲ್ಲರ ಸುಖದುಃಖಗಳೂ ಅವರವರ ಕರ್ಮಫಲ. ಯಾರ ಭಾಗ್ಯವಿಧಾತನೂ ನಾನಲ್ಲ. "

" ಕ್ಷಮಿಸಿರಿ : ಬದುಕಿನ ಬಹುಭಾಗವನ್ನು ದಾಟಿದಂಥವರು ಆಡುವ ಮಾತಲ್ಲ ಇದು. " ಎಂದರು ಜ್ಞಾನಶಂಕರರು.

ಈ ನಿಷ್ಠುರ ಅಭಿಪ್ರಾಯಕ್ಕೆ ರಾಯಸಾಹೇಬರು ಕಠೋರ ಸ್ವರದಲ್ಲಿ ಉತ್ತರವಿತ್ತರು : " ನನಗೆ ಉಪದೇಶ ಮಾಡುವುದಕ್ಕೆ ಯಾವ ಅಧಿಕಾರವೂ ನಿಮಗಿಲ್ಲ ನನ್ನ ದುಡ್ಡು, ನನ್ನಿಚ್ಛೆಯಂತೆ—ನನ್ನ ಅಭಿರುಚಿಯಂತೆ ನಾನು ವೆಚ್ಚ ಮಾಡುವೆ ಇಡೀ ಆಸ್ತಿ ಮಾರಿಹೋಗಲಿ—ಕೈಕೊಂಡ ಕೆಲಸ ಪೂರ್ತಿ ಮಾಡುವೆ. ಆದರೆ, ನಿಮಗೆ—ಇಂತಹ ಕೃಷ್ಣಭಕ್ತರಿಗೆ, ತ್ಯಾಗವೈರಾಗ್ಯಗಳ ಸಾಧಕರಿಗೆ—ಇಷ್ಟು ಮಾಯಾಮೋಹವಿರುವುದು ಆಶ್ಚರ್ಯ ! ನಿಮ್ಮ ಈ ಚಿತ್ತವೃತ್ತಿಯನ್ನು ನೋಡಿದರೆ ನನಗೆನಿಸುತ್ತದೆ : ನೀವು ಬಹುರೂಪ ಧರಿಸಿದ್ದೀರಿ, ಪ್ರೇಮ-ಭಕ್ತಿಯ ಸ್ವಾದವನ್ನು ಹೊಂದಿಲ್ಲ. ಸರಲಹೃದಯದ ಗಾಯತ್ರಿಗಾಗಿ ಈ ಬಲೆ ಒಡ್ಡಿದ್ದೀರೋ ಏನೋ ಎಂದು ಸಂದೇಹವೂ ಬರುತ್ತದೆ. "

ರಾಯಸಾಹೇಬರು ಜ್ಞಾನಶಂಕರರನ್ನು ತೀವ್ರದೃಷ್ಟಿಯಿಂದ ನೋಡಿದರು. ಈ ಸಂದೇಹ ಸರಿಯಾಗಿ ಗುರಿತಾಕಿತು. ಜ್ಞಾನಶಂಕರರ ಹೃದಯ ಕಂಪಿಸಿತು. ಇವರ ಈ ಭ್ರಮೆಯನ್ನು ಹೊಡೆದುಹಾಕುದವಶ್ಯ. ಅದಕ್ಕಾಗಿ ಅವರೆಂದರು : " ನಿಮ್ಮ ಬಾಯಿಂದ ಸೋಗು, ಬಹುರೂಪ ಎಂಬ ಶಬ್ದಗಳನ್ನು ಕೇಳಿ ಒಂದು ಗಾದೆಯ ಮಾತು ನೆನಪಾಗುತ್ತದೆ. ಆದರೆ ಅದನ್ನು ನಿಮಗೆ ಅನ್ವಯಿಸುವ ಮನಸಿಲ್ಲ ಧರ್ಮದ ಹೆಸರಿನಲ್ಲಿ ವಿಷಯವಾಸನೆಯನ್ನೂ ವಿಷಪಾನವನ್ನೂ ಸ್ತುತ್ಯವೆಂದು ತಿಳಿದಂತವರು ಒಂದುವೇಳೆ ಇನ್ನೊಬ್ಬರ ಧಾರ್ಮಿಕ ವೃತ್ತಿಗೆ ಹೆಸರಿಟ್ಟರೆ ಕ್ಷಮ್ಯವೇ. "

ರಾಯಸಾಹೇಬರು ಮತ್ತೆ ಚುಚ್ಚುನೋಟದಿಂದ ನೋಡಿ, " ನೀವು ಸತ್ಯವಾಗಿ ಹೇಳಿ " ಎಂದು ಕಠೋರ ಸ್ವರದಲ್ಲಿ ನುಡಿದರು.

ತಮ್ಮ ಹೃದಯದಮೇಲಿನ ತೆರೆಯೊಂದು ಏಳುತ್ತಿರುವಂತೆ ಜ್ಞಾನಶಂಕರರಿಗೆ ಭಾಸವಾಯಿತು. ಅರ್ಧವಿಸ್ಮೃತಿಯೊಂದು ಆವರಿಸಿದಂತಾಯಿತು. "ಹಾಂ, ಸತ್ಯವನ್ನೇ ಹೇಳುತ್ತೇನೆ" ಎಂದರು ದೀನಭಾವದಿಂದ.

"ಯಾರಿಗಾಗಿ ಈ ಬಲೆ ಬೀಸಿದ್ದೀರಿ ?"

"ಗಾಯತ್ರಿಗಾಗಿ."

"ಅವಳಿಂದ ಏನು ಬಯಸುತ್ತೀರಿ ?"

"ಅವಳ ಸಂಪತ್ತು, ಅವಳ ಪ್ರೇಮ."

ರಾಯಸಾಹೇಬರು ಗಹಗಹಿಸಿ ನಕ್ಕರು. ಜ್ಞಾನಶಂಕರರಿಗೆ ಕನಸಿನಿಂದೆಚ್ಚಂತಾಯಿತು. ತಾವಾಡಿದ ಮಾತು ಅವರಿಗೆ ನೆನಪಿತ್ತು. ಅವರ ಕೃತ್ರಿಮ ಕ್ರೋಧ ಶಾಂತವಾಗಿ, ಅಪರಾಧಿಯ ಲಜ್ಜೆ, ದೈನ್ಯಗಳು ಅದರ ಸ್ಥಳವನ್ನು ಆಕ್ರಮಿಸಿದವು. ರಾಯಸಾಹೇಬರ ರೂಪ ಅತ್ಯಂತ ಭೀಕರವಾಗಿ ಕಂಡಿತವರಿಗೆ. ಈ ಅತ್ಯಾಚಾರಕ್ಕೆ ಪ್ರತ್ಯಾಘಾತ ಮಾಡಬೇಕೆಂಬ ಪ್ರವೃತ್ತಿಯ ತೆರೆಗಳು ಅವರ ಮನಸದಲ್ಲಿದ್ದವು. ಆದರೆ ಅದರೊಡನೆ ಒಂದು ವಿಚಿತ್ರವಾದ ಭಯವೂ ಮುತ್ತಿತ್ತು. ಈ ದೆವ್ವನ ಮುಂದೆ ತಾವು ತೀರಾ ನಿರ್ಬಲರಾಗಿ ಕಂಡರು. ಈ ಪರಿಸ್ಥಿತಿಯಲ್ಲಿ ಆತ್ಮಹತ್ಯೆ ಮಾಡಿಕೊಳ್ಳಲೇ ಎಂದೆನಿಸುವಷ್ಟು ಅವರು ಉದ್ವಿಗ್ನರಾದರು.

ಪಕ್ಕನೆ ರಾಯಸಾಹೇಬರು ಮಾತನಾಡಿದರು: "ನನ್ನ ಮೇಲೆ ನೀವು ಸುಮ್ಮನೆ ಸಿಟ್ಟಾಗುತ್ತಿದ್ದೀರಿ. ಗಾಯತ್ರಿಯ ದೃಷ್ಟಿಯಲ್ಲಿ ನಿಮ್ಮನ್ನು ಪತಿತರನ್ನಾಗಿ ಮಾಡುವಂತಹ ಕ್ಷುದ್ರ ಹೃದಯ ನನ್ನದಲ್ಲ. ಅವಳ ಆಸ್ತಿ ನಿಮಗಾದರೆ ನನಗೆ ಸಂತೋಷವೇ ಆಗುವುದು. ಆದರೆ ಅವಳ ಸತೀತ್ವ ಆ ಆಸ್ತಿಗಿಂತ ಬಹಳ ಬೆಲೆಯುಳ್ಳದ್ದು; ಅದರಮೇಲೆ ಯಾರದಾದರೂ ಲೋಲುಪ ದೃಷ್ಟಿ ಬೀಳುವುದನ್ನು ನಾನು ಸಹಿಸಲಾರೆ. ನೀವು ಇಚ್ಛೆಗಳ, ದುರ್ವಾಸನೆಗಳ ದಾಸರಾಗಬೇಡಿ. ಮನುಷ್ಯ ತನ್ನ ಭಾಗ್ಯದ ವಿಧಾತ ತಾನೇ ಎಂದು ನಿಮ್ಮ ಗ್ರಹಿಕೆ; ಅದು ಶುದ್ಧ ಭ್ರಮೆ. ಅದೃಷ್ಟದ ಆಟಿಕೆಗಳು ನಾವೆಲ್ಲ. ನಿಮ್ಮ ಮಕ್ಕಳುಮರಿಯ ಹಿತ ನೋಡಬೇಡಿ ಎಂದು ನಾನೆನ್ನುವುದಿಲ್ಲ; ತುಂಬಾ ಗಳಿಸಿರಿ. ಆದರೆ ಅದಕ್ಕೆ ಆತ್ಮವನ್ನು, ಮರ್ಯಾದೆಯನ್ನು ಬಲಿಗೊಡಬೇಡಿ."

ಅಷ್ಟರಲ್ಲಿ ರಾಯರ ಆತ್ಮೀಯ ಕಾರ್ಯದರ್ಶಿ ಬಂದುದರಿಂದ ಜ್ಞಾನ ಶಂಕರರು ಎದ್ದು ಹೋಗಿ ತೋಟದಲ್ಲಿ ಕುಳಿತರು. ಮಾಘದ ಸಂಜೆಯಲ್ಲಿಯೂ ಅವರಿಗೆ ಚಳಿಯೆನಿಸಲಿಲ್ಲ. ಒಳಗಿನ ಕಿಚ್ಚಿನಿಂದ ಮೈಯೆಲ್ಲ ಕಾಯುತ್ತಿತ್ತು. ರಾಯಸಾಹೇಬರ ಉಪದೇಶ ಮರೆತುಹೋಗಿತ್ತು. ಬೀಳುತ್ತಿರುವ ಗೋಡೆ ಯನ್ನು ನಿಲ್ಲಿಸುವುದು ಹೇಗೆ?—ಇದೇ ಚಿಂತೆ. ಈ ಮಹಾಶಯರೇನೋ ಗಾಯತ್ರಿಗೆ ಹೇಳುವುದಿಲ್ಲ ಎನ್ನುತ್ತಾರೆ; ಏನು ನೆಚ್ಚಿಕೆ? ಈ ದುಷ್ಟ ತನ್ನ ಸಿರಿಯನ್ನಂತೂ ಹಾಳುಮಾಡುತ್ತಾನೆ. ಅತ್ತ ಆ ಬಾಗಿಲನ್ನೂ ಮುಚ್ಚಿಬಿಟ್ಟರೆ ನನಗೆ ಹೊರಡಲಿಕ್ಕೇ ದಾರಿಯಿಲ್ಲ. ನಾನು ಕಟ್ಟಿಕೊಂಡ ಯೋಚನೆಯೇನು, ಆದುದೇನು? ಸಂಜೆಗೆ ರಾಯಸಾಹೇಬರು ಕ್ಲಬ್ಬಿಗೆ ಹೋದರೂ ಜ್ಞಾನ ಶಂಕರರು ಆ ನಿರ್ಜನ ಸ್ಥಾನದಲ್ಲಿಯೇ ಆಲೋಚಿಸುತ್ತ ಕುಳಿತರು. ತೋಟ ದಲ್ಲಿ ಚಳಿ ಹೆಚ್ಚಿದಾಗ ಅವರು ಕೋಣೆಯೊಳಗೆ ಹೋದರು. ನಿರಾಶೆ-ಅಪ ಮಾನಗಳ ಹೊರತು ಅವರಿಗೆ ಯಾವುದೂ ಕಾಣುತ್ತಿರಲಿಲ್ಲ. ತಾನೆಷ್ಟು ಆಶಾಚಿತ್ರಗಳನ್ನು ಚಿತ್ರಿಸಿಕೊಂಡಿದ್ದ. ತನ್ನ ಮನಸಿನಂತಾಗಿದ್ದರೆ ಎರಡು ಮೂರು ವರುಷಗಳಲ್ಲಿ ವರುಷಕ್ಕೆ ಮೂರು ಲಕ್ಷ ರೂಪಾಯಿಗಳ ಉತ್ಪನ್ನದ ಧನಿಯಾಗುತ್ತಿದ್ದೆ. ಆದರೆ ಮನದಲ್ಲಿ ಮಂಡಿಗೆ ತಿನ್ನುವುದರಿಂದ ಏನು ಪ್ರಯೋಜನ? ತನ್ನ ಕಪಟನಟನೆಯೆಲ್ಲ ಬಯಲಿಗೆ ಬಿತ್ತು ಕಮಲಾನಂದರಿಂದ.

ಜ್ಞಾನಶಂಕರರಿಗೆ ನಿದ್ದೆ ಹತ್ತಲಿಲ್ಲ. ಕಣ್ಣು ಕೊಂಚ ಮುಚ್ಚಿಕೊಂಡರೆ ಕೆಟ್ಟ ಕನಸು —ತಾವು ಗೋಮತಿಯಲ್ಲಿ ಮುಳುಗಿದಂತೆ, ತಮ್ಮ ಹೆಣವನ್ನು ಸುಡುತ್ತಿರುವಂತೆ; ತಮ್ಮ ವಿಶಾಲ ಮಂದಿರ ಬಿದ್ದುಹೋದಂತೆ, ಅದರ ಭಗ್ನಾ ವಶೇಷದ ಮೇಲೆ ಮಾಯಾಶಂಕರ ಅಳುತ್ತ ಕುಳಿತಿರುವಂತೆ; ಗಾಯತ್ರಿ ತಮ್ಮನ್ನು ಕೋಪದಿಂದ ಧಿಕ್ಕರಿಸುತ್ತಿರುವಂತೆ.

ಮುಂಜಾನೆ ಎದ್ದಾಗ ಅವರ ಮನಸು ಬಹಳ ಖಿನ್ನವಾಗಿತ್ತು. ಎಷ್ಟೋ ಹರದಾರಿ ನಡೆದುಬಂದಂತೆ ಅವರು ದಣಿದಿದ್ದರು. ಯಾರೊಡನೆಯೂ ಮಾತನಾಡದೆ ಪಂಚೆ ತೆಗೆದುಕೊಂಡು ಗೋಮತಿಯ ಕಡೆ ಹೊರಟರು. ಹೊಳೆಯ ದಡದಲ್ಲಿ ಭಕ್ತರ ನೆರವಿ ಸೇರಿತ್ತು. ಜ್ಞಾನಶಂಕರರು ಕಟ್ಟೆಯಮೇಲೆ ಪಂಚೆಯನ್ನಿಟ್ಟು ನೀರಿನಲ್ಲಿಳಿದರು. ಸಹಸಾ ಅವರ ಕಣ್ಣುಗಳು ಸಜಲ ವಾದವು. ಟೊಂಕಮಟ ನೀರಿನಲ್ಲಿ ಹೋದರು, ಮುಂದುವರಿಯುವ ಸಾಹಸ

ವಾಗಲಿಲ್ಲ. ಅಪಮಾನ ನಿರಾಶೆಗಳಿಂದ ಉಂಟಾಗಿದ್ದ ಅವರ ಉತ್ತೇಜನೆ ಜರ್‍ರನೆ ಇಳಿಯಿತು. ಸಾಯುವುದು ಸಹಜ ಎಂದು ಅವರು ಭಾವಿಸಿದ್ದರು. ಅದೀಗ ಕಠಿನವಾಗಿ ತೋರಿತು. ತಾನೆಂತಹ ತಿಳಿಗೇಡಿ! ರಾಯಸಾಹೇಬರು, ಗಾಯತ್ರಿ—ವಿದ್ಯೆ ಕೂಡ— ತಮ್ಮನ್ನು ತಿರಸ್ಕರಿಸಬಹುದು; ಆದರೂ ತಾವು ಜೀವನದಲ್ಲಿ ಏನನ್ನೂ ಮಾಡಲಾರರೆ? ಜೀವನವನ್ನು ಸಫಲ ಮಾಡಲಾರರೆ? ರಾಯಸಾಹೇಬರು ತಮ್ಮ ಬಣ್ಣ ಅಳಿಸಿದರೇನಾಯಿತು, ಅವರಿಗೆ ತಾವು ಶಹ ಕೊಡಲಾರರೆ? ಲೆಕ್ಕಣಿಕೆಯ ಬಲದಿಂದ ಅವರನ್ನು ಮೋರೆ ಎತ್ತದಂತೆ ಮಾಡಬಲ್ಲರು. ಹಾಂ ಹೂಂ ಎಂದರೆ ಗಾಯತ್ರಿಯನ್ನೂ ಉಚ್ಚಾಸನದಿಂದ ಉರುಳಿಸಬಹುದು. ಕೂಟನೀತಿಯ ರಂಗಭೂಮಿ ಅಷ್ಟು ಸಂಕುಚಿತವಿಲ್ಲ ಈ ಯೋಚನೆಯಲ್ಲಿ ಅವರು ಸ್ನಾನಮಾಡಿ ಮೇಲೆ ಬಂದರು. ಅವರ ಮುಖ ದಲ್ಲಿ ಗೆಲವಿನ ಕಳೆ ಮಿನುಗುತ್ತಿತ್ತು.

ದಾರಿಯುದ್ದಕ್ಕೂ ಮುಂದಿನ ಮಾರ್ಗಕ್ರಮಣದ ವಿಚಾರ: ರಾಯಸಾಹೇಬರು ಸತ್ತರೆ ಯಾರದೇನು ಹೋಗಬೇಕಾಗಿದೆ? ಸಮಾಜ-ಅರ್ಥ ಶಾಸ್ತ್ರಗಳ ದೃಷ್ಟಿಯಿಂದಲಂತೂ ಇದು ಕೊಲೆಯಲ್ಲ. ನೈತಿಕ ದೃಷ್ಟಿಯಿಂದಲೂ ಅಡ್ಡಿಯಿಲ್ಲ. ಧಾರ್ಮಿಕ ದೃಷ್ಟಿಯಿಂದ ಮಾತ್ರವೆ ಪಾಪ. ಲೌಕಿಕ ದೃಷ್ಟಿ ಯಿಂದಂತೂ ಇದು ಅನುಮೋದನೀಯ, ಅಪೇಕ್ಷ, ಪರಮಾವಶ್ಯಕ. ಜೀವನ ಸಂಗ್ರಾಮ ಇದು. ಇಲ್ಲಿ ಔಚಿತ್ಯ ಅನೌಚಿತ್ಯಗಳ ನಿರ್ಣಯ ನಮ್ಮ ಸಾಫಲ್ಯ ವನ್ನವಲಂಬಿಸಿದೆ. ಗೆದ್ದರೆ ಎಲ್ಲವೂ ಸರಿ; ಸೋತರಷ್ಟೇ ಪಾಪ ಎನಿಸಿಕೊಳ್ಳು ವುದು. ಹಾದಿಯಲ್ಲಿಯ ಈ ಕಲ್ಲನ್ನು ತೆಗೆದುಬಿಡುವುದು....

## ೩೭

ಎರಡು ದಿನ ಜ್ಞಾನಶಂಕರರು ರಾಯಸಾಹೇಬರನ್ನು ಕಾಣಲಿಲ್ಲ. ಆದರೆ ರಾಯಸಾಹೇಬರು ಗಾಯಗೊಳಿಸಿ ಅದಕ್ಕೆ ಉಪ್ಪು ಎರಚುವಂತಹ ನಿರ್ದಯರಲ್ಲ. ಸಿಟ್ಟು ಇಳಿದೊಡನೆ ಅತ್ಯಂತ ಔದಾರ್ಯದಿಂದ ತಮ್ಮ ದಾದ ತಮ್ಮ ಕಟುವ್ಯವಹಾರದ ಬಗ್ಗೆ ಪ್ರಾಯಶ್ಚಿತ್ತ ಮಾಡಿಕೊಳ್ಳುವ ಸ್ವಭಾವ ಅವರದು.—ಅವರ ಮಾತನ್ನು ತಾಳ್ಮೆಯಿಂದ ಸಹಿಸಿಕೊಳ್ಳಬೇಕು, ದೀರ್ಘಕ್ಕೊಯ್ಯಬಾರದು ಮಾತ್ರ ಜ್ಞಾನಶಂಕರರನ್ನು ಧಿಕ್ಕರಿಸಿದ ಮರು

ಕ್ಷಣದಲ್ಲಿಯೇ ಅವರಿಗೆ ಕೆಟ್ಟೆನಿಸಿತು. ಅವರೆಲ್ಲಿ ಸಿಟ್ಟಾಗಿ ಹೊರಟು ಹೋಗುವರೋ ಎಂದು ಭಯವಾಯಿತು. ಲೋಕರೀತಿಯೇ ಹೀಗಿರುವಾಗ ಅವರನ್ನು ನಾನು ಇಷ್ಟು ಹೀಗಳೆದದ್ದು ಉಚಿತವಾಗಲಿಲ್ಲ. ಆ ವಿಚಾರ ಶೀಲರಿಗೆ ಸೂಚನೆ ಕೊಟ್ಟಿದ್ದರೂ ಸಾಕಿತ್ತು. ಸುಮ್ಮನೆ ಬಿಚ್ಚುಮಾತಿನಿಂದ ಬಯ್ದೆ.

ರಾಯಸಾಹೇಬರು ಊಟಕ್ಕೆ ಕುಳಿತುಕೊಳ್ಳುವಾಗ ಜ್ಞಾನಶಂಕರರನು ಕರೆ ಎಂದು ಅಡಿಗೆಯವನಿಗೆ ಹೇಳಿದರು. ಅವರು ಬರದಿದ್ದರೆ ತಾವೂ ಉಣ್ಣು ವುದಿಲ್ಲವೆಂದು ಹೇಳಿಕಳಿಸಿದರು. ಜ್ಞಾನಶಂಕರರು ಒಪ್ಪುತ್ತಿರಲಿಲ್ಲ. "ಏಕೆ ಹೋಗುವುದಿಲ್ಲ? ಹಿರಿಯರು ಕರೆಯುತ್ತಾರೆ, ಹೋಗದಿದ್ದರೆ ಅವರಿಗೆ ದುಃಖ ವಾಗುತ್ತದೆ" ಎಂದು ವಿದ್ಯೆ ಒತ್ತಾಯಿಸಿದ ಮೇಲೆ ದುಃಖಿತ ಮುದ್ರೆಯಿಂದ ಬಂದು, ರಾಯಸಾಹೇಬರಿಂದ ಸ್ವಲ್ಪ ದೂರದಲ್ಲಿ ಕುಳಿತರು. ಅವರು ತಮ್ಮ ಹತ್ತಿರವೇ ಕುಳ್ಳಿರಲು ಕರೆದು, "ನಿಮಗಾಗಿ ಇಂದು ಕೆಲವು ಆಂಗ್ಲ ಪದಾರ್ಥ ಮಾಡಿಸಿದ್ದೇನೆ" ಎಂದರು.

ಜ್ಞಾನಶಂಕರರು ಮೆತ್ತಗೆ ನುಡಿದರು: "ಈಗ ನನಗೆ ಸ್ವಲ್ಪವೂ ಇಚ್ಛೆಯಿಲ್ಲ."

"ಇಚ್ಛೆ ತಾನೇ ಹುಟ್ಟುತ್ತದೆ ಕಂಪಿನಿಂದ, ತಟ್ಟೆಯೊಂದು ಮುಂದೆ ಬರಲಿ. ಅಡಿಗೆಯವನಿಗೆ ಮೆಚ್ಚು ಕೊಡುವೆನೆಂದು ಹೇಳಿದ್ದರಿಂದ ಅವನು ತನ್ನ ಬುದ್ಧಿಯನ್ನೆಲ್ಲ ವೆಚ್ಚ ಮಾಡಿರಬಹುದು" ಎಂದರು ರಾಯಸಾಹೇಬರು.

ಅಡಿಗೆಯವನು ತಟ್ಟೆ ತಂದಿಟ್ಟ. ಜ್ಞಾನಶಂಕರರ ಮೋರೆಯ ರಸವೇ ಇಂಗಿಹೋಗಿತ್ತು ಎದೆ ಹಾರುತ್ತಿತ್ತು. ಭಯವು ಆಶೆಯನ್ನು ಮೆಟ್ಟಿ ನಿಂತಿತ್ತು. ಹೇಗಾದರೂ ಇಲ್ಲಿಂದ ಓಡಿಹೋಗಬೇಕು ಎನಿಸುತ್ತಿತ್ತು ಅವರಿಗೆ. ಅವರ ಅಂಗಾಂಗಗಳೆಲ್ಲ ಕಂಪಿಸುತ್ತಿದ್ದವು; ಧ್ವನಿಯೂ ಭಗ್ನವಾಗುತ್ತಿತ್ತು. ಪ್ರಾಣ ತೆಗೆದುಕೊಳ್ಳುವುದು ಕೊಡುವುದಕ್ಕಿಂತಲೂ ದುಸ್ತರವೆಂದು ಎನಿಸಿತು.

ರಾಯಸಾಹೇಬರು ಒಂದೆರಡು ತುತ್ತು ಉಂಡಿರಬಹುದು. ತಟ್ಟೆ ಯಿಂದ ಕೈತೆಗೆದು ಜ್ಞಾನಶಂಕರರನ್ನು ಮರ್ಮಭೇದಕ ದೃಷ್ಟಿಯಿಂದ ನೋಡಿ ದರು. ಜ್ಞಾನಶಂಕರರ ಪ್ರಾಣವೇ ಬತ್ತಿಹೋಯಿತು. ರಹಸ್ಯವೆಲ್ಲವೂ ಬಯಲಾಯಿತೆಂಬುದು ಅವರ ಆ ನೋಟದಲ್ಲಿ ನಿಚ್ಚಳವಾಗಿ ಕಂಡಿತು.

ರಾಯಸಾಹೇಬರು ಅಪಮಾನಸೂಚಕವಾಗಿ ನಕ್ಕು "ನಾನೊಮ್ಮೆ ಹೇಳಿ ಬಿಟ್ಟಿದ್ದೇನೆ, ಧನ-ಸಂಪತ್ತಿ ನಿಮ್ಮ ಭಾಗ್ಯದಲ್ಲಿಲ್ಲ; ನೀವು ನಡಸಿದ್ದೆಲ್ಲ ವಿಪರೀತವಾಗುತ್ತಿದೆ, ನಿಮ್ಮ ಪಾಲಿಗೆ ಬರುವುದು ಲಜ್ಜೆ ಮತ್ತು ಗ್ಲಾನಿ ಅಷ್ಟೆ." ಎಂದರು.

"ನೀವೆನ್ನುವುದು ನನಗೆ ತಿಳಿಯಲಿಲ್ಲ." ಅರಿಯದವರಂತೆ ಜ್ಞಾನಶಂಕರರೆಂದರು.

"ಇದೆಲ್ಲಾ ಸುಳ್ಳು. ನನ್ನ ಆಶಯವನ್ನು ಚೆನ್ನಾಗಿ ಬಲ್ಲಿರಿ. ಇದಕ್ಕಿಂತ ಹೆಚ್ಚಿಗೆ ಹೇಳಿದರೆ ಪರಿಣಾಮ ಕೆಟ್ಟಾದೀತು. ನಾನು ಮನಸುಮಾಡಿದರೆ ಎಲ್ಲ ರಾಮಾಯಣವನ್ನು ನಿಮ್ಮ ಬಾಯಿಂದಲೇ ಹೇಳಿಸಬಹುದು. ಆದರೆ ಬೇಡ. ನಿಮಗೊಂದು ಹುಚ್ಚುಭ್ರಮೆ. ನಿಮ್ಮನ್ನು ಚತುರರೆಂದು ತಿಳಿದಿದ್ದೆ ನಾನು; ನಿಮ್ಮ ದೃಷ್ಟಿ ಬಹಳ ಸ್ಥೂಲ ಎಂಬುದು ಈಗ ಗೊತ್ತಾಯಿತು. ಇಷ್ಟು ದಿನಗಳ ಸಂಬಂಧದಿಂದಲೂ ನೀವು ನನ್ನನ್ನು ಗುರುತಿಸಲಿಲ್ಲ. ಬಿದಿರಿನಿಂದ ಸಿಂಹ ಹೊಡೆಯಬೇಕೆನ್ನುತ್ತೀರಿ ನೀವು. ಒಂದು ವೇಳೆ ನೀವದರ ಆಕ್ರಮಣಕ್ಕೆ ಗುರಿಯಾದರೆ ತಪ್ಪು ನಿಮ್ಮದೇ. ನಾನು ಮನುಷ್ಯನಲ್ಲ ಸಿಂಹ. ಇದು ತನ್ನ ಉಗುರು-ಹಲ್ಲುಗಳನ್ನು ತೆರೆದು ತೋರಿದರೆ ನೀವು ನಡುಗಿಹೋಗುವಿರಿ. ಈ ತಟ್ಟೆ ೨೦-೨೫ ಜನಕ್ಕೆ ಉಣಿಸಲು ಸಾಲುವಷ್ಟಿದೆ—ಒಂದು ತುತ್ತು ಉಂಡರೆ ಎರಡನೆಯ ತುತ್ತನ್ನು ಉಣ್ಣುವ ಸಂಭವವೇ ಇರಲಿಕ್ಕಿಲ್ಲ. ಆದರೆ, ನಾನು ಇಡೀ ತಟ್ಟೆಯನ್ನೇ ಬರಿದು ಮಾಡಬಲ್ಲೆ. ನಾನು ಶಕ್ತಿಯ ಉಪಾಸಕ, ಇಂತಹ ವಸ್ತುಗಳು ನನಗೆ ಹಾಲು ನೀರು ಇದ್ದಂತೆ."

ಎನ್ನುತ್ತ ರಾಯಸಾಹೇಬರು ಮತ್ತೆ ಕೆಲವು ತುತ್ತುಗಳನ್ನು ಗಬಗಬನೆ ತಿಂದರು. ಜ್ಞಾನಶಂಕರರು ಭರ್ರನೆ ಅವರ ತಟ್ಟೆಯನ್ನೆತ್ತಿ ನೆಲಕ್ಕೆಸೆದು, ಅವರ ಕಾಲಮೇಲೆ ಬಿದ್ದು ಅಳತೊಡಗಿದರು. ಅವರ ಯೋಗಸಿದ್ಧಿ ಜ್ಞಾನಶಂಕರರನ್ನು ಗೆದ್ದಿತು. ಇದು ಇಲಿ–ಹುಲಿಗಳ ಕದನವೆಂದು ಅವರಿಗೆನಿಸಿತು.

ರಾಯಸಾಹೇಬರು ಜ್ಞಾನಶಂಕರರನ್ನು ಎತ್ತಿ ಕುಳ್ಳಿರಿಸಿ ಹೇಳಿದರು. "ಕಣ್ಣೀರಿಗೆ ಕರಗುವಷ್ಟು ಕೋಮಲ ಹೃದಯ ನನ್ನದಲ್ಲ. ಅಧಮ ಸ್ವಾರ್ಥದ ಪಂಜರದಲ್ಲಿ ಸಿಕ್ಕಿದ್ದೀರಿ ನೀವು. ತಪ್ಪು ನಿಮ್ಮದಲ್ಲ, ಪಡೆದ ಧರ್ಮಹೀನ ಶಿಕ್ಷಣದ್ದು. ಮೊದಲಿನಿಂದಲೂ ಭೌತಿಕ ಶಿಕ್ಷಣವೇ ಸಿಕ್ಕಿದೆ

ನಿಮಗೆ. ನಿಮ್ಮನ್ನು ನಾನು ಕ್ಷಮಿಸುತ್ತೇನೆ; ನಿಮಗೆ ಒಳ್ಳೆಯ ಬುದ್ಧಿ ಕೊಡೆಂದು ದೇವರಲ್ಲಿ ಬೇಡುತ್ತೇನೆ. ''

ರಾಯಸಾಹೇಬರ ತುಟಿಗಳು ಕಪ್ಪಾದವು. ಮೋರೆ ಕಳೆಗುಂದಿತು; ಕಣ್ಣುಗಳು ಜಡವಾಗತೊಡಗಿದವು; ಮೈ ಬೆವತಿತು; ಉಸಿರಿನ ವೇಗ ಹೆಚ್ಚಿತು. ಅವರ ಅವಸ್ಥೆಯನ್ನು ಕಂಡು ಜ್ಞಾನಶಂಕರರು ವಿಚಲಿತರಾದರು. ನಡುಗುವ ಕೈಯಿಂದ ಅವರಿಗೆ ಗಾಳಿಹಾಕಲು ಹೋದರು. ಆದರೆ ಅವರು ' ಇಲ್ಲಿಂದ ಹೊರಟುಹೋಗು, ಒಬ್ಬನನ್ನೇ ಇರಗೊಡು ' ಎಂದು. ಸನ್ನೆಯಿಂದ ಹೇಳಿ ಕಳಿಸಿ ಬಾಗಿಲಿಕ್ಕಿಕೊಂಡರು.

ಜ್ಞಾನಶಂಕರರು ಬಾಗಿಲಿಗೆ ಕಿವಿಹಚ್ಚಿ ಕೇಳಿದರು. ರಾಯಸಾಹೇಬರು ಚಟಪಟ ಒದ್ದಾಡುತ್ತಿದ್ದರು. ಭಯದಿಂದ ಜ್ಞಾನಶಂಕರರ ಮೈಗೂದಲು ನೆಟ್ಟಗಾದವು. ತಮ್ಮ ನೀಚಕೃತಿಗಾಗಿ ಇಂದಿನಷ್ಟು ಪಶ್ಚಾತ್ತಾಪ ಅವರಿಗೆಂದೂ ಆಗಿರಲಿಲ್ಲ. ಅವರದೇನು ಗತಿ, ತಮ್ಮದೇನು ಗತಿ !

ಒಮ್ಮೆಲೆ ಬಾಗಿಲು ತೆರೆದು ರಾಯಸಾಹೇಬರು ಹೊರಗೆ ಬಂದರು. ಅವರ ಕಣ್ಣು ಮೋರೆ ಕೆಂಪಾಗಿದ್ದವು. ಮೈತುಂಬ ಬೆವರಿಳಿಯುತ್ತಿತ್ತು—ಕುಲುಮೆಯಿಂದೆದ್ದು ಬಂದ ಕಮ್ಮಾರನಂತೆ. ತಟ್ಟೆಗಳೆರಡೂ ಬಳಿದು ಒತ್ತಟ್ಟಿಗಿಟ್ಟಿದ್ದವು. ಎಲ್ಲ ಆಹಾರ ಆಹುತಿಗೊಂಡು ಅಗ್ನಿ ಉರಿಯುತ್ತಿತ್ತು. ರಾಯಸಾಹೇಬರು ಶ್ವಾಸವನ್ನು ಸರಿಪಡಿಸಿಕೊಂಡು ಕಂಪಿಸುವ ಸ್ವರದಲ್ಲಿ ಮಾತನಾಡಿದರು: " ನಾನು ಸಾಯಲಿಲ್ಲ, ಆದರೆ ಅದಕ್ಕಿಂತ ಕಡೆಯಾಯಿತು. ಯೋಗಕ್ರಿಯೆಗಳಿಂದ ವಿಷವನ್ನು ಹೊರಕ್ಕೆ ಹಾಕಿದರೂ ಸ್ವಲ್ಪ ವಿಷಧಾತು ರಕ್ತದಲ್ಲಿ ಉಳಿದುಕೊಂಡಹಾಗಿದೆ. ಈ ದಾಹ ಕೆಲ ದಿನಗಳಲ್ಲಿ ನನ್ನನ್ನು ಬೂದಿ ಮಾಡುವುದು. ನನ್ನ ಬಾಯಿ ನಿಮ್ಮನ್ನು ಕ್ಷಮಿಸಿದೆ, ಆದರೆ ಆತ್ಮ ಕ್ಷಮಿಸಲಾರದು. ನೀವು ನನಗೆ ಮಗನ ಸರಿ; ನಾನು ನಿಮಗೆ ತಂದೆಯ ಸಮ. ಆದರೂ ಇನ್ನು ಮೇಲೆ ಒಬ್ಬರ ಮೋರೆ ಒಬ್ಬರು ನೋಡಲಾಗದು....

ಮಾತಾಡುತ್ತಿದ್ದಂತೆ ಅವರ ಕಣ್ಣುಗಳು ಮುಚ್ಚಿಕೊಂಡವು. ಗೋಡೆ ಸವರಿಕೊಂಡು ದಿವಾಣಖಾನೆಗೆ ಬಂದು ಬಿದ್ದುಬಿಟ್ಟರು. ಜ್ಞಾನಶಂಕರರು ಹಿಂದೆ ಹಿಂದೇ ಇದ್ದರೂ ಅವರನ್ನು ಹಿಡಿಯುವ ಧೈರ್ಯ ಅವರಿಗಿರಲಿಲ್ಲ.

ಆಳುಗಳು ಬಂದು ರಾಯಸಾಹೇಬರನ್ನು ಮಂಚದ ಮೇಲೆ ಮಲಗಿಸಿದರು. ಶೈತ್ಯೋಪಚಾರ ನಡೆಯಿತು. ಡಾಕ್ಟರರಿಗೆ ಕರೆ ಹೋಯಿತು. ದಿವಾಣ ಖಾನೆಯಲ್ಲಿ ಜನರ ಗುಂಪು ಸೇರಿತು. ಹತ್ತು ನಿಮಿಷಗಳ ತರುವಾಯ ರಾಯಸಾಹೇಬರು ಕಣ್ತೆರೆದು ಎಲ್ಲರಿಗೂ ಹೊರಟುಹೋಗುವಂತೆ ಸನ್ನೆ ಮಾಡಿದರು. ಎಲ್ಲರೊಡನೆ ಹೊರಟಿದ್ದ ಜ್ಞಾನಶಂಕರರಿಗೆ ಕುಳಿತುಕೊಳ್ಳಲು ಸೂಚಿಸಿದರು. ಅವರು ಕುಳಿತಮೇಲೆ ರಾಯಸಾಹೇಬರು ಹೇಳಿದರು: "ಇದು ನಮ್ಮ ಆಸ್ತಿಯಲ್ಲ; ಇದನ್ನು ದೇಸಗತಿ, ಜಾಗೀರು ಎನ್ನುವುದು ಬರೀ ಭ್ರಮೆ. ಇದೊಂದು ದಲ್ಲಾಳಿ ಅಷ್ಟೆ. ಈ ಭೂಮಿಯ ಮೇಲೆ ನನ್ನದೇನು ಅಧಿಕಾರ? ಇದು ನನ್ನ ಭುಜಬಲದ ಸಂಪಾದನೆಯಲ್ಲ. ನವಾಬರ ಕಾಲದಲ್ಲಿ ಒಬ್ಬ ಸುಬೇದಾರ ನಮ್ಮ ಅಜ್ಜನನ್ನು ಈ ನಾಡಿನ ತೆರಿಗೆ ಎತ್ತುವುದಕ್ಕೆ ನಿಯಮಿಸಿದ್ದ. ನಮ್ಮ ತಂದೆಯ ಮೇಲೂ ನವಾಬರ ಕೃಪಾದೃಷ್ಟಿಯಿತ್ತು. ಆಂಗ್ಲರ ಆಳಿಕೆ ಬಂದು ತಂದೆಯ ಆ ಅಧಿಕಾರ ಹೋಯಿತು. ಆದರೆ ರಾಜ ವಿದ್ರೋಹದ ಸಮಯದಲ್ಲಿ ಅವರು ಆಂಗ್ಲರಿಗೆ ತನುಮನೋಧನಗಳಿಂದ ಸಹಾಯ ಮಾಡಿದ್ದಕ್ಕಾಗಿ ಆ ಅಧಿಕಾರ ಅವರಿಗೆ ತಿರುಗಿ ಸಿಕ್ಕಿತು. ನಮ್ಮ ಜಮೀನುದಾರಿಯ ಕತೆ ಇದು. ತೆರಿಗೆ ಎತ್ತಿಕೊಡುವ ದಲ್ಲಾಳಿಗಳು ಮಾತ್ರ ನಾವು. ಇಷ್ಟಕ್ಕಾಗಿಯೇ ನಾವು ಎರಡನೆಯವರ ನೆತ್ತರಿನಿಂದ ಕೈ ಬಣ್ಣ ಮಾಡಿಕೊಳ್ಳುತ್ತೇವೆ; ಹೆಮ್ಮೆಯಿಂದ ದರ್ಪ ನಡೆಸುತ್ತೇವೆ. ಆಂಗ್ಲರು ತಮ್ಮ ಕಾರ್ಯಸಾಧನೆಗಾಗಿ ನಮ್ಮನ್ನು ಈ ನಾಡಿನ ಒಡೆಯರೆಂದು ಉಬ್ಬಿಸುತ್ತಾರೆ."

ದುಃಸಹವಾದ ಆಂತರಿಕವೇದನೆ ರಾಯಸಾಹೇಬರ ಮುಖದಲ್ಲಿ ಮೂಡ ತೊಡಗಿತು. ಮಲಗಿದವರು ಎದ್ದು ಕುಳಿತರು. ಮುಖಾಕೃತಿ ವಿಕೃತ ವಾಯಿತು. ನೋವಿನಿಂದ ವಿಕಲವಾದ ಎದೆಯನ್ನು ಹಿಡಿದುಕೊಂಡು ಅವರು ಮಾತನಾಡಿದರು: "ಮಗೂ, ಒಳ್ಳೆಯ ಹಾಲಾಹಲ ಕೊಟ್ಟೆ; ಹೃದಯ ಚೂರು ಚೂರಾಗುತ್ತಿದೆ ನಾನಿನ್ನು ಬದುಕುವುದಿಲ್ಲ. ಸಾಯುತ್ತಿರುವ ಮನುಷ್ಯನ ಶಾಪದಲ್ಲಿ ಏನಾದರೂ ಶಕ್ತಿಯಿದ್ದರೆ, ಈ ಜಮೀನುದಾರಿಯ ಸುಖಭೋಗ ನಿನಗೆ ದೊರೆಯಲಾರದು. ಹೋಗು, ಕಣ್ಣೆದುರಿಂದ ತೊಲಗು. ಈ ಸಿಟ್ಟಿನಲ್ಲಿ ನಿನ್ನನ್ನು ಹಿಸುಕಿಕೊಂದರೂ ಕೊಂದೇನು. ಹೋಗು, ಇನ್ನೆಂದೂ

ಮೋರೆ ತೋರಿಸಬೇಡ. ನಾನು ಸತ್ತಮೇಲೆ ನಿನಗೆ ಬರಲಿಕ್ಕೆ ಮಾರ್ಗ. ಮತ್ತೆ ಗೋರಖಪುರಕ್ಕೆ ಎಂದಾದರೂ ಹೋದೆಯೆಂದರೆ, ಗಾಯತ್ರಿಯೊಡನೆ ಸಂಬಂಧ ಬೆಳಿಸಿದರೆ ನಿನಗೆ ಕೇಡಾದೀತು; ನೆನಪಿರಲಿ. ನನ್ನ ಭೂತ ನೆರಳ ನಂತೆ ನಿನ್ನ ಬೆನ್ನು ಹತ್ತಿರುವುದು. ಈ ಮಾತು ಮೀರಿ ನಡೆದರೆ ನೀನು ಉಳಿಯಲಾರೆ." ಎಂದು ಉಶ್ ಆಯ್ಯೋ ಎಂದು ನೆರಳಿ, "ಪಾಪಿ, ಇನ್ನೂ ಹೋಗುವುದಿಲ್ಲವೆ? ಯಾರು, ಶೇರಖಾ?.... ಯಾರೂ ಇಲ್ಲವೇ?.... ನನ್ನ ಪಿಸ್ತೂಲು...."

ಜ್ಞಾನಶಂಕರರು ಕೂಡಲೆ ಎದ್ದು ಅಲ್ಲಿಂದ ಕಾಲ್ತೆಗೆದರು. ತಮ್ಮ ಕೋಣೆಗೆ ಹೋಗಿ ಉಡುಪು ಧರಿಸಿ ನಿಲ್ದಾಣದ ಕಡೆ ತೆರಳಿದರು. ವಿದ್ಯೆ ಯನ್ನೂ ಕಾಣಲಿಲ್ಲ

## ೩೫

ಲಖನಪುರದ ಕೊಲೆ ಮೊಕದ್ದಮೆಯ ಬಗ್ಗೆ ಈಗ ಜನರಲ್ಲಿ ವಿಶೇಷ ಕುತೂಹಲವುಂಟಾಗಿತ್ತು. ಮನೋಹರನ ಆತ್ಮಹತ್ಯೆಯಿಂದಾಗಿ ಊರಲ್ಲಿ ಆ ಚರ್ಚೆ ಹೆಚ್ಚಾಗಿತ್ತು. ಉಳಿದ ಆರೋಪಿಗಳು ನಿರ್ದೋಷಿಗಳೆಂದು ಎಲ್ಲರಿಗೂ ನಂಬುಗೆಯಾಗಿತ್ತು. ಮನೋಹರನ ಆತ್ಮಹತ್ಯೆಯ ಕುರಿತು ಹೊರಡುವ ವಿವಿಧ ತರ್ಕಗಳು ಅವನೇ ಕೊಲೆಗಾರನೆಂಬ ಅಭಿಪ್ರಾಯವನ್ನು ತಲುಪುತ್ತಿದ್ದವು. ಪ್ರತಿವಿಚಾರಣೆಯ ದಿನವೂ ಬನಾರಸ ಜಜ್‌ಕೋರ್ಟು ಜನಭರಿತವಾಗಿರುತ್ತಿತ್ತು. ಡಾ. ಪ್ರಿಯನಾಥ ಮತ್ತು ಇರ್ಫಾನ ಅಲಿಯವರ ಸ್ವಾರ್ಥಪರತೆಯನ್ನು ಕುರಿತು ಕಟುಟೀಕೆ ನಡೆಯುತ್ತಿತ್ತು. ಪ್ರೇಮಶಂಕರರ ನಿಷ್ಕಾಮ ಸೇವೆಯನ್ನು ಎಲ್ಲರೂ ಹೊಗಳುತ್ತಿದ್ದರು.

ಇಂದು ತೀರ್ಪಿನ ದಿನ. ಉಳಿದ ದಿನಗಳಿಗಿಂತ ಜನ ಹೆಚ್ಚಾಗಿ ಕೋರ್ಟಿಗೆ ಬಂದಿದ್ದರು. ಲಖನಪುರದವರಂತೂ ಸರಿ, ಆಸುಪಾಸಿನ ಹಳ್ಳಿಗಳ ಮಂದಿಯೂ ಬಂದಿತ್ತು. ನ್ಯಾಯಾಧೀಶರು ನಾಲ್ಕು ಗಂಟೆಗೆ ತೀರ್ಪು ಹೇಳಿದರು—ಬಿಸೇಸರ ಸಾಹ ಮುಕ್ತನಾದ; ಬಲರಾಜ-ಕಾದಿರರಿಗೆ ಕರಿನೀರಿನ ಶಿಕ್ಷೆಯಾಯಿತು; ಮಿಕ್ಕವರಿಗೆ ಏಳೇಳು ವರ್ಷಗಳ ಸಶ್ರಮ ಕಾರಾವಾಸದ ಶಿಕ್ಷೆ ವಿಧಿಸಲಾಯಿತು ಬಲರಾಜ ಬೀಸೆಸರನನ್ನು—ತನ್ನನ್ನು ಒಂದು ಕ್ಷಣ

ಬಿಟ್ಟರೆ ಅವನ ರಕ್ತವನ್ನು ಕುಡಿದುಬಿಟ್ಟೇನು—ಎಂಬಂತೆ ಉರಿಗಣ್ಣಿನಿಂದ ನೋಡಿದ. ಕಾದಿರ ಅತಿದುಃಖದಿಂದ ಉದಾಸನಾಗಿದ್ದ. ತೀರ್ಪನ್ನು ಕೇಳಿದಾಗ ನಾಲ್ಕು ಕಂಬನಿಗಳು ಅವನ ಮೀಸೆಯಮೇಲೆ ಉದುರಿದವು. ಬದುಕು ಮುಗಿಸಿ ಒಂದು ಕಾಲು ಗೋರಿಯಲ್ಲಿಟ್ಟಿದ್ದಾನೆ—ಕರಿನೀರಿನ ಶಿಕ್ಷೆ. ಜನದಟ್ಟಣೆಯಲ್ಲಿ ಎಲ್ಲೆಲ್ಲೂ ಮರುಗು, ಕೊರಗು.

ಸೆರೆಯಾಳುಗಳ ಕಡೆ ಮುಗಿಬೀಳುವ ಜನರನ್ನು ತಳ್ಳುತ್ತ, ಪೋಲಿಸರು ಅವರನ್ನು ಮೋಟರಿನಲ್ಲಿ ಹಾಕಿಕೊಂಡು ಸೆರೆಮನೆಗೆ ಸಾಗಿದರು. ಶೋಕ-ಚಿಂತೆಗಳ ಮೂರ್ತಿಯಾದ ಪ್ರೇಮಶಂಕರರು ಒಂದು ಮರದಡಿಯಲ್ಲಿ ಮೋಟರನ್ನು ನೋಡುತ್ತ ನಿಂತರು. ಮೋಟರು ದೂರಹೋದ ಬಳಿಕ. ಜನ ಅವರನ್ನು ಮುಕುರಿ ಬಗೆಬಗೆಯಾಗಿ ಪ್ರಶ್ನಿಸತೊಡಗಿತು. ಅವರು ಸುಮರ್ಮಾಹತ ಭಾವದಿಂದ ಜನರಕಡೆ ನೋಡುತ್ತಿದ್ದರಷ್ಟೆ; ಉತ್ತರ ಕೊಡುತ್ತಿರಲಿಲ್ಲ. ಒಮ್ಮೆಲೆ ಏನೋ ನೆನಪಾಗಿ ಅವರು ಸೆರೆಮನೆಯ ಕಡೆ ಹೊರಟರು. ಮಂದಿಯೂ ಹಿಂಬಾಲಿಸಿತು.

ಇಂದೇ ಗೋರಖಪುರದಿಂದ ಬಂದಿದ್ದ ಇರ್ಫಾನಅಲಿ ಮೋಟಾರಿನಲ್ಲಿ ವಾಯುಸೇವನೆಗೆ ಹೊರಟಿದ್ದರು. ಪ್ರೇಮಶಂಕರರನ್ನು ಕಂಡು ಅವರು ಕಾರು ನಿಲ್ಲಿಸಿ, "ಇಂದು ತೀರ್ಪಾಯಿತೇನು ?" ಎಂದು ಕೇಳಿದರು. ಪ್ರೇಮ ಶಂಕರರು ರುಕ್ಷನಾಗಿ 'ಹೂಂ' ಎನ್ನುತ್ತಿರುವಾಗಲೇ ಜನರು ಕಾರನ್ನು ಮುತ್ತಿದರು. ಅವರೊಳಗೊಬ್ಬ ಗಟ್ಟಿಗನು ಮುಂದುವರಿದು, "ನಿರಪರಾಧಿಗಳ ರಕ್ತ ಇವರ ಮುಖಕ್ಕೇ ಹತ್ತಿದೆ" ಎಂದ.

"ಎಳೆಯಿರಿ. ಹೊರಗೆ. ಇವನು ತಿಂದಷ್ಟು ರೂಪಾಯಿ ಇವನ ಹೊಟ್ಟೆ ಬಗಿದು ತೆಗೆಯಿರಿ." ನೂರಾರು ಕಂಠಗಳು ಒಟ್ಟಿಗೇ ಕೂಗಿದವು.

ಮೊದಲಿನ ಟೊಣ್ಣೆಯ ಇರ್ಫಾನಅಲಿಯವರನ್ನು ರಟ್ಟೆಹಿಡಿದೆಳೆದ. ಆ ಸೆಳೆತವನ್ನು ನಿತ್ತರಿಸಿಕೊಳ್ಳಲಾರದೆ ಅವರು ಕಾರಿನಿಂದ ಹೊರಬಿದ್ದರು. ಒಳಗಿರುವವರೆಗೂ ಅವರ ಮೋರೆ ಕೋಪದಿಂದ ಕೆಂಪೇರುತ್ತಲಿತ್ತು. ಈಗ ಅವರ ಪ್ರಾಣ ಒಣಗಿ, ದಯೆ ಕೋರುವ ನೋಟದಿಂದ ಅವರು ಪ್ರೇಮ ಶಂಕರರ ಮೊಗ ನೋಡಿದರು. ಇಂತಹ ಕಟು ಸಮಸ್ಯೆ ಪ್ರೇಮಶಂಕರರಿಗೆಂದೂ ಎದುರಾಗಿರಲಿಲ್ಲ. ಈ ವಿಷಯದಲ್ಲಿ ಜನರಿಗಿರುವ ಶ್ರದ್ಧೆಯ ತಿಳಿವೂ

ಅವರಿಗಿರಲಿಲ್ಲ. ಅವರು ಇರ್ಫಾನ ಅಲಿಯವರ ಇನ್ನೊಂದು ಕೈಯನ್ನು ಹಿಡಿದು ತಮ್ಮ ಕಡೆ ಎಳೆದುಕೊಂಡು, "ಇದೇನು ನಡೆಸಿದ್ದೀರಿ, ಕೈಬಿಡಿರಿ, " ಎಂದು ಕೋಪಾವಿಷ್ಟರಾಗಿ ನುಡಿದರು.

"ಇಡೀ ಊರನ್ನೇ ಇವನು ಕುತ್ತಿಗೆಕೊಯ್ದ.'' ಎಂದ ಒಬ್ಬ ಬಲವಂತ ಯುವಕ.

"ಕುತ್ತಿಗೆಕೊಯ್ಯುರು ಇವರಲ್ಲ, ಇವರ ವೃತ್ತಿ.''

"ಈ ವೃತ್ತಿಯನ್ನು ಬಿಡಲಿಕ್ಕೆ ಹೇಳಿರಿ "

''ಸ್ವಲ್ಪ ತಿಂದಿ ತಕ್ಕೊಳ್ಳದೆ ಇವನ ಬುದ್ಧಿ ಸರಿಯಾಗುವುದಿಲ್ಲ" ಎಂದು ಹಲವು ಕಂಠಗಳಿಂದ ಧ್ವನಿಬಂದಿತು. ಹೌದು ಹೌದು ತಗೋ ಎಂದರು ನೂರಾರು ಮಂದಿ.

"ಹಾ ಜೋಕೆ. ಯಾರಾದರೂ ಕೈಮಾಡಿದಿರೆಂದರೆ, ಮೊದಲು ನನ್ನ ಹೆಣ ಬಿದ್ದೀತು. ನಾನು ಬೀಳುವ ತನಕ ಇವರ ಕೂದಲೂ ಕೊಂಕ ಗೊಡುವುದಿಲ್ಲ '' ಪ್ರೇಮಶಂಕರರು ಗರ್ಜಿಸಿದರು.

ಈಗ ಜನ ಡಾಕ್ಟರರನ್ನು ಬಿಟ್ಟು ದೂರ ಸರಿಯಿತು ಅವರ ಸೇವೆ ಮಾಡುವ ಸುಸಂಧಿ ಕೈತಪ್ಪಿಹೋದುದಕ್ಕಾಗಿ ತಮ್ಮ ತಮ್ಮೊಳಗೆ ಗುಜುಗುಜಿಸಿದರು. ಇರ್ಫಾನಅಲಿ ಕೃತಜ್ಞದೃಷ್ಟಿಯಿಂದ ಪ್ರೇಮಶಂಕರರನ್ನು ನೋಡಿ ಮೋಟಾರೇರಿದರು.

ಪ್ರೇಮಶಂಕರರು ಕಠಿನಸಮಸ್ಯೆಯಲ್ಲಿ ಬಿದ್ದಿದ್ದರು. ತಲೆತಿರುಗಿದ ಜನ ಜಂಗುಳಿ ಯಾವಾಗ ಏನು ಮಾಡೀತೋ ಎಂದು ಭಯ. ಈಗೇನೋ ಬೆದರಿಸಿ ಸಂಕಟ ತಪ್ಪಿಸಿದ್ದಾಯಿತು. ಮುಂದೆಯೂ ಹೀಗೆ ಸಾಧಿಸೀತೆಂದು ಏನು ಭರವಸೆ? ಅಂಕೆಯಲ್ಲಿಡಲಾಗದ ಈ ಜನರು ತಮ್ಮ ಬೆಂಬತ್ತದಂತೆ ಮಾಡಬೇಕು ಎಂದು ಅವರಿಗೆನಿಸುತ್ತಿತ್ತು. ಅದಕ್ಕೆ ಉಪಾಯ ಮಾತ್ರ ತೋರುತ್ತಿರಲಿಲ್ಲ. ಅಕಲ್ಪಿತ ಅನರ್ಥಸಂಭವದ ಚಿಂತೆಯಲ್ಲಿಯೇ ಸಾಗಿರಲು ಪ್ರಿಯನಾಥ ಡಾಕ್ಟರರ ಮನೆ ಬಂದಿತು. ಕೈಯಲ್ಲಿ ರ್ಯಾಕೆಟ್ ಹಿಡಿದು ಅವರು ವರಾಂಡದಲ್ಲಿ ಅಡ್ಡಾಡುತ್ತಿದ್ದರು – ಬಹುಶಃ ಆಟಕ್ಕೆ ಹೋಗಲು ಕಾರನ್ನು ನಿರೀಕ್ಷಿಸುತ್ತಿದ್ದರು. ಜನರ ಗುಂಪನ್ನು ಕಂಡು ಗೇಟಿನ ಬಳಿ ಬಂದರು.

“ ಇವರ ಸಮಾಚಾರವನ್ನೂ ತಕ್ಕೊಳ್ಳಿರಿ—ನಿಜವಾಗಿ ಇವರೇ ಬಡ-ಪಾಯಿಗಳ ಕುತ್ತಿಗೆಕೊಯ್ಯುವವರು.” ಯಾರೋ ಅಂದರು.

“ ಹೌದು ಹೌದು, ಹಿಡಿಯಿರಿ; ಓಡ್ತ್ಯಾನು. ” ಇನ್ನೊಬ್ಬನೆಂದ.

ಪ್ರೇಮಶಂಕರರು ಡಾಕ್ಟರರನ್ನು ಸಮೀಪಿಸಿದ್ದರೋ ಇಲ್ಲವೋ —ನೂರಾರು ಮಂದಿ ಅವರನ್ನು ಮುತ್ತಿದರು. ಆ ಬಲಿಷ್ಠ ಯುವಕನು ಮುಂಬರಿದು ಡಾಕ್ಟರರ ಕೈಯೊಳಗಿನ ರಾಕೆಟ್ ಕಸಿದುಕೊಂಡು, “ ಖರೆ ಹೇಳಿರಿ ರಾಯರೆ, ಲಖನಪುರದ ಪ್ರಕರಣದಲ್ಲಿ ಎಷ್ಟು ಲಂಚ ಹೊಡೆದಿರಿ ? ” ಎಂದ. “ಹಾಂ, ಸುಮ್ಮನೇಕೆ ನಿಂತಿರಿ. ಹೇಳಿರಿ, ಎಷ್ಟು ತಿಂದಿರಿ ? ” ಎಂದು ಇಪ್ಪತ್ತು ಜನ ಕೂಗಿದರು.

ಡಾಕ್ಟರರು ಚೀರಾಡಿ ಆಳುಗಳನ್ನು ಕೂಗತೊಡಗಿದರು. ಆದರೆ ಆಳುಗಳು ಬರುವುದು ಉಚಿತವೆಂದು ಬಗೆಯಲಿಲ್ಲ. ಬುದ್ಧಿಗಲಿಸದೆ ಇವನೇನು ಹೇಳುವವನಲ್ಲ ಎಂದು ಜನ ಕೂಗಾಡತೊಡಗಿತು ಡಾಕ್ಟರರು ಜೇಲಿನ ಭಯ ತೋರಿಸಿ ಅವರನ್ನು ಚದುರಿಸಬೇಕೆಂದರು. ಆದರೆ, ಸಾಮಾನ್ಯವಾಗಿ ಕಣ್ಣಂಜಿಕೆಗೇ ನಡುಗುವ ಜನಕೋಟಿ ವಿದ್ರೋಹಸಮಯದಲ್ಲಿ ಗುಂಡನ್ನೂ ಲೆಕ್ಕಿಸುವುದಿಲ್ಲವೆಂಬುದು ಅವರಿಗೆ ಗೊತ್ತಿಲ್ಲ. ಅವರು ಬಾಯಿಬಿಡುವುದೇ ತಡ, ‘ ಬಿಡಬೇಡಿರಿ, ಹೊಡೆದು ಕೆಡವಿರಿ, ನೋಡಿಕೊಳ್ಳೋಣ ’ ಎಂದು ಜನ ಅವರಮೇಲೆ ಏರಿಹೋಯಿತು.

ಡಾಕ್ಟರರ ರಕ್ಷಣೆಗಾಗಿ ಪ್ರೇಮಶಂಕರರು ಅವರ ಬಳಿ ಹೋಗಿನಿಂತರು. ಅಷ್ಟರಲ್ಲಿಯೇ ಕೊಡೆ, ಬೆತ್ತ, ಬಡಿಗೆ ನೂರಾರು ಮೇಲೆದ್ದಿದ್ದವು. ಎದುರಿನಲ್ಲಿ ಪ್ರೇಮಶಂಕರರನ್ನು ಕಂಡಾಕ್ಷಣ ಅವೆಲ್ಲ ಅಂತರಿಕ್ಷದಲ್ಲಿಯೇ ನಿಂತವು. ಒಂದು ಬಡಿಗೆ ಮಾತ್ರ ಅಂಕೆದಪ್ಪಿತ್ತು. ಅದು ಪ್ರೇಮಶಂಕರರ ಹೆಗಲಿಗೆ ಬಲವಾಗಿ ಬಿದ್ದಿತು. ಅವರು ನೆಲಕ್ಕೆ ಬಿದ್ದರು. ಎಲ್ಲರೂ ಮಹಾ ಅನಿಷ್ಟವೊದಗಿತೆಂದು ವಿಹ್ವಲರಾದರು. ಯಾರು ಹೊಡೆದವರು? ಅವನ ಕೈ ಕಡಿಯಿರಿ, ಗೋಣು ಮುರಿಯಿರಿ. ಭಾರೀ ಪೆಟ್ಟು ಬಿತ್ತೆ ? ಎಂದು ಗದ್ದಲವೆದ್ದಿತು.

ಡಾಕ್ಟರ್ ಪ್ರಿಯನಾಥರು ಹೊಡೆದವನನ್ನು ಬಯ್ಯುತ್ತ, ಮೊಣಕಾಲೂರಿ ಕುಳಿತು ಪ್ರೇಮಶಂಕರರ ಗಾಯವನ್ನು ಪರೀಕ್ಷಿಸಿದರು. ಒಂದು ಎಲುಬು ಮುರಿದಿತ್ತು. ಕರವಸ್ತ್ರವನ್ನು ತೆಗೆದು ಹೆಗಲಿಗೆ ಪಟ್ಟಿಕಟ್ಟಿದರು.

ಬಳಿಕ ತಮ್ಮ ದವಾಖಾನೆಗೆ ಅವರನ್ನೊಯ್ದು ಆರಯ್ಕೆ ಮಾಡಿದರು. ಜನರು ಎಷ್ಟು ಪೆಟ್ಟುಹತ್ತಿದೆಯೋ ಏನಾಗುತ್ತದೆಯೋ ಎಂದು ಚಿಂತಿಸುತ್ತ ಕುಳಿತಿದ್ದರು. ಡಾಕ್ಟರು ಹೊರಗೆ ಬಂದು, "ಮೂಳೆ ಮುರಿದಿದೆಯಾದರೂ ಬೇಗನೆ ಗುಣವಾಗುತ್ತದೆ" ಎಂದು ಹೇಳಿದಮೇಲೆ ಸ್ವಲ್ಪ ಸಮಾಧಾನವಾಗಿ, ಒಬ್ಬೊಬ್ಬರೇ ಅಲ್ಲಿಂದೆದ್ದು ಹೋದರು.

ಒಂದು ವಾರ ಕಳೆಯಿತು. ಪ್ರೇಮಶಂಕರರು ಬಡ ಅಭಿಯುಕ್ತರ ಗತಿ ಏನಾಗುವುದೊ ಎಂದು ಚಿಂತಿಸುತ್ತಿದ್ದರು. ತಾವಿಲ್ಲಿ ಬಿದ್ದುಕೊಂಡುಬಿಟ್ಟರು. ಅಪೀಲಿನ ಬಗ್ಗೆ ಯಾವ ನಿಶ್ಚಯವೂ ಆಗಲಿಲ್ಲ. ಆಗುವುದಾದರೂ ಹೇಗೆ? ಅಷ್ಟು ಹಣ ಎಲ್ಲಿದೆ? ಈಗೀಗ ನ್ಯಾಯವು ಬಡವರಿಗೆ ನಿಲುಕದ ವಸ್ತುವಾಗಿದೆ. ಏನೇ ಆಗಲಿ, ಅಪೀಲು ಮಾಡಲೇ ಬೇಕು. ಅಂಗಡಿ ಅಂಗಡಿ, ಮನೆಮನೆ ತಿರುಗಿಯಾದರೂ ಹಣ ಶೇಖರಿಸಬೇಕು. ಈ ಚಿಂತೆಯಲ್ಲಿರುವಾಗ ಡಾಕ್ಟರರು ಬರಲು, "ನನಗೆಂದು ಅಪ್ಪಣೆ ಕೊಡುವಿರಿ?" ಎಂದು ಪ್ರೇಮಶಂಕರರು ಅವರನ್ನು ಕೇಳಿದರು.

"ಎಲುವು ಚೆನ್ನಾಗಿ ಕೂಡಿಕೊಳ್ಳಲು ಇನ್ನೂ ಒಂದು ವಾರ ನೀವು ಕಣ್ಸೆರೆಯಲ್ಲಿ ಇರಬೇಕಾದೀತು. ಈಗ ಅಂತಹ ಅವಸರವಾದರೂ ಏನು? ಮನೆ ನಿಮ್ಮದೇ ಆಗಿದೆ." ಎಂದರು ಡಾಕ್ಟರು.

"ನಿಮ್ಮ ಉಪಕಾರದ ಭಾರ ನನ್ನನ್ನು ಮಿಸುಕದಂತೆ ಮಾಡಿದೆ. ನಿಮ್ಮಲ್ಲಿ ಪಡೆದಷ್ಟು ಸುಖಶಾಂತಿ ನನಗೆಲ್ಲಿಯೂ ಸಿಕ್ಕಿಲ್ಲ. ನಿಮ್ಮ ನೇಹ ಸಹಾನುಭೂತಿಗಳಿಂದ ದೇವರು ಭೂಮಿಯಮೇಲೂ ಇದ್ದಾನೆ ಎಂಬರಿವು ನನಗಾಯಿತು." ಎಂದರು ಪ್ರೇಮಶಂಕರರು.

ಪ್ರೇಮಶಂಕರರ ನಮ್ರ-ಸರಲ ಸ್ವಭಾವ ಡಾಕ್ಟರರ ಮನವನ್ನು ಸೆಳೆದಿದ್ದಿತು. ನಿಸ್ಪೃಹ ಶುದ್ಧಾತ್ಮನ ಶ್ರದ್ಧಾಪಾತ್ರರಾಗಿ ಅವರಲ್ಲಿಯ ಕ್ಷುದ್ರತೆ ಮಾಲಿನ್ಯಗಳು ತೊಳೆದುಹೋಗುತ್ತಲಿದ್ದವು. ಈ ರತ್ನವನ್ನು ಕಳೆದುಕೊಳ್ಳಲಾಗದು ಎಂದವರಿಗೆ ಎನಿಸುತ್ತಿತ್ತು. ಲಖನಪುರದ ಮೊಕದ್ದಮೆಯ ವಿಷಯದಲ್ಲಿ ತಮ್ಮ ನೆಲೆಯನ್ನು ಪ್ರೇಮಶಂಕರರಲ್ಲಿ ಬಿಚ್ಚಿಹೇಳಬೇಕೆಂದು ಅವರಿಗೆ ಕೆಲದಿನಗಳಿಂದಲೂ ಎನಿಸುತ್ತಿತ್ತು; ಅವಕಾಶ ಸಿಕ್ಕಿರಲಿಲ್ಲ. ಈಗ ಅವರು

ಹೇಳಿಕೊಂಡರು: “ನೀವು ನನ್ನನ್ನು ಬಹಳ ಹೆಚ್ಚಾಗಿ ಬಣ್ಣಿಸುತ್ತಿದ್ದೀರಿ. ಸಾಮಾನ್ಯ ಮನುಷ್ಯರಂತೆ ನಾನೂ ಲೋಭಿ, ಇಚ್ಛೆಗಳ ದಾಸ. ಘೋರ ಪಾಪಗಳನ್ನು ಮಾಡಿದ್ದೇನೆ. ಆದರೆ ಈ ಮೊಕದ್ದಮೆಯಲ್ಲಿ— ನಿಮ್ಮೆದುರು ಸತ್ಯವಾಗಿ ಹೇಳುತ್ತೇನೆ— ಜನ ಮಾಡಿದ ಪರಲಿಗೆ ನಾನು ಭಾಗಿಯಲ್ಲ; ಆ ಆಕ್ಷೇಪಗಳು ನಿರಾಧಾರವಾದುವು. ಹತ್ಯೆಯ ನಿರೂಪಣೆಯಲ್ಲಿ ನನ್ನಿಂದ ತಪ್ಪಾಗಿರಬಹುದು,— ಅವಶ್ಯವಾಗಿ ಆಗಿದೆ; — ಆದರೆ, ಸ್ವಾರ್ಥಕ್ಕಾಗಿ ಇಷ್ಟೊಂದು ನಿರಪರಾಧಿಗಳ ಕುತ್ತಿಗೆ ಕೊಯ್ಯುವಂತಹ ಕಟುಕ-ತಿಳಿಗೇಡಿ ನಾನಲ್ಲ. ನನ್ನ ದಾಸ್ಯ ನನ್ನ ಮೋರೆಗೆ ಈ ಕಪ್ಪು ಬಳಿಯಿತು.”

ಪ್ರೇಮಶಂಕರರು ಗ್ಲಾನಿಮಯ ಸ್ವರದಲ್ಲಿ ಉತ್ತರವಿತ್ತರು: “ಮಿತ್ರರೇ ನಿಮ್ಮ ಹರಲಿಗೆ ನಾನೇ ಕಾರಣ. ಅನ್ಯರ ಹೇಳಿಕೆಯಿಂದ ನಿಮ್ಮ ವಿಷಯದಲ್ಲಿ ಸಲ್ಲದ ಸಂದೇಹ ಪಟ್ಟೆ. ನನ್ನನ್ನು ಕ್ಷಮಿಸಿರಿ.”

ಪ್ರಿಯನಾಥರಿಗೆ ಎದೆಯ ಮೇಲಿನ ಕಲ್ಲು ಇಳಿದಂತೆನಿಸಿತು.

ಈ ಸಂಬಂಧ ಡಾಕ್ಟರರನ್ನು ಬದಲಿಸಿತು. ಈಗ ರೋಗಿಗಳನ್ನು ಮನಮುಟ್ಟಿ ಪರೀಕ್ಷಿಸುವರು, ಸಂತಯಿಸುವರು. ಯಾರೂ ಅಷ್ಟೆ— ಪೂರಾ ಫೀ ಇಡದೆ ಸ್ಥಳದಿಂದ ಕದಲದವರು, ಬಡವರ ಮನೆಗೆ ಫೀ ಇಲ್ಲದೆ ಹೋಗುವರು. ಸಣ್ಣ ಕೆಲಸದವರಿಂದ ಅರ್ಧ ಫೀ ತೆಗೆದುಕೊಳ್ಳುವರು. ಊರಿನ ಸ್ವಚ್ಛತೆಯನ್ನು ನಿಯಮಾನುಸಾರ ನೋಡುವರು. ಕೆಲ ತಿಂಗಳಲ್ಲಿ ಜನರಲ್ಲಿ ಅವರ ಬಗ್ಗೆ ಆದರ-ಪ್ರಶಂಸೆ ಉಂಟಾದವು. ಹಣದ ಹಸಿವು ಬಿಟ್ಟಿರಲಿಲ್ಲವಾದರೂ ಕೀರ್ತಿಗಳಿಸುವ ಇಚ್ಛೆ ಅದನ್ನು ಮರೆಯಿಸಿತ್ತು.

ಒಂದು ದಿನ ಡಾಕ್ಟರು ರೋಗಿಯನ್ನು ನೋಡಿಕೊಂಡು ಪ್ರೇಮಶಂಕರರ ಕೃಷಿಶಾಲೆಯ ಎದುರಿನಿಂದ ಹೊರಟಿದ್ದರು. ಹತ್ತು ಹೊಡೆದಿತ್ತು. ಬಿಸಿಲು ಚುರುಕಾಗಿತ್ತು. ಏನು ಮಾಡುತ್ತಿದ್ದಾರೆಯೋ ನೋಡುವಾ ಎಂದುಕೊಂಡು ಒಳಹೊಕ್ಕರು. ಗುಡಿಸಲೆದುರಿನ ಮರದಡಿಯಲ್ಲಿ ನಿಂತು ಗೋದಿಯ ಹೊಟ್ಟು ತೂರುತ್ತಿದ್ದ ಪ್ರೇಮಶಂಕರರು ಪ್ರಿಯನಾಥರನ್ನು ಕಂಡು ಗುಡಿಸಲೊಳಗೆ ಬಂದರು. ಅಷ್ಟರಲ್ಲಿ ಇಬ್ಬರು ಮುದುಕಿಯರು ಕಟ್ಟಿಗೆ ಹೊರೆ ಹೊತ್ತುಕೊಂಡು ಬಂದು, “ಕಟ್ಟಿಗೆ ತಕ್ಕೊಳ್ಳಿರಿ ಸರಕಾರ” ಎಂದು ಕೇಳತೊಡಗಿದರು. ಅವರ ಹಿಂದೆ ಹುಡುಗರಿದ್ದರು. ಅವರ ತಲೆಯಮೇಲೂ ಹೊರೆ. ಎಲ್ಲರ

ಬಟ್ಟೆಗಳೂ ತೊಯ್ದು ತಪ್ಪಟೆಯಾಗಿದ್ದವು. ಎದೆ ಪಕ್ಕೆಯ ಮೂಳೆಗಳು ಎದ್ದು ಕಾಣುತ್ತಿದ್ದವು. ಒಣಗಿದ ತುಟಿಗಳು, ಹೊಲಸು ಮೈ, ಅದರ ಮೇಲೆ ಬೆಮರೊಣಗಿದ ಧಾರೆಯ ಕಲೆಗಳು. ಪ್ರೇಮಶಂಕರರು ಎಲ್ಲ ಹೊರೆಗಳನ್ನು ಹಾಕಿಸಿಕೊಂಡರು. ಬಿಚ್ಚುರೊಕ್ಕವಿರಲಿಲ್ಲ. ಗುಮಾಸ್ತ ರೂಪಾಯಿ ಮುರಿಸಿ ಕೊಂಡು ಬರಲು ಹೋದ. ಹೆಂಗುಸರು ಮರದ ನೆರಳಲ್ಲಿ ಮೈಯೊಡ್ಡಿದ್ದರು. ಹುಡುಗರು ಅಲ್ಲಿ ಸೂರೆಯಾಗಿದ್ದ ಕಾಳುಗಳನ್ನು ಆಯ್ದು ತಿನ್ನ ತೊಡಗಿದವು. ಪ್ರೇಮಶಂಕರರು ಮರುಕಗೊಂಡು ಎಲ್ಲ ಹುಡುಗರಿಗೂ ಬಟಗಡಲೆ ಕೊಟ್ಟರು. ಪಾಪ, ಹುಡುಗರ ನ್ಯಾರಿಯೇ ಆಗಿರಲಿಲ್ಲ. ಹೆಣ್ಮಕ್ಕಳು ಪ್ರೇಮಶಂಕರರನ್ನು ಹರಸಿದರು.

" ಯಾವೂರವರು ? "

" ಧನಿಯರು ಲಖನಪುರದ ಹೆಸರು ಕೇಳಿರಬಹುದು. "

" ಈಗ ಹೇಗಿದೆ ಊರಲ್ಲಿ ? "

" ಏನು ಹೇಳಬೇಕು ಧನಿಯರೇ! ಜಮೀಂದಾರರಿಂದ ಊರಿಗೇ ಉಳಿಗಾಲವಿಲ್ಲ. ಯಾರು ಜೇಲಿಗೆ ಹೋದರು, ಯಾರು ಗಡಿಪಾರಾದರು. ಅವರ ಮಕ್ಕಳುಮರಿ ಕೂಳುಗೇಡಾಗಿವೆ. ನನಗೂ ಇಬ್ಬರು ಮಕ್ಕಳಿದ್ದರು. ಎರಡು ಗಳೆಯ ಕಮತವಿತ್ತು. ಒಬ್ಬನಂತೂ ಗಡಿಪಾರಾಗಿ ಹೋದ; ಇನ್ನೊಬ್ಬನ ಪತ್ತೆಯೇ ಇಲ್ಲ. ಮೇವಿಲ್ಲದೆ ಎತ್ತುಗಳು ಸಾಯಲಾದವು. ಹೋರೆ ಮಾಡುವರಾರು ? ಸೊಸೆಯಂದಿರು ಹೊರಗೆ ಅಡ್ಡಾಡುವುದಿಲ್ಲ. ನಾನೇ ಕಟ್ಟಿಗೆ ಕುಳ್ಳು ಮಾರಿ ಒಯ್ದರೇ ಎಲ್ಲರ ಬಾಯಿಗೂ ತುತ್ತು ಅನ್ನ ಕಾಣುತ್ತವೆ. ಮೊಮ್ಮಕ್ಕಳಿದ್ದವು; ದೇವರು ಎತ್ತಿಕೊಂಡು ಹೋದ. ಮುಪ್ಪಿನ ಕಾಲಕ್ಕೆ ಇದನ್ನು ಉಣ್ಣೆಂದು ಬರೆದಯ್ತೆ. "

" ನೀನು ಡಪಟಸಿಂಹನ ತಾಯೋ ಹೇಗಮ್ಮ ? "

" ಹೌದು ಸ್ವಾಮಿ. ತಮಗೆ ಹೇಗೆ ಗೊತ್ತು ? "

" ಪ್ಲೇಗಿನ ಪಿಡುಗಿನಲ್ಲಿ, ನಿನ್ನ ಮೊಮ್ಮಕ್ಕಳಿಗೆ ಬೇನೆ ಬಂದಾಗ ನಾನು ಅಲ್ಲಿದ್ದೆ. ಮತ್ತು ಎಷ್ಟೋ ಸಾರೆ ಬಂದಿದ್ದೆ. ಗುರುತು ಹತ್ತಲಿಲ್ಲವೇ ನಿನಗೆ– ನಾನು ಪ್ರೇಮಶಂಕರ. "

ಮುದುಕಿ ಕೊಂಚ ಸೆರಗು ಸರಿಸಿ ನೋಡಿದಳು: "ಹೌದಪ್ಪ, ಈಗ ಗುರುತು ತಿಳಿಯಿತು. ಕಣ್ಣು ಸರಿ ಕಾಣುವುದಿಲ್ಲ. ಸಾವಿರ ವರುಷ ಬಾಳಪ್ಪಾ ಇಡೀ ಊರು ನಿಮ್ಮನ್ನು ಹಾಡಿಹರಸತಯ್ತೆ. ನೀವೆಲ್ಲಾ ಮಾಡೋದು ಮಾಡಿದಿರಿ. ಆದರೆ ಪಡೆದು ಬಂದದ್ದು ತಪ್ಪುತಯ್ತೆ ಹೇಗೆ? ದುಖರನ ಭಗತ ಗೊತ್ತಿರಬಹುದು ನಿಮಗೆ - ಈ ಮುದಕಿ ಅವನ ಹೆಂಡತಿ. ಹಳೆಯುದ ತಿಂದು ಹೊಸದು ತೆಗೆದಿಡುತ್ತಿದ್ದಳು. ಈಗ ಮನೆ ತೊಳೆದುಹೋಗಿದೆ. ಇವೆ ರಡೂ ಅಣ್ಣನ ಮಕ್ಕಳು. ಇವೆರಡು ಕಾದಿರಣ್ಣನ ಮೊಮ್ಮಕ್ಕಳು. ಆದೇ ನೋಪ್ಪ, ಕಾದಿರಣ್ಣ ಬಹಳ ಗಂಟುಮಾಡಿದ್ದಾನೆ ಎನ್ನುತ್ತಿದ್ದರು. ಆದರೆ ಈಟರೊಳಗೇ ಮನೆಯ ಸ್ಥಿತಿ ಯಾತಕ್ಕೂ ಬೇಡ. ಹುಡುಗರು ದುಡಿಯ ದಿದ್ದರೆ ಬಾಯೊಳಗೆ ನೊಣ ಹೊಕ್ಕು ಹೊರಡೋದೇ. ಆ ಸುಡುಗಾಡ ಮೋತಿ ಫೈಜೂನ ಮನೆ ಕದಕ್ಕೆ ಮುಳ್ಳು ಬಡೆಯಲಿ—ಅವ ಮತ್ತೂ ಹಾವಳಿ ನಡೆಸಿದ್ದಾನೆ. ಈಟರೊಳಗೆ ಅವ ಊರು ಹುರಿದುಬಿಡುವವನೇ— ಸುಕ್ಖೂ ಚೌಧರಿಗೆ ದೇವರು ಕಲ್ಯಾಣ ಮಾಡಲಿ; ಅವನು ಎಲ್ಲ ಬಾಕಿಯುನ್ನೂ ಕೊಟ್ಟು ತೀರಿಸಿದ. ಮತ್ತೆ ಈ ಬಾರಿ ಇದೇ ಗೋಳು. ಕಾರಭಾರಿ ಈಗಿಂದಲೇ ಬೆದರಿಸುತ್ತಾನೆ—ಈ ಬಾರಿ ಹೊಲ ಕಸುಕೊಂಡೇ ತೀರುತ್ತಾನಂತೆ! ಈ ಬಾರಿ ಹರಕಮುರಕಾದರೂ ಬದುಕಾಗಿತ್ತು; ಹೊಲವೇ ಹೋದರೆ ಮುಂದೆ ಗತಿಯೇನು?

"ಬಿಸೇಸರ ಸಾಹ ಹೇಗಿದ್ದಾನೆ?"

"ಏನೋ ಧನಿಯರೆ, ಒಂದು ವರುಷಾಯ್ತು ಅವರ ಮನೆಯು ಕಡೆಗೇ ನಾ ಹೋಗಿಲ್ಲ. ಅಲ್ಲಿಗೆ ಯಾರೂ ಹೋಗುವುದೇ ಇಲ್ಲೀಗ. ಅಂತವರ ಮೊಕ ನೋಡುವುದೇ ಪಾಪ. ಜನ ಉಪ್ಪು, ಮೆಣಸಿನಕಾಯಿ ಬೇರೆ ಊರಿಂದ ತರುತ್ತಾರೆ. ಅವನೂ ಮನೆಬಿಟ್ಟು ಹೊರಕ್ಕೆ ಬರುವುದಿಲ್ಲ ಅಂಗಡಿಯುನ್ನೂ ತೆಗೆದುಬಿಟ್ಟಿದ್ದಾನೆ. ನಾನೇನೂ ನೋಡಿಲ್ಲ, ಆದರೆ ಕೇಳಿದ್ದೇನೆ.— ಈ ಕಟ್ಲೆ ಎದ್ದಾಗಿನಿಂದಅವನ ಮನೆಜನಕ್ಕೆ ಸುಕವಿಲ್ಲಂತೆ. ಒಮ್ಮೆ ಬಿಲಾಸಿಯುನ್ನು ಕಂಡಿದ್ದೆ. ಅವನೂ ಅಳುತ್ತಾನಂತೆ— ಮುಂದೀಮಾತು ಕೇಳಿ ಕೆಟ್ಟ ಕೆಲಸ ಮಾಡಿದೆ ಎಂದು ಹಳಹಳಿಸುತ್ತಾನಂತೆ ಮನೋಹರ ಅವನಿಗೆ ಗಂಟು

ಬಿದ್ದಿದ್ದಾನಂತೆ. ಸಂಜೆಯಾಗುತ್ತಲೂ ಕದ ಇಕ್ಕಿಕೊಂಡು ಒಳಗೆ ಕೂತವನು ಹೊರಕ್ಕೆಹಣಿಕ ಲಿಕ್ಕೂ ಹೆದರುತ್ತಾನಂತೆ. ”

ಈ ಸಮಾಚಾರದಿಂದ ಪ್ರೇಮಶಂಕರರು ಘನವಾದ ಚಿಂತೆಯಲ್ಲಿ ಬಿದ್ದರು. ತಾವೆಂತಹ ದುರ್ಲಕ್ಷ್ಯ ಮಾಡಿದರು. ಬಡಪಾಯಿಗಳಿಗೆ ಶಿಕ್ಷೆಯಾಗಿ ವರುಷವಾಗುತ್ತ ಬಂತು—ಅವರ ಮಕ್ಕಳು ಮರಿಯ ಯೋಚನೆಯೇ ಇಲ್ಲ! ಜ್ಞಾನಶಂಕರನಿಗೆ ಮಾತೇನೋ ಕೊಟ್ಟಿದ್ದೇನೆ; ಆದರೆ ನನ್ನ ಮಾತಿಗಾಗಿ ಬಡವರನ್ನು ಕೊಲ್ಲುವುದೆ? ಛೆ.

ಪಕ್ಕನೆ ಮುದುಕಿ ಮಾತನಾಡಿದಳು: “ ಹೇಳಿರೆಪ್ಪ, ಇನ್ನೇನೂ ಆಗುವ ಹಾಗಿಲ್ಲವೆ? ಜನ ಅಂತಾರೆ— ಇನ್ನೂ ಮೇಲಿನ ಕಚೇರಿ ಅಯ್ತಂತೆ; ಅಲ್ಲಿ ನ್ಯಾಯ ಹೂಡಬಹುದಂತೆ. ”

ಈ ಮಾತಿಗೆ ಪ್ರೇಮಶಂಕರರು ಉತ್ತರವೀಯಲಿಲ್ಲ. ಹಣದ ಏರ್ಪಾಟು ದೊಡ್ಡ ಮಾತಾಗಿರಲಿಲ್ಲ, ಅಪೀಲಿನಿಂದ ಪ್ರಯೋಜನದ ಆಶೆಯೆ ಕಡಿಮೆ. ಆದಕ್ಕೇ ಈ ವಿಷಯವನ್ನವರು ದುರ್ಲಕ್ಷಿಸುತ್ತಿದ್ದರು. ಆವರ ಮನದ ಗೊಂದಲವನ್ನು ಅರಿತುಕೊಂಡು ಉತ್ತರವಿತ್ತರು: “ ಹೌದು, ನ್ಯಾಯ ಹೂಡಬಹುದು. ಅದರ ವ್ಯವಸ್ಥೆ ನಡೆದಿದೆ. ನೀವೇನೂ ಅಂಜಬೇಡಿರಿ ”

ಅಷ್ಟೊತ್ತಿಗೆ ಗುಮಾಸ್ತ ಬಿಚ್ಚುರೊಕ್ಕ ತಂದ. ಮುದುಕಿ ಕಟ್ಟಿಗೆಯ ಬೆಲೆ ತೆಗೆದುಕೊಂಡು ಪ್ರೇಮಶಂಕರರನ್ನು ಹರಸುತ್ತ ಹೊರಟಳು. ಬಾಗಿಲ ತನಕ ಹೋಗಿ ತಿರುಗಿ ನಿಂತು, “ ಮರೆಯಬೇಡಿರಪ್ಪ, ದರಮದ ಕೆಲಸ, ಕೋಟಿ ಪುಣ್ಯ ನಿಮಗೆ ” ಎಂದು ಹೇಳಿ ಹೋದಳು. ಆಮೇಲೆ ಎಷ್ಟೋ ಹೊತ್ತು ಪ್ರಿಯನಾಥ ಪ್ರೇಮಶಂಕರರು ಮೌನವಾಗಿ ಕುಳಿತಿದ್ದರು. ಕೊನೆಗೆ ಪ್ರಿಯನಾಥರು ಹೊರಡಲು ಎದ್ದುನಿಂತು ನಿಶ್ಚಯದ ದನಿಯಲ್ಲಿ, “ ಮಿತ್ರರೇ, ಆವಶ್ಯವಾಗಿ ಅಪೀಲುಮಾಡಿರಿ. ಅಲಹಾಬಾದಿಗೆ ಇಂದೇ ಹೊರಡಿರಿ. ದೇವರ ಇಚ್ಛೆಯಿದ್ದರೆ ಈ ಸಲ ಸತ್ಯಕ್ಕೆ ಜಯವಾಗುವುದು. ”

## ೩೮

ಕೆಲ ತಿಂಗಳು ಕಳೆದವು. ಪ್ರೇಮಶಂಕರರಿಂದ ಅಪೀಲಿನ ನಿರ್ಧಾರ ಮಾಡುವುದಾಗಿರಲಿಲ್ಲ. ಯಾರ ಸಹಾಯದ ಆಶೆಯೂ ಇಲ್ಲದ ಕೆಲಸವನ್ನು

ಅವರು ಒಳ್ಳೇ ತತ್ಪರತೆಯಿಂದ ಮಾಡುತ್ತಿದ್ದರು; ಆದರೆ ಯಾರಾದರೂ ಕೈನೀಡಲು ಬಂದಾಗ ಒಂದು ಬಗೆಯ ವಿಚಿತ್ರ ಶಿಥಿಲತೆ ಅವರನ್ನು ಆವರಿಸುತ್ತಿತ್ತು. ಮೇಲಾಗಿ ಹಣದ ಅಭಾವವೂ ಬಾಧಿಸುತ್ತಿತ್ತು. ದಿವಾಣಿಯ ವೆಚ್ಚದಿಂದ ಹಣ್ಣಾದುದರಿಂದ ಹೈಕೋರ್ಟಿಗೆ ಹೋಗುವ ಧೈರ್ಯವಾಗುತ್ತಿರಲಿಲ್ಲ.

ಒಂದಿನ ಅವರು ಪತ್ರಿಕೆಯಲ್ಲಿ ಗೋರಖಪುರದ ಸನಾತನ ಧರ್ಮ ಮಹೋತ್ಸವದ ವರದಿ ಓದುತ್ತಿದ್ದರು. ಅದರಲ್ಲಿಯ ಜ್ಞಾನಶಂಕರರ ಸತ್ಯನಿಷ್ಠೆ, ಧರ್ಮಪರಾಯಣತೆಯ ವರ್ಣನೆಯನ್ನು ಓದಿ, ತಾವು ಅವರನ್ನು ಧೂರ್ತರೆಂದೂ, ಸ್ವಾರ್ಥಿಯೆಂದು ತಿಳಿದುಕೊಂಡುದಕ್ಕಾಗಿ ಅವರಿಗೆ ವಿಷಾದವಾಯಿತು. ಅಷ್ಟರಲ್ಲಿ ದುರ್ಗಾ, ಮಸ್ತಾ ಮತ್ತು ಆಳುಗಳು ಯಾರನ್ನೋ ಎಳೆದುತರುತ್ತಿದ್ದುದು ಕಾಣಿಸಿತು. ನಡುನಡುವೆ ಮಸ್ತಾ ಅವನನ್ನು ಜಜ್ಜುತ್ತಿದ್ದ.

"ಏನು ಭೋಲಾ, ಅವನನ್ನೇಕೆ ಹೊಡೆಯುತ್ತೀರಿ?" ಪ್ರೇಮಶಂಕರರು ಎದ್ದುಹೋಗಿ ತೀವ್ರಸ್ವರದಿಂದ ಕೇಳಿದರು.

ಮಸ್ತಾ : ಇವ ಯಾವನೋ ಏನೋ. ಹೊರಬಾಗಿಲಿಗೆ ಆತುಕೊಂಡು ನಿಂತಿದ್ದ. ನಾನು ಬಾಗಿಲು ಹಾಕಲು ಹೋದಾಗ ಮತ್ತಷ್ಟು ಅವಿತುಕೊಂಡ. ನಾನು ಸುಮ್ಮನೆ ತಿರುಗಿಬಂದು ಎಲ್ಲರನ್ನು ಕರೆದುಕೊಂಡು ಹೋಗಿ ಹಿಡಿದುತಂದೆ. ನಿಜವಾಗಿ ಯಾವನೋ ಕಳ್ಳನಿರಬೇಕು.

ಪ್ರೇಮ : ಕಳ್ಳನಿದ್ದಿದ್ದಾನು. ನಿಮ್ಮದನ್ನೇನೂ ಕದ್ದಿಲ್ಲವಲ್ಲ, ಯಾಕೆ ಹೊಡೆಯುತ್ತೀರಿ?

ಕಳ್ಳನನ್ನು ಧನಿಯ ಮುಂದೆ ನಿಲ್ಲಿಸಿದರು. ಕಂದೀಲಿನ ಬೆಳಕಿನಲ್ಲಿ ಅವನ ಮುಖವನ್ನು ನೋಡಿ, ಪ್ರೇಮಶಂಕರರ ಬಾಯಿಂದ ಉದ್ಗಾರ ಹೊರಟಿತು— ಓ ಬಿಸೇಸರ!

ತಮ್ಮಿಂದ ತಪ್ಪಾಯಿತೆಂದು ತಿಳಿದು ಎಲ್ಲರೂ ಅಲ್ಲಿಂದ ಸುಮ್ಮನೆ ತೊಲಗಿದರು. ಪ್ರೇಮಶಂಕರರು ಅವನನ್ನು ಮಂಚದ ಮೇಲೆ ಕುಳ್ಳಿರಿಸಿ, "ಸಾಹಜಿ, ನಮ್ಮ ಜನ ನಿಮ್ಮೊಡನೆ ಅನುಚಿತವಾಗಿ ವರ್ತಿಸಿದ್ದಕ್ಕೆ ನನಗೆ ಬಹಳ ದುಃಖ

ವಾಗಿದೆ. ಎಲ್ಲರೂ ಹುಚ್ಚರು ಮೂರ್ಖರು!" ಎಂದು ಲಜ್ಜಿತಭಾವದಿಂದ ನುಡಿದರು.

ಬಿಸೇಸರ ಉಸಿರ್ಗರೆದ. "ಇಲ್ಲಿಲ್ಲ, ಅವರು ಮಾಡಿದ್ದೇನೂ ಕೆಟ್ಟಲ್ಲ, ನಾನು ಅದಕ್ಕೇ ಯೋಗ್ಯ! ಕಂಬಕ್ಕೆ ಕಟ್ಟಿ ಹೊಡೆಸಿದರೂ ಕೆಟ್ಟೆನಿಸಿಕೊಳ್ಳುವುದಿಲ್ಲ. ನಾನು ಜೀವದಂಜಿಕೆಯಿಂದ ಊರನ್ನೇ ಹಾಳುಮಾಡಿದೆ. ಗೌಸಖಾನನ ಕೊಲೆಯ ಸುದ್ದಿ ನನಗೆ ಗೊತ್ತಾದದ್ದು ಹೊತ್ತೇರಿದ ಮೇಲೆಯೇ—ಆಹ್ನಿಕ ಮುಗಿಸಿಕೊಂಡು ಅಂಗಡಿಗೆ ಬಂದಮೇಲೆ. ಫೌಜದಾರರು ಚಾವಡಿಗೆ ಕರೆಸಿ ಪೀಡಿಸಿದ್ದರಿಂದ ಅವರು ಹೇಳಿಕೊಟ್ಟಂತೆ ಕಲಿತೆ. ಕೋರ್ಟಿನಲ್ಲಿ ನನ್ನ ಸಾಕ್ಷ್ಯ ನಡೆದಾಗ 'ಬಿಸೇಸರ, ದೇವರಿಗೆ ಅಂಜು' ಎಂದು ಕಾದಿರ ಎಂದಾಗ ಎದೆ ಧಸಕ್ಕೆಂದಿತು. ಆದರೆ ಎದುರಿಗೆ ಫೌಜದಾರರನ್ನು ನೋಡಿ ಇದ್ದುದಿದ್ದಂತೆ ಹೇಳಲು ಬಾಯೇ ಬರಲಿಲ್ಲ. ಮನೋಹರ ಉರಲು ಹಾಕಿಕೊಂಡು ಸತ್ತುದ್ದು ಕೇಳಿದಾಗಿನಿಂದ ನನಗೆ ನಿದ್ದೆಯೇ ಇಲ್ಲ. ಕಣ್ಣು ಮುಚ್ಚಿದರೆ ಅವನೇ ತಲೆದಿಂಬುದೆಸೆಯಲ್ಲಿ ಬಂದುನಿಂತಂತಾಗಿ ಬೆಚ್ಚಿಬೀಳುತ್ತೇನೆ. ಅಂದಿನಿಂದಲೇ ಹೆಂಡತಿಗೆ ಬೇನೆ ಹತ್ತಿದೆ. ಅತ್ತ ಊರೆಲ್ಲ ಗೋಳಾಡುತ್ತಿದೆ—ಎಲ್ಲರ ಮನೆಯಲ್ಲೂ ಮಕ್ಕಳು-ಮರಿ ಕೂಳಿಲ್ಲದೆ ಬಳಲುತ್ತಿವೆ. ಫೈಜು ಕರ್ತಾರ ದಿನಕ್ಕೊಂದು ಬಿರುಗಾಳಿ ಎಬ್ಬಿಸುತ್ತಾರೆ. ಬಡವರ ಗೋಳು ನಾನು ನೋಡಲಾರೆ. ಸಿಕ್ಕಸಿಕ್ಕವರನ್ನು ಹೊಡೆಯುತ್ತಾರೆ, ಬಡಿಯುತ್ತಾರೆ; ಕಾದಿರನ ಮನೆಗೆ ಕೊಳ್ಳಿಯಿಕ್ಕಿಸಿದರು; ಉಳಿದವ್ವೆಲ್ಲ ಇರಲಿ; ಊರೊಳಗಿನ ಹೆಣ್ಮಕ್ಕಳ ಮರ್ಯಾದೆಯೂ ಉಳಿಯುವ ಹಾಗಿಲ್ಲ. ಮೊನ್ನೆ ರಾತ್ರಿ ಮನೆಯಲ್ಲಿ ಮನೋಹರನ ಸೊಸೆ ಒಬ್ಬಳೇ ಇದ್ದಾಗ ಅವರಿಬ್ಬರೂ ಹೊಕ್ಕಿದ್ದರು; ಆಕೆ ಕೂಗಿಕೊಂಡಳು; ಮಂದಿ ಕೂಡಿತು; ಓಡಿಹೋದರು. ಇದರ ಸೆಳಕು ಮರುದಿನ ಬಡಿದುಕೊಂಡಿತು; ಕರ್ತಾರ ಮನೋಹರನನ್ನು ಮೈಹುಳಿ ಥಳಿಸಿದ. ಈ ಎಲ್ಲದರ ಪಾಪ ನನ್ನ ಮೇಲೇ ಸೈ. ಎಲ್ಲಾ ಅನರ್ಥಕ್ಕೂ ನಾನೇ ಮೂಲ. ದೇವರು ನನಗೆ ಯಾವ ದುರ್ಗತಿ ಕೊಡುತ್ತಾನೊ! ನೀವೇನೋ ಅಪೀಲು ಮಾಡುವವರಿದ್ದೀರಂತೆ; ಬೇಗ ಏಕೆ ಮಾಡುವುದಿಲ್ಲ, ಈಗ ನಾನು

ನಿಜಸಂಗತಿ ಹೇಳಿಬಿಡುತ್ತೇನೆ; ಮೊದಲು ಸುಳ್ಳು ಹೇಳಿದ್ದಕ್ಕೆ ನನಗೆ ಶಿಕ್ಷೆ ಯಾಧೀತು; ಆಗಲಿ, ಊರಿಗೆ ಹಿತವಾದರಾಯಿತು. ನಾನು ಸ್ವಲ್ಪ ಮತ್ತೂ ಕೊಡುತ್ತೇನೆ. "

"ಹೈಕೋರ್ಟಿನಲ್ಲಿ ಸಾಕ್ಷಿ ಗೀಕ್ಷಿ ತೆಗೆದುಕೊಳ್ಳುವುದಿಲ್ಲ. ಕಾಗದ ಪತ್ರದ ಮೇಲೇ ಕೆಲಸ. "

"ಕೊಡುಕೊಳ್ಳುವುದರಿಂದ ಕೆಲಸವಾಗುತ್ತಿದ್ದರೆ, ಸಾವಿರೈನೂರರ ಮೋರೆ ನೋಡಬೇಡಿರಿ. ನಾನೂ ಹೇಳಿದ್ದು ಮಾಡುತ್ತೇನೆ. ಈ ವಿಚಾರ ನನಗೆಂದೋ ಬಂದಿತ್ತು. ನಿಮಗೆ ತಿಳಿಸಬೇಕೆಂದು ಎರಡು ಮೂರು ಸಲ ಬಂದು, ಮೋರೆ ತೋರಿಸಲಾರದೆ ಹಾಗೇ ಹೋದೆ. ಇಂದೂ ಇತಿಮಿತಿ ಮಾಡುತ್ತ ಬಾಗಿಲಲ್ಲಿ ನಿಂತಿದ್ದೆ. ನಿಮ್ಮ ಜನ ನಿಮ್ಮ ಸನ್ನಿಧಿಗೆ ಹಿಡಿತಂದೇ ಬಿಟ್ಟರು. ಮೈಮೇಲೆ ಬಂದರೂ ಬರಲಿ—ಆಣೆಮಾಡಿ ಹೇಳುತ್ತೇನೆ—ಮತ್ತೆ ನನ್ನ ಸಾಕ್ಷ್ಯ ಕೇಳಿದರೆ ಎಲ್ಲವನ್ನೂ ಹೇಳುತ್ತೇನೆ.—ಅಪೀಲು ಮಾಡಿರಿ."

ಬಿಸೇಸರನ ಮಾತುಗಳು ಅವನನ್ನು ಪ್ರೇಮಶಂಕರರ ದೃಷ್ಟಿಯಲ್ಲಿ ಪಿಶಾಚಶ್ರೇಣಿಯಿಂದ ಮೇಲೆತ್ತಿದವು. "ನಿಮ್ಮ ಮಾತು ಕೇಳಿ ಸತ್ಸಾಧುವಿನ ಉಪದೇಶ ಕೇಳಿದಷ್ಟು ಆನಂದವಾಯಿತು ಸಾಹಜೀ. ಬೇಗನೆ ಅಪೀಲು ಮಾಡುವವನೇ ಇದ್ದೇನೆ ಹೇಳಿಕೆಗಳನ್ನು ಬದಲಿಸುವುದು ಹೇಗೆಂಬುದೇ ತೊಡಕು. ಹೈಕೋರ್ಟು ಮರುವಿಚಾರಣೆ ವಿಧಿಸಿದರೂ ವಿಧಿಸಬಹುದು. ಹಾಗಾಗಿ ಪ್ರಕರಣ ಮತ್ತಿದೇ ಕೋರ್ಟಿಗೆ ಬಂದು, ಹೇಳಿಕೆಗಳನ್ನು ಬದಲಿಸುವುದಾದರೆ ನಿಮಗೂ ಪ್ರಿಯನಾಥ ಡಾಕ್ಟರಿಗೂ ತೊಂದರೆ. ಡಾಕ್ಟರು ತಮ್ಮ ಉಳಿದುಕೊಳ್ಳುವ ಹಾದಿ ಹುಡುಕಿದ್ದಾರೆ. ನಿಮ್ಮದು ಮಾತ್ರ ಕಷ್ಟ. ಚೆನ್ನಾಗಿ ವಿಚಾರಮಾಡಿರಿ." ಎಂದರು.

"ಪೂರಾ ವಿಚಾರಮಾಡಿದ್ದೇನೆ."

## ೩೯

ತಮ್ಮ ಬಾಳಬಯಕೆಗಳೆಲ್ಲ ಮಣ್ಣುಗೂಡುತ್ತಿವೆಯೆಂದು ಜ್ಞಾನಶಂಕರರು ಈಗ ಸದಾ ಖಿನ್ನರಾಗಿರುತ್ತಿದ್ದರು ತಮ್ಮ ಮನೋಭಾವಗಳ ಕಲಾಯು ಹಾರಿಹೋದುದೇ ಹೆಚ್ಚಿನ ದುಃಖ. ಇದ್ದಿರಬಹುದಾದ ಧೈರ್ಯದ ಆಧಾರ-

ಪೆಂದರೆ, ಇಂತಹ ಪರಿಸ್ಥಿತಿಯಲ್ಲಿ ತಮ್ಮ ಗುರಿಯನ್ನು ತಲುಪುವುದಕ್ಕೆ ಬೇರೆ ದಾರಿಯೇ ಇರಲಿಲ್ಲವೆಂಬುದು.

ಲಖನವಿನಿಂದ ಬಂದಬಳಿಕ ಗಾಯತ್ರಿಗೆ ಕಾಗದ ಬರೆಯುವ ಧೈರ್ಯವೇ ಅವರಿಗಾಗಿರಲಿಲ್ಲ. ಆಕೆಯು ಕಾಗದಗಳನ್ನು ಅಂಜಂಜುತ್ತಲೇ ಒಡೆಯುತ್ತಿದ್ದರು. ಹತ್ತನೆಯ ದಿನ ಆಕೆಯಿಂದ ದೊಡ್ಡದೊಂದು ಕಾಗದ ಬಂತು. ನೋಡಿಯೇ ಜ್ಞಾನಶಂಕರರೆದೆ ನಡುಗಿತು. ಹೇಗೂ ಒಡೆದು, ಕಹಿಮದ್ದು ಒಮ್ಮೆಲೆ ಕುಡಿಯುವಂತೆ ಸರಸರ ಒಂದು ಹುರುಪಿನಲ್ಲಿ ಓದಿಯೂ ಬಿಟ್ಟರು. ರಾಯಸಾಹೇಬರ ಬಗ್ಗೆ ಚರ್ಚೆಯಿರಲಿಲ್ಲ. ಚಿತ್ತ ಶಾಂತವಾಗಿ ಅವರು ಇನ್ನೊಮ್ಮೆ ಓದಿದರು. ಅವರ ಕಾಗದವಿಲ್ಲದುದಕ್ಕೆ ಗಾಯತ್ರಿ ತನ್ನ ವಿಕಲತೆಯನ್ನು ಮರ್ಮಸ್ಪರ್ಶಿಯಾಗಿ ಬರೆದಿದ್ದಳು; ಶೀಘ್ರವೇ ಗೋರಖ ಪುರಕ್ಕೆ ಬರಲು ತಿಳಿಸಿದ್ದಳು. ತನ್ನ ಮನಃಸ್ಥಿತಿಯನ್ನು ಬಚ್ಚಿಡಲು ಆವಳು ಬಹಳ ಯತ್ನಿಸಿದ್ದಳಾದರೂ ಪ್ರತಿಶಬ್ದವೂ ಜ್ಞಾನಶಂಕರರ ಸಾಯಲಾದ ಬಯಕೆಗಳಿಗೆ ಅಮೃತಸಮನಾಗಿತ್ತು. ಛಟ್ಟಿ ಕೆಟ್ಟಿಲ್ಲವೆಂದು ಅವರ ಆಸೆ ಚಿಗುರಿತು. ಉತ್ತರ ಬರೆದರು. ವಿರಹವ್ಯಥೆಯನ್ನು ಬಹಳವಾಗಿ ತೋಡಿ ಕೊಂಡು, ರಾಯಸಾಹೇಬರ ಮಿಥ್ಯಾಕ್ಷೇಪವನ್ನೂ ಅದರಲ್ಲಿ ಸೂಚಿಸಿದರು. “ಅವರು ನನ್ನನ್ನು ಹೊಡೆಯಲು ಪಿಸ್ತೂಲು ಹಿಡಿದಿದ್ದರು; ಓಡಿಬರದಿದ್ದರೆ ಈ ಕಾಗದ ಬರೆಯಲು ನಾನಿರುತ್ತಲೇ ಇರಲಿಲ್ಲ. ತನಗೆ ಮೋರೆ ತೋರಿಸ ಲಾಗದೆಂದು ಅವರ ಅಪ್ಪಣೆಯಾಗಿದೆ; ಇಷ್ಟೇ ಅಲ್ಲ; ನಿಮ್ಮಿಂದಲೂ ದೂರಿರ ಬೇಕಂತೆ. ಅಪ್ಪಣೆ ಮೀರಿದರೆ ಘೋರ ಶಿಕ್ಷೆಯಿದೆ; ಅದೇನೆಂದು ಹೇಳಿ ನಿಮ್ಮ ಕೋಮಲಹೃದಯವನ್ನು ನೋಯಿಸಲಾರೆ. ಇದಕ್ಕಾಗಿಯೇ ನನ್ನ ಮೌನ. ನಿಮ್ಮಿಂದ ದೂರವಿದ್ದೂ ಹತ್ತಿರವಿದ್ದೇನೆ. ಆಧ್ಯಾತ್ಮಿಕ ಬಂಧನವನ್ನು ಹರಿಯುವುದು ಯಾರಿಂದ ಸಾಧ್ಯ? ಈ ಕೃಷ್ಣಪ್ರೇಮಿ ಯಾವಾಗಲೂ ರಾಧೆಯ ಅಂಕದಲ್ಲೇ ಇದ್ದಾನೆ. ನಿಮ್ಮ ಉದಾರಹೃದಯದ ಒಂದು ಮೂಲೆ ಯಲ್ಲಿ ನನ್ನ ನೆನಹಿಗೆ ಎಡೆಯಿರಲೆಂದೇ ನನ್ನ ಬೇಡಿಕೆ.” ಎಂಬುದು ಓಲೆಯ ಕೊನೆಯ ಮಾತಾಗಿತ್ತು.

ಈ ಕಾಗದ ಗಾಯತ್ರಿಯ ಚಂಚಲಚಿತ್ತವನ್ನು ಕಲಕಿತು. ಇದು ಅವಳ ಪ್ರೀತಿಯ ಮೊದಲ ಪರೀಕ್ಷೆ. ಅವಳ ಪ್ರೇಮಮಾರ್ಗದಲ್ಲಿ ನಟ್ಟ ಮೊದಲ

ನೆಯು ಮುಳ್ಳಿದು. ಈ ಮೊದಲ ಕಂಟಕವೇ ತನ್ನನ್ನು ಪ್ರೇಮಪಥದಿಂದ ಹಿಂದಬ್ಬುವುದೆ? ನನ್ನಿಂದಾಗಿಯೆ ವಿಡಂಬನೆಗೆ, ತೊಂದರೆಗೆ ಈಡಾದರು. ತಂದೆ ಆವರಮೇಲೆ ರುಷ್ಟರಾಗಿದ್ದರಾಗಿರಲಿ. ನಾನೇಕೆ ಪ್ರೇಮನೀತಿಯಿಂದ ವಿಮುಖಳಾಗಬೇಕು? ಪ್ರೇಮ ಕೇವಲ ಎರಡು ಹೃದಯಗಳ ಸಂಬಂಧ; ಆದರಲ್ಲಿ ಕೈಹಾಕುವ ಅಧಿಕಾರ ಯಾರಿಗೂ ಇಲ್ಲ ತಂದೆಯ ಅಪ್ಪಣೆ ನಡಸು ವುದು ಧರ್ಮ, ನಿಜ. ಆದರೆ ಪ್ರೇಮದ ಎದುರಿನಲ್ಲಿ, ಪವಿತ್ರ ಮನೋ-ವೃತ್ತಿಯ ಎದುರಿನಲ್ಲಿ ತಂದೆಗೆ ಅಸ್ತಿತ್ವವೆಲ್ಲಿ? ಅನಾದಿ ಜ್ಯೋತಿಯ ಕಿರಣವಾದ ಈ ತಾಪವನ್ನು, ಅನಂತಶಾಂತಿಯ ಮಂತ್ರವಾದ ಈ ದಾಹವನ್ನು ಯಾರು ನಂದಿಸಬಲ್ಲರು?

ಮರುದಿನವೇ ಗಾಯತ್ರಿ ಮಾಯಾಶಂಕರನೊಂದಿಗೆ ಬನಾರಸಕ್ಕೆ ಬಂದುಬಿಟ್ಟಳು. ಉಸುಕಿನಲ್ಲಿ ಚಡಪಡಿಸುತ್ತಿದ್ದ ಮೀನು ತೊರೆಯಲ್ಲಿ ಬಿದ್ದಂತೆ ಅವಳಿಗೆನಿಸಿತು. ರಾಯಸಾಹೇಬರಿಂದ ಬೆದರಿದ್ದ ಜ್ಞಾನಶಂಕರರು ಮಾತ್ರ ಬೆಚ್ಚಿಬಿದ್ದರು. ಆದರೆ ಅವರ ಮನವನ್ನು ಆಕೆ ಸಂತವಿಸಿದಳು. ತನ್ನ ಪ್ರೇಮ ತಂದೆಯ ಅಪ್ಪಣೆಗೆ ಅಧೀನವಲ್ಲ ಎಂದು ಬಿಚ್ಚಿಯೇ ಹೇಳಿದಳು. ಬರುಬರುತ್ತ ಅವರ ಗ್ಲಾನಿ ದೂರವಾಯಿತು. ಬನಾರಸದ ಘಾಟು-ಗುಡಿಗಳನ್ನು ತೋರಿಸಿ ಕೊಂಡು ಬರುವುದು, ಮುಂಜಾನೆ ಆವಳೊಂದಿಗೆ ಹೊಳೆಗೆ ಜಳಕಕ್ಕೆ ಹೋಗುವುದು, ಸಂಜೆಗೆ ದೋಣಿಯಲ್ಲಿ ವಿಹರಿಸುತ್ತ ದಡದ ಸೊಬಗನ್ನು ಸವಿಯುವುದು ಆರಂಭವಾಯಿತು.

ಜ್ಞಾನಶಂಕರರು ಒಂದು ದಿನ ಗಾಯತ್ರಿಗೆ ಹೇಳಿದರು: "ಇಲ್ಲಿಯ ಕೆಲ ಭಕ್ತಜನರು ನಿಮ್ಮ ಶುಭಾಗಮನದ ನಿಮಿತ್ತ ಕೃಷ್ಣಲೀಲೆ ನಡೆಸಬೇಕೆಂದು ಅಪೇಕ್ಷಿಸುತ್ತಾರೆ. ಈ ಬಂಗಲೆಯ ಮುಂದಿನ ಅಂಗಳದಲ್ಲಿಯೇ ನಾಟ್ಯಶಾಲೆ ರಚಿಸಿದರಾಯಿತು ಎಂದು ನಾನು ಹೇಳಿದ್ದೇನೆ."

ಗಾಯತ್ರಿಯ ಮುಖ ಅರಳಿತು: "ಈ ಅಂಗಳ ಸಾಕೆ?" ಎಂದಳು.

"ಹೋ ಸಾಕು. ನೀವೂ ಏನಾದರೂ ಪಾತ್ರ ವಹಿಸಬೇಕೆಂದು ಜನ ಗಳ ಇಚ್ಛೆ."

"ನೀವು ವಹಿಸಿದರೆ ನಾನೂ ವಹಿಸುವೆ." ಗಾಯತ್ರಿ ಮುಗುಳುನಗೆ ಬೀರಿದಳು.

ಮರುದಿನದಿಂದಲೇ ಸಿದ್ಧತೆಗೆ ಆರಂಭವಾಯಿತು. ಪ್ರಕಟನೆ-ಆಮಂತ್ರಣ ಪತ್ರಿಕೆ-ಪ್ರವೇಶಪತ್ರಗಳನ್ನು ಅಚ್ಚುಹಾಕಿಸುವುದು, ಹಂಚಿಸುವುದು, ರಂಗಭೂಮಿ ರಚಿಸುವುದು ಇತ್ಯಾದಿಗಳಲ್ಲಿ ನಾಲ್ಕು ದಿನ ಜ್ಞಾನಶಂಕರರಿಗೆ ಕುಳ್ಳಿರಲೂ ಪುರಸತ್ತಿರಲಿಲ್ಲ.

ಇಂದು ಕೃಷ್ಣಲೀಲೆ. ಸಂಜೆಯ ಎಂಟರೊಳಗೇ ಮಂಟಪ ತುಂಬಿ ಹೋಯಿತು. ಒಂಬತ್ತಕ್ಕೆ ತೆರೆ ಎದ್ದಿತು. ಮರಗಳ ತೋಪಿನಲ್ಲಿ ಸಣ್ಣ ಮೊಂದೂರು. ಕೆಲವು ಗುಡಿಸಲುಗಳು; ಚೊಕ್ಕ ಜಳ ಜಳ; ಹೂ-ತಳಿರುಗಳ ಸಿಂಗಾರ. ಒಂದರ ಬಾಗಿಲಲ್ಲಿ ದೊಡ್ಡ ದೊಡ್ಡ ಹಸುಗಳು ಕಟ್ಟಿದ್ದವು. ಒಂದೆಡೆ ಧಾನ್ಯದ ರಾಶಿ, ಒಂದೆಡೆ ಹಾಲು-ಮೊಸರಿನ ಮಡಿಕೆಗಳು. ಒಳಗೆ ಜಡ್ಡಿನ ರಾಧೆ ಮಲಗಿದ್ದಾಳೆ. ತಲೆದಿಶೆಯಲ್ಲಿ ಕೆಲವರು ಕುಳಿತು ಗಾಳಿ ಹಾಕುತ್ತಿದ್ದಾರೆ. ಸಮೀಪದಲ್ಲಿ ಆಸನದಲ್ಲಿ ಕುಳಿತ ಪಂಡಿತಜಿಯು ಮಂತ್ರ ಪಠಣ ನಡೆದಿದೆ ಬಾಗಿಲಲ್ಲಿ ಭಿಕ್ಷುಕರಿಗೆ ಅನ್ನದಾನ ನಡೆದಿದೆ. ರಾಧೆಯು ಚಿಂತಿತ ನೇತ್ರಗಳನ್ನು ಕಂಡು ಮನೆಜನ ' ವೈದ್ಯ ವೈದ್ಯ ' ಎಂದು ಕೂಗುತ್ತಿದ್ದಾರೆ.

ಒಮ್ಮೆಲೆ ದೂರದಿಂದ ದನಿ ಬಂದಿತು : " ವೈದ್ಯ, ವೈದ್ಯ, ಎಲ್ಲ ಜೇನೆಗಳ ವೈದ್ಯ! ಕಾಮದ ವೈದ್ಯ, ಕ್ರೋಧದ ವೈದ್ಯ,.... ಧರ್ಮದ ವೈದ್ಯ, ಮೋಕ್ಷದ ವೈದ್ಯ. ಮನದ ಕೊಳೆ ತೆಗೆಯಬಲ್ಲ! ಅಜ್ಞಾನದ ಹೊಲಸು ಕಳೆಯಬಲ್ಲ! "

ಜನರು ವೈದ್ಯನನ್ನು ಕರೆತಂದರು. ಹೆಗಲಮೇಲೆ ಜೋಳಿಗೆ, ತಲೆಯ ಮೇಲೆ ಕೆಂಪು-ದುಂಡು-ಪಗಡಿ, ತೊಟ್ಟುದು ಹಸಿರು ಬನಾತಿನ ಉದ್ದಂಗಿ; ಕಣ್ಣಿಗೆ ಕಾಡಿಗೆಯ ಕಪ್ಪು, ತುಟಿಗಳಲ್ಲಿ ತಂಬುಲದ ಕೆಂಪು, ಮೊಗದಲ್ಲಿ ನಸುನಗೆ. ನಡೆ-ನುಡಿಯಲ್ಲಿ ಒಂದು ಬಗೆಯ ಠೀವಿಯಿತ್ತು.

ವೈದ್ಯ ಬಂದೊಡನೆ ಜೋಳಿಗೆಯನ್ನು ಕೆಳಗಿರಿಸಿ ಕೊಳಲೂದತೊಡಗಿದ

" ಮೈ ತೊ ಹರತ ವಿರಹ ಕೀ ಪೀರ
ಪ್ರೇಮದಾಹಕೋ ಶೀತಲ ಕರತ ಜೈಸೆ
ಅಗ್ನಿಕೋ ನೀರ! "

ಮನೆಯವರು ಅವನನ್ನು ಒಳಕ್ಕೆ ಕರೆದೊಯ್ದರು ಅವನನ್ನು ಕಂಡು ರಾಧೆ ನಸುನಗೆ ಬೀರಿ ಮೋರೆ ಮುಚ್ಚಿಕೊಂಡಳು. ವೈದ್ಯ ಅವಳ ನಾಡಿಯನ್ನು ನೋಡಿದ. ಅವಳ ಬೆಳ್ಳಿಯನ್ನು ಮೆಲ್ಲನೆ ಒತ್ತಿದ. ಅವಳು ಬೆಚ್ಚಿ ಕೈ ಕೊಸರಿಕೊಂಡಳು. ಬಳಿಕ ಪ್ರೇಮಭಾಷೆಯಲ್ಲಿ ಮಾತುಗಳಾದವು.

ರಾಧೆ : ನದಿಯಲ್ಲಿ ನೀರು ಬಹಳವಿದೆ.

ವೈದ್ಯ : ದೋಣಿ ಇದ್ದವನಿಗೆ ಸೀರಂಜಿಕೆ ಎಲ್ಲಿ?

ರಾಧೆ : ಬಿರುಗಾಳಿ. ದೊಡ್ಡ ದೊಡ್ಡ ತೆರೆಗಳೇಳುತ್ತಿವೆ; ಭಯಂಕರ ಜಲಜಂತುಗಳಿವೆ.

ವೈದ್ಯ : ಅಂಬಿಗನು ಜಾಣನಿದ್ದಾನೆ.

ಕಣ್ಸನ್ನೆಯಿಂದ ವೈದ್ಯ ಎಲ್ಲರನ್ನೂ ಹೊರಗೆ ಕಳಿಸಿದ. ರಾಧೆ ನಸುನಗುತ್ತ, " ಎಷ್ಟು ಗಟ್ಟಿಯಿದೆ ಪ್ರೇಮದ ಎಳೆ ! " ಎಂದಳು.

ಜ್ಞಾನಶಂಕರರು ಉತ್ತರವೀಯಲಿಲ್ಲ.

ಗಾಯತ್ರಿ ಮುಂದುವರಿಸಿದಳು : .ಉರಿ ಕಟ್ಟಿಗೆಯನ್ನೇನೋ ಸುಡುತ್ತದೆ; ಆದರೆ ಕಟ್ಟಿಗೆ ಸುಟ್ಟುಹೋದ ಮೇಲೆ ತಾನೂ ಆರುತ್ತದೆ.

ಅವರು ಈಗಲೂ ಮಾತನಾಡಲಿಲ್ಲ.

ಗಾಯತ್ರಿ ವಿಸ್ಮಯದಿಂದ ಅವರ ಮೋರೆ ನೋಡಿದಳು — ತಮ್ಮ ಭೂಮಿಕೆಯನ್ನೇ ಮರೆತರೋ ಏನು ? ಜ್ಞಾನಶಂಕರರ ತುಟಿಗಳು ಹೊಲಿದುಕೊಂಡೇ ಇದ್ದವು; ಉಸಿರು ವೇಗದಿಂದಾಡುತ್ತಿತ್ತು; ಕಾಲು ನಡುಗುತ್ತಿದ್ದವು; ಕಣ್ಣುಗಳಲ್ಲಿ ವಿಷಮ ಪ್ರೇರಣೆ ಮಿಂಚುತ್ತಿತ್ತು; ಮುಖದಲ್ಲಿ ಒಂದು ಭಯಂಕರ ಸಂಕಲ್ಪ ಪ್ರಕಟವಾಗುತ್ತಿತ್ತು;— ಹಿಂಸ್ರಪಶು ಬೇಟೆಯ ಮೇಲೆ ನೆಗೆಯಲು ತನ್ನ ಶಕ್ತಿಗಳನ್ನೆಲ್ಲ ಒಟ್ಟುಗೂಡಿಸುತ್ತಿರುವಂತೆ. ಹೌದು, ಈ ಒಂದು ನೆಗೆತದಲ್ಲೇ ಸೌಭಾಗ್ಯಶಿಖರವನ್ನೇರಲು ಜ್ಞಾನಶಂಕರರು ಬಯಸಿದ್ದರು ಅದಕ್ಕಾಗಿಯೇ ಈ ನಾಟಕವನ್ನು ಅವರು ಹೂಡಿದ್ದರು. ಈ ಅವ್ಯಕ್ತ ಪ್ರೇರಣೆಯನ್ನು ಗುರುತಿಸಿ ಗಾಯತ್ರಿ ಬೆದರಿದಳು. ಇದು ಅವಳಿಗೆ ಇಷ್ಟವಲ್ಲ. ಅವಳು ಪ್ರೇಮದ ರಸಪಾನ ಮಾಡಿದ್ದಳು; ಅದರ ತಣ್ಣನೆಯ ಉರಿಯ, ಅದರ ಸುಖಕರವಾದ ನೋವಿನ ಸವಿಯನ್ನು ಸವಿದಿದ್ದಳು; ವಶೀಭೂತಳೂ ಆಗಿದ್ದಳು. ಆದರೆ ಅವಳ ಸತೀತ್ವರಕ್ಷಣೆಯ ಆಂತರಿಕ ಪ್ರೇರಣೆ ಶಿಥಿಲ

ವಾಗಿರಲಿಲ್ಲ. ಅವಳು ಗಾಬರಿಯಿಂದ ಚಟ್ಟನೆದ್ದು, ವೇಗವಾಗಿ ಸ್ಟೇಜಿನ ಹಿಂದೆ ಓಡಿದಳು. ಅಲ್ಲೊಂದು ಮಂಚವಿತ್ತು. ಅದರ ಮೇಲೆ ಹೋಗಿ ಬಿದ್ದಳು. ಅವಳಿಗೆ ಅರಿವೇ ಇಲ್ಲದಂತಾಗಿತ್ತು. ಸ್ವಲ್ಪ ಅರಿವಿದ್ದರೆ ಅದು ಭಯದ್ದು.

ಆದರೆ ಅವಳ ಮಾನಸಿಕ ಪಾವಿತ್ರ್ಯ ಎಂದೋ ಅಳಿದಿತ್ತು. ಈಗ ಅನಿಷ್ಟ ಪ್ರತಿಕಾರ ಶಕ್ತಿಯೂ ನಷ್ಟವಾಯಿತು. ಹೃದ್ದೇಶದ ಮೇಲೆ ಪತಿ ಪ್ರೇಮದ ಒಡೆತನವೇ ಉಳಿದಿರಲಿಲ್ಲ. ಕ್ಷಣದಲ್ಲಿ ಆಕೆ ರಂಗಸ್ಥಳಕ್ಕೆ ಮರಳಿದಳು. ಜ್ಞಾನಶಂಕರರು ಮನಸ್ಸಿನಲ್ಲಿ ಏನೆಂದುಕೊಂಡರೋ ಎಂದು ನಾಚಿಕೆಯೆನಿಸುತ್ತಿತ್ತು ಭಕ್ತಿಯ ಆವೇಗದಲ್ಲಿ ತನಗೆ ತನ್ನನ್ನು ಮರೆಯಲಾಗಲಿಲ್ಲ. ಪ್ರೇಕ್ಷಕರು ಏನೆಂದುಕೊಂಡರೋ! ಆಕೆ ಒಳಗೆ ಬಂದಾಗ ಜ್ಞಾನಶಂಕರರು ಹಾಡಿ ಜನರ ಮನೋರಂಜನೆ ಮಾಡುತ್ತಿದ್ದರು. ಆಕೆ ರಂಗಕ್ಕೆ ಬಂದ ಕೂಡಲೆ ತೆರೆ ಬಿದ್ದಿತು. ಅಭಿನಯ ಕೊನೆಗಂಡಿತು.

ಗಾಯತ್ರಿ ತನ್ನ ಕೋಣೆಗೆ ಬಂದು ಕೋಚಿನ ಮೇಲೆ ಕುಳಿತಾಗ ಒಂದು ಹೊಡೆದಿತ್ತು. ಅವಳಿಗೆ ಹಿಡಿಸಲಾರದಷ್ಟು ಆನಂದವಾಗಿತ್ತು. ನಾಲ್ಕೂ ಕಡೆ ಅವಳ ಪ್ರಶಂಸೆ ಎಷ್ಟೋ ರಸಿಕ ಸಜ್ಜನರು ಅವಳಿದ್ದಲ್ಲಿಗೆ ಬಂದು ಹೊಗಳಿದ್ದರು. ಇಂದು ಇಡೀ ನಗರದಲ್ಲೇ ತನ್ನ ಚರ್ಚೆ—ಯಾರ ಸತ್ಸಂಗದ ಯಾರ ಪ್ರೇರಣೆಯ ಫಲವಿದು? ಗಾಯತ್ರಿಯ ರೋಮರೋಮದಲ್ಲೂ ಜ್ಞಾನಶಂಕರರ ಬಗೆಗೆ ಶ್ರದ್ಧಾಧ್ವನಿ ಮೊರೆಯತೊಡಗಿತು. ಅವರ ಬಗೆಗೆ ಸಂದೇಹ ತಳೆದುದಕ್ಕೆ ತನ್ನನ್ನು ಛಾಸು ಹಳಿದುಕೊಂಡಳು. ಅವಳು ಈ ವಿಚಾರದಲ್ಲಿ ಮುಳುಗಿರುವಾಗಲೇ ಜ್ಞಾನಶಂಕರರು ಬಂದು ನುಡಿದರು:

" ಇಂದು ನೀವು ಸಭೆಗೆ ಮಾಟವನ್ನೇ ಮಾಡಿಬಿಟ್ಟಿರಿ. "

" ಈ ಮಾಟ ನೀವು ಕಲಿಸಿದ್ದೇ. "

" ಮನುಷ್ಯನಲ್ಲಿ ಹೆಸರಿಗೆ ತಕ್ಕ ಗುಣಗಳು ಉಂಟಾಗುತ್ತವೆಂದು ಕೇಳಿದ್ದೆ, ಅದನ್ನು ನಂಬಿರಲಿಲ್ಲ ಈ ಮಾತಿನಲ್ಲಿ ಹುರುಳಿದೆ ಎಂದೆನಿಸುತ್ತಿದೆ ಈಗ. ಎರಡು ಸಲ ನನ್ನ ಅನುಭವಕ್ಕೆ ಬಂದಿದೆ— ನನ್ನ ಪಾತ್ರ ಅಭಿನಯಿಸುತ್ತಿರುವಾಗ ನಾನು ಬೇರೆ ಜಗತ್ತಿನಲ್ಲೇ ಇದ್ದಂತಾಗುತ್ತದೆ; ನಿಜವಾಗಿಯೂ ನಾನು ಕೃಷ್ಣನೇ ಎಂದೆನಿಸುತ್ತದೆ. "

"ನಾನೂ ಇದನ್ನೇ ಹೇಳಬೇಕೆಂದಿದ್ದೆ. ನನ್ನನ್ನೇ ನಾನು ಮರೆತು ಬಿಡುತ್ತೇನೆ."

"ಆ ಮೈಮರೆವಿನಲ್ಲಿ ನನ್ನಿಂದ ತಪ್ಪಾಗಿರುವ ಸಂಭವವಿದೆ. ಆಗಿದ್ದರೆ ಕ್ಷಮಿಸಬೇಕು." ಎಂದರು ಜ್ಞಾನಶಂಕರರು.

ಗಾಯತ್ರಿ ಸಂಕೋಚಪಡುತ್ತ .ಉತ್ತರವಿತ್ತಳು: "ಪ್ರೇಮೋದ್ಗಾರದಲ್ಲಿ ಅಂತಃಕರಣ ನಿರ್ಮಲವಾಗುತ್ತದೆ; ವಾಸನೆಗಳ ಲೇಶವೂ ಉಳಿಯುವುದಿಲ್ಲ."

ಕ್ಷಣಹೊತ್ತು ಈ ಶಬ್ದಗಳ ಆಶಯವನ್ನು ವಿಚಾರಿಸುತ್ತ ನಿಂತು ಜ್ಞಾನಶಂಕರರು ಹೊರಟುಹೋದರು.

## ೪೦

ಸಂಜೆಯ ಹೊತ್ತು. ವಿದ್ಯಾವತಿ ಹಳೆಯ ಶಾಲನ್ನು ಹೊಲಿಯುತ್ತ ಕುಳಿತಿದ್ದಳು. ರಾಯಸಾಹೇಬರು ಬಂದು ಬಳಿಯಲ್ಲಿ ಕುಳಿತು ಏನೋ ಮಾತನಾಡಲು ಹವಣಿಸಿದರು. ಆದರೆ ಕೆಮ್ಮು ಬಂದು ಬಾಯಿಂದ ತುಸ ನೆತ್ತರು ಬಿತ್ತು ಕಣ್ಣುಗಳು ನಿಸ್ತೇಜವಾದವು. ಹೃದಯದಲ್ಲಿ ವಿಷಮವೇದನೆ ಆಗತೊಡಗಿತು. ಮುಖ ವಿಕಾರವಾಯಿತು.

"ಏನು, ನೀರು ತರಲೇ ? ಈ ಬೇನೆ ನಿಮಗಿರಲಿಲ್ಲ. ಡಾಕ್ಟರನ್ನು ಕರೆಸಲೇ ?" ವಿದ್ಯಾವತಿ ಗಾಬರಿಯಿಂದ ಕೇಳಿದಳು.

"ಬೇಡ, ಬೇಕಾಗಿಲ್ಲ ಈಗ ನೆಟ್ಟಗಾಗುತ್ತದೆ. ಇದೆಲ್ಲವು ನನ್ನ ಸುಯೋಗ್ಯವಿದ್ವಾಂಸ, ಸರ್ವಗುಣಸಂಪನ್ನ ಪುತ್ರ ಬಾಬು ಜ್ಞಾನಶಂಕರನ ಕೃಪೆ."

ವಿದ್ಯಾವತಿ ವಿಸ್ಮಯದಿಂದ ಅವರ ಮೋರೆಯ ಕಡೆ ನೋಡಿ ಕಾತರ ಭಾವದಿಂದ ಮೋರೆ ತಗ್ಗಿಸಿದಳು.

ರಾಯಸಾಹೇಬರು ಸಾವರಿಸಿಕೊಂಡು ಎದ್ದು ಕುಳಿತು ಹೇಳಿದರುಃ "ಆದದ್ದು ನನ್ನ ಅವನ ಹೊರತು ಇನ್ನೊಬ್ಬರ ಕಿವಿಗೆ ಮುಟ್ಟಬಾರದೆಂದೇ ನನ್ನಿಚ್ಛೆ. ಆದರೆ ನಿನ್ನಿಂದ ಬಚ್ಚಿಡುವುದು ಅನುಚಿತ, ಅಕ್ಷಮ್ಯ. ಕೇಳಿ

ನಿನಗೆ ದುಃಖವಾಗಬಹುದು. ಆದರೆ ಇಂದಿನ ದುಃಖ ನಿನ್ನನ್ನು ನಾಳೆ ಸಂಕಟದಿಂದ ಉಳಿಸೀತು."

ವಿದ್ಯಾವತಿಯ ಮನದಲ್ಲಿ ಬಗೆಬಗೆಯ ಸಂದೇಹಗಳ ಆಂದೋಲನವೆದ್ದಿತು. ಸಭಯ ಸಜಲನೇತ್ರಗಳಿಂದ ರಾಯಸಾಹೇಬರ ಕಡೆ ನೋಡಿದಳು. ಅವರು ಮುಂದುವರಿಸಿದರು: "ಜ್ಞಾನಶಂಕರನ ಚಾರಿತ್ರ್ಯದ ಬಗ್ಗೆ ನನಗೆ ಬಹಳ ವಿಶ್ವಾಸವಿತ್ತು. ನನ್ನ ಹೇಳಿಕೆಯಂತೆಯೆ ಗಾಯತ್ರಿ ಅವನಿಗೆ ತನ್ನ ನಾಡಿನ ಆಡಳಿತ ಒಪ್ಪಿಸಿದಳು. ನಾನು ಎಚ್ಚರದಿಂದಿದ್ದರೆ ಅವಳ ಮೇಲೆ ಇವನ ನೆರಳನ್ನು ಬೀಳಗೊಡುತ್ತಿರಲಿಲ್ಲ. ಜ್ಞಾನ ಮತ್ತು ವ್ಯವಹಾರಗಳಲ್ಲಿ ಇಷ್ಟೊಂದು ವಿರೋಧವಿರುವುದೆಂದು ನನಗೆ ಗೊತ್ತಿರಲಿಲ್ಲ. ಇಷ್ಟೊಂದು ಪ್ರತಿಭೆಯುಳ್ಳವನ, ಮುಖದಿಂದ ಸ್ವಚ್ಛನಿರ್ಮಲ ಭಾವಗಳ ಪ್ರವಾಹ ಹರಿಯುತ್ತಿರುವವನ ಅಂತಃಕರಣ ಇಷ್ಟೊಂದು ಕಲುಷಿತವಿರಬಹುದೆಂದು ಕೊಂಚವೂ ಬಗೆದಿರಲಿಲ್ಲ."

ವಿದ್ಯೆಗೆ ತಡೆಯದಾಯಿತು. ಜ್ಞಾನಶಂಕರರ ಸ್ವಾರ್ಥಭಕ್ತಿಯನ್ನು ಅವಳು ಚೆನ್ನಾಗಿ ಬಲ್ಲಳು. ಆದರೆ ಪತಿಯ ನಿಂದೆಯನ್ನು ಕೇಳುವುದು ಧರ್ಮನೀತಿಗೆ ಸಲ್ಲದ್ದು; ಅದು ಅವಳಿಗೆ ಅಸಹ್ಯ. "ನನ್ನ ಮುಂದೆ ಅವರನ್ನು ದೂಷಿಸಬೇಡಿ" ಎಂದು ತೀವ್ರಸ್ವರದಿಂದ ನುಡಿದಳು. ಅವಳ ಕೊರಳು ಬಿಗಿಯಿತು. ಶಬವಾಗಿ ಹೊರಡಲಾಗದ ಭಾವವು ಕಣ್ಣುಗಳಿಂದ ಹೊರಹೊಮ್ಮಿತು.

"ಇಲ್ಲಮ್ಮಾ, ಅವನನ್ನು ಕೆಟ್ಟವನನ್ನಾಗಿ ಮಾಡಬೇಕೆಂದು ಹೇಳುತ್ತಿಲ್ಲ. ನಿಜವನ್ನೇ ಹೇಳುತ್ತಿದ್ದೇನೆ. ಆತ ಮಹಾತ್ಮರ ರೂಪಧರಿಸಿದ್ದೇಕೆಂದು ನನಗೀಗ ಗೊತ್ತಾಗಿದೆ. ಎಲ್ಲವನ್ನೂ ಅವನಿಂದ ಹೊರಡಿಸಿದ್ದೇನೆ. ಸಾಧು–ಭೋಳೆ ಗಾಯತ್ರಿಗಾಗಿಯೇ ಈ ಬಣ್ಣದ ಬಲೆ ಹರಡಿದ್ದು ಅವನು. ಅದರಲ್ಲಿ ಅವಳು ಬಿದ್ದೂ ಬಿದ್ದಿರಬಹುದು."

ವಿದ್ಯೆಯ ಹುಬ್ಬು ಹಿಗ್ಗಿದವು; ಮುಖ ಕೆಂಪಾಯಿತು. ಗೌರವಭಾವದಿಂದ ಅವಳೆಂದಳು: "ಅಪ್ಪಾ, ನಿಮ್ಮನ್ನು ನಾನು ಯಾವಾಗಲೂ ಗೌರವಿಸುತ್ತಿದ್ದವಳು; ತಮ್ಮ ಅವಜ್ಞೆ ಮಾಡುವುದೆಂದರೆ ನನಗಾಗುವ ದುಃಖ

ಹೇಳಬಾರದು. ಆದರೆ, ಅವರ ನಿಂದೆಯನ್ನು ಈ ಕಿವಿಯಿಂದ ಕೇಳಲಾರೆ. ಅವರೊಂದಿಗೆ ೧೭ ವರ್ಷ ಕಳೆದಿದ್ದೇನೆ;— ಅವರು ಕೆಟ್ಟ ವಾಸನೆಗಳಿಗೆ ಒಲಿದದ್ದನ್ನು ಒಮ್ಮೆಯೂ ನೋಡಿಲ್ಲ. ಯೌವನದಲ್ಲಿಯೂ ಸಂಯಮಿಯಾಗಿದ್ದವರ ವಿಷಯದಲ್ಲಿ ಹೀಗೆ ಸಂದೇಹಪಟ್ಟು ಅವರಿಗೆ, ಮಾತ್ರವಲ್ಲ, ಗಾಯತ್ರಿ ಅಕ್ಕನಿಗೂ ಅನ್ಯಾಯ ಮಾಡುತ್ತಿದ್ದೀರಿ. ”

“ ನಿನ್ನ ದೃಷ್ಟಿಯಲ್ಲಿ ಅವನನ್ನು ಕೆಡವಬೇಕೆಂಬ ಇಚ್ಛೆ ನನಗೆಷ್ಟೂ ಇಲ್ಲ. ಆದರೆ ನಿನ್ನ ಅಂಥ ಪತಿಭಕ್ತಿ ಆತನ ದುಷ್ಕೃತ್ಯಗಳನ್ನು ಪೂರಾ ಹೇಳುವಂತೆ ಮಾಡುತ್ತಿದೆ ಇಪ್ಪತ್ತು ಮಂದಿ ಉಂಡರೂ ಒಬ್ಬ ಕೂಡ ಬದುಕದಂಥ ವಿಷವನ್ನು ಅವನು ನನಗೆ ಉಣಿಸಿದ. ಇದು ಬರೀ ಭ್ರಮೆಯಲ್ಲ, ಆದಕ್ಕೆ ಸದೇಹ ಪ್ರಮಾಣವಾಗಿ ನಾನು ಕೂತಿದ್ದೇನೆ. ಈ ಪಾಪವನ್ನು ಅವನೂ ಒಪ್ಪಿಕೊಂಡಿದ್ದಾನೆ. ಎಪ್ಪತ್ತೆರಡರ ಮುಪ್ಪಿನಲ್ಲಿಯೂ ಇಪ್ಪತ್ತ್ಯೈದರ ಹರಯದವನಂತಿದ್ದ ನಾನು ತ್ರಾಣ-ಪ್ರಾಣ ಹೀನ ಮೂಳೆಯ ಗೂಡಾಗಿದ್ದೇನೆ. ”

ಹೇಳುಹೇಳುತ್ತ ರಾಯಸಾಹೇಬರು ವೇದನೆಯಿಂದ ನರಳಿದರು. ಕೆಮ್ಮು ಬಂತು. ಬಾಯಿಂದ ನೆತ್ತರ ಲೊದಡಿ ಬಿದ್ದಿತು. ಕ್ಷಣ ಹೊತ್ತು ಮೂರ್ಛಾವಸ್ಥೆಯಲ್ಲಿ ಬಿದ್ದಿದ್ದು, ಮತ್ತೆದ್ದು ಕುಳಿತು ಹೇಳಿದರು: “ ನಾಳೆ ಬೆಳಗಿನಲ್ಲೆ ಬನಾರಸಕ್ಕೆ ಹೋಗು; ಕಿಚ್ಚಿನಲ್ಲಿ ಬೀಳುತ್ತಿದ್ದ ಗಂಡನನ್ನು ಉಳಿಸು. ಸರಲ ಹೃದಯದ ಗಾಯತ್ರಿಯನ್ನು ಕಾಯುವುದು ನಿನ್ನನ್ನೇ ಕೂಡಿದೆ. ಅವಳ ಗರತಿತನಕ್ಕೆ ಕೊಂಚ ಕಪ್ಪು ಹತ್ತಿದರೂ ನಿನ್ನ ಕುಲದ ಸರ್ವನಾಶವಾಗುತ್ತದೆ. ಇದೇ ನನ್ನ ಕೊನೆಯ ಸಂದೇಶ. ಗಾಯತ್ರಿಯ ಸತೀತ್ವ ರಕ್ಷಣೆಯೇ ಇದಕ್ಕೆ ಉಚ್ಛಾಪ. ”

ರಾಯಸಾಹೇಬರು ಹೊರಟುಹೋದರು. ತನ್ನ ಗಂಡನ ಸ್ವಾರ್ಥಪರತೆ ಈ ನೆಲೆಗೂ ಮುಟ್ಟಿದೆಯೇ ?.... ವಿದ್ಯೆಯ ಹೃದಯದಲ್ಲಿ ಕಲಕಲವಾಯಿತು. ಅವರ ಪಾಪದಲ್ಲಿ ತನ್ನ ಪಾಲೂ ಇದೆಯೆಂದು ತಿಳಿದೇ ಅಪ್ಪ ಇದನ್ನೆಲ್ಲ ತನಗೆ ಹೇಳಿರಬಹುದೇ ? ಎಲ್ಲ ತಪ್ಪನ್ನೂ ಗಂಡನಮೇಲೆ ಹಾಕಿ ತಾನೆಂತು ಮುಕ್ತಳಾಗಬಲ್ಲಳು ?.... ನಾನಾ ಶಂಕೆಗಳಿಂದ ಅವಳ ಮನಸು ವಿಚಲಿತವಾಯಿತು. ಮಾಯಾಶಂಕರನ ರೂಪು ಕಣ್ಮುಂದೆ ಸುಳಿಯಿತು;

ಕಾಲಿಗೆ ಗರಿ ಮೂಡಬಾರದೇ, ಅವನೆಡೆಗೆ ಹಾರಿಹೋಗುವೆ ಎಂದೆನಿಸಿತು. ಕೆಟ್ಟ ಕಲ್ಪನೆಗಳಿಂದ ಹೊಟ್ಟೆಯಲ್ಲಿ ಕಳವಳವಾಗತೊಡಗಿತು.

ಮರುದಿನವೇ ವಿದ್ಯೆ ಬನಾರಸಕ್ಕೆ ಬಂದಳು. ಬಾಗಿಲಲ್ಲಿ ದೊಡ್ಡ ಪೆಂಡಾಲು. ಒಳಗೆ ಹೋಗುತ್ತಲೂ ಶ್ರದ್ಧೆ ಓಡಿ ಬಂದು ಅಪ್ಪಿಕೊಂಡಳು. ದಾಸಿಯರು ಬಂದರು. ಎಲ್ಲರೂ ಮರುಕದ ನೋಟದಿಂದ ಅವಳನ್ನು ನೋಡುತ್ತಿದ್ದರು. ವಿದ್ಯಾವತಿಯ ಕೋಣೆಯಲ್ಲಿ ಗಾಯತ್ರಿಯ ರಾಜ್ಯವಿತ್ತು. ಅವಳು ಸ್ನಾನಕ್ಕೆ ಹೋಗಿದ್ದಳು ಅವಳೆಲ್ಲ ಸಾಮಾನುಗಳನ್ನು ಹೊರಕ್ಕೆಸೆಯಲಾ, ಎಂಬಷ್ಟು ವಿದ್ಯೆಗೆ ಸಿಟ್ಟು ಬಂದಿತು. ಆದರೆ ಏನೋ ಯೋಚಿಸಿಕೊಂಡು ಸುಮ್ಮನಾದಳು. ಗಾಯತ್ರಿಯೊಡನೆ ಬಂದಿದ್ದ ದಾಸಿಯರು ಇಲ್ಲಿಯ ದಾಸಿಯರ ಮೇಲೆ ಆಳಿಕೆ ನಡೆಸುತ್ತಿದ್ದರು. ವಿದ್ಯೆಯನ್ನು ಕಂಡೊಡನೆ ಎಲ್ಲರೂ ಅತ್ತಿತ್ತ ಚದರಿದರು. ಯೋಗಕ್ಷೇಮ ವಿಚಾರಿಸಲಿಕ್ಕೂ ಬರಲಿಲ್ಲ ಯಾರೂ. ಎಲ್ಲವನ್ನೂ ನೋಡಿನೋಡಿದಂತೆ ಅವಳ ಮನದ ಶಂಕೆ ಗಟ್ಟಿಗೊಳ್ಳುತ್ತಿತ್ತು.

"ದೊಡ್ಡ ಮಂಟಪಗಿಂಟಪ ಹಾಕಿದ್ದಾರೆ, ಏಕೆ?" ಏಕಾಂತ ದೊರೆತ ಮೇಲೆ ವಿದ್ಯೆ ಶ್ರದ್ಧೆಯನ್ನು ಕೇಳಿದಳು.

"ರಾತ್ರಿ ಕೃಷ್ಣಲೀಲೆ ಆಗಿತ್ತು." ಶ್ರದ್ಧೆ ಉತ್ತರವಿತ್ತಳು.

"ಅಕ್ಕನೂ ಪಾತ್ರ ವಹಿಸಿದ್ದಳೇನು?"

"ಆಕೆ ರಾಧಿಕೆಯಾಗಿದ್ದಳು, ಬಾಬೂಜಿ ಕೃಷ್ಣ."

"ಅಕ್ಕನಿಗೆ ಅಭಿನಯಿಸಲು ಬಂದಿರಲಿಕ್ಕಿಲ್ಲ."

"ಭಲೆ, ಈ ಕಲೆಯಲ್ಲಿ ಬಲು ಜಾಣೆ! ಸಭೆಗೆ ಸಭೆಯೇ ಮುಗ್ಧವಾಗಿತ್ತು."

ಮಾಯಾಶಂಕರ ಬಂದು ತಾಯಿಗೆ ನಮಸ್ಕಾರ ಮಾಡಿದ. ಅವನನ್ನು ಅಪ್ಪಿಕೊಂಡು ವಿದ್ಯೆಯೆಂದಳು: "ನೋಡಿದಿಯಾ ಅಕ್ಕ, ಇಷ್ಟು ದಿನದೊಳಗೇ ಇವನ ದನಿ ಬದಲಾಗಿಬಿಟ್ಟಿದೆ. ತೀರ ಹೊಸಬನಂತೆ ಕಾಣುತ್ತಾನೆ. ಅಬಚಿ ಹೇಗಿದ್ದಾಳೆ, ಪ್ರೀತಿ ಮಾಡುತ್ತಾಳಲ್ಲವೆ?"

"ಹಾಂ, ಬಹಳ ಪ್ರೀತಿ ಮಾಡುತ್ತಾಳೆ, ಬಹಳ ಒಳ್ಳೆಯವಳು."

" ಅಲ್ಲಿಯೂ ಕೃಷ್ಣಲೀಲೆ ಆಗುತ್ತಿತ್ತೇನು ? "

" ಅಲ್ಲಿಯಂತೂ ದಿನಾಲು ಆಗುತ್ತಿತ್ತು. ಅಪ್ಪನೇ ಕೃಷ್ಣ ಆಗುತ್ತಿದ್ದ. ಆತನ ಕೂದಲ ಉದ್ದ ಬೆಳೆದಿವೆ. ಮಹಂತನ ಹಾಗೆ ಕಾಣುತ್ತಾನೆ. ''

" ಅಕ್ಕ ಈಗಲೂ ಸಪ್ಪಗೆ ಇರುತ್ತಾಳೇನು ? ''

" ಆಕೆ ಸಪ್ಪಗಿದ್ದದ್ದು ನಾನು ನೋಡಿಯೇ ಇಲ್ಲ. ಆವಳಷ್ಟು ನಗೆಗಳಿ ನಮ್ಮ ಮನೆಯೊಳಗೆ ಯಾರಿಗೂ ಇಲ್ಲ. ''

ಪ್ರತಿಯೊಂದು ಉತ್ತರವೂ ವಿದ್ಯೆಯ ಶಂಕೆಯನ್ನು ದೃಢಗೊಳಿಸುತ್ತಿತ್ತು. ಗಾಯತ್ರಿ ಹತ್ತಕ್ಕೆ ಹೊಳೆಯಿಂದ ಬಂದಳು. ಹಿಂದೆ ಹಿಂದೆ ಜ್ಞಾನಶಂಕರರು. ವಿದ್ಯೆ ಕೋಣೆಯಿಂದ ಹೊರಗೇ ಬರಲಿಲ್ಲ. ಆದರೆ ಗಾಯತ್ರಿ ಧಾವಿಸಿಹೋಗಿ ಆವಳನಾಲಂಗಿಸಿ, " ನೀ ಯಾವಾಗ ಬಂದೆ? ಮೊದಲು ಕಾಗದ ಬರೆಯಲೇ ಇಲ್ಲ ? " ಎಂದಳು.

ವಿದ್ಯೆ ಅಪ್ಪುಗೆ ಬಿಡಿಸಿಕೊಂಡು, " ಬರೆದೇನು ಮಾಡುವುದು? ನನ್ನನ್ನು ಕರೆಯಲಿಕ್ಕೆ ಇಲ್ಲಿ ಯಾರಿಗಿತ್ತು ಪುರಸತ್ತು ? '' ಎಂದಳು ಬಿರುಸಾಗಿ.

ಜ್ಞಾನಶಂಕರರು ಪ್ರಶ್ನಾತ್ಮಕ ದೃಷ್ಟಿಯಿಂದ ವಿದ್ಯೆಯ ಮೋರೆ ನೋಡಿದರು. ಉತ್ತರ ಅಲ್ಲಿ ಸ್ಪಷ್ಟವಾಗಿತ್ತು. ಒರೆಯುಚ್ಚಿದ ಕತ್ತಿಯಾಗಿದ್ದಳವಳು! ಕುಶಲ ಪ್ರಶ್ನೆಯ ಶಿಷ್ಟಾಚಾರವಿರಲಿ, ಕಣ್ಣೆತ್ತಿ ನೋಡಲೂ ಇಲ್ಲ. ಆವರ ಮನಸು ಉದ್ವಿಗ್ನವಾಯಿತು. ವಿದ್ಯೆಗೆ ಎಲ್ಲವೂ ತಿಳಿದಿದೆಯೆಂದು ಆವರಿಗೆ ಖಚಿತವಾಯಿತು. ಇನ್ನು ಅವಳು ಸಮಯ ಸಿಕ್ಕೊಡನೆ, ಈರ್ಷ್ಯಾವೇಗದಿಂದ ಗಾಯತ್ರಿಗೆ ಏನೆಲ್ಲವನ್ನೂ ಆಡಿಬಿಡುವಳು, ಅವಳನ್ನು ತಡೆಯುವುದು ತಮ್ಮಿಂದಾಗದ ಮಾತು ಎಂದೆನಿಸಿತು.

ವಿದ್ಯೆ ಗಾಯತ್ರಿಯಿಂದ ದೂರ ನಿಂತು ಆವಳ ಮುಖವನ್ನು ನೋಡಿದಳು. ಆರು ವರುಷಗಳ ಹಿಂದೆ ಬತ್ತಿದ್ದ ಮುಖ ಈಗ ಅರಳಿದ ಕಮಲವಾಗಿತ್ತು. ಉಷಸ್ಸಿನ ಕಾಂತಿ, ಸ್ಫೂರ್ತಿ ಸೂಸುತ್ತಿತ್ತು.

" ಸಂಗೀತ ಸಭೆಯ ಸವಿಯನ್ನು ತುಂಬಾ ಸೂರೆಗೊಂಡಿರಬಹುದು.'' ಮಾತೆತ್ತಿದಳು ಗಾಯತ್ರಿ.

ಜ್ಞಾನಶಂಕರರ ಎದೆ ಹಾರತೊಡಗಿತು. ಅತ್ಯಂತ ದೀನದೃಷ್ಟಿಯಿಂದ ವಿದ್ಯೆಯನ್ನು ನೋಡಿದರು. ಆವಳ ದೃಷ್ಟಿ ನೆಲದ ಮೇಲೆಯೆ. " ನಾನು

ಅತ್ತ ಹಣಕಿಯೇ ಹಾಕಲಿಲ್ಲ. ಆದರೆ ಕಚೇರಿ ನಿಸ್ಸಾರವಾಗಿತ್ತೆಂದು ಕೇಳಿದೆ. ತಂದೆಯವರಿಗೆ ಬಹಳ ಜಡ್ಡು; ಅವರು ಒಮ್ಮೆಯೂ ಹೋಗಲಿಲ್ಲ. ''ಎಂದಳು

" ನಾನು ಬರಲಿಲ್ಲವೆಂದು ಬಹಳ ಸಿಟ್ಟಾಗಿರಬಹುದು. "

'' ಆದರೇನು ಗೊಡವೆ ನಿನಗೆ ? ಅವರ ಸಿಟ್ಟಿನಿಂದ ನಿನ್ನದೇನು ಕೆಡಬೇಕಾಗಿದೆ ? ''

ವಿದ್ಯಾವತಿಯ ಮಾತು ಬಹುಮಟ್ಟಿಗೆ ದ್ವೇಷಮೂಲಕವಾದುದೇ ಇತ್ತು. ಆದರೆ ಕೃಷ್ಣಲೀಲೆಯ ವಿಷಯ ಹೇಳಲು ಉತ್ಸುಕಳಾಗಿದ್ದ ಗಾಯತ್ರಿಗೆ ಆದರ ಪರಿವೆಯೇ ಇಲ್ಲ. ಅವಳೆಂದಳು: ' ಏನು ಹೇಳಲಿ ? ನೀನು ನಿನ್ನೆಯೇ ಬರಲಿಲ್ಲ—ಕೃಷ್ಣಲೀಲೆಯ ಆನಂದ ಪಡೆಯಬಹುದಿತ್ತು. ಊರೆಲ್ಲಾ ಕೊಂಡಾಡುವಂತಾಯಿತು, ಭಗವಂತನ ಕೃಪೆಯಿಂದ. ನನ್ನ ಪಾತ್ರ ಎಲ್ಲಕ್ಕಿಂತ ಮೇಲಾಯಿತು. ಬಾಬೂಜಿಯವರನ್ನು ಕೇಳು, ಊರೊಳಗೆ ಎಷ್ಟು ಹೊಗಳುತ್ತಾರೆ. ಇನ್ನೊಮ್ಮೆ ಇದನ್ನೇ ಆಡುವ ವಿಚಾರವಿದೆ. ಈ ಸಲ ನಿನಗೂ ಒಂದು ಪಾತ್ರ ಕೊಡುತ್ತೇನೆ. ''

" ಬೇಡ, ಕ್ಷಮಿಸು. ನಾಟಕವಾಡಿ ಸ್ವರ್ಗಕ್ಕೆ ಹೋಗುವ ಆಶೆ ನನಗಿಲ್ಲ.

ವಿದ್ಯೆ ಗಾಯತ್ರಿಗೆ ಅನಿಷ್ಟಮಾತುಗಳಾನ್ನುಡುವುದನ್ನು ತಪ್ಪಿಸುವುದಕ್ಕೆ, ಗಾಯತ್ರಿಯನ್ನು ಕೂಡಲೆ ಊರಿಗೆ ಕಳಿಸಬೇಕು, ಅಥವಾ ಅವರಿಬ್ಬರಲ್ಲಿ ಮನಸ್ಸುಕೆಡಿಸಬೇಕು ಎಂದು ಜ್ಞಾನಶಂಕರರು ಯೋಚಿಸುತ್ತಿದ್ದರು. ಆ ಭೇದ ತಾನಾಗಿ ಈಗ ಹುಟ್ಟಿಕೊಂಡುದರಿಂದ ಅವರಿಗೆ ಆನಂದವಾಯಿತು. ಅವರು ಗಾಯತ್ರಿಗೆಂದರು: " ನಿಮಗೆ ಈ ಮನೆಯಲ್ಲಿ ತೊಂದರೆಯಾಗ ಬಹುದು; ಬಂಗಲೆಯಲ್ಲಿ ಒಂದು ಕೋಣೆ ತೆರವು ಮಾಡಿಕೊಡುತ್ತೇನೆ. "

" ಏಕೆ ವಿದ್ಯಾ, ಬಂಗಲೆಗೆ ಹೋಗಲೆ ? ನೀನು ಕೆಟ್ಟನಿಸಿಕೊಳ್ಳುವು ದಿಲ್ಲಷ್ಟೆ ? ನಾನು ಯಾವಾಗಲೂ ಭಜನೆ ಪ್ರಾರ್ಥನೆ ಮಾಡುವವಳು, ನಿನಗೆ ತೊಂದರೆಯಾಗಬಹುದು."ಎಂದು ಗಾಯತ್ರಿ ವಿದ್ಯೆಯ ಮೋರೆ ನೋಡಿದಳು.

'' ನನ್ನ ತೊಂದರೆ ನೋಡಬೇಡಕ್ಕ, ನಾನಷ್ಟು ನಾಜೂಕಿನ ಹೆಣ್ಣಲ್ಲ. ನಿನಗಿಲ್ಲಿ ಅಸಮಂಜಸವೆನಿಸುತ್ತಿದ್ದರೆ ಯಥೇಷ್ಟವಾಗಿ ಹೋಗಬಹುದು. " ವಿದ್ಯೆಯೆಂದಳು.

## ೪೧

ರಾತ್ರಿ ಎಂಟು ಹೊಡೆದಿತ್ತು. ಗಾಯತ್ರಿ ಬಂಗಲೆಯ ತನ್ನ ಕೋಣೆಯಲ್ಲಿ ವೀಣೆ ಬಾಜಿಸುತ್ತ ಹಾಡುತ್ತಿದ್ದಳು ಅಷ್ಟರಲ್ಲಿಯೇ ಜ್ಞಾನಶಂಕರರು ಪ್ರವೇಶಿಸಿದರು. ದೇವಿಯ ವರವನ್ನು ಬೇಡುವ ನಿಶ್ಚಯದಿಂದಲೇ ಇಂದವರು ಬಂದಿದ್ದರು. ಕಬ್ಬಿಣ ಕಾದು ಕೆಂಪಗಾಗಿರುವಾಗಲೇ ಬಡಿಯಬೇಕು; ತಡ ಮಾಡುವಂತಿಲ್ಲ. ವಿದ್ಯೆ ಒಂದೇ ಒಂದು ಸಲ್ಲದ ಮಾತಾಡಿದರೆ ಎಲ್ಲವೂ ತಲೆಕೆಳಗಾಗಬಹುದು. ಏನು ಮಾಡುವುದು, ಹೇಗೆ ವಿಷಯವನ್ನೆತ್ತುವುದೆಂದು ಮಧ್ಯಾಹ್ನದಿಂದಲೂ ಅವರು ಯೋಚಿಸಿದ್ದರು. ತಮ್ಮ ನಿಷ್ಕಾಮವೃತ್ತಿಯ ಹೊದಿಕೆ ಹಾರದಂತೆ ಕೆಲಸವಾಗಬೇಕಿತ್ತು. ಮಾಯಾಶಂಕರನನ್ನು ದತ್ತು ತೆಗೆದುಕೊಳ್ಳುವ ಮಾತನ್ನು ಗಾಯತ್ರಿಯಿಂದಲೆ ಎತ್ತಿಸಬೇಕು; ತಾವು ತೃತೀಯಪುರುಷರಂತೆ ನಿಷ್ಪಕ್ಷಪಾತಿಯಂತಿರಬೇಕು ಎಂಬುದುರ ಎಣಿಕೆ.

"ತಮ್ಮ ಹಾಡಿಕೆಯಲ್ಲಿ ಅದ್ಭುತಮಾಯೆಯಿದೆ; ಕೇಳಿದರೆ ಹೃದಯದಲ್ಲಿ ಪ್ರೇಮದ ಲಹರಿಗಳೇಳುತ್ತವೆ." ಅನುರಾಗಮಯ ದೃಷ್ಟಿಯಿಂದ ಗಾಯತ್ರಿಯನ್ನು ನೋಡುತ್ತ ಜ್ಞಾನಶಂಕರರು ನುಡಿದರು.

ಗಾಯತ್ರಿ ನಕ್ಕು, "ಮಾಯೆ ನನ್ನ ಹಾಡಿಕೆಯಲ್ಲಿಲ್ಲ, ನಿಮ್ಮ ಕೋಮಲ ಹೃದಯದಲ್ಲಿದೆ; ಹೊರಗಿನ ಸಪ್ಪೆ ನೀರಸ ಧ್ವನಿಯೂ ಮಧುರ ಮಂಜುಲವಾಗುತ್ತದೆ." ಎಂದಳು.

"ಇತ್ತೀಚೆ ನನ್ನ ಚಿತ್ತವೇ ಒಂದು ತೆರನಾಗಿದೆ. ಎರಡು ಭಿನ್ನ ಪ್ರವೃತ್ತಿಗಳು ಕೂಡಿ ಇರಲಾರವು, ಒಂದು ಆತ್ಮ ಎರಡು ರೂಪ ಧರಿಸಲಾರದು ಎಂದೆನಿಸುತ್ತಿದೆ."

ವೀಣೆಯನ್ನು ಮೇಜಿನ ಮೇಲಿಟ್ಟು ಜಿಜ್ಞಾಸಾಭಾವರದಿಂದ ಅವರ ಮೋರೆ ನೋಡಿದಳು. ಅವರು ವಿವರಿಸಿದದರು: "ನಾವು ಧರಿಸಿದ ರೂಪದ ಪ್ರಭಾವದಿಂದ ನಮ್ಮ ವಾಸ್ತವಸ್ಥಿತಿ ಲುಪ್ತವಾಗಿಬಿಡುತ್ತದೆ. ಈಗ ನಿತ್ಯವೂ ನನ್ನ ಕಣ್ಣಲ್ಲಿ ಗೋಕುಲ, ಕಿವಿಯಲ್ಲಿ ಕೊಳಲ ದನಿ ತುಂಬಿರುತ್ತವೆ. ನನ್ನ ಅಸ್ತಿತ್ವ ಕೃಷ್ಣನಲ್ಲಿ ಲೀನವಾಗುತ್ತದೆ. ರಾಧೆ ಒಂದು ಕ್ಷಣವೂ ನನ್ನ ಧ್ಯಾನದಿಂದ ಕದಲುವದಿಲ್ಲ. ನನ್ನ ಮನವು ನನ್ನನ್ನೆಲ್ಲಿ ಗೊಯ್ಯುವುದೋ ನಾ ಕಾಣೆ"

ಜ್ಞಾನಶಂಕರರ ಕಣ್ಣುಗಳು ಮಿನುಗಿದವು; ವಾಣಿ ಮಾಧುರ್ಯರಸದಲ್ಲಿ ಮುಳುಗಿತು.— "ಗಾಯತ್ರೀದೇವಿ, ನಾನೆನ್ನುವುದು 'ಸಣ್ಣಬಾಯಿ ದೊಡ್ಡಮಾತು' ಎನಿಸಬಹುದು; ಆದರೆ ಸತ್ಯ. ನನ್ನ ಆತ್ಮೋತ್ಸರ್ಗದ ಅವಸ್ಥೆಯಲ್ಲಿ ನೀವು ವೃಂದಾವನದ ಆ ಸೊಬಗಿನ, ಸವಿನಗೆಯ ಮೃದುಲಭಾವಗಳ ಮೂರ್ತಿ ರಾಧೆಯಾಗಿಯೇ ಕಾಣುತ್ತೀರಿ. ಹೃದಯದಿಂದ ಈ ಭಾವಗಳನ್ನು ಕಿತ್ತೆಸೆಯಬೇಕೆಂದರೆ ಅಸಾಧ್ಯವಾಗಿದೆ. ನೀವು ರಾಣಿ ಗಾಯತ್ರಿ, ನಾನು ನಿಮ್ಮ ತುಚ್ಛಸೇವಕ ಎಂದು ತಿಳಿಯಬೇಕೆನ್ನುತ್ತೇನೆ; ಆದರೆ ಅದು ಪುನಃಪುನಃ ಮರೆತುಹೋಗುತ್ತದೆ. ಇಷ್ಟು ದಿನ ಇದನ್ನು ನಿಮ್ಮಿಂದ ಬಚ್ಚಿಟ್ಟಿದ್ದೆ. ಆದರೆ ಪ್ರೇಮದ ಮಿಡಿತದಿಂದ ಹೃದಯ ಸ್ವರಯುಕ್ತವಾಗುತ್ತಿದೆ. ಈ ಪ್ರೀತಿಯ ಕೊನೆ ಹೇಗಾಗುತ್ತದೋ. ಹೃದಯದಲ್ಲಿ ಈ ಜ್ವಾಲೆಯನ್ನು ಹೊತ್ತಿಸಿದವರೇ ಬಲ್ಲರು."

ಈ ಪ್ರೇಮವೃತ್ತಾಂತವನ್ನು ಕೇಳಿ ಗಾಯತ್ರಿ ಮುಖಚಂದ್ರ ಉಜ್ವಲವಾಯಿತು. ಕಣ್ಣುಗಳು ಉನ್ಮತ್ತವಾದವು. ತನ್ನ ಜೀವನದಲ್ಲಿ ಅವಳಿಗೊಂದು ಹೊಸ ಸ್ಫೂರ್ತಿಯ ಅನುಭವವಾಯಿತು. ತನ್ನಲ್ಲಿ ರಾಧೆ ನೆಲೆಗೊಂಡಿರುವಳೆಂದೆನಿಸಿತು .ಅವಳ ವಾಣಿ ಲಜ್ಜೆಯ ಸರೆಬಿಟ್ಟಿತು. ಈ ಆಧ್ಯಾತ್ಮಿಕರತ್ನದೆದುರು ಇಡೀ ಪ್ರಪಂಚವೇ– ತನ್ನ ಜೀವನ ಕೂಡ ಕೀಳಾಗಿಕಂಡಿತು. ಅವಳೆಂದಳು: "ಪ್ರಿಯತಮ, ನನ್ನ ಹಾಡೂ ಇದೇ ಆಗಿದೆ. ಈ ತಾಪವೇ ನನ್ನನ್ನೂ ಸುಡುತ್ತಿದೆ. ಈ ವೈಮನಗಳು ನಿಮಗಿನ್ನು ಮುಡಿಪು. ನಿಮ್ಮ ಪ್ರೇಮರತ್ನವನ್ನು ಪಡೆದ ನನಗೆ ಆಶೆಯೆಂಬುದೇ ಉಳಿಯಲಿಲ್ಲ ಸಾಂಸಾರಿಕ ಪದಾರ್ಥಗಳಿಂದ ಜೀವ ತಣಿಯಿತು. ನಾನು ರಾಣಿಯಲ್ಲ, ಗಾಯತ್ರಿಯಲ್ಲ, ನಿಮ್ಮ ಪ್ರೇಮಭಿಕ್ಷುಕಿ, ನಿಮ್ಮ ದಾಸಿ ರಾಧೆ ನಾನು. ನೀವು ನನ್ನ ಸ್ವಾಮಿ, ನನ್ನ ಪ್ರಾಣಾಧಾರ, ನನ್ನ ಇಷ್ಟದೇವತೆ."

ಗಾಯತ್ರಿಯ ಕಣ್ಣುಗಳು ಸಜಲವಾದವು. ಭಕ್ತಿಭರದಿಂದ ಜ್ಞಾನಶಂಕರರ ಅಡಿಗಳಮೇಲೆ ಬಿದ್ದುಬಿಟ್ಟಳು. ಅವರು ತಟ್ಟನೆ ಅವಳನ್ನು ಹಿಡಿದೆತ್ತಿ ಎದೆಗಮುಚಿಕೊಂಡರು.

ಅಕಸ್ಮಾತ್ತಾಗಿ ಬಾಗಿಲು ಮೆಲ್ಲನೆ ತೆರೆಯಿತು ಇಬ್ಬರೂ ಬೆಚ್ಚಿ ಅತ್ತ ನೋಡಿದರು. ವಿದ್ಯಾವತಿ ! ಅವರಿಬ್ಬರ ಮೋರೆಯೂ ಹುಚ್ಚಿಟ್ಟು ನೆಲ ನೋಡ

ತೊಡಗಿದರು. ಜ್ಞಾನಶಂಕರರು ಕಪಾಟಿನಿಂದ ಒಂದು ಪುಸ್ತಕವನ್ನು ತೆಗೆದು ಓದತೊಡಗಿದರು; ಗಾಯತ್ರಿ ನಿಂತಲ್ಲೇ ಶಿಲಾಮೂರ್ತಿಯಾದಳು. ಅವಳ ಹಣೆ ಬೆವರಿತು. ನಿಂತ ನೆಲ ತನ್ನನ್ನು ಒಳಕೊಳ್ಳಲೊಲ್ಲದಲ್ಲ ಎಂದೆನಿಸಿತು ಅವಳಿಗೆ. ವಿದ್ಯೆ ತನ್ನನ್ನು ಎಂತಹ ಕುಟಿಲೆ ಎಂದೆಣಿಸಿರಬಹುದು! ಅವಳ ಮುಂದೆ ತನ್ನ ಧರ್ಮನಿಷ್ಠೆಯ ಜಂಬವೆಷ್ಟು, ಪಾತಿವ್ರತ್ಯದ ಬಿನ್ನಾಣವೆಷ್ಟು! ಈಗ ತಾನೇ ಅವಳ ಕಣ್ಣಲ್ಲಿ ಪತಿತೆ, ಕುಲಕಲಂಕಿನಿ! ಛೀ.... ಈ ವಿಚಾರ ಗಾಯತ್ರಿಯ ಹೃದಯವನ್ನು ಕುದಿಸಿತು. ಒಮ್ಮೆಲೆ ಅಳು ಉಕ್ಕಿ ಅವಳು ವಿದ್ಯೆಯ ಕಾಲಮೇಲೆ ಬಿದ್ದಳು.

ವಿದ್ಯಾವತಿ ಈಗ ಬಂದುದು ಕೇವಲ ಯೋಗಾಯೋಗ ತನ್ನ ಕೋಣೆಯಲ್ಲಿ ಕುಳಿತು ಅಕ್ಕನಿಗೇನಾಗಿದೆ? ಈ ಮಹಾಪುರುಷರು ನಿನಗೆ ಪ್ರೇಮ ಭಕ್ತಿಗಳ ಆಸೆ ತೋರಿಸುತ್ತಿದ್ದಾರೆ; ಎಲ್ಲಸ್ಸೋಗು ನಿನ್ನ ಸೊತ್ತಿಗಾಗಿ ಎಂದು ಅವಳಿಗೆ ಹೇಗೆ ತಿಳಿಸಲಿ? ಎಂದು ಯೋಚಿಸುತ್ತಿದ್ದಳು. ಆಗ ಗಾಯತ್ರಿ ಹಾಡುವುದು ಕೇಳಿಸಿತು. ಆ ಸ್ವರಲಾಲಿತ್ಯ, ಆ ಭಾವಮಾಧುರ್ಯ ಅವಳನ್ನು ಮುಗ್ಧಗೊಳಿಸಿತು. ಸತ್ಯವಾದ ಅನುರಾಗ, ಹಾರ್ದಿಕ ವೇದನೆ ಇದ್ದಹೊರತು ಹಾಡಿನಲ್ಲಿ ಈ ಪ್ರಭಾವ, ಈ ವಿರಕ್ತಿ ಬರುವುದು ಅಸಂಭವ ಎಂದವಳಿಗೆ ನಿಸಿತು. ಇವಳಿಗೆ ಮಂತ್ರ ನಾಟಿದೆ; ಈ ಮಂತ್ರವನ್ನು ಇಳಿಸಿಬಿಡುತ್ತೇನೆ; ಇವಳು ಕೊಳ್ಳಕ್ಕೆ ಬೀಳುವುದನ್ನು ಸಾಧ್ಯವಿದ್ದರೆ ತಪ್ಪಿಸುತ್ತೇನೆ; ಎಂದು ಕೊಂಡು ವಿದ್ಯೆ ಎದ್ದುಬಂದದ್ದು.

ಈ ಸದಿಚ್ಛೆಯಿಂದ ಬಂದಿದ್ದಳವಳು. ಆದರೆ ಇಲ್ಲಿಯ ನಿರ್ಲಜ್ಜ ದೃಶ್ಯದಿಂದ ಅವಳ ನೆತ್ತರು ಕುದಿಯಿತು; ಕಣ್ಣುಗಳಿಂದ ಕಿಡಿಗಳು ಸೂಸಿದವು ಆಗ್ನೇಯ ದೃಷ್ಟಿಯಿಂದ ಅವಳು ಗಂಡನನ್ನು ನೋಡಿದಳು. ಅಪಮಾನಕರ ತಿರಸ್ಕಾರ ಶಬ್ದಗಳು ಬಾಯಿಂದ ಧುಮ್ಮಿಕ್ಕಲು ಉತ್ತೇಜಿತವಾಗಿದ್ದವು. ಅಲ್ಲಿ ನಿಂದಿರುವುದು ಅಶಕ್ಯವಾಯಿತವಳಿಗೆ. ತತ್‌ಕ್ಷಣ ಹಿಂದಿರುಗಬೇಕೆನಿಸಿತು. ಆದರೆ ಗಾಯತ್ರಿ ಬಿಕ್ಕಿ ಬಿಕ್ಕಿ ಅಳುತ್ತ ಕಾಲಮೇಲೆ ಬಿದ್ದುದರಿಂದ ಅವಳ ಮನದ ತೀವ್ರತೆ ಅಳಿದುಹೋಯಿತು. ಸ್ನೇಹ ಭಕ್ತಿಗಳ ಆವೇಶದಿಂದ ಆತುರಳಾಗಿ ಕುಳಿತು, ಗಾಯತ್ರಿಯ ತಲೆಯನ್ನೆತ್ತಿ ತನ್ನ ಹೆಗಲಮೇಲಿರಿಸಿಕೊಂಡಳು

ಅಕ್ಕತಂಗಿಯರಿಬ್ಬರೂ ಅತ್ತರು; ಗ್ಲಾನಿಯಿಂದೊಬ್ಬಳು, ಪ್ರೇಮೋದ್ರೇಕದಿಂದೊಬ್ಬಳು.

ಜ್ಞಾನಶಂಕರರ ಬುದ್ಧಿ ಇತ್ತಂಡವಾಗಿತ್ತು. ವಿದ್ಯೆಯ ಮೇಲೆ ಸಿಟ್ಟು ಬರುತ್ತಿತ್ತು; ಏನು ಮಾತಾನಾಡುವುದಕ್ಕೂ ಸಾಹಸವಿಲ್ಲ. ಗಾಯತ್ರಿ ಅಳುವುದನ್ನು ನೋಡಿ ಆವಳ ಮೇಲೂ ಸಿಟ್ಟು ಬರುತ್ತಿತ್ತು. ಅವಳು ಸುಮ್ಮನೆ ನಿಂತಿದ್ದಷ್ಟು ಹೊತ್ತು, ಈ ಗಾಯಕ್ಕೆ ಮದ್ದು ಸಿಕ್ಕುವುದೆಂಬ ಆಶೆಯಿತ್ತು. ಆದರೆ ಗಾಯತ್ರಿ ವಿದ್ಯೆಯ ಕಾಲಮೇಲೆ ಹೋಗಿ ಬಿದ್ದಾಗ ಅವರು ಅಧೀರರಾದರು.

"ನೀನಿಲ್ಲಿ ಬರುವ ಅಗತ್ಯವಿಲ್ಲ. ಈಕ್ಷಣ ಹೊರಟುಹೋದರೆ ಒಳ್ಳೆಯದು; ಇಲ್ಲದಿದ್ದರೆ ಎಳೆದು ಹೊರಗೆ ತಳ್ಳಬೇಕಾಗುವುದು. ನೀನು ಎಷ್ಟೋ ಸಲ ನನ್ನ ಹಾದಿಯಲ್ಲಿ ಮುಳ್ಳಾಗಿದ್ದೀ ಈ ಸಲ ಮಾತ್ರ ಚಿರವಾಗಿ ದೂರಗೊಳಿಸಬೇಕಾಗಿದೆ." ಜ್ಞಾನಶಂಕರರು ಕರ್ಕಶಸ್ವರದಿಂದ ವಿದ್ಯೆಗೆಂದರು.

"ನನ್ನ ಅಕ್ಕನ ಹತ್ತಿರ ನಾನು ಬಂದಿದ್ದೇನೆ. ಆಕೆ ಹೋಗೆನ್ನದೆ ಹೋಗುವವಳಲ್ಲ." ಎಂದು ವಿದ್ಯಾ ತನ್ನ ಭೂಮಿಕೆ ಬದಲಿಸಿ ನುಡಿದಳು.

ಜ್ಞಾನಶಂಕರರು ಮಿಂಚಿನವೇಗದಿಂದ ಅವಳನ್ನು ಹಿಡಿದೆಳೆಯಲು ಬಂದರು. ಕೋಪದಿಂದ ಕಂಪಿಸುತ್ತಿದ್ದರು.

"ನಿಮಗೆ ಇಷ್ಟೇಕೆ ಸಿಟ್ಟೋ ನಾ ಕಾಣೆ ನನ್ನನ್ನು ಕಾಣಲು ಬಂದಿದ್ದಾಳೆ, ಈಗಲೇ ನಾನಿವಳನ್ನು ಕಳಿಸುವುದಿಲ್ಲ." ಗಾಯತ್ರಿ ಗರ್ವದಿಂದ ನುಡಿದಳು. ಅವಳಿಗೀಗ ಸ್ವಜ್ಞಾನ ಮರಳಿತ್ತು ಅವಳ ಸ್ವಾಭಾವಿಕ ಅಭಿಮಾನ ಎಚ್ಚರಿಯತೊಡಗಿತ್ತು.

ಜ್ಞಾನಶಂಕರರೆಂದರು : "ಗಾಯತ್ರೀದೇವಿ, ನೀವು ನಿಮ್ಮನ್ನು ಪೂರಾ ಮರೆತುಬಿಡುತ್ತೀರಿ. ಭಕ್ತಿ–ಪ್ರೇಮಗಳ ವೇದಿಕೆಯಲ್ಲಿ ವರ್ಷಾವಧಿ ಆತ್ಮಸಮರ್ಪಣ ಮಾಡಿಯೂ ನೀವು ಮಮತ್ವದಲ್ಲಿ ಸಿಲುಕುವುದನ್ನು ಕಂಡು ನನಗೆ ವಿಷಾದವಾಗುತ್ತದೆ. ನೀವು ಯಾರು, ನಾನು ಯಾರು, ನನ್ನ ನಿಮ್ಮ ಸಂಬಂಧವೇನು ಎಲ್ಲವನ್ನೂ ನೆನೆಯಿರಿ. ಅದು ಆಧ್ಯಾತ್ಮಿಕ ಸಂಬಂಧ; ಚಿರವಾದ ಸಂಬಂಧ, ಅಚಲವಾದ ಸಂಬಂಧ ಯಾವ ಪಾರ್ಥಿವ ಶಕ್ತಿಯೂ ಅದನ್ನು ಕಡಿಯಲಾರದು. ನಮ್ಮ ಆತ್ಮಿಕ ಐಕ್ಯವನ್ನು ಚೆನ್ನಾಗಿ ತಿಳಿದವರಾಗಿಯೂ

ನನ್ನನ್ನಿಷ್ಟು ಅವಹೇಲನೆ ಮಾಡುತ್ತಿರುವಿರಲ್ಲ! ಯೋಚಿಸಿ ತಿಳಿದೇ, ಅದರಲ್ಲಿಯ ಕಷ್ಟಗಳನ್ನರಿತೂ ನೀವು ಈ ಪ್ರೇಮಪಥದಲ್ಲಿ ಅಡಿಯಿಟ್ಟಿರುವಿರೆಂದು ತಿಳಿದಿದ್ದೆ. ಪ್ರೇಮದ ಮಾರ್ಗ ಕಠಿನವಾದುದು, ದುರ್ಗಮವಾದುದು. ಪ್ರಪಂಚದ ಬಂಧನವಿಲ್ಲದ ಎಡೆಗೆ ತಲುಪಿಸುವುದು."

ಮನೋಭಾವಗಳನ್ನು ಬಚ್ಚಿಡುವುದರಲ್ಲಿ ಜ್ಞಾನಶಂಕರರು ನಿಪುಣರಾಗಿದ್ದರೂ ಈಗವರ ಮುಖದಲ್ಲಿ ಅಂತರಂಗದ ಆಭಾಸ ತೋರಲಿಲ್ಲ. ಅವರು ಅಂತಹ ಮಾತುಗಳನ್ನು ಕೇಳಿದಾಗ ಪ್ರೇಮ ಮುಗ್ಧಳಾಗಿ, ಅಳುತ್ತ ಅವರ ಕಾಲಿಗೆರಗಿ ಕ್ಷಮೆ ಕೋರುತ್ತಿದ್ದ ಗಾಯತ್ರಿ, ಈಗ ಅವರ ಮಾತಿಗೆ ಉತ್ತರವನ್ನೀಯದೆ ವಿದ್ಯೆಯ ಕೈಹಿಡಿದುಕೊಂಡು ಬಾಗಿಲಕಡೆ ಸಾಗಿದಳು. ತಮ್ಮ ಮಂತ್ರ ನಾಟದೆ ಹೋದುದಕ್ಕಾಗಿ ಜ್ಞಾನಶಂಕರರಿಗೆ ತಮ್ಮ ದುರ್ದೈವದಮೇಲೆ ಸಿಟ್ಟುಬಂದಿತು. ಅವರಿಗೆ ಗಾಯತ್ರಿಯಲ್ಲಿ ನಿಜವಾದ ಪ್ರೇಮ ಇಲ್ಲದಿರಬಹುದು: ಆದರೆ ಅವಳ ರೂಪಲಾವಣ್ಯಕ್ಕೆ ಮುಗ್ಧರಾಗಿದ್ದರು. ಗಾಯತ್ರಿ, ಅವ- ಸೊತ್ತು—ಎರಡರಲ್ಲೊಂದನ್ನು ತೆಗೆದುಕೊಳ್ಳಿರೆಂದರೆ, ಅವರು ಸೊತ್ತಿಗೆ ಎರಗುತ್ತಿದ್ದರು ನಿಜ. ಆದರೆ, ಅವಳ ಹೊರತಾದ ಸೊತ್ತು ಅವರಿಗೆ ಉಪ್ಪಿಲ್ಲದ ಊಟವೆಂಬುದೂ ಸತ್ಯ. ಆ ಗಾಯತ್ರಿ ಈಗ ಮೋರೆ ತಿರುವಿಕೊಂಡು ಹೋಗುತ್ತಿದ್ದಾಳೆ. ಈ ಕ್ಷೋಭಜನಕ ವಿಚಾರದಿಂದ ಅವರ ಕಣ್ಣು ನೀರು ದುಂಬಿದವು. ಅವರು ಕುರ್ಚಿಯಲ್ಲಿ ಕುಳಿತು, ಗೋಡೆಯ ಕಡೆ ಮೋರೆಮಾಡಿ ಅಳತೊಡಗಿದರು.

ಅದನ್ನು ಕಂಡೊಡನೆ ಗಾಯತ್ರಿ ಬಾಗಿಲಲ್ಲೇ ನಿಂತುಬಿಟ್ಟಳು. ಒಂದು ಕ್ಷಣ ಮೊದಲು ಅವಳಲ್ಲಿ ಹೊತ್ತಿದ್ದ ಆತ್ಮರಕ್ಷಣೆಯ ಅಗ್ನಿ ಈ ಕಣ್ಣೀರಿಂದ ನಂದಿಹೋಯಿತು. ಲಜ್ಜೆ–ಗ್ಲಾನಿಗಳ ಮೋಡ ಹರಿಯಿತು. ಪ್ರೇಮಚಂದ್ರನು ತೊಳಗಿದನು. ಅವಳ ಹೊರಗಿನ ಅಡಿ ಒಳಗೆ ಬಿತ್ತು. ಅವಳು ಮರಳಿಬಂದು ವಸ್ತ್ರದಿಂದ ಅವರ ಕಣ್ಣೊರಸಿದಳು. ಅವುಗಳಲ್ಲಿ ಪ್ರೇಮದ ಅಗಾಧಸಾಗರವೇ ಕಂಡಿತು.

"ನನ್ನನ್ನು ಕ್ಷಮಿಸಿರಿ!" ಎಂದಳು ಗಾಯತ್ರಿ.

"ನನ್ನಿಂದ ಕ್ಷಮೆ ಕೋರುವಿರೊ? ಅನ್ಯಾಯ. ನೀವು ಪ್ರೇಮದೇವಿ, ನಿರ್ದೋಷ ನಿಷ್ಕಲಂಕರು. ನೀವು ಅಸ್ಥಿರಚಿತ್ತರಾದುದಕ್ಕೇ ನನಗೆ ದುಃಖವಾಗಿದೆ. ನನಗೀಗಲೂ ಭ್ರಮೆಯಾಗುತ್ತಿದೆ–ನಾನು ಮಾತನಾಡುತ್ತಿರುವುದು

ಗಾಯತ್ರೀದೇವಿಯೊಡನೆಯೋ ರಾಧೆಯೊಡನೆಯೋ ಎಂದು. ನಮ್ಮ ಪ್ರೇಮಧ್ವನಿಯಿಂದ ವೃಂದಾವನದ ವೃಕ್ಷಕುಂಜಗಳು ಗುಂಜಿತವಾಗುವವು, ನಮ್ಮ ಪ್ರೇಮಗಾನದಿಂದ ಕಾಳಿಂದಿಯ ಅಲೆಗಳು ಪ್ರತಿಧ್ವನಿತವಾಗುವವು ಎಂದೆಣಿಸಿಕೊಳ್ಳುತ್ತಿದ್ದೆ. ಎಂತಹ ಸವಿಗನಸು! ಆದರೀಗ ಈ ಶುಭಕಾಮನೆಗಳೆಲ್ಲ ಮನಸೊಳಗೇ ಉಳಿದು ಶೀಘ್ರದಲ್ಲಿಯೆ ನಾನು ಭಗ್ನಹೃದಯನಾಗಿ ಪ್ರಪಂಚದಿಂದ ಬೀಳ್ಕೊಳ್ಳುವೆನೆಂದು ಎನಿಸುತ್ತಿದೆ.''

ಗಾಯತ್ರಿ ಪ್ರೇಮೋನ್ಮತ್ತಳಾಗಿ ನುಡಿದಳು· "ಪ್ರಭೊ, ಇಂತಹ ಮಾತಾಡಬೇಡಿ ದೀನ ಅಬಲೆ ನಾನು; ಅಜ್ಞಾನದಲ್ಲಿ ಮುಳುಗಿದವಳು; ಮಿಥ್ಯಾಭ್ರಮೆಗೆ ಈಡಾಗಿಬಿಡುತ್ತೇನೆ. ನನ್ನ ದೌರ್ಬಲ್ಯಗಳನ್ನೆಲ್ಲ ಕ್ಷಮಿಸಬೇಕು. ನಿಮ್ಮಡಿಗಳನ್ನು ಹೊಂದಿಕೊಂಡಿರಬೇಕೆಂದೇ ನನಗೂ ಅಭಿಲಾಷೆ. ನಿಮಗಾಗಿ ಇತರ ಎಲ್ಲ ಸಂಬಂಧಗಳನ್ನೂ ಕಡಿದೊಗೆಯುವೆ ನನ್ನ ಪ್ರಾಪಂಚಿಕ ಆಶೆಯೆಂದರೆ ಇಷ್ಟೆ: ನನ್ನ ನಾಡಿನ ಆಡಳಿತ ಯೋಗ್ಯರ ಕೈಯಲ್ಲಿರಬೇಕು· ಪ್ರಜೆಗಳಿಗೆ ಅನ್ಯಾಯವಾಗಬಾರದು; ಉತ್ಪನ್ನ ಪರಮಾರ್ಥದಲ್ಲಿ ಸಾರ್ಥಕವಾಗಬೇಕು. ಇಷ್ಟಾಗಿಬಿಟ್ಟರೆ ಚಿಂತೆ ತಪ್ಪಿತು; ಆಮೇಲೆ ನಮ್ಮಲ್ಲಿ ವಿಚ್ಛೇದ ಎಂದೂ ಬರಲಾರದು ಶಾಶ್ವತ ಟ್ರಸ್ಟ್ ಮಾಡಬೇಕೆಂದು ನನ್ನ ಅಭಿಪ್ರಾಯ; ಪತಿದೇವರ ವಿಚಾರವೂ ಹೀಗೆಯೆ ಇತ್ತು."

"ಇಂತಹ ಟ್ರಸ್ಟ್ ಮಾಡುವುದು ಕಠಿನ ಎಂತಹ ನಿಸ್ಪೃಹರನ್ನಾಯ್ದು ನಿಯೋಗಿಸಿದರೂ ಅವರು ಅವಕಾಶ ಸಿಕ್ಕರೆ ಸ್ವಾರ್ಥವನ್ನು ಸಾಧಿಸಿಕೊಳ್ಳದೆ ಬಿಡಲಿಕ್ಕಿಲ್ಲ ಅದಕ್ಕಿಂತ, ನಿಮ್ಮಲ್ಲಿ ಶ್ರದ್ಧೆ–ಪೂಜ್ಯಭಾವ ಉಳ್ಳವರನ್ನು, ನಿಮ್ಮ ಒಲವಿನಂತೆ ಪಳಗಿದವರನ್ನು, ನಿಮ್ಮನ್ನು ತಾಯಿಯೆಂದು ಭಾವಿಸುವವರನ್ನು ನಿಯೋಜಿಸುವುದು ಒಳ್ಳೆಯದು. ಇಂತಹ ಯಾವುದೊಂದು ಹುಡುಗ ನಿಮ್ಮ ದೃಷ್ಟಿಯಲ್ಲಿದ್ದರೆ ದತ್ತು ತೆಗೆದುಕೊಳ್ಳಬೇಕೆಂದು ನನಗೆನಿಸುತ್ತದೆ. ಇದಕ್ಕಿಂತ ಒಳ್ಳೆಯ ದಾರಿ ನನಗಂತೂ ಕಾಣುವುದಿಲ್ಲ ಅವನಿಗೆ ಮೊದಲು ಕೆಲದಿನ ಮಾರ್ಗದರ್ಶನ ಮಾಡಬೇಕಾದೀತು ಅಷ್ಟೆ. ಆಮೇಲೆ ನಾವು ನಿಶ್ಚಿಂತರಾಗಿರಬಹುದು.''

ರಾಧಾಕೃಷ್ಣರ ಆನಂದಮಯ ಜೀವನದ ಕಲ್ಪನೆಯಿಂದ ಗಾಯತ್ರಿ ಪುಲಕಿತಳಾದಳು. ಗಂಡನ ಮೃತ್ಯುಪತ್ರದ ಮಾತು ಮರೆತುಬಿಟ್ಟಳು.

"ನೀವೆನ್ನುವುದು ಸರಿ. ಟ್ರಸ್ಟಿಗಳದೇನು ನೆಚ್ಚಿಗೆ? ಮನುಷ್ಯನನ್ನು ಒಳಹೊಕ್ಕು ಕಂಡವರಾರು?" ಎಂದಳು. ಒಂದೆರಡು ನಿಮಿಷ ಅವಳು ಮೌನವಾಗಿ ವಿಚಾರಮಾಡಿದಳು. ಮಾಯಾಶಂಕರ ಅವಳ ಕಣ್ಮುಂದೆ ಸುಳಿದ. ಆದರೆ ಆ ಹೆಸರು,—ಜ್ಞಾನಶಂಕರರ ಮರ್ಯಾದಾಶೀಲ ಹೃದಯಕ್ಕೆ ಎಲ್ಲಿ ತಾಕುವುದೋ ಎಂದು—ಬಾಯವರೆಗೆ ಬಂದುದು ಅಲ್ಲಿಯೇ ತಡೆಯಿತು.

"ಏನು, ಯಾವನಾದರೂ ಇದ್ದಾನೆಯೆ?" ಗಾಯತ್ರಿಯ ದ್ವಿಧಾಭಾವವನ್ನು ಕಂಡು ಜ್ಞಾನಶಂಕರರು ಕೇಳಿದರು.

"ಹೇಳಲೇ? ಕೆಟ್ಟೆನಿಸಿಕೊಳ್ಳುವುದಿಲ್ಲವಷ್ಟೆ?"

"ಇಲ್ಲ, ಹೇಳಿರಿ."

"ಮಾಯಾಶಂಕರ."

ಜ್ಞಾನಶಂಕರರು ಕಿವಿಯ ಬಳಿ ಗುಂಡುಹಾಯ್ದಂತೆ ಬೆಚ್ಚಿಬಿದ್ದು, ವಿಸ್ಮಯದೃಷ್ಟಿಯಿಂದ ಅವಳ ಕಡೆ ನೋಡುತ್ತ, "ಮಾಯಾಶಂಕರ?!" ಎಂದರು.

"ಹೌದು, ನೀವು ಒಪ್ಪಲೇ ಬೇಕು."

"ಸಾಧ್ಯವಿಲ್ಲವೆಂದು ನಿರುಪಾಯನಾಗಿ ಹೇಳಬೇಕಾಗಿದೆ."

"ನನಗೆ ಮೊದಲೇ ಗೊತ್ತಿತ್ತು. ಆದರೆ ನಮ್ಮ ನಿಮ್ಮ ಸಂಬಂಧ ನೆನೆದರೆ, ನಿಮ್ಮ ಅಡ್ಡಿಯಿರಬಾರದು."

"ನನ್ನ ಅಡ್ಡಿಯೇನೂ ಇಲ್ಲ. ಆದರೆ, ನಮ್ಮ ಕುಲಮರ್ಯಾದೆ ನಿಮಗೆ ಗೊತ್ತೇ ಇದೆ; ನಮ್ಮ ಕಕ್ಕ, ಇತರ ಬಳಗದವರು ಒಪ್ಪಲಾರರು; ವಿದ್ಯೆಯಂತೂ ಇದನ್ನು ಕೇಳಿದರೆ ವಿಷ ಕುಡಿದೇ ಸಾಯುವಳು."

"ಅದನ್ನು ನಾನು ನೋಡಿಕೊಳ್ಳುತ್ತೇನೆ."

ಜ್ಞಾನಶಂಕರರು ದೊಡ್ಡ ತ್ಯಾಗ ಮಾಡುತ್ತಿರುವವರಂತೆ ಕ್ಷಣಹೊತ್ತು ನೆಲದಕಡೆ ನೋಡುತ್ತಿದ್ದು, ಸಜಲನೇತ್ರರಾಗಿ ಮಾತನಾಡಿದರು. "ನಿಮ್ಮಿಷ್ಟ. ನಿಮ್ಮಪ್ಪಣೆ ಶಿರೋಮಾನ್ಯ. ಅವನು ಇಂದಿನಿಂದ ನನ್ನ ಮಗನಲ್ಲ, ನಿಮ್ಮ ಮಗ. ಏಕಮಾತ್ರ ಪುತ್ರನನ್ನು ಕೊಡುವಾಗ ನನಗಾಗುವ ದುಃಖವನ್ನು ನಾನೇ ಬಲ್ಲೆ. ಆದರೆ ವೃಂದಾವನವಿಹಾರಿಯೇ ನಿಮ್ಮ ಹೃದಯದಲ್ಲಿ ಹೊಕ್ಕು

ಈ ಮಾತು ನುಡಿಸುತ್ತಿದ್ದಾನೆ; ನಮ್ಮನ್ನು ತನ್ನ ಚರಣಸನ್ನಿಧಿಗೆ ಕರೆಯು ತ್ತಿದ್ದಾನೆ. ಇದು ನಮ್ಮ ಪರಮಸೌಭಾಗ್ಯ."

## ೪೨

ದತ್ತಕ ವಿಧಿ ಜರುಗಿತು. ಅಂದು ಇಡೀದಿನ ಮಾಯಾಶಂಕರನ ಆನಂದಕ್ಕೆ ಪಾರವೇ ಇಲ್ಲ. ಆ ಉಬ್ಬಿನಲ್ಲಿಯೇ ಧಾರ್ಮಿಕ ವಿಧಿಗಳು ಮುಗಿದವು; ಭೋಜನ ಸಮಾರಂಭ ನಡೆಯಿತು; ಸಂಗೀತ ಸಭೆ ಸೇರಿತು. ಹಾಡು ಕೇಳುತ್ತ ಕುಳಿತಾಗ ಪಕ್ಕನೆ ಅವನಿಗೆ ನೆನಪಾಯಿತು—ಅವ್ವನಿಗೆ ನಮಸ್ಕಾರವನ್ನೇ ಮಾಡಿಲ್ಲ ಎಂದು. ಕೂಡಲೇ ಅಲ್ಲಿಂದೆದ್ದು ಹೊರಟ. ತನ್ನನ್ನು ಆವಳೆಷ್ಟು ಸಂತಸದಿಂದ ಹರಸಬಹುದು, ಅಪ್ಪಿಕೊಳ್ಳಬಹುದು, ತನ್ನ ರೇಶಿಮೆ ಬಟ್ಟೆಗಳನ್ನು ಹಿಗ್ಗಿನಿಂದ ಬಣ್ಣಿಸಬಹುದು! ಒಳಗಿನ ಈ ಹರುಷವೇ ಮೊಗದಲ್ಲರಳಿ ಕಂಗೊಳಿಸುತ್ತಿತ್ತು. ಈ ಉಬ್ಬಿನಲ್ಲಿಯೇ ಅವನು ತಾಯಿಯ ಕೋಣೆ ಪ್ರವೇಶಿಸಿದ ತಾಯಿ ಮಂಚದಮೇಲೆ ಬಿದ್ದುಕೊಂಡಿದ್ದಳು. ಗೋಡೆದೀವಿಗೆಯ ಮಂದಪ್ರಕಾಶವಿತ್ತು. ದಾಸಿಯರೆಲ್ಲ ಹಾಡು ಕೇಳಲು ಹೋಗಿದ್ದರು. ಮಾಯಾಶಂಕರ ಮಂಚದ ಬಳಿ ಹೋದ ತಾಯಿಯ ತಲೆ ಗೂದಲು ಹರಡಿದ್ದವು; ಮುಖ ಕಳೆಗುಂದಿತ್ತು; ತುಟಿಗಳು ಬತ್ತಿದ್ದವು; ಕಣ್ಣು ಗಳಲ್ಲಿ ಕಂಬನಿಯ ಕೋಡಿ.

"ಅವ್ವಾ! ಅವ್ವಾ!" ಮಾಯಾಶಂಕರ ಗಾಬರಿಯಿಂದ ಕೂಗಿದ.

ವಿದ್ಯೆ ಕಣ್ತೆರೆದಳು. ಕ್ಷಣಹೊತ್ತು ಮೌನವಾಗಿ ದಿಟ್ಟಿಸಿದಳು— ತನ್ನ ಕಣ್ಣನ್ನು ನಂಬದವಳಂತೆ. ಬಳಿಕ ಎದ್ದು ಕುಳಿತು ಅವನನ್ನು ಬರಸೆಳೆದಪ್ಪಿ, ಸೆರಗು ಹೊಚ್ಚಿದಳು - ಯಾವುದೋ ಆಘಾತದಿಂದ ರಕ್ಷಿಸುತ್ತಿರುವಳೋ ಎಂಬಂತೆ. ಗದ್ಗದಸ್ವರದಿಂದ ಅವಳೆಂದಳು: "ಬಾ ಮಗೂ ಮುದ್ದು ಕಂದಾ! ನಿನ್ನನ್ನು ಕಣ್ತುಂಬ ನೋಡುವೆ. ನನ್ನೆದುರಿಗೇ ಕುಳಿತುಕೊ. ನಿನ್ನನ್ನು ಹೋಗಗೊಡುವುದಿಲ್ಲ. ನೋಡು, ನೋಡು, ನಿನ್ನನ್ನು ಎಳೆದೊಯ್ಯಲು ಬರುತ್ತಿದ್ದಾರೆ— ಅವರು ನಿನ್ನ ಹಡೆದವರು— ನಿನ್ನ ಮೇಲೆ ದಯವಿಲ್ಲ ಅವರಿಗೆ. ನಾನು ಬಾಗಿಲು ಮುಚ್ಚಿಬಿಡುತ್ತೇನೆ. ನೀನು ಇಲ್ಲೇ "ಕುಳಿತಿರು.

ವಿದ್ಯೆ ಬಾಗಿಲ ಕಡೆ ಹೊರಟಳು. ಆದರೆ ಕಾಲು ತತ್ತರಿಸಿದವು— ಅಚೇತನಳಾಗಿ ಬಿದ್ದುಬಿಟ್ಟಳು. ಈ ದೃಶ್ಯವನ್ನು ಕಂಡು, ತಾಯಿಯ ಬಿಕ್ಕಳಿಕೆಯ ಮಾತು ಕೇಳಿ ಮಾಯಾಶಂಕರ ನಡುಗಿದ. ಅಂಜಿ ದಿವಾಣಖಾನೆಗೆ ಓಡಿದ.

ಇನ್ನೊಂದು ಕ್ಷಣದಲ್ಲಿ ಎಲ್ಲರೂ ಅಲ್ಲಿ ನೆರೆದರು. ಜ್ಞಾನಶಂಕರರು ಶೈತ್ಯೋಪಚಾರದಿಂದ ವಿದ್ಯೆಯನ್ನೆಚ್ಚರಿಸಿದರು. ಅವಳು ಕಣ್ತೆರೆದು ಗಂಡನನ್ನು ಕಾಣುತ್ತಲೇ ಚೆಟ್ಟನೆದ್ದು ಹೊರಕ್ಕೆ ಧಾವಿಸಿದಳು.

ಗಾಯತ್ರಿ, " ವಿದ್ಯಾ, ಗುರುತಿಸಲಿಲ್ಲವೇ— ಜ್ಞಾನಶಂಕರಬಾಬು! " ಎಂದಳು.

ವಿದ್ಯೆ ನಿಂತು ಸಶಂಕ-ಭಯಭೀತ ನೇತ್ರಗಳಿಂದ ಜ್ಞಾನಶಂಕರರನ್ನು ದಿಟ್ಟಿಸಿದಳು. " ಅಯ್ಯೊ, ಮತ್ತೆ ಬಂದರೇ ಇವರು! ದಯವಿಟ್ಟು ನನ್ನನ್ನು ಇವರಿಂದ ಉಳಿಸಿರಿ! "

" ಇನ್ನೂ ಗುರುತು ಹತ್ತದೇ— ಬಾಬೂಜಿ! "

" ಅಲ್ಲಲ್ಲ, ಪಿಶಾಚಿ! ನೋಡು, ಎಸ್ಟುದ್ದ ಕೂದಲು, ಹಲ್ಲು ತೆರೆದು ನನ್ನ ಕಡೆ ಓಡಿಬರುತ್ತದೆ! ಆಯ್ಯೋ ಇದನ್ನು ಓಡಿಸಿರಿ!... ಆಕಾ, ನನ್ನ ಮಾಯಾನನ್ನು ಹಿಡಿದುಕೊಂಡಿತು;— ಬಲಿಕೊಡುತ್ತದಂತೆ! ಬಿಡು ಬಿಡು ದುಷ್ಟ! "

ಎನ್ನುತ್ತ ಅವಳು ಮತ್ತೆ ಎಚ್ಚರುದಪ್ಪಿ ಬಿದ್ದಳು. ಜ್ಞಾನಶಂಕರರು ಲಜ್ಜಾಯುಕ್ತ ಚಿಂತೆಯಿಂದ, " ವಿಷ ತೆಗೆದುಕೊಂಡುಬಿಟ್ಟಿದ್ದಾಳೆ. ಪ್ರಿಯನಾಥ ಡಾಕ್ಟರನ್ನು ಕರಕೊಂಡು ಬರುತ್ತೇನೆ " ಎಂದು ನುಡಿದು ಹೊರಟು ಹೋದರು.

ಶ್ರದ್ಧೆ ವಿದ್ಯೆಯ ತಲೆಯನ್ನು ತೊಡೆಯಮೇಲಿಟ್ಟುಕೊಂಡು ಕುಳಿತಳು. ಗಾಯತ್ರಿ ಗಾಳಿ ಹಾಕತೊಡಗಿದಳು. ಮಾಯಾ ಅಳುತ್ತ ನಿಂತ. ಇದ್ದವರೆಲ್ಲರೂ ಅವಳನ್ನು ಎಚ್ಚರಿಸುವ ಪ್ರಯತ್ನದಲ್ಲೇ ತೊಡಗಿದ್ದರು. ಯಾರ ಬಾಯಲ್ಲೂ ಮಾತು ಹೊರಡುತ್ತಿರಲಿಲ್ಲ. ಅರ್ಧಗಂಟೆಯ ಮೇಲೆ ಅವಳು ಕಣ್ತೆರೆದು ಸುತ್ತಲೂ ನೋಡಿ ಸನ್ನೆಯಿಂದ ನೀರು ಬೇಡಿದಳು. ಶ್ರದ್ಧೆ ಲಗುಬಗೆಯಿಂದ ನೀರಿನ ತಾಲಿಯನ್ನು ವಿದ್ಯೆಯ ಬಾಯಿಗೆ ಹಿಡಿದಳು.

ಕುಡಿಯುವುದಕ್ಕೆಂದು ಅವಳು ಬಾಯಿ ತೆರೆದಳು. ಅವರೆ ತೆರೆದ ಬಾಯಿ ತಿರುಗಿ ಮುಚ್ಚಲೇ ಇಲ್ಲ. ಕಣ್ಣು ಬೊಂಬೆಗಳು ತಿರುಗಿದವು.

"ಅಕ್ಕಾ, ಯಾರಿಗೇನಾದರೂ ಹೇಳುವುದಿದೆಯೇ? ಮಾಯಾ ಎದುರಿಗೇ ನಿಂತಿದ್ದಾನೆ." ಕೊನೆಯ ಕ್ಷಣವೆಂದರಿತು ಶ್ರದ್ಧೆ ಮಾತಾಡಿಸಿದಳು.

ವಿದ್ಯೆಯ ನಂದಿದ ಕಣ್ಣುಗಳು ಶ್ರದ್ಧೆಯ ಕಡೆ ತಿರುಗಿದವು; ಒಂದೆರಡು ಕಂಬನಿಗಳುದುರಿದವು. ಶರೀರ ಕಂಪಿಸಿತು. ದೀಪ ಆರಿಹೋಯಿತು.

ವಿದ್ಯೆ ಎಷ್ಟು ಸುಶೀಲಳು, ಎಷ್ಟು ಒಳ್ಳೆಯವಳು ಎಂಬುದು ಆಕೆ ಸತ್ತ ಮೇಲೆ ವಿದಿತವಾಯಿತು. ಊರಿನ ಹೆಂಗುಸರೆಲ್ಲ ಬಂದು ಶ್ರದ್ಧೆಯ ಎದುರು ಅತ್ತು ಹೋಗುತ್ತಿದ್ದರು. ಗಾಯತ್ರಿ ಆ ಹೆಂಗುಸರಿಂದ ಆದಷ್ಟೂ ಮುಖ ತಪ್ಪಿಸುತ್ತಿದ್ದಳು. ಅವಳು ಯಾವಾಗಲಾದರೂ ಬಂದರೆ ಎಲ್ಲರೂ ಸುಮ್ಮನಾಗಿ ಅವಳ ಅವಹೇಳನೆ ಮಾಡುತ್ತಿದ್ದರು. ಒಮ್ಮೆ ಅವಳಿದ್ದಾಗಲೇ ಶ್ರದ್ಧೆ, "ಸಂಪತ್ತಿತ್ತು, ಸಂತತಿ ಇತ್ತು; ಆದರೂ ಜೀವ ತೆಗೆದುಕೊಳ್ಳುವಂತಹ ಯಾವ ವಿಷಮುಳ್ಳು ಅವಳ ಹೃದಯದಲ್ಲಿ ನೆಟ್ಟಿತ್ತೋ ನಾ ಕಾಣೆ!" ಎಂದಳು. ಆ ಮುಳ್ಳು ಯಾವುದು ಎಂಬ ವಿಷಯದಲ್ಲಿ ನೆರೆದ ಹೆಂಗುಸರ ಮಾತಿನಂತೆ ಅವರ ಕಣ್ನೋಟವೇ ಸಶಬ್ದವಾಗಿತ್ತು. ಗಾಯತ್ರಿ ಒಳಗೊಳಗೇ ಸಂಕಟಪಟ್ಟಳು.

ವಾಸ್ತವವಾಗಿ, ವಿದ್ಯೆಯ ಸಾವಿನಿಂದ ಊರ ಹೆಂಗುಸರಿಗಾದ ದುಃಖಕ್ಕಿಂತ ಗಾಯತ್ರಿಯ ದುಃಖ ಎಷ್ಟೋ ಹೆಚ್ಚಿತ್ತು. ತನ್ನ ಕೈ ರಕ್ತ ಕಲಂಕಿತವಾಗಿರುವಂತೆ ಅವಳಿಗೆನಿಸುತ್ತಿತ್ತು. ಭಕ್ತಿಯ ಉಚ್ಚ ಆದರ್ಶದಿಂದ ತಾವು ಬಿದ್ದುದಕ್ಕೆ ಈ ದುರ್ಘಟನೆಯೊಂದು ಪ್ರಮಾಣವೆಂದು ಅವಳಿಗೆನಿಸುತ್ತಿದ್ದಳು. ಬರುಬರುತ್ತ ಭಕ್ತಿ–ಪ್ರೇಮಗಳಲ್ಲಿ ಅವಳಿಗೆ ಅರುಚಿಯುಂಟಾಯಿತು. ಜ್ಞಾನಶಂಕರರ ಭೆಟ್ಟಿಯಲ್ಲಿ ಅವಳು ಮುಕ್ತಮನಸ್ಕಳಾಗಿ ಇರುತ್ತಿರಲಿಲ್ಲ. ವಿದ್ಯೆಯ ದಹನಕ್ರಿಯೆಯನ್ನು ಜ್ಞಾನಶಂಕರರು ಮಾಡಿರಲಿಲ್ಲ, ಚಿತೆಗೆ ಕೊಳ್ಳಿಕೂಡ ಕೊಟ್ಟಿರಲಿಲ್ಲ; ಎಲ್ಲವನ್ನೂ ಬ್ರಾಹ್ಮಣನಿಂದ ಮಾಡಿಸಿದ್ದರು. ಈ ಅಸಜ್ಜನಿಕೆಗೂ ಅವಳ ಮನಸು ಹೇಸಿತ್ತು.

ಎರಡು ತಿಂಗಳು ಕಳೆದವು. ಗಾಯತ್ರಿಯ ವಿಷಯದಲ್ಲಿ ಹೆಂಗುಸರ ವಿಶ್ವಾಸ ಹೆಚ್ಚುತ್ತ ಅವಳೂ ಆ ಸಮಾಜದ ಪ್ರಧಾನ ಪಾತ್ರವಾದಳು. ಅಲ್ಲಿ ನಡೆಯುತ್ತಿದ್ದ ಜ್ಞಾನಶಂಕರರ ಚರಿತ್ರೆಯ ಚರ್ಚೆಯಿಂದ, ಅವರಲ್ಲಿ ಅವಳಿಟ್ಟಿದ್ದ ಗೌರವ ಕಡಿಮೆಯಾಗುತ್ತಬಂದಿತು. 'ಜ್ಞಾನಶಂಕರನಿಂದ ಜೋಕೆ' ಎಂದು ಹೇಳಿದ ತಂದೆಯ ಮಾತಿನಲ್ಲಿ ಅರ್ಥವಿತ್ತೆಂದು ತೋರತೊಡಗಿತು ಇದೆಲ್ಲ ಜ್ಞಾನಶಂಕರರ ಸ್ವಾರ್ಥಸಾಧನೆಯ ಸೋಗು ಎಂಬ ಸಂದೇಹವೂ ಮೂಡಿತು. ಹಿಂದಿನ ಅನೇಕ ವಿಷಯಗಳು ನೆನಪಾಗಿ ಈ ಸಂದೇಹವನ್ನು ಬಲಪಡಿಸುತ್ತಿದ್ದವು.

ಗಾಯತ್ರಿಯ ಈ ಚಿತ್ತವೃತ್ತಿ ಜ್ಞಾನಶಂಕರರನ್ನು ಚಿಂತೆಗೀಡು ಮಾಡಿತ್ತು. ಅವಳ ಮನೋಮಾಲಿನ್ಯವನ್ನು ತೊಡೆದುಹಾಕಲು ಏಕಾಂತ ಮಿಲನ ಅವಶ್ಯ. ಅದಕ್ಕಾಗಿ ಅವಳನ್ನು ಗೋರಖಪುರಕ್ಕೆ ಕರೆದೊಯ್ಯುವುದೊಂದೇ ದಾರಿ. ಅವಳೆದುರು ಅದನ್ನು ಪ್ರಸ್ತಾಪಿಸಲು ಬಾಯಿ ಬರದು. ಮಾಯಾಶಂಕರನನ್ನು ದತ್ತುತೆಗೆದುಕೊಳ್ಳುವುದರಿಂದ ವಿಶೇಷಲಾಭವಿಲ್ಲ. ಇನ್ನೂ ೩೫ ವರುಷದ ಅವಳು ೪೫ ವರುಷ ಬಾಳಲಾರಳೆಂಬುದಕ್ಕೆ ಕಾರಣವಿಲ್ಲ. ಆದುದರಿಂದ ಭಕ್ತಿಪ್ರೇಮಗಳ ವಶೀಕರಣ ಮಂತ್ರದಿಂದಲೇ ಗಾಯತ್ರಿಯನ್ನು ವಶದಲ್ಲಿರಿಸಿಕೊಳ್ಳಬೇಕೆಂದು ಜ್ಞಾನಶಂಕರರು ಬಯಸುತ್ತಿದ್ದರು.

ಒಂದು ದಿನ ಒಂದು ಕಾಗದವನ್ನು ತೆಗೆದುಕೊಂಡು ಗಾಯತ್ರಿಯ ಹತ್ತಿರ ಬಂದು, "ಗೋರಖಪುರದಿಂದ ಅಗತ್ಯದ ಪತ್ರ ಬಂದಿದೆ. ಸುಗ್ಗಿಯ ಕಾಲ; ಈಗ ನಾವು ಬರದಿದ್ದರೆ ಕೈಗೆ ಬಂದದ್ದು ಬಾಯಿಗೆ ಬರದೆ ಹೋಗುತ್ತದೆ ಎಂದು ಬರೆದಿದ್ದಾರೆ," ಎಂದರು.

ಗಾಯತ್ರಿ, "ಇದಕ್ಕೆ ಹಿಂದುಗಡೆ ಉತ್ತರ ಕೊಡುತ್ತೇನೆ ಮೊದಲು ನನ್ನ ಪತ್ರಗಳನ್ನು ನೀವೇಕೆ ಒಡೆಯುತ್ತೀರಿ—ಅದನ್ನು ಹೇಳಿರಿ," ಎಂದಳು ಸಿಟ್ಟಿನಿಂದ.

ಜ್ಞಾನಶಂಕರರು ಒಮ್ಮೆಲೆ ಸ್ತಬ್ಧರಾಗಿಬಿಟ್ಟರು. "ಇಷ್ಟು ಘನಿಷ್ಠ ಆತ್ಮೀಯತೆಯಲ್ಲಿ ಈ ಶಿಷ್ಟಾಚಾರದ ಅಗತ್ಯವಿಲ್ಲ ಎಂದುಕೊಂಡಿದ್ದೆ. ನಿಮಗೆ ಸೇರದಿದ್ದರೆ ಇಂತಹ ತಪ್ಪು ಮುಂದೆ ಆಗುವುದಿಲ್ಲ." ಎಂದರು.

"ಮೊಕ್ತಿಯಾರರಿಗೆ ಬರೆದುಬಿಡಿರಿ– ನಮಗೀಗಲೇ ಬರಲಿಕ್ಕಾಗುವುದಿಲ್ಲ, ಎಸ್ಟೇಟಿನ ಕೆಲಸ ಆರಂಭವಾಗಲಿ."

"ನಾವು ಅಲ್ಲಿರುವುದು ಅಗತ್ಯವೆಂದು ನನಗೆನಿಸುತ್ತದೆ."

"ನೀವು ಹೋಗಿರಿ, ನಾನೇತಕ್ಕೆ? ನನಗೆ ಇನ್ನೂ ಕೆಲ ದಿನ ಇಲ್ಲಿರುವ ಇಚ್ಛೆಯಿದೆ."

ಜ್ಞಾನಶಂಕರರು ಭಕ್ತಿ–ಪ್ರೇಮರಸಗಳನ್ನು ಹರಿಸಿದರು. "ನಿಮ್ಮಿಷ್ಟ. ನನಗೆ ಮಾತ್ರ ಅಲ್ಲಿ ನೀವಿಲ್ಲದೆ ದಿನವು ಯುಗವೆನಿಸುವುದು. ಯಾರು ಬಲ್ಲರು– ಹುಚ್ಚೂ ಹಿಡಿಯಬಹುದು." ಎಂದರು ಹತಾಶರಾಗಿ.

ಇಂತಹ ಮಾತುಗಳಿಂದ ಮೊದಲು ಗಾಯತ್ರಿಯ ಹೃದಯ ಗದ್ಗದವಾಗುತ್ತಿತ್ತು. ಇಲ್ಲಿದ್ದು ಅವಳಿಗೆ ಅವರ ಚರಿತ್ರೆಯ ಪೂರ್ಣಜ್ಞಾನವಾಗಿತ್ತು. ಮಂತ್ರಕ್ಕೆ ಪ್ರತಿಮಂತ್ರವನ್ನೂ ಅವಳು ಕಲಿತಿದ್ದಳು. ಅವಳೆಂದಳು: "ಇಲ್ಲಿದ್ದರೆ ನನಗೂ ಹಾಗೇ ಆಗುವುದು. ಏನು ಮಾಡಲಿ? ಜನರ ಮನಸ್ಸನ್ನು ನನ್ನ ವಿಷಯದಲ್ಲಿ ಸ್ವಚ್ಛಗೊಳಿಸಬೇಕಾಗಿದೆ. ನನ್ನ ದೇಹ ನನ್ನಂಕೆಯಲ್ಲಿದೆ, ಅದನ್ನಿಲ್ಲಿ ಇರಿಸಬಲ್ಲೆ ಎಂಬುದನ್ನು ತೋರಿಸಲು ವಿಯೋಗ ದುಃಖವನ್ನು ವರಿಸುತ್ತಿದ್ದೇನೆ ಪ್ರೇಮವಿದ್ದಲ್ಲಿ ಸಾವಿರ ಮೈಲಿನ ಅಂತರವೂ ಲೆಕ್ಕದ್ದಲ್ಲ. ವಿಯೋಗದಲ್ಲಿಯೂ ವಿಲಾಪದ ಆನಂದವಿರುತ್ತದೆ. ಹಾಂ, ಕಾಗದ ಮಾತ್ರ ಬರೆಯುತ್ತಿರಬೇಕು; ಇಲ್ಲದಿದ್ದರೆ ನನ್ನ ಜೀವವೇ ಹಾರಿ ಹೋದೀತು."

ಗಾಯತ್ರಿ ಬದಲಾಗಿದ್ದಾಳೆ ಎಂಬುದು ಸ್ಪಷ್ಟವಾಯಿತು. ಕಪಟಕ್ಕೆ ಕಪಟವನ್ನು ಕಲಿತಿದ್ದಾಳೆ. ಇವಳನ್ನು ಇಲ್ಲಿಯೇ ಬಿಟ್ಟುಹೋಗುವುದೆಂದರೆ ಪೂರಾ ಕೈಬಿಟ್ಟಂತೆ. ಇನ್ನೊಂದು ಸಂದರ್ಭದಲ್ಲಿ ಮಾತೆತ್ತುವಾ ಎಂದು ಕೊಂಡು ಜ್ಞಾನಶಂಕರರು ಹೊರಟರು.

"ಹಾಗಾದರೆ ಯಾವಾಗ ಹೊರಡುವುದು ಮಾಡಿದಿರಿ? ನಾಳೆ ಬೆಳಗ್ಗೇ ಹೋಗುವುದೊಳ್ಳೆಯದೆಂದು ನನಗೆನಿಸುತ್ತದೆ." ಎಂದಳು ಗಾಯತ್ರಿ.

"ಒಳ್ಳೆಯದು."

## ೪೩

ಗಾಯತ್ರಿ-ಶ್ರದ್ಧೆಯರಲ್ಲಿ ಈಚೆಗೆ ಆತ್ಮೀಯತೆ ಚೆನ್ನಾಗಿ ಬೆಳೆದಿತ್ತು. ತಮ್ಮ ತಮ್ಮ ಮನದ ಮಾತುಗಳನ್ನು ಮುಚ್ಚುಮರೆಯಿಲ್ಲದೆ ಆಡಿಕೊಳ್ಳುತ್ತಿದ್ದರು. ಅವರಿಬ್ಬರ ಮಾತು ನಡುರಾತ್ರಿಯನ್ನೂ ದಾಟಿ ನಡೆಯುತ್ತಿತ್ತು.

"ಆ ಡಿಪ್ಟಿಯವರ ಹೆಂಡತಿ ಬಂದಿದ್ದಾರೆ—ಹಿಂದಕ್ಕೆ ಬರುತ್ತಿದ್ದರಲ್ಲ ಅವರು. ಇಲ್ಲೇ ಕರಕೊಂಡು ಬರಲೇ?" ಅವರಿಬ್ಬರೂ ಮಾತನಾಡುತ್ತ ಕುಳಿತಾಗ ದಾಸಿ ಬಂದು ಹೇಳಿದಳು.

"ಹೊಂ, ಇಲ್ಲೇ ಕರಕೊಂಡು ಬಾ" ಶ್ರದ್ಧೆ ಹೇಳಿದಳು. ಶೀಲಮಣಿ ಒಳಗೆ ಬಂದಮೇಲೆ ಆಕೆಯನ್ನು ಅಪ್ಪಿಕೊಂಡು "ಸೀತಾಪುರದಿಂದ ಯಾವಾಗ ಬಂದಿರಿ?" ಎಂದು ಕೇಳಿದಳು.

"ಇವೊತ್ತೇ ಬಂದೆ. ಲಾಲಾ ಜ್ಞಾನಶಂಕರರೊಡನೆ ಮಾತನಾಡಲಿಕ್ಕೆಂದೇ ಬಂದೆ. ವಿದ್ಯಾವತಿ ವಿಷತಕ್ಕೊಂಡು ಸತ್ತಳೆಂದು ಕೇಳಿದಾಗಿನಿಂದಲೂ ನನ್ನೆದೆಯಲ್ಲಿ ಕಿಚ್ಚಿಟ್ಟಂತಾಗಿದೆ. ಇದೆಲ್ಲ, ರಾಣಿಯಾಗಿ ಮೆರೆಯುವ ಅವಳ ಅಕ್ಕನ ಕಾರಭಾರವೇ ಅಂತೆ. ಅವಳೇ ವಿಷ ಕೊಟ್ಟಿರಬಹುದು." ಶೀಲಮಣಿಯೆಂದಳು. ಅವಳು ಗಾಯತ್ರಿಯ ಕಡೆಗೆ ನೋಡಿರಲಿಲ್ಲ; ನೋಡಿದ್ದರೂ ಅವಳ ಗುರುತಿರಲಿಲ್ಲ. ಶ್ರದ್ಧೆ ನಾಲಗೆ ಕಚ್ಚಿಕೊಂಡು ಗಾಯತ್ರಿಗೆ ಸನ್ನೆಮಾಡಿದಳು. ಅವಳ ಪ್ರತಿಭೆ ಸೌಂದರ್ಯ, ವಸ್ತ್ರಭೂಷಣಗಳನ್ನು ನೋಡಿ ಇವಳೇ ಗಾಯತ್ರಿಯೆಂದರಿತಳು. ಎದೆ ಧಸಕ್ಕೆಂದಿತು. ಆದರೆ ಬಾಣ ಬಿಲ್ಲಿನಿಂದ ಜಿಗಿದುಹೋಗಿತ್ತು.

ಗಾಯತ್ರಿ ಕಿಡಿಕಿಯ ಕಡೆ ನೋಡುತ್ತಿದ್ದಳು. ಆದರೆ ಅವಳ ದೃಷ್ಟಿಯಲ್ಲಿ ಆ ಕಿಡಿಕಿಯೂ ಲುಪ್ತವಾಗಿತ್ತು. ಅವಳು ಸಂಜ್ಞಾಹೀನಳಂತಾಗಿದ್ದಳು. ಅವಳ ಸ್ಥಿತಿಯನ್ನು ಕಂಡು ಶ್ರದ್ಧೆಗೆ ಕಳವಳವಾಯಿತು. ಇಲ್ಲಿರುವುದು ಅನ್ಯಾಯವೆಂದು ಅವಳು ಶೀಲಮಣಿಯನ್ನು ಕರೆದುಕೊಂಡು ಬೇರೆ ಕೋಣೆಗೆ ಹೋದಳು. ವಿದ್ಯೆಯ ಸಾವಿನ ಕಾರಣವನ್ನು ಕುರಿತು ಬಹಳಹೊತ್ತು ಅವರಲ್ಲಿ ಚರ್ಚೆ ನಡೆಯಿತು. ಕೊನೆಗೆ ಆ ಈ ಮಾತಾಡಿ, "ಈಗ ಡಿಪ್ಟಿಸಾಹೇಬರ ಉದ್ದೇಶವೇನಿದೆ?" ಎಂದು ಶ್ರದ್ಧೆ ಪ್ರಶ್ನಿಸಿದಳು.

" ಕೆಲಸಕ್ಕೆ ರಾಜಿನಾಮೆ ಕೊಟ್ಟು ಬಂದಿದ್ದಾರೆ. ಪ್ರೇಮಶಂಕರ ಬಾಬುಗಳ ಜೊತೆಗಿರಬೇಕೆನ್ನುತ್ತಾರೆ. ಅವರ ಮೇಲೆ ಬಲು ಭಕ್ತಿ ಇವರಿಗೆ. ಅವರೊಂದಿಗೆ ಅದಷ್ಟು ಪ್ರಜಾಸೇವೆ ಮಾಡಬೇಕೆನ್ನುತ್ತಾರೆ. ಅದಿರಲಿ, ನೀವೆಷ್ಟು ದಿನ ಹೀಗೆ ಬಿಕ್ಕೊಂಡು ಇರುವವರು ? ಹೀಗೇ ಶೋಕಿಸುತ್ತ ಆಯುಷ್ಯ ಕಳೆಯಬೇಕೆಂದು ನಿರ್ಧರಿಸಿರುವಿರೊ ?'' ಎಂದು ಶೀಲಮಣಿ ಪ್ರಶ್ನಿಸಿದಳು.

" ಪ್ರಾರಬ್ಧದಲ್ಲಿದ್ದದ್ದು ಯಾರು ತಪ್ಪಿಸುವರು ? ''

'' ಇದು ವ್ಯರ್ಥ ಹಟ ನಿಮ್ಮದು. ನಾನು ನಿಮ್ಮನ್ನು ಎಳೆದುಕೊಂಡು ಹೋಗುವೆ. ಈ ಅಡವಿಯಲ್ಲಿ ನಾನೊಬ್ಬಳೇ ಇರಲಾರೆ. ಆ ಮಹಾಶಯರನ್ನು ಕೇಳುವವಳಿದ್ದೇನೆ ಜಗತ್ತಿನ ಯೋಗಕ್ಷೇಮ ನೋಡುತ್ತಾರೆ, ಮನೆ ಹೆಂಡತಿಯ ಪರಿವೆಯೇ ಇಲ್ಲ ! ''

ಶೀಲಮಣಿಯನ್ನು ಬೀಳ್ಕೊಟ್ಟು ಶ್ರದ್ಧೆ ಗಾಯತ್ರಿಯ ಹತ್ತಿರ ಬಂದಳು. ಎಲ್ಲವೂ ತನ್ನ ಕಾರಭಾರವೇ ಎಂದು ಅವಳೆಲ್ಲಿ ಶಂಕಿಸುವಳೊ ಎಂದು ಅಂಜುತ್ತ, ತಪ್ಪುಗಾರ್ತಿಯಂತೆ ಕೋಣೆಯಲ್ಲಿ ಅಡಿಯಿಟ್ಟಳು. ಗಾಯತ್ರಿ ಪ್ರಾರ್ಥನಾದೃಷ್ಟಿಯಿಂದ ಅವಳನ್ನು ನೋಡಿದಳಷ್ಟೆ. ಮಾತನಾಡಲಿಲ್ಲ. ಅವಳ ಮುಖದಲ್ಲಿ ಶೋಕದೊಡನೆ ದೃಢಸಂಕಲ್ಪವೂ ಇತ್ತು. ಏನೋ ಬರೆಯುತ್ತಿದ್ದಳು. ಪಕ್ಕನೆ ಮೊಗವೆತ್ತಿ, '' ನಿಮಗೆ ಕಷ್ಟವಾಗದಿದ್ದರೆ ಸ್ವಲ್ಪ ಮಾಯಾನನ್ನು ಕರೆಯಿರಿ'' ಎಂದಳು.

ಶ್ರದ್ಧೆ ಹೋಗಿ ದಾಸಿಯರನ್ನೂ ಮಾಯಾಶಂಕರನನ್ನೂ ಕರೆತಂದಳು. ಗಾಯತ್ರಿ ಅವನನ್ನು ಅಡಿಯಿಂದ ಮುಡಿವರೆಗೆ ನೋಡಿ, " ನೀನು ಯಾರ ಮಗ ಬಲ್ಲೆಯಷ್ಟೇ ? " ಎಂದು ಕೇಳಿದಳು.

" ಮೊದಲು ಲಾಲಾ ಜ್ಞಾನಶಂಕರರ ಮಗನಿದ್ದೆ, ಈಗ ನಿಮ್ಮ ಮಗ. "

" ಸರಿ. ಪ್ರತಿಯೊಂದು ವಿಷಯದಲ್ಲಿಯೂ ನನ್ನ ಇಚ್ಛೆಯಂತೆ ನಡೆಯಬೇಕು. ನಿನ್ನ ಪಾಲನ-ಪೋಷಣಕ್ಕೆ, ಶಿಕ್ಷೆ–ದೀಕ್ಷೆಗೆ ಜ್ಞಾನಶಂಕರರ ಸಂಬಂಧವಿಲ್ಲ; ಅದೆಲ್ಲ ನನ್ನ ಅಧಿಕಾರ. "

" ಅದನ್ನು ನೀವು ಹೇಳಿಕೊಡಬೇಕಾಗಿಲ್ಲ. ಅಪ್ಪ ಸಾಯುವ ಮುಂದೆ

ಅವರನ್ನು ಕಂಡೊಡನೆ ಚೀರಿ ಓಡಿದ್ದನ್ನು ನೋಡಿದಾಗಲೇ, ಅವರಲ್ಲಿದ್ದ ಆದರ ಹಾರಿಹೋಗಿದೆ. ”

“ ನೀನು ಬಲು ಜಾಣನಪ್ಪ. ನಾನು ಇಂದು ಬದರಿಯಾತ್ರೆಗೆ ಹೊರಡುತ್ತೇನೆ. ಯಾವಾಗ ಬರುತ್ತೇನೋ ಗೊತ್ತಿಲ್ಲ. ನಿನ್ನನ್ನು ಪ್ರೇಮಶಂಕರರ ಪರಾಮರಿಕೆಯಲ್ಲಿ ಇರಿಸಬೇಕೆಂಬುದು ನನ್ನಿಚ್ಛೆ. ಅವರನ್ನು ತಂದೆಯೆಂದು ತಿಳಿದು ಅನುಸರಿಸು. ನಾನು ಅವರಿಗೊಂದು ಪತ್ರ ಬರೆದಿದ್ದೇನೆ. ಅವರು ಈ ಭಾರ ವಹಿಸಿಕೊಳ್ಳುವರೆಂದು ನಂಬಿದ್ದೇನೆ. ಜ್ಞಾನಶಂಕರರಿಗೂ ಕಾಗದ ಬರೆದಿದ್ದೇನೆ. ನಾನು ಮರಳುವವರೆಗೆ ಅವರು ಜಾಗೀರಿಯ ವ್ಯವಸ್ಥಾಪಕರಾಗಿರಬೇಕು ಪ್ರತಿತಿಂಗಳೂ ಪ್ರೇಮಶಂಕರರಿಗೆ ಎರಡು ಸಾವಿರ ರೂಪಾಯಿ ಕಳಿಸಲು ಅವರಿಗೆ ತಿಳಿಸಿದ್ದೇನೆ. ”

## ೪೪

ಜ್ವಾಲಾಸಿಂಹರು ಬನಾರಸಕ್ಕೆ ಬಂದ ಮರುದಿನವೇ ಲಖನಪುರದವರ ಅಪೀಲಿನ ಮಾತನ್ನೆತ್ತಿದರು. “ ಅದಕ್ಕೆ ನಾಲ್ಕೈದು ಸಾವಿರ ರೂಪಾಯಿ ಬೇಕೆನ್ನುತ್ತೀರಿ. ಆದರೆ ನನ್ನ ಹತ್ತಿರವೋ ನಾಲ್ಕೈದು ನೂರೂ ಇಲ್ಲ” ಎಂದು ಪ್ರೇಮಶಂಕರರು ನುಡಿದರು.

“ ಅದರ ಚಿಂತೆ ಬಿಡಿರಿ. ನಿಮ್ಮ ಹೆಸರಿನಿಂದ ಹತ್ತಿಪ್ಪತ್ತು ಸಾವಿರ ಕೂಡಬಹುದು. ”

“ ಜನರ ಶ್ರದ್ಧೆ ಇಷ್ಟಿರುವುದಕ್ಕೆ ನಾನೇನಂಥ ಮುಂದಾಳು ? ”

“ ನಿಮ್ಮನ್ನು ನಿಮಗಿಂತ ಜನರು ಚೆನ್ನಾಗಿ ಅರಿತಿದ್ದಾರೆ. ಇಂದೇ ನಾನು ಚಂದಾ ಕೂಡಿಸಲು ಆರಂಭಿಸುತ್ತೇನೆ. ”

“ ನಿಮಗಿದರಲ್ಲಿ ಯಶ ಸಿಕ್ಕೀತೆಂದು ನನಗೇನೂ ಆಶೆಯಿಲ್ಲ. ಬಹಳವಾದರೆ ಮುನ್ನೂರು ನಾನೂರು ಕೂಡಬಹುದು. ಇವರೂ ದುಡ್ಡುಗಳಿಸುವ ಆಟ ಹೂಡಿದ್ದಾರೆ ಎಂದು ಜನರು ತಿಳಿದುಕೊಂಡಾರು. ನನ್ನಲ್ಲಿ ಶ್ರದ್ಧೆಯ ಕೆಲವು ವಸ್ತುಗಳಿವೆ; ಮಾರಿದರೆ ಸಾವಿರ ರೂಪಾಯಿ ಬರಬಹುದು. ”

“ ಹಣದ ಚಿಂತೆ ಇಲ್ಲವೇ ಇಲ್ಲ. ಈ ವಿಷಯ ಡಾ. ಇರ್ಫಾನಲಿಯವರ ಕೂಡ ಮಾತನಾಡುತ್ತೇನೆ. ”

ಉಪದ್ರವಕಾರಿಗಳಿಂದ ತಮ್ಮನ್ನು ಪ್ರೇಮಶಂಕರರು ರಕ್ಷಿಸಿದಾಗಿನಿಂದ ಡಾ. ಇರ್ಫಾನ ಅಲಿಯವರಿಗೆ ಅವರ ಬಗ್ಗೆ ಕೃತಜ್ಞತೆಯುಂಟಾಗಿತ್ತು. ಅವರ ತ್ಯಾಗಮಯ ನಿಃಸ್ವಾರ್ಥ ಜೀವನ ಪ್ರಭಾವದಿಂದ ಡಾಕ್ಟರರ ವೃತ್ತಿಯಲ್ಲಿಯೂ ವ್ಯತ್ಯಾಸವಾಗಿತ್ತು. ಅವರು ಆಗಾಗ ಪ್ರೇಮಾಶ್ರಮಕ್ಕೆ ಹೋಗಿಯೂ ಬರುತ್ತಿದ್ದರು. ತಮ್ಮ ಹಿಂದಣ ನಿಷ್ಠುರ ಸ್ವಾರ್ಥಕ್ಕಾಗಿ ಪಶ್ಚಾತ್ತಾಪವೆನಿಸುತ್ತಿತ್ತು. ಬಡವರ ವಿಷಯದಲ್ಲಿ ದಯೆಯುಂಟಾಗಿತ್ತು. ಹಿಂದೆ ಮಾಡಿದ ಅಪಕಾರಗಳ ಪಾಪ-ಕಲಂಕಗಳನ್ನು ತೊಳೆದುಕೊಳ್ಳಲು ಪ್ರಯತ್ನಿಸುತ್ತಿದ್ದರು. ಅಪೀಲಿನಲ್ಲಿ ಆ ಹಳ್ಳಿಗರನ್ನು ಬಿಡಿಸಲು ಮನಮುಟ್ಟಿ ಹೆಣಗಬೇಕೆಂದು ನಿಶ್ಚಯಿಸಿದ್ದರು. ಅದರ ವೆಚ್ಚವನ್ನು ಕೂಡ ವಹಿಸಿಕೊಳ್ಳಲು ಸಿದ್ಧರಾಗಿದ್ದರು.

ಜ್ವಾಲಾಸಿಂಹರು ಊರಿಗೆ ಬಂದಿರುವರೆಂದು ಕೇಳಿ, ಡಾಕ್ಟರು ಅವರನ್ನು ಕಾಣಲು ಹೊರಡುವವರಿದ್ದರು. ಅಷ್ಟರಲ್ಲಿ ಅವರೇ ಬಂದುಬಿಟ್ಟರು. "ಅಪೀಲು ಎಂದು ಮಾಡುವುದಾಯಿತು ?" ಕೈಕುಲುಕುತ್ತ ಇರ್ಫಾನಅಲಿ ಕೇಳಿದರು.

"ಅದಕ್ಕೆಂತಲೇ ತಮ್ಮ ಸನ್ನಿಧಿಗೆ ಬಂದದ್ದು." ಎಂದರು ಜ್ವಾಲಾಸಿಂಹ.

ಅಪೀಲು ಮಾಡುವುದು ನಿಶ್ಚಿತವಾಯಿತು. ಇರ್ಫಾನ ಅಲಿಯವರು ತಮ್ಮ ಹೇಳಿಕೆಯನ್ನು ಕೂಡ ಆಗಲೇ ಸಿದ್ಧಪಡಿಸಿಟ್ಟಿದ್ದರು ಎಲ್ಲ ಸಾಕ್ಷಿಗಳ ಪುನಸ್ಸಾಕ್ಷ್ಯಗಳಾದವು. ಅದಕ್ಕೆ ಸರಕಾರಿ ವಕೀಲರು ಎತ್ತಿದ ವಿರೋಧವನ್ನು ಡಾ. ಇರ್ಫಾನ ಅಲಿಯವರು ಒಳ್ಳೇ ಜಾಣ್ಮೆಯ ಮತ್ತು ಕರುಣಾಮಯ ವಾದದಿಂದ ಹೊಡೆದುಹಾಕಿದರು. ಸಾಕ್ಷಿಗಳು ಪೋಲಿಸರ ದಂಡನೀತಿ—ಕೂಟನೀತಿಗಳ ಸತ್ಯಸ್ವರೂಪವನ್ನು ನಿರ್ಭೀತಿಯಿಂದ ಬಯಲಿಗಿಟ್ಟರು. ಊರವರ ಹೆದರಿಕೆಯಿಂದ, ಪ್ರೇಮಶಂಕರರ ಪ್ರಚೋದನೆಯಿಂದ ಸಾಕ್ಷಿಗಳು ಸತ್ಯವನ್ನು ತಿರುಗಿಸುತ್ತಿದ್ದಾರೆಂದು ತೋರಿಸಲು ಸರಕಾರಿ ವಕೀಲರು ಪಟ್ಟ ಪರಿಶ್ರಮವು ವ್ಯರ್ಥವಾಯಿತು. ಡಾಕ್ಟರ ಪ್ರಿಯನಾಥರಮೇಲೆ ಪೋಲೀಸರ ಭರವಸೆ ಬಹಳವಿತ್ತು. ಯಾವಾಗಲೂ ಅವರು ತಮಗೆ ಅನುಕೂಲರಾಗಿದ್ದರು; ತಮ್ಮ ಬಲಗೈಯಾಗಿದ್ದರು; ತಮ್ಮಿಂದಾಗಿ ಎಷ್ಟೋ ಗಳಿಸಿ

ಕೊಂಡಿದ್ದರು. ಆದರೆ ಅವರ ಮರುಹೇಳಿಕೆಯನ್ನು ಕೇಳಿ ಪೋಲಿಸರ ಕೈ ಕಾಲೇ ಹೋದವು. ಶವಪರೀಕ್ಷೆಯಲ್ಲಿ ತಾವು ಪಟ್ಟ ಅಭಿಪ್ರಾಯ ಅವಸರದಲ್ಲಿ ತಪ್ಪಾಗಿತ್ತು; ಗ್ರಂಥಾಧಾರಗಳನ್ನು ನೋಡಲಾಗಿರಲಿಲ್ಲ; ಮೊದಲು ಕತ್ತು ಹಿಸುಕಿ, ಬಳಿಕ ಆಯುಧಪ್ರಯೋಗ ಮಾಡಿದ್ದರೆ ಆ ಸ್ಥಳದಲ್ಲಿ ಅಷ್ಟು ನೆತ್ತ-ರಿರುವುದು ಅಸಂಭವ ಎಂದು ವಿವರಿಸಿ ಅವರು ಅನೇಕ ಪ್ರಸಿದ್ಧ ವೈದ್ಯ-ಡಾಕ್ಟರರ ಅಭಿಪ್ರಾಯಗಳನ್ನು ಉದಾಹರಿಸಿದರು. ಡಾ. ಇರ್ಫಾನ ಅಲಿಯವರ ಹೇಳಿಕೆ ಈ ಅಭಿಪ್ರಾಯವನ್ನು ಇನ್ನಷ್ಟು ಬಲಪಡಿಸಿತು. ವೈದ್ಯಕ ಪ್ರಶ್ನೆ ಗಳಿಂದ ಪ್ರಿಯನಾಥ ಡಾಕ್ಟರು ಜಗ್ಗದಿರಲು, ಸರಕಾರಿ ವಕೀಲರು ಇದಿರು ಸವಾಲಿನಲ್ಲಿ ಆವರ ಚಾರಿತ್ರ್ಯದ ವಿಷಯವನ್ನೆತ್ತಿ ದಾಳಿಮಾಡಿದರು. ಅದರಲ್ಲೂ ಅವರು ಮೀನಿನ ಚಾಪಲ್ಯದಿಂದ ಉತ್ತರಿಸುತ್ತ ಪ್ರತಿಪಕ್ಷವನ್ನು ಹಣ್ಣು ಮಾಡಿದರು.

ಡಾ. ಇರ್ಫಾನ ಅಲಿಯವರು ನ್ಯಾಯಾಲಯದಿಂದ ಮರಳಿದಾಗ ಹೃದಯದಲ್ಲಿ ಮಹದಾಸೆ ತುಂಬಿತ್ತು; ಮುಖ ಅರಳಿತ್ತು. ಮನೆಗೆ ತಲುಪುತ್ತಲೂ ಜ್ಞಾನಶಂಕರರ ತಂತಿ ಅವರ ಕೈಸೇರಿತು. ಒಂದು ದೊಡ್ಡ ಮೊಕದ್ದಮೆ ನಡೆಸುವುದಕ್ಕಾಗಿ ತ್ವರೆಯ ಕರೆ ಬಂದಿತ್ತು. ದಿನಕ್ಕೆ ಸಾವಿರ ರೂಪಾಯಿ ಕೊಡುವುದಾಗಿ ಅದರಲ್ಲಿ ತಿಳಿಸಿತ್ತು. ತಂತಿಯನ್ನು ಹರಿದು ಚೆಲ್ಲಿ, 'ಅವಕಾಶ ವಿಲ್ಲವೆಂದು ತಿಳಿಸಲು ವಿಷಾದಿಸುತ್ತೇನೆ; ಲಖನಪುರದವರ ಮೊಕದ್ದಮೆಯಲ್ಲಿ ತೊಡಗಿದ್ದೇನೆ' ಎಂದು ಪ್ರತಿತಾರು ಕೊಟ್ಟರು.

## ೪೫

ಈಗ ಗಾಯತ್ರಿ ಇಚ್ಛೆಗಳನ್ನು ದಮನಿಸುವ ವ್ರತಿ. ಆಭರಣಗಳನ್ನಂತೂ ಶ್ರದ್ಧೆಗೆ ಕೊಟ್ಟೇ ಬಂದಿದ್ದಾಳೆ. ಅವಳ ಮೈಮೇಲಿನ ಬಣ್ಣಬಣ್ಣದ ಬಟ್ಟೆ ಗಳೆಲ್ಲ ಹೋಗಿ ಕೇವಲ ಬಿಳಿಸೀರೆ ಬಂದಿದೆ. ತಾಂಬೂಲದ ಚಟವನ್ನು ಬಿಟ್ಟುಬಿಟ್ಟಿದ್ದಾಳೆ; ಬರಿಗಾಲಿನಿಂದ ತಿರುಗುತ್ತಾಳೆ. ಹಣಿಗೆ ಕನ್ನಡಿಗಳು ಹೊಳೆಯ ಪಾಲಾಗಿವೆ. ಒರಸಿದ ಕನ್ನಡಿಯೊಳಗಿನ ಬಿಂಬದಂತೆ ತನ್ನ ಮನದ ಕುವೃತ್ತಿಗಳೆಲ್ಲ ಅವಳಿಗೀಗ ನಿಚ್ಚಳವಾಗಿ ಕಾಣುತ್ತಿವೆ. ಕ್ಷೋಭ-ಗ್ಲಾನಿಗಳ ಉದ್ವೇಗದಿಂದ ಒಮ್ಮೊಮ್ಮೆ ಸತ್ತುಹೋಗಬೇಕು ಎಂದೆನಿಸುತ್ತದೆ.

ಕನಸಿನಲ್ಲಿ ಅವಳು ಬಹುಶಃ ದಿನಾಲು ಗಂಡನನ್ನು ಕಾಣುತ್ತಾಳೆ. ಅವನ ಮರ್ಮಭೇದಿಯಾದ ಮಾತುಗಳು, ಅವನ ತೀವ್ರದೃಷ್ಟಿ ಅವಳೆದೆಯನ್ನು ಇರಿಯುತ್ತಿವೆ.

ಕೆಲದಿನ ಹರಿದ್ವಾರದಲ್ಲಿ. ಕೆಲದಿನ ಪ್ರಯಾಗದಲ್ಲಿ ಕಳೆದಳು; ಅನೇಕ ಮಹಾತ್ಮರನ್ನು ಕಂಡಳು; ಆದರೆ ಗಾಯತ್ರಿಗೆ ಶಾಂತಿ ಸಮಾಧಾನಗಳು ದೊರಕಲಿಲ್ಲ ಅಲ್ಲಿಂದ ಹೃಷೀಕೇಶಕ್ಕೆ ಹೋದಳು. ಅಲ್ಲಿ ಒಬ್ಬಿಬ್ಬರು ತ್ಯಾಗಿ ಮಹಾತ್ಮರು ಸಿಕ್ಕಿದರೂ ಅವಳ ಮನವನ್ನು ಸಂಸಾರದಿಂದ ವಿರಕ್ತಗೊಳಿಸಲು ಅವರು ಸಮರ್ಥರಾಗಿರಲಿಲ್ಲ. ಅಲ್ಲಿ ಅವಳು ಸಾಧನೆಯಲ್ಲಿರುವಾಗ ಒಂದು ಸುದ್ದಿಯನ್ನು ಕೇಳಿದಳು. ಚಿತ್ರಕೂಟದಲ್ಲಿ ಎಲ್ಲಿಂದಲೋ ಒಬ್ಬ ಬಂದಿದ್ದಾನೆ; ಅವನು ಉಪದೇಶಿಸುವುದು ತೀರ ಸ್ವಲ್ಪ; ಆದರೆ ಅವರ ದೃಷ್ಟಿಪಾತದಿಂದ, ಅವರ ದರ್ಶನಮಾತ್ರದಿಂದಲೆ ಆತ್ಮತೃಪ್ತಿಯಾಗುತ್ತದೆ; ಹಾಲು ಮಾತ್ರ ತಕ್ಕೊಳ್ಳುತ್ತಾರೆ—ಅದೂ ಒಂದೂ ಕುಡಿತೆಯಷ್ಟು .... ಇತ್ಯಾದಿ ಆ ಸಾಧುವಿನ ಸಿದ್ಧಿಯ ವರ್ಣನೆಯನ್ನು ಕೇಳಿ ಗಾಯತ್ರಿ ಅಲ್ಲಿಗೆ ಹೊರಟೇ ಬಿಟ್ಟಳು. ಪಸೂನಿಯ ತಟದಲ್ಲಿ ಧರ್ಮಸಾಲೆಯಲ್ಲಿ ಹೋಗಿ ತಂಗಿದಳು.

ದೂರದೂರದಿಂದ ಭಕ್ತರು ಬಂದಿದ್ದರು. ಎಲ್ಲೆಲ್ಲೂ ಸ್ವಾಮೀಜಿಯ ಕೀರ್ತಿಗಾನ ಕೇಳುತ್ತಿತ್ತು. ಆ ಗಾನ ಗಾಯತ್ರಿಯನ್ನು ಅವರ ದರ್ಶನಕ್ಕಾಗಿ ಹಾತೊರಿಸಿತು. ಆದರೆ ರಾತ್ರಿಯಾದುದರಿಂದ ನಿರುಪಾಯಳಾಗಿದ್ದಳು. ರಾತ್ರಿಯನ್ನು ಚಡಪಡಿಸುತ್ತಲೆ ಕಳೆದು ಚುಮುಚುಮು ನಸುಕಿನಲ್ಲೆದ್ದು ಪಸೂನಿಯಲ್ಲಿ ಸ್ನಾನಮಾಡಿ ಸ್ವಾಮಿದರ್ಶನಕ್ಕೆ ಹೊರಟಳು.

ಸ್ವಾಮೀಜಿಯ ಗುಡಿಸಲು ಎತ್ತರ ಗುಡ್ಡದ ಮೇಲೆ. ಅದನ್ನೇರುವುದು ಕಷ್ಟಕರವಾಗಿತ್ತು. ಭಕ್ತಿ ಎಲ್ಲರನ್ನೂ ಎಳೆದೊಯ್ಯುತ್ತಿತ್ತು–ಅಶಕ್ತತೆ ಕೂಡ ತಡೆಯುತ್ತಿರಲಿಲ್ಲ. ಸ್ವಲ್ಪ ಏರುವಷ್ಟರಲ್ಲಿ ಗಾಯತ್ರಿಯ ಕಾಲೇ ಹೋದವು. ಅವಳು ದಣಿವಾರಿಸಿಕೊಳ್ಳುತ್ತ, ಕೈಯೂರುತ್ತ ಮೊಂಡೆಯೂರುತ್ತ ಹತ್ತ ತೊಡಗಿದಳು. ಅಂತೂ ತುದಿಮುಟ್ಟುವ ಹೊತ್ತಿಗೆ ಮೈ ನೀರುನೀರಾಗಿತ್ತು, ಹಣ್ಣುಹಣ್ಣಾಗಿತ್ತು; ಕಣ್ಣು ಕತ್ತಲೆಗೂಡಿಸುತ್ತಿದ್ದವು. ಆದರೆ ಒಣಗಿದ ಬಾಯಿಗೆ ನೀರು ದೊರೆತಷ್ಟು ಅವಳ ಮನಸ್ಸು ಪ್ರಫುಲ್ಲಿತವಾಗಿತ್ತು. ಆದರೆ

ಚಿತ್ತಗ್ಲಾನಿಯಿಂದಾಗಿ ಸ್ವಾಮಿಗಳಕಡೆ ನೋಡುವ ಸಾಹಸವೂ ಆಗಲೊಲ್ಲದು-ಸಂತಾಪನಿಗೆ ಖೊಟ್ಟಿನಾಣ್ಯವನ್ನು ಕೊಡುವವರಂತೆ ಅವಳ ಸ್ಥಿತಿಯಾಗಿತ್ತು.

"ಗಾಯತ್ರೀ, ನಾನು ಬಹುದಿನಗಳಿಂದ ದಾರಿ ಕಾಯುತ್ತಿದ್ದೆ."

ರಾಯ ಕಮಲಾನಂದರ ದನಿಯನ್ನು ಕೇಳಿ ಗಾಯತ್ರಿ ಬೆಚ್ಚಿಬಿದ್ದು ಎದುರಿಗೆ ನೋಡಿದಳು. ಸ್ವಾಮಿಜಿ ತನ್ನ ಕಡೆಗೇ ಬರುತ್ತಿದ್ದಾರೆ. ಅವರ ತೇಜೋಮಯ ಮುಖಾರವಿಂದದಲ್ಲಿ ಕರುಣೆ ಮಿನುಗುತ್ತಿತ್ತು; ಕಣ್ಣುಗಳು ಪ್ರೇಮಾಶ್ರುಗಳಿಂದ ತುಂಬಿದ್ದವು. ಗಾಯತ್ರಿಯ ನೋಟ ಕೆಳಕ್ಕೆ ಬಿದ್ದಿತು. ತನ್ನನ್ನು ತೇಜಸ್ತರಂಗಗಳು ಕೊಚ್ಚಿಕೊಂಡು ಹೋಗುತ್ತಿರುವಂತೆ ಅವಳಿಗೆ ಅನಿಸಿತು.

'ಹೌದು, ಈ ವಿಶಾಲಾತ್ಮನ ಮಗಳು ನಾನು.'

ಗ್ಲಾನಿ ಎಂದಿತು: 'ಹಾ, ಪತಿತೆ!'

ಲಜ್ಜೆಯೆಂದಿತು: 'ಹಾ, ಕುಲಕಲಂಕಿನೀ!'

ನಿರಾಶೆಯೆಂದಿತು: 'ಹಾ, ಅಭಾಗಿನಿ!'

ಶೋಕವೆಂದಿತು: 'ಧಿಕ್ಕಾರ ನಿನಗೆ!'

'ನೀನು ಪ್ರಪಂಚಕ್ಕೆ ಮುಖ ತೋರಿಸಲು ಯೋಗ್ಯಳಲ್ಲ. ಅಧಃಪತನ ಇನ್ನೇನು ಉಳಿದಿದೆ? ಏತಕ್ಕಾಗಿ ಜೀವನದ ಅಭಿಲಾಷೆ?'

ಗಾಯತ್ರಿ ಉನ್ಮತ್ತ ನೇತ್ರಗಳಿಂದ ಕೆಳಗೆ ನೋಡಿದಳು. ಕೈಗಳೆರಡನ್ನೂ ಚಾಚಿ ಕೆಳಕ್ಕೆ ಧುಮ್ಮಿಕ್ಕಿಬಿಟ್ಟಳು. ಕೆಳಗೆ ಆಳವಾದ ಕುಂಡವಿತ್ತು. ಅವಳ ಮೂಳೆಗಳನ್ನು ಪ್ರಪಂಚದ ನಿರ್ದಯ ಕಟಾಕ್ಷದಿಂದ ರಕ್ಷಿಸುವುದಕ್ಕಾಗಿ ಅದು ತನ್ನ ಅಂತಃಸ್ಥಲದ ಅಪಾರ ಅಂಧಕಾರದಲ್ಲಿ ಬಚ್ಚಿಟ್ಟುಕೊಂಡಿತು.

## ೪೭

ಉಣಿಸುವುದು, ಉಣ್ಣುವುದು, ಹೆಸರಿಗಾಗಿ ಜೀವಕಳೆಕೊಳ್ಳುವುದು— ಇವು ಮೂರು ಲಾಲಾ ಪ್ರಭಾಶಂಕರರ ಜೀವನ ಸೂತ್ರಗಳಾಗಿದ್ದವು. ನಾಳೆಯ ಚಿಂತೆಯೆಂಬುದೇ ಅವರಿಗೆ ಗೊತ್ತಿಲ್ಲ. ಅತಿಥಿ ಅಭ್ಯಾಗತರ ಸತ್ಕಾರ, ದಾನ ಧರ್ಮಗಳೆಂದರೆ ತೀರಿತು, ಅವರ ಕೈಗೆ ಹಿಡಿತಡೆಯೇ ಇಲ್ಲ. ಅವರು ಮಿಷ್ಟಾನ್ನ ರಸಿಕರು. ಒಳ್ಳೇ ಸ್ವಾದಿಷ್ಟವಾದ ಪಕ್ವಾನ್ನಗಳನ್ನು ಮಾಡುವುದನ್ನು

ಅವರು ಕಲಿತುಕೊಂಡಿದ್ದರು. ತಾವು ಮಾಡಿ ನಾಲ್ಕು ಜನರಿಗೆ ತಿನಿಸುವು ದೆಂದರೆ ಅವರಿಗೆ ಹಿಂದುಮುಂದಿನ ಯೋಚನೆಯೆ ಇರುತ್ತಿರಲಿಲ್ಲ. ಇದರಲ್ಲಿಯೇ ಎಷ್ಟೋ ಆಸ್ತಿಯನ್ನು ಕಳೆದುಕೊಂಡಿದ್ದರೂ ರೀತಿಯನ್ನು ತಿದ್ದಿಕೊಳ್ಳುವ ಆವಶ್ಯಕತೆ ಅವರಿಗೆ ತೋರಿರಲಿಲ್ಲ; ತೋರಿದ್ದರೂ ಈಗ ತಿದ್ದಿಕೊಳ್ಳುವುದು ಸಾಧ್ಯವೂ ಇರಲಿಲ್ಲ. ಪ್ರೇಮಶಂಕರರ ಬಿಡುಗಡೆಗಾಗಿ ಮಾಡಿದ ಸಾಲದ ಹಣದಲ್ಲಿ ಬಹ್ವಂಶ ಅವರಲ್ಲಿ ಉಳಿದಿತ್ತು. ಸಾಲವೂ ಸ್ವಂತ ಗಳಿಕೆಯೆಂದೇ ಅವರು ತಿಳಿಯುತ್ತಿದ್ದರು. ಬಹುದಿನಗಳ ತರುವಾಯ ದೊಡ್ಡ ಮೊತ್ತದಲ್ಲಿ ಹಣ ಕೈಗೆ ಬರುತ್ತಲೂ ಉಣಿಸುತಿನಿಸಿನ ಸಂಭ್ರಮದ ಕೋಲಾಹಲ ಆರಂಭ ವಾಯಿತು. ಅನೇಕ ವರುಷಗಳ ತರುವಾಯ ಈ ಸಲ ಅಣ್ಣನ ಶ್ರಾದ್ಧವನ್ನು ಅತ್ಯಂತ ವೈಭವದಿಂದ ನೆರವೇರಿಸಿದರು. ಭೋಜನ–ದಾನ–ದಕ್ಷಿಣೆಗಳ ಸಡಗರ ವಾರಗಟ್ಟಲೆ ನಡೆಯಿತು.

ಹತ್ತಿರ ದುಡ್ಡಿರುವ ತನಕ ಪ್ರಭಾಶಂಕರರ ಕೈ ನಿಲ್ಲಲಾರದೆಂದು ಅವರ ಹೆಂಡತಿಗೆ ಚೆನ್ನಾಗಿ ಗೊತ್ತು. ಆದುದರಿಂದ ಅವಳು ಇಬ್ಬರೂ ಹೆಣ್ಮಕ್ಕಳ ಮದುವೆಯನ್ನು ಈಗಲೇ ಮಾಡಬೇಕೆಂದು ಅವರನ್ನು ಪ್ರಚೋದಿಸಿದಳು. ಮಾರ್ಗಶೀರ್ಷದಲ್ಲಿ ಮದುವೆ ಮಾಡುವುದು ನಿಶ್ಚಯವೂ ಆಯಿತು. ಕಕ್ಕನ ನೆರವಿಗಾಗಿ ಪ್ರೇಮಶಂಕರರು ಬಹುಶಃ ಇಲ್ಲಿಯೇ ಇರುತ್ತಿದ್ದರು. ಒಳ್ಳೇ ಅಚ್ಚರಿಯ ಮಾತೆಂದರೆ ಈ ಸಂಗತಿಯಿಂದ ಜ್ಞಾನಶಂಕರರು ತುಂಬಾ ಸಂತೋಷಪಟ್ಟರು. ಇಷ್ಟೇ ಅಲ್ಲ, ಗೋರಖಪುರದಿಂದ ಕೆಲವು ಚೀಲ ಅಕ್ಕಿ, ಸಕ್ಕರೆ, ತುಪ್ಪದ ಡಬ್ಬಿಗಳನ್ನು ಕಳಿಸಿದರು. ಸಡಗರದ ಠೀವಿಯಿಂದ ಮದುವೆಗೂ ಬಂದರು. ಅಳಿಯಂದಿರಿಬ್ಬರಿಗೂ ಚಿನ್ನದ ಗಡಿಯಾಳ, ಮೋಹನ ಮಾಲೆಗಳನ್ನು ಕೊಟ್ಟರು. ಬೀಗರಿಗೆ, ಮನೆಯವರಿಗೆ ಬೆಲೆಬಾಳುವ ಉಡುಗೊರೆ, ಆಳುಹೋಳುಗಳಿಗೆಲ್ಲ ಐದೈದು ರೂಪಾಯಿ ಕೊಟ್ಟರು. ಊರೆಲ್ಲಾ ಅವರಿಗೆ ಸೈ ಸೈ ಎಂದಿತು.

ಮಿಕ್ಕುಳಿದ ಮದುವೆಯ ಸಾಮುಗ್ರಿಗಳಿಂದ ಮುಂದೆ ಕೆಲದಿನ ಲಾಲಾ ಪ್ರಭಾಶಂಕರರ ನಾಲಗೆಸವಿಗೆ ಮಾರ್ಗವಾಯಿತು. ಆಮೇಲೆ ಅಡ್ಡೆ ಕಟ್ಟಾಯಿತು. ಒಣ ಊಟ ಅವರಿಗೆ ರುಚಿಸುತ್ತಿರಲಿಲ್ಲ–ಊಟ ಗಂಟಲೊಳಗೇ ಇಳಿಯುತ್ತಿರಲಿಲ್ಲ. ಮನಸು ಬಹಳ ಚಡಪಡಿಸಿ, ತಾವು ಬರೆದಿಟ್ಟಿದ್ದ

ಪಾಕಶಾಸ್ತ್ರದ ಪುಸ್ತಕವನ್ನು ಮಗುಚುವರು. ಸುಲಭದಲ್ಲಿ ಯಾವುದಾದರೂ ತಿಂಡಿಯನ್ನುಮಾಡಬಹುದೇ ಎಂದು. ಆದರೆ ನಿರಾಶರಾಗಿ ಮನಸಿಗೆ ಆ ವಿಷಯ ಮರೆಸುವದಕ್ಕಾಗಿ ಎಡೆಯಾಡತೊಡಗುವರು. ಪ್ರಭಾಶಂಕರರು ನಿತ್ಯಪ್ರಾ ವಾಯುಸೇವನೆಯ ನೆವದಿಂದ ಪ್ರೇಮಶಂಕರರಲ್ಲಿ ಹೋಗುತ್ತಿದ್ದರು. ಆ ಮಾತು ಈ ಮಾತು ಆಡುತ್ತ ಸ್ವಾದಿಷ್ಟವಾದ ತಿಂಡಿಯ ಮಾತೆತ್ತಿ, ಹಿಂದಿನ ಕತೆಯನ್ನು ಬಣ್ಣಿಸುವರು. ಪ್ರೇಮಶಂಕರರು ಅದರ ಇಂಗಿತವನ್ನರಿತು ಶೀಲಮಣಿಯಿಂದ ಆಗಾಗ ತಿಂಡಿ ಮಾಡಿಸಿಕೊಡುತ್ತಿದ್ದರು. ಆದರೆ ಅವರ ಪ್ರಖರವಾದ ನಾಲಗೆಯ ಚಪಲ ಬಹಳ ಸಲ ಪೂರ್ಣವಾಗುತ್ತಿರಲಿಲ್ಲ. ಆಗವರು ನೇರವಾಗಿ ಮನೆಗೆ ಹೋಗದೆ ಮಿಠಾಯಿ ಅಂಗಡಿಗಳ ಎದುರು ಹಾಯ್ದು ಹೋಗುವರು. ನಾಲಗೆಯಿಂದ ಪಡೆಯುವ ತೃಪ್ತಿಯನ್ನು ಮೂಗಿನಿಂದಲೇ ಪೂರಯಿಸಿಕೊಂಡು ಸಾಗುವರು. ಎಂತಹ ಕರುಣಾಮಯ ದೃಶ್ಯ !

ಒಂದು ದಿನ ಪ್ರೇಮಶಂಕರರು ಲಖನಪುರ ಮೊಕದ್ದಮೆಯ ಗೆಲವಿನ ಸುದ್ದಿಯನ್ನು ಹೇಳಿದರು. ಪ್ರಭಾಶಂಕರರು ಪ್ರಸನ್ನರಾಗಿ, "ಬಹಳ ಸಂತೋಷ. ನಿಮ್ಮ ಪ್ರಯತ್ನ ಸಫಲವಾಗಿ ನಿರಪರಾಧಿ ಒಕ್ಕಲಿಗರ ಉದ್ಧಾರವಾಯಿತು. ದೇವರು ದೊಡ್ಡವನು. ಈ ಬಗ್ಗೆ ಒಂದು ಸಂತೋಷ ಸಮಾರಂಭ ನಡಸಬೇಕು" ಎಂದರು.

ಅಷ್ಟರಲ್ಲಿ ಜ್ವಾಲಾಸಿಂಹರು ಬರಲು, ಕಕ್ಷನ ವಿಚಾರವನ್ನು ಪ್ರೇಮಶಂಕರರು ಅವರಿಗೆ ತಿಳಿಸಿದರು. ಅವರು "ನನ್ನ ಇಚ್ಛೆಯೂ ಹಾಗಿದೆ" ಎಂದರು.

## ೪೭

ಗಾಯತ್ರಿ ಸತ್ತ ಸುದ್ದಿ ನಿನ್ನೆ ತಾನೆ ಬಂದಿತ್ತು. ಶ್ರದ್ಧೆ ರಾತ್ರಿಯೆಲ್ಲಾ ಅತ್ತಳು. ಈಗಲೂ ಕಣ್ಮುಂದೆ ಗಾಯತ್ರಿ ಸುಳಿಯುತ್ತಿದ್ದಳು. ಅವಳನ್ನು ನೆನೆಯುತ್ತ, ಜೀವನ ಎಷ್ಟು ಅನಿಶ್ಚಿತ ! ಮನದ ಅಭಿಲಾಷೆಗಳೆಲ್ಲ ಅಲ್ಲಿಯೇ ಉಳಿಯುತ್ತವೆ, ಮನುಷ್ಯ ಹೊರಟುಹೋಗುತ್ತಾನೆ, ಎಂಬ ವಿಚಾರ ಬಂತು. ನನ್ನ ಬದುಕು ಕೂಡ ಏನು ನೆಚ್ಚಿಕೆ ? ಎಂಟು ವರುಷಗಳಾದವು—ಅವರೊಂದು ತುದಿಯಲ್ಲಿ, ನಾನೊಂದು ತುದಿಯಲ್ಲಿ; ಒಬ್ಬರೂ ಸರಿಯಲೊಲ್ಲೆವು. ಈ

ವರೆಗೆ ಪ್ರಾಯಶ್ಚಿತ್ತ ತೆಗೆದುಕೊಳ್ಳದವರು ಇನ್ನು ತೆಗೆದುಕೊಳ್ಳಲಾರರು. ತಮ್ಮ ಪುಣ್ಯಕಾರ್ಯದಲ್ಲಿಯೇ ಅವರ ಆತ್ಮಕ್ಕೆ ತೃಪ್ತಿ. ಅವರ ಮುಂದೆ ಪ್ರಾಯಶ್ಚಿತ್ತದ ಮಹತ್ವವಿಲ್ಲ, ಅಗತ್ಯವಿಲ್ಲ. ಇನ್ನು ನಾನೇ ಸರಿಯುವುದು ಸರಿ. ನನ್ನಿಷ್ಟು ದಿನದ ತಪಸ್ಸು, ವ್ರತಗಳಿಂದ ಅವರ ಪ್ರಾಯಶ್ಚಿತ್ತ ಆಗ ಲಿಲ್ಲವೆ? ಅಂತಹ ಯಾವ ಅನುಷ್ಠಾನವಿಲ್ಲವೇ ? ದೇವರೇ, ಹೀಗೆಯೇ ಅವರ ಸೇವೆಯಿಂದ ವಂಚಿತಳಾಗಿ ನನ್ನ ಜೀವನವೂ ವ್ಯರ್ಥವಾಗಿ ಕೊನೆಗೊಳ್ಳುವುದೆ?

ವಿದ್ಯೆ ಈ ಚಿಂತೆಯಲ್ಲಿರುವಾಗ ತಲೆವಾಗಿಲಲ್ಲಿ ಬಹುಜನರ ಗದ್ದಲ ಕೇಳಿಸಿತು. ತೊತ್ತು ಸುದ್ದಿ ತಂದಳು. " ಅಮ್ಮಾ, ಲಖನಪುರದವರೆಲ್ಲ ಸೆರೆ ಬಿಟ್ಟು ಬಂದಿದ್ದಾರೆ ಬಾಗಿಲಲ್ಲಿ ನಿಂತು ಬಾಬೂಜಿಯನ್ನು ಕೊಂಡಾಡುತ್ತಿ ದ್ದಾರೆ. "

ಮಾಯಾಶಂಕರನು ಜಿಗಿಯುತ್ತ ಬಂದು– "ದೊಡ್ಡಮ್ಮಾ, ಲಖನಪುರದ ಮಂದಿಯೆಲ್ಲ ಬಿಟ್ಟು ಬಂತು. ಊರಲ್ಲಿ ಅವರ ಮೆರವಣಿಗೆ ಹೊರಟಿತ್ತು. ದೊಡ್ಡಪ್ಪ ನಾನು ಎಲ್ಲರೂ ಹೋಗಿದ್ದೆವು. ಕೀಲಿಕೈ ಕೊಡು, ಅವರಿಗೆ ಕೂಡ್ರ ಲಿಕ್ಕೆ ಕೋಣೆ ತೆರೆದು ಕೊಡುತ್ತೇನೆ. "

ಶ್ರದ್ಧೆ ಕೀಲಿಕೈ ಕೊಟ್ಟು ಕಳಿಸಿದಳು. ಬಾಗಿಲಲ್ಲಿ ಪ್ರೇಮಶಂಕರರ ಜಯಜಯಕಾರ ನಡೆದಿತ್ತು. ಅವಳ ಮೋರೆ ಆತ್ಮೋಲ್ಲಾಸದಿಂದ ಕಳೆ ಯೇರಿತ್ತು. ಇವರನ್ನೆಲ್ಲ ಈ ದಿನ ಇಲ್ಲಿಯೇ ಇರಿಸಿಕೊಂಡು ಸತ್ಯನಾರಾ ಯಣ ಮಾಡಬೇಕು, ಹಬ್ಬ ಮಾಡಬೇಕು, ಈಗಲೇ ಧಾವಿಸಿ ಪ್ರೇಮಶಂಕರರ ಕಾಲಮೇಲೆ ಬೀಳಬೇಕು ಎಂದು ನಾನಾಬಗೆಯಾಗಿ ಹಾರೈಸುತ್ತಿದ್ದಳು.

ಕೆಳಗೆ ಲಖನಪುರದ ಜನ ಹಾಡುತ್ತ ಕುಳಿತರು. ಮಾಯಾಶಂಕರ ಓಡುತ್ತ ಬಂದು, " ಎಷ್ಟು ಚೆನ್ನಾಗಿ ಹಾಡುತ್ತಾರೆ ನೋಡಮ್ಮಾ. ಎಷ್ಟು ಒಳ್ಳೇ ಜನ ಅವರು. " ಎಂದು ದೊಡ್ಡಮ್ಮನಿಗೆ ಹೇಳಿದ.

" ಇವರಿಗೆ ಏನಾದರೂ ಹಬ್ಬ ಮಾಡಿಸಬೇಕಪ್ಪಾ " ಎಂದಳು ಶ್ರದ್ಧೆ.

" ನನಗೂ ಹಾಗೇ ಅನಿಸುತ್ತದಮ್ಮಾ. ಏನೇನು ಸಾಮಾನು ಬೇಕು ಹೇಳು, ತರಿಸುತ್ತೇನೆ. "

" ಸಾಮಾನು ತರಿಸಿ ಅಡಿಗೆ ಆಗುವುದೆಂದರೆ ಬಹಳ ತಡವಾಗುತ್ತದೆ.

ಸದ್ಯ ಇಪ್ಪತ್ತು ರೂಪಾಯಿಯ ಮಿಠಾಯಿ ತರಿಸಿ ಉಪಹಾರ ಮಾಡಿಸು ” ಎಂದು ಶ್ರದ್ಧೆ ಹೇಳಿದಳು.

ಮಧ್ಯಾಹ್ನದ ವರೆಗೆ ಗಾಯನವಾದನ ನಡೆಸಿ, ಲಖನಪ್ರದವರು ಉಪಹಾರ ಮಾಡಿದರು. ಅಷ್ಟರಲ್ಲಿ ಉಂಡುಕೊಂಡು ಸಂಜೆಗೆ ಹೋಗಿರೆಂದು ಶ್ರದ್ಧಾದೇವಿಯ ಅಪ್ಪಣೆ ಬಂದಿತು. ಎಲ್ಲರ ಮನಸೂ ಊರ ಕಡೆ ಸೆಳವಿನಿಂದ ಹರಿಯುತ್ತಿದ್ದರೂ ಈ ಒಲವನ್ನು ಹೇಗೆ ನಿರಾಕರಿಸಬಲ್ಲರು ?

ಅಡಿಗೆ ಏರ್ಪಾಡಿನ ಮೇಲ್ವಿಚಾರಣೆ ಪ್ರಭಾಶಂಕರರೇ ವಹಿಸಿದ್ದರೆಂದು ಹೇಳಬೇಕಾಗಿಲ್ಲ. ಇಷ್ಟು ದಿನ ಅವರು ತಮ್ಮ ಪಾಕದ ಸವಿಯನ್ನು ಪಟ್ಟಣಿಗರಿಗೆ ಮಾತ್ರ ಸವಿಸಿದ್ದರು. ಈಗ ಹಳ್ಳಿಗರಿಗೂ ಅದನ್ನು ನೀಡುವ ಯೋಗ ಒದಗಿತ್ತು. ಕೊನೆವರೆಗೂ ನೆನಪುಳಿಯುವಂತಹ ಬಗೆಬಗೆಯ ಸವಿಸವಿಯ ಪಕ್ವಾನ್ನಗಳನ್ನು ಒಳ್ಳೇ ಹುರುಪಿನಿಂದ ಮಾಡಿಸಿದರು. ಬಹಳ ಅವಸರ ಮಾಡಿದರೂ ರಾತ್ರಿ ಎಂಟಕ್ಕೆ ಊಟವಾಯಿತು. ಪ್ರಿಯನಾಥ–ಇರ್ಫಾನ ಅಲಿಯವರ ಕಾರುಗಳು ಹಳ್ಳಿಗರ ಸೇವೆಗೆ ಅಣಿಯಾಗಿ ನಿಂತಿದ್ದವು. ಎಲ್ಲರನ್ನೂ ಊರಿಗೆ ಬೀಳ್ಕೊಟ್ಟು ಮನೆಯವರ ಊಟ ಮುಗಿದಾಗ ರಾತ್ರಿ ಹತ್ತು ಗಂಟೆಯಾಯಿತು

ಪ್ರೇಮಶಂಕರರು ಹಾಜೀಪುರಕ್ಕೆ ಹೊರಡುವ ಎತ್ತುಗಡೆಯಲ್ಲಿರುವಾಗ ದಾಸಿ ಬಂದು, “ ಈವೊತ್ತು ಇಲ್ಲಿಯೇ ಇರಬೇಕಂತೆ, ಅವ್ವಾಅವರು ಹೇಳಿದರು, ರಾತ್ರಿ ಬಹಳವಾಗಿದೆ, ” ಎಂದಳು. ಈ ಕೃಪಾದೃಷ್ಟಿ ಅವರನ್ನು ಚಕಿತಗೊಳಿಸಿತು.

ತೊತ್ತು ಹೊರಟುಹೋದ ಮೇಲೆ ಜ್ವಾಲಾಸಿಂಹರು “ ಇಂದು ನಿಮಗೆ ತಾರಾಬಲ ಚೆನ್ನಾಗಿರುವಂತೆ ಕಾಣುತ್ತಿದೆ. ಇನ್ನೂ ಹೆಚ್ಚಿನ ವಿಜಯ ಪ್ರಾಪ್ತವಾಗುವುದರಲ್ಲಿದೆ. ” ಎಂದರು.

“ ಏನೋ ಹೊಸ ಉಪದೇಶ ಕೇಳಬೇಕಾಗಬಹುದು, ಮತ್ತೇನು ? ” ಪ್ರೇಮಶಂಕರರೆಂದರು.

“ ಇಲ್ಲರೀ, ನನಗೆನಿಸುತ್ತಿದೆ— ಇಂದು ನಿಮಗೆ ದೇವಿ ವರ ಕೊಡುತ್ತಾಳೆ ”

“ ನಮ್ಮ ದೇವಿ ಅಷ್ಟು ಭಕ್ತವತ್ಸಲೆಯಲ್ಲ. ”

" ಒಳ್ಳೇದು, ನಾಳೆ ನಿಮಗೇ ಗೊತ್ತಾಗುತ್ತದೆ. ಇನ್ನು ನನಗೆ ಅಪ್ಪಣೆ ಕೊಡಿರಿ. '' ಎಂದು ಅವರು ಮಾಯಾಶಂಕರನೊಂದಿಗೆ ಹೊರಟುಹೋದರು.

ತೊತ್ತು ಪ್ರೇಮಶಂಕರರಿಗಾಗಿ ಮಂಚವನ್ನು ಹಾಸಿ ಸಿದ್ಧಪಡಿಸಿದ್ದಳು. ಅವರು ಅಡ್ಡಾದೊಡನೆ ಅನಿವಾರ್ಯವಾಗಿಯೇ ಅವರ ಮನದಲ್ಲಿ ವಿಚಾರಗಳೆದ್ದುವು. ಇಂದೇಕೆ ನನ್ನ ಮೇಲೆ ಇಷ್ಟೊಂದು ದಯೆ ಇವಳಿಗೆ? ತೊತ್ತಿನ ಕೌಶಲವಲ್ಲವಷ್ಟೆ? ಅವಳೇನು ಅಂಥ ವಿನೋದಗಾರ್ತಿಯಲ್ಲ. ಅವಳ ನಗೆ ಚಾಟವೇ ಆಗಿದ್ದರೆ ಸುಮ್ಮನೆ ನಾಚಿಕೆಗೇಡಾದೀತು. ಶ್ರದ್ಧೆ ತನ್ನ ಮನದಲ್ಲಿ ಏನೆಂದುಕೊಳ್ಳುವಳೋ? ಈ ಶಂಕೆಗಳನ್ನು ತಳ್ಳಿಹಾಕಲು ಅವರೊಂದು ಪುಸ್ತಕವನ್ನು ಓದತೊಡಗಿದರು.

ಜ್ವಾಲಾಸಿಂಹರ ಭವಿಷ್ಯವಾಣಿ ನಿಜವಾಯಿತು. ಅವರ ತಪಸ್ಸು ಇಂದು ಪೂರ್ಣವಾಗಿತ್ತು. ಅವರ ಕೀರ್ತಿ ಶ್ರದ್ಧೆಯನ್ನು ಒಲಿಸಿತ್ತು. ನೂರಾರು ಮುಖಗಳಿಂದ ಪ್ರೇಮಶಂಕರರ ಜಯಜಯಕಾರವನ್ನು ಕೇಳಿದಾಗಿನಿಂದಲೂ ಒಂದು ಪ್ರಶ್ನೆ ಅವಳೆದುರು ಬಂದಿತ್ತು: ಇಷ್ಟು ಅಂತಃಕರಣಗಳ ಶುಭೇಚ್ಛೆ ಪ್ರಾಯಶ್ಚಿತ್ತಕ್ಕಿಂತಲೂ ಕಡಿಮೆಯೆ? ಎಂದಿಗೂ ಅಲ್ಲ. ಪರೋಪಕಾರದ ಮಹಿಮೆ ಪ್ರಾಯಶ್ಚಿತ್ತಕ್ಕಿಂತ ಕಡಿಮೆಯಾಗಲಾರದು; ಏಕೆ, ಪರೋಪಕಾರವೇ ನಿಜವಾದ ಪ್ರಾಯಶ್ಚಿತ್ತ. ಇಷ್ಟು ಹರಕೆಗಳು ಎಂತಹ ಮಹಾಪಾಪಿಯನ್ನೂ ಉದ್ಧರಿಸಬಲ್ಲವು. ಇದರೆದುರು ಒಣ ಪ್ರಾಯಶ್ಚಿತ್ತಕ್ಕೆ ಬೆಲೆಯುಂಟೇ? ಅಲ್ಲದೆ, ಈ ಹರಕೆಗಳು ಮುಗಿದವೇ ಇಲ್ಲಿಗೆ? ಈ ಜನಗಳು ಊರಿಗೆ ಹೋದರೆಂದರೆ, ಅವರ ಮನೆಯವರೆಲ್ಲಾ ಇನ್ನೂ ಹರಸುವರು; ಸಾಯುವವರೆಗೂ ಮನಪಾರೆ ಹರಸುವರು. ಇಂತಹ ಯಶಸ್ವಿಯಾದ ಶ್ರದ್ಧೇಯರಾದ ಪುರುಷರಿಗೆ ಪ್ರಾಯಶ್ಚಿತ್ತದ ಅಗತ್ಯವೇ ಇಲ್ಲ. ಈ ಅಮೃತವೃಷ್ಟಿಯಿಂದ ಅವರು ಪವಿತ್ರರಾಗಿದ್ದಾರೆ.

ಹನ್ನೊಂದು ಹೊಡೆದಿತ್ತು. ಶ್ರದ್ಧೆ ಮೇಲಿಂದಿಳಿದುಬಂದು, ಸಂಕೋಚದಿಂದ ದಿವಾಣಖಾನೆಯ ಬಾಗಿಲಲ್ಲಿ ಹೋಗಿ ನಿಂತಳು. ಲ್ಯಾಂಪು ಉರಿಯುತ್ತಿತ್ತು. ಪ್ರೇಮಶಂಕರರು ಪುಸ್ತಕ ಓದುತ್ತಿದ್ದರು. ಅವರ ಮುಖದಲ್ಲಿ ಆತ್ಮಗೌರವದ ದಿವ್ಯಜ್ಯೋತಿ ಮಿನುಗುತ್ತಿತ್ತು. ಅವಳ ಹೃದಯ ಉಕ್ಕಿ

ಬಂದಿತ್ತು, ಕಣ್ಣುಗಳು ಕಂಬನಿದುಂಬಿದ್ದವು. ಹದಿನಾಲ್ಕು ವರುಷಗಳ ತರುವಾಯ ಇಂದು ತನ್ನ ಪ್ರಾಣಪತಿಯ ಸೇವಾಭಾಗ್ಯ ದೊರಕೊಂಡಿತ್ತು. ಆಕಾಂಕ್ಷೆಗಳೆಲ್ಲ ಮುಗ್ಗಿಹೋದ ವಿರಹಿಣಿ ಅವಳಲ್ಲ ಈಗ. ಅವಳ ಹೃದಯ ಅಭಿಲಾಷೆಗಳಿಂದ ಉಯ್ಯಾಲೆಯಾಡುತ್ತಿತ್ತು. ಆದರೆ ಅವಳ ಕಣ್ಣುಗಳಲ್ಲಿ ತೃಷ್ಣೆಯಿರಲಿಲ್ಲ! ತುಟಿಗಳಲ್ಲಿ ನಗೆ ಮುಗುಳಿರಲಿಲ್ಲ. ಗಂಡನೆಡೆ ನವವಧು ಬರುವಂತೆ ಅವಳು ಬಂದಿರಲಿಲ್ಲ. ಒಬ್ಬ ಭಕ್ತೆ ತನ್ನಿಷ್ಟ ದೇವತೆಯ ಬಳಿ ಸಾರುವಂತೆ, ಭಕ್ತಿ ಅನುರಾಗಗಳಲ್ಲಿ ಮುಳುಗಿಬಂದಿದ್ದಳು.

ಕ್ಷಣ ಹೊತ್ತು ಬಾಗಿಲಲ್ಲಿ ನಿಂತಳು. ಬಳಿಕ ಹೋದವಳೇ ಪ್ರೇಮ ಶಂಕರರ ಅಡಿಗಳಮೇಲೆ ಬಿದ್ದಳು.

## ೪೮

ಮಾನವಚರಿತ್ರ ತುಂಬಾ ಕಪ್ಪಲ್ಲ, ತುಂಬಾ ಬಿಳಿದೂ ಅಲ್ಲ. ಎರಡೂ ಬಣ್ಣಗಳ ವಿಚಿತ್ರವಾದ ಮಿಶ್ರಣ ಅದರಲ್ಲಿರುತ್ತದೆ. ಸ್ಥಿತಿ ಅನುಕೂಲವಿತ್ತೋ ಅವನು ಋಷಿ ಸಮಾನನಾಗುತ್ತಾನೆ, ಪ್ರತಿಕೂಲವಾಯಿತೋ ನರಾಧಮ ನಾಗುತ್ತಾನೆ. ತನ್ನ ಪರಿಸ್ಥಿತಿಗಳ ಆಟಿಕೆ ಅವನು. ಬಾಬೂ ಜ್ಞಾನಶಂಕರರು ಇದುವರೆಗೆ ಸ್ವಾರ್ಥಿ, ಲೋಭಿ, ಅಲ್ಪಹೃದಯರಾಗಿದ್ದುದು ಕೇವಲ ಪರಿಸ್ಥಿತಿ ಗಳ ಫಲವದು. ಅಸಂಪನ್ನತೆ ಅವರ ಕಪ್ಪನ್ನು ಇನ್ನಷ್ಟು ದಟ್ಟಮಾಡಿತ್ತು. ಕುಲಗೌರವಕ್ಕಾಗಿ ತಮ್ಮ ಸಂಪತ್ತನ್ನು ಸೂರೆಮಾಡಿದ ಮನೆತನದಲ್ಲಿ ಜನಿಸಿದರು ಅವರು. ಇಂತಹ ಸ್ಥಿತಿಯಲ್ಲಿ ಅವರಿಗೆ ಸಹಜವಾಗಿ ಶಾಂತಿ ದೊರೆಯಬಹುದಿತ್ತು; ಆದರೆ ಉಚ್ಚಶಿಕ್ಷಣವು, ಜೀವನವೆಂದರೆ ದೊಡ್ಡ ಕಾಳಗದ ಕಣವೆಂದು ತಿಳಿಯಲು ಕಲಿಸಿತ್ತು. ಸಂಘರ್ಷನೀತಿಯನ್ನವಲಂಬಿಸಿ ಸಾಫಲ್ಯಪಡೆದ ದೊಡ್ಡವರ ಆದರ್ಶವೇ ಅವರ ಎದುರಿಗಿದ್ದುದು. ಈ ಶಿಕ್ಷಣವು ಅವರಿಗೆ ಬರೆಹ-ಮಾತುಗಾರಿಕೆಗಳಲ್ಲಿ ಜಾಣ್ಮೆ, ತರ್ಕದಲ್ಲಿ ಕೌಶಲ, ವ್ಯವ-ಹಾರದಲ್ಲಿ ಚಾತುರ್ಯಗಳನ್ನು ತಂದುಕೊಟ್ಟಿತ್ತೆಂಬುದರಲ್ಲಿ ಸಂದೇಹವಿಲ್ಲ. ಅದರೊಂದಿಗೆಯೇ ಅವರನ್ನು ಸ್ವಾರ್ಥಿಗಳನ್ನಾಗಿ, ಸ್ವಹಿತಪರಾಯಣರನ್ನಾ-ಗಿಯೂ ಮಾಡಿತ್ತು. ಆ ಶಿಕ್ಷಣ, ತಮ್ಮ ಗುಡಿಸಲನ್ನು ತೆರೆದಿಡುವುದನ್ನಾಗಲಿ, ಇತರರಿಗೆ ನೀಡಿ ತಾನು ಉಣ್ಣುವುದನ್ನಾಗಲಿ ಕಲಿಸುವುದಾಗಿರಲಿಲ್ಲ. ತಮ್ಮ

ಪ್ರಾಸಾದವನ್ನು ನಿರ್ಮಿಸಿಕೊಳ್ಳುವ ವರೆಗೂ ಮತ್ತೊಬ್ಬರಿಗೆ ಆಶ್ರಯವೀಯ ಬೇಕೆಂಬ ವಿಚಾರವೇ ಅವರಿಗೆ ಹೊಳೆಯದು; ತಮ್ಮ ಕಣಜಗಳು ತುಂಬುವ ತನಕ ಇತರರಿಗೆ ತುತ್ತನ್ನ ನೀಡಲರಿಯರು.

ಸುದೈವದಿಂದ ಅವರ ಪ್ರಾಸಾದ ನಿರ್ಮಿತವಾಗಿತ್ತು, ಎರಡನೆಯವರಿಗೆ ಆಸರವೀಯಲು ಅವರೀಗ ಸಿದ್ಧರಾಗಿದ್ದರು; ಅವರ ಕಣಜಗಳು ತುಂಬಿದ್ದವು, ಭಿಕ್ಷುಕರೆಂದರೆ ಅವರಿಗೀಗ ಅಸಡ್ಡೆಯಿಲ್ಲ. ಸಂಪತ್ತಿಶಾಲಿಗಳಾಗಿ ಅವರೀಗ ಉದಾರರಾಗಿದ್ದರು, ದೀನವತ್ಸಲರಾಗಿದ್ದರು. ಲಾಲಾ ಪ್ರಭಾಶಂಕರರ ಹೆಣ್ಮಕ್ಕಳ ಮದುವೆಗೆ ವಿಶೇಷ ಸಹಾಯವನ್ನು ಸಲ್ಲಿಸಿದ್ದರು. ಪ್ರೇಮಶಂಕರರ ವಿಷಯದಲ್ಲಿಯೂ ಭ್ರಾತೃಪ್ರೇಮ ಜಾಗೃತವಾಗಿತ್ತು. ಲಖನಪುರದ ಜನ ಬಿಡುಗಡೆ ಹೊಂದಿದುದಕ್ಕಾಗಿ ಜ್ಞಾನಶಂಕರರು ಅವರನ್ನು ಅಭಿನಂದಿಸಿದರು. ಗಾಯತ್ರಿಯ ಮರಣವಾರ್ತೆ ಬಂದಮೇಲೆ ಅವರು ಕಡೆಯ ಸಂಸ್ಕಾರವನ್ನು ಒಳ್ಳೆ ವೈಭವದಿಂದ ನೆರವೇರಿಸಿದರು; ಅದಕ್ಕೆ ಎಷ್ಟೋ ಸಾವಿರ ರೂಪಾಯಿ ವೆಚ್ಚಮಾಡಿದರು. ಅವಳ ನೆನಪಿಗಾಗಿ ಒಂದು ಕೆರೆ ಕಟ್ಟಿಸಿದರು. ಹುಲ್ಲು ಗುಡಿಸಲಿನಲ್ಲಿರುವಷ್ಟು ಕಾಲ ಬೆಂಕಿಗೆ ಹೆದರುತ್ತಿದ್ದರು; ಈಗವರ ಪಕ್ಕಾ ಮಹಲು ಸಿದ್ಧವಾಗಿದೆ; ಮದ್ದಿನ ಕುಳ್ಳಿಯ ಮೋಜನ್ನು ಈಗವರು ಬೇಕಾದ ಹಾಗೆ ನೋಡಬಲ್ಲರು.

ಜ್ಞಾನಶಂಕರರು ಈಗ ಕೀರ್ತಿಗಾಗಿ ಖ್ಯಾತಿಗಾಗಿ ಹಂಬಲಿಸುತ್ತಿದ್ದರು. ಲಖನೌದ ಮಹನೀಯರು ಇವರನ್ನು ಅನಧಿಕಾರಿಗಳೆಂದು ತಿಳಿದು ಬಿಗುಮಾನದಿಂದರು. ಗೋರಖಪುರದಲ್ಲಿ ಮೊದಲೇ ಅವರು ಗೌರವಪದವನ್ನು ಪಡೆದವರಾಗಿದ್ದರೂ ಈಗಿನ ಹೊಸಸ್ವರೂಪದಲ್ಲಿ ಅವರನ್ನು ಕಂಡು ಜನರು ಹೊಟ್ಟೆಕಿಚ್ಚುಪಡುತ್ತಿದ್ದರು. ಎರಡೂ ನಗರಗಳ ಶ್ರೀಮಂತರೊಡನೆ ಜ್ಞಾನಶಂಕರರ ಬಳಕೆಯನ್ನು ಹೆಚ್ಚಿಸಲಾರಂಭಿಸಿದರು. ಮೊದಲು ರಾಯಸಾಹೇಬರ ಸಿಕ್ಕಾಪಟ್ಟೆ ವೆಚ್ಚವನ್ನು ಕಡಿಮೆಮಾಡುವುದು ಅಗತ್ಯವೆಂದು ಅವರು ಬಗೆಯುತ್ತಿದ್ದರು. ಕೆಲವು ಕುದುರೆಗಳು, ಒಂದು ಮೋಟರು, ಕೆಲವು ಗಾಡಿಗಳನ್ನು ತೆಗೆಯಬೇಕೆನ್ನುತ್ತಿದ್ದರು. ಈಗ, ತಮ್ಮ ಗೌರವರಕ್ಷಣೆಗಾಗಿ ಇಷ್ಟೆಲ್ಲ ಆಡಂಬರ ಬೇಕೇಬೇಕು, ಅದೇಕೆ, ಇನ್ನೂ ಹೆಚ್ಚಿಸಬೇಕು ಎಂದು ತೋರುವುದು;—ಇಲ್ಲದಿದ್ದರೆ ತಾವು ಜನರ ಹಾಸ್ಯಕ್ಕೆ ಈಡಾದಾರು. ಆ ಜನರಿಗೆ

ಮೇಲಿಂದಮೇಲೆ ಅವುತಣ ಕೊಡುತ್ತಿದ್ದರು, ಸಣ್ಣವರು ದೊಡ್ಡವರೆನ್ನದೆ ಎಲ್ಲರೊಡನೆಯೂ ವಿನಯದಿಂದ ನಡೆದುಕೊಳ್ಳುವರು, ಒಳ್ಳೆಯ ಕೆಲಸಗಳಿಗೆ ಕೈಸಡಿಲು ಬಿಟ್ಟು ವಂತಿಗೆ ಕೊಡುತ್ತಿದ್ದರು. ಪತ್ರಿಕಾ ಸಂಪಾದಕರೊಡನೆ ಇದ್ದ ಪರಿಚಯವೀಗ ಮತ್ತಷ್ಟು ಬೆಳೆಯಿತು. ಅವರ ಉದಾರತೆ, ಅವರ ಸಜ್ಜನಿಕೆಗಳ ಪೊಗಳಿಕೆಗಳು ಪತ್ರಿಕೆಗಳಲ್ಲಿ ಬರತೊಡಗಿದವು. ಹೀಗೆ ಒಂದು ವರುಷ ಪೂರ್ಣ ಕಳೆದಿರಲಿಲ್ಲ, ಜ್ಞಾನಶಂಕರರು ಲಖನೌ ತಾಲ್ಲೂಕದಾರರ ಸಭೆಯ ಕಾರ್ಯದರ್ಶಿಯಾಗಿ ಆರಿಸಲ್ಪಟ್ಟರು. ರಾಜ್ಯಾಧಿಕಾರಿಗಳಲ್ಲಿಯೂ ಅವರಿಗೆ ಮಾನ ದೊರೆಯತೊಡಗಿತು. ಭಾಷಣಕಲೆಯಲ್ಲಿ ಕುಶಲರೇ ಇದ್ದರು; ಪ್ರಾಯಿಕವಾಗಿ ರಾಷ್ಟ್ರೀಯ ಸಮ್ಮೇಲನಗಳಲ್ಲಿ ಓಜಸ್ವಿಯಾದ ಭಾಷಣ ಮಾಡುತ್ತಿದ್ದರು; ಪತ್ರಿಕೆಗಳಲ್ಲಿ ಪ್ರಶಂಸೆ ಬರುತ್ತಿತ್ತು. ಇತ್ತ ರಾಷ್ಟ್ರೀಯ ನಾಯಕರಲ್ಲಿ ಅವರ ಗಣನೆಯಾಗುತ್ತಲಿತ್ತು, ಅತ್ತ ಅಧಿಕಾರಿಗಳಲ್ಲಿಯೂ ಮರ್ಯಾದೆ ಹೆಚ್ಚುತ್ತಲಿತ್ತು.

ಆದರೆ ತಮ್ಮ ಮೂಕ, ದೀನ ಪ್ರಜೆಗಳ ವಿಷಯದಲ್ಲಿ ಅವರ ವರ್ತನೆ ಇಷ್ಟು ಸದಯವಾಗಿರಲಿಲ್ಲ. ಆ ಗಿಡಗಳಲ್ಲಿ ಮುಳ್ಳುಗಳಿರಲಿಲ್ಲ; ಆದುದರಿಂದ ಅವುಗಳ ಹಣ್ಣುಗಳನ್ನು ಹರಿಯಲು ಯಾವ ಆತಂಕವೂ ಇರಲಿಲ್ಲ. ಕುಳಗಳಿಗೆ ಸಿಕ್ಕಾಬಟ್ಟೆ ಅನ್ನುವುದು, ವಸೂಲಿಗಾಗಿ ದಾವೆ ಮಾಡುವುದು ಅಖಂಡವಾಗಿ ನಡೆದಿತ್ತು. ಅವರ ಹಕ್ಕು ಕಸಿದುಕೊಳ್ಳಲಾಗುತ್ತಿತ್ತು; ಕಡ್ಡಾಯದಿಂದ ಕಪ್ಪ ಕಾಣಿಕೆ ಎತ್ತಲಾಗುತ್ತಿತ್ತು. ಜಮೀನುದಾರಿಯ ಮೇಲೆ ಐದು ಲಕ್ಷದ ಸಾಲವನ್ನು ರಾಯಸಾಹೇಬರು ಹೇರಿಹೋಗಿದ್ದರು. ವರುಷಾ ಇಪ್ಪತ್ತೈದು ಸಾವಿರ ರೂಪಾಯಿ ಅದರ ಬಡ್ಡಿ ತೆರಬೇಕು. ಜ್ಞಾನಶಂಕರರು ಈ ಪ್ರಯತ್ನಗಳಲ್ಲಿ ಬಡ್ಡಿಯನ್ನು ಭರತಿ ಮಾಡಿಕೊಂಡರು. ಇಷ್ಟು ಅತ್ಯಾಚಾರವೆಸಗಿದರೂ ಪ್ರಜೆಗಳು ಅವರ ಮೇಲೆ ಅಸಂತುಷ್ಟರಾಗಲಿಲ್ಲ. ಅವರು ಕಹಿಮದ್ದನ್ನು ಸವಿ ಮಾಡಿ ಕುಡಿಸುತ್ತಿದ್ದರು. ಗಾಯತ್ರಿಯ ಶ್ರಾದ್ಧದಲ್ಲಿ ಒಂದು ಸಾವಿರ ಕಂಬಳಿಗಳನ್ನು ಹಂಚಿದರು, ಬ್ರಾಹ್ಮಣ ಭೋಜನ ಮಾಡಿಸಿದರು. ಹೀಗೆಯೇ ರಾಯಸಾಹೇಬರ ಇಲಾಕೆಯಲ್ಲಿ, ಹೋಳಿಯ ಹಬ್ಬವನ್ನು ಏರ್ಪಡಿಸಿ ಕುಳಗಳಿಗೆ ಹೊಟ್ಟೆತುಂಬ ಭಂಗಿಯನ್ನು ಕೊಟ್ಟು ಮುಗ್ಧಗೊಳಿಸಿದರು. ಕೆಲವು ಕಡೆ ಮಂಡಿಗಳನ್ನು ಸ್ಥಾಪಿಸಿ ಒಕ್ಕಲಿಗರಿಗೆ ತಮ್ಮ ಬೆಳೆಗಳನ್ನು

ಮಾರುವುದಕ್ಕೆ ಸೌಕರ್ಯವನ್ನು ಕಲ್ಪಿಸಿದರು. ಇದರಿಂದ ಜಮೀನುದಾರಿಯ ಲಾಭವೂ ಚೆನ್ನಾಗಿಯೇ ಹೆಚ್ಚಿತು.

ಎರಡು ವರುಷ ಹೀಗೆ ಕಳೆದವು. ಜ್ಞಾನಶಂಕರರ ಸೌಭಾಗ್ಯ ಸೂರ್ಯನು ನಡುನೆತ್ತಿಗೇರಿದ್ದನು. ರಾಯಸಾಹೇಬರ ಸಾಲದಿಂದ ಬಹು ಮಟ್ಟಿಗೆ ಅವರು ಮುಕ್ತರಾಗಿದ್ದರು. ಅಧಿಕಾರಿಗಳಲ್ಲಿ ಮಾನವಿತ್ತು, ಶ್ರೀಮಂತರಲ್ಲಿ ಪ್ರತಿಷ್ಠೆಯಿತ್ತು, ವಿದ್ವಜ್ಜನರಲ್ಲಿ ಆದರವಿತ್ತು. ಮರ್ಮಜ್ಞಲೇಖಕರೆಂದೂ ಕುಶಲವಕ್ತಾರರೆಂದೂ ಹೆಸರಾಗಿದ್ದರು. ಸುಖಭೋಗದ ಸಕಲ ಸಾಮಗ್ರಿಗಳೂ ಕೈವಶವಾಗಿದ್ದವು. ಜೀವನದ ಮಹತ್ವಾಕಾಂಕ್ಷೆಗಳು ಪೂರ್ಣವಾಗಿದ್ದವು

ಈಗ ಜ್ಞಾನಶಂಕರರು ಎರಡುಮೂರು ತಿಂಗಳಿಗೊಮ್ಮೆ ಬನಾರಸಕ್ಕೆ ಅವಶ್ಯವಾಗಿ ಬರುತ್ತಿದ್ದರು ಪ್ರೇಮಶಂಕರರ ಬಳಿಯಿದ್ದು ಸರಲಜೀವನದ ಆನಂದವನ್ನು ಉಪಭೋಗಿಸುತ್ತಿದ್ದರು. ಅವರು ಪ್ರೇಮಶಂಕರರಿಗೆ ಅದೆಷ್ಟೋ ಸಲ—ಇನ್ನು ಈ ಅಡವಿಯೊಳಗೆ ಗುಡಿಸಲು ಹಾಕಿಕೊಂಡಿರುವುದು ಏನಗತ್ಯ? ಮನೆಯೊಳಗಿದ್ದುಕೊಂಡು ದೇವರು ಕೊಟ್ಟಿದ್ದ ಸಂಪತ್ತಿಯನ್ನು ಅನುಭೋಗಿಸ ಬಹುದು. ಸಾವಿರೆರಡು ಸಾವಿರ ಬಿಘೆ ಭೂಮಿ ಕೊಡುತ್ತೇನೆ; ಅಲ್ಲಿ ಬೇಕಾದ ಹಾಗೆ ಕೃಷಿಜೀವನದ ಆನಂದವನ್ನು ಹೊಂದಬಹುದು, ಎನ್ನುತ್ತಿದ್ದರು. ಪ್ರೇಮಶಂಕರರು, ನನಗೆ ಇದ್ದುದು ಸಾಕಷ್ಟಿದೆ, ಹೆಚ್ಚಿನ ಆವಶ್ಯಕತೆ ಯಾದರೂ ಏನು, ಎನ್ನುತ್ತಿದ್ದರು. ಆದರೆ ಮತ್ತೆ ಮತ್ತೆ ಬಂದ ಈ ಸಲಹೆ ಯಿಂದ ಒಂದಿಷ್ಟು ಪರಿಣಾಮವಾಗದೆ ಇರಲಿಲ್ಲ. ಸಾಗುವಳಿಯ ಕ್ಷೇತ್ರವನ್ನು ವಿಸ್ತರಿಸಲು ಅವರು ಒಪ್ಪಿದರು. ಅವರ ಹೊಲದ ಬದುವಿಗೆ ಹೊಂದಿ ಬೇರೊಬ್ಬ ಜಮೀನುದಾರರ ಐವತ್ತು ಬಿಘೆ ಭೂಮಿಯಿತ್ತು; ಅದನ್ನು ಹಿಡಿದರು. ಹುಲ್ಲಿನ ಗುಡಿಸಲಿನ ಎಡೆಯಲ್ಲಿ ಹಂಚಿನಮನೆ ನಿಂತಿತ್ತು. ಜ್ಞಾನಶಂಕರರು ಅವರೊಡನೆ ಈ ಎಲ್ಲ ವಿಷಯ ಮಾತನಾಡುತ್ತಿದ್ದರು. ಆದರೆ ಅವರ ಸಂತೋಷಮಯ, ದೋಷರಹಿತ ಸರಲಜೀವನದ ಮಹತ್ತ್ವ ಅವರಿಗೆ ಅರಿ ಯದುದಾಗಿರಲಿಲ್ಲ. ಹಲವಾರು ತೆರದ ಚಿಂತೆ-ತೊಂದರೆಗಳಲ್ಲಿದ್ದು ಬೇಸತ್ತಾಗ ಇಲ್ಲಿ ಬಂದರೆ ಇಲ್ಲಿಯ ಶಾಂತಿಮಯವಾದ ಅಬಾಧಿತ ವಿಶ್ರಾಂತಿಯಿಂದ ಅವರ ಚಿತ್ತವು ಪ್ರಫುಲ್ಲಿತವಾಗುತ್ತಿತ್ತು ಇಲ್ಲಿಂದ ಹೊರಡುವುದಕ್ಕೇ ಮನಸ್ಸಾ ಗುತ್ತಿರಲಿಲ್ಲ. ಈ ಸ್ಥಳ ಮೊದಲಿನಂತಿರಲಿಲ್ಲ ಒಬ್ಬ ಮನುಷ್ಯ ಸಾಧುವಿನಂತೆ

ತನ್ನ ಕುಟೀರದಲ್ಲಿ ಬಿದ್ದುಕೊಂಡಿರುವ ಸ್ಥಳವಾಗಿರಲಿಲ್ಲ. ರಮ್ಯವಾದ ಸುಂದರವಾದ ಚಿಕ್ಕದೊಂದು ವಸತಿಯುಂಟಾಗಿತ್ತು. ದಿನಾಲು ರಾಜಕೀಯ ಸಾಮಾಜಿಕ ವಿಷಯಗಳನ್ನು ಕುರಿತು ಸಂವಾದಗಳು ನಡೆಯುತ್ತಿದ್ದವು; ಬದುಕುಸಾವುಗಳ ಗೂಢವಾದ ಜಟಿಲವಾದ ಪ್ರಶ್ನೆಗಳ ಮೀಮಾಂಸೆ ನಡೆಯುತ್ತಿತ್ತು. ಇದೊಂದು ವಿದ್ವಜ್ಜನರ ಚಿಕ್ಕದೊಂದು ಕೂಟವೇ ಆಗಿತ್ತು. ವಿದ್ಯಾಪಕ್ಷಪಾತಿಯಾದ, ಅಹಂಕಾರಮುಕ್ತವಾದ ಒಂದು ಸಭೆಯಾಗಿತ್ತು. ನಿಜವಾಗಿಯೂ ಈ ಸ್ಥಾನ ಸಾರಲ್ಯ, ಸಂತೋಷ ಮತ್ತು ಸುವಿಚಾರಗಳ ತಪೋಭೂಮಿಯಾಗಿತ್ತು. ಈರ್ಷೆಯ ಸಂತಾಪವಿಲ್ಲ, ಲೋಭದ ಉನ್ಮಾದವಿಲ್ಲ, ತೃಷ್ಣೆಯ ಪ್ರಕೋಪಕ್ಕೆ ಎಡೆಯಿಲ್ಲ. ಇಲ್ಲಿ ಧನದ ಪೂಜೆ ನಡೆಯುತ್ತಿರಲಿಲ್ಲ, ದೀನತೆಯನ್ನು ಕಾಲ್ಕೆಳಗೆ ಮೆಟ್ಟುತ್ತಲೂ ಇರಲಿಲ್ಲ. ಒಬ್ಬನು ಗಾದಿಯ ಮೇಲೆ ಕುಳಿತಿರುವುದು, ಮತ್ತೊಬ್ಬ ತಪ್ಪುಗಾರನಂತೆ ಆವನೆದುರು ಕೈಜೋಡಿಸಿಕೊಂಡು ನಿಂತಿರುವುದು— ಈ ದೃಶ್ಯ ಇಲ್ಲ. ಒಡೆಯನ ಗದ್ದರಣೆಯಿಲ್ಲ, ಆಳಿನ ದೈನ್ಯದ ಸ್ವಾಮಿ-ಆರಾಧನೆಯಿಲ್ಲ ಎಲ್ಲರೂ ಒಬ್ಬನೊಬ್ಬನ ಸೇವಕ ಒಬ್ಬನೊಬ್ಬನ ಮಿತ್ರ, ಒಬ್ಬನೊಬ್ಬನ ಹಿತೈಷಿ. ಒಂದು ಕಡೆ ಡಾ. ಇರ್ಫಾನ ಅಲಿಯವರ ಸೊಗಸಾದ ಬಂಗಲೆ; ಹೂಬಳ್ಳಿಗಿಡಗಳಿಂದ ಕಂಗೊಳಿಸುತ್ತಿದೆ. ಅವರೀಗ ಸತ್ಯದ ಪಕ್ಷವನ್ನು ವಹಿಸಿ ಮಾತ್ರ ವಕೀಲಿ ನಡೆಸುತ್ತಿದ್ದರು, ದಿನದ ನಿರ್ವಾಹಕ್ಕೆ ಆಗತ್ಯವಿದ್ದಷ್ಟು ಮಾತ್ರ ಪ್ರತಿಫಲ ತೆಗೆದುಕೊಳ್ಳುತ್ತಿದ್ದರು, ಸಂಗ್ರಹ ಬುದ್ಧಿಯನ್ನು ತ್ಯಜಿಸಿಬಿಟ್ಟಿದ್ದರು. ತೋಟಗಾರಿಕೆಯಲ್ಲಿ ಮೊದಲಿನಿಂದಲೂ ಅವರಿಗೆ ಹವ್ಯಾಸ; ಮುಂಜಾನೆ ಸಂಜೆ ಪ್ರೇಮಶಂಕರರೊಡನೆ ಆ ಕೆಲಸದಲ್ಲಿ ತೊಡಗಿರುತ್ತಿದ್ದರು. ಮೊದಲವರು ಕುಂಡದಲ್ಲಿ ನಳನಳಿಸುವ ಹೂತ ಗಿಡಗಳನ್ನು ನೋಡಿ ಮಾತ್ರ ಸಂತಸಬಡುತ್ತಿದ್ದರು; ಅವುಗಳ ಸೇವೆಯ ಕೆಲಸಗಳನ್ನೆಲ್ಲ ತೋಟಿಗನೇ ಮಾಡುತ್ತಿದ್ದ. ಈಗ ತಮ್ಮ ಕೈಯಾರೆ ಎಲ್ಲ ಕೆಲಸಗಳನ್ನು ಮಾಡುತ್ತಲಿದ್ದರು. ಅವರ ಬಂಗಲೆಯ ಪಕ್ಕದಲ್ಲಿಯೇ ಪ್ರಿಯನಾಥ ಡಾಕ್ಟರರ ಮನೆ. ಮನೆಯ ಎದುರಿನಲ್ಲಿ ಒಂದು ಔಷಧಾಲಯವಿತ್ತು. ಈಗವರು ಹೆಚ್ಚಾಗಿ ಹಳ್ಳಿಹಳ್ಳಿ ಸಂಚರಿಸುತ್ತ, ಮನೆಮನೆಗೆ ಹೋಗಿ ರೋಗಿಗಳ ಯೋಗಕ್ಷೇಮ ನೋಡಿಕೊಳ್ಳುತ್ತಿದ್ದರು. ನೌಕರಿಯನ್ನು ಬಿಟ್ಟುಬಿಟ್ಟಿದ್ದರು. ಜೀವಿಕೆಯ ಸಲುವಾಗಿ ಅವರೊಂದು ಗೋಶಾಲೆಯನ್ನು

ತೆರೆದಿದ್ದರು; ಅಲ್ಲಿ ಅನೇಕ ಪಶ್ಚಿಮದ ಎಮ್ಮೆ-ಆಕಳುಗಳನ್ನು ಕಟ್ಟಿದ್ದರು. ಪಟ್ಟಣಕ್ಕೆ ಹಾಲು ಬೆಣ್ಣೆ ಒಯ್ದು ಮಾರುತ್ತಿದ್ದರು. ರೋಗಿಗಳ ಔಷಧೋಪ ಚಾರಕ್ಕಾಗಿ ಹಣವನ್ನೇನೂ ತೆಗೆದುಕೊಳ್ಳುತ್ತಿರಲಿಲ್ಲ. ಜ್ವಾಲಾಸಿಂಹ ಬಾಬು ಗಳೂ ಪ್ರೇಮಶಂಕರರೂ ಒಂದೇ ಮನೆಯಲ್ಲಿರುತ್ತಿದ್ದರು. ಶ್ರದ್ಧೆಗೂ ಶೀಲಮಣಿಗೂ ಸೊಗಸಾಗಿ ಕೂಡಿ ನಡೆದಿತ್ತು. ಮನೆಗೆಲಸಗಳಿಂದ ಬಿಡುವು ದೊರೆತಾಗ ಅವರಿಬ್ಬರೂ ರಾಟಿ ತೆಗೆದುಕೊಂಡು ಕೂಡ್ರುತ್ತಿದ್ದರು; ಇಲ್ಲವೆ ಹೊಲಿಗೆಯನ್ನೋ ಹೆಣಿಕೆಯನ್ನೋ ಮಾಡುತ್ತಿದ್ದರು. ಪ್ರೇಮಶಂಕರರು ನಿಯಮಾನುಸಾರವಾಗಿ ಹೊಲದೊಳಗೆ ಗೆಯ್ಯುತ್ತಿದ್ದರು. ಜ್ವಾಲಾಸಿಂಹರು ಹೊಸನಮೂದರಿಯ ಮಗ್ಗದಲ್ಲಿ ಬಟ್ಟೆ ನೇಯುತ್ತಿದ್ದರು. ಹಾಜಿಪುರದ ಕೆಲ ಯುವಕರು ನೇಯಿಗೆ ಕಲಿಯಲು ಬರುತ್ತಿದ್ದರು; ಅವರಿಗೆ ಕಲಿಸುತ್ತಿದ್ದರು. ಈ ವಿದ್ಯೆಯಲ್ಲಿ ಅವರು ಚೆನ್ನಾಗಿಯೇ ಪಳಗಿದ್ದರು. ಸಮೀಪದಲ್ಲಿಯೇ ಮಾಯಾಶಂಕರನ ಮಿತ್ರಭವನವಿತ್ತು. ಅದೊಂದು ಚಿಕ್ಕ ಛಾತ್ರಾಲಯವೇ ಆಗಿತ್ತು. ಇದರಲ್ಲಿ ಇರ್ಫಾನಲಿಯವರ ಇಬ್ಬರು ಹುಡುಗರು, ಪ್ರಿಯನಾಥರ ಮೂವರು ಹುಡುಗರು, ತೋಟದಾಳಿನ ಮಗನೊಬ್ಬ, ಮಸ್ತಾನ ಚಿಕ್ಕ ತಮ್ಮನೊಬ್ಬ-ಎಲ್ಲರೂ ಒಟ್ಟಿಗೆಯೇ ಇರುತ್ತಿದ್ದರು. ಅವರೆಲ್ಲರೂ ಜೊತೆ ಯಲ್ಲಿಯೇ ಊಟಮಾಡುವರು, ಜೊತೆಯಾಗಿಯೇ ಶಾಲೆಗೆ ಹೋಗುವರು. ಅವರೆಲ್ಲರ ವೆಚ್ಚವನ್ನು ಮಾಯಾಶಂಕರನೇ ನೋಡಿಕೊಳ್ಳುತ್ತಿದ್ದ. ಶ್ರದ್ಧೆ ಅಡಿಗೆ ಮಾಡುತ್ತಿದ್ದಳು. ಲಖನವಿನ ತಾಲ್ಲೂಕದಾರ ಸ್ಕೂಲಿನಲ್ಲಿ ತನ್ನ ಮಗ ಮಾಯಾಶಂಕರನನ್ನು ಒಯ್ದಿಡಬೇಕೆಂದು ಜ್ಞಾನಶಂಕರರು ಎಷ್ಟೋ ವಿಚಾರಮಾಡಿದರು; ಆದರೆ ಅದಕ್ಕವನು ಒಪ್ಪಲಿಲ್ಲ.

## ೪೯

ಗಾಯತ್ರಿ ಹೇಳಿದ ಮೇರೆಗೆ ಮಾಯಾಶಂಕರನ ತಿಂಗಳ ವೆಚ್ಚಕ್ಕೆಂದು ಎರಡು ಸಾವಿರ ರೂಪಾಯಿಗಳನ್ನು ಪ್ರತಿ ತಿಂಗಳು ಕಳಿಸುತ್ತಲಿದ್ದರು. ದೊಡ್ಡ ರಾಣಿಯ ಮಗ; ಅವನಿಗಾಗಿ ಕೆಲವು ಅಧ್ಯಾಪಕರನ್ನು ನೇಮಿಸಬೇಕು, ಸಂಚಾರಕ್ಕಾಗಿ ಗಾಡಿಗಳನ್ನಿಡಬೇಕು, ಸೇವೆಗೋಸುಗ ಒಂದಿಬ್ಬರು ಆಳು- ಗಳನ್ನು ಇಡಬೇಕು ಎಂದು ಪ್ರೇಮಶಂಕರರು ಇಚ್ಛಿಸುತ್ತಿದ್ದರು. ಆದರೆ ತನ-

ಗಾಗಿ ಇಷ್ಟೊಂದು ವೆಚ್ಚಮಾಡುವುದಕ್ಕೆ ಮಾಯಾಶಂಕರ ಸಮ್ಮತಿಸಲಿಲ್ಲ. ಪ್ರೇಮಶಂಕರರು ನಿರುಪಾಯರಾಗಿ ಅವನ ಮಾತಿನಂತೆ ನಡೆಯಬೇಕಾಯಿತು. ಅವನಿಗೆ ಕಲಿಸುವುದಕ್ಕಾಗಿ ಇಬ್ಬರು ಶಿಕ್ಷಕರು ಮಾತ್ರ ಬರುತ್ತಿದ್ದರು ಇಂಗ್ಲಿಷನ್ನು ಪ್ರೇಮಶಂಕರರು ತಾವೇ ಹೇಳಿಕೊಡುತ್ತಿದ್ದರು ಗಣಿತವನ್ನು ಜ್ವಾಲಾಸಿಂಹರು ಒಪ್ಪಿಸಿಕೊಂಡಿದ್ದರು. ಪ್ರಿಯನಾಥ ಡಾಕ್ಟರು ಗಾಯನಕಲೆಯಲ್ಲಿ ಬಲ್ಲಿದರಾಗಿದ್ದರು; ವಾರದಲ್ಲಿ ಎರಡು ದಿನ ಗಾಯನವನ್ನೂ ಎರಡು ದಿನ ಆರೋಗ್ಯ ಶಾಸ್ತ್ರವನ್ನೂ ಕಲಿಸುತ್ತಿದ್ದರು. ಇರ್ಫಾನ ಅಲಿ ಅರ್ಥಶಾಸ್ತ್ರದಲ್ಲಿ ತಜ್ಞರು. ಸಪ್ತಾಹದಲ್ಲಿ ಎರಡು ದಿನ ಕಾಯದೆಯನ್ನೂ ಅರ್ಥಶಾಸ್ತ್ರವನ್ನೂ ಕುರಿತು ಅವರು ಉಪನ್ಯಾಸವೀಯುತ್ತಿದ್ದರು. ನಗರದಿಂದ ಅನೇಕ ಕಾಲೇಜ್ ವಿದ್ಯಾರ್ಥಿಗಳು ಇಲ್ಲಿಯ ವ್ಯಾಖ್ಯಾನಗಳನ್ನು ಕೇಳಲು ಬರುತ್ತಿದ್ದರು. ಪ್ರಿಯನಾಥರ ಸಂಗೀತ-ಸಮಾಜವಂತೂ ಇಡೀ ಪಟ್ಟಣದಲ್ಲಿಯೇ ಪ್ರಸಿದ್ಧವಾಗಿತ್ತು. ಇಲ್ಲಿಯ ಉಳಿಕೆ ಮಿತ್ರಭವನಕ್ಕೂ ಪ್ರಿಯನಾಥರ ಚಿಕಿತ್ಸಾಲಯಕ್ಕೂ ವಿನಿಯೋಗವಾಗುತ್ತಿತ್ತು. ವಿದ್ಯಾವತಿಯ ಹೆಸರಿನಿಂದ ಇಪ್ಪತ್ತಿಪ್ಪತ್ತು ರೂಪಾಯಿಗಳ ಹತ್ತು ವಿದ್ಯಾರ್ಥಿವೃತ್ತಿಯನ್ನೂ ಕೊಡಲಾಗುತ್ತಿತ್ತು. ಇಷ್ಟು ವೆಚ್ಚಗಳು ಬಾಯ್ಗೂಡಿಯೂ ಉಳಿತಾಯವಿತ್ತು. ಈ ಮೂರುವರುಷಗಳಲ್ಲಿ ಸುಮಾರು ಇಪ್ಪತ್ತಯ್ದು ಸಾವಿರ ರೂಪಾಯಿಗಳ ಸಂಚಯವಾಗಿತ್ತು. ಜ್ಞಾನಶಂಕರರ ಸಮ್ಮತಿಯನ್ನು ಪಡೆದು ಕೆಲಕಾಲ ಮಾಯಾಶಂಕರನನ್ನು ಯುರೋಪ ಅಮೇರಿಕೆಗಳ ಸಂಚಾರಕ್ಕೆ ಕಳಿಸಬೇಕೆಂದು ಪ್ರೇಮಶಂಕರರು ಬಗೆದಿದ್ದರು. ಇದಕ್ಕಿಂತ ಈ ಹಣದ ಸದ್ವಿನಿಯೋಗ ಬೇರೊಂದಲ್ಲವೆಂದು ಅವರ ವಿಚಾರ. ಆದರೆ ಮಾಯಾಶಂಕರನ ಇಚ್ಛೆ ಬೇರೆಯೇ ಆಗಿತ್ತು. ವಿದೇಶಯಾತ್ರೆಗಾಗಿ ಅವನಿಗೆ ಉತ್ಸುಕತೆಯೇನೊ ತುಂಬಾ ಇತ್ತು; ಆದರೆ ತಿಂಗಳಿಗೆ ಎರಡುಸಾವಿರಕ್ಕಿಂತ ಹೆಚ್ಚಿನ ವೆಚ್ಚವಾಗಬಾರದೆಂದು ಅವನೆನ್ನುತ್ತಿದ್ದ. ಈ ಧನದ ಸದ್ವಿನಿಯೋಗಕ್ಕಾಗಿ ಅವನು ಬೇರೊಂದು ಯೋಜನೆಯನ್ನು ಯೋಚಿಸಿದ್ದ. ಅದನ್ನು ಪ್ರೇಮಶಂಕರರೆದುರಿನಲ್ಲಿ ಮಂಡಿಸುವುದಕ್ಕೆ ಅವನ ಮನಸು ಸಂಕೋಚಪಡುತ್ತಿತ್ತು. ಈ ಮಧ್ಯದಲ್ಲಿಯೇ ಅದನ್ನು ಹೊರಪಡಿಸುವುದಕ್ಕೆ ಸಂದರ್ಭವೊಂದು ಒದಗಿಬಂದಿತು.

ಲಖನಪುರಪ್ರಕರಣದಲ್ಲಿ ಪ್ರೇಮಶಂಕರರನ್ನು ಬಿಡಿಸುವುದಕ್ಕಾಗಿ

ಪ್ರಭಾಶಂಕರರು ಸಾಲ ಮಾಡಿದ್ದರಷ್ಟೇ. ಆದರ ಅವಧಿ ಮೂರು ವರುಷವಿತ್ತು. ಅದು ಮುಗಿದು ಹೋಗಿತ್ತಾದರೂ ಗಂಟಿನ ಬಡ್ಡಿಯನ್ನೂ ಕೊಡುವುದಾಗಿರಲಿಲ್ಲ. ಈ ವಿಷಯವೇ ಪ್ರೇಮಶಂಕರರಿಗೆ ಗೊತ್ತಿರಲಿಲ್ಲ, ಈವರೆಗೆ. ಸಾವುಕಾರನು ಹಣ ಪಡೆಯುವುದಕ್ಕಾಗಿ ನ್ಯಾಯಾಲಯದಲ್ಲಿ ವ್ಯಾಜ್ಯವನ್ನು ಹೂಡಿದಾಗಲೇ ಅದು ಅವರಿಗೆ ತಿಳಿದದ್ದು. ಸಾಲ ಮಾಡಿದ್ದು ಏತಕ್ಕೆಂಬುದು ಗೊತ್ತಾಯಿತು. ಈ ಸಾಲವನ್ನು ತೀರಿಸುವುದು ಹೇಗೆಂಬ ಚಿಂತೆ ಅಂದಿನಿಂದಲೂ ಪ್ರೇಮಶಂಕರರ ತಲೆತಿನ್ನುತ್ತಿತ್ತು. ಸಾಲದ ಹಣದಲ್ಲಿ ಆದ ಮೋಕದ್ದಮೆಗಾಗಿ ವೆಚ್ಚವಾದದ್ದು ಒಂದಂಶವೆಂಬುದು ವಾಸ್ತವವಾದರೂ ಬಹ್ವಂಶವು ವಿವಾಹ–ಸಮಾರಂಭಗಳಿಗಾಗಿಯೂ ಭೋಜನೋಪಹಾರಗಳಿಗಾಗಿಯೂ ವ್ಯಯವಾಗಿದ್ದರೂ ಅದರ ಲೆಕ್ಕಾಚಾರ ನೋಡುವ ಸಮಯವಿದಾಗಿರಲಿಲ್ಲ. ಋಣದ ಪೂರ್ಣಭಾರವನ್ನು ಹೊತ್ತುಕೊಳ್ಳುವುದೇ ಉಚಿತವೆಂದು ಪ್ರೇಮಶಂಕರರು ಭಾವಿಸಿದ್ದರು. ಆದರೆ ಹಣ ಬರಬೇಕೆಲ್ಲಿಂದ?

ಈ ಯೋಚನೆಯಲ್ಲಿಯೇ ಪ್ರೇಮಶಂಕರರ ಮನಸ್ಸು ಎಷ್ಟೋ ದಿನ ವಿಕಲವಾಗಿತ್ತು. ಜ್ಞಾನಶಂಕರರನ್ನು ಬೇಡಲೇ ಎಂದೊಮ್ಮೆ, ಬೇಡ, ಪ್ರಿಯನಾಥರನ್ನು ಕೇಳಲೇ ಎಂದಿನ್ನೊಮ್ಮೆ ವಿಚಾರ ಬರುವುದು. ಸಂಕೋಚದಿಂದ ಯಾರನ್ನು ವಿಚಾರಿಸುವುದಕ್ಕೂ ಬಾಯಿ ಬಂದಿರಲಿಲ್ಲ

ಈ ಸಮಸ್ಯೆಯ ಚಿಂತನೆಯಲ್ಲಿ ಕುಳಿತಾಗಲೇ ಒಂದು ದಿನ ಮಾಯಾಶಂಕರ ಅಕಸ್ಮಾತ್ತಾಗಿ ಅಲ್ಲಿಗೆ ಬಂದ. ಅವನ ಕಣ್ಣೊಳೊಳಗೆ ನೀರು ತುಂಬಿತ್ತು; ಮುಖದಲ್ಲಿ ಕರುಣ ಉತ್ಸುಕತೆ ಒಡೆದು ಕಾಣುತ್ತಿತ್ತು.

"ಏಕೆ, ಕಣ್ಣು ನೀರುದುಂಬಿವೆ? ಕುಳಿತುಕೋ." ಎಂದರು ಪ್ರೇಮಶಂಕರರು.

"ಏನಿಲ್ಲ ದೊಡ್ಡಪ್ಪ. ಅಜ್ಜನ ಮನೆಗೆ ಹೋಗಿದ್ದೆ. ಬಹಳ ಕಷ್ಟದಲ್ಲಿದ್ದಾರೆ ಅವರು. ಇದೇ ಸಮಯದಲ್ಲಿ ಯಾರೋ ಸಾವುಕಾರರು ದಾವೆ ಬೇರೆ ತಂದಿದ್ದಾರಂತೆ;–ಮತ್ತಷ್ಟು ವಿಹ್ವಲರಾಗಿದ್ದಾರೆ. ದಯಾಕಕ್ಕ ಅವರಿಗೆ ಹೇಳುತ್ತಿದ್ದರು- 'ನಮಗೇನು ಭೂಮಿಕಾಣಿ ಬೇಕಾಗಿಲ್ಲ, ಎಲ್ಲಾ ಕೊಟ್ಟು ಬಿಡಿ. ಈಗೇನು ಮಾಡಲಿಕ್ಕಾಗುತ್ತದೆ? ಮುಂದೆ ನನ್ನ ಪಾಲಿಗೆ ಬಂದುದನ್ನು ನಾನು ನೋಡಿಕೊಳ್ಳುತ್ತೇನೆ.' ಆದರೆ 'ಸಾವುಕಾರರಿಗೆ ಹೇಳಿಕೊಂಡು ಸ್ವಲ್ಪ ದಿನಗಳ ಅವಕಾಶ ಪಡೆಯಬೇಕು' ಎಂದು ಅಜ್ಜ ಎನ್ನುತ್ತಿದ್ದರು. ತಾವು

ಒಪ್ಪಿಕೊಂಡರೆ ನಾನು ಹೋಗಿ ಸಾವುಕಾರರನ್ನು ಕಂಡು ಮಾತನಾಡುತ್ತೇನೆ. ನನ್ನ ಮಾತಿಗೆ ಅವರು ಸ್ವಲ್ಪ ಬಾಗಲೂಬಹುದು. ಅಜ್ಜನಿಗೆ ಗೊತ್ತಾಗದ ಹಾಗೆಯೇ ಸಾವುಕಾರರ ಹಣವೆಲ್ಲ ಮುಟ್ಟಬೇಕು. ಈ ತೊಂದರೆ ದೂರವಾಗ ಬೇಕು ಎಂದು ನನ್ನಿಚ್ಛೆ. ನಮ್ಮ ಹತ್ತಿರ ಹಣವಿರುವಾಗ ಅದೇಕೆ ಸಾವುಕಾರ ರನ್ನು ಬೇಡಿಕೊಳ್ಳಬೇಕು ? "

" ಆ ರೂಪಾಯಿ ಅಮಾನತ್ತಾಗಿ ಇವೆ. ಅವನ್ನು ಮುಟ್ಟುವುದಕ್ಕೆ ಅಧಿಕಾರವಿಲ್ಲ. ನಿನ್ನ ಯುರೋಪಯಾತ್ರೆಯ ಸಲುವಾಗಿಯೆಂದು ತೆಗೆದಿಟ್ಟಿ ದ್ದೇನೆ ನಾನು ಆ ಹಣ "

ಈ ಮಾತಿನಿಂದ ಮಾಯಾಶಂಕರನ ಮನಸು ಖಿನ್ನವಾಯಿತು. ಅವನು ಸುಮ್ಮನೆ ಹೊರಟುಹೋದ. ಶ್ರದ್ಧೆಯೊಡನೆ ಮಾತ್ರ ಅವನ ಧಿಟ್ಟತನ ನಡೆಯುತ್ತಿತ್ತು. ಅವಳ ಹತ್ತಿರಹೋಗಿ ಹೇಳಿದ " ದೊಡ್ಡಪ್ಪ ಅಜ್ಜನಿಗೆ ಹಣ ಕೊಡದಿದ್ದರೆ ನನಗೆ ಯುರೋಪೂ ಬೇಡ, ಅಮೇರಿಕೆಯೂ ಬೇಡ. ಮೂವತ್ತು ಸಾವಿರ ರೂಪಾಯಿ ತಕ್ಕೊಂಡು ನಾನೇನು ಮಾಡಲಿ ಅಲ್ಲಿ ? ನನಗೆ ಹೊರಡುವಾಗ ಐದು ಸಾವಿರ ರೂಪಾಯಿಯಾದರೆ ಸಾಕೇ ಸಾಕು. ಇಪ್ಪತ್ತೈದು ಸಾವಿರ ಅಜ್ಜನಿಗೆ ಕೊಡಿಸಿಬಿಡಿರಿ. "

ಶ್ರದ್ಧೆ ಕೇಳಿದುದಕ್ಕೆ ಪ್ರೇಮಶಂಕರರು ಅದನ್ನೇ ಹೇಳಿದರು. ಆಕೆ ಮಗನ ಬೆನ್ನು ಕಟ್ಟಿದಳು. ವಾದವಿವಾದವಾಯಿತು. ಯಾವ ನಿಷ್ಕರ್ಷೆಯೂ ಆಗಲಿಲ್ಲ. ಮರುದಿನ ಶ್ರದ್ಧೆ ಮತ್ತೆ ಆ ಮಾತನ್ನೆತ್ತಿದಳು.

" ಮಾವನವರಿಗೆ ಹಣ ಕೊಡುವ ವಿಷಯ ಏನು ಮಾಡಿದಿರಿ ? "

" ವಿಚಾರದಲ್ಲಿ ಬಿದ್ದಿದ್ದೇನೆ. ಮೂರು ನಾಲ್ಕು ದಿನಗಳಲ್ಲಿ ಏನಾದರೂ ಉಪಾಯ ನಿರ್ಧಾರಕ್ಕೆ ಬರಬಹುದು. "

" ಹಣವಂತೂ ಇದ್ದೇ ಇದೆಯಲ್ಲ. "

" ಅದನ್ನು ಬಳಸುವ ಅಧಿಕಾರ ನನಗಿಲ್ಲ. "

" ಆ ಹಣ ಯಾರದು ? "

" ಮಾಯಾನ ಶಿಕ್ಷಣಕ್ಕಾಗಿ ಇಟ್ಟಿದೆ. " ಪ್ರೇಮಶಂಕರರು ವಿಸ್ಮಿತ ರಾಗಿ ಉತ್ತರವಿತ್ತರು.

" ಅಂದರೆ, ತಿಂಗಳಾ ಎರಡು ಸಾವಿರ ವೆಚ್ಚವಾಗುವುದಿಲ್ಲವೇ ? "

" ನಿನಗೆ ಗೊತ್ತಿಲ್ಲವೆ ? ಸುಮಾರು ಎಂಟುನೂರು ವೆಚ್ಚವಾಗುತ್ತದೆ; ಹನ್ನೆರಡುನೂರು ಉಳಿಯುತ್ತದೆ. "

" ಇದು ಏಕೆ ಉಳಿಯುತ್ತದೆ ? ಇದು ಏಕೆ ತಿಳಿಯಲೊಲ್ಲದು ನಿಮಗೆ ? ಡಾಕ್ಟರ ಇರ್ಫಾನಲಿಯವರಿಗೆ ಕಲಿಸುವುದಕ್ಕೆ ವೇತನ ಎಷ್ಟು ದೊರೆಯ ಬೇಕು ? ಡಾಕ್ಟರ್ ಪ್ರಿಯನಾಥರನ್ನು, ಜ್ವಾಲಾಸಿಂಹ ಬಾಬುಗಳನ್ನು ಕೆಲಸಕ್ಕೆ ಇಟ್ಟುಕೊಂಡರೆ ಏನಾದರೂ ಕೊಡಲೇ ಬೇಕಾಗುತ್ತದೆ. ನಿಮಗೂ ಏನಾದರೂ ಪ್ರತಿಫಲ ಸಿಕ್ಕಬೇಕು. ನಿಮ್ಮ ದೃಷ್ಟಿಯಲ್ಲಿ ಇರ್ಫಾನ ಅಲಿಯವರ ವೇತನವೆಂದರೆ ಏನೋ ಆಗಿದೆ. ಒಂದು ದಿನಕ್ಕೆ ಅವರಿಗೆ ಐನೂರು ಕೊಡಬೇಡವೆ ? ಪ್ರಿಯನಾಥರ ಗಳಿಕೆ ಪ್ರತಿದಿನ ನೂರಕ್ಕೇನೂ ಕಡಿಮೆಯಿರಲಿಲ್ಲ. ಮೊದಲವರು ಯಾರ ಮನೆಗೂ ಕಲಿಸಲು ಹೋಗುತ್ತಿರಲಿಲ್ಲ; ಹೋಗಿದ್ದರೆ ತಿಂಗಳಿಗೆ ಐನೂರಕ್ಕಿಂತ ಕಡಿಮೆ ತೆಗೆದುಕೊಳ್ಳುತ್ತಿರ-ಲಿಲ್ಲ. ಬಾಬು ಜ್ವಾಲಾಸಿಂಹರಿಗೂ ನೂರು ರೂಪಾಯಿ ಹೆಚ್ಚಲ್ಲ; ಇನ್ನು ನೀವು—ನಿಮ್ಮ ಮಗ, ಮನಸಿನಿಂದ ಪ್ರೇಮದಿಂದ ಕಲಿಸುತ್ತೀರಿ ಇತರರು ಏಕೆ ಪುಕ್ಕಟೆ ತಲೆಯೊಡಕೊಳ್ಳಬೇಕು ಹೇಳಿ. ಈ ಹಣಕ್ಕೆ ನೀವು ಉಳಿತಾಯ ಎನ್ನುತ್ತೀರಿ; ಇದು ಸರ್ವಥಾ ಅನ್ಯಾಯ. ಇದನ್ನು ಬೇಕಾದರೆ ಅವರ ಸಜ್ಜನತೆಯ ಪುರಸ್ಕಾರವೆಂದು ತಿಳಿಯಿರಿ, ಅಥವಾ ಅವರ ಉಪಕಾರದ ಮೂಲ್ಯವೆಂದು ತಿಳಿಯಿರಿ. ಈ ಹಣವನ್ನು ವೆಚ್ಚಮಾಡುವುದಕ್ಕೆ ಅವರಿಗೆ ಅಧಿಕಾರವಿದೆ. "

ಪ್ರೇಮಶಂಕರರು ಸಂದಿಗ್ಧಭಾವದಿಂದ ಉತ್ತರವಿತ್ತರು : " ನೀನು, ಮಾಯಾ ಇಬ್ಬರೂ ರೂಪಾಯಿ ಕೊಡುವತನಕ ಕೇಳುವವರೇ ಅಲ್ಲ. ನಿಮ್ಮ ಇಚ್ಛೆಯಿದ್ದಂತೆ ಆಗಲಿ. ನಿಮ್ಮ ಯುಕ್ತಿಯಲ್ಲಿ ನ್ಯಾಯವಿದೆ, ಇದನ್ನು ನಾನು ಒಪ್ಪುತ್ತೇನೆ; ಆದರೆ ಆತ್ಮಕ್ಕೆ ತೃಪ್ತಿಯೆನಿಸಲಾರದು. ನಾನೀಗ ರೂಪಾಯಿ ಕೊಟ್ಟುಬಿಡುತ್ತೇನೆ. ಆದರೆ ಇದನ್ನು ಋಣವೆಂದು ತಿಳಿದು ತಿರುಗಿ ಮುಟ್ಟಿಸುವ ಪ್ರಯತ್ನ ಮಾಡುತ್ತೇನೆ. " ಅತ್ತ ಮಾಯಾಶಂಕರನ ಯುರೋಪ ಯಾತ್ರೆಗೆ ಜ್ಞಾನಶಂಕರರು ಸಮ್ಮತಿಸಲಿಲ್ಲ. ಈಗಲೇ ಈ ಯಾತ್ರೆಯಿಂದ ಅವನಿಗೆ ಸಾಕಷ್ಟು ಲಾಭವಾಗಲಾರದೆಂದು ಅವರ ವಿಚಾರ. ಅದಕ್ಕಿಂತ ತನ್ನ ಇಲಾಕೆಯಲ್ಲಿ ಸಂಚಾರಮಾಡುವುದು ಉತ್ತಮವೆಂದು ಅವರೆನ್ನುತ್ತಿದ್ದರು.

ಆಮೇಲೆ ಹಿಂದುಸ್ಥಾನದ ಮುಖ್ಯ ಮುಖ್ಯ ಭಾಗಗಳನ್ನು ಸಂದರ್ಶಿಸಲಿ ಎನ್ನು ತ್ತಿದ್ದರು. ಈ ವಿಚಾರಾನುಸಾರವಾಗಿ ಚೈತ್ರಮಾಸದಲ್ಲಿ ಮಾಯಾಶಂಕರ ಗೋರಖಪುರಕ್ಕೆ ಹೊರಟುಹೋದ ಎರಡು ತಿಂಗಳು ಆ ಪ್ರದೇಶದಲ್ಲಿ ಸಂಚ ರಿಸಿ ಲಖನೌಗೆ ಹೋದ. ಅಲ್ಲಿಯ ಹಳ್ಳಿಗಳಲ್ಲಿಯೂ ಎರಡು ತಿಂಗಳವರೆಗೆ ಸುತ್ತಾಡಿದ ಪ್ರತಿದಿನ ತಾನು ನೋಡಿದದನ್ನು ದಿನಚರಿಯಲ್ಲಿ ಬರೆದಿಟ್ಟು ಕೊಂಡ. ಒಕ್ಕಲಿಗರ ಸ್ಥಿತಿಗತಿಯನು ಚೆನ್ನಾಗಿ ಅಧ್ಯಯನ ಮಾಡಿದ. ಎರಡೂ ಇಲಾಕೆಗಳ ಒಕ್ಕಲಿಗರು ಅವನ ಪ್ರಜಾಪ್ರೇಮ, ವಿನಯ, ಶಿಷ್ಟತೆ ಗಳನ್ನು ಕಂಡು ಮುಗ್ಧರಾದರು. ಅವರ ಹೃದಯದಲ್ಲಿ ಅವನು ಮನೆ ಮಾಡಿದ. ಭಯವಿದ್ದ ಎಡೆಯಲ್ಲಿ ಪ್ರೇಮದ ವಿಕಾಸವಾಯಿತು. ಜನರು ಅವನನ್ನು ತಮ್ಮ ನಿಜವಾದ ಹಿತೈಷಿಯೆಂದು ಬಗೆಯ ತೊಡಗಿದರು. ಅವನ ಹತ್ತಿರ ಬಂದು ತಮ್ಮ ಅನುವು ಆಪತ್ತುಗಳನ್ನು ಹೇಳಿಕೊಳ್ಳುತ್ತಿದ್ದರು. ಅವರ ವಾಸ್ತವಿಕ ಸ್ಥಿತಿಯ ಜ್ಞಾನ ಬೇರಾವ ರೀತಿಯಿಂದಲೂ ಅವನಿಗಾಗುವ ಸಂಭವವಿರಲಿಲ್ಲ. ಎಲ್ಲೆಲ್ಲಿಯೂ ಗೋಳಾಟವೇ ಕಾಣುತ್ತಿತ್ತು. ಧಾತುವಿನ ಪಾತ್ರೆಗಳನ್ನು ಬಳಸುವ ಮನೆಗಳು ತೀರ ವಿರಳವಾಗಿದ್ದವು. ಎಷ್ಟೋ ಮನೆ ಗಳಲ್ಲಿ ರೊಟ್ಟಿ ಸುಡುವುದಕ್ಕೆ ಕಬ್ಬಿಣದ ಹಂಚೂ ಇರಲಿಲ್ಲ. ಮಣ್ಣಿನ ಪಾತ್ರೆ ಗಳ ಹೊರತು ಗುಡಿಸಲುಗಳಲ್ಲಿ ಬೇರೊಂದು ಒಡವೆಯೇ ಕಾಣಲಿಲ್ಲ. ಹಾಸುವುದಕ್ಕಿಲ್ಲ, ಹೊದೆಯುವುದಕ್ಕಿಲ್ಲ; ಬಹಳ ಮನೆಗಳಲ್ಲಿ ಒಂದು ಹೊರಸೂ ಇಲ್ಲ. ಮನೆಗಳಾದರೂ ಎಂತಹವು–ಒಂದೊಂದೋ ಎರಡೆರಡೋ ಗೂಡು ಗಳು—ಒಂದು ಮನುಷ್ಯ ಪ್ರಾಣಿಗಳಿಗೆ, ಒಂದು ಪಶುಪ್ರಾಣಿಗಳಿಗೆ. ಆ ಒಂದೇ ಗೂಡಿನಲ್ಲಿ, ಊಟ ಉಡಿಗೆ, ಮಲಗುವುದು, ಕೂಡುವುದು ಎಲ್ಲಾ ಆಗಬೇಕು ಎಲ್ಲೆಲ್ಲಿ ನೋಡಿದರೂ ತೆರವು ಜಾಗೆ ಒಂದಿಷ್ಟು ಇಲ್ಲ— ಅಷ್ಟು ದಟ್ಟ ವಸತಿ. ಯಾವ ಮನೆಯ ಮುಂದೂ ಅಂಗಳವಿಲ್ಲ; ಯಾವ ಪಟ್ಟಣದ ಯಾವ ಸಂಕೀರ್ಣ ಸಮ್ಮರ್ದ ಭಾಗದಲ್ಲಿಯೂ ಗಾಳಿ ಬೆಳಕುಗಳ ಅಭಾವ ಅಲ್ಲಿಯಷ್ಟಿರಲಿಕ್ಕಿಲ್ಲ. ಇವ ಇದ್ದವಳ್ಳ ಒಕ್ಕಲಿಗ ಎಂದು ಹೇಳಲಾಗು ತ್ತಿದ್ದವನ ಮೈಮೇಲೂ ಗಟ್ಟಿ ಬಟ್ಟೆ ಇರಲಿಲ್ಲ. ಅವರೂ ಒಪ್ಪೊತ್ತು ಕಡಲೆ- ಪುರಿಯಿಂದಲೇ ದಿನಗಳೆಯಬೇಕಾಗುತ್ತಿತ್ತು. ಅವರೂ ಸಾಲದ ಹೊರೆಯಿಂದ ನೆಲ ಹಿಡಿದಿದ್ದರು ಇಲ್ಲಿ ಒಳ್ಳೆಯ ದನಕರುಗಳಿವೆಯೆ ಎಂದು ಕಣ್ಣು

ನೋಡಲು ಕಾತರಗೊಳ್ಳುತ್ತಿದ್ದವು. ಬೇಕಾದಲ್ಲಿ ನೋಡಲಿ— ಹೊಲಗಳಲ್ಲಿ ಉಳುತ್ತಿರುವ, ಗೋವಲಿಯಲ್ಲಿ ತೂಕಡಿಸುತ್ತಿರುವ ಎತ್ತುಗಳೆಲ್ಲವೂ ಸಾಯುಲಾದ ಸಣ್ಣ ಜಾತಿಯ ಎತ್ತುಗಳೇ. ಹೈನದ ಹೆಸರೇ ಇಲ್ಲದ ಎಷ್ಟೋ ಊರುಗಳಿದ್ದವು. ಈ ವ್ಯಾಪಕವಾದ ಬಡತನವನ್ನು, ಈ ದೈನ್ಯವನ್ನು ಕಂಡು ಮಾಯಾಶಂಕರನ ಕೋಮಲ ಹೃದಯವು ತಲ್ಲಣಿಸುತ್ತಿತ್ತು. ಅವನು ಸ್ವಭಾವದಿಂದಲೇ ಅತ್ಯಂತ ಭಾವುಕ,—ನಮ್ರ, ಸಹೃದಯ, ಉದಾರ. ದೊರೆತ ಶಿಕ್ಷಣ ಸಂಗೀತಗಳಿಂದ ಈ ಭಾವಗಳು ಇನ್ನಷ್ಟು ಅರಳಿದ್ದವು. ಪ್ರೇಮಾಶ್ರಮದಲ್ಲಿ ನಿತ್ಯವೂ ಸೇವೆ, ಪ್ರಜಾಹಿತದ ಚರ್ಚೆಯಲ್ಲಿ ಅವನಿರುತ್ತಿದ್ದ. ಮಾಯಾಶಂಕರನ ಸರಲ ಹೃದಯ ಆ ರಂಗಶಾಲೆಯಲ್ಲಿ ತಯಾರಾದುದು. ಅಲ್ಲಿಯ ಈ ದೃಶ್ಯಗಳಿಂದ ದುಃಖಿತನಾಗಿ ಅವನು ಆಗಾಗ ಪ್ರೇಮಶಂಕರರಿಗೆ ಕಾಗದ ಬರೆಯುತ್ತಿದ್ದ. ತಾನು ಅನುಭವಿಸಿದ ಘಟನೆಗಳನ್ನು ಉಲ್ಲೇಖಿಸಿ ಈ ಕಷ್ಟಗಳನ್ನು ಹೋಗಲಾಡಿಸುವ ಉಪಾಯವೇನೆಂದು ಕೇಳುತ್ತಿದ್ದ. ಆದರೆ ಪ್ರೇಮಶಂಕರರು ಯಾವ ಉತ್ತರವನ್ನು ಕೊಡುತ್ತಿರಲಿಲ್ಲ, ಅಥವಾ ಒಕ್ಕಲಿಗರ ದಡ್ಡತನ, ಸೋಮಾರಿತನ ಮೊದಲಾದ ಸ್ವಭಾವಗಳ ಪುರಾಣವನ್ನು ಬಿಚ್ಚುತ್ತಿರಲಿಲ್ಲ.

ಮಾಯಾಶಂಕರ ಅಲ್ಲಿ ಗ್ರಾಮಾಂತರ ಪ್ರವಾಸದಲ್ಲಿರುವಾಗ ಇಲ್ಲಿ ಸ್ಥಾನೀಯ ರಾಜಸಭೆಯ ಸದಸ್ಯರ ಚುನಾವಣೆ ಆರಂಭವಾಯಿತು. ಈ ಸನ್ಮಾನ್ಯಪದಕ್ಕಾಗಿ ಜ್ಞಾನಶಂಕರರಿಗೆ ಎಂದಿನಿಂದಲೂ ಅಭಿಲಾಷೆಯಿತ್ತು. ಒಳ್ಳೇ ಹುರುಪಿನಿಂದ ಕಣಕ್ಕಿಳಿದರು. ಗೋರಖಪುರದ ಒಕ್ಕಲಿಗರ ಪರವಾಗಿ ಅವರು ಸ್ಪರ್ಧೆಗೆ ನಿಲ್ಲಬೇಕೆಂದು ನಿಶ್ಚಯಿಸಿದರು. ಇರ್ಫಾನ ಅಲಿಯವರು ಬನಾರಸ ಮಹಾವಿದ್ಯಾಲಯದ ಪರವಾಗಿ ನಿಂತರು; ಪ್ರಿಯನಾಥ ಬಾಬು ಬನಾರಸ ನಗರಸಭೆಯ ಸೆರಗುಹಿಡಿದರು! ಜ್ವಾಲಾಸಿಂಹರು ಇಟಾವೆಯ– ಅವರು ಅಲ್ಲಿಯ ಧನಿಯರು–ಒಕ್ಕಲಿಗರ ಆಸರೆ ಪಡೆದರು. ಪ್ರೇಮಶಂಕರರಿಗೆ ಈ ಕ್ಷೇತ್ರಕ್ಕೆ ಬರುವ ಮನಸ್ಸಿರಲಿಲ್ಲ; ಭವಾನೀಸಿಂಹ, ಬಲರಾಜ, ಕಾದಿರಖಾ ಇವರೆಲ್ಲ ಬನಾರಸದ ಒಕ್ಕಲಿಗರ ಮೇಲೆ ಅವರ ಮಂತ್ರವನ್ನು ಪ್ರಯೋಗಿಸ ತೊಡಗಿದರು. ಆಯಿಕೆಯ ಪರಿಣಾಮ ಹೊರಬಿದ್ದಾಗ, ಎಷ್ಟೊ ಮನೆಗಳಲ್ಲಿ ತುಪ್ಪದ ದೀವಟಿಗೆಗಳುರಿದವು; ಎಷ್ಟೋ ಮನೆಗಳಲ್ಲಿ ಸೂತಕದ ದಿನ

ಮಾಡಿದರು. ಜ್ಞಾನಶಂಕರರು ಗೆದ್ದರು; ಆದರೆ ಪ್ರೇಮಾಶ್ರಮದ ಜನಗಳಿಗೆ ದೊರೆತ ಗೆಲವು ದಂಗುಬಡಿಸುವಂತಾಯಿತು. ಈ ಗರಡಿಯ ಕಟ್ಟಾಳು ಗಳೆಲ್ಲರೂ ಗೆಲವಿನ ಬಾವುಟ ಹಾರಿಸುತ್ತ ಹೊರಟರು. ಎಲ್ಲರಿಗಿಂತ ಹೆಚ್ಚಿನ ಗೆಲವು ಪ್ರೇಮಶಂಕರರದು. ಯಾವ ಪ್ರಯತ್ನವೂ ಇಲ್ಲದೆ, ಇಚ್ಛೆಕೂಡ ಇಲ್ಲದೆ ಈ ಮೇಲ್ಮಟ್ಟವನ್ನು ಗಳಿಸಿದ್ದರು. ಈ ಸುದ್ದಿಯನ್ನು ಕೇಳಿದಾಗ ಜ್ಞಾನಶಂಕರರ ಉತ್ಸಾಹ ಜರ್ರನೆ ಇಳಿಯಿತು. ರಾಜಸಭೆಯಲ್ಲಿ ಕುಳಿತು-ಕೊಳ್ಳುವ ಮನಸ್ಸಿನ ಉತ್ಸುಕತೆ ಉಳಿಯಲಿಲ್ಲ. ಸಾಮಾನ್ಯವಾಗಿ, ವೃಕ್ಷ-ಪುಂಜಗಳಲ್ಲಿ ಸಂಜೆಯ ಹೊತ್ತಿನಲ್ಲಿ ಪಕ್ಷಿಗಳ ಕಲರವದಿಂದ ಕಿವಿಗೆ ಬಿದ್ದ ಶಬ್ದ ಕೇಳಿಸದೆ ಹೋಗುತ್ತದೆ. ಆದರೆ, ಕತ್ತಲೆ ಕವಿಯುತ್ತಲೂ ಹಕ್ಕಿಗಳೆಲ್ಲ ತಮ್ಮ ತಮ್ಮ ಗೂಡು ಸೇರುತ್ತಲೂ ಅಲ್ಲಿ ಶಾಂತತೆ ಉಂಟಾಗುತ್ತದೆ. ಹಾಗೆಯೇ ರಾಷ್ಟ್ರದ ಪ್ರತಿನಿಧಿಗಳು ರಾಜಸಭೆಯ ಸುಸಜ್ಜಿತ ಸುವಿಶಾಲ ಭವನದಲ್ಲಿ ಹೋಗಿ ಶಾಂತಿಯಲ್ಲಿ ಮಗ್ನರಾದರು. ಆ ಉದ್ದುದ್ದ ವಾದಗಳು, ದೊಡ್ಡ ದೊಡ್ಡ ಮಾತುಗಳು ಎಲ್ಲವೂ ಮರೆತುಹೋದವು ಯಾರು ಪಕ್ಷಕಾರರ ಸೇವಾಸತ್ಕಾರಗಳಲ್ಲಿ, ಯಾರು ತಮ್ಮ ಲೆಕ್ಕ ಪತ್ರಗಳಲ್ಲಿ, ಯಾರು ತಮ್ಮ ಸಂಚಾರ ಮೃಗಯಾ ವಿನೋದದಲ್ಲಿ ತೊಡಗಿಬಿಟ್ಟರು. ರಾಷ್ಟ್ರಹಿತದ ಆ ಆವೇಶ ತಣ್ಣಗಾಗಿಬಿಟ್ಟಿತು. ಏನೋ ಮನೋ ವಿನೋದದ ಆಟವೆಂಬಂತೆ ಜನರು ರಾಜಸಭೆಗೆ ಹೋಗುವರು, ಏನಾದರೊಂದು ನಿರರ್ಥಕ ಪ್ರಶ್ನೆಯನ್ನು ಕೇಳಿ, ಅಥವಾ ತಮ್ಮ ವಾಗ್ವೈಖರಿಯನ್ನು ಪ್ರದರ್ಶಿಸಿ ಹೊರಟುಹೋಗುವರು. ಜನರನ್ನು ಈ ಅಧಿಕಾರದಲ್ಲಿ ಆಸಕ್ತರನ್ನಾಗಿರಿಸುವುದಕ್ಕೆ ಯಾವ ಪ್ರೇರಕ ಶಕ್ತಿಗಳಿದ್ದವೋ ನಿಶ್ಚಯವಾಗಿ ಹೇಳುವುದು ಕಠಿನ. ಆದರೆ ಸೇವಾಭಾವದ ಲವಲೇಶವೂ ಇದರಲ್ಲಿರಲಿಲ್ಲವೆಂಬುದು ಮಾತ್ರ ನಿಸ್ಸಂದೇಹ. ಕಾರಣ ಮತ್ತು ಕಾರ್ಯ, ಸಾಧನ ಮತ್ತು ಫಲ ಎರಡೂ ಆ ಅಧಿಕಾರದಲ್ಲಿಯೇ ವಿಲೀನವಾಗಿಹೋದವು.

ಆದರೆ ಪ್ರೇಮಾಶ್ರಮದಲ್ಲಿ ಆ ಶಿಥಿಲತೆಯಿರಲಿಲ್ಲ. ಇಲ್ಲಿಯ ಜನರು ಮೊದಲಿನಿಂದಲೂ ಸೇವಾಧರ್ಮದ ಅನುಯಾಯಿಗಳಾಗಿದ್ದರು. ಈಗ ಅವರಿಗೆ ತಮ್ಮ ಕಾರ್ಯಕ್ಷೇತ್ರವನ್ನು ಹಿಗ್ಗಿಸಲು ಒಳ್ಳೆಯ ಅವಕಾಶಸಿಕ್ಕಿತು; ಈ ಜನರು ಹೊಸ ಹೊಸ ಸುಧಾರಣೆಗಳ ಮಸೂದೆಗಳ ಕುರಿತು ವಿಚಾರ

ಮಾಡುತ್ತಿದ್ದರು, ರಾಜಕೀಯ ಮಸೂದೆಗಳ ಗುಣದೋಷಗಳನ್ನು ಚರ್ಚಿಸು ತ್ತಿದ್ದರು. ಸರಕಾರದ ವರದಿಗಳನ್ನು ವಿಮರ್ಶಿಸುತ್ತಿದ್ದರು. ಪ್ರಶ್ನೆಗಳ ಮೂಲಕ ಅಧಿಕಾರಿಗಳ ಅನ್ಯಾಯಗಳನ್ನು ಎತ್ತಿ ತೋರಿಸುತ್ತಿದ್ದರು. ಎಲ್ಲಿ ಯಾದರೂ ನ್ಯಾಯದ ಕೊಲೆಯಾಗುತ್ತಿದೆಯೆಂದು ಕಂಡುಬಂದರೆ, ಕೂಡಲೆ ರಾಜಸಭೆಯ ಗಮನವನ್ನು ಆ ಕಡೆ ಎಳೆಯುತ್ತಿದ್ದರು. ಪ್ರಶ್ನೆಗಳನ್ನು ಕೇಳಿದಷ್ಟಕ್ಕೇ ತೃಪ್ತರಾಗದೆ ಪ್ರಸ್ತುತ ವಿಷಯದ ಮರ್ಮವನ್ನು ಭೇದಿಸಲು ಪ್ರಯತ್ನಿಸುತ್ತಿದ್ದರು. ವಿರೋಧಕ್ಕಾಗಿ ವಿರೋಧಿಸದೆ" ತಿದ್ದುವುದಕ್ಕಾಗಿ ವಿರೋಧಿಸುತ್ತಿದ್ದರು. ಈ ಸದುದ್ಯೋಗದಿಂದ, ಈ ಕರ್ತವ್ಯಪರಾಯಣತೆ ಯಿಂದ ರಾಜಸಭೆಯಮೇಲೆ ಈ ಮಿತ್ರಮಂಡಲಿ ಶೀಘ್ರದಲ್ಲಿಯೇ ತನ್ನ ಮುದ್ರೆಯನ್ನೊತ್ತಿತು. ಅವರ ಸಂದೇಹಗಳನ್ನು, ಅವರ ಸೂಚನೆಗಳನ್ನು, ಅವರ ಪ್ರತಿವಾದವನ್ನು ಆದರದ ದೃಷ್ಟಿಯಿಂದ ನೋಡಲಾಗುತ್ತಿತ್ತು. ಅವರ ಮಾತುಗಳನ್ನು ಚುಟಿಕೆಯಲ್ಲಿ ಹಾರಿಸಿಬಿಡುವುದು ಅಧಿಕಾರಿವರ್ಗಕ್ಕೆ ಸುಲಭ ವಾಗಿರಲಿಲ್ಲ. ಈ ಮಂಡಲಿಯ ಪ್ರಮುಖರು ಇರ್ಫಾನ ಅಲಿಯವರಾಗಿದ್ದರೂ ಪ್ರೇಮಶಂಕರರೇ ಇವರ ಕರ್ಣಧಾರರೆಂಬುದು ತೆರೆದ ಗುಟ್ಟಾಗಿತ್ತು.

ಹೀಗೆಯೇ ಎರಡು ವರುಷಗಳು ಉರುಳಿದವು. ಈ ಮಿತ್ರಮಂಡಲಿ ರಾಜಸಭೆಯನ್ನು ಮುಗ್ಧಗೊಳಿಸಿದ್ದಿತಾದರೂ ಪ್ರೇಮಶಂಕರರಿಗೆ ಬಹುದಿನ ಗಳಿಂದ ತಮ್ಮ ಮನಸಿನಲ್ಲಿ ಮಾಡಿಕೊಂಡಿದ್ದ ಮಸೂದೆಯನ್ನು ಸಭೆಯ ಮುಂದಿರಿಸುವ ಸಾಹಸವುಂಟಾಗಿರಲಿಲ್ಲ. ಜಮೀನುದಾರರಿಂದ ಒಕ್ಕಲು ಗಳನ್ನು ತೆಗೆದುಹಾಕುವ ಅಧಿಕಾರವನ್ನು ಕಿತ್ತುಕೊಳ್ಳಬೇಕೆಂಬುದು ಅವರ ಯೋಚಿತ ಮಸೂದೆಯ ಉದ್ದೇಶವಾಗಿತ್ತು.

ಅದನ್ನು ಕುರಿತೇ ಒಂದು ದಿನ ಅವರು ವಿಚಾರಮಾಡುತ್ತ ಕುಳಿತಿದ್ದರು. ಆಗ ಒಂದು ಪತ್ರಿಕೆಯನ್ನು ಹಿಡಿದುಕೊಂಡು ಮಾಯಾಶಂಕರ ಬಂದ. "ನೋಡಿದಿರಾ, ಬಾಬೂ ದೀಪಕಸಿಂಹರು ಸಭೆಯಲ್ಲಿ ಎಂತಹ ಘೋರ ಅನರ್ಥವನ್ನು ಮಾಡಲು ಪ್ರಯತ್ನಿಸುತ್ತಿದ್ದಾರೆ. ಒಕ್ಕಲಿಗರಿಂದ ಕಂದಾಯ ವನ್ನೆತ್ತುವ ವಿಷಯದಲ್ಲಿ ಬೇಕಾದ ಒಕ್ಕಲನ್ನು ತೆಗೆಯುವ ಅಧಿಕಾರ ವನ್ನು ಜಮೀನುದಾರರಿಗೆ ಕೊಡುವಂತಹ ಒಂದು ಮಸೂದೆಯನ್ನು ಅವರು ತರಲಿದ್ದಾರೆ. ಇಂತಹ ಅಧಿಕಾರ ಜಮೀನುದಾರರಿಗಿದ್ದರೆ ತೆರಿಗೆ ಎತ್ತುವು ದಕ್ಕೆ ಬಹಳ ಅನುಕೂಲವಾಗುದೆಂದು ಅವರ ಮತ." ಅವನೆಂದ.

" ಈ ಪತ್ರಿಕೆ ನಾನು ನೋಡಿದ್ದೇನೆ. " ಉದಾಸಭಾವದಿಂದ ಪ್ರೇಮ ಶಂಕರರು ನುಡಿದರು.

" ನೀವು ಇದಕ್ಕೆ ಏನೂ ಉತ್ತರ ಕೊಡಲಿಲ್ಲವೆ ? "

ಪ್ರೇಮಶಂಕರರು ಮುಗಿಲ ಕಡೆ ನೋಡುತ್ತ, " ಇನ್ನೂ ಕೊಟ್ಟಿಲ್ಲ " ಎಂದರು.

" ಬಿಲ್ಲು ಸಭೆಯಲ್ಲಿ ಅಂಗೀಕೃತವಾದೀತು ಎಂದು ನಿಮಗೆನಿಸುತ್ತದೆಯೇನು ? "

" ಹಾಂ, ಸಂಭವವಿದೆ. "

" ಹಾಗಾದರೆ ಜಮೀನುದಾರರು ಕುಳಗಳನ್ನು ಮೆಟ್ಟಿ ತುಳಿದು ಬಿಡುವರು. "

" ಹಾಂ, ಇನ್ನೇನು ! "

" ಈಗಿನಿಂದಲೇ ಈ ಆಂದೋಲನದ ಮೂಲವನ್ನು ಕಡಿದೊಗೆಯಬೇಕು. ನೀವು ಈ ಲೇಖನಕ್ಕೆ ಉತ್ತರವನ್ನೀಯಿರಿ. ಎಂದರೆ ಬಾಬು ದೀಪಕ ಸಿಂಹರು ಈ ಪ್ರಸ್ತಾವವನ್ನು ಸಭೆಯಲ್ಲಿ ಮಂಡಿಸುವ ಧೈರ್ಯ ಮಾಡಲಿಕ್ಕಿಲ್ಲ. " ಎಂದು ಮಾಯಾಶಂಕರನೆಂದ.

ಪ್ರೇಮಶಂಕರರು ದಿನಾಲು ಪತ್ರಿಕೆಗಳನ್ನು ಲಕ್ಷ್ಯವಿಟ್ಟು ನೋಡುತ್ತಿದ್ದರು. ದೀಪಕಸಿಂಹರ ಲೇಖನಕ್ಕೆ ಯಾರಾದರೂ ಉತ್ತರವನ್ನು ಕೊಟ್ಟರೊ ಹೇಗೆಂದು. ಎಂಟುಹತ್ತು ದಿನಗಳಾದರೂ ಆ ಆಸೆ ಪೂರ್ಣವಾಗಲಿಲ್ಲ. ಬೇರೆ ಹೆಸರಿಟ್ಟುಕೊಂಡು ಉತ್ತರಬರೆಯಬೇಕೆಂದು ಎಷ್ಟೋ ಸಲ ಯೋಚಿಸಿದರು ಸಮಯ ಸಿಕ್ಕದಿದ್ದುದಕ್ಕೆ ಅರ್ಧ, ಮನಸ್ಸಿನ ಸ್ಥಿತಿಯೇ ಚಂಚಲವಾಗಿದ್ದುದಕ್ಕೆ ಅರ್ಧ, ಅಂತೂ ಬರೆಯಲಿಕ್ಕಾಗಲಿಲ್ಲ. ಹನ್ನೆರಡನೆಯ ದಿನ ಪತ್ರಿಕೆಯನ್ನು ತೆರೆದಾಗ ಮಾಯಾಶಂಕರನ ಲೇಖನವು ಕಣ್ಣಿಗೆ ಬಿದ್ದಿತು. ಮೊದಲಿನಿಂದ ಕೊನೆಯವರೆಗೆ ಓದಿದರು. ಅವರಲ್ಲಿ ಒಂದು ಗೌರವಪೂರ್ಣವಾದ ಉಲ್ಲಾಸದ ಆವೇಗವುಂಟಾಯಿತು. ಕೂಡಲೇ ಶ್ರದ್ಧೆಯ ಬಳಿಗೋಡಿ, ಅವಳೆದುರು ಆ ಲೇಖನವನ್ನು ಓದಿತೋರಿಸಿದರು. ಅಲ್ಲಿಂದ ಇರ್ಫಾನ ಅಲಿಯವರ ಕಡೆಹೋಗಿ,—" ನೋಡಿಲ್ಲವೇ ನೀವು, ಮಾಯಾ, ದೀಪಕಸಿಂಹರ ಪತ್ರಕ್ಕೆ ಹೇಗೆ ಯುಕ್ತಿ ಪೂರ್ಣವಾದ ಉತ್ತರ ಕೊಟ್ಟಿದ್ದಾನೆ ? " ಎಂದರು

“ಹೌದು ನೋಡಿದ್ದೇನೆ,-ಅವನನ್ನು ಅಭಿನಂದಿಸಬೇಕು.”

“ಛೆ ಛೇ, ಅವನ ಈ ಉತ್ಸಾಹವನ್ನು ಹತ್ತಿಕ್ಕುವುದು ಅವಶ್ಯ. ಇದನ್ನು ಓದಿದರೆ ಜ್ಞಾನಶಂಕರರು ಸಿಟ್ಟಾಗಬಹುದು. ಎಲ್ಲಾ ದೋಷ ನನ್ನ ತಲೆಯ ಮೇಲೆಯೇ ಬರುತ್ತದೆ. ನಾನೇ ಹುಡುಗನಿಗೆ ಹೇಳಿಕೊಟ್ಟವನೆಂದು ಅವರೆನ್ನುವರು. ಆದರೆ ನಿಜವಾಗಿ, ಈ ಲೇಖ ಬರೆಯುವುದಕ್ಕೆ ಸೂಚನೆ ಕೂಡ ನಾನು ಕೊಟ್ಟಿಲ್ಲ. ಈ ಅಪವಾದಕ್ಕಾಗಿಯೇ ನಾನು ಬರೆಯಲಿಲ್ಲ.”

ಪ್ರೇಮಶಂಕರರ ಅನುಮಾನವು ಅಕ್ಷರಶಃ ಸತ್ಯವಾಯಿತು. ಜ್ಞಾನಶಂಕರರ ಸಿಟ್ಟಿನ ಪತ್ರವೊಂದು ಮೂರನೆಯ ದಿನವೇ ಬಂದಿತು. ಅದರ ಆಶಯ ಹೀಗೆ—ನಿಮ್ಮಿಂದ ಹೀಗಾದೀತೆಂದು ನಾನು ಆಶಿಸಿರಲಿಲ್ಲ. ಸಾಮ್ಯವಾದದ ಪಾಠವನ್ನು ಕಲಿಸಿ ಸರಲಬಾಲಕನಮೇಲೆ ಘೋರ ಅತ್ಯಾಚಾರ ಮಾಡಿದ್ದೀರಿ. ಅವನಿಗೆ ೧೮ ವರುಷ ತುಂಬುತ್ತಬಂದಿವೆ; ಶೀಘ್ರದಲ್ಲಿಯೇ ಅವನ ಇಲಾಕೆಯ ಶಾಸನಾಧಿಕಾರ ಅವನ ಕೈಗೆ ಬರಲಿದೆ. ಈ ತಿಂಗಳ ಕೊನೆಯೊಳಗಾಗಿ ನಾನು ಇದರ ಸಿದ್ಧತೆಗಾಗಿಯೆಂದು ಬರುವವನಿದ್ದೇನೆ. ಹಿಜ್ ಎಕ್ಸಲೆನ್ಸಿ ಗವ್ಹರ್ನರ್ ಮಹೋದಯರು ಸ್ವಯಂ ರಾಜ್ಯತಿಲಕವನ್ನಿಡಲು ಬರುವವರಿದ್ದಾರೆ. ಈ ಮೃದುಮಧುರ ಸಂಗೀತವನ್ನು ಈ ಅಪಸ್ವರದ ರಾಗವು ಹಾಳುಮಾಡಿಬಿಟ್ಟಿತು. ಇನ್ನು ದಯಪಟ್ಟು ಮಾಯಾನನ್ನು ನನ್ನ ಹತ್ತಿರ ಕಳಿಸಿಬಿಡಿ. ಇನ್ನೊಂದು ಕ್ಷಣ ಕೂಡ ಅಲ್ಲಿರುವುದಕ್ಕೆ ನನ್ನ ಮನಸು ಸರ್ವಥಾ ಒಪ್ಪದು ಅಭಿಷೇಕದ ವರೆಗೂ ಅವನನ್ನು ನನ್ನ ಜೊತೆಯಲ್ಲೇ ಇರಿಸಿಕೊಳ್ಳುವೆ. ಅವನನ್ನು ಅಲ್ಲಿ ಬಿಟ್ಟರೆ ಮತ್ತೇನೇನು ಉಪದ್ರವ ಎಬ್ಬಿಸುತ್ತಾನೋ ಎಂಬ ಭಯ ... ... ಇರಲಿ.

ಸಂಜೆಯ ಗಾಡಿಯಿಂದಲೇ ಮಾಯಾಶಂಕರನು ಲಖನೌಗೆ ಪ್ರಯಾಣ ಬೆಳಸಿದ.

## ೫೦

ಜ್ಞಾನಶಂಕರ ಮಹಾಶಯರ ಭವನವು ಏನೋ ಒಂದು ಕವಿಕಲ್ಪನೆಯ ಹಾಗೆ ಅಲಂಕೃತವಾಗುತ್ತಲಿದೆ. ಒಂದು ಯುಗದಷ್ಟು ಕಾಲ ಪ್ರತೀಕ್ಷಿಸಿಕೊಂಡಿದ್ದ ಆ ದಿನ ಈಗ ಕೂಡಿಬಂದಿದೆ. ದೊರೆತನದ ಸಿರಿತನದ ಸವಿಗನಸು

ನನಸಾಯಿತು. ಮಾಯಾಶಂಕರನ ತಿಲಕೋತ್ಸವದ ಶುಭಮುಹೂರ್ತವು ಸನ್ನಿಹಿತವಾಗಿದೆ. ಬಂಗಲೆಯ ಮುಂದೆ ವಿಶಾಲ ಭವ್ಯಮಂಟಪ ಸಿದ್ಧವಾಗಿದೆ. ಇದನ್ನು ಸಜ್ಜುಗೊಳಿಸುವುದಕ್ಕಾಗಿ ಲಖನವಿನ ಚತುರ ಕೆಲಸಗಾರರನ್ನು ನಿಯಮಿಸಲಾಗಿತ್ತು. ಮಂಚವು ಗಂಗಾಜಮುನೀ ಕುರ್ಚಿಗಳಿಂದ ಶೋಭಿಸುತ್ತಲಿದೆ. ನಾಲ್ಕು ನಿಟ್ಟುಗಳಲ್ಲಿಯೂ ಅನುಪಮವಾದ ಶೋಭೆ. ಗೋರಖಪುರ, ಲಖನವ್, ಬನಾರಸಗಳ ಪ್ರತಿಷ್ಠಿತ ಸದ್ಗೃಹಸ್ಥರು ಚಿತ್ತೈಯಿಸಿದ್ದಾರೆ. ಲಾಲಾ ಪ್ರಭಾಶಂಕರರು ಅಭ್ಯಾಗತರ ಆದರಸತ್ಕಾರದಲ್ಲಿ ಮಗ್ನರಾಗಿದ್ದಾರೆ. ಎರಡೂ ಇಲಾಕೆಗಳ ಹಳ್ಳಿಗಳಿಂದ ನೂರಾರು ಗಣ್ಯರೂ ಪ್ರಮುಖರೂ ಬಂದಿದ್ದಾರೆ. ಲಖನಪುರವೂ ತನ್ನ ಪ್ರತಿನಿಧಿಗಳನ್ನು ಕಳಿಸಿದೆ.

ಸಂಜೆಯ ಹೊತ್ತು. ವಸಂತದ ಶುಭ್ರ, ಸುಖದ ಸಮೀರವು ತೀಡುತ್ತಲಿತ್ತು. ಜನರು ಗವ್ಹರ್ನರರನ್ನು ಬರಮಾಡಿಕೊಳ್ಳುವುದಕ್ಕಾಗಿ ನಿಲ್ದಾಣದತ್ತ ಹೊರಟರು. ಗವ್ಹರ್ನರರು ತಮ್ಮ ಗಾಡಿಯಿಂದ ಇಳಿಯುತ್ತಲೂ ಅವರ ಮೇಲೆ ಹೂವಿನ ಮಳೆ ಸುರಿಯಿತು. ಸುಸಜ್ಜಿತವಾದ ಸಾರೋಟಿನ ಮೇಲೆ ಅವರನ್ನು ಕುಳ್ಳಿರಿಸಲಾಯಿತು. ಮೆರವಣಿಗೆ ಹೊರಟಿತು. ನಗರದ ಮುಖ್ಯ ಮುಖ್ಯ ಬೀದಿಗಳಲ್ಲಿ ಹಾಯ್ದು, ದೀವಟಿಗೆಗಳನ್ನು ಉರಿಸುತ್ತ ಈ ಮೆರವಣಿಗೆ ಜ್ಞಾನಶಂಕರರ ಮನೆಯನ್ನು ತಲುಪಿತು. ಹಿಜ್ ಎಕ್ಸೆಲನ್ಸಿ ಮಹಾರಾಜ ಗುರುದತ್ತರಾಯ ಚೌಧರಿ ಸಾರೋಟಿನಿಂದಿಳಿದು ಬಂದು ಮಂಚದ ಮೇಲೆ ತಮಗಾಗಿ ನಿರ್ದಿಷ್ಟಪಡಿಸಿರಿಸಿದ ಕುರ್ಚಿಯಮೇಲೆ ಕುಳಿತರು. ವಿದ್ಯುದ್ದೀಪಗಳ ಉಜ್ವಲ ಪ್ರಕಾಶದಲ್ಲಿ ಅವರ ವಿಶಾಲ ಪ್ರತಿಭಾ ಸಂಪನ್ನಮೂರ್ತಿ ಗಂಭೀರವಾಗಿ ತೇಜೋಮಯವಾಗಿ—ಯಾವುದೋ ದಿವ್ಯ ಆತ್ಮ ಸ್ವರ್ಗದಿಂದಿಳಿದು ಬಂದಿರುವಂತೆ—ತೋರುತ್ತಿತ್ತು. ಕೇಶರವರ್ಣದ ಪಗಡಿಯೂ ಬಿಳಿಯ ಸಾದಾ ವಸ್ತ್ರಗಳೂ, ಅವರ ಪ್ರತಿಭೆಯನ್ನು ಇನ್ನಷ್ಟು ಬೆಳಗುವಂತೆ ಮಾಡಿದ್ದವು. ಶ್ರೀಮಂತರು ಕುರ್ಚಿಯ ಮೇಲೆ ಕುಳಿತರು. ಹಳ್ಳಿಗಳ ಅತಿಥಿಗಳಿಗಾಗಿ ಒಂದು ಕಡೆ ಉಜ್ವಲವಾದ ಜಮಖಾನೆ ಹಾಸಿತ್ತು. ಎಲ್ಲರೂ ತಮ್ಮ ತಮ್ಮ ಸ್ಥಾನಗಳಲ್ಲಿ ಕುಳಿತ ಬಳಿಕ ಮಾಯಾಶಂಕರನು ರೇಶಿಮೆ ಮತ್ತು ರತ್ನಗಳಿಂದ ತಳತಳಿಸುತ್ತ ದಿವಾಣಖಾನೆಯಿಂದ ಬಂದು, ಮಿತ್ರಭವನದ ವಿದ್ಯಾರ್ಥಿಗಳೊಂದಿಗೆ ಮಂಡಪವನ್ನು ಪ್ರವೇಶಿಸಿದ. ಬಂದೂಕಿನ

ವಂದನಾರ್ಪಣ ನಡೆಯಿತು. ಬ್ರಾಹ್ಮಣರು ಮಂಗಲ ಮಂತ್ರಗಳನ್ನು ಹಾಡಿದರು. ಎಲ್ಲ ಜನರೂ ಎದ್ದು ನಿಂತು ಅವರಿಗೆ ಅಭಿವಾದನ ಸಲ್ಲಿಸಿದರು. ಮಹಾರಾಜ ಗುರುದತ್ತರಾಯರು ಕೆಳಗಿಳಿದು ಹೋಗಿ ಅವರನ್ನು ಅಪ್ಪಿಕೊಂಡು, ಕೈಹಿಡಿದು ಕರೆತಂದು ಅವನ ಸಿಂಹಾಸನದಲ್ಲಿ ಕುಳ್ಳಿರಿಸಿದರು.

ಮಾಯಾಶಂಕರನ ಮುಖಮಂಡಲದಲ್ಲಿ ಈ ಸಮಯದಲ್ಲಿ ಉಲ್ಲಾಸದ ಅಥವಾ ಹರ್ಷದ ಯಾವ ಚಿಹ್ನವೂ ಇರಲಿಲ್ಲ. ಏನೋ ವಿಚಾರದಲ್ಲಿ ಯಾವುದೋ ಚಿಂತೆಯಲ್ಲಿ ಮುಳುಗಿರುವಂತೆ ಕಾಣುತ್ತಿದ್ದ. ಮದುವೆಯ ಕಾಲದಲ್ಲಿ ಹಂದರದಡಿಯಲ್ಲಿ ವರನ ಅವಸ್ಥೆ ಯಾವ ರೀತಿಯಾಗಿರುತ್ತದೋ ಅವನ ಸ್ಥಿತಿಯೂ ಹಾಗಿತ್ತು. ಅವನ ಮೇಲೆ ಈಗ ಎಂತಹ ಹೊಣೆಯ ಹೊರೆಯನ್ನು ಹೊರಿಸಲಾಗುತ್ತಿದೆ; ಇಂದಿನಿಂದ ಅವನು ಎಷ್ಟು ಪ್ರಾಣಿಗಳ ರಕ್ಷಣೆಯ, ಕಲ್ಯಾಣದ ಕರ್ತವ್ಯಗಳನ್ನು ಪಾಲಿಸಬೇಕಾಗುವುದು; ಕೂತಾಗ ನಿಂತಾಗ, ನಿದ್ರೆಯಲ್ಲಿ ಎಚ್ಚರದಲ್ಲಿ ಯಾವಾಗಲೂ ನ್ಯಾಯ–ಧರ್ಮಗಳ ಮೇಲೆ ಲಕ್ಷ್ಯವಿಟ್ಟಿರಬೇಕು. ಅವನ ಸೇವಕವರ್ಗ ಪ್ರಜೆಗಳಮೇಲೆ ಎಸಗುವ ಅತ್ಯಾಚಾರಗಳ ದೋಷವೆಲ್ಲವೂ ಅವನಿಗೇ ತಟ್ಟುವುದು. ದೀನರ ನಿಟ್ಟುಸಿರು, ದುರ್ಬಲರ ಕಣ್ಣೀರುಗಳಿಗೆ ಅವನೆಷ್ಟು ಅಂಜಿಕೊಂಡಿರಬೇಕು. ಈ ಆಂತರಿಕ ಭಾವಗಳ ಹೊರತಾಗಿ, ಇಂತಹ ನಾಗರಿಕ ಜನರ ಮುಂದೆ ನಿಲ್ಲುವುದು, ಆ ಸಾವಿರಾರು ನೋಟಗಳ ಕೇಂದ್ರ ತಾನಾಗುವುದು ಎಂದರೆ ಅವನ ಮನಸಿನ ಶಾಂತಿ ಅದೆಷ್ಟು ಕದಡಬೇಡ?

ಕಾರ್ಯಕ್ರಮ ಮೊದಲಾಯಿತು. ಮಂಗಲಗಾನದ ತರುವಾಯ ಪಂಡಿತ ಶ್ರೀನಿವಾಸವೇದಾಚಾರ್ಯರು ಈಶಸ್ತವನವನ್ನು ನುಡಿದರು. ಬಳಿಕ ಜ್ಞಾನಶಂಕರರು ಎದ್ದುನಿಂತು ತಮ್ಮ ಪ್ರಭಾವಶಾಲಿಯಾದ ಅಭಿನಂದನ ಪತ್ರವನ್ನೋದಿದರು. ಅದರ ಭಾಷೆ, ಅದರ ಭಾವ ಎರಡೂ ನಿರ್ದೋಷವಾಗಿದ್ದವು. ಡಾಕ್ಟರ್ ಇರ್ಫಾನ ಅಲಿಯವರು ಅದನ್ನು ಹಿಂದುಸ್ತಾನಿಯಲ್ಲಿ ಅನುವಾದಿಸಿ ಹೇಳಿದರು. ಆಮೇಲೆ ಮಹಾರಾಜ ಸಾಹೇಬರು ಅದಕ್ಕೆ ಉತ್ತರಕೊಡುವುದಕ್ಕಾಗಿ ಎದ್ದು ನಿಂತರು. ಅವರು ಮೊದಲು ಜ್ಞಾನಶಂಕರರಿಗೂ ಇತರ ಶ್ರೀಮಂತಮಂಡಲಿಗೂ ಧನ್ಯವಾದಗಳನ್ನರ್ಪಿಸಿ, ನಾಲ್ಕಾರು ಧಾರ್ಮಿಕ ವಾಕ್ಯಗಳಲ್ಲಿ ಜ್ಞಾನಶಂಕರರ ಕಾರ್ಯಪಟುತ್ವವನ್ನೂ ಯೋಗ್ಯತೆ

ಯನ್ನೂ ಕೊಂಡಾಡಿ, ರಾಯ ಕಮಲಾನಂದರ ಹಾಗೂ ರಾಣಿ ಗಾಯತ್ರಿಯ ಯಶಸ್ಸನ್ನೂ ಪ್ರಜಾರಂಜನ ಕಾರ್ಯವನ್ನೂ ತ್ಯಾಗವನ್ನೂ ಉಲ್ಲೇಖಿಸಿದರು; ಮಾಯಾಶಂಕರನ ಕಡೆ ಹೊರಳಿ ಅವನ ಸೌಭಾಗ್ಯಕ್ಕಾಗಿ ಸಂತೋಷವನ್ನು ವ್ಯಕ್ತಗೊಳಿಸಿದರು; ಭಾಷಣದ ಕೊನೆಯ ಭಾಗದಲ್ಲಿ ಅವನಿಗೆ ಕರ್ತವ್ಯದ ಬಗ್ಗೆ, ಸುನೀತಿಯ ಬಗ್ಗೆ ಉಪದೇಶವಿತ್ತರು; ಅವನು ತನ್ನ ದೇಶ, ರಾಷ್ಟ್ರ, ರಾಜ್ಯಗಳ ಭಕ್ತನಾಗಿ, ಸಮಾಜಕ್ಕೆ ಭೂಷಣಪ್ರಾಯನಾಗುವನೆಂಬ ತಮ್ಮ ಹಾರೈಕೆಯನ್ನು ಕೊನೆಯಲ್ಲಿ ಪ್ರಕಟಗೊಳಿಸಿದರು.

ಇನ್ನು ಮಾಯಾಶಂಕರ ಉತ್ತರ ಕೊಡುವುದಕ್ಕಾಗಿ ಎದ್ದು ನಿಂತ. ಅವನ ಕಾಲುಗಳು ನಡುಗುತ್ತಿದ್ದವು; ಎದೆಯಲ್ಲಿ ಗಟ್ಟಿಯಾಗಿ ಧಡಧಡ ಎನ್ನುತ್ತಿತ್ತು. ಗಾಬರಿಯಾಗಿ ತಾನೆಲ್ಲಿ ಕೂತುಬಿಡುವನೋ ಎಂದು ಅವನಿಗೆ ಭಯವೆನಿಸುತ್ತಿತ್ತು. ಅವನ ಮನಸಿನ ಧೈರ್ಯವೇ ಉಡುಗಿ ಹೋಗು-ತ್ತಲಿತ್ತು. ಒಂದೆರಡು ನಿಮಿಷ ಅವನು ಮುಂದುಗಾಣದೆ ತನ್ನ ವಿಚಾರ-ಗಳನ್ನು ಸಾವರಿಸಿಕೊಳ್ಳುತ್ತ ನಿಂತ. ಹೇಗೆ ಆರಂಭ ಮಾಡುವುದು? ಏನು ಹೇಳುವುದು? ಪ್ರೇಮಶಂಕರರು ಎದುರಿನಲ್ಲಿಯೇ ಕುಳಿತಿದ್ದರು. ಮಾಯಾಶಂಕರನ ಸಂಕಟವನ್ನು ಕಂಡು ಅವರು ಅಧೀರರಾದರು. ಥಕ್ಕನೆ ಅವನ ದೃಷ್ಟಿ ಅವರ ಮೇಲೆ ಬಿದ್ದಿತು. ಆ ದೃಷ್ಟಿಯಿಂದ ನಿಂತಬಂಡಿಯು ಗಾಲಿಯನ್ನು ಸನ್ನೆಯಿಂದತಳ್ಳಿದಂತಾಯಿತು. ಮಾಯಾಶಂಕರನ ವಾಣಿ ಜಾಗೃತವಾಯಿತು. ದೇವರಿಗೆ ಪ್ರಾರ್ಥನೆಯನ್ನೂ ನೆರೆದ ಜನಕ್ಕೆ ಧನ್ಯ ವಾದವನ್ನೂ ಸಲ್ಲಿಸಿ ಅವನು ಭಾಷಣವನ್ನು ಆರಂಭಿಸಿದ.

ಮಹಾರಾಜಾ ಸಾಹೇಬರೇ, ಆ ಅಮೌಲ್ಯ ಉಪದೇಶಗಳಿಗಾಗಿ ನಾನು ತಮಗೆ ಹೃತ್ಪೂರ್ವಕ ಕೃತಜ್ಞನಾಗಿದ್ದೇನೆ. ತಾವು ನನಗೆ ತೋರಿಸಿಕೊಟ್ಟ ಕರ್ತವ್ಯಗಳನ್ನು ನೆರವೇರಿಸಲು ಯಥಾಶಕ್ತಿಯಾಗಿ ಹೆಣಗುವೆನೆಂದು ಭರವಸೆ ಕೊಡುತ್ತೇನೆ. ಮಹೋದಯರು ಅಪ್ಪಣೆ ಕೊಡಿಸಿದ್ದೀರಿ—ತಾಲ್ಲೂಕುದಾರನು ತನ್ನ ಪ್ರಜೆಗಳ ಮಿತ್ರನೂ ಗುರುವೂ ಸಹಾಯಕನೂ ಆಗಿದ್ದಾನೆ. ಆದರೆ, ಅವನು ಇಷ್ಟೇ ಅಲ್ಲ, ಇನ್ನೂ ಅನೇಕವಾಗಿದ್ದಾನೆ, ತನ್ನ ಪ್ರಜೆಗಳ ಸೇವಕನೂ ಆಗಿದ್ದಾನೆ ಎಂದು ನಾನು ಅತ್ಯಂತ ವಿನಯದಿಂದ ನಿವೇದಿಸ ಬಯಸುತ್ತೇನೆ. ಇದೇ ಅವನ ಅಸ್ತಿತ್ವದ

ಉದ್ದೇಶ್ಯವಾಗಿದೆ, ಬಾಳಿನ ಗುರಿಯಾಗಿದೆ ಪ್ರಜೆಗಳ ಬೆವರಿನಿಂದ ಗಳಿಸಿದ ಸಂಪತ್ತನ್ನು ವಿಲಾಸ-ವಿಷಯಭೋಗಗಳಲ್ಲಿ ಸೂರೆಮಾಡುವುದ-ಕ್ಕಾಗಿ, ಅವರ ಮುರುಕ ಗುಡಿಸಲುಗಳ ಎದುರಿಗೆ ತನ್ನ ಮಹಲನ್ನು ನಿಲ್ಲಿಸುವುದಕ್ಕಾಗಿ, ಅವರ ನಮ್ರತೆಯನ್ನು ತನ್ನ ರತ್ನಜಟಿತ ವಸ್ತ್ರಗಳಿಂದ ಅಪಮಾನಗೊಳಿಸುವುದಕ್ಕಾಗಿ, ಅವರ ಸಂತೋಷಮಯ ಸರಲತೆಯನ್ನು ತನ್ನ ಪಾರ್ಥಿವ ವೈಭವದಿಂದ ನಾಚಿಸುವುದಕ್ಕಾಗಿ ತನ್ನ ರುಚಿಯ ಆಸೆಗಾಗಿ ಅವರ ಕ್ಷುಧಾಪೀಡೆಯ ಉಪಹಾಸಮಾಡುವುದಕ್ಕಾಗಿ ತಾಲ್ಲೂಕದಾರ ನಿರುವುದಿಲ್ಲ. ತಮ್ಮ ಸ್ವಾರ್ಥಕ್ಕಾಗಿ ಬಡಕೊಳ್ಳುವುದು, ಕರ್ತವ್ಯಗಳನ್ನು ಮಾತ್ರ ಮರೆತಿರುವುದು ಯೋಗ್ಯಮಾರ್ಗವಲ್ಲ. ಇಂತಹ ನಿರಂಕುಶ ಪ್ರಾಣಿ-ಗಳಿಂದ ಆದಷ್ಟು ಶೀಘ್ರವೇ ಪ್ರಜೆಗಳ ಬಿಡುಗಡೆಯಾಗಲಿ; ಪ್ರಜೆಗಳ ತಲೆಯಮೇಲಿನ ಅವರ ಭಾರ ಬೇಗ ಇಳಿದಷ್ಟು ಒಳ್ಳೆಯದು.

ಸುಶಿಕ್ಷಿತ ಸಜ್ಜನರೇ, ನಾನು ಈ ಇಲಾಕೆಯ ಪ್ರಭುವೆಂಬ ಮಿಥ್ಯಾಭಿಮಾನ ನನಗಿಲ್ಲ ಭೂಮಿ ಅದನ್ನು ಸೃಷ್ಟಿಮಾಡಿದ ದೇವರದಾಗಿದೆ, ಇಲ್ಲವೇ, ಈಶ್ವರೇಚ್ಛೆಯ ಮೇರೆಗೆ ಅದನ್ನು ಉಪಯೋಗಮಾಡುವ ಒಕ್ಕಲಿಗನದಾಗಿದೆ. ರಾಜನು ದೇಶವನ್ನು ರಕ್ಷಿಸುತ್ತಾನೆ, ಅದಕ್ಕಾಗಿ ಒಕ್ಕಲಿಗರಿಂದ ತೆರಿಗೆ ಪಡೆಯುವ ಅಧಿಕಾರ ಅವನಿಗಿದೆ; ಅದನ್ನವನು ಪ್ರತ್ಯಕ್ಷ ರೂಪದಿಂದ ತೆಗೆದು ಕೊಳ್ಳಬಹುದು, ಇಲ್ಲವೆ, ಅದಕ್ಕಿಂತ ಸುಕರವಾದ ಮಾರ್ಗವನ್ನು ಅನುಸರಿಸ ಬಹುದು. ಒಂದುವೇಳೆ ಯಾವುದೊಂದು ಬೇರೆ ವರ್ಗಕ್ಕೆ ಸ್ವತ್ತು, ಪಿತ್ರಾರ್ಜಿತ ಆಸ್ತಿ, ಅಧಿಕಾರ ಇಂತುಮುಂತಾದ ಕಾರಣಗಳಿಂದ ಒಕ್ಕಲಿಗರನ್ನು ತಮ್ಮ ಭೋಗ್ಯಪದಾರ್ಥವನ್ನಾಗಿ ಮಾಡಿಕೊಳ್ಳುವ ಸ್ವಾತಂತ್ರ್ಯವನ್ನು ಕೊಟ್ಟರೆ, ಅಂಥ ರೂಢಿ ವರ್ತಮಾನ ಸಮಾಜವ್ಯವಸ್ಥೆಯ ಕಲಂಕಚಿಹ್ನವೆಂದು ತಿಳಿಯಬೇಕು. ”

ಕೇಳಿಕೇಳಿದಂತೆ ಜ್ಞಾನಶಂಕರರ ಮುಖವು ಕಳೆಗುಂದಿ ವಿವರ್ಣ ವಾಗುತ್ತಲಿತ್ತು. ಗವ್ಹರ್ನರ ಸಾಹೇಬರೂ ಅರುಚಿಯಿಂದ ಕುಳಿತ ಭಂಗಿಯನ್ನು ಬದಲಿಸಿದರು. ಶ್ರೀಮಂತರೊಳಗೆ ಒಬ್ಬರೊಬ್ಬರಿಗೆ ಸನ್ನೆ ಇಂಗಿತಗಳು ನಡೆದವು. ಈ ಮಾತುಗಳ ಅಭಿಪ್ರಾಯವೇನಿರಬಹುದೆಂದು ಜನರು ಚಕಿತ ರಾದರು. ಪ್ರೇಮಶಂಕರರಂತೂ ಅತ್ಯಂತ ಲಜ್ಜಿತರಾಗಿ ನೆಲಕ್ಕೇ ಕುಸಿಯು

ತ್ತಿದ್ದರು. ಡಾ. ಇರ್ಫಾನ ಆಲಿ ಮತ್ತು ಜ್ವಾಲಾಸಿಂಹರ ಮುಖದಲ್ಲಿ ಮಾತ್ರ ಹಿಗ್ಗು ಕಾಣುತ್ತಿದ್ದಿತು. ಮಾಯಾಶಂಕರನು ತಡೆದು ಮುಂದುವರಿಸಿದ:

" ನನ್ನ ಮಾತುಗಳು ನಿರುಪಯೋಗಿಯೆಂದೂ ಕಾಲವಿಪರೀತವೆಂದೂ ಕ್ರಾಂತಿಕಾರಕವೆಂದೂ ಅನಿಸುವವೆಂಬ ಭಯ ನನಗಿದ್ದೇ ಇದೆ. ಆದರೆ ಆ ಭಯವು ನನ್ನ ಈ ವಿಚಾರಗಳನ್ನು ಹೊರಬರದಂತೆ ಹತ್ತಿಕ್ಕಲಾರದು. ಈ ವಿಚಾರಗಳು ನನ್ನ ಅನುಭವದ ಫಲಗಳಾಗಿವೆ, ಅವನ್ನು ಕಾರ್ಯರೂಪಕ್ಕೆ ತರುವ ಅವಕಾಶವೂ ದೊರೆತಿದೆ. ಒಕ್ಕಲಿಗರ ಹೆಗಲಮೇಲೆ ನನ್ನ ನೊಗವನ್ನು ಹೇರುವುದಕ್ಕೆ ನನಗೆ ಅಧಿಕಾರವಿಲ್ಲೆಂದು ತಿಳಿದಿದ್ದೇನೆ. ನೆರೆದಿರುವ ಸಕಲ ಸಜ್ಜನರ ಸಮ್ಮುಖದಲ್ಲಿ, ರೂಢಿ-ಸಮಾಜವ್ಯವಸ್ಥೆಗಳಿಂದ ನನಗೆ ದೊರೆತಿರುವ ಆ ಅಧಿಕಾರ-ಸ್ವಾರ್ಥಗಳನ್ನೆಲ್ಲ ಬಿಟ್ಟುಬಿಡುತ್ತಿದ್ದೇನೆ. ನಾನು ನನ್ನ ಪ್ರಜೆಗಳನ್ನು ನನ್ನ ಅಧಿಕಾರಗಳ ಬಂಧನದಿಂದ ಮುಕ್ತಮಾಡಿದ್ದೇನೆ. ಇಂದಿನಿಂದ ಅವರು ತಮ್ಮ ಸಾಗುವಳಿಭೂಮಿಯ ಜಮೀನದಾರರು ತಾವೇ ಆಗಿದ್ದಾರೆ, ಇನ್ನು ನಮ್ಮ ಸೇವಕವರ್ಗದ ಅನ್ಯಾಯಗಳನಾಗಲಿ ನನ್ನ ಸ್ವಾರ್ಥದ ಕಷ್ಟಗಳನ್ನಾಗಲಿ ಅವರು ಅನುಭವಿಸಬೇಕಾಗಿಲ್ಲ. ಅವರು ಮೇಲ್ತೆರಿಗೆ, ಒತ್ತಾಯದ ಕಾಣಿಕೆ, ಬಿಟ್ಟಿಯ ದುಡಿತಗಳ ಕಾಟದಿಂದ ನಿವೃತ್ತರಾಗಿದ್ದಾರೆ. ಏನೋ ಒಂದು ಆವೇಶಕ್ಕೆ ಸಿಕ್ಕು ಆ ಕ್ಷಣದಲ್ಲಿ ಈ ನಿರ್ಣಯವನ್ನು ಮಾಡಿದೆನೆಂದು ಯಾರೂ ತಿಳಿಯಬಾರದು. ನನ್ನ ಇಲಾಕೆಯನ್ನು ಪೂರ್ಣವಾಗಿ ಸಂಚರಿಸಿದಾಗಲೇ ನಾನೀನಿರ್ಣಯಕ್ಕೆ ಬಂದಿದ್ದೇನೆ. ಅವರನ್ನು ಮುಕ್ತರನ್ನಾಗಿ ಮಾಡಿ ನಾನೂ ಸ್ವಯಂ ಮುಕ್ತನಾದೆ. ಈಗ ನಾನು ನನ್ನ ಪ್ರಭುವಾಗಿದ್ದೇನೆ. ನನ್ನ ಆತ್ಮ ಸ್ವತಂತ್ರವಾಗಿದೆ. ಇನ್ನು ಯಾರೆದುರಿನಲ್ಲಿಯೂ ಮೊಣಕಾಲೂರುವ ಆಗತ್ಯ ನನಗಿಲ್ಲ. ಈ ದಲಾಲಿಯ ಸಲುವಾಗಿ ನಾನು ನನ್ನ ಆತ್ಮನಿಗೆ ಎಷ್ಟು ಅನ್ಯಾಯಮಾಡಬೇಕಾಗುತ್ತಿತ್ತು ಎಂಬ ಅನುಭವ ನನಗೀಗಾಗಿದೆ. ಈ ಆತ್ಮಪತನದಿಂದ ನನ್ನನ್ನು ಉಳಿಸಿದುದಕ್ಕಾಗಿ ದೇವರಿಗೆ ಧನ್ಯವಾದಗಳನ್ನರ್ಪಿಸುತ್ತೇನೆ. ನನ್ನೆಲ್ಲ ಬಂಧುಗಳಿಗೂ ನನ್ನ ನಿವೇದನೆಯೇನೆಂದರೆ–ಅವರು ಇನ್ನೊಂದು ತಿಂಗಳಲ್ಲಿ ನಮ್ಮ ಮೊಕ್ತೆಯಾರರ ಕಡೆಗೆ ಹೋಗಿ ತಮ್ಮ ತಮ್ಮ ಪಾಲಿನ ಸರಕಾರಿ ತೆರಿಗೆ ಎಷ್ಟೆಂಬುದನ್ನು ಕೇಳಿ ತಿಳಿದುಕೊಂಡು, ಅಷ್ಟು ಹಣ ಬೊಕ್ಕಸದಲ್ಲಿ ತುಂಬಬೇಕು. ಈ ಕಾರ್ಯದಲ್ಲಿ ಮಾನ್ಯ ಇರ್ಫಾನ ಅಲಿಯವರು

ನನಗೆ ಸಹಾಯಮಾಡಬೇಕು, ಕಾಯದೆ–ಕಟ್ಟಳೆಗಳ ಸಮಸ್ಯೆಗಳುಂಟಾದರೆ ಬಿಡಿಸಿಕೊಡಬೇಕು ಎಂದು ಅವರಲ್ಲಿ ಬಿನ್ನವಿಸಿಕೊಳ್ಳುತ್ತೇನೆ ನನ ಬಂಧುಗಳು ತಮ್ಮ ತಮ್ಮೊಳಗೆ ಪ್ರೇಮದಿಂದಿರುವರೆಂದೂ, ಸಣ್ಣ ಸಣ್ಣ ಮಾತಿಗಾಗಿ ಕೋರ್ಟಕಚೇರಿ ಅನ್ನುವದಿಲ್ಲವೆಂದೂ ನಾನೂ ಆಶಿಸುತ್ತೇನೆ. ಪರಮಾತ್ಮನು ಅವರ ಹೃದಯದಲ್ಲಿ ಸಹಿಷ್ಣುತೆ, ಸದ್ಭಾವ, ಸುವಿಚಾರಗಳನ್ನು ಉಂಟುಮಾಡಲಿ; ತಮ್ಮ ಹೊಸ ಕರ್ತವ್ಯಗಳನ್ನು ಪಾಲಿಸುವ ಸಾಮರ್ಥ್ಯವನ್ನು ಅವರಿಗೆ ಕೊಡಲಿ ನಮ್ಮ ಕರ್ಮಚಾರಿಗಳು ಈ ಮಾತನ್ನು ಅರಿತುಕೊಂಡು, ಒಕ್ಕಲಿಗರೊಡನೆ ನಡೆದುಕೊಳ್ಳಬೇಕು. ಇದರ ವ್ಯತಿರಿಕ್ತವಾಗಿ ಅವರು ಆಚರಿಸಿದರೆ ನನಗೆ ಘೋರ ಅನ್ಯಾಯ ಮಾಡಿದಂತೆ; ಏಕೆಂದರೆ; ನಾನು ಯಾವ ಕೆಡ ುಗಳನ್ನು ಹೋಗಲಾಡಿಸಬೇಕೆನ್ನುವೆನೋ ಅವನ್ನೇ ಅವರು ಪ್ರಚಾರಮಾಡಿದಂತಾಗುವುದು. ಯಾವ ಕಾಲಕ್ಕೂ ಈ ವ್ಯವಹಾರದಲ್ಲಿ ಲಾಭದಾಶೆ ಮಾಡುವುದಿಲ್ಲನೆಂದು ಅವರು ಪ್ರತಿಜ್ಞೆ ಮಾಡಬೇಕು. ರೈತರಿಂದ ಲಾಭ ತಿನ್ನುವುದು ಮಹಾಪಾಪ "

ಮಾಯಾಶಂಕರ ಭಾಷಣವನ್ನು ಮುಗಿಸಿ ತನ್ನ ಆಸನದಲ್ಲಿ ಕುಳಿತಕೊಳ್ಳುತ್ತಲೂ ನಾಲ್ಕೂಕಡೆಗಳಿಂದ ಸಾವಿರಾರು ಜನರು ನುಗ್ಗಿ ಬಂದು ಅವನನ್ನು ಸುತ್ತುಗಟ್ಟಿದರು ಕೆಲವರು ಅವನ ಕಾಲುಗಳಮೇಲೆ ಬಿದ್ದರು ಕೆಲವರು ಅತ್ತರು; ಕೆಲವರು ಆನಂದದಿಂದ ಉಬ್ಬಿ ನಲಿದರು, ಅವನನು ಎದೆದುಂಬಿ ಹರಸಿದರು. ಹಿಂದಕ್ಕೆ ಕನಸಿನಲ್ಲಿಯೂ ಎಣಿಸಲಾಗದಿದ ಅಮೌಲ್ಯವಸ್ತುವೊಂದು ಅವರಿಗಿಂದು ಕೈಸೇರಿತ್ತು. ಬಡ ಒಕ್ಕಲಿಗರಿಗೆ ಜಮೀನುದಾರರಾಗುವ ಭಾಗ್ಯವೆಲ್ಲಿ? ನೂರಾರು ಜನರು ಗವ್ಹರ್ನರ ಮಹೋದಯರ ಅಡಿಗಳಿಗೆ ಎರಗಿದರು; ಕೆಲವರು ಜ್ಞಾನಶಂಕರರ ಕಾಲು ಹಿಡಿದಾಕೊಂಡರು. ಸಮಾರಂಭ ಮಂಟಪದಲ್ಲಿ ದೊಡ್ಡ ಕೋಲಾಹಲವೇ ಎದ್ದಿತು. ಜನರು ಒಬ್ಬರೊಬ್ಬರನ್ನು ಅಪ್ಪಿಕೊಳ್ಳುತ್ತ ತಮ್ಮ ದೈವವನ್ನು ಕೊಂಡಾಡುತ್ತಿದ್ದರು. ಯಾವ ಆಳವಾದ ವಿಚಾರದಲ್ಲಿಯೇ ಮುಳುಗಿರುವಂತೆ ಪ್ರೇಮಶಂಕರರು ತಲೆತಗ್ಗಿಸಿಕೊಂಡುನಿಂತಿದ್ದರು. ಆದರೆ ಅವರ ಇತರ ಮಿತ್ರರಿಗಾದ ಆನಂದ ಹೇಳತೀರದು. ತಮ್ಮ ಸಂಗತಿಯ, ತಮ್ಮ ಶಿಕ್ಷಣದ ಫಲವಿದು, ಇದರ ಶ್ರೇಯಸ್ಸಿನ ಪಾಲು ತಮಗೂ ಸ್ವಲ್ಪ ಸಲ್ಲುತ್ತದೆ ಎಂಬ ಹೆಮ್ಮೆ

ಅವರ ದೃಷ್ಟಿಯಲ್ಲಿ ಹೊಮ್ಮುತ್ತಿತ್ತು. ಶ್ರೀಮಂತರ ಪ್ರಾಣಗಳು ಇತ್ತ ಸಂಕಟದಲ್ಲಿ ಬಿದ್ದಿದ್ದವು. ತಮ್ಮ ಕಣ್ಣುಗಳನ್ನು, ತಮ್ಮ ಕಿವಿಗಳನ್ನು ನಂಬದೆ ಅವರು ಅಚ್ಚರಿಯಿಂದ ಒಬ್ಬರ ಮೋರೆಯನ್ನೊಬ್ಬರು ನೋಡುತ್ತಲಿದ್ದರು. ಕೆಲವು ವಿದ್ವಾಂಸರು ಈ ಪ್ರಶ್ನೆಯನ್ನು ಕುರಿತು ತಮ್ಮ ವಿಚಾರವನ್ನು ಪ್ರಕಟಗೊಳಿಸಲು ಆತುರಪಡುತ್ತಿದ್ದರು. ಆದರೆ ಅದಕ್ಕೆ ಇಲ್ಲಿ ಅವಕಾಶ ವಿರಲಿಲ್ಲ.

ಈ ಮಾತುಗಳಿಗೆ ಯಾವ ಶಬ್ದಗಳಿಂದ ಉತ್ತರ ಕೊಡಬೇಕೋ ಎಂದು ಗವ್ಹರ್ನರ್ ಸಾಹೇಬರು ಗೊಂದಲದಲ್ಲಿ ಬಿದ್ದಿದ್ದರು. ಅವರು ಒಳಗೊಳಗೆ ಮಾಯಾಶಂಕರನ ಮಹಾನ್ ತ್ಯಾಗವನ್ನು ಹೊಗಳುತ್ತಲಿದ್ದರು. ಆದರೆ ಅದನ್ನು ಪ್ರಕಟಗೊಳಿಸಲು, ಇತರ ಜಮೀನುದಾರರೂ ಶ್ರೀಮಂತರೂ ಅಸಂತುಷ್ಟರಾಗಬಹುದೆಂದು ಅಂಜುತ್ತಿದ್ದರು. ಸುಮ್ಮನಿದ್ದರೆ ಮಾಯಾ ಶಂಕರನ ಈ ಮಹಾಯಜ್ಞಕ್ಕೆ ಅಪಮಾನಮಾಡಿದಂತಾಗುತ್ತಿತ್ತು. ಮಾಯಾ ಶಂಕರನ ವಿಷಯದಲ್ಲಿ ಅವರಿಗೆ ಪವಿತ್ರಾತ್ಮಗಳ ಭಾಗವಾದ ಪ್ರೇಮವೂ ಶ್ರದ್ಧೆ ಉಂಟಾಗಿತ್ತು. ಎದ್ದುನಿಂತು ಅವರು ಮೃದುಸ್ವರದಲ್ಲಿ ಮಾತ ನಾಡಿದರು.

“ಬಾಬೂ ಮಾಯಾಶಂಕರರೇ, ನೀವು ಯಾವ ಸಿದ್ಧಾಂತಗಳ ಪ್ರೇರಣೆ ಯಿಂದ ಈ ಅಲೌಕಿಕ ಸಂತೋಷವ್ರತವನ್ನು ಧಾರಣ ಮಾಡಿರುವಿರೋ, ಅವು ನಮ್ಮಲ್ಲಿ ಬಹುಜನರಿಗೆ ಒಪ್ಪಿಗೆಯಾಗಲಿಕ್ಕಿಲ್ಲ. ಆದರೆ, ಸಂಪೂರ್ಣ ಹೃದಯಶೂನ್ಯನಲ್ಲದ ಮನುಷ್ಯನು ನಿಮ್ಮನ್ನು ದೇವಸಮಾನರೆಂದೇ ತಿಳಿಯು ವನು. ದೀರ್ಘಜೀವನವನ್ನು ಸುಖಭೋಗದಲ್ಲಿ ಕಳೆದು ಕೊನೆಯಲ್ಲಿ ವೈರಾಗ್ಯವುಂಟಾಗುವುದು ಎಲ್ಲಿಯಾದರೂ ಉಂಟು. ಆದರೆ ಮನೋಹರವಾದ ಸುಖಕರವಾದ ವೈಭವದ ಉಪವನದಲ್ಲಿ ಇದೀಗ ಪ್ರವೇಶಿಸುತ್ತಿರುವ ಯುವಕನ ಈ ತ್ಯಾಗವು ನಿಜವಾಗಿಯೂ ಆಶ್ಚರ್ಯಕರವಾದದ್ದು. ಆದರೆ, ಬಾಬೂಸಾಹೇಬರು ಮನಸಿನಲ್ಲಿ ಏನೂ ತಿಳಿದುಕೊಳ್ಳುವುದಿಲ್ಲವಾದರೆ ನಾನೊಂದು ಮಾತು ಹೇಳಬಯಸುತ್ತೇನೆ. ಕೇವಲ ಸಿದ್ಧಾಂತಗಳ ಆಧಾರ ದಿಂದ— ಮಾತ್ರ ಅವೆಷ್ಟೇ ಉಚ್ಚವಾಗಿರಲಿ, ಪವಿತ್ರವಾಗಿರಲಿ – ಸಮಾಜದ ಯಾವ ವ್ಯವಸ್ಥೆಯೂ ನಿರ್ದೋಷವೆನಿಸಲಾರದು. ಅದರ ಉನ್ನತಿ ಮಾನವ

ಚರಿತ್ರವನ್ನು ಅವಲಂಬಿಸಿದೆ. ಏಕಾಧಿಪತಿಗಳಲ್ಲಿ ದೇವತೆಗಳಾಗಿದ್ದಾರೆ, ಪ್ರಜಾವಾದಿಗಳಲ್ಲಿ ರಾಕ್ಷಸರಾಗಿದ್ದಾರೆ. ತಮ್ಮಂತಹ ಉದಾರ ವಿವೇಕಶಾಲಿ ದಯಾಳು ಸ್ವಾಮಿಗಳಿಂದ ಪ್ರಜೆಗಳ ಕಲ್ಯಾಣ ಎಷ್ಟಾಗಬಹುದಿತ್ತು. ನೀವು ಅವರ ಮಾರ್ಗದರ್ಶಕರಾಗಬಹುದಾಗಿತ್ತು. ಇನ್ನು ಆ ಪ್ರಜೆಗಳು ನಿಮ್ಮ ಪ್ರಜಾಹಿತ ಸಾಧನಗಳಿಂದ ವಂಚಿತರಾಗುವರು. ಆದರೆ ಈ ಕುತ್ಸಿತ ವಿಚಾರಗಳಿಂದ ನಿಮ್ಮನ್ನು ಭ್ರಮೆಯಲ್ಲಿ ಕೆಡವಲಾರೆ. ಶುಭಕಾರ್ಯಗಳು ಯಾವಾಗಲೂ ದೇವರಿಂದಾಗುವವು. ಇದೂ ಈಶ್ವರನ ಇಚ್ಛೆಯೇ; ಇದರಿಂದ ಒಳ್ಳೆಯ ಫಲ ದೊರೆಯುವುದೆಂದೇ ನಾವು ಆಶಿಸೋಣ. ಈ ಹೊಸ ಜಮೀನು ದಾರರಿಗೆ ಕಲ್ಯಾಣವಾಗಲಿ, ಅವರ ಕೀರ್ತಿ ಅಮರವಾಗಲಿ ಎಂದು ಪರಮಾತ್ಮನಲ್ಲಿ ನನ್ನ ಪ್ರಾರ್ಥನೆ."

ಈಕಡೆ ಮಿತ್ರಭವನದ ಮಂಡಲಿಯ ನಾಟಕ ನಡೆದಿತ್ತು. ಆನಂದದ ತಾನುಗಳೂ ಪ್ರಿಯನಾಥರ ಸರೋದವೆಂಬ ವಾದ್ಯದ ಧ್ವನಿಯೂ ರಂಗ ಮಂಟಪದಲ್ಲಿ ಕೇಳಬರುತ್ತಿದ್ದವು; ಆಕಡೆ ಜ್ಞಾನಶಂಕರರು ನೈರಾಶ್ಯ ಉನ್ಮತ್ತ ಆವೇಶದಲ್ಲಿ ಗಂಗಾತಟದತ್ತ ಓಡುತ್ತಲಿದ್ದರು. ಇಂದು ಪ್ರಾರಬ್ಧವು ಅವರನ್ನು ಪರಾಭವಗೊಳಿಸಿದೆ. ಇದುವರೆಗೆ ಯಾವಾಗಲೂ ಪ್ರಾರಬ್ಧವನ್ನು ಅವರು ಗೆಲ್ಲುತ್ತ ಬಂದಿದ್ದಾರೆ. ಇಂದು ಲೆತ್ತದ ಪಾಸಿಯೇ ತಿರುವುಮುರುವಾಗಿ ಬಿಟ್ಟಿತು; ಪರಿಣಾಮವನ್ನು ಸಂವರಿಸಿಕೊಳ್ಳುವುದೇ ಸಾಧ್ಯವಿಲ್ಲ. ಒಂದೇ ಒಂದು ಕ್ಷಣದ ಹಿಂದೆ ಅವರ ಭಾಗ್ಯಮಂದಿರವು ತೊಳತೊಳಗುವ ದೀಪಿಗೆ ಗಳಿಂದ ಬೆಳಗುತ್ತಲಿತ್ತು. ದೊಡ್ಡ ಬಿರುಗಾಳಿಯೊಂದು ಆ ದೀವಿಗೆಗಳನ್ನು ಆರಿಸಿಬಿಟ್ಟಿತು. ಅವರ ಸುತ್ತಮುತ್ತೆತ್ತಲೂ ಕಗ್ಗತ್ತಲೆಯೇ ಕಗ್ಗತ್ತಲೆ; ಏನೊಂದೂ ಕಾಣುವಂತಿಲ್ಲ

ಅವರು ಯೋಚಿಸುತ್ತಾ ಹೋಗುತ್ತಲಿದ್ದರು ನಾನು ಈ ಉದ್ದೇಶ ಕ್ಕಾಗಿಯೇ ನನ್ನ ಜೀವನವನ್ನು ಸಮರ್ಪಿಸಿದೆನೆ ? ಮುಳುಗಿಹೋಗುವುದಕ್ಕಾ ಗಿಯೇ ನಮ್ಮ ದೋಣಿಯನ್ನು ತುಂಬಿತ್ತೇ ?

ಹಾ ವೈಭವಲಾಲಸೆಯೆ ! ನಿನ್ನ ಬಲಿಪೀಠದಮೇಲೆ ನಾನೇನು ನೀಡಿದೆ ? ನನ್ನ ಧರ್ಮವನ್ನು, ನನ್ನ ಆತ್ಮವನ್ನು ಕೂಡ ಸಲ್ಲಿಸಿಬಿಟ್ಟೆ.

ಹಾಯ್, ನಿನ್ನ ಭಟ್ಟಿಯಲ್ಲಿ ನಾನೇಕೆ ಸುಟ್ಟುಸುಣ್ಣವಾಗಲಿಲ್ಲ ? ನನ್ನ ಮನ ನನ್ನ ವಚನ, ನನ್ನ ಕರ್ಮ ಎಲ್ಲವನ್ನೂ ನಾನು ಆಹುತಿ ಕೊಟ್ಟೆ. ಅದು ಈ ಫಲಕ್ಕಾಗಿಯೇ ಏನು ?– ಕಲಂಕದ ಹೊರತು ಮತ್ತೇನನ್ನೂ ಪಡೆಯಲಿಲ್ಲ,

ಹಾಯ್! ಬದಕು ಎಷ್ಟೊಂದು ನಿರರ್ಥಕವಾಗಿಬಿಟ್ಟಿತಲ್ಲ! ವಿಷಯಲಿಪ್ಸೆಯೇ, ನೀನು ನನಗೆ ಏನನ್ನೂ ಇರಿಸಲಿಲ್ಲ. ನಾನು ಉಜ್ವಲವಾದ ಕಣ್ಣುಗಳಿಂದ ನಿನ್ನನ್ನು ಹಿಂಬಾಲಿಸಿದೆ; ನನ್ನನ್ನು ನೀನು ಈ ಘಾತಕ ಕೊಳ್ಳದಲ್ಲಿ ಕೆಡವಿದೆ.

ಹಾಯ್! ಹೀಗಾದೀತೆಂದು ನನಗೆ ಮೊದಲೇ ತಿಳಿದಿದ್ದರೆ ಇಂದು ನಾನು ಎಷ್ಟು ಪೂಜ್ಯನಾಗುತ್ತಿದ್ದೆ! ತ್ಯಾಗಿಯಾದ ಪುತ್ರನ ಧರ್ಮಜ್ಞ ಪಿತೃವೆನಿಸಿ ಮೆರೆಯುತ್ತಿದ್ದೆ. ಪ್ರಾರಬ್ಧವು ಮರೆಮಾಸಿ ಇರಿದಬಿಟ್ಟಿತು. ಇನ್ನೇಕೆ ಬದುಕಬೇಕು ? ನನ್ನ ದುರ್ಗತಿಯನ್ನು ಕಂಡು ನೀನು ಪರಿಹಾಸಮಾಡಿ ಸೊಗಸುಬಡುವುದಕ್ಕಾಗಿಯೋ, ನನ್ನ ಪ್ರಾಣಹಿಂಸೆಯನ್ನು ಕಂಡು ಚಪ್ಪಾಳೆ ಬಾರಿಸುವುದಕ್ಕಾಗಿಯೋ ? ಛೆ ನಾನಿನ್ನೂ ಅಷ್ಟು ಲಜ್ಜೆಗೆಟ್ಟಿಲ್ಲ!

ಹಾಯ್ ವಿದ್ಯಾ! ನಾನು ನಿನಗೆಂಥ ಅತ್ಯಾಚಾರವನ್ನು ಎಸಗಿದೆನಲ್ಲ ? ನೀನು ಗರತಿ ಗಂಗಾದೇವಿ, ನಿನ್ನನ್ನು ನಾನು ಕಾಲಡಿಯಲ್ಲಿ ಹಾಕಿ ತುಳಿದೆ. ನನ್ನ ಬುದ್ಧಿ ಎಷ್ಟುಭ್ರಷ್ಟವಾಗಿಬಿಟ್ಟಿತು. ದೇವಿ ಈ ಪತಿತ ಆತ್ಮನ ಬಗೆಗೆ ದಯವಿರಲಿ!

ಈ ದುಃಖಮಯ ಭಾವಗಳ ನಿಮಗ್ನರಾಗಿ ಜ್ಞಾನಶಂಕರರು ನದಿಯ ದಂಡೆಯನ್ನು ತಲುಪಿದರು. ಪ್ರವಾಹವನ್ನು ಕಾತರನೇತ್ರಗಳಿಂದ ನೋಡಿದರು ಅವರ ಮೈ ಜುಮ್ಮೆಂದಿತು. ಅವರು ಅಳತೊಡಗಿದರು. ಅವರ ದುಃಖವು ಹೊಳೆಗಿಂತಲೂ ಅಪಾರವಾಗಿತ್ತು.

ಜೀವನದಲ್ಲಿಯ ಘಟನೆಗಳು ಸಿನೆಮಾ ಚಿತ್ರಗಳಂತೆ ಅವರೆದುರಿನಲ್ಲಿ ಮೂಡಿದವು. ಅವರ ಕುಟಿಲತೆಗಳು ಆಕಾಶದ ತಾರೆಗಳಿಗಿಂತಲೂ ಉಜ್ವಲವಾಗಿದ್ದವು. " ಸಾವಿನ ಹೊರತು ಬೇರೊಂದು ದಾರಿ ಇಲ್ಲವೇ ? " ಎಂದು ಅವರ ಮನಸು ಕೇಳಿತು.

" ಇಲ್ಲ, ಯಾವ ದಾರಿಯೂ ಇಲ್ಲ " ಎಂದು ನೈರಾಶ್ಯದಿಂದ ಉತ್ತರ ಬಂದಿತು.

ಅವರು ಘಾಟಿನ ಒಂದು ಗಜಮಸ್ತಕದ ಮೇಲೆ ಹೋಗಿ ನಿಂತರು. ಹಕ್ಕಿ ರೆಕ್ಕೆ ತೆರೆಯುವಂತೆ ಕೈಗಳನ್ನು ಚಾಚಿದರು. ಆದರೆ ಕಾಲುಗಳು ಏಳಲಿಲ್ಲ.

"ನೀನೂ ಪ್ರೇಮಾಶ್ರಮಕ್ಕೆ ಏಕೆ ಹೋಗಬಾರದು ?" ಮನಸು ಪ್ರಶ್ನಿಸಿತು.

"ಯಾವ ಮೋರೆಯಿಂದ ಹೋಗಲಿ ?" ಗ್ಲಾನಿಯೆಂದಿತು.

ಸಾಯುವ ಇಚ್ಛೆಯಿಲ್ಲ, ಆದರೆ ಬದುಕಲಿ ಹೇಗೆ ? ಹಾಯ್, ನನ್ನನ್ನು ಬಲಾತ್ಕಾರದಿಂದ ವಧಿಸಲಾಗುತ್ತಿದೆ ! ಎಂದು ಯೋಚಿಸುತ್ತ ಜ್ಞಾನಶಂಕರರು ಶೋಕಿಸಿದರು. ಕಂಬನಿಗಳ ಮಳೆಯೇ ಆಯಿತು. ಚಿತ್ತದ ಸಮಸ್ತ ವೃತ್ತಿಗಳೂ ಅಪಾರ-ಅಗಾಧ ಶೋಕದಲ್ಲಿ ಮುಳುಗಿಹೋದವು. ನೆಲ-ಮುಗಿಲು, ಜಲ-ಸ್ಥಲ ಎಲ್ಲವೂ ಈ ಶೋಕಸಾಗರದಲ್ಲಿಯೇ ವಿಲೀನವಾದವು.

ಅವರೊಂದು ಬಗೆಯ ಅಚೇತನ ಶೂನ್ಯ ಅವಸ್ಥೆಯಲ್ಲಿ ಎದ್ದು ಗಂಗೆಯಲ್ಲಿ ಹಾರಿದರು. ಶೀತಲ ಜಲವು ಹೃದಯವನ್ನು ಶಾಂತಗೊಳಿಸಿತು.

## ಉಪಸಂಹಾರ

ಎರಡು ವರುಷಗಳು ಗತಿಸಿಹೋಗಿವೆ ಸಂಜೆಯ ಹೊತ್ತು. ಮಾಯಾಶಂಕರ ಬಾಬು ಕುದುರೆಯನ್ನೇರಿಕೊಂಡು ಲಖನಪುರಕ್ಕೆ ಹೋಗಿ ಉಪಸ್ಥಿತರಾದರು. ಊರು ಎಲ್ಲೆಲ್ಲೂ ಅಂದವಾಗಿ, ಚೊಕ್ಕಟವಾಗಿ ಕಂಡಿತು. ಸಾಮಾನ್ಯವಾಗಿ ಎಲ್ಲರ ಬಾಗಿಲ ಮುಂದೂ ಹೊರಚಪ್ಪರವಿತ್ತು, ಅಲ್ಲಿ ದೊಡ್ಡ ದೊಡ್ಡ ಹಲಗೆಗಳನ್ನು ಹಾಕಿದ್ದರು. ಬಹಳ ಮನೆಗಳಿಗೆ ಸುಣ್ಣ ಹಚ್ಚಲಾಗಿತ್ತು. ದನಗಳಿಗಾಗಿ ಉತ್ತಮವಾದ ಪಟ್ಟಿಗಳನ್ನು ಕಟ್ಟಿದ್ದರು. ಕೆಲವು ಮನೆಗಳ ಮುಂದೆ ಕದುರೆಗಳೂ ಕಂಡವು. ಹಳೆಯ ಚಾವಡಿಯಲ್ಲಿ ಸಾಲೆ ಹಾಕಿದ್ದರು. ಅದರೆದುರಿನಲ್ಲಿ ಕಲ್ಲುಕಟ್ಟಡದ ಹೊಂಡವಿತ್ತು; ಒಂದು ಧರ್ಮಶಾಲೆಯಿತ್ತು. ಮಾಯಾಶಂಕರರನ್ನು ಕಂಡೊಡನೆ ಜನರು ಕೈಯೊಳಗಿನ ಕೆಲಸವನ್ನು ಬಿಟ್ಟುಕೊಟ್ಟು ಓಡಿಬಂದರು; ಒಂದು ಕ್ಷಣದಲ್ಲಿ ನೂರಾರು ಜನರು ಸೇರಿದರು. ಮಾಯಾಶಂಕರರು ಸುಕ್ಖು ಚೌಧರಿಯ

ಮಂದಿರದ ಬಳಿ ನಿಂತರು. ಮಂದಿರದ ಅಂಗಳದಲ್ಲಿ ಬಗೆಬಗೆಯ ಹೂಗಳು ಅರಳಿದ್ದವು ಕಟ್ಟೆಯಮೇಲೆ ಕುಳಿತು ಚೌಧರಿ ರಾಮಾಯಣ ಓದುತ್ತಲಿದ್ದ; ಕೆಲವು ಹೆಣ್ಣುಮಕ್ಕಳು ಕುಳಿತು ಕೇಳುತ್ತಿದ್ದರು. ಮಾಯಾಶಂಕರನು ಕುದುರೆಯನ್ನಿಳಿದು ಕಟ್ಟೆಯಮೇಲೆ ಹೋಗಿ ಕುಳಿತ.

ಸುಖದಾಸನು ಕಕ್ಕಾವಿಕ್ಕಿಯಾಗಿ ಎದ್ದುನಿಂತು- "ಎಲ್ಲ ಕುಶಲವೇ? ಏನು, ಇದೀಗ ಬರೋಣವಾಯಿತೆ?" ಎಂದು ಕೇಳಿದ.

"ಹಾಂ, ನಿಮ್ಮನ್ನು ಒಂದು ಸಲ ನೋಡಿಕೊಂಡು ಬರುವ ಎಂದು ಕೊಂಡು ಬಂದೆ." ಎಂದ ಮಾಯಾಶಂಕರ.

"ಬಹಳ ದಯೆ ತೋರಿದಿರಿ. ನಮ್ಮ ಭಾಗ್ಯವೇ ಧನ್ಯವಾದದ್ದು. ಮನೆಯಲ್ಲಿ ಕುಳಿತಲ್ಲಿಯೇ ಸ್ವಾಮಿಯ ದರ್ಶನವಾಗುತ್ತಿದೆ." ಎಂದು ನುಡಿದು ಅವನು ಜಿಗಿಯುತ್ತ ಒಳಗೆ ಹೋಗಿ ಒಂದು ಜಮುಖಾನೆಯನ್ನು ತಂದು ಹಾಸಿದ. ಕೊಡದಿಂದ ನೀರು ಸೇದಿ ಪಾನಕವನ್ನು ತಯಾರಿಸ ತೊಡಗಿದ. ಮಾಯಾಶಂಕರನು ಕೈಕಾಲು ಮೋರೆ ತೊಳೆದು ಪಾನಕವನ್ನು ಕುಡಿದ. ಕುದುರೆಯ ಕಡಿವಾಣ ಇಳಿಸುವ ಹೊತ್ತಿಗೆ ಕಾದಿರಖಾ ಬಂದು ನಮಸ್ಕಾರ ಮಾಡಿದ. ಅವನೊಡನೆ ಕುಶಲಪ್ರಶ್ನೆ ನಡೆಯುವಷ್ಟರಲ್ಲಿ ಊರಿನ ಹಿರಿಕಿರಿಯರೆಲ್ಲರೂ ಅಲ್ಲಿಗೆ ಬಂದರು. ಆಮಾತು ಈಮಾತು ಆಡತೊಡಗಿದರು.

"ಇದೀಗ ಕೌನ್ಸಿಲಿನಲ್ಲಿ ಏನು ನಡವಯ್ತೆ? ಕುಳಗಳ ಕಡೀ ಲಕ್ಷ್ಯ ಕೊಡೋ ಆಸಿ ಅಯ್ತೋ ಏನಿಲ್ಲೊ?" ಎಂದು ಕಾದಿರಖಾ ಕೇಳಿದ.

"ಹೋ, ಇದೆ. ಕಕ್ಕ ಮತ್ತು ಅವರ ಗೆಳೆಯರು ಚೆನ್ನಾಗಿ ಬಡಿ ದಾಡುತ್ತಾರೆ. ಏನಾದರೂ ಫಲ ಬೇಗನೆ ಸಿಕ್ಕಬಹುದೆಂದು ಕಾಣುತ್ತದೆ."

"ಅಲ್ಲಾ ಅವರ ಪರಿಶ್ರಮಕ್ಕೆ ಗೆಲವು ಕೊಡಲಿ. ಇನ್ನೂ ಏನೆಂದು ಪರಸಲಿ? ನಮ್ಮ ಕಂಬನಿಗಳಲ್ಲೇ ಹರಕೆ ಹೊರಬರ್‍ತಯ್ತಿ ಒಕ್ಕಲಿಗರ ಸ್ತಿತಿ ಈಗ ಏಟೋ ಪಾಡಾಗೆಯ್ತಿ ನನ್ನೇ ನೋಡು ತಮ್ಮಾ, ಮುಂಚೇಕ ಇಪ್ಪತ್ತು ಬಿಘೆ ಸಾಗುಮಾಡುತಿದ್ದೆ; ನೂರು ರೂಪಾಯಿ ತೆರಿಗೆ ಕೊಡ ಬೇಕಾಗ್ತಿತ್ತು; ವರಸದಾಗ ಹತ್ತು ಹದಿನೈದು ರೂಪಾಯಿ ಕಪ್ಪಾಕಾಣಿಕಿ ಅಂತ ಹೋಕ್ಕಿದ್ದವು. ಈಗ ಒಟ್ಟು ಇಪ್ಪತ್ತು ರೂಪಾಯಿ, ತೆರಿಗೆ ಆಯ್ತಿ; ಕಪ್ಪ

ಕಾಣಿಕಿ ಏನೂ ಇಲ್ಲ. ಮೊದಲು ಕಾಳು ಕಣದಿಂದ ಮನಿಗೇ ಬರುತ್ತಿದ್ದಿಲ್ಲ. ನಿಮ್ಮ ಕಾರಕೂನರು ಶಿಪಾಯರು ಅಲ್ಲೇ ಗೋಣಿ ಹಿಸುಕಿ ತೂಗಿಸಿಕೊಂಡು ಹೊಕ್ಕಿದ್ರು. ಈಗ ಕಾಳುಕಡಿ ಮನೀ ಕಾಣ್ತಾವು, ಚೆಲೋ ಬೆಲಿಗೆ ಮಾರ್ತಾವು. ಈ ಎರಡು ವರಸದಾಗ ಏನಿಲ್ಲಂದ್ರೂ ಮುನ್ನೂರು ನಾನೂರು ರೂಪಾಯಿ ಉಳಿದಿದ್ದೀತು. ನೂರಯ್ವತ್ತಕ್ಕೆ ಒಂಜೋಡು ಎತ್ತು ತಂದೆ, ಮನಿ ದುರಸ್ತ ಮಾಡಿಸಿದೆ, ಹೊರಚಪ್ಪರ ಹಾಕಿಸಿದೆ, ಗಡಿಗಿಮಡಿಕಿ ಬದಲು ಒಂದೆರಡು ತಾಂಬ್ರ ಹಿತ್ತಾಳಿ ಭಾಂಡೀ ಕೊಂಡೆ. ಎಲ್ಲಕ್ಕೂ ಹೆಚ್ಚೆಂದಂದರೆ, ಈಗ ಯಾರ ಕಾಟಾನೂ ಇಲ್ಲ. ತೆರಿಗೆ ಕಟ್ಟಿ ಆರಾಮಾಗಿ ಮನಿಗೆ ಬರ್ತೇವಿ. ಅಲ್ಲದಿದ್ದರ, ಆವಾಗ ಸೂಲದ ಮ್ಯಾಗೇ ಇರತಿತ್ತು ಜೀವ ಯಾವಾಗ್ಲೂ. ಈಗ ಅಲ್ಲಾನ ಪೂಜಾದ ಕಡೀಗೂ ಮನಸ್ಸಾಗ್ತಯ್ತಿ. ಆಗೇನ್ರಿ, ನಮಾಜು ಕೂಡಾ ದೊಡ್ಡ ಭಾರ ಅನಿಸ್ತಿತ್ತು. " ।

" ನೀನು ಹೇಗಿದ್ದೀ, ದುಖರನ ? " ಮಾಯಾಶಂಕರ ಕೇಳಿದ.

" ಎಣ್ಣಾ. ನಿಮ್ಮ ದಯದಿಂದ ಎಲ್ಲಾ ಕುಸಲಯ್ತಿ. ಈಗ ನಾವೂ ಮನಸೇರು ಅನಿಸ್ತಯ್ತಿ; ಮೊದಲು ದನಕ್ಕಿಂತ ಕಡೀ ಆಗಿದ್ದಿವಿ. ಹೊಲದಾಗ ದುಡಿದು ಬಂದು ಮನ್ಯಾಗ ದನಕರಕ ದುಡೀಬೇಕು. ಆಮೇಲೆ ಕಾರಕೂನರ ಕ್ಯೆಕಾಲು ಕಟ್ಟಿಕೊಳ್ಳಾಕ ಹೋಗಬೇಕು. ಅಲ್ಲಿಂದ ಬಂದ ಮ್ಯಾಗ, ರಾತ್ರಿ ಹತ್ತು-ಹನ್ನೊಂದಕ್ಕೆ ಊಟ. ೧೫ ಬಿಘೆಯು ಜೇಸಾಯ ಇತ್ತು. ಆಗ ನೂರರಮ್ಯಾಗ ಹತ್ತು ರೂಪಾಯಿ ತೆರಿಗಿ ತೆರತಿದ್ದೆ; ಈಗ ಮೂವತ್ತು ಕೊಡ್ತೀನಿ ? ಈ ಎರಡು ವರಸದಾಗ, ಒಂದಿಷ್ಟು ಸಾಲ ಇತ್ತು—ಅದನ್ನು ಹರದೆ; ನೂರು ರೂಪಾಯಿ ಕೊಟ್ಟು ಪಚ್ಚಿಮದ ಎಮ್ಮಿ ಕೊಂಡೆ. " ಎಂದು ದುಖರನ ಹೇಳಿದ.

ಆದಕ್ಕೆ ಸುಖದಾಸ ಜೋಡಿಸಿದ: " ತಬಲಾ, ಪೇಟಿ ಕೊಂಡಿ, ಆದನೇಕೆ ಹೇಳುವುದಿಲ್ಲ ? ಒಂದು ಬಾವಿಯನ್ನು ಕಟ್ಟಿಸಿದ್ದೀ, ಅದನೇಕೆ ಮುಚ್ಚಿಡುತ್ತೀ ? ಇವ ಮೊದಲು ಒಳ್ಳೇ ದೇವರ ಭಕ್ತನಿದ್ದ. ಒಮ್ಮೆ ಬಿಟ್ಟಿಗ ಹಿಡಿದುಕೊಂಡು ಹೋದಾಗ ಸಿಟ್ಟಿಗೆದ್ದು ದೇವರ ಮೂರ್ತಿ ಒಡೆದು ಹಾಕಿದ. ಈಗ ಮತ್ತೆ ಭಕ್ತಿ ಹುಟ್ಟಿದೆ. ಭಜನೆಯ ಎಲ್ಲ ಸಾಹಿತ್ಯ ತಂದಿದ್ದಾನೆ. "

ಕಲ್ಲೂ : "ಎಲ್ಲರಿಗಿಂತ ಚೌ ಇರೋದು ನಂದು. ಆಳಿದ್ದಾವ ರಾಜಾ ಆಗೇನಿ. ೬ ಬಿಘೆ ಹೊಲಾ ಮಾಡತಿದ್ದೆ. ಎಲ್ಲಾ ಎರಡು ಬೆಳೀದು. ೭೨ ರೂಪಾಯಿ ತೆರಿಗಿತ್ತು. ಆದರೂ ಹೊಲಾ ಎಲ್ಲಿ ಕಸುಗೊಂತಾನೋ ಅಂತ. ಗೌಸಖಾಗ ದೇವರಿಗೆ ನಡಕೊಂಡಹಂಗ ನಡಕೊಂತಿದ್ದೆ. ಐವತ್ತು ರೂಪಾಯಿ ಬರೀ ದಕ್ಷಿಣಾಕ್ಕೆ ಹೋಕ್ಕಿತ್ತು. ಮತ್ತ ಶಿಪಾಯರ ಪ್ರೂಜಿ ಬ್ಯಾರೆ. ಈಗ ಬರೇ ೯ ರೂಪಾಯಿ ಹಪ್ತೆ ಕೊಟ್ಟರಾತು. ಎಡ್ಡು ವರಸದಾಗ ಮನಸ್ಯಾರ ಬಟ್ಟೀ ಕೂಡಿದೆ. ಗುಡಸಲಾ ತಗದು ಮನೀ ಮಾಡಿಸೀ. ನನ್ನ ಮ್ಯಾಗ ಯಾವ ಏನು ಹೇಳತಾನೋ ಸರಕಾರಕ್ಕ ಅಂತ ಮೊದಲು ಡುಗಡುಗಿ ಇರ್ತಿತ್ತು. ಈಗ ನಿದ್ದಿ ಪಾಡ ಬರತೈತಿ. ನಿಮ್ಮನ್ನ ಹಾಡಿ ಹರಸ್ತೀನಿ."

ಮಾಯಾಶಂಕರನು ಸುಕ್ಖು ಚೌಧರಿಗೆಂದ : "ನಿಮ್ಮ ಬೇಸಾಯ ಆಳುಗಳಿಂದಲೇ ನಡೆಯುತ್ತಿದ್ದೀತು. ಭಜನ–ಕೀರ್ತನದೊಳಗೆ ನಿಮಗೆಲ್ಲಿ ಪುರಸತ್ತು ?"

ಸುಕ್ಖು ನಕ್ಕು ಉತ್ತರವಿತ್ತ : "ನನಗಿನ್ನು ಕಮತ–ಕಟ್ಟೆ ಯಾತಕ್ಕಪ್ಪ. ಭಗವಂತನ ಭಜನೆ ಮಾಡುತ್ತಾ ಒಂದಿನ ಹೊಂಟುಹೋಗೋದು. ನನ್ನ ನಾಲ್ವತ್ತೂ ಬಿಘೆ ಭೂಮಿಯನ್ನು ಭೂಮಿ ಇಲ್ಲದವರಿಗೆ ಹಂಚಿಬಿಟ್ಟಿದ್ದೇನೆ. ಏಳೆಂಟು ಮನೆಯವರು ಕೂಲಿನಾಲಿ ಮಾಡಿ ಕಾಲಕಳೀತಿದ್ದರು, ಬಿಟ್ಟಿಯ ದಾಳಿಯಿಂದ ಅದಕ್ಕೂ ಚಕ್ರ ಬರುತ್ತಿತ್ತು; ಅವರೆಲ್ಲಾ ಈಗ ಸುಖವಾಗಿದ್ದಾರೆ. ಭಿಕ್ಷೆಯಿಂದ ನನ್ನ ನಿರ್ವಾಹ ಸಾಗುತ್ತಿದೆ ಸಾಕಷ್ಟು ಭಿಕ್ಷೆ ಇಲ್ಲಿಯೇ ಸಿಕ್ಕುತ್ತದೆ. ದಿನಾಲು ಒಬ್ಬಿಬ್ಬರು ಸಾಧುಗಳು ಬರುತ್ತಾರೆ — ಅವರ ಸತ್ಕಾರಕ್ಕೂ ಸಾಕಾಗುತ್ತದೆ."

"ಬಿಸೇಸರ ಸಾಹ ಕಾಣುವುದಿಲ್ಲ ?" ಮಾಯಾಶಂಕರ ಕೇಳಿದ.

ಸುಕ್ಖು: ಎಲ್ಲಿಯಾದರೂ ಕೆಲಸಕ್ಕೆ ಹೋಗಿದ್ದಾನು. ಅವನೂ ಮೊದಲಿಗಿಂತ ಆರಾಮ ಇದ್ದಾನೆ. ಮೊದಲು ರೂಪಾಯಿಗೆ ಒಂದಾಣೆಗಿಂತ ಕಡಿಮೆ ಬಡ್ಡಿ ತೆಗೆದುಕೊಳ್ಳುತ್ತಿದ್ದಿಲ್ಲ. ಏನು ಮಾಡ್ಯಾನು ? ಎಷ್ಟೋ ಆಸಾಮಿಗಳಿಂದ ಕವಡೆ ಗಂಟೂ ತಿರುಗಿ ಬರುತ್ತಿದ್ದಿಲ್ಲ. ಆ ಹಾನಿ ಬಡ್ಡಿಯೊಳಗೆ ತುಂಬಿಕೊಳ್ಳುತ್ತಿದ್ದ. ಈಗ ನೂರಕ್ಕೆ ಒಂದು ಬಡ್ಡಿ ತೆಗೆದುಕೊಳ್ಳುತ್ತಾನೆ.

ತ್ತಾರ ಗಂಟೂ ಮುಳುಗುವ ಅಂಜಿಕೆ ಈಗಿಲ್ಲ. ಅಂಗಡಿಯೂ ಚೆನ್ನಾಗಿ ನಡೆದಿದೆ.''

ಅಷ್ಟರಲ್ಲಿ ಗರಡಿಯಾಳು ಬಲರಾಜನ ಕುದುರೆಸವಾರಿ ಬಂದಿತು. ಮಾಯಾಶಂಕರನನ್ನು ಕಾಣುತ್ತಲೆ ಕುದುರೆಯ ಮೇಲಿಂದ ಜಿಗಿದು ಪಾದ ಮುಟ್ಟಿ ನಮಸ್ಕರಿಸಿದ. ಆವನೀಗ ಜಿಲ್ಲಾಸಭೆಯ ಸದಸ್ಯ.

"ಓ, ಮೆಂಬರಸಾಹೇಬರೇ, ಏನು ಸಮಾಚಾರ?" ಎಂದು ಮಾಯಾ ಪ್ರಶ್ನಿಸಿದ.

"ಧನಿಯರ ದಯದಿಂದ ಸುಖವಾಗಿದ್ದೇನೆ ನೀವು ಕುಶಲ ರಾಗಿದ್ದೀರಾ? ಬೋರ್ಡಿನ ಸಭೆಗೆ ಹೋಗಿದ್ದೆ. ವಾದವಿವಾದಕ್ಕೆ ಬಿಸಿ ಯೇರಿತ್ತು."

"ಇವತ್ತು ಏನಿತ್ತು?"

"ಬಿಟ್ಟಿಯ ಪ್ರಶ್ನೆ ಬಂದಿತ್ತು. ವಾದಕ್ಕೆ ಕಾವೇರಿತ್ತು. ಹಳ್ಳಿಗೆ ಹೋದಾಗ ಯಾವ ಅಧಿಕಾರಿಯೂ ಹಳ್ಳಿಗರನ್ನು ಪುಕ್ಕಟೆ ದುಡಿಸಿಕೊಳ್ಳ ಕೂಡದು ಎಂದು ನನ್ನ ಸೂಚನೆಯಿತ್ತು. ನೀರು ಹೊರುವುದು, ಹುಲ್ಲು ಕೀಳುವುದು, ಕಸ ಬಳಿಯುವುದು— ಹಾಗೇ ಏನೂ ಮಾಡಿಸಲಾಗದು. ಯಾವ ಸಾಮಾನು ಬೇಕಾದರೂ ಪೇಟೆಯ ಬೆಲೆಯಂತೆ ನಗದುಕೊಟ್ಟು ಕೊಳ್ಳಬೇಕು, ಎಂದು ನಾನು ವಾದಿಸಿದೆ ಇಬ್ಬರು ತಾಲೂಕುದಾರರೂ ಕೆಲವು ಅಧಿಕಾರಿಗಳೂ ರಭಸದಿಂದ ವಿರೋಧಿಸಿದರು. ಇದರಿಂದ ಸರಕಾರೀ ಕೆಲಸಕ್ಕೆ ಬಹಳ ತೊಂದರೆಯಾಗುತ್ತದೆಂದು ಅವರ ಅಭಿಪ್ರಾಯ. ನಾನೂ ಧೈರ್ಯದಿಂದ ಎದುರೇಟು ಕೊಟ್ಟೆ: ಪ್ರಜೆಗಳನ್ನು ಪೀಡಿಸಿ, ಅವರನ್ನು ಅಪಮಾನಗೊಳಿಸಿ ಸರಕಾರೀ ಕೆಲಸ ಮಾಡಿಕೊಳ್ಳಲಾಗದು; ಅದು ನಿಂತರೆ ನಿಲ್ಲಲಿ ಎಂದೆ. ಕೆಲ ಜಮೀನುದಾರರೂ ಅಧಿಕಾರಿಗಳ ಪಕ್ಷಕ್ಕೇ ಇದ್ದುದೊಂದು ಆಶ್ಚರ್ಯ. ನಾನು ಚೆನ್ನಾಗಿ ದೂಳ ಅಡರಿಸಿದೆ. ಕೊನೆಗೆ ನನ್ನ ಸೂಚನೆ ಮಾನ್ಯವಾಯಿತು. ಇನ್ನು ಕಲೆಕ್ಟರು ಏನು ಮಾಡುತ್ತಾರೋ ನೋಡಬೇಕು." ಎಂದು ಬಲರಾಜ ವಿವರಿಸಿದ.

"ನಿನ್ನ ಯಶಸ್ಸಿಗಾಗಿ ಅಭಿನಂದಿಸುತ್ತೇನೆ'' ಎಂದು ಮಾಯಾ ಶಂಕರನೆಂದ.

" ಇದೆಲ್ಲವೂ ತಮ್ಮ ಅನುಗ್ರಹ. ಹಿಂದಕ್ಕೆ ಇಲ್ಲಿಯ ಜನಕ್ಕೆ ಪತ್ರಿಕೆಯ ಹೆಸರೂ ಗೊತ್ತಿರಲಿಲ್ಲ; ಈಗ ಎಷ್ಟೋ ಒಳ್ಳೊಳ್ಳೆಯ ಪತ್ರಿಕೆಗಳು ಬರುತ್ತಿವೆ. ಮುಂಜಾನೆ ನಮ್ಮ ವಾಚನಾಲಯವನ್ನು ತೋರಿಸುತ್ತೇನೆ ನಿಮಗೆ. ಊರ ಜನ ತಮ್ಮ ಶಕ್ತ್ಯನುಸಾರವಾಗಿ ಒಂದೊಂದು ಎರಡೆರಡು ರೂಪಾಯಿ ಮಾಸಿಕ ವರ್ಗಣಿ ಕೊಡುತ್ತಾರೆ. ಈಗ ಊರಲ್ಲಿ ತಮ್ಮ ದಯದಿಂದ ರಾಮರಾಜ್ಯವಾಗಿದೆ. ಬೇರೆ ಯಾವ ಊರಲ್ಲಿಯೂ ಪೂಸಾ ಮತ್ತು ಮುರ್ಝಫರಪುರಗಳ ಗೋದಿ ನಿಮ್ಮ ಕಣ್ಣಿಗೆ ಬೀಳಲಿಕ್ಕಿಲ್ಲ. ನಾವು ಈ ಬಾರಿ ಎಲ್ಲರೂ ಸೇರಿ ಆ ಎರಡೂ ಕಡೆಗಳಿಂದ ಬೀಜ ತರಿಸಿದ್ದೇವೆ; ಒಂದೂವರೆ ಪಟ್ಟು ಹುಟ್ಟುವಳಿಯಾಗುವ ಆಶೆಯಿದೆ. ಮೊದಲು ಇಲ್ಲಿ ಹತ್ತಿಬಿತ್ತುವುದಕ್ಕೆ ಹೆದರುತ್ತಿದ್ದರು. ನಾನು ಈ ವರುಷ ಮಾಳವ-ನಾಗಪುರಗಳಿಂದ ಬೀಜ ತರಿಸಿ ಊರವರಿಗೆ ಹಂಚಿದೆ. ಬೆಳೆ ಹುಲುಸಾಗಿ ಬಂತು. ಇದೆಲ್ಲ ಬಡ ಆಸಾಮಿಗಳಿಗೆ— ಎಲ್ಲಾ ಹುಟ್ಟುವಳಿ ಕಂದಾಯಕ್ಕೆ, ಸಾವುಕಾರರಿಗೆ ಹೋಗಿ ತಮ್ಮ ಹೊಟ್ಟೆಗೂ ಸಾಕಷ್ಟು ಉಳಿಯದ ಕುಳಗಳಿಗೆ—ನೀಗುವ ಕೆಲಸವಲ್ಲ. "

ಊಟದ ಹೊತ್ತಿನ ವರೆಗೂ ಹೀಗೇ ಮಾತುಕತೆ ನಡೆದವು. ಜನರೆಲ್ಲ ಊಟಕ್ಕೆ ಹೋದರು. ಮಾಯಾಶಂಕರನೂ ಪೂರಿಗಳನ್ನು ಹಾಲಿನಲ್ಲಿ ಅದ್ದಿಕೊಂಡು ತಿಂದು, ಹಾಲನ್ನು ಕುಡಿದು ಅಲ್ಲಿಯೇ ಅಡ್ಡಾದ. ಸ್ವಲ್ಪ ಹೊತ್ತಿನಲ್ಲಿ ಜನರು ಉಂಡುಕೊಂಡು ಬಂದರು. ಗಾಯನವಾದನ ಕಾರ್ಯಕ್ರಮ ನಡೆಯಿತು. ಕಲ್ಲೂ ಹಾಡಿದ. ಕಾದಿರನೂ ಒಂದೆರಡು ಪದಗಳನ್ನು ಹೇಳಿದ. ರಾಮಾಯಣವನ್ನು ಓದುವುದಾಯಿತು. ಸುಖದಾಸನು ಕಬೀರಪಂಥದ ಭಜನೆಯನ್ನು ಹೇಳಿದ. ಕಲ್ಲೂ ಒಂದು ಅಣಕವನ್ನು ಅಭಿನಯಿಸಿದ. ಮಾಯಾಶಂಕರನಿಗೆ ಆನಂದವಾಯಿತು. ಅವನೂ ಒಂದೆರಡು ಒಳ್ಳೆಯ ವಸ್ತುಗಳನ್ನು ಹಾಡಿದ. ಈ ಕಾರ್ಯಕ್ರಮ ಹತ್ತು ಗಂಟೆಯವರೆಗೂ ಜರುಗಿತು. ಎಲ್ಲರೂ ತಮ್ಮ ತಮ್ಮ ಮನೆಗೆ ತೆರಳಿದರು. ತಾನು ಸ್ವರ್ಗದಲ್ಲಿಯೇ ಇದ್ದಂತೆ ಮಾಯಾಶಂಕರನು ಪ್ರಸನ್ನನಾಗಿದ್ದ.

**–: ಮುಗಿದುದು :–**